# ಶ್ರೀಮನ್ಮಹಾಭಾರತ

ಭಾರತ ದರ್ಶನ ಪ್ರಕಾಶನ



ಉದ್ಯೋಗ ಪರ್ವ

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

ಸಂಪುಟ ೧೧

ಭಾರತ ದರ್ಶನ ಪ್ರಕಾಶನ

# ಶ್ರೀಮನ್ಮಹಾಭಾರತ

(ವ್ಯಾಸಭಾರತದ ಕನ್ನಡ ಸರಳಾನುವಾದ)

ಭಾತಿ ಸರ್ವೇಷು ವೇದೇಷು
ರತಿಃ ಸರ್ವೇಷು ಜನ್ತುಷು ।
ತರಣಂ ಸರ್ವತೀರ್ಥಾನಾಂ
ತೇನ ಭಾರತಮುಚ್ಯತೇ ॥

**ಸಂಪುಟ 11**

*ಮುದ್ರಕರು:*
**ಭಾರತ ದರ್ಶನ ಮುದ್ರಣಾಲಯ**
163, ಮಂಜುನಾಥ ರಸ್ತೆ, 2ನೇ ಬ್ಲಾಕ್, ತ್ಯಾಗರಾಜನಗರ,
ಬೆಂಗಳೂರು - 560 028
ದೂರವಾಣಿ: 080-26765381

ಪ್ರಥಮ ಇ-ಮುದ್ರಣ ಜನವರಿ ೨೦೧೪

*ಆದಿ ಅಧ್ಯಕ್ಷರು:*

**ಪರಮಪೂಜ್ಯ ಶ್ರೀ ಶ್ರೀ**

**ರಂಗಪ್ರಿಯಮಹಾದೇಶಿಕಸ್ವಾಮಿಗಳವರು**

*ಆದಿ ವ್ಯವಸ್ಥಾಪಕ ಸಂಪಾದಕರು:*

**ದಿ॥ ಕೆ.ಎಸ್. ಕೌಶಿಕ್ ('ವಿಶ್ವಾಮಿತ್ರ')**

*ಆದಿ ಸಂಪಾದಕರು:*

**ದಿ॥ ವಿದ್ವಾನ್ ಹೆಚ್.ಎನ್. ರಂಗಸ್ವಾಮೀ**

*ಆದಿ ಸಂಪಾದಕರು:*

**ದಿ॥ ವಿದ್ವಾನ್ ರಾಮೇಶ್ವರಾವಧಾನೀ**

ಸಂಪಾದಕ ಮಂಡಲಿ:

ಶ್ರೀ ಶ್ರೀಹರಿ

ಶ್ರೀ ನೆ.ವೆಂ. ಶ್ರೀನಿವಾಸರಾಯ

ಶ್ರೀ ವಿ. ಸೂರ್ಯನಾರಾಯಣ್,M.A. B.Com., B.L.,

ಕೋಶಾಧ್ಯಕ್ಷರು

## ವಿನಮ್ರವಚನಗಳು

ಕರುಣಾಮಯನಾದ ಪರಮಾತ್ಮನ ದಿವ್ಯಾನುಗ್ರಹದಿಂದಲೂ ಗುರು ಭಗವಂತನ ದಿವ್ಯಾಶೀರ್ವಾದಗಳಿಂದಲೂ ಹನ್ನೊಂದನೆಯ ಸಂಪುಟವನ್ನು ಮುಗಿಸಿ, ಮೂವತ್ತು ಮುತ್ತಿನ ಮಣಿಗಳ ಹಾರದಲ್ಲಿ ಹನ್ನೊಂದನೆಯ ಮುತ್ತನ್ನು ಅವನ ಅಡಿದಾವರೆಗಳಲ್ಲಿ ಭಕ್ತಿಪೂರ್ವಕವಾಗಿ ಸಮರ್ಪಿಸಿ, ಪುಷ್ಪಪ್ರಸಾದರೂಪವಾದ ಈ ಸಂಪುಟವನ್ನು ನಮ್ಮ ಸಹೃದಯರಾದ ಪ್ರಿಯವಾಚಕರ ಅಂಜಲಿಪುಟಗಳಲ್ಲಿಡುತ್ತಿದ್ದೇವೆ. ಹನ್ನೊಂದನೆಯ ಸಂಪುಟದಲ್ಲಿ ಮಹಾಭಾರತದಲ್ಲಿಯೇ ಪರಮಶ್ರೇಷ್ಠವೆನಿಸಿದ ಉದ್ಯೋಗಪರ್ವವು ಮುಗಿದು ಆದಿಪಂಚಕವು ನಿರ್ವಿಘ್ನವಾಗಿ ನೆರವೇರಿದಂತಾಗಿದೆ. ಇದು ಕೇವಲ ಪರಮಾತ್ಮನ ದಯೆ ಮತ್ತು ಅವನ ಇಚ್ಛೆ. ಪ್ರಕಟಿಸಿದ್ದ ಕಾರ್ಯಕ್ರಮದಂತೆ ಈ ವರ್ಷದಲ್ಲಿ ೨, ೩ ಮತ್ತು ೪ನೆಯ ಹಿಂದಿನ ಸಂಪುಟಗಳನ್ನು ಪುನರ್ಮುದ್ರಿಸಿರುವುದಲ್ಲದೇ ೯, ೧೦ ಮತ್ತು ೧೧ನೆಯ ಹೊಸ ಸಂಪುಟಗಳನ್ನೂ ನಮ್ಮ ಪ್ರಿಯವಾಚಕರಿಗೆ ಕೊಟ್ಟಿರುತ್ತೇವೆ.

ಎಲ್ಲವೂ ಭಗವಂತನ ದಯೆಯಿಂದ ಸುಗಮವಾಗಿಯೇ ಮುಂದುವರಿಯುತ್ತಿದೆ. ಕಾರ್ಯಾಲಯಕ್ಕೆ ಬಂದ ಅನೇಕರು ಕಾರ್ಯದ ಮಹತ್ವದ ವಿಷಯದಲ್ಲಿ ಮತ್ತು ಸಂಪುಟಗಳನ್ನು ವ್ಯವಸ್ಥೆಪಡಿಸಿಟ್ಟಿರುವ ವಿಷಯದಲ್ಲಿ ಅಚ್ಚರಿಯನ್ನು ವ್ಯಕ್ತಪಡಿಸುತ್ತಾರೆ. ಆದರೆ ಇದು ಮಾನವಕಲ್ಪಿತವಾಗಿದ್ದಲ್ಲಿ ಅಚ್ಚರಿಪಡಬಹುದಾಗಿದ್ದಿತು. ಕೇವಲ ಪರಮಾತ್ಮನ ಕೃಪಾವಿಶೇಷದಿಂದಲೇ ನಡೆಯುತ್ತಿರುವುದರಿಂದ ಅಚ್ಚರಿಪಡಬೇಕಾದ ಕಾರಣವಿಲ್ಲ. ಮುಂದೇನಾಗಬಹುದು? ಇನ್ನೂ ೧೯ ಸಂಪುಟಗಳಿವೆಯಲ್ಲಾ! ಎಂದು ಸಂದೇಹಿಸುವವರೂ ಇದ್ದಾರೆ. ಈ ಸಂದೇಹವು ಹೆಚ್ಚು ಮಂದಿಗಿದ್ದಂತಿಲ್ಲ. ನೂರಾರು ಸಂಖ್ಯೆಯಲ್ಲಿ ಪೂರ್ಣಮಾಲೆಗೆ ಗ್ರಾಹಕರಾಗುತ್ತಿರುವುದೇ ಇದಕ್ಕೆ ನಿದರ್ಶನವೆನ್ನಬಹುದು.

ಈ ಸಂದೇಹದ ವಿಷಯವಾಗಿ ಹೇಳಬೇಕಾದರೆ : ನಾವು ಎಂದಿನ ವರೆಗೆ–'ಈ ಮಹಾಕಾರ್ಯವು ಪರಮಾತ್ಮನದು ; ಅವನು ನಡೆಸಿಕೊಡು ತ್ತಿದ್ದಾನೆ ; ಅವನ ದಿವ್ಯಕರುಣೆಯಿಂದ ಈ ಮಹಾಕಾರ್ಯವಾಗುತ್ತಿದೆ'- ಎಂಬ ದೃಢಮನಸ್ಸಿನಿಂದಿರುತ್ತೇವೆಯೋ –ಅಂದಿನವರೆಗೆ ಈ ಕಾರ್ಯವು ನಿರ್ವಿಘ್ನವಾಗಿ ನಡೆಯುವುದರಲ್ಲಿ ಯಾವ ಸಂಶಯವೂ ಇಲ್ಲ. 'ನಾನು ಮಾಡಿದೆ' ಎಂದು ಹೇಳಿಕೊಳ್ಳುವ ಅಂಶವೇ ಇಲ್ಲವಾದುದರಿಂದ ಧನ, ವಿದ್ಯೆ, ಸ್ಥಾನ–ಎಲ್ಲದರಲ್ಲಿಯೂ ಪ್ರಕಾಶಕನು ಯಃಕಶ್ಚಿತ್ ಆಗಿರುವುದರಿಂದ ದಯಾಮಯನಾದ ಪರಮಾತ್ಮನ ಅನನ್ಯಶರಣತೆಯಿಂದ ನಿರ್ಗಮಿಸುವ ಸಾಧ್ಯತೆಯೇ ಇಲ್ಲ. ಆದುದರಿಂದ ಈ ಮಹಾಕಾರ್ಯವು ದಯಾಮಯ ನಾದ ಅವನ ಅಪಾರಕರುಣೆಯಿಂದ ಮುಗಿಯುವುದೆಂಬುದರಲ್ಲಿ ಯಾರೂ ಯಾವ ಕಾರಣದಿಂದಲೂ ಸಂಶಯಿಸಬೇಕಾಗಿಲ್ಲ. ಮಾರ್ಜಾರಕಿಶೋರ ನ್ಯಾಯದಂತೆ ಸ್ವಲ್ಪವೂ ನೋವಾಗದಂತೆ ಈ ಕಾರ್ಯವನ್ನವನು ಆಗು ಮಾಡಿಸುತ್ತಿದ್ದಾನೆ. ತೊಂದರೆಯು ಕಂಡುಬಂದಾಗ ಎರಡು ಕೈಗಳನ್ನೂ ಜೋಡಿಸಿ ಸಂಕಟವನ್ನು ಹೇಳಿಕೊಂಡು ಕಣ್ಣೀರಿಟ್ಟು- '**ಅಕಿಂಚನೋऽನನ್ಯಗತಿಃ ಶರಣ್ಯ ತ್ವತ್ಪಾದಮೂಲಂ ಶರಣಂ ಪ್ರಪದ್ಯೇ ।**' ಎಂದು ಪ್ರಾರ್ಥಿಸುವುದೊಂದೇ ಪ್ರಕಾಶಕನ ಕರ್ತವ್ಯವಾಗಿರುತ್ತದೆ. ಇಷ್ಟು ಮಾತ್ರಕ್ಕೆ ದಯಾಮಯನು ಓಗೊಟ್ಟು ಅಚಿಂತನೀಯವಾದ ರೀತಿಯಲ್ಲಿ ಕಾರ್ಯವನ್ನು ಸುಗಮಗೊಳಿಸುತ್ತಾನೆ. ಇದು ಪ್ರಕಾಶಕನ ದೈನಂದಿನ ಅನುಭವವಾಗಿ ಹೋಗಿದೆ. ಈ ಒಂದು ಮಹತ್ತಾದ ಆಸರೆಯಿರುವುದರಿಂದಲೇ ಈ ಮಹಾಕಾರ್ಯವು ನಿರ್ವಿಘ್ನವಾಗಿ ನಡೆಯುತ್ತದೆಂದು ಸಾರಿ ಸಾರಿ ಹೇಳಲು ಸಾಧ್ಯವಾಗಿದೆ. ಈ ಬಗ್ಗೆ ನಮ್ಮ ಪ್ರಿಯವಾಚಕರು ಯಾವಾಗಲೂ ಪ್ರಶ್ನಿಸಿಲ್ಲ. ಪ್ರಶ್ನಿಸಲು ಅವಕಾಶವೂ ಸಿಕ್ಕಿಲ್ಲ. ಆದರೆ ಅಲ್ಲಲ್ಲಿ ಕೇಳಿಬರುವ ಒಂದೊಂದು ಮಾತಿಗೆ ಈ ಉತ್ತರವನ್ನು ಕೊಡಬೇಕಾಯಿತು. ಹಿಂದೆಯೇ ಒಮ್ಮೆ ಹೇಳಿದಂತೆ ಧನದ ರಾಶಿಯೇ ಇದ್ದರೂ ಈ ಕಾರ್ಯವು ಸಾಧ್ಯವಾಗದು ; ಲೋಕೋತ್ತರವಿದ್ಯಾಪಾರಂಗತೆಯಿದ್ದರೂ ಈ ಕಾರ್ಯವು ಸಾಧ್ಯವಿಲ್ಲ ; ದಯಾಮಯನಾದ, ಸಚ್ಚಿದಾನಂದಸ್ವರೂಪಿಯಾದ ಪರಮಾತ್ಮನ, ಗುರು ಭಗವಂತನ ಕರುಣಾಕಟಾಕ್ಷವೊಂದಿದ್ದರೆ ಸಾಕು, ನಡೆದುಹೋಗುತ್ತದೆ.

ಶ್ರೀಮನ್ಮಹಾಭಾರತಪ್ರಕಟಣೆಯೇ ಇದಕ್ಕೆ ಪ್ರತ್ಯಕ್ಷಪ್ರಮಾಣ. ತೃಣವನ್ನೇ ಬ್ರಹ್ಮಾಸ್ತ್ರವನ್ನಾಗಿ ಪರಿವರ್ತಿಸುವ ಆ ಪರಮಪುರುಷನಿಂದ ಆಗದ ಕಾರ್ಯವು ಯಾವುದಿದೆ? ಯಾವುದೋ ಕೋಟಿ-ಕೋಟಿಜನ್ಮಗಳ ಪುಣ್ಯವಿಶೇಷದಿಂದ, ಹಿರಿಯರ ಆಶೀರ್ವಾದವಿಶೇಷದಿಂದ ಒಬ್ಬ ಸಾಧಾರಣ ಯಃಕಶ್ಚಿದ್ವ್ಯಕ್ತಿಯನ್ನು ನೆಪಮಾತ್ರಕ್ಕಿಟ್ಟು ಆ ಮಹಾನುಭಾವನು ಈ ಅಗಾಧ ಕಾರ್ಯವನ್ನು ಮಾಡಿಸುತ್ತಿದ್ದಾನೆ. ಆದುದರಿಂದ ಮುಂದಿನ ಹತ್ತೊಂಬತ್ತು ಸಂಪುಟಗಳೂ ತೊಡಕಿಲ್ಲದೇ ಪ್ರಕಟವಾಗುತ್ತವೆ. ಈ ವಿಷಯವಾಗಿ ಯಾರೂ ಯಾವ ಕಾರಣದಿಂದಲೂ ಸಂಶಯಿಸುವ ಕಾರಣವಿಲ್ಲ.

೧೯೭೭ಕ್ಕೆ ನಾವು ಈ ಕೆಳಕಂಡ ಕಾರ್ಯಕ್ರಮವನ್ನು ಇಟ್ಟುಕೊಂಡಿರುತ್ತೇವೆ. ಆರನೆಯ ಸಂಪುಟದ ಪುನರ್ಮುದ್ರಣ ಫೆಬ್ರುವರಿ ; ಹನ್ನೆರಡನೆಯ ಸಂಪುಟ ಏಪ್ರಿಲ್ ; ಐದನೆಯ ಸಂಪುಟದ ಪುನರ್ಮುದ್ರಣ ಜೂನ್ ; ಹದಿಮೂರನೆಯ ಸಂಪುಟ ಸೆಪ್ಟೆಂಬರ್ ; ಹದಿನಾಲ್ಕನೆಯ ಸಂಪುಟ ಡಿಸೆಂಬರ್—ಈ ರೀತಿಯಾಗಿ ೧೯೭೭ರಲ್ಲಿ ಐದು ಸಂಪುಟಗಳು ಹೊರಬೀಳುತ್ತವೆ. ಪುನರ್ಮುದ್ರಣವು ಅನಿವಾರ್ಯವಾಗಿದೆ. ದಿವಸ-ದಿವಸಕ್ಕೂ ಹೆಚ್ಚುತ್ತಿರುವ ಗ್ರಾಹಕರಿಗೆ ಹಿಂದಿನ ಸಂಪುಟಗಳನ್ನು ಒದಗಿಸಲೇಬೇಕಾದುದು ನಮ್ಮ ಕರ್ತವ್ಯ. ಆರ್ಥಿಕವಾಗಿ ಪುನರ್ಮುದ್ರಣವು ಪ್ರಯೋಜನಕಾರಿಯಲ್ಲದಿದ್ದರೂ ನೂತನಗ್ರಾಹಕರ ದೃಷ್ಟಿಯಿಂದ ಇದು ಅತ್ಯಾವಶ್ಯಕ. ನಮ್ಮ ಪ್ರಿಯವಾಚಕರು ತಮ್ಮ ಬಂಧು-ಮಿತ್ರರಲ್ಲಿ ಕಡೆಯ ಪಕ್ಷ ಒಬ್ಬಿಬ್ಬರನ್ನಾದರೂ ಗ್ರಾಹಕರನ್ನಾಗಿ ಮಾಡಿಕೊಟ್ಟಲ್ಲಿ ಪುನರ್ಮುದ್ರಣದಿಂದಾಗುವ ಆರ್ಥಿಕತೊಂದರೆಯು ನಿವಾರಣೆಯಾಗುವುದು. ಆದುದರಿಂದ ನಮ್ಮ ಗ್ರಾಹಕರು ಪೂರ್ಣವಾಗಿ ಪ್ರಯತ್ನಿಸಬೇಕೆಂದು ವಿನಂತಿಸುತ್ತೇವೆ.

ಶ್ರೀಮನ್ಮಹಾಭಾರತದ ಪೂರ್ಣಮಾಲೆಗೆ ಚಂದಾದಾರರಾಗಲು **ಕೆನರಾ, ಸಿಂಡಿಕೇಟ್, ಕರ್ಣಾಟಕ ಮತ್ತು** ಕಾರ್ಪೊರೇಷನ್ ಬ್ಯಾಂಕುಗಳು ಸುಲಭಕಂತಿನ ಸಾಲನೀಡುತ್ತಿವೆ. ಇದರ ಸೌಲಭ್ಯವನ್ನು ಇದುವರೆಗೆ ಸುಮಾರು ಒಂದು ಸಾವಿರ ಜನ ಪಡೆದುಕೊಂಡಿರುತ್ತಾರೆ. ನಮ್ಮ ದೃಷ್ಟಿಯಲ್ಲಿ ಮಹಾಭಾರತಗ್ರಂಥವನ್ನು ಸಂಗ್ರಹಿಸಲು ಇದಕ್ಕಿಂತಲೂ

ಸುಲಭೋಪಾಯವು ಮತ್ತೊಂದಿಲ್ಲ. ಇನ್ನೂ ಸಾವಿರಾರು ಮಂದಿ ಗ್ರಾಹಕರಾಗಲು ಅವಕಾಶವಿದೆಯೆಂದೂ ಬ್ಯಾಂಕಿನ ಮುಖ್ಯಾಧಿಕಾರಿಗಳು ತಿಳಿಸಿರುತ್ತಾರೆ. ಈ ಅವಕಾಶವನ್ನು ನಮ್ಮ ಕನ್ನಡಜನತೆಯು ಸದುಪಯೋಗ ಪಡಿಸಿಕೊಳ್ಳಬೇಕಾಗಿ ಪ್ರಾರ್ಥಿಸುತ್ತೇವೆ. ಮಹಾಭಾರತವು ಭಾರತೀಯ ಸಂಸ್ಕೃತಿಯ ಅಡಿಗಲ್ಲೆಂಬುದನ್ನೂ–ಮಹಾಭಾರತವೇ ಮಹಾವಿದ್ಯೆಯೆಂಬು ದನ್ನೂ ಮನಗಂಡು, ಈ ಮಹಾಗ್ರಂಥದ ಸಂಗ್ರಹಕ್ಕಾಗಿ ಸುಲಭ ಕಂತಿನ ಸಾಲನೀಡಲು ಉದಾರಮನಸ್ಸಿನಿಂದ ಮುಂದೆ ಬಂದಿರುವ ಕೆನರಾ ಬ್ಯಾಂಕ್, ಸಿಂಡಿಕೇಟ್ ಬ್ಯಾಂಕ್, ಕರ್ಣಾಟಕ ಬ್ಯಾಂಕ್ ಲಿ., ಕಾರ್ಪೊರೇಷನ್ ಬ್ಯಾಂಕ್ ಲಿ.– ಇವುಗಳ ಮುಖ್ಯಾಧಿಕಾರಿಗಳಿಗೆ ನಾವು ಕೃತಜ್ಞರಾಗಿರುತ್ತೇವೆ.

ಪ್ರಚಾರಕರೂ ಮತ್ತು ಪ್ರತಿನಿಧಿಗಳೂ ದಿನ-ದಿನಕ್ಕೂ ಹೆಚ್ಚುತ್ತಿದ್ದಾರೆ. ನಮ್ಮ ಪ್ರಿಯಗ್ರಾಹಕರನೇಕರು ನೂತನಗ್ರಾಹಕರನ್ನು ಮಾಡಿಕೊಡಲು ಸತತವಾಗಿ ಶ್ರಮಿಸುತ್ತಿದ್ದಾರೆ. ಈ ಮಹಾಗ್ರಂಥವನ್ನು ನಮ್ಮ ಕನ್ನಡನಾಡಿನ ಮೂಲೆ-ಮೂಲೆಗೂ ಹರಡಬೇಕೆಂಬುದೇ ನಮ್ಮ ಮುಖ್ಯೋದ್ದೇಶವಾಗಿದೆ. ಇದರಲ್ಲಿ ಪ್ರಚಾರಕರ, ಪ್ರತಿನಿಧಿಗಳ ಮತ್ತು ಗ್ರಾಹಕರ ಪಾತ್ರವು ನಿಶ್ಚಯವಾಗಿಯೂ ಬಹುಮಹತ್ವದ್ದು. ಇವರಿಂದಲೇ ನಮ್ಮ ಯೋಜನೆಯು ಕಾರ್ಯಗತವಾಗಬೇಕಾಗಿದೆ. ಇದರ ಪ್ರಚಾರಕ್ಕಾಗಿ ಶ್ರಮಿಸುತ್ತಿರುವವರೆಲ್ಲರಿಗೂ ಕೃತಜ್ಞರಾಗಿರುತ್ತೇವೆ.

ಸಂಪಾದಕಮಂಡಲಿಯವರ ಕಾರ್ಯವು ದಿನ-ದಿನಕ್ಕೂ ಅಧಿಕವಾಗು ತ್ತಿದೆ. ಇವರಿಗೆ ಸಾಮಾನ್ಯವಾಗಿ ಬಿಡುವೇ ಇರುವುದಿಲ್ಲ. ಎಷ್ಟೇ ಕಾರ್ಯ ಮಾಡಿದರೂ ಆಮುಷ್ಮಿಕಫಲವು ಮಾತ್ರವೇ ಲಭ್ಯ. ಆದರೂ ಸೌಜನ್ಯದಿಂದ ನಗು-ನಗುತ್ತಾ ಈ ಅಮೋಘಕೃತಿಗಳನ್ನು ಹೊರತರುವುದರಲ್ಲಿ ಸತತವಾಗಿ ಶ್ರಮಿಸುತ್ತಿರುವ ಸಂಪಾದಕಮಂಡಲಿಯವರಿಗೆ ಎಷ್ಟು ಧನ್ಯವಾದಗಳನ್ನು ಅರ್ಪಿಸಿದರೂ ಅಲ್ಪವೇ ಸರಿ. ಕೇವಲ ದೈವಯೋಗದಿಂದ ಈ ಕಾರ್ಯಕ್ಕಾಗಿ ಇವರೆಲ್ಲರೂ ಒಂದೆಡೆಯಲ್ಲಿ ಸೇರಿ ನಿಷ್ಕಾಮಸೇವೆಯನ್ನು ಸಲ್ಲಿಸುತ್ತಿದ್ದಾರೆ. ಮಹಾಭಾರತದಲ್ಲಿ ಪ್ರತಿಪಾದ್ಯವಾಗತಕ್ಕ ತತ್ತ್ವ ಗಳನ್ನು ತತ್ತ್ವಶಃ ಇವರು ಅನುಷ್ಠಾನದಲ್ಲಿಟ್ಟುಕೊಂಡಿದ್ದಾರೆಂದರೂ ತಪ್ಪಾಗ

ಲಾರದು. ಎಷ್ಟೇ ಕಾರ್ಯಗಳಿದ್ದರೂ ರಾತ್ರಿಯ ವೇಳೆ ಹನ್ನೊಂದು- ಹನ್ನೆರಡು ಘಂಟೆಗಳವರೆಗಾದರೂ ಕಾರ್ಯಮಾಡಿ ಮುದ್ರಣಕಾರ್ಯಕ್ಕೆ ಸಹಕಾರನೀಡುತ್ತಿದ್ದಾರೆ. ಇವರೆಲ್ಲರಿಗೂ ಭಗವಂತನು ಆಯುರಾರೋಗ್ಯ-ಐಶ್ವರ್ಯಾದಿಗಳನ್ನು ದಯಪಾಲಿಸಲೆಂದು ಪ್ರಾರ್ಥಿಸುತ್ತೇವೆ.

ಹನ್ನೊಂದನೆಯ ಸಂಪುಟದ ಪ್ರಕಾಶನಕ್ಕೆ ಮೊದಲು ಆದಿಪಂಚಕವು ಮುಗಿದಿದ್ದಕ್ಕಾಗಿ ಶಾಂತ್ಯುತ್ಸವವನ್ನು ಇಟ್ಟುಕೊಳ್ಳಲಾಗಿತ್ತು. ಶಾಂತಿ ಸಮಾರಂಭಗಳನ್ನು ಪ್ರತಿಪರ್ವವು ಮುಗಿದಾಗಲೂ ಇಟ್ಟುಕೊಳ್ಳಬೇಕೆಂಬ ಮಹಾಭಾರತದ ಅಭಿವಚನವಿದೆ. ಫಲಶ್ರುತಿಯಲ್ಲೂ ಇದನ್ನೇ ಹೇಳುತ್ತಾರೆ. ಆದರೆ ಐದು ಪರ್ವಕ್ಕೂ ಸೇರಿದಂತೆ ಯಥಾಶಕ್ತಿ ಈ ಉತ್ಸವವನ್ನು ಆಚರಿಸಲಾಯಿತು. ನಮ್ಮ ಮಾಸಪತ್ರಿಕೆಯ ಪ್ರಚಾರಕ್ಕೆ ಓಗೊಟ್ಟು ಸಾವಿರಾರು ಮಂದಿ ಹರೇರಾಮಮಂತ್ರವನ್ನು ಜಪಿಸುತ್ತಿದ್ದರು. ಅವರು ಜಪಿಸುತ್ತಿದ್ದ ಲಕ್ಷೋಪಲಕ್ಷ ಪುನಶ್ಚರಣೆಯ ಅಂಗವಾಗಿ ಹೋಮಾದಿಗಳೂ ನಡೆದುವು. ಗ್ರಾಹಕರೂ, ಅನೇಕಬಂಧು-ಮಿತ್ರರೂ ಉತ್ಸವದಲ್ಲಿ ಭಾಗವಹಿಸಿದ್ದರು. ನಮ್ಮ ಸತ್ಸಂಗದ ಸದಸ್ಯರು ಮಾಡುತ್ತಿದ್ದ ಮಹಾಮಂತ್ರದ ಪುನಶ್ಚರಣೆಯೇ ನಮ್ಮ ಬಂಡವಾಳ. ಈ ಮಹಾಕಾರ್ಯವು ನಿರ್ವಿಘ್ನವಾಗಿ ನಡೆಯುವಂತೆ ಪರಮಾತ್ಮನನ್ನು ಪ್ರಾರ್ಥಿಸಿ ಮಂತ್ರಜಪವನ್ನು ಮಾಡಬೇಕೆಂದು ನಾವು ಅನೇಕರನ್ನು ಪ್ರಾರ್ಥಿಸಿದ್ದೆವು. ಅದೇ ರೀತಿಯಲ್ಲಿ ಅನೇಕರು ಮಂತ್ರಜಪ ಮಾಡಿದ್ದಾರೆ. ಇನ್ನೂ ಮಾಡುತ್ತಲೂ ಇದ್ದಾರೆ. ಇವರೆಲ್ಲರಿಗೂ ಪರಮಾತ್ಮನು ಖಂಡಿತವಾಗಿಯೂ ಕೃಪೆದೋರುತ್ತಾನೆ.

೧೦ನೆಯ ಸಂಪುಟದ ಪ್ರಕಾಶನಸಮಾರಂಭವು ನರಸಿಂಹರಾಜಾ ಕಾಲೋನಿ ಶ್ರೀರಾಮಮಂದಿರದಲ್ಲಿ ನೆರವೇರಿತು. ಶಿಕ್ಷಣ ಉಪಮಂತ್ರಿ ಶ್ರೀ ಮಲ್ಲಿಕಾರ್ಜುನ ಖರ್ಗೆ ಅವರು ಸಂಪುಟವನ್ನು ಪ್ರಕಾಶನಗೊಳಿಸಿದರು. ಧರ್ಮಸ್ಥಳದ ಧರ್ಮಾಧಿಕಾರಿಗಳಾದ ಶ್ರೀ ವೀರೇಂದ್ರಹೆಗ್ಗಡೆಯವರು ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿದ್ದರು. ಪ್ರಕಾಶನದ ಅಧ್ಯಕ್ಷರಾದ ವಿದ್ವಾನ್ ವರದದೇಶಿಕಾಚಾರ್ಯರು ಹತ್ತನೇ ಸಂಪುಟದ ಪರಿಚಯಮಾಡಿಕೊಟ್ಟರು. ಶ್ರೀಮದ್ರಾಮಚಂದ್ರಾಪುರಮಠದ ಜಗದ್ಗುರು ಶ್ರೀ ಶ್ರೀ ರಾಘವೇಂದ್ರಭಾರತೀ

ಸ್ವಾಮಿಗಳವರೂ, ಶೃಂಗೇರಿ ಜಗದ್ಗುರು ಶ್ರೀ ಶ್ರೀಮದಭಿನವವಿದ್ಯಾತೀರ್ಥ ಸ್ವಾಮಿಗಳವರೂ, ಉಡುಪಿಯ ಪೇಜಾವರಮಠದ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರೂ ಕಳುಹಿಸಿದ್ದ ಸ್ವರ್ಣಮಂತ್ರಾಕ್ಷತೆಯನ್ನು ಶ್ರೀ ವೀರೇಂದ್ರಹೆಗ್ಗಡೆಯವರು ಸಂಪಾದಕಮಂಡಲಿಗೆ ಕೊಟ್ಟು ಸನ್ಮಾನಿಸಿದರು. ಶಾಂತಿಪಾಠದೊಡನೆ ಸಮಾರಂಭವು ಮುಕ್ತಾಯವಾಯಿತು.

ಈ ಸಂಪುಟಕ್ಕೆ ಮೈಸೂರಿನ ರಾಜಗುರು ಬ್ರಹ್ಮತಂತ್ರಸ್ವತಂತ್ರ ಪರಕಾಲಮಠದ ಶ್ರೀ ಶ್ರೀಗಳವರು ಮುನ್ನುಡಿಯನ್ನು ಬರೆದುಕೊಟ್ಟು ಅನುಗ್ರಹಿಸಿರುತ್ತಾರೆ. ಇವರಿಗೆ ನಮ್ಮ ಸಾಷ್ಟಾಂಗನಮಸ್ಕಾರಗಳನ್ನು ಅರ್ಪಿಸುತ್ತೇವೆ.

ಪ್ರತ್ಯಕ್ಷವಾಗಿ ನೆರವು ನೀಡುತ್ತಿರುವವರಿಗೂ, ಪರೋಕ್ಷವಾಗಿ ನೆರವು ನೀಡುತ್ತಿರುವವರಿಗೂ, ಸರ್ವರಿಗೂ-ಪರಮಕಾರುಣಿಕನಾದ ಶ್ರೀಹರಿಯು ಸಕಲಸೌಭಾಗ್ಯಗಳನ್ನೂ ದಯಪಾಲಿಸಲೆಂಬ ಪ್ರಾರ್ಥನೆಯೊಡನೆ ವಿರಮಿಸುತ್ತೇವೆ.

- ಪ್ರಕಾಶಕರು.

ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯವರ್ಯ ಪದ-ವಾಕ್ಯ-ಪ್ರಮಾಣ
ಪಾರಾವಾರಪಾರೀಣ ಯಮ-ನಿಯಮಾಸನ-ಪ್ರಾಣಾಯಾಮ-ಪ್ರತ್ಯಾಹಾರ-ಧ್ಯಾನ-
ಧಾರಣ-ಸಮಾಧ್ಯಷ್ಟಾಂಗಯೋಗಾನುಷ್ಠಾನನಿಷ್ಠ ಷಡ್ದರ್ಶನಸ್ಥಾಪನಾಚಾರ್ಯ
ತಪಶ್ಚಕ್ರವರ್ತ್ಯನಾದ್ಯವಿಚ್ಛಿನ್ನ

**ಶ್ರೀಮಜ್ಜಗದ್ಗುರು ಶಂಕರಾಚಾರ್ಯಶಿಷ್ಯ**

ಶ್ರೀಮಚ್ಛತಶೃಂಗಪುರವರಾಧೀಶ್ವರ ಶ್ರೀಮಚ್ಛರಾವತೀತೀರವಾಸ
ಶ್ರೀಮದ್ರಾಮಚಂದ್ರಾಪುರಮಠಸ್ಥ ಶ್ರೀಮದ್ರಾಮಚಂದ್ರ-ಚಂದ್ರಮೌಳೀಶ್ವರ
ಪಾದಪದ್ಮಾರಾಧಕ ಶ್ರೀಮದ್ರಾಮಚಂದ್ರಭಾರತೀ ಶ್ರೀಗುರುಕರಕಮಲಸಂಜಾತ

**ಶ್ರೀಮದ್ರಾಘವೇಂದ್ರಭಾರತೀ ಶ್ರೀಸ್ವಾಮಿಭಿಃ ।**

ಶ್ರೀಯುತ ಕೆ.ಎಸ್. ಕೌಶಿಕರು, ವ್ಯವಸ್ಥಾಪಕರು, ಶ್ರೀಮನ್ಮಹಾಭಾರತ
ಪ್ರಕಾಶನಸಮಿತಿ, ತ್ಯಾಗರಾಜನಗರ, ಬೆಂಗಳೂರು-೨೮ ಇವರಿಗೆ

**॥ ಶ್ರೀಮನ್ನಾರಾಯಣಸ್ಮರಣಪುರಸ್ಸರಂ**
**ಸಂದಿಷ್ಟೋಽಯಂ ಸಂದೇಶಃ ॥**

ಆದಾಗಿ : ಧರ್ಮಾರ್ಥ-ಕಾಮ-ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥ ಸಾಧನೆಗೆ ಸಂಬಂಧಿಸಿದ ವಿಷಯಗಳಿಗೆ ಉಗಮವಾದ, ಭಾರತೀಯರ ಏಕೈಕ ಮಹೋನ್ನತ ಇತಿಹಾಸವಾದ ಶ್ರೀಮನ್ಮಹಾಭಾರತದ ಹನ್ನೊಂದನೆಯ ಸಂಪುಟವೂ ಪ್ರಕಾಶನಕ್ಕೆ ಸಿದ್ಧವಾಗುತ್ತಿದೆಯೆಂಬುದನ್ನು ತಿಳಿದು ಅತೀವ ಸಂತಸವಾಯಿತು.

ಈ ಸಂಪುಟದೊಡನೆ "ಭಾರತೇ ಸಾರಮುದ್ಯೋಗಂ" ಎಂಬಂತೆ ಶ್ರೀಮನ್ಮಹಾಭಾರತದಲ್ಲಿಯೇ ಅತ್ಯುತ್ಕೃಷ್ಟಪರ್ವವೆಂದು ಪ್ರಸಿದ್ಧವಾಗಿರುವ ಉದ್ಯೋಗಪರ್ವವನ್ನೂ ಪ್ರಕಾಶನಗೊಳಿಸಿ ಆದಿಪಂಚಕವನ್ನು ಮುಗಿಸಿದಂತಾಗಿದೆ. ಇದುವರೆಗಿನ ಹತ್ತು ಸಂಪುಟಗಳನ್ನು ಅಭ್ಯಸಿಸಿರುವ ಆಸ್ತಿಕಮಹಾಜನರು ಮಹಾಭಾರತವು ಪರಮಶ್ರೇಷ್ಠವೂ ಧರ್ಮಾರ್ಥ-ಕಾಮ-ಮೋಕ್ಷಸಾಧಕವೂ ಆದ ಮಹಾವಿದ್ಯೆಯೆಂಬುದನ್ನು ಮನಗಂಡಿರಬಹುದು. ಪ್ರತಿಯೊಬ್ಬ ಕನ್ನಡಿಗನೂ ಅವಶ್ಯ ಓದಲೇಬೇಕಾದ ಮಹಾಗ್ರಂಥವಿದು. ಮಹಾಭಾರತ ಅಧ್ಯಯನಮಾಡಿ ಮನನಮಾಡಿಕೊಳ್ಳದಿದ್ದರೆ ಮನುಷ್ಯನು ಸುಸಂಸ್ಕೃತನೂ ಪರಿಪೂರ್ಣನೂ ಆಗಲಾರನು. ಹುಟ್ಟಿದ ಮಾನವನು ಲೋಕ ವ್ಯವಹಾರವನ್ನೂ ನಡೆಸಿಕೊಂಡು, ಅಧ್ಯಾತ್ಮದ ಸಾಧನೆಯನ್ನೂ ಹೇಗೆ

ಮಾಡಬೇಕೆಂಬುದನ್ನು ಬೋಧಿಸುವ ಮಹಾಗ್ರಂಥವಿದೆಂಬುದು ಇದನ್ನು ಓದುವ ಪ್ರತಿಯೊಬ್ಬನಿಗೂ ಗೋಚರಿಸದೇ ಇರದು.

ಆದಿಪಂಚಕವನ್ನು ಪೂರೈಸಿ ಮಧ್ಯಪಂಚಕಕ್ಕೆ ಪ್ರವೇಶಿಸುತ್ತಿರುವ ನಿಮ್ಮ ಕಾರ್ಯಕ್ರಮವು ಮಹತ್ತ್ವಪೂರ್ಣವಾದುದು. ಇದುವರೆಗೆ ಹನ್ನೊಂದು ಸಂಪುಟಗಳು ಹೊರಬಂದಂತೆಯೇ ಮುಂದಿನ ಸಂಪುಟಗಳೂ ಯಾವ ವಿಧವಾದ ತೊಡರುಗಳೂ ಇಲ್ಲದೇ ಹೊರಬರುವಂತೆಯೂ, ಇಂತಹ ಪವಿತ್ರವಾದ ಕಾರ್ಯಕ್ಕೆ ನಿಸ್ಪೃಹತೆಯಿಂದ ಹಗಲಿರುಳೂ ಶ್ರಮಿಸುತ್ತಿರುವ ಸಂಪಾದಕಮಂಡಲಿಯವರಿಗೆ ಆಯುರಾರೋಗ್ಯೈಶ್ವರ್ಯಾದಿಗಳು ಲಭಿಸು ವಂತೆಯೂ ಶ್ರೀಸೀತಾರಾಮಚಂದ್ರ - ಚಂದ್ರಮೌಳೀಶ್ವರರು ಅನುಗ್ರಹಿಸಲೆಂದು ಹಾರೈಸುತ್ತೇವೆ.

ಶ್ರೀಮನ್ನಾರಾಯಣಸ್ಮೃತಯಃ

ಮಿತಿ :- ಶ್ರೀ ನಲ ಸಂ । ದ ॥ ಮಾರ್ಗಶಿರ ಶು । ೧೨ । ಯು ಶುಕ್ರವಾಸರೇ॥
(ತಾ॥ ೩-೧೨-೧೯೭೬)
ವಸತಿ : ತುಂಗಾತೀರಸ್ಥ ತೀರ್ಥಹಳ್ಳಿ ಶ್ರೀರಾಮಚಂದ್ರಾಪುರಮಠೇ ॥

---

ಶ್ರೀಃ ॥
ಶ್ರೀಮದ್ವೇದಮಾರ್ಗಪ್ರತಿಷ್ಠಾಪನಾಚಾರ್ಯ, ಶ್ರೀಮತ್ಪರಮಹಂಸ
ಪರಿವ್ರಾಜಕಾಚಾರ್ಯ, ಸರ್ವತಂತ್ರಸ್ವತಂತ್ರೋಭಯವೇದಾಂತಾಚಾರ್ಯ
ಶ್ರೀಮತ್ಕವಿಕಥಕಕಂಠೀರವಚರಣನಳಿನಯುಗಳವಿನ್ಯಸ್ತ ಸಮಸ್ತಾತ್ಮಭರ,
ಶ್ರೀಮದ್ರಾಮಾನುಜಸಿದ್ಧಾಂತನಿರ್ಧಾರಣಸಾರ್ವಭೌಮ,
ಶ್ರೀಲಕ್ಷ್ಮೀಹಯಗ್ರೀವದಿವ್ಯಪಾದುಕಾಸೇವಕ

## ಶ್ರೀಮದಭಿನವರಾಮಾನುಜಬ್ರಹ್ಮತಂತ್ರಸ್ವತಂತ್ರ ಪರಕಾಲಸ್ವಾಮಿಗಳು ಅನುಗ್ರಹಿಸಿದ ಅವತರಣಿಕೆ

ಭಾರತ ದರ್ಶನ ಪ್ರಕಾಶನಸಂಸ್ಥೆಯವರು ಮಹಾಭಾರತ ಇತಿಹಾಸ ವನ್ನು ತಿಳಿಗನ್ನಡಕ್ಕೆ ಅನುವಾದಮಾಡಿ ಪ್ರಚಾರಮಾಡುತ್ತಿರುವುದು ಅತ್ಯಂತ ಪ್ರಶಂಸನೀಯ ಮಹತ್ಸಾಧನೆ. ಈಗಾಗಲೇ ಹತ್ತು ಸಂಪುಟಗಳು ಪ್ರಕಟ ವಾಗಿ ೧೧ನೆಯ ಸಂಪುಟ ಪ್ರಕಟವಾಗಲಿದೆ. ಹತ್ತು, ಹನ್ನೊಂದ

ನೆಯ ಸಂಪುಟಗಳೆರಡೂ ಮಹಾಭಾರತಮಹಾಗ್ರಂಥದ ಐದನೆಯ ಉದ್ಯೋಗಪರ್ವದ ಕಥಾವಸ್ತುವಾಗಿದೆ. ಎಲ್ಲ ಪರ್ವಗಳ ಹೆಸರಿನಂತೆ ಉದ್ಯೋಗಪರ್ವದ ಹೆಸರೂ ಅನ್ವರ್ಥವಾಗಿದೆ. ಯುದ್ಧೋದ್ಯೋಗವೇ ಈ ಪರ್ವದ ಕಥಾವಿವರಣೆ. ಮಹಾಭಾರತವು ಕಥೆಗಳಿಗಾಗಿ. ಅದರಲ್ಲಿ ಬರುವ ಉಪಕಥೆಗಳ ವೈವಿಧ್ಯಕ್ಕೆ ಕೊನೆಮೊದಲೇ ಇಲ್ಲ. ದೇವತೆಗಳ ಕಥೆ, ಪುರಾಣ ಕಥೆ, ಪುಣ್ಯಕಥೆ, ನೀತಿಕಥೆ, ಋಷಿಗಳ ಕಥೆ, ಮೃಗ - ಪಕ್ಷಿ - ಹಾವುಗಳ ಕಥೆ, ತ್ಯಾಗಿಗಳ ಕಥೆ, ಯೋಗಿಗಳ ಕಥೆ-ಇತ್ಯಾದಿ. ಹಾಗೆಯೇ ಉದ್ಯೋಗಪರ್ವದಲ್ಲಿಯೂ ಮಾತಲಿ, ಗಾಲವ, ವಾಮದೇವ, ಜಮದಗ್ನಿ–ಮುಂತಾದವರ ಕಥೆಗಳಿವೆ. ಒಂದು ರೀತಿಯಲ್ಲಿ ಉದ್ಯೋಗಪರ್ವವು ಮಹಾಭಾರತದಲ್ಲಿ ಅತ್ಯಂತಮುಖ್ಯವಾದ ಕಥಾಸಂದರ್ಭ. ಶ್ರೀಕೃಷ್ಣನ ದೂತಕಾರ್ಯ ಯಶಸ್ವಿಯಾಗಿ ದುಷ್ಟಚತುಷ್ಟಯರ ಮನಸ್ಸು ಪರಿವರ್ತಿತವಾಗಿದ್ದರೆ– ಕುರುಕ್ಷೇತ್ರಯುದ್ಧವೇ ನಡೆಯುತ್ತಿರಲಿಲ್ಲ. ಯುದ್ಧನಡೆಯಬೇಕೆಂಬುದೇ ಪರಮಾತ್ಮನ ಸಂಕಲ್ಪ. ಏಕೆಂದರೆ : ದುಷ್ಟರಿಗೆ ಶಿಕ್ಷೆಯಾಗಿ, ಶಿಷ್ಟರ ರಕ್ಷಣೆಯಾಗಿ ಧರ್ಮಸಂಸ್ಥಾಪನೆಯಾಗಬೇಕು.

ಶ್ರೀಕೃಷ್ಣನ ದೂತಕಾರ್ಯ ಈ ಸಂಪುಟದಲ್ಲಿ ಮುಖ್ಯವಾದ ಕಥಾಭಾಗ. ಇಬ್ಬರು ರಾಜರಿಗೆ ಯುದ್ಧಸಂಭವಿಸಿದಾಗ ಅವರಿಬ್ಬರಿಗೂ ಸಂಧಿಮಾಡುವ ಪ್ರಯತ್ನ ಬಹುಪುರಾತನಕಾಲದಿಂದ ರೂಢಿಯಲ್ಲಿದೆ. ಇಲ್ಲಿ ಕೌರವ-ಪಾಂಡವರಿಗೆ ಯುದ್ಧಸಂಭವಿಸಿರುವುದಲ್ಲದೇ, ಧರ್ಮ ಮತ್ತು ಅಧರ್ಮತತ್ತ್ವಗಳೆರಡಕ್ಕೂ ಹೋರಾಟ. ಕೌರವರು ಅಧರ್ಮಿಗಳು ; ಪಾಂಡವರು ಧರ್ಮಿಗಳು. ಧರ್ಮಕ್ಕೆ ಜಯ ಎಂಬುದು ಪರಮಾತ್ಮನ ಸಂಕಲ್ಪ. ಈ ಸಂಕಲ್ಪ ಸಿದ್ಧಿಸಬೇಕಾದರೆ ಪರಮಾತ್ಮಸ್ವರೂಪೀ ಶ್ರೀಕೃಷ್ಣನ ಸಹಾಯವೇ ಬೇಕು. ಆದರೆ ಈ ಸಹಾಯ ಲೋಕಾನುಭವಕ್ಕೆ ಹೊಂದಿಕೊಂಡಂತಿರಬೇಕು. ಈ ದೃಷ್ಟಿಯಿಂದ ದೂತಕಾರ್ಯಕ್ಕೆ ಸಮರ್ಥನಾದವನು, ಸಾಮ - ದಾನ - ಭೇದ - ದಂಡೋಪಾಯಗಳನ್ನು ತಿಳಿದ, ದಕ್ಷತೆಯುಳ್ಳವನು ಹೋಗಬೇಕು.

ದೂತಕಾರ್ಯಕ್ಕೆ ಹೋಗಬೇಕೆಂದು ಪಾಂಡವರು ಪ್ರಾರ್ಥಿಸಿದಾಗ

ಶ್ರೀಕೃಷ್ಣನು ಸಮ್ಮತಿಸುವನು. ಆದರೆ ಪಾಂಡವರು ಮತ್ತು ದ್ರೌಪದೀ ಇವರೆಲ್ಲರ ಅಭಿಪ್ರಾಯವನ್ನು ಪ್ರತ್ಯೇಕವಾಗಿ ಕೇಳುವನು. ಹಾಗೆಯೇ ಹಸ್ತಿನಾಪುರಕ್ಕೆ ಬಂದು ಧೃತರಾಷ್ಟ್ರ, ಭೀಷ್ಮ, ದ್ರೋಣ, ವಿದುರಾದಿಗಳಿಗೆ ಸಂಧಿಗಾಗಿ ತಾನು ಬಂದಿರುವ ವಿಷಯ ತಿಳಿಸುವನು. ಅವರೆಲ್ಲರ ಒಪ್ಪಿಗೆಯನ್ನು ಪಡೆಯುವನು. ಇದು ಲೋಕಾನುಭವದಲ್ಲಿ ಸರಿ ಎನ್ನಿಸುವುದು. ದುರ್ಯೋಧನನಿಗೂ ಕೂಡ ಸಂಧಿಮಾಡಿಕೊಳ್ಳುವಂತೆ ಹೇಳುವನು. ಧೃತರಾಷ್ಟ್ರ, ಗಾಂಧಾರೀ, ವಿದುರಾದಿಗಳಿಂದ ಹೇಳಿಸುವನು. ಇದು ಲೋಕನೀತಿಗೆ ಅನುಸಾರವಾಗಿದೆ. ಕೊನೆಗೆ ದಂಡೋಪಾಯಸ್ವರೂಪ ವಾದ ತನ್ನ ವಿಶ್ವರೂಪವನ್ನು ತೋರಿಸಿದರೆ–ದುರ್ಯೋಧನನಲ್ಲಿ ಭಯಹುಟ್ಟಿ ಸಂಧಿಗೆ ಸಮ್ಮತಿಸಬಹುದೆಂಬ ಪ್ರಯತ್ನವೂ ಆಯಿತು.

ವಿಪಕ್ಷೀಯರಾದ ವೀರರನ್ನು ವಿನಾಶಗೊಳಿಸುವ ಸಾಮರ್ಥ್ಯವುಳ್ಳ ಕೇಶವನು ದುರ್ಯೋಧನನನ್ನು ನೋಡಿ ಗಟ್ಟಿಯಾಗಿ ನಗುವನು. ತತ್‌ಕ್ಷಣ ಶ್ರೀಕೃಷ್ಣನ ಶರೀರದಲ್ಲಿ ಸಮಸ್ತದೇವತೆಗಳೂ, ಬ್ರಹ್ಮ-ರುದ್ರಾದಿಗಳೂ, ಯಕ್ಷ-ರಾಕ್ಷಸ-ಗಂಧರ್ವ-ಸಿದ್ಧ-ಸಾಧ್ಯರೆಲ್ಲರೂ ಕಾಣಿಸಿಕೊಳ್ಳುವರು.

ಬಲರಾಮ, ಪಾಂಡವರಾದಿಯಾಗಿ ಎಲ್ಲರೂ ಅವನ ಹಿಂದೆ ಕಾಣಿಸಿಕೊಳ್ಳುವರು. ಅವನ ಮುಖದಿಂದ ಅಗ್ನಿಜ್ವಾಲೆ ಬರುತ್ತದೆ. ಶಂಖ-ಚಕ್ರ-ಗದಾದಿ ಆಯುಧಗಳೆಲ್ಲವೂ ಯುದ್ಧಕ್ಕಾಗಿ ಸಿದ್ಧವಾಗಿರುವುವೋ ಎಂಬಂತೆ ಪ್ರಕಾಶಿಸುತ್ತಿದ್ದುವು. ಈ ವಿಶ್ವರೂಪದರ್ಶನಕ್ಕೆ ಧೃತರಾಷ್ಟ್ರನಿಗೆ ಶ್ರೀಕೃಷ್ಣನು ದಿವ್ಯಚಕ್ಷುಸ್ಸನ್ನು ಕರುಣಿಸಿದನು. ಭೀಷ್ಮ-ದ್ರೋಣ-ವಿದುರಾದಿಗಳು ಈ ಭಯಂಕರರೂಪವನ್ನು ನೋಡಲಾರದೇ ಅವರ ಕಣ್ಣುಗಳು ತಾವಾಗಿಯೇ ಮುಚ್ಚಿಕೊಂಡುವು. ಭಗವದ್ಗೀತೆಯ ವಿಶ್ವರೂಪದರ್ಶನ ಮತ್ತು ಇಲ್ಲಿಯ ವಿಶ್ವರೂಪದರ್ಶನ ಎರಡೂ ಒಂದೇ ರೀತಿಯದಾದರೂ ವರ್ಣನೆಯಲ್ಲಿ ವ್ಯತ್ಯಾಸವಿದೆ. ಹೀಗೆ ಎಲ್ಲರೂ ವಿಶ್ವರೂಪದರ್ಶನದಿಂದ ಭಯಪಟ್ಟರೂ ದುರ್ಯೋಧನನಿಗೆ ಭಯವುಂಟಾಗಲಿಲ್ಲ. ಏಕೆಂದರೆ; ಪರಮಾತ್ಮನು ಅವನ ಅಂತರಂಗದಲ್ಲಿ ನಿಂತು ಯುದ್ಧಮಾಡುವಂತೆ ಪ್ರೇರೇಪಿಸುತ್ತಿದ್ದಾನೆ. ಇದನ್ನು ಯಾರು ತಾನೇ ತಿಳಿಯಲು ಸಾಧ್ಯ?

ಧೃತರಾಷ್ಟ್ರನು ಕೈಮುಗಿದು ನಿಂತು, 'ತ್ವಮೇವ ಪುಂಡರೀಕಾಕ್ಷ

ಸರ್ವಸ್ಯ ಜಗತೋ ಹಿತಃ । ತಸ್ಮಾತ್ತ್ವಂ ಯಾದವಶ್ರೇಷ್ಠ ಪ್ರಸಾದಂ ಕರ್ತುಮರ್ಹಸಿ ॥ ಎಂದು ಪ್ರಾರ್ಥಿಸಿ, ಹಿಂದೆ ಇದ್ದ ಕುರುಡುತನವನ್ನೇ ಕರುಣಿಸುವಂತೆ ಬೇಡುತ್ತಾನೆ. ಒಟ್ಟಿನಲ್ಲಿ ಉದ್ಯೋಗಪರ್ವದ ಎರಡನೆಯ ಭಾಗವಾದ ಹನ್ನೊಂದನೆಯ ಸಂಪುಟದಲ್ಲಿ ಎದ್ದುಕಾಣುವ ಪಾಠವಿದು. ಸಂಧಿಯಾಗುವುದು ಅಪೂರ್ವ ; ಅದರಲ್ಲಿ ನ್ಯಾಯದೊರಕುವುದೂ ಅಪೂರ್ವ ; ಗೆದ್ದವನಿಗೆ ಅಥವಾ ಬಲಿಷ್ಠನಿಗೆ ನ್ಯಾಯವಿರಬಹುದು. ಅದನ್ನು ಅವನು ನ್ಯಾಯ ಎನ್ನಬಹುದು. ಅಂತಹ ಸಂಧಿಯಲ್ಲಿ ಯುದ್ಧಬೀಜವಿದ್ದೇ ಇರುವುದು. ಯುದ್ಧವಾದರೆ ಸರ್ವನಾಶ. ಗೆದ್ದವನೂ ಸೋತಂತೆಯೇ. ಯುದ್ಧದ ಪರಿಣಾಮದಿಂದ ಚೇತರಿಸಿ ಕೊಳ್ಳಬೇಕಾದರೆ – ಗೆದ್ದವನೂ ಸೋತವನಷ್ಟೇ ಕಷ್ಟಪಡಬೇಕಾಗುವುದು.

ಹೀಗೆ ಮಹಾಭಾರತದ ಹನ್ನೊಂದನೆಯ ಸಂಪುಟಕ್ಕೆ ಉದ್ಯೋಗಪರ್ವದ ಕಥಾವಸ್ತುವನ್ನು ಬಹು ಚೆನ್ನಾಗಿ ಎಲ್ಲರಿಗೂ ಸುಲಭವಾಗಿ ತಿಳಿಯುವಂತೆ, ತಿಳಿಗನ್ನಡದಲ್ಲಿ ಪ್ರಕಟಿಸಿ, ಭಾರತದರ್ಶನ ಪ್ರಕಾಶನ ಸಂಸ್ಥೆಯು ಜನಸಾಮಾನ್ಯರ ಕೃತಜ್ಞತೆಗೆ ಪಾತ್ರವಾಗಿದೆ. ಹಿಮಾಲಯದಂತೆ ಅಗಮ್ಯವಾಗಿ ದುರ್ಗಮವಾಗಿರುವ ಸಂಸ್ಕೃತ ಮಹಾಭಾರತವನ್ನು ಸುಲಭಸಾಧ್ಯವಾಗಿ ಸಮಸ್ತರಿಗೂ ದೊರೆಯುವಂತೆ ಮಾಡಿರುವುದು ಅತ್ಯಂತ ಪ್ರಶಂಸನೀಯವಾಗಿದೆ. ಇಂತಹ ಮಹತ್ಸಾಧನೆಯಿಂದ ಜನೋಪಕಾರ ವಾಗುವುದಲ್ಲದೇ-ಸತ್ಕಥಾಕಾಲಕ್ಷೇಪವೂ ವೃದ್ಧಿಯಾಗುವುದು. ಇದನ್ನು ಓದಿ, ಓದಿಸಿ ಕೇಳುವವರು ಸಂಸ್ಕೃತಿಸಂಪನ್ನರಾಗುವರು.

ಭಾರತದರ್ಶನ ಪ್ರಕಾಶನಸಮಿತಿಯ ಈ ಮಹಾಕಾರ್ಯ ಯಶಸ್ವಿಯಾಗಿ, ಮಹಾಭಾರತಮಹಾಗ್ರಂಥದ ಎಲ್ಲ ಸಂಪುಟಗಳೂ ಪ್ರಕಟವಾಗುವಂತೆ ವಿದ್ಯಾಭಿಮಾನಿದೇವರಾದ ಶ್ರೀಲಕ್ಷ್ಮೀಹಯಗ್ರೀವ ಸ್ವಾಮಿಯು ಕರುಣಿಸಲೆಂದು ಹಾರ್ದಿಕವಾಗಿ ನಾವು ಹಾರೈಸುತ್ತೇವೆ.

ಸರ್ವೇ ಜನಾಃ ಸುಖಿನೋ ಭವನ್ತು ।
ಸಮಸ್ತಸನ್ಮಂಗಳಾನಿ ಭವನ್ತು ॥

# ದ್ವಿತೀಯ ಮುದ್ರಣದ ಪ್ರಸ್ತಾವನೆ

ಪರಮಾತ್ಮನ ದಯೆಯಿಂದ ಹನ್ನೊಂದನೆಯ ಸಂಪುಟದ ಎರಡನೆಯ ಮುದ್ರಣವನ್ನು ಮುಗಿಸುತ್ತಿದ್ದೇವೆ. ಪುನರ್ಮುದ್ರಣವಾಗಬೇಕಾಗಿರುವ ಸಂಪುಟಗಳ ಸಂಖ್ಯೆಯು ಬೆಳೆಯುತ್ತಲೇ ಇದೆ. ಈ ಸಂಪುಟವು ಹೊರಬೀಳುವ ವೇಳೆಗೆ ೪-೫-೬-೭-೧೪-೧೫-೧೬- ಈ ಏಳು ಸಂಪುಟಗಳು ಸಂಪೂರ್ಣವಾಗಿ ಮುಗಿದಿವೆ. ಒಂದು ತಿಂಗಳ ಅವಧಿಯಲ್ಲಿ ೧೭-೧೮-೧೯-೨೦ - ಈ ನಾಲ್ಕು ಸಂಪುಟಗಳೂ ಮುಗಿಯಲಿವೆ. ಛಾಯಾಚಿತ್ರದ ಮೂಲಕವಾಗಿ ಪುನರ್ಮುದ್ರಣ ಮಾಡಿಸುವುದನ್ನು ನಿಲ್ಲಿಸಲಾಗಿದೆ. ಏಕೆಂದರೆ ಹಿಂದೆ ಒಪ್ಪಂದವಾಗಿದ್ದ ಮೊತ್ತಕ್ಕೆ ಅವರು ಈಗ ಪುನರ್ಮುದ್ರಣಮಾಡಿಕೊಡಲು ಸಿದ್ಧರಿಲ್ಲ. ಆದುದರಿಂದ ನಮ್ಮ ಮುದ್ರಣಾಲಯದಲ್ಲಿಯೇ ಹೊಸ ಮುದ್ರಣ ಮತ್ತು ಹಳೇ ಮುದ್ರಣಗಳನ್ನೂ ಮಾಡಬೇಕಾದುದು ಅನಿವಾರ್ಯವಾಗಿದೆ. ಗಾಯದ ಮೇಲೆ ಬರೆಬಿದ್ದಂತೆ ಈ ಸಂಪುಟಕ್ಕೆ ನಮಗೆ ರಿಯಾಯ್ತಿದರದಲ್ಲಿ ಕಾಗದವು ಸಿಕ್ಕಲಿಲ್ಲ. ಮುಂದೆಯೂ ಸಿಕ್ಕುವ ಭರವಸೆಯಿಲ್ಲ. ಈ ಸಂಪುಟಕ್ಕೆ ಕಾಗದವನ್ನು ಬಹಿರಂಗ ಮಾರುಕಟ್ಟೆಯಲ್ಲಿ ಶೇ. ೪೫ರಷ್ಟು ಹೆಚ್ಚು ಕೊಟ್ಟು ಕೊಳ್ಳಬೇಕಾಯಿತು. ಒಂದು ಸಂಪುಟಕ್ಕೆ ಸುಮಾರು ೨/- ರೂ.ಗಳಷ್ಟು ಕೇವಲ ಕಾಗದದ ಬೆಲೆಯೇ ಅಧಿಕವಾಗಿದೆ. ಬೈಂಡಿಂಗ್ ಸಾಮಗ್ರಿಗಳು, ಅಂಚೆ, ಸಂಬಳ - ಸಾರಿಗೆ, ಶಾಯಿ, ಪ್ಯಾಕಿಂಗ್ ವಸ್ತುಗಳು, ಎಲ್ಲದರ ವೆಚ್ಚವೂ ದಿನ-ದಿನಕ್ಕೂ ಅಧಿಕಗೊಳ್ಳುತ್ತಲೇ ಇದೆ. ಆದುದರಿಂದ ಸಂಪುಟದ ಬೆಲೆಯನ್ನು ಸ್ವಲ್ಪ ಹೆಚ್ಚಿಸುವುದು ಅನಿವಾರ್ಯವಾಯಿತು. ವಾಚಕರು ದಯಮಾಡಿ ಸಹಕರಿಸಬೇಕಾಗಿ ಪ್ರಾರ್ಥಿಸುತ್ತೇವೆ. ಮನಸ್ಸಿಲ್ಲದಿದ್ದರೂ ಬೆಲೆಯನ್ನು ಹೆಚ್ಚುಮಾಡಬೇಕಾದ ಸಂದರ್ಭವು ಬಂದುದಕ್ಕಾಗಿ ನಾವು ವಿಷಾದಿಸುತ್ತೇವೆ.

ನಮ್ಮ ಸಂಪಾದಕಮಂಡಲಿಯ ವಿದ್ವಾಂಸರು ಶ್ರಮವಹಿಸಿ ಈ ಸಂಪುಟದ ತಪ್ಪು-ಒಪ್ಪುಗಳನ್ನು ಸರಿಪಡಿಸಿಕೊಟ್ಟಿರುತ್ತಾರೆ. ಇವರಿಗೆ ನಮ್ಮ ಹೃತ್ಪೂರ್ವಕ ವಂದನೆಗಳು. ೨೬ನೆಯ ಸಂಪುಟದ ಮುದ್ರಣವು ಪ್ರಾರಂಭವಾಗಿದೆ. ೧೯೮೩ರ ಫೆಬ್ರುವರಿಯಲ್ಲಿ ಹೊರಬರುವ ನಿರೀಕ್ಷೆಯಿದೆ.

ಮಹಾಭಾರತದ ಓದುಗರೆಲ್ಲರಿಗೂ ಒಳಿತಾಗಲಿ ; ದಯಾಮಯನಾದ ಪರಮಾತ್ಮನು ಸಕಲಸೌಭಾಗ್ಯಗಳನ್ನು ದಯಪಾಲಿಸಲಿ. –ಪ್ರಕಾಶಕರು.

# ತೃತೀಯ ಮುದ್ರಣದ ಪ್ರಸ್ತಾವನೆ

ದಯಾಮಯನಾದ ಪರಮಾತ್ಮನ ದಯೆಯಿಂದ ಮಹಾಭಾರತದ ಹನ್ನೊಂದನೆಯ ಸಂಪುಟದ ಮೂರನೆಯ ಮುದ್ರಣವನ್ನು ಮುಗಿಸುತ್ತಿದ್ದೇವೆ. ಹನ್ನೆರಡನೆಯ ಸಂಪುಟದ ಪುನರ್ಮುದ್ರಣವನ್ನು ಪ್ರಾರಂಭಿಸಲಾಗಿದೆ. ಹನ್ನೊಂದನೆಯ ಸಂಪುಟದ ಪುನರ್ಮುದ್ರಣವಾದನಂತರವೂ ಮಹಾಭಾರತದ ೩೨ ಸಂಪುಟಗಳಲ್ಲಿ ೧೪ ಸಂಪುಟಗಳು ಮಾತ್ರವೇ ಸಿಕ್ಕುತ್ತವೆ. ಹನ್ನೊಂದನೆಯ ಸಂಪುಟವು ಹೊರಬೀಳುವ ವೇಳೆಗೆ ಸರಿಯಾಗಿ ೩ನೆಯ ಸಂಪುಟವು ಮುಗಿದಿರುತ್ತದೆ. ಈಗ ಮಹಾಭಾರತದ ಮೊದಲ ಮೂರು ಸಂಪುಟಗಳಿಲ್ಲ. ಇದು ಹೊಸ ಗ್ರಾಹಕರಿಗೆ ನಿರುತ್ಸಾಹವನ್ನುಂಟುಮಾಡುವುದು ಸಹಜ. ೧೧-೧೨-೧೩-೧೪-೨೫-೨೬- ಇವಿಷ್ಟು ಸಂಪುಟಗಳ ಪುನರ್ಮುದ್ರಣವು ಮುಗಿದರೆ ೩ ವರ್ಷಗಳಿಂದ ಕಾಯುತ್ತಿರುವ ಸುಮಾರು ಒಂದುಸಾವಿರ ಗ್ರಾಹಕರಿಗೆ ಮಹಾಭಾರತದ ೩೨ ಸಂಪುಟಗಳೂ ಲಭಿಸಿದಂತಾಗುತ್ತದೆ. ಆದುದರಿಂದ ಈ ೬ ಸಂಪುಟಗಳನ್ನು ಈ ವರ್ಷ ಪುನರ್ಮುದ್ರಣಮಾಡುವ ಕಾರ್ಯಕ್ರಮವನ್ನು ಇಟ್ಟುಕೊಂಡಿರುತ್ತೇವೆ. ಮುಂದಿನ ವರ್ಷದ ಆದಿಯಲ್ಲಿ ಮಹಾಭಾರತದ ಮೊದಲ ಮೂರು ಸಂಪುಟಗಳನ್ನು ಪುನರ್ಮುದ್ರಣಮಾಡಲಾಗುವುದು. ಗ್ರಾಹಕರು ದಯಮಾಡಿ ಸಹಕರಿಸಬೇಕಾಗಿ ಪ್ರಾರ್ಥಿಸುತ್ತೇವೆ.

ರಾಮಾಯಣ ವಿಭಾಗದಲ್ಲಿ ಪ್ರಸಕ್ತ ಇದುವರೆಗೆ ಪ್ರಕಟವಾಗಿರುವ ೭ ಸಂಪುಟಗಳೂ ಸಿಕ್ಕುತ್ತವೆ. ಮಹಾಭಾರತದ ಗ್ರಾಹಕರೆಲ್ಲರೂ ರಾಮಾಯಣಕ್ಕೂ ಗ್ರಾಹಕರಾಗಿ ಪ್ರೋತ್ಸಾಹಿಸಬೇಕಾಗಿ ಕಳಕಳಿಯಿಂದ ಪ್ರಾರ್ಥಿಸುತ್ತೇವೆ. ಮಹಾಭಾರತ-ರಾಮಾಯಣಗಳೆಂಬ ಎರಡು ದಿವ್ಯಜ್ಯೋತಿಗಳು ತಮ್ಮ ಮನೆಯನ್ನು ಸದಾ ಬೆಳಗುತ್ತಿರಲಿ.

ಈ ಸಂಪುಟದ ತಪ್ಪು-ಒಪ್ಪುಗಳನ್ನು ನೋಡಿಕೊಟ್ಟು ಸಹಕರಿಸಿದ ನಮ್ಮ ಸಂಪಾದಕಮಂಡಲಿಯ ವಿದ್ವಾಂಸರಿಗೆ ಹೃತ್ಪೂರ್ವಕವಾದ ವಂದನೆಗಳು.

ಓದುಗರಿಗೂ, ಹಿತಚಿಂತಕರಿಗೂ ದಯಾಮಯನಾದ ಭಗವಂತನು ಸಮಸ್ತವಾದ ಕಲ್ಯಾಣಗಳನ್ನೂ ಅನುಗ್ರಹಿಸಲಿ. —ಪ್ರಕಾಶಕರು

# ಮಹಾಭಾರತ-ಉದ್ಯೋಗಪರ್ವ-ಹನ್ನೊಂದನೆಯ ಸಂಪುಟದ ವಿಷಯಾನುಕ್ರಮಣಿಕೆ

| ಅಧ್ಯಾಯ | ವಿಷಯಗಳು | | ಪುಟಸಂಖ್ಯೆ |
|---|---|---|---|
| | ಪ್ರತ್ಯೇಕವಾಗಿ ದಳಪತಿಗಳನ್ನು ನಿಯಮಿಸಿ ಅವರಿಗೆ ಪಟ್ಟಾಭಿಷೇಕಮಾಡಿದುದು : ಬಲರಾಮನ ಆಗಮನ : ಬಲರಾಮನು ಪಾಂಡವರನ್ನು ಹರಸಿ ತೀರ್ಥಯಾತ್ರೆಗೆ ಪ್ರಯಾಣಮಾಡಿದುದು | .... | 5966 |
| ೧೫೮ | ರುಕ್ಮಿಯು ಪಾಂಡವರಿಗೆ ಸಹಾಯಮಾಡುವ ಆಶಯದಿಂದ ಸೈನ್ಯಸಮೇತನಾಗಿ ಬಂದುದು : ಪಾಂಡವ-ಕೌರವರಿಬ್ಬರಿಂದಲೂ ಪುರಸ್ಕಾರವು ಸಿಕ್ಕದೇ ಹಿಂದಿರುಗಿದುದು | .... | 5972 |
| ೧೫೯ | ಧೃತರಾಷ್ಟ್ರ-ಸಂಜಯರ ಸಂವಾದ | .... | 5979 |
| **ಉಲೂಕದೂತಾಗಮನಪರ್ವ** | | | |
| ೧೬೦ | ದುರ್ಯೋಧನನು ಉಲೂಕನನ್ನು ಪಾಂಡವರಲ್ಲಿಗೆ ದೂತನನ್ನಾಗಿ ಕಳುಹಿಸಿದುದು | .... | 5983 |
| ೧೬೧ | ಉಲೂಕನು ಪಾಂಡವರ ಶಿಬಿರಕ್ಕೆ ಹೋಗಿ ದುರ್ಯೋಧನನ ಸಂದೇಶವನ್ನು ತಿಳಿಯಪಡಿಸಿ ದುದು | .... | 6007 |
| ೧೬೨ | ಪಾಂಡವರು ದುರ್ಯೋಧನನ ಸಂದೇಶಕ್ಕೆ ಉತ್ತರ ವನ್ನು ಉಲೂಕನ ಮೂಲಕ ಹೇಳಿಕಳುಹಿಸಿದುದು | .... | 6016 |
| ೧೬೩ | ಪಂಚಪಾಂಡವರು, ವಿರಾಟ, ದ್ರುಪದ, ಶಿಖಂಡೀ ಮತ್ತು ಧೃಷ್ಟದ್ಯುಮ್ನ-ಇವರೆಲ್ಲರ ಸಂದೇಶಗಳನ್ನೂ ಹೊತ್ತು ಉಲೂಕನು ಹಿಂದಿರುಗಿದುದು: ದುರ್ಯೋಧನನು ಯುದ್ಧಕ್ಕೆ ಸಿದ್ಧರಾಗುವಂತೆ ಸೈನಿಕರಿಗೆ ಆಜ್ಞೆಯಿತ್ತುದು | .... | 6026 |
| ೧೬೪ | ಪಾಂಡವರ ಸೈನ್ಯವು ಯುದ್ಧಭೂಮಿಗೆ ಆಗಮಿಸಿ ದುದು : ತಮ-ತಮಗೆ ಯೋಗ್ಯರಾದ ಪ್ರತಿಕಕ್ಷಿಗಳ ನ್ನಾರಿಸಿಕೊಳ್ಳುವಂತೆ ಧೃಷ್ಟದ್ಯುಮ್ನನು ತನ್ನ ಕಡೆಯವರಿಗೆ ನಿರ್ದೇಶಿಸಿದುದು | .... | 6036 |
| **ರಥಾತಿರಥಸಂಖ್ಯಾನಪರ್ವ** | | | |
| ೧೬೫ | ಭೀಷ್ಮನು ದುರ್ಯೋಧನನ ಅಪೇಕ್ಷೆಯಂತೆ ಕೌರವಪಕ್ಷದಲ್ಲಿದ್ದ ರಥರ ಮತ್ತು ಅತಿರಥರ ಪರಿಚಯವನ್ನು ಮಾಡಿಕೊಟ್ಟುದು | .... | 6037 |

ಶ್ರೀಮಹಾಗಣಪತಯೇ ನಮಃ ಶ್ರೀಸರಸ್ವತ್ಯೈ ನಮಃ ಶ್ರೀಸದ್ಗುರವೇ ನಮಃ

ॐ

**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।**
**ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥**

# ಶ್ರೀಮನ್ಮಹಾಭಾರತ-ಉದ್ಯೋಗಪರ್ವ
# ಹನ್ನೊಂದನೆಯ ಸಂಪುಟ

೧೧೩ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ)

## ಗಾಲವ-ಗರುಡರು ಋಷಭಪರ್ವತಕ್ಕೆ ಹೋದುದು: ಅಲ್ಲಿ ತಪಸ್ವಿನಿಯಾದ ಶಾಂಡಿಲಿಯ ಸಂದರ್ಶನ: ಗಾಲವನು ಕೊಡಬೇಕಾಗಿದ್ದ ಗುರುದಕ್ಷಿಣೆಯ ವಿಷಯವಾಗಿ ಪರಸ್ಪರ ಸಂಭಾಷಣೆ

ನಾರದರು ಹೇಳುತ್ತಾರೆ :

**ಋಷಭಸ್ಯ ತತಃ ಶೃಙ್ಗಂ ನಿಪತ್ಯ ದ್ವಿಜಪಕ್ಷಿಣೌ ।**
**ಶಾಣ್ಡಿಲೀಂ ಬ್ರಾಹ್ಮಣೀಂ ತತ್ರ ದದೃಶಾತೇ ತಪೋಽನ್ವಿತಾಮ್ ॥೧॥**

“ದುರ್ಯೋಧನ! ಅನಂತರದಲ್ಲಿ ದ್ವಿಜದ್ವಯರೂ ಋಷಭಪರ್ವತ ಶಿಖರದಲ್ಲಿಳಿದು ಅಲ್ಲಿ ತಪಸ್ವಿನಿಯಾದ ‘ಶಾಂಡಿಲೀ’ ಎಂಬ ಬ್ರಾಹ್ಮಣಿಯನ್ನು ಸಂದರ್ಶಿಸಿದರು. ಸುಪರ್ಣನು ಅವಳಿಗೆ ಅಭಿವಾದನಪೂರ್ವಕವಾಗಿ ನಮಸ್ಕರಿಸಿದನು. ಗಾಲವನು ಶಾಂಡಿಲಿಯನ್ನು ಆದರಪೂರ್ವಕವಾಗಿ ಸಮ್ಮಾನಿಸಿದನು. ಶಾಂಡಿಲಿಯು ದ್ವಿಜದ್ವಯರಿಗೂ ಸ್ವಾಗತವನ್ನಿತ್ತು ಹತ್ತಿರದಲ್ಲಿಯೇ ಇದ್ದ ಆಸನಗಳಲ್ಲಿ ಕುಳಿತುಕೊಳ್ಳುವಂತೆ ಹೇಳಿದಳು. ಗರುಡ-ಗಾಲವರು ತಪಸ್ವಿನಿಯ ಅನುಜ್ಞೆಯನ್ನು ಪಡೆದು ಆಸನಗಳಲ್ಲಿ ಕುಳಿತುಕೊಂಡರು. ಶಾಂಡಿಲಿಯು ಬಲಿಹರಣ-ವೈಶ್ವದೇವಾದಿಗಳಿಂದ ಸಂಸ್ಕೃತವಾಗಿ ಸಿದ್ಧವಾಗಿದ್ದ ಅನ್ನವನ್ನು ಗರುಡ-ಗಾಲವರಿಗೆ ಬಡಿಸಿದಳು. ಅದನ್ನು ಊಟಮಾಡಿದ

ಇಬ್ಬರೂ ತೃಪ್ತಿಹೊಂದಿದವರಾಗಿ ಪ್ರಯಾಣದ ಆಯಾಸದಿಂದ ಹಾಗೆಯೇ ಭೂಮಿಯ ಮೇಲೆ ಮಲಗಿದರು. ಸ್ವಲ್ಪಹೊತ್ತಿನಲ್ಲಿಯೇ ಗರುಡ-ಗಾಲವರು ನಿದ್ರಾಪರವಶರಾದರು. ಮುಹೂರ್ತಕಾಲಾನಂತರದಲ್ಲಿ ಮಲಗಿದ್ದ ಗರುಡನು ಮುಂದೆ ಪ್ರಯಾಣಮಾಡುವ ಇಚ್ಛೆಯಿಂದ ಎಚ್ಚರಗೊಂಡನು. ಮರುಕ್ಷಣದಲ್ಲಿಯೇ ತನ್ನ ರೆಕ್ಕೆಗಳು ಶರೀರದಿಂದ ಕಳಚಿ ಕೆಳಕ್ಕೆ ಬಿದ್ದಿರುವುದನ್ನು ಸುಪರ್ಣನು ನೋಡಿದನು. ರೆಕ್ಕೆಗಳಿಂದ ವಿಹೀನನಾಗಿದ್ದ ಕೇವಲ ಮುಖ ಮತ್ತು ಪಾದಗಳಿಂದ ಕೂಡಿದ್ದ ಗರುಡನು ಆ ಸಮಯದಲ್ಲಿ ಮಾಂಸದ ಮುದ್ದೆಯಂತೆಯೇ ಕಾಣುತ್ತಿದ್ದನು. ಆ ಸಮಯಕ್ಕೆ ಸರಿಯಾಗಿ ಗಾಲವನೂ ಎಚ್ಚರಗೊಂಡು ಗರುಡನಿಗಾದ ದುಃಸ್ಥಿತಿಯನ್ನು ಕಂಡನು. ಆತನು ಖಿನ್ನಮನಸ್ಕನಾಗಿ ಗರುಡನನ್ನು ಪ್ರಶ್ನಿಸಿದನು :

**ಕಿಮಿದಂ ಭವತಾ ಪ್ರಾಪ್ತಮಿಹಾಗಮನಜಂ ಫಲಮ್ ।**
**ವಾಸೋಽಯಮಿಹ ಕಾಲಂ ತು ಕಿಯನ್ತಂ ನೌ ಭವಿಷ್ಯತಿ ॥೬॥**

"ಗರುಡ! ಇದೇನಿದು? ನೀನು ಇಲ್ಲಿಗೆ ಬಂದುದಕ್ಕೆ ಪಡೆದುಕೊಂಡುದು ಈ ಫಲವೇ? ಇದರ ಪರಿಣಾಮವಾದರೂ ಏನು? ನಾವು ಮುಂದೆ ಪ್ರಯಾಣ ಮಾಡಲು ಹೇಗೆ ತಾನೇ ಸಾಧ್ಯವಾಗುವುದು? ನಿನ್ನ ಈ ದುರವಸ್ಥೆಯಿಂದಾಗಿ ನಾವಿಲ್ಲಿ ಎಷ್ಟು ಕಾಲ ಇರಬೇಕಾಗಬಹುದು? ಆದರೆ ನಿನಗೀ ದುರವಸ್ಥೆಯು ಪ್ರಾಪ್ತವಾದುದಕ್ಕೆ ಕಾರಣವಂತೂ ಅಲ್ಪವಾಗಿರಲಾರದು. ಧರ್ಮಕ್ಕೆ ವಿರುದ್ಧವಾದ ಯಾವುದೋ ಒಂದು ಪಾಪಕಾರ್ಯವನ್ನು ನೀನು ಮನಸ್ಸಿನಲ್ಲಿ ಯೋಚಿಸಿರಬೇಕು. ಕುತ್ಸಿತವಾದ ಯಾವುದಾದರೂ ಕಾರ್ಯವನ್ನು ಮಾಡಲು ಮನಸ್ಸಿನಲ್ಲೇನಾದರೂ ಚಿಂತಿಸಿದೆಯಾ? ಗರುಡ!

**ನ ಹ್ಯಯಂ ಭವತಃ ಸ್ವಲ್ಪೋ ವ್ಯಭಿಚಾರೋ ಭವಿಷ್ಯತಿ ॥೭॥**

ನೀನು ಸಾಮಾನ್ಯವಾದ ಧರ್ಮವ್ಯಭಿಚಾರವನ್ನು ಮಾಡಿರುವಂತೆ ನನಗೆ ಭಾಸವಾಗುತ್ತಿಲ್ಲ. ನಿನಗಿಂತಹ ಶಿಕ್ಷೆಯಾಗಬೇಕಾಗಿದ್ದರೆ ನೀನು ಮನಸ್ಸಿನಲ್ಲಿ ಅತ್ಯಗಾಧವಾದ ಧರ್ಮವ್ಯಭಿಚಾರದ, ಧರ್ಮಭ್ರಷ್ಟತೆಯ ಯೋಚನೆಯನ್ನೇ ಮಾಡಿರಬೇಕು."

"ನಿಜ, ವಿಪ್ರ! ನಾನು ಈ ತಪಸ್ವಿನಿಯ ವಿಷಯವಾಗಿ ಯೋಚಿಸಿ

ದುದು ನಿಜ"–ಎಂಬುದಾಗಿ ಸುಪರ್ಣನು ಹೇಳಿ, ತಾನೇನು ಯೋಚಿಸಿದ ನೆಂಬ ವಿಷಯವನ್ನೂ ಗಾಲವನೊಡನೆ ಮರೆಮಾಚದೇ ಹೇಳಿದನು :

**ಇಮಾಂ ಸಿದ್ಧಾಮಿತೋ ನೇತುಂ ತತ್ರ ಯತ್ರ ಪ್ರಜಾಪತಿಃ ।**
**ಯತ್ರ ದೇವೋ ಮಹಾದೇವೋ ಯತ್ರ ವಿಷ್ಣುಃ ಸನಾತನಃ ।**
**ಯತ್ರ ಧರ್ಮಶ್ಚ ಯಜ್ಞಶ್ಚ ತತ್ರೇಯಂ ನಿವಸೇದಿತಿ ॥೯॥**

"ಎಲ್ಲಿ ಪ್ರಜಾಪತಿಬ್ರಹ್ಮನಿರುವನೋ, ಎಲ್ಲಿ ದೇವದೇವನಾದ ಮಹೇಶ್ವರನಿರುವನೋ, ಎಲ್ಲಿ ಸನಾತನನಾದ ವಿಷ್ಣುವಿರುವನೋ, ಎಲ್ಲಿ ಧರ್ಮ ಮತ್ತು ಯಜ್ಞಗಳು ನಡೆಯುತ್ತವೆಯೋ – ಅಲ್ಲಿಗೆ ಈ ತಪಸ್ವಿನಿಯನ್ನು ಕರೆದೊಯ್ಯಬೇಕೆಂದು ನಾನು ಚಿಂತಿಸಿದ್ದು ನಿಜ. ಇವಳ ನಿವಾಸವು ಅಂತಹ ಉತ್ತಮಸ್ಥಳದಲ್ಲಿರಬೇಕೆಂಬುದೇ ನನ್ನ ಯೋಚನೆಗೆ ಕಾರಣವಾಗಿದ್ದಿತು. (ಮತ್ತಾವ ಕೆಟ್ಟ ಅಭಿಪ್ರಾಯವನ್ನೂ ನಾನು ಇವಳ ವಿಷಯದಲ್ಲಿ ಇಟ್ಟುಕೊಂಡಿರಲಿಲ್ಲ.)

ಗಾಲವ! ನಾನೀಗ ಭಗವತಿಯಾದ ಶಾಂಡಿಲಿಯ ಪಾದಾರವಿಂದ ಗಳಲ್ಲಿ ಬಿದ್ದು ಅವಳನ್ನೇ ಯಾಚಿಸುತ್ತೇನೆ. ಇದ್ದ ವಿಷಯವನ್ನು ಹೇಳಿಬಿಡುತ್ತೇನೆ." ಹೀಗೆಂಬುದಾಗಿ ಗರುಡನು ಗಾಲವನೊಡನೆ ಹೇಳಿ ತಪಸ್ವಿನಿಯಾದ ಶಾಂಡಿಲಿಯನ್ನು ಕುರಿತು ಹೇಳಿದನು :

**ಮಯೈತನ್ನಾಮ ಪ್ರಧ್ಯಾತಂ ಮನಸಾ ಶೋಚತಾ ಕಿಲ ।**
**ತದೇವಂ ಬಹುಮಾನಾತ್ತೇ ಮಯೇಹಾನೀಪ್ಸಿತಂ ಕೃತಮ್ ।**
**ಸುಕೃತಂ ದುಷ್ಕೃತಂ ವಾ ತ್ವಂ ಮಾಹಾತ್ಮ್ಯಾತ್ಕ್ಷನ್ತುಮರ್ಹಸಿ ॥**

"ದೇವಿ! ಅನೇಕವಿಷಯಗಳನ್ನು ಯೋಚಿಸುತ್ತಿದ್ದ, ನಿನ್ನ ವಿಷಯದಲ್ಲಿ ಮರುಕಗೊಂಡಿದ್ದ ನನ್ನ ಮನಸ್ಸಿನಲ್ಲಿ ನಿನಗೆ ಪ್ರಿಯವನ್ನುಂಟು ಮಾಡುವ ಸಲುವಾಗಿಯೇ ನಿನ್ನನ್ನಿಲ್ಲಿಂದ ಕರೆದೊಯ್ಯುವ ಇಚ್ಛೆಯೂ ಮೂಡಿಬಂದಿತು. ನಿನ್ನ ಮೇಲಿನ ವಿಶೇಷವಾದ ಗೌರವದಿಂದಲೇ ನಾನು ನಿನ್ನ ಇಚ್ಛೆಗೆ ವಿರುದ್ಧವಾಗಿರಬಹುದಾದ ಕಾರ್ಯವನ್ನು ಮನಸ್ಸಿನಲ್ಲಿ ಯೋಚಿಸಿದೆನು. ಮನಸ್ಸಿನಿಂದ ಯೋಚಿಸಿದ ಈ ಕಾರ್ಯವು ಸುಕೃತವಾದರೂ ಆಗಿರಬಹುದು ; ದುಷ್ಕೃತವಾದರೂ ಆಗಿರಬಹುದು. ನಿನ್ನ ಮಾಹಾತ್ಮ್ಯದಿಂದಾಗಿ ನನ್ನನ್ನು ಕ್ಷಮಿಸಿಬಿಡುವುದು ನಿನಗೆ ಉಚಿತವಾಗಿದೆ."

ಗರುಡನು ಹೇಳಿದ ಮಾತನ್ನು ಕೇಳಿ ತಪಸ್ವಿನಿಯಾದ ಶಾಂಡಿಲಿಯು ಬಹುಸಂತುಷ್ಟಳಾಗಿ ವಿಪ್ರಶ್ರೇಷ್ಠನಾದ ಗಾಲವನನ್ನೂ ಮತ್ತು ಸುಪರ್ಣನನ್ನೂ ಕುರಿತು ಹೇಳಿದಳು :

**ನ ಭೇತವ್ಯಂ ಸುಪರ್ಣೋಽಸಿ ಸುಪರ್ಣ ತ್ಯಜ ಸಮ್ಭ್ರಮಮ್ ॥1೨॥**

"ಭಯಪಡಬೇಡ, ಸುಪರ್ಣ! ನೀನು ಪುನಃ ಸುಂದರವಾದ ರೆಕ್ಕೆಗಳನ್ನು ಪಡೆಯುವೆ. ನಿನ್ನ ಭ್ರಾಂತಿಯನ್ನು ಪರಿತ್ಯಜಿಸು.

**ನಿನ್ದಿತಾಸ್ಮಿ ತ್ವಯಾ ವತ್ಸ ನ ಚ ನಿನ್ದಾಂ ಕ್ಷಮಾಮ್ಯಹಮ್ ।**
**ಲೋಕೇಭ್ಯಃ ಸಪದಿ ಭ್ರಶ್ಯೇದ್ಯೋ ಮಾಂ ನಿನ್ದೇತ ಪಾಪಕೃತ್ ॥೧೩॥**

ವತ್ಸ! ನಾನು ನಿನ್ನಿಂದ ನಿಂದಿಸಲ್ಪಟ್ಟಿದ್ದೇನೆ. (ನೀನು ನನ್ನನ್ನು ನಿಂದಿಸಿರುವೆ.) ನಾನು ಮಾತ್ರ ನಿಶ್ಚಯವಾಗಿಯೂ ನಿಂದೆಯನ್ನು ಕ್ಷಮಿಸತಕ್ಕವಳಲ್ಲ. ನನ್ನನ್ನು ನಿಂದಿಸಿದ ಪಾಪಿಷ್ಠನು ಪುಣ್ಯಲೋಕಗಳಿಂದಲೂ ಒಡನೆಯೇ ಭ್ರಷ್ಟನೂ ಆಗುತ್ತಾನೆ.

**ಹೀನಯಾಲಕ್ಷಣೈಃ ಸರ್ವೈಸ್ತಥಾನಿನ್ದಿತಯಾ ಮಯಾ ।**
**ಆಚಾರಂ ಪ್ರತಿಗೃಹ್ಣನ್ತ್ಯಾ ಸಿದ್ಧಿಃ ಪ್ರಾಪ್ತೇಯಮುತ್ತಮಾ ॥೧೪॥**

ಶುಭಲಕ್ಷಣಗಳಿಂದ ಹೀನಳಾಗಿದ್ದರೂ, ಅನಿಂದಿತಳಾಗಿರುವ ನಾನು ಸದಾಚಾರವನ್ನು ಪರಿಪಾಲಿಸುತ್ತಿರುವುದರಿಂದ ಈ ಉತ್ತಮೋತ್ತಮವಾದ ಸಿದ್ಧಿಯು ನನಗೆ ಲಭಿಸಿರುವುದು.

**ಆಚಾರಃ ಫಲತೇ ಧರ್ಮಮಾಚಾರಃ ಫಲತೇ ಧನಮ್ ।**
**ಆಚಾರಾಚ್ಛ್ರಿಯಮಾಪ್ನೋತಿ ಆಚಾರೋ ಹನ್ತ್ಯಲಕ್ಷಣಮ್ ॥೧೫॥**

ಸದಾಚಾರವು ಧರ್ಮವೆಂಬ ಫಲವನ್ನು ಕೊಡುತ್ತದೆ. ಅಂತೆಯೇ ಸದಾಚಾರವು ಐಶ್ವರ್ಯವೆಂಬ ಫಲವನ್ನೂ ಕೊಡುತ್ತದೆ. ಆಚಾರವಂತನು ಧರ್ಮಾರ್ಥಗಳೆರಡನ್ನೂ ಪಡೆದುಕೊಳ್ಳುತ್ತಾನೆ. ಆಚಾರದಿಂದ ಸಂಪತ್ತು ಪ್ರಾಪ್ತವಾಗುತ್ತದೆ. ಮನುಷ್ಯನಲ್ಲಿರಬಹುದಾದ ಅವಲಕ್ಷಣಗಳನ್ನೂ ಸದಾಚಾರವು ಅಳಿಸಿಹಾಕುತ್ತದೆ."

ಶಾಂಡಿಲಿಯು ಮುಂದುವರಿದು ಹೇಳುತ್ತಾಳೆ :

"ಆಯುಷ್ಮಂತನೇ! ಖಗಪತಿಯೇ! ನಿನ್ನ ಇಚ್ಛೆಯಿದ್ದೆಡೆಗೆ ನೀನಿಲ್ಲಿಂದ ಹೊರಟುಹೋಗಬಹುದು. ಆದರೆ :

**ನ ಚ ತೇ ಗರ್ಹಣೀಯಾಹಂ ಗರ್ಹಿತವ್ಯಾಃ ಸ್ತ್ರಿಯಃ ಕ್ವಚಿತ್ ॥**

ಇನ್ನು ಮುಂದೆ ನೀನು ನನ್ನನ್ನು ನಿಂದಿಸಬಾರದು ; ಮೇಲಾಗಿ ಸ್ತ್ರೀಯರು ಯಾವಾಗಲೂ ನಿಂದನೆಗೆ ಅರ್ಹರಲ್ಲ. ಇದನ್ನು ನೀನು ಸರ್ವದಾ ಮನಸ್ಸಿನಲ್ಲಿಟ್ಟುಕೊಳ್ಳಬೇಕು.

**ಭವಿತಾಸಿ ಯಥಾಪೂರ್ವಂ ಬಲವೀರ್ಯಸಮನ್ವಿತಃ ॥೧೭॥**

ನೀನು ಮೊದಲಿನಂತೆಯೇ ಬಲ-ವೀರ್ಯಸಮನ್ವಿತನಾಗುವೆ. ನಿನ್ನ ಬಲಕ್ಕಾಗಲೀ, ವೀರ್ಯಕ್ಕಾಗಲೀ–ಯಾವ ವಿಧವಾದ ನ್ಯೂನತೆಯೂ ಉಂಟಾಗುವುದಿಲ್ಲ."

ದುರ್ಯೋಧನ! ಭಗವತೀ ಶಾಂಡಿಲಿಯು ಹೀಗೆ ಹೇಳುತ್ತಲೇ ಗರುಡನ ರೆಕ್ಕೆಗಳು ಪುನಃ ಹುಟ್ಟಿಕೊಂಡುವು ಮತ್ತು ಮೊದಲಿಗಿಂತಲೂ ಹೆಚ್ಚು ಬಲಿಷ್ಠವೂ ಆದುವು.

ಅನಂತರದಲ್ಲಿ ಗರುಡ-ಗಾಲವರು ಶಾಂಡಿಲಿಯ ಅನುಜ್ಞೆಯನ್ನು ಪಡೆದುಕೊಂಡು ಬಂದ ಹಾದಿಯನ್ನು ಹಿಡಿದು ಹೊರಟುಹೋದರು. ಆದರೆ ವಿಶ್ವಾಮಿತ್ರನು ಅಪೇಕ್ಷಿಸಿದ್ದ ಲಕ್ಷಣಗಳುಳ್ಳ ಕುದುರೆಗಳನ್ನು ಸಂಪಾದಿಸಲು ಗಾಲವನಿಗೆ ಸಾಧ್ಯವಾಗಲಿಲ್ಲ.

(ಈ ಪ್ರಕರಣದಲ್ಲಿ ಪ್ರಸ್ತಾಪಿಸಬೇಕಾದ ಒಂದು ವಿಷಯವಿದೆ. ಗರುಡನು ಶಾಂಡಿಲಿಯನ್ನು ಪ್ರಜಾಪತಿಬ್ರಹ್ಮನಿರುವೆಡೆಗೆ, ಮಹಾದೇವನಿರುವೆಡೆಗೆ, ಸನಾತನನಾದ ಮಹಾವಿಷ್ಣುವಿರುವೆಡೆಗೆ ಕರೆದೊಯ್ಯಲು ಮನಸ್ಸು ಮಾಡಿದ್ದನು. ಅವಳಿಗೆ ಪ್ರಿಯವನ್ನುಂಟುಮಾಡಲೆಂದೇ ಅವನು ಹೀಗೆ ಯೋಚಿಸಿದನು. ಆದರೆ ಮರುಕ್ಷಣದಲ್ಲಿಯೇ ಅವನ ರೆಕ್ಕೆಗಳು ಶಾಂಡಿಲಿಯ ಮಾಹಾತ್ಮ್ಯದಿಂದ ಕೆಳಕ್ಕೆ ಬಿದ್ದುವು.

ಶಾಂಡಿಲಿಯನ್ನು ಗರುಡನು ಪ್ರಾರ್ಥಿಸಿದಾಗ ಆಕೆಯು - 'ನಿನ್ದಿತಾಸ್ಮಿ ತ್ವಯಾ ವತ್ಸ' 'ವತ್ಸ! ನಾನು ನಿನ್ನಿಂದ ನಿಂದಿಸಲ್ಪಟ್ಟಿದ್ದೇನೆ'–ಎಂದು ಸ್ಪಷ್ಟ ವಾಗಿ ಹೇಳುತ್ತಾಳೆ. ಮುಂದೆ ಆಚಾರದ ವಿಷಯವಾಗಿಯೂ ಹೇಳುತ್ತಾಳೆ. ಇಲ್ಲಿ ಗರುಡನು ಶಾಂಡಿಲಿಯನ್ನು ನಿಂದಿಸಿದ ಪ್ರಕರಣವು ಯಾವುದು? ತಪಸ್ವಿನಿಯಾದ ಶಾಂಡಿಲಿಯನ್ನು ಉತ್ತಮೋತ್ತಮವಾದ ಸ್ಥಾನಗಳೆಂದು

ಪ್ರಸಿದ್ಧವಾಗಿರುವ ಸ್ಥಳಗಳಿಗೆ ಒಯ್ಯಬೇಕೆಂದು ಗರುಡನು ಮನಸ್ಸಿನಲ್ಲಿ ಯೋಚಿಸಿದುದು ಅಪರಾಧವೇ? ಹೀಗೆ ಗರುಡನು ಯೋಚಿಸಿದ್ದರಿಂದ ಶಾಂಡಿಲಿಯನ್ನು ನಿಂದೆಮಾಡಿದಂತಾಯಿತೇ?

ಶಾಂಡಿಲಿಯು ಶಿಷ್ಟಾಚಾರಸಂಪನ್ನಳು. ಮೇಲಾಗಿ ಸಿದ್ಧಿಗಳನ್ನು ಪಡೆದುಕೊಂಡಿರುವ ತಪಸ್ವಿನೀ. ಶಿಷ್ಟಾಚಾರದ ಪ್ರಕಾರ ಯಾವ ಪುರುಷನೇ ಆಗಲೀ ಪರಸ್ತ್ರೀಯನ್ನು ಮುಟ್ಟಲೂ ಕೂಡದು. ಈ ಕಾರಣದಿಂದ ಗರುಡನು ಅವಳನ್ನು ಎತ್ತಿಕೊಂಡು ಹೋಗಬೇಕೆಂದು ಯೋಚಿಸಿದುದು ಒಂದು ಅಪರಾಧವೇ ಆಗುತ್ತದೆ. ಎರಡನೆಯದಾಗಿ : ಶಾಂಡಿಲಿಯು ಸ್ವತಃ ಸಿದ್ಧಸ್ತ್ರೀಯಾಗಿರುತ್ತಾಳೆ. ಕೇವಲ ಸಂಕಲ್ಪಮಾತ್ರದಿಂದಲೇ ಬ್ರಹ್ಮಾಂಡದ ಯಾವ ಭಾಗಕ್ಕಾದರೂ ಹೋಗಲು ಸಮರ್ಥಳಾದವಳು. ಅಂತಹವಳನ್ನು ಎತ್ತಿಕೊಂಡು ಹೋಗಬೇಕೆಂದು ಗರುಡನು ಯೋಚಿಸಿದುದು ಅವಳಲ್ಲಿದ್ದ ಸತ್ತ್ವವನ್ನೇ ಅಲಕ್ಷಿಸಿದಂತಾಯಿತು. ಇದರಿಂದವಳು ನಿಂದಿತಳಾದಳು. ನಿಂದಿತ ಳಾದೆನೆಂದು ಭಾವಿಸಿದಳು. ಆದುದರಿಂದ - 'ಮತ್ತೊಬ್ಬರನ್ನು ಉದ್ಧರಿಸು ತ್ತೇವೆ' – ಎಂಬ ಭಾವನೆಯಿಂದ ಪೂರ್ವಾಪರವಿವೇಚನೆಯಿಲ್ಲದೇ ಕಾರ್ಯ ಮಾಡುವುದು ಅನೇಕ ಸಮಯಗಳಲ್ಲಿ ದುಷ್ಫಲವನ್ನೇ ನೀಡುತ್ತದೆಂಬುದಕ್ಕೆ ಇದೊಂದು ಉತ್ತಮನಿದರ್ಶನವಾಗಿದೆ.)

ಇತ್ತಲಾಗಿ ಕುದುರೆಗಳನ್ನು ಹುಡುಕಿಕೊಂಡು ಗರುಡನ ಮೇಲೆ ಕುಳಿತು ಬರುತ್ತಿದ್ದ ಗಾಲವನನ್ನು ವಾಗ್ಮಿಗ್ರಳಲ್ಲಿ ಶ್ರೇಷ್ಠನಾದ ವಿಶ್ವಾಮಿತ್ರನು ಮಾರ್ಗಮಧ್ಯದಲ್ಲಿ ನೋಡಿ ಗರುಡನ ಸಮ್ಮುಖದಲ್ಲಿಯೇ ಅವನನ್ನು ಸಂಬೋಧಿಸಿ ಹೇಳಿದನು :

**ಯಸ್ತ್ವಯಾ ಸ್ವಯಮೇವಾರ್ಥಃ ಪ್ರತಿಜ್ಞಾತೋ ಮಮ ದ್ವಿಜ ।**
**ತಸ್ಯ ಕಾಲೋಽಪವರ್ಗಸ್ಯ ಯಥಾ ವಾ ಮನ್ಯತೇ ಭವಾನ್ ॥೨೦॥**

"ಬ್ರಾಹ್ಮಣ! ನೀನಾಗಿಯೇ ಗುರುದಕ್ಷಿಣೆಯನ್ನು ಕೊಡಲು ಪ್ರತಿಜ್ಞೆ ಮಾಡಿರುವೆ. ಅದನ್ನು ಕೊಡಬೇಕಾದ ಕಾಲವೀಗ ಸನ್ನಿಹಿತವಾಗಿದೆ. ಆದರೆ ನೀನು ಯಾವ ರೀತಿಯಲ್ಲಿ ಯೋಚಿಸುತ್ತಿರುವೆಯೆಂಬುದು ನನಗೆ ತಿಳಿಯದು. (ಇನ್ನೂ ಕಾಲವು ಮೀರಿಲ್ಲವೆಂದೇ ನೀನು ಭಾವಿಸಿರಬಹುದು.) ಆದರೆ ನೀನು

ಕೊಟ್ಟಾಗ ತೆಗೆದುಕೊಳ್ಳಲು ನಾನು ಸಿದ್ಧನಿಲ್ಲ. ನಾನು ಇನ್ನು ಸ್ವಲ್ಪ ಕಾಲದವರೆಗೆ ಮಾತ್ರವೇ ನಿನ್ನನ್ನು ಪ್ರತೀಕ್ಷೆಮಾಡುತ್ತಿರುತ್ತೇನೆ. ಅಷ್ಟರೊಳಗಾಗಿ ನೀನು ಗುರುದಕ್ಷಿಣೆಯನ್ನು ತಂದುಕೊಡಬೇಕು. ನಿನ್ನ ಕಾರ್ಯವು ಯಾವ ರೀತಿಯಲ್ಲಿ ಎಷ್ಟು ಶೀಘ್ರವಾಗಿ ಸಿದ್ಧಿಸುವುದೋ ಅದನ್ನೀಗಲೇ ವಿಚಾರಮಾಡು."

ವಿಶ್ವಾಮಿತ್ರನ ಆ ಮಾತುಗಳನ್ನು ಕೇಳುತ್ತಲೇ ಗಾಲವನು ಅಗಾಧವಾದ ದುಃಖಸಾಗರದಲ್ಲಿ ಮುಳುಗಿಹೋದನು. ದೀನನಾಗಿದ್ದ ಭೃಶದುಃಖಿತನಾಗಿದ್ದ ಗಾಲವನನ್ನು ಕಂಡು ಸುಪರ್ಣನು ಸಾಂತ್ವನದ ಈ ಮಾತುಗಳನ್ನು ಹೇಳಿದನು :

"ದ್ವಿಜಶ್ರೇಷ್ಠನೇ! ವಿಶ್ವಾಮಿತ್ರನು ನನ್ನ ಸಮಕ್ಷದಲ್ಲಿ ಯಾವ ಮಾತನ್ನು ಹೇಳಿದನೋ – ಅದರ ವಿಷಯವಾಗಿ ನಾವಿಬ್ಬರೂ ಕುಳಿತು ಸಮಾಲೋಚಿಸೋಣ. ನೀನು ಖಿನ್ನನಾಗಬೇಡ. ನನ್ನೊಡನೆ ಬಾ. ಇಬ್ಬರೂ ಸಮಾಲೋಚಿಸಿ ಒಂದು ನಿರ್ಧಾರಕ್ಕೆ ಬರೋಣ.

**ನಾದತ್ತ್ವಾ ಗುರವೇ ಶಕ್ಯಂ ಕೃತ್ಸ್ನಮರ್ಥಂ ತ್ವಯಾಸಿತುಮ್ ॥೨೨॥**

ನೀನು ನಿನ್ನ ಗುರುವಿಗೆ ಸಮಗ್ರವಾದ ಗುರುದಕ್ಷಿಣೆಯನ್ನು ಕೊಡದೇ ನಿಶ್ಚಿಂತೆಯಿಂದ ಕುಳಿತಿರಲು ನಿನ್ನಿಂದ ಖಂಡಿತವಾಗಿಯೂ ಸಾಧ್ಯವಾಗುವುದಿಲ್ಲ."

ಗಗ೩ನೆಯ ಅಧ್ಯಾಯವು ಮುಗಿಯಿತು.

೧೧೪ನೆಯಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ)

## ಗರುಡ-ಗಾಲವರು ಯಯಾತಿರಾಜನ ಬಳಿಗೆ ಹೋಗಿ ಕಪ್ಪುಕಿವಿಗಳುಳ್ಳ ಕುದುರೆಗಳನ್ನು ಯಾಚಿಸಿದುದು

ಪಕ್ಷಿಗಳಲ್ಲಿ ಶ್ರೇಷ್ಠನಾದ ಸುಪರ್ಣನು ಬಹುಖಿನ್ನನಾಗಿದ್ದ ಗಾಲವನೊಡನೆ ಹೇಳಿದನು :

**ನಿರ್ಮಿತಂ ವಹ್ನಿನಾ ಭೂಮೌ ವಾಯುನಾ ಶೋಧಿತಂ ತಥಾ ।**
**ಯಸ್ಮಾದ್ಧಿರಣ್ಮಯಂ ಸರ್ವಂ ಹಿರಣ್ಯಂ ತೇನ ಚೋಚ್ಯತೇ ॥೧॥**

“ಭೂಮಿಯ ತಳಭಾಗದಲ್ಲಿ ಅಗ್ನಿಯಿಂದ ನಿರ್ಮಿಸಲ್ಪಟ್ಟುದಾಗಿಯೂ ವಾಯುವಿನಿಂದ ಶೋಧಿಸಲ್ಪಟ್ಟುದಾಗಿಯೂ ಇರುವ ಒಂದು ಲೋಹವನ್ನು ‘ಹಿರಣ್ಯ’ ಎಂದು ಕರೆಯುತ್ತಾರೆ. ಈ ಸಂಪೂರ್ಣಜಗತ್ತೂ ಹಿರಣ್ಯಪ್ರಧಾನವಾಗಿರುವುದರಿಂದಲೂ, ಇದು ಭೂಮಿಯಲ್ಲಿ ಸಾರಭೂತವಾಗಿರುವುದರಿಂದಲೂ, ಶುದ್ಧವಾಗಿರುವುದರಿಂದಲೂ ಮತ್ತು ಜಗತ್ತಿಗಿದು ಮೋಹಕವಾಗಿರುವುದರಿಂದಲೂ ಇದನ್ನು ‘ಹಿರಣ್ಯ’ ಎಂದು ಕರೆಯುತ್ತಾರೆ. ಸರ್ವವೂ ಹಿರಣ್ಮಯವೇ ಆಗಿರುವುದರಿಂದ (ಅಗ್ನಿಯು ಹಿರಣ್ಯರೇತಸ್ಕನು ; ಭೂಮಿಯು ಹಿರಣ್ಯಗರ್ಭೆಯು) ಈ ಲೋಹವನ್ನೇ ಹಿರಣ್ಯವೆಂದೂ ಕರೆಯುತ್ತಾರೆ.

**ಧತ್ತೇ ಧಾರಯತೇ ಚೇದಮೇತಸ್ಮಾತ್ಕಾರಣಾದ್ಧನಮ್ ।**
**ತದೇತತ್ತ್ರಿಷು ಲೋಕೇಷು ಧನಂ ತಿಷ್ಠತಿ ಶಾಶ್ವತಮ್ ॥೨॥**

ಈ ಹಿರಣ್ಯಕ್ಕೆ ಎರಡು ವಿಧವಾದ ಶಕ್ತಿಗಳಿವೆ. ಇದು ಈ ಜಗತ್ತನ್ನೇ ಧಾರಣೆಮಾಡಿದೆ. ಇದರ ಅವಲಂಬನೆಯಿಂದಲೇ ಜಗತ್ತು ಇಂದು ಉಳಿದಿದೆ. ಜಗತ್ತನ್ನು ಇದೇ ಪೋಷಿಸುತ್ತಿದೆ. ಇಂತಹ ಸುವರ್ಣವನ್ನೇ ಆಭರಣಗಳ ರೂಪವಾಗಿ ಶ್ರೀಮಂತರು ಧಾರಣೆಮಾಡಿಕೊಳ್ಳುತ್ತಾರೆ. ಈ ಎರಡು ಗುಣಗಳೂ ಇದಕ್ಕೆ ಇರುವುದರಿಂದ ಇದನ್ನು ‘ಧನ’ ‘ಧನ’ ಎಂದು ಕರೆಯುತ್ತಾರೆ. ಈ ಧನವು ಮೂರು ಲೋಕಗಳಲ್ಲಿಯೂ ಸರ್ವಕಾಲಗಳಲ್ಲಿಯೂ ಇರುವ ವಸ್ತುವಾಗಿದೆ.

**ನಿತ್ಯಂ ಪ್ರೋಷ್ಠಪದಾಭ್ಯಾಂ ಚ ಶುಕ್ರೇ ಧನಪತೌ ತಥಾ ।**
**ಮನುಷ್ಯೇಭ್ಯಃ ಸಮಾದತ್ತೇ ಶುಕ್ರಶ್ಚಿತ್ತಾರ್ಜಿತಂ ಧನಮ್ ॥೩॥**

**ಅಜೈಕಪಾದಹಿರ್ಬುರ್ಧ್ನೈ ರಕ್ಷ್ಯತೇ ಧನದೇನ ಚ ।**
**ಏವಂ ನ ಶಕ್ಯತೇ ಲಬ್ಧುಮಲಬ್ಧವ್ಯಂ ದ್ವಿಜರ್ಷಭ ।**
**ಋತೇ ಚ ಧನಮಶ್ವಾನಾಂ ನಾವಾಪ್ತಿರ್ವಿದ್ಯತೇ ತವ ॥೪॥**

* ಪ್ರೋಷ್ಠಪದಾನಕ್ಷತ್ರಯುಕ್ತನಾದ ಶುಕ್ರನಲ್ಲಿಯೂ, ಕುಬೇರ

---

* ಶುಕ್ರಃ ಪ್ರೋಷ್ಠಪದೇ ಪೂರ್ವೇ ಸಮಾರುಹ್ಯ ವಿರೋಚತೇ ॥ (ಭೀಷ್ಮ ಪ.-೩-೧೩)

ನಲ್ಲಿಯೂ ಧನವು ಶಾಶ್ವತವಾಗಿರುತ್ತದೆ. * ಯೋಗದ ಮೂಲಕವಾಗಿ ಶುಕ್ರನು ಕುಬೇರನ ಮನಸ್ಸನ್ನು ವಶಪಡಿಸಿಕೊಂಡು ಸಂಪಾದಿಸಿದ ಧನವನ್ನು ಮನುಷ್ಯರಿಗೆ ತಂದುಕೊಡುತ್ತಾನೆ. ಧನವು ಅಜೈಕಪಾದನಿಂದಲೂ (ಅಗ್ನಿಯಿಂದಲೂ), ಅಹಿರ್ಬುಧ್ನ್ಯನಿಂದಲೂ (ರುದ್ರನಿಂದಲೂ) ಮತ್ತು ಕುಬೇರನಿಂದಲೂ ರಕ್ಷಿಸಲ್ಪಡುತ್ತದೆ. ಧನವು ಕೇವಲ ಅದೃಷ್ಟಾಯತ್ತವಾಗಿ ಲಭಿಸುವುದಾದ್ದರಿಂದ ಎಲ್ಲರಿಗೂ ಲಭಿಸುವುದಿಲ್ಲ. ನೀನು ಅಭಿಲಾಷಿಸಿರುವ ಕುದುರೆಗಳು ಹಣವಿಲ್ಲದೇ ಸಿಕ್ಕಲಾರವು.

(ಈ ಶ್ಲೋಕಗಳಿಗೆ ವ್ಯಾಖ್ಯಾನಕಾರರು ಹೀಗೆ ವ್ಯಾಖ್ಯೆ ಮಾಡಿರುತ್ತಾರೆ :

**ಪ್ರೋಷ್ಠಪದಾಭ್ಯಾಮಿತಿ ತೃತೀಯಾ, ಮೂಲೇನಾವಾಹಯೇ ದ್ದೇವೀಮಿತಿವತ್ ಸಪ್ತಮ್ಯರ್ಥೇ । ತೇನ ತಸ್ಮಿನ್ನಕ್ಷತ್ರದ್ವಯೇ ಶುಕ್ರೇ = ಶುಕ್ರವಾಸರೇ ತದ್ಯೋಗೇ ಸತಿ, ಶುಕ್ರಃ = ಅಗ್ನಿಃ, ಧನಪತೌ =ಕುಬೇರಸ್ಯ ವೃದ್ಧ್ಯರ್ಥಂ, ಮನುಷ್ಯೇಭ್ಯಃ ಸಂಪ್ರದಾನೇಭ್ಯಃ ಧನಂ ಧತ್ತೇ =ದದಾತಿ । ಶುಕ್ರಶ್ಚಿತ್ತಾರ್ಜಿತಮಿತ್ಯನೇನ ವಹ್ನಿರೇತಸ್ತ್ವಂ ತಸ್ಯ ಪ್ರದರ್ಶ್ಯತೇ । 'ಶುಕ್ರಃ ಕಾವ್ಯೇಽನಲೇ ಜ್ಯೇಷ್ಠೇ' ಇತಿ ವಿಶ್ವಃ ।ಧನಾರ್ಥೀ ಉಕ್ತನಕ್ಷತ್ರವಾರಯೋಗೇ ವಹ್ನಿಂ ಪ್ರಾರ್ಥಯೇತ್ ।ತಚ್ಚಾರ್ಥಂ ಯಾಗಾದಿದ್ವಾರಾ ವಾ ಭೂಮೌ ನಿಖನನೇನ ವಾ ಸರ್ವಂ ಕುಬೇರಂ ಪ್ರತ್ಯೇವ ಗಚ್ಛತೀತಿ ಭಾವಃ**

ತೃತೀಯಾಂತವಾಗಿರುವ 'ಮೂಲೇನ' ಶಬ್ದಕ್ಕೆ ಸಪ್ತಮ್ಯರ್ಥವನ್ನು ಎಂದರೆ 'ಮೂಲದಲ್ಲಿ – (ಮೂಲಾನಕ್ಷತ್ರದಲ್ಲಿ) ದೇವಿಯನ್ನು ಆವಾಹನೆ ಮಾಡಬೇಕು'–ಎಂದಿರುವಂತೆ ಪ್ರೋಷ್ಠಪದಾಭ್ಯಾಂ ಎಂದು ತೃತೀಯಾಂತ ವಾಗಿರುವ ಶಬ್ದಕ್ಕೆ ಸಪ್ತಮ್ಯರ್ಥವನ್ನು ಎಂದರೆ ಪ್ರೋಷ್ಠಪದಾನಕ್ಷತ್ರದಲ್ಲಿ ಎಂದು ಅರ್ಥಮಾಡಬೇಕು. ಧನಾರ್ಥಿಯಾದವನು ಶುಕ್ರವಾರದ ದಿನ ಪ್ರೋಷ್ಠಪದಾನಕ್ಷತ್ರದಲ್ಲಿ ಅಥವಾ ಪ್ರೋಷ್ಠಪದಾನಕ್ಷತ್ರಯೋಗವಿರುವ ಶುಕ್ರವಾರದಲ್ಲಿ ಅಗ್ನಿಯನ್ನು ಪ್ರಾರ್ಥಿಸಬೇಕು.

---

* ಶಾಂತಿಪರ್ವ-ಅಧ್ಯಾಯ ೨೮೯ರಲ್ಲಿ ಈ ಪ್ರಸಂಗವು ಬರುತ್ತದೆ.

ಪ್ರೋಷ್ಠಪದವೆಂದರೆ ಪೂರ್ವಾಭಾದ್ರಾ ಮತ್ತು ಉತ್ತರಾಭಾದ್ರಾ ನಕ್ಷತ್ರಗಳು. ಅಗ್ನಿಯು **ಧನಪತೌ** ಎಂದರೆ ಕುಬೇರನ ವೃದ್ಧ್ಯರ್ಥವಾಗಿ ಮನುಷ್ಯರಿಗೆ ಯಾಗಾದಿಗಳ ಮೂಲಕವಾಗಲೀ, ಭೂಮಿಯ ಅಗೆಯುವಿಕೆಯಿಂದಾಗಲೀ – ಧನವನ್ನು ಕೊಡುತ್ತಾನೆ. ಅರ್ಥಾತ್ ಈ ಎಲ್ಲ ಧನವೂ ಕಡೆಗೆ ಕುಬೇರನನ್ನೇ ಸೇರುತ್ತದೆ. **ಅಜ ಏಕಪಾತ್ ಪೂರ್ವಪ್ರೋಷ್ಠಪದಾದೇವತಾ, ಅಹಿರ್ಬುಧ್ನ್ಯಃ ಉತ್ತರಪ್ರೋಷ್ಠಪದಾ ದೇವತಾ, ಧನದಶ್ಚ ತದಧ್ಯಕ್ಷಃ**-ಪೂರ್ವಪ್ರೋಷ್ಠಪದಾನಕ್ಷತ್ರದ ದೇವತೆಯಾದ ಅಜೈಕಪಾದನಿಂದಲೂ, ಉತ್ತರಪ್ರೋಷ್ಠಪದಾನಕ್ಷತ್ರದ ದೇವತೆಯಾದ ಅಹಿರ್ಬುಧ್ನ್ಯನಿಂದಲೂ ಮತ್ತು ಕುಬೇರನಿಂದಲೂ ಧನವು ಸಂರಕ್ಷಿಸಲ್ಪಡುತ್ತಿರುತ್ತದೆ. **ಶುಕ್ರಃ ಚಿತ್ತಾರ್ಜಿತಂ** ಎಂದಿರುವುದರಿಂದ ಧನಕ್ಕೆ ವಹ್ನಿರೇತಸ್ತ್ವವು ಸೂಚಿತವಾಗಿದೆ. ಹಿರಣ್ಯರೇತಾಃ ಎಂದೇ ಅಗ್ನಿಗೆ ಹೆಸರು. **ತಸ್ಮಾತ್ ಏತಾನ್ ಪ್ರಾರ್ಥಯತಾ ಧನಂ ಲಬ್ಧುಂ ಶಕ್ಯಂ, ನಾನ್ಯಥೇತ್ಯರ್ಥಃ** – ಈ ಕಾರಣದಿಂದಾಗಿ ಈ ದೇವತೆಗಳನ್ನು ಪ್ರಾರ್ಥಿಸುವುದರಿಂದ ಧನವನ್ನು ಪಡೆಯಬಹುದೇ ಹೊರತು ಬೇರಾವ ಮಾರ್ಗದಿಂದಲೂ ಧನವನ್ನು ಪಡೆಯುವ ಸಾಧ್ಯತೆಯಿಲ್ಲ.

ಹೀಗೆಂಬುದಾಗಿ ವ್ಯಾಖ್ಯಾನಕಾರರು ಈ ಶ್ಲೋಕಕ್ಕೆ ವ್ಯಾಖ್ಯೆಮಾಡಿರುತ್ತಾರೆ.

ಇವರ ವ್ಯಾಖ್ಯಾನದ ಒಟ್ಟು ತಾತ್ಪರ್ಯ :

“ಪೂರ್ವಾಭಾದ್ರಾ ಅಥವಾ ಉತ್ತರಾಭಾದ್ರಾನಕ್ಷತ್ರವಿರುವ ಶುಕ್ರವಾರದಲ್ಲಿ ಅಗ್ನಿಯನ್ನು ಪೂಜಿಸಿದರೆ ಕುಬೇರನ ವೃದ್ಧ್ಯರ್ಥವಾಗಿ ಅಗ್ನಿಯು ತನ್ನಲ್ಲಿಯೇ ಇರುವ ಧನವನ್ನು ಮನುಷ್ಯರಿಗೆ ಯಥೇಚ್ಛವಾಗಿ ಕೊಡುತ್ತಾನೆ. (ಧನವು) ಅಜೈಕಪಾದನಿಂದಲೂ, ಅಹಿರ್ಬುಧ್ನ್ಯನಿಂದಲೂ ಮತ್ತು ಕುಬೇರನಿಂದಲೂ ಸದಾ ರಕ್ಷಿಸಲ್ಪಡುತ್ತಿರುತ್ತದೆ. ಬೇರಾವ ರೀತಿಯಿಂದಲೂ ಧನವನ್ನು ಪಡೆದುಕೊಳ್ಳುವ ಸಾಧ್ಯತೆಯಿಲ್ಲ. ಧನವು ಸುಲಭವಾಗಿ ಸಿಕ್ಕಿಬಿಡುವುದಿಲ್ಲ. ಆದರೆ ಧನವಿಲ್ಲದಿದ್ದರೆ ನೀನಿಚ್ಛಿಸಿರುವ ಕುದುರೆಗಳೂ ನಿನಗೆ ಸಿಗಲಾರವು.” )

ಆದುದರಿಂದ ನೀನು ರಾಜರ್ಷಿಯ ಕುಲದಲ್ಲಿ ಹುಟ್ಟಿರುವ ಸತ್ಕುಲ

ಪ್ರಸೂತನಾದ ಯಾವನಾದರೊಬ್ಬ ರಾಜನನ್ನು ಧನಕ್ಕಾಗಿ ಪ್ರಾರ್ಥಿಸು. ಆದರೆ ಆ ರಾಜನು ನಮಗೆ ಧನಕೊಡುವ ಕಾರಣದಿಂದ ಪ್ರಜೆಗಳನ್ನು ಸುಲಿಗೆ ಮಾಡಬಾರದು.

**ಅಪೀಡ್ಯ ರಾಜಾ ಪೌರಾನ್ಹಿ ಯೋ ನೌ ಕುರ್ಯಾತ್ಕೃತಾರ್ಥಿನೌ ॥**

ಪ್ರಜೆಗಳನ್ನು ಸ್ವಲ್ಪವಾದರೂ ಪೀಡಿಸದೇ ನಮ್ಮ ಅಭಿಲಾಷೆಯನ್ನೂ ಪೂರ್ಣಗೊಳಿಸುವ ಸಾಮರ್ಥ್ಯವಿರುವ ರಾಜನೊಬ್ಬನನ್ನು ನೀನು ಹಣಕ್ಕಾಗಿ ಯಾಚಿಸಬೇಕು."

ಕ್ಷಣಕಾಲ ಯೋಚಿಸಿ ಗರುಡನು ಗಾಲವನನ್ನು ಕುರಿತು ಪುನಃ ಹೇಳಿದನು :

"ಗಾಲವ! ಸೋಮವಂಶದಲ್ಲಿ ಹುಟ್ಟಿರುವ ರಾಜನೊಬ್ಬನಿದ್ದಾನೆ. ಅವನು ನನ್ನ ಸ್ನೇಹಿತನೂ ಆಗಿರುತ್ತಾನೆ. ಅವನಿಗೆ ಈ ಪ್ರಪಂಚದಲ್ಲಿ ಅಪಾರವಾದ ಐಶ್ವರ್ಯವಿದೆ. ಅವನ ಬಳಿಗೆ ನಾವಿಬ್ಬರೂ ಪ್ರಯಾಣಮಾಡೋಣ.

ನನ್ನ ಆ ಮಿತ್ರನ ಹೆಸರು ಯಯಾತಿ. ಅವನು ನಹುಷನ ಮಗ. ಅವನು ಸತ್ಯವಿಕ್ರಮನಾಗಿರುತ್ತಾನೆ. ನಾನು ನಿನ್ನ ಪರವಾಗಿ ಪ್ರಾರ್ಥಿಸಿದ್ದೇ ಆದರೆ, ನೀನೂ ಅವನನ್ನು ಯಾಚಿಸಿದೆಯಾದರೆ, ಅವನು ನಿನಗೆ ಬೇಕಾದಷ್ಟು ಧನವನ್ನು ಕೊಡುತ್ತಾನೆ. ನನಗೆ ತಿಳಿದಿರುವಂತೆ ಧನದನಾದ ಕುಬೇರನಲ್ಲಿರುವಂತೆಯೇ ಅವನಲ್ಲಿಯೂ ಅಪಾರವಾದ ಧನವಿರುವುದು. ಅವನನ್ನು ಪ್ರಾರ್ಥಿಸು. ದಾನಪಡೆದು ನೀನು ಗುರುಗಳಿಗೆ ಕೊಡಬೇಕಾಗಿರುವ ದಕ್ಷಿಣೆಯನ್ನು ತೀರಿಸಿಬಿಡು."

ಈ ರೀತಿಯಾಗಿ ಗರುಡ-ಗಾಲವರಿಬ್ಬರೂ ಮಾತನಾಡುತ್ತಾ ಮುಂದೇನು ಮಾಡಬೇಕೆಂಬುದನ್ನೂ ಯೋಚಿಸುತ್ತಾ ಪ್ರತಿಷ್ಠಾನಪುರದಲ್ಲಿದ್ದ ನರಶ್ರೇಷ್ಠನಾದ ಯಯಾತಿಯ ಸಮೀಪಕ್ಕೆ ಹೋದರು. ರಾಜನಿಂದ ಸ್ವಾಗತವನ್ನು ಪಡೆದು ಅರ್ಘ್ಯ-ಪಾದ್ಯಾದಿಗಳಿಂದ ಸತ್ಕೃತರಾದನಂತರ ಸುಖಾಸನದಲ್ಲಿ ಕುಳಿತಿದ್ದ ಅವರ ಆಗಮನದ ಕಾರಣವನ್ನು ಯಯಾತಿಯು ಪ್ರಶ್ನಿಸಿದನು. ಅದಕ್ಕೆ ಉತ್ತರವಾಗಿ ಗರುಡನು ಹೇಳಿದನು :

"ನಹುಷನಂದನ! ತಪೋನಿಧಿಯಾದ ಈ ಗಾಲವನು ನನ್ನ ಪರಮ

ಮಿತ್ರನು. ಇವನು ಹತ್ತು ಸಾವಿರ ವರ್ಷಗಳ ಕಾಲ ವಿಶ್ವಾಮಿತ್ರನ ಶಿಷ್ಯನಾಗಿದ್ದನು. ಇವನು ಮಾಡಿದ ಸೇವೆಯಿಂದ ಸುಪ್ರೀತನಾದ ವಿಶ್ವಾಮಿತ್ರನು ಶಿಷ್ಯನಿಗೆ ಉಪಕಾರಮಾಡುವ ಇಚ್ಛೆಯಿಂದಾಗಿ ಮನೆಗೆ ಹೋಗಲು ಅನುಮತಿಯನ್ನಿತ್ತನು (ಗುರುದಕ್ಷಿಣೆಯನ್ನು ಅಪೇಕ್ಷಿಸಲಿಲ್ಲ). ಆದರೆ ಗಾಲವನು ಮಾತ್ರ ಶಿಷ್ಟಾಚಾರವನ್ನು ಬಿಡಲೊಪ್ಪದೇ ವಿಶ್ವಾಮಿತ್ರನನ್ನು ಕುರಿತು ಬಾರಿ-ಬಾರಿಗೂ ಪ್ರಾರ್ಥಿಸಿದನು.

'ಭಗವನ್! ತಮಗೆ ಯಾವ ರೂಪದಲ್ಲಿ ಗುರುದಕ್ಷಿಣೆಯನ್ನರ್ಪಿಸಲಿ, ಗುರುದಕ್ಷಿಣಾರೂಪವಾಗಿ ಯಾವ ವಸ್ತುವನ್ನು ತಂದುಕೊಡಲಿ?'

ಹೀಗೆಂದು ಒಮ್ಮೆ ಹೇಳಿ ಸುಮ್ಮನಾಗಲಿಲ್ಲ. ವಿಶ್ವಾಮಿತ್ರನು ಅನೇಕ ಬಾರಿ ಇಚ್ಛೆ ಬಂದೆಡೆಗೆ ಹೋಗಲು ಹೇಳಿದರೂ ಈ ನನ್ನ ಮಿತ್ರನು ಗುರುದಕ್ಷಿಣೆಯು ಯಾವ ರೂಪದಲ್ಲಿರಬೇಕೆಂಬುದನ್ನು ತಿಳಿಸಬೇಕೆಂದು ವಿಶ್ವಾಮಿತ್ರನನ್ನು ಪದೇಪದೇ ಒತ್ತಾಯಪಡಿಸಿದನು. ಅದರಿಂದ ಸ್ವಲ್ಪ ಕೋಪಗೊಂಡ ವಿಶ್ವಾಮಿತ್ರನು ಗಾಲವನು ನಿರ್ಧನನೆಂಬುದನ್ನು ತಿಳಿದಿದ್ದರೂ ಗುರುದಕ್ಷಿಣೆಯು ಇದೇ ರೂಪದಲ್ಲಿರಬೇಕೆಂದು ನಿರ್ದೇಶಿಸಿ ಹೇಳಿದನು :

**ಏಕತಃ ಶ್ಯಾಮಕರ್ಣಾನಾಂ ಶುಭ್ರಾಣಾಂ ಶುದ್ಧಜನ್ಮನಾಮ್ ।**
**ಅಷ್ಟೌ ಶತಾನಿ ಮೇ ದೇಹಿ ಹಯಾನಾಂ ಚನ್ದ್ರವರ್ಚಸಾಮ್ ।**
**ಗುರ್ವರ್ಥೋ ದೀಯತಾಮೇಷ ಯದಿ ಗಾಲವ ಮನ್ಯಸೇ ॥೧೪॥**

'ಗಾಲವ! ಒಳ್ಳೆಯ ಜಾತಿಯಲ್ಲಿ ಹುಟ್ಟಿರುವ ಎಂಟು ನೂರು ಕುದುರೆಗಳನ್ನು ತಂದುಕೊಡು. ಅವುಗಳು ಚಂದ್ರನಂತೆ ಬೆಳ್ಳಗಿರಬೇಕು. ಆದರೆ ಅವುಗಳ ಒಂದು ಕಿವಿಯು ಮಾತ್ರ ಕಪ್ಪುಬಣ್ಣದ್ದಾಗಿರಬೇಕು. ನೀನು ಗುರುದಕ್ಷಿಣೆಯನ್ನು ಕೊಡಲೇಬೇಕೆಂದು ನಿಶ್ಚಯಿಸಿರುವುದಾದರೆ ಗುರ್ವರ್ಥವಾಗಿ ನಾನು ಹೇಳಿದ ಈ ಲಕ್ಷಣಗಳುಳ್ಳ ಎಂಟು ನೂರು ಕುದುರೆಗಳನ್ನು ತಂದುಕೊಡು.'

ಹೀಗೆಂಬುದಾಗಿ ತಪೋಧನನಾದ ವಿಶ್ವಾಮಿತ್ರನು ಕುಪಿತನಾಗಿ ಗಾಲವನಿಗೆ ಹೇಳಿಬಿಟ್ಟನು.

ಇಂತಹ ಕಠಿಣಪರೀಕ್ಷೆಗೆ ತುತ್ತಾಗುವೆನೆಂದು ಗಾಲವನು ಎಣಿಸಿರಲಿಲ್ಲ. ವಿಶ್ವಾಮಿತ್ರನ ಮಾತನ್ನು ಕೇಳುತ್ತಲೇ ಅಂತಹ ಬಹುಮೂಲ್ಯದ

ಗುರುದಕ್ಷಿಣೆಯನ್ನು ತರಲು ಅಶಕ್ತನಾಗಿ ಮಹತ್ತರವಾದ ಶೋಕದಿಂದ ಪರಿತಪಿಸುತ್ತಾ ಈಗ ನಿನ್ನಲ್ಲಿಗೆ ಶರಣಾಗತನಾಗಿ ಬಂದಿರುತ್ತಾನೆ. ಪುರುಷಸಿಂಹನೇ! ನಿನ್ನಿಂದ ಗುರುದಕ್ಷಿಣಾರೂಪವಾದ ಬಹುಮೌಲ್ಯದ ಕುದುರೆಗಳನ್ನು ಭಿಕ್ಷೆಯಾಗಿ ಪಡೆದು ಗುರುವಿಗದನ್ನು ದಾನಮಾಡಿ ನಿರ್ವ್ಯಥನಾಗಿ ಮುಂದೆ ನಿಶ್ಚಿಂತೆಯಿಂದ ತಪಸ್ಸುಮಾಡುತ್ತಾನೆ.

ತಾನು ಮಾಡಿದ ತಪಸ್ಸಿನ ಒಂದು ಭಾಗದೊಡನೆ ನಿನ್ನನ್ನೂ ಕೂಡಿಸುತ್ತಾನೆ. (ತಪಸ್ಸಿನ ಒಂದು ಭಾಗವನ್ನು ನಿನಗೂ ಕೊಡುತ್ತಾನೆ.) ನೀನು ರಾಜರ್ಷಿಯಾಗಿರುವುದೇನೋ ನಿಶ್ಚಯ. ನೀನು ತಪಸ್ವಿಯೂ ಆಗಿರುವೆ. ರಾಜರ್ಷಿಗಳಿಗೆ ಉಚಿತವಾದ ತಪಸ್ಸಿನಿಂದ ಪೂರ್ಣನಾಗಿರುವ ನಿನ್ನನ್ನು ಬ್ರಾಹ್ಮತಪಸ್ಸಿನಿಂದಲೂ ಪೂರ್ಣನನ್ನಾಗಿ ಮಾಡುತ್ತಾನೆ. (ಬ್ರಾಹ್ಮಣನು ಮಾಡಿದ ತಪಃಫಲವೂ ನಿನಗೆ ಲಭ್ಯವಾಗುತ್ತದೆ.) ನರೇಶ್ವರನೇ! ಇಲ್ಲಿ ದಾನಕೊಡುವ ಪ್ರತಿಯೊಂದು ಕುದುರೆಗೂ ಎಷ್ಟು ರೋಮಗಳಿರುತ್ತವೆಯೋ ಅಷ್ಟು ಸಂಖ್ಯಾತ ವಾದ ಕುದುರೆಗಳು ದಾನಮಾಡಿದವನಿಗೆ ಪರಲೋಕದಲ್ಲಿ ಲಭ್ಯವಾಗುತ್ತವೆ. ದಾನದ ಪ್ರತಿಗ್ರಹಕ್ಕೆ ಇವನು ಎಷ್ಟು ಸತ್ಪಾತ್ರನಾಗಿರುವನೋ ದಾನಕೊಡಲು ನೀನೂ ಅಷ್ಟೇ ಯೋಗ್ಯನಾಗಿರುವೆ. ದಾತೃ-ಪ್ರತಿಗೃಹೀತೃಗಳಿಬ್ಬರೂ ಸತ್ಕುಲ ಸಂಭೂತರಾಗಿ ಉತ್ತಮಪುರುಷರಾಗಿರುವಿರಿ. ನಿಮ್ಮಿಬ್ಬರಿಗೆ ಶಂಖ-ಕ್ಷೀರದ ಉಪಮಾನಕೊಡಬಹುದಾಗಿದೆ. ಶಂಖವು ಕ್ಷೀರವನ್ನಿಟ್ಟುಕೊಳ್ಳಲು ಉತ್ತಮ ಪಾತ್ರೆಯಾಗಿದೆ. ಅಂತೆಯೇ ಕ್ಷೀರವು ಶಂಖದಲ್ಲಿರಲು ಉತ್ತಮವಸ್ತುವಾಗಿದೆ. ಶಂಖದಲ್ಲಿ ಹಾಕಿದ ಕ್ಷೀರದಂತೆ ನೀನು ಇವನಿಗೆ ಕೊಡುವ ದಾನವು ಶೋಭಿಸುತ್ತದೆ."

ಂಂ೪ನೆಯ ಅಧ್ಯಾಯವು ಮುಗಿಯಿತು.

೧೧೫ನೆಯಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ)

## ಯಯಾತಿಯು ಗಾಲವನಿಗೆ ತನ್ನ ಮಗಳನ್ನೇ ಸಮರ್ಪಿಸಿದುದು: ಗಾಲವನು ಅವಳನ್ನು ಕರೆದುಕೊಂಡು ಅಯೋಧ್ಯೆಯ ರಾಜನ ಬಳಿಗೆ ಪ್ರಯಾಣಮಾಡಿದುದು

ನಾರದರು ಮುಂದುವರಿದು ಹೇಳುತ್ತಾರೆ :

“ಗರುಡನು ಯಥಾರ್ಥವೂ ಶ್ರೇಷ್ಠವೂ ಆದ ಮಾತುಗಳನ್ನು ಹೇಳಿ ಮುಗಿಸಿದೊಡನೆಯೇ ಸಾವಿರಾರು ಯಾಗಗಳನ್ನು ಮಾಡಿದ್ದ, ದಾನಿಯಾದ, ದಾನಪತಿಯಾದ, ಚಕ್ರವರ್ತಿಯಾದ, ರಾಜೋಚಿತವಾದ ತೇಜಸ್ಸಿನಿಂದ ಪ್ರಕಾಶಿಸುತ್ತಿದ್ದ, ಸರ್ವರಾಜರಿಗೂ ರಾಜನಾದ ಯಯಾತಿಯು ಗರುಡನು ಹೇಳಿದ ಮಾತುಗಳನ್ನು ಮನಸ್ಸಿನಲ್ಲಿ ಬಾರಿ-ಬಾರಿಗೂ ಜಾಗರೂಕತೆಯಿಂದ ವಿಮರ್ಶಿಸಿ ಒಂದು ನಿರ್ಧಾರಕ್ಕೆ ಬಂದವನಾಗಿ ಅವನನ್ನು ಕುರಿತು ಈ ಮಾತುಗಳನ್ನು ಹೇಳಿದನು :

ಮಾತನ್ನು ಪ್ರಾರಂಭಿಸುವ ಮೊದಲು ತನ್ನ ಪ್ರಿಯಸಖನಾದ ಸುಪರ್ಣನನ್ನೂ, ತಪಸ್ಸೇ ಮೂರ್ತಿಮತ್ತಾಗಿ ಬಂದಿರುವುದೋ ಎಂಬಂತೆ ಕಾಣುತ್ತಿದ್ದ ದ್ವಿಜಶ್ರೇಷ್ಠನಾದ ಗಾಲವನನ್ನೂ ನೋಡಿ ತನ್ನ ಮಿತ್ರನು ಪ್ರಸ್ತಾಪಿಸಿದ ಸ್ಪೃಹಣೀಯವಾದ, ಶ್ಲಾಘ್ಯವಾದ ಭಿಕ್ಷೆಯನ್ನೂ ಮನಸ್ಸಿನಲ್ಲಿ ಬಾರಿ-ಬಾರಿಗೂ ತರ್ಕಿಸುತ್ತಾ ತನ್ನಲ್ಲೇ ಹೀಗೆಂದು ಹೇಳಿಕೊಂಡನು :

‘ಸೂರ್ಯವಂಶೋತ್ಪನ್ನರಾದ ಅನೇಕ ಇತರ ರಾಜರನ್ನು ಬಿಟ್ಟು ಇವರು ನನ್ನಲ್ಲಿಗೇ ಬಂದಿರುತ್ತಾರೆ. (ಇದು ನನ್ನ ಪುಣ್ಯವಿಶೇಷವೇ ಸರಿ.)’ ಹೀಗೆಂದು ತರ್ಕಿಸಿ ಅನಂತರ ಅವರನ್ನು ಕುರಿತು ಹೇಳಿದನು :

**ಅದ್ಯ ಮೇ ಸಫಲಂ ಜನ್ಮ ತಾರಿತಂ ಚಾದ್ಯ ಮೇ ಕುಲಮ್ ।**
**ಅದ್ಯಾಯಂ ತಾರಿತೋ ದೇಶೋ ಮಮ ತಾರ್ಕ್ಷ್ಯ ತ್ವಯಾನಘ ॥೫॥**

“ನಿಷ್ಕಳಂಕನಾದ ಸುಪರ್ಣನೇ! ಇಂದು ನನ್ನ ಜನ್ಮವು ಸಾರ್ಥಕವಾಯಿತು. ಇಂದು ನಿನ್ನಿಂದ ನನ್ನ ಕುಲವು ಉದ್ಧಾರವಾಯಿತು. ನನ್ನ ಕುಲವು ಮಾತ್ರವಲ್ಲ.; ನಿನ್ನಿಂದ ನನ್ನ ದೇಶವೇ ಉದ್ಧಾರವಾಗಿ ಹೋಯಿತು. ಆದರೆ ಒಂದು ವಿಷಯವನ್ನು ಮಾತ್ರ ನಿನ್ನೊಡನೆ ನಾನು ಹೇಳಲಿಚ್ಛಿಸುತ್ತೇನೆ. ನಾನು ಹಿಂದೆ ಧನಿಕನಾಗಿದ್ದಷ್ಟು ಈಗ ಧನಿಕನಾಗಿಲ್ಲ. ಹಿಂದೆ ನಾನೆಷ್ಟು ಧನಿಕನಾಗಿದ್ದೆನೆಂಬುದನ್ನು ನೀನು ತಿಳಿದಿರುವೆ. ಆದರೆ ಇತ್ತೀಚಿನ ನನ್ನ ಸಂಗತಿಯು ನಿನಗೆ ತಿಳಿಯದಾಗಿದೆ. ಇತ್ತೀಚೆಗೆ ನನ್ನ ಅಪಾರವಾಗಿದ್ದ ಐಶ್ವರ್ಯವೂ ಕ್ಷೀಣಿಸಿಹೋಗಿದೆ. ಆದರೆ ನಿನ್ನ ಆಗಮನವನ್ನು ನಿರರ್ಥಕಗೊಳಿಸಲೂ ನಾನು ಶಕ್ತನಲ್ಲ. ಈ ವಿಪ್ರರ್ಷಿಯೂ ನನ್ನ ಸಮೀಪಕ್ಕೆ ಮಹತ್ತರವಾದ ಆಶೆ-ಆಕಾಂಕ್ಷೆಗಳಿಂದಲೇ ಬಂದಿರುತ್ತಾನೆ. ಇವನ ಆಶೆ

ಯನ್ನೂ ಸಂಪೂರ್ಣವಾಗಿ ನಾನು ವಿಫಲಗೊಳಿಸಲಾರೆನು. ನಾನು ಕೊಡುವ ಯಾವ ವಸ್ತುವಿನಿಂದ ನೀವು ಅಭಿಲಾಷಿಸಿ ಬಂದಿರುವ ಕಾರ್ಯದ ಸಿದ್ಧಿಯಾಗುವುದೋ–ಅಂತಹ ಒಂದು ವಸ್ತುವನ್ನು ನಾನು ನಿಮಗೆ ಕೊಡುತ್ತೇನೆ.

**ಅಭಿಗಮ್ಯ ಹತಾಶೋ ಹಿ ನಿವೃತ್ತೋ ದಹತೇ ಕುಲಮ್ ॥೮॥**

ಯಾಚಿಸಲು ಬಂದು ಹತಾಶನಾಗಿ ಹಿಂದಿರುಗುವ ಯಾಚಕನು ನಿರಾಶೆಯನ್ನುಂಟುಮಾಡಿದವನ ಕುಲವನ್ನೇ ದಹಿಸಿಬಿಡುತ್ತಾನೆ.

**ನಾತಃ ಪರಂ ವೈನತೇಯ ಕಿಂಚಿತ್ಪಾಪಿಷ್ಠಮುಚ್ಯತೇ ।**
**ಯಥಾಶಾನಾಶನಾಲ್ಲೋಕೇ ದೇಹಿ ನಾಸ್ತೀತಿ ವಾ ವಚಃ ॥೯॥**

ಲೋಕದಲ್ಲಿ–ಒಬ್ಬನ ಆಶೆಯನ್ನು ವಿನಾಶಗೊಳಿಸುವುದು (ಆಶೆಗೆ ಭಂಗತರುವುದು), 'ದೇಹಿ' ಎಂದವನಿಗೆ 'ಇಲ್ಲ' ಎಂದು ಹೇಳಿಬಿಡುವುದು–ಇದಕ್ಕಿಂತಲೂ ಪಾಪಿಷ್ಠವಾದುದು (ಪಾಪಹೇತುವಾದುದು) ಬೇರೊಂದಿಲ್ಲ ವೆಂದು ಹೇಳಲ್ಪಟ್ಟಿದೆ.

**ಹತಾಶೋ ಹ್ಯಕೃತಾರ್ಥಃ ಸನ್ಹತಃ ಸಮ್ಭಾವಿತೋ ನರಃ ।**
**ಹಿನಸ್ತಿ ತಸ್ಯ ಪುತ್ರಾಂಶ್ಚ ಪೌತ್ರಾಂಶ್ಚಾಕುರ್ವತೋ ಹಿತಮ್ ॥೧೦॥**

ಸಂಭಾವಿತನಾದ ಮನುಷ್ಯನೊಬ್ಬನು ಕೃತಕೃತ್ಯನಾಗದೆ ಹತಾಶನಾಗಿ ಮೃತಪ್ರಾಯನಾಗಿ ಹಿಂದಿರುಗಿದ್ದೇ ಆದರೆ–ಅವನು ತನ್ನ ಅಭಿಲಾಷೆಯನ್ನು ಪೂರ್ಣಗೊಳಿಸದ ಧನಿಕನ ಪುತ್ರರನ್ನೂ ಮತ್ತು ಪೌತ್ರರನ್ನೂ ವಿನಾಶಗೊಳಿಸುತ್ತಾನೆ. (ಸಂಭಾವಿತನಿಗೆ ಮಾಡುವ ಇಂತಹ ಅಪಚಾರದಿಂದ ಧನಿಕನ ಪುತ್ರ-ಪೌತ್ರರೂ ವಿನಾಶಹೊಂದುತ್ತಾರೆ.) ಈ ವಿಷಯಗಳೆಲ್ಲವನ್ನೂ ಪರ್ಯಾಲೋಚಿಸಿಯೇ ನಾನು ಈ ನಿರ್ಧಾರಕ್ಕೆ ಬಂದಿರುತ್ತೇನೆ.

ನನಗೊಬ್ಬಳು ಮಗಳಿದ್ದಾಳೆ. ಅವಳು ನಾಲ್ಕು ವಂಶಗಳ ಸಂಸ್ಥಾಪಕಳಾಗುವಂತಹವಳು. ಸಕಲಧರ್ಮಗಳನ್ನೂ ವೃದ್ಧಿಪಡಿಸತಕ್ಕವಳು. (ಎಲ್ಲ ಧರ್ಮಗಳನ್ನೂ ತಿಳಿದವಳು.) ದೇವಕನ್ಯೆಗೆ ಸಮಾನಳಾಗಿರುವಳೆಂಬ ಖ್ಯಾತಿಯನ್ನು ಪಡೆದಿರತಕ್ಕವಳು. ರೂಪದಲ್ಲಿ ಅನುಪಮಳಾದ ಅವಳನ್ನು

ದೇವತೆಗಳೂ, ಮನುಷ್ಯರೂ ಮತ್ತು ಅಸುರರೂ ಸದಾ ಅಪೇಕ್ಷಿಸುತ್ತಿದ್ದಾರೆ. ಅಂತಹ ಅನುಪಮಸುಂದರಿಯಾದ, ಧರ್ಮಿಷ್ಠೆಯಾದ ಮಗಳನ್ನು ನೀನು ದಾನವಾಗಿ ಪ್ರತಿಗ್ರಹಿಸು. ಅವಳ ಸಲುವಾಗಿ ರಾಜ್ಯವನ್ನೇ ಶುಲ್ಕವನ್ನಾಗಿ ಕೊಡುವವರೂ ಇದ್ದಾರೆ. ಹೀಗಿರುವಾಗ ಎಂಟು ನೂರು ಕುದುರೆಗಳನ್ನು ಕೊಟ್ಟು ಅವಳನ್ನು ಪಡೆದುಕೊಳ್ಳುವ ವಿಷಯದಲ್ಲಿ ಸಂಶಯಪಡಬೇಕಾಗಿಲ್ಲ. ಅವಳಿಂದ (ಅವಳ ವಿನಿಮಯದಿಂದ) ನಿನಗೆ ಬೇಕಾಗಿರುವ ಎಂಟು ನೂರು ಕುದುರೆಗಳು ಸಿಕ್ಕುತ್ತವೆ. ಆದುದರಿಂದ ನೀನು ನನ್ನ ಕಡುಚೆಲುವೆಯಾದ ಮಾಧವೀ ಎಂಬ ಪುತ್ರಿಯನ್ನು ಸ್ವೀಕರಿಸು. ಅವಳನ್ನು ಪಡೆದ ನೀನು ನಾನು ದೌಹಿತ್ರವಂತನಾಗುವಂತೆ (ಮಾಧವಿಯ ಮಕ್ಕಳಿಗೆ ಮಾತಾಮಹನಾಗುವಂತೆ) ವರವನ್ನು ದಯಪಾಲಿಸಬೇಕು."

ಯಯಾತಿಯು ಹೀಗೆಂದು ಪ್ರಾರ್ಥಿಸಿದೊಡನೆಯೇ ಗಾಲವನು ಮಾಧವಿಯನ್ನು ಪ್ರತಿಗ್ರಹಿಸಿ–"ಮತ್ತೊಮ್ಮೆ ಭೇಟಿಯಾಗೋಣ"–ಎಂಬುದಾಗಿ ಯಯಾತಿಗೆ ಹೇಳಿ, ಮಾಧವಿಯೊಡನೆ ಹೊರಟನು. ಅನಂತರ ಗರುಡನೂ–"ಕುದುರೆಗಳನ್ನು ಪಡೆದುಕೊಳ್ಳುವ ಬಾಗಿಲು (ದಾರಿಯು) ನಿನಗೆ ಸಿಕ್ಕಿದಂತಾಯಿತು. ನಾನಿನ್ನು ಹೋಗಿಬರುತ್ತೇನೆ"–ಎಂದು ಗಾಲವನಿಗೆ ಹೇಳಿ ಅವನ ಅನುಮತಿಯನ್ನು ಪಡೆದು ತನ್ನ ಲೋಕಕ್ಕೆ ತೆರಳಿದನು.

ಮಾಧವಿಯೊಡನೆ ಪ್ರಯಾಣಮಾಡುತ್ತಿದ್ದ ಗಾಲವನು ಹೀಗೆ ಯೋಚಿಸತೊಡಗಿದನು : "ರಾಜರಲ್ಲಿ ಈ ಕನ್ಯೆಯನ್ನು ಪಡೆದುಕೊಂಡು ಶುಲ್ಕರೂಪದಲ್ಲಿ ನಾನು ಕೇಳಲಿರುವ ಎಂಟು ನೂರು ಕುದುರೆಗಳನ್ನು ಕೊಡುವವರು ಯಾರಿದ್ದಾರೆ?"

ಹೀಗೆಯೇ ಯೋಚಿಸುತ್ತಿರುವಲ್ಲಿ ಮಹಾವೀರ್ಯನಾದ, ಚತುರಂಗ ಬಲಾನ್ವಿತನಾದ, ರಾಜಸತ್ತಮನಾದ, ಇಕ್ಷ್ವಾಕುಕುಲತಿಲಕನಾದ, ಅಯೋಧ್ಯೆಯಲ್ಲಿದ್ದ ಹರ್ಯಶ್ವನೆಂಬ ರಾಜನು ಗಾಲವನ ಸ್ಮೃತಿಪಥದಲ್ಲಿ ಸುಳಿದನು. ಹರ್ಯಶ್ವನ ಕಲ್ಯಾಣಗುಣಗಳೂ ಬಹಳವಾಗಿದ್ದುವು. ಆತನು ಕೋಶ, ಧಾನ್ಯ ಮತ್ತು ಬಲಗಳಿಂದ ಕೂಡಿದವನಾಗಿದ್ದನು. ಜನಪ್ರಿಯನಾಗಿದ್ದನು. ಬ್ರಾಹ್ಮಣಪ್ರಿಯನಾಗಿದ್ದನು. ಪ್ರಜೆಗಳ ಅಭಿಲಾಷೆಯನ್ನು ಪೂರ್ಣಗೊಳಿಸುವುದರಲ್ಲಿ ಸದಾ ನಿರತನಾಗಿದ್ದನು. ಅವನ ಮನಸ್ಸು

ಶಾಂತವಾಗಿದ್ದಿತು. ಅವನು ಶ್ರೇಷ್ಠವಾದ ತಪಸ್ಸನ್ನು ಆಚರಿಸುತ್ತಿದ್ದನು. ಅಂತಹ ಸರ್ವಗುಣಪರಿಪೂರ್ಣನಾದ ಹರ್ಯಶ್ವನ ಸಮೀಪಕ್ಕೆ ಹೋಗಿ ವಿಪ್ರಶ್ರೇಷ್ಠನಾದ ಗಾಲವನು ಹೇಳಿದನು :

"ರಾಜೇಂದ್ರ! ಇವಳು ನನ್ನ ಕುಮಾರೀ. ಸಂತಾನದ ಮೂಲಕವಾಗಿ ವಂಶದ ವೃದ್ಧಿಯನ್ನುಂಟುಮಾಡತಕ್ಕವಳು. ಕನ್ಯಾಶುಲ್ಕವನ್ನು ಕೊಟ್ಟು ಇವಳನ್ನು ಪತ್ನಿಯನ್ನಾಗಿ ಸ್ವೀಕರಿಸು. ಕನ್ಯಾಶುಲ್ಕವೇನೆಂಬುದನ್ನು ಹೇಳುತ್ತೇನೆ. ಅದನ್ನು ಕೇಳಿದನಂತರ ಈಗಿನ ಸಂದರ್ಭದಲ್ಲಿ ನಿನ್ನ ಕರ್ತವ್ಯವೇನೆಂಬುದನ್ನು ನಿರ್ಧರಿಸು."

೧೧೫ನೆಯ ಅಧ್ಯಾಯವು ಮುಗಿಯಿತು.

೧೧೬ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ)

## ಹರ್ಯಶ್ವನು ಎರಡುನೂರು ಕುದುರೆಗಳನ್ನು ಕನ್ಯಾಶುಲ್ಕವಾಗಿ ಕೊಟ್ಟು ಮಾಧವಿಯಲ್ಲಿ ವಸುಮನಸನನ್ನು ಪಡೆದು ಪುನಃ ಗಾಲವನಿಗೆ ಮಾಧವಿಯನ್ನು ಹಿಂದಿರುಗಿಸಿದುದು: ಮಾಧವಿಯೊಡನೆ ಗಾಲವನ ಪ್ರಯಾಣ

ನಾರದರು ಮುಂದುವರಿದು ಹೇಳುತ್ತಾರೆ :

"ದುರ್ಯೋಧನ! ಗಾಲವನು ಕನ್ಯಾಶುಲ್ಕದ ಪ್ರಸ್ತಾಪಮಾಡುವ ಮೊದಲೇ ಹರ್ಯಶ್ವನು ಕನ್ಯೆಯನ್ನು ನೋಡಿ ಅವಳ ರೂಪ-ಲಕ್ಷಣಗಳನ್ನು ಕಂಡು ಮೋಹಗೊಂಡವನಾಗಿ, ಅವಳಿಂದ ಸಂತಾನವನ್ನು ಪಡೆಯಬೇಕೆಂಬ ಇಚ್ಛೆಯನ್ನು ಹೊಂದಿದವನಾಗಿ, ಸುದೀರ್ಘವಾಗಿ ಬಿಸಿ-ಬಿಸಿಯಾದ ನಿಟ್ಟುಸಿರುಬಿಡುತ್ತಾ ಗಾಲವನನ್ನು ಕುರಿತು ಹೇಳಿದನು :

**ಉನ್ನತೇಷೂನ್ನತಾ ಷಟ್ಸು ಸೂಕ್ಷ್ಮಾ ಸೂಕ್ಷ್ಮೇಷು ಪಞ್ಚಸು ।**
**ಗಮ್ಭೀರಾ ತ್ರಿಷು ಗಮ್ಭೀರೇಷ್ವಿಯಂ ರಕ್ತಾ ಚ ಪಞ್ಚಸು ॥೨॥**

"ಗಾಲವ! ಉತ್ತಮಜಾತಿಯ ಸ್ತ್ರೀಗೆ ಯಾವ * ಆರು ಅಂಗಗಳು

---

* ಶ್ರೋಣ್ಯೌ ಲಲಾಟಮೂರೂ ಚ ಘ್ರಾಣಂ ಚೇತಿ ಷಡುನ್ನತಮ್ ।
ಸೂಕ್ಷ್ಮಾಣ್ಯಙ್ಗುಲಿಪರ್ವಾಣಿ ಕೇಶರೋಮನಖತ್ವಚಃ ॥

ಉನ್ನತವಾಗಿರಬೇಕೆಂದು ಹೇಳಲ್ಪಟ್ಟಿವೆಯೋ–ಆ ಆರು ಅಂಗಗಳೂ ಈ ಕನ್ಯೆಗೆ ಉನ್ನತವಾಗಿವೆ. ಉತ್ತಮಜಾತಿಯ ಸ್ತ್ರೀಗೆ ಯಾವ ಐದು ಅಂಗಗಳು ಸೂಕ್ಷ್ಮವಾಗಿರಬೇಕೆಂದು ಲಕ್ಷಣಶಾಸ್ತ್ರಜ್ಞರು ಹೇಳಿರುವರೋ–ಆ ಐದು ಅಂಗಗಳೂ ಇವಳಲ್ಲಿ ಸೂಕ್ಷ್ಮವಾಗಿಯೇ ಇವೆ. ಉತ್ತಮಜಾತಿಯ ಸ್ತ್ರೀಗೆ ಯಾವ ಮೂರು ಅಂಗಗಳು ಗಂಭೀರವಾಗಿರಬೇಕೆಂದು ಲಕ್ಷಣಶಾಸ್ತ್ರಜ್ಞರು ನಿಶ್ಚಯಮಾಡಿರುತ್ತಾರೆಯೋ–ಆ ಮೂರು ಅಂಗಗಳೂ ಈ ಕನ್ಯೆಯಲ್ಲಿಯೂ ಗಂಭೀರವಾಗಿಯೇ ಇವೆ. ಯಾವ ಐದು ಅಂಗಗಳು ರಕ್ತವರ್ಣ ವಾಗಿರಬೇಕೆಂದು ಶಾಸ್ತ್ರಜ್ಞರು ಅಭಿಪ್ರಾಯಪಡುವರೋ–ಆ ಐದು ಅಂಗಗಳೂ ಈ ಕನ್ಯೆಯಲ್ಲಿ ರಕ್ತವರ್ಣಯುಕ್ತವಾಗಿವೆ.

ಸರ್ವಲಕ್ಷಣಸಂಪನ್ನೆಯಾಗಿರುವ ಇವಳು ಅನೇಕಾನೇಕ ದೇವಾಸುರರಿಗೂ ದರ್ಶನೀಯಳಾಗಿದ್ದಾಳೆ. ದೇವಾಸುರರೂ ಇವಳನ್ನು ನೋಡುವ ಅಪೇಕ್ಷೆಯುಳ್ಳವರಾಗಿರುತ್ತಾರೆ. ಗಾಂಧರ್ವವೇದವಾದ ಸಂಗೀತ ವಿದ್ಯೆಯಲ್ಲಿಯೂ ಪಾರಂಗತಳಾಗಿರುತ್ತಾಳೆ. (ಬಹಳ ಸುಂದರಪುರುಷರೆಂದು ಪ್ರಸಿದ್ಧರಾಗಿರುವ ಗಂಧರ್ವರಿಗೂ ಇವಳು ದರ್ಶನೀಯಳಾಗಿರುತ್ತಾಳೆ.) ಬಹುಲಕ್ಷ್ಮಣಗಳಿಂದಿವಳು ಕೂಡಿದವಳಾಗಿರುತ್ತಾಳೆ. ಬಹುಸಂತಾನವನ್ನು ಪಡೆಯುವ ಸಾಮರ್ಥ್ಯವೂ ಇವಳಿಗಿದೆ.

---

ಸ್ವರಃ ಸತ್ತ್ವಂ ಚ ನಾಭಿಶ್ಚ ತ್ರಿಗಮ್ಭೀರಂ ಪ್ರಚಕ್ಷತೇ ।
ಪಾಣಿಪಾದತಲೇ ರಕ್ತೇ ನೇತ್ರಾನ್ತೌ ಚ ನಖಾನಿ ಚ ॥

ಎರಡು ನಿತಂಬಗಳು, ಹಣೆ, ಎರಡು ತೊಡೆಗಳು, ಮೂಗು–ಈ ಆರು ಅವಯವಗಳು ಸ್ತ್ರೀಯರಿಗೆ ಎತ್ತರವಾಗಿರಬೇಕು. ಬೆರಳಿನ ಗಿಣ್ಣುಗಳು, ತಲೆಗೂದಲು, ಶರೀರದ ರೋಮಗಳು, ಉಗುರು ಮತ್ತು ಚರ್ಮ–ಈ ಐದು ಬಹುಸೂಕ್ಷ್ಮವಾಗಿರಬೇಕು. ಸ್ವರ, ಅಂತಃಕರಣ ಮತ್ತು ನಾಭಿಪ್ರದೇಶ–ಈ ಮೂರು ಗಂಭೀರವಾಗಿರಬೇಕು. ಅಂಗೈಗಳು, ಅಂಗಾಲುಗಳು, ಕಣ್ಣುಗಳ ಅಂಚುಗಳು ಮತ್ತು ಉಗುರುಗಳು–ಈ ಐದು ರಕ್ತವರ್ಣವಾಗಿರಬೇಕು.

ಇದು ಒಬ್ಬ ಲಕ್ಷಣಜ್ಞರ ಅಭಿಪ್ರಾಯವಾಗಿದೆ. ಮತ್ತೊಬ್ಬ ಲಕ್ಷಣಜ್ಞರು ಹೀಗೆ ಹೇಳಿದ್ದಾರೆ : ಉನ್ನತವಾಗಿರಬೇಕಾದ ಆರು ಅವಯವಗಳು.

ಕರಪೃಷ್ಠಯೋಃ ಪಾದಪೃಷ್ಠಯೋಃ ಕುಚಯೋಶ್ಚ ।

ಎರಡು ಕೈಗಳ ಮೇಲ್ಭಾಗಗಳೂ, ಎರಡು ಕಾಲುಗಳ ಮೇಲ್ಭಾಗಗಳೂ ಮತ್ತು

**ಸಮರ್ಥೇಯಂ ಜನಯಿತುಂ ಚಕ್ರವರ್ತಿನಮಾತ್ಮಜಮ್ ।**
**ಬ್ರೂಹಿ ಶುಲ್ಕಂ ದ್ವಿಜಶ್ರೇಷ್ಠ ಸಮೀಕ್ಷ್ಯ ವಿಭವಂ ಮಮ ॥೪॥**

ಭೂಮಂಡಲಕ್ಕೆ ಚಕ್ರವರ್ತಿಯಾಗುವ ಮಗನನ್ನು ಇವಳು ಪ್ರಸವಿಸಲು ಸಮರ್ಥಳಾಗಿರುವಳು. ನನ್ನ ಐಶ್ವರ್ಯದ ಪರಿಮಿತಿಯನ್ನೂ ಗಣನೆಗೆ ತಂದುಕೊಂಡು ಕನ್ಯಾಶುಲ್ಕವೆಷ್ಟೆಂಬುದನ್ನು ಹೇಳು, ಗಾಲವ!"

(ಹರ್ಯಶ್ವನು ಸುಖೋಪಭೋಗಕ್ಕಾಗಿ ಮಾಧವಿಯನ್ನು ಅಪೇಕ್ಷಿಸಲಿಲ್ಲ. ಅವನ ಅಂತಃಪುರದಲ್ಲಿ ಸುಖೋಪಭೋಗಕ್ಕಾಗಿಯೇ ಅನೇಕ ಸುಂದರ ಸ್ತ್ರೀಯರಿದ್ದಿರಬಹುದು. ಆದರೆ ಸರ್ವಲಕ್ಷಣಸಂಪನ್ನೆಯಾದ ಮಾಧವಿಯನ್ನು ಹರ್ಯಶ್ವನು ಅಪೇಕ್ಷಿಸಿದುದು ಶ್ರೇಷ್ಠಸಂತಾನಕ್ಕಾಗಿ. ಜ್ಞಾನಿಗಳೂ, ವೀರರೂ, ಮೇಧಾವಿಗಳೂ ಸಾಧಾರಣಸ್ತ್ರೀಯೊಬ್ಬಳ ಗರ್ಭದಲ್ಲಿ ಹುಟ್ಟುವುದಿಲ್ಲ. ಸರ್ವಲಕ್ಷಣಸಂಪನ್ನೆಯಾದ ಸ್ತ್ರೀಯೊಡನೆ ಸರ್ವಲಕ್ಷಣಸಂಪನ್ನನಾದ ಸಕಲ ಗುಣಪರಿಪೂರ್ಣನಾದ ಪುರುಷನ ಯೋಗವಿದ್ದರೆ ಮಾತ್ರವೇ ಚಕ್ರವರ್ತಿ

---

ಎರಡು ಕುಚಗಳೂ ಉನ್ನತವಾಗಿರಬೇಕು. ಇದರಲ್ಲಿಯೇ ಪಾಠಭೇದವೂ ಈ ರೀತಿಯಾಗಿದೆ : ಸ್ತನಯೋರ್ನಿತಂಬಯೋಶ್ಚಕ್ಷುಷೋಶ್ಚ । ಎರಡು ಸ್ತನಗಳು, ಎರಡು ನಿತಂಬಗಳು ಮತ್ತು ಎರಡು ಕಣ್ಣಿನ ಹುಬ್ಬುಗಳು ಎತ್ತರವಾಗಿರಬೇಕು.

ಕಾಶೀಖಂಡದಲ್ಲಿ ಹೀಗೆ ಹೇಳಿದೆ.

**ವಕ್ಷಃ ಕುಕ್ಷ್ಯಲಕಸ್ಕನ್ಧಕರವಕ್ತ್ರಂ ಷಡುನ್ನತಮ್ ।**

ಸ್ತನಗಳು, ಹೊಟ್ಟೆ, ಮುಂಗುರುಳು, ಹೆಗಲುಗಳು, ಮುಂಗೈಗಳು, ಮುಖ–ಆರು ಉನ್ನತವಾಗಿರಬೇಕು.

ಸೂಕ್ಷ್ಮೇಷು ಸಪ್ತಸು–ಎಂಬ ಪಾಠಾಂತರದ ಪ್ರಕಾರ ಸೂಕ್ಷ್ಮವಾಗಿರಬೇಕಾದ ಅವಯವಗಳು ಏಳೆಂದು ಒಬ್ಬರು ನಿರೂಪಿಸಿದ್ದಾರೆ.

**ತ್ವಕ್ಕೇಶದಶನೇಷು ಕರಾಙ್ಗುಲೀಷು ತದುಭಯಪರ್ವಸು ಚ ಸೂಕ್ಷ್ಮಾ ।**

ಚರ್ಮ, ಕೂದಲು, ಹಲ್ಲುಗಳು, ಕೈಬೆರಳುಗಳು, ಕಾಲುಬೆರಳುಗಳು, ಕೈಬೆರಳುಗಳ ಗಿಣ್ಣುಗಳು ಮತ್ತು ಕಾಲುಬೆರಳುಗಳ ಗಿಣ್ಣುಗಳು–ಈ ಏಳು ಸೂಕ್ಷ್ಮವಾಗಿರಬೇಕಾದ ಅವಯವಗಳು. ಕೆಂಪಾಗಿರಬೇಕಾದ ಅವಯವಗಳು ಈ ಐದೆಂದು ಮತ್ತೊಬ್ಬರ ಅಭಿಪ್ರಾಯವಾಗಿದೆ.

ಪಾಣಿತಲೇ ನೇತ್ರಾನ್ತೇ ತಾಲುನಿ ಜಿಹ್ವಾಯಾಂ ಅಧರೋಷ್ಠೇ ಚ ರಕ್ತಾ ।

ಅಂಗೈಗಳು, ಎರಡು ಕಣ್ಣುಗಳ ಕಡೆಯಭಾಗ, ದವಡೆ, ನಾಲಿಗೆ ಮತ್ತು ಕೆಳದುಟಿ.

ಯಾಗತಕ್ಕ ಮಗನೂ, ಜ್ಞಾನಿಯೂ, ಮೇಧಾವಿಯೂ ಹುಟ್ಟಲು ಸಾಧ್ಯ. ದುಷ್ಯಂತನಿಗೆ ಶಕುಂತಲೆಯಿಂದ ಭರತಚಕ್ರವರ್ತಿಯು ಹುಟ್ಟಿದನು. ಅಂತಹ ಒಂದು ಶ್ರೇಷ್ಠಸಂತಾನವನ್ನು ಪಡೆಯುವ ಆಶಯದಿಂದ ಮಾತ್ರವೇ ಹರ್ಯಶ್ವನು ಮಾಧವಿಯನ್ನು ಕನ್ಯಾಶುಲ್ಕವನ್ನಾದರೂ ಕೊಟ್ಟು ಪಡೆದುಕೊಳ್ಳಲು ನಿಶ್ಚಯಿಸಿದನು.)

ಗಾಲವನು ಕನ್ಯಾಶುಲ್ಕವೆಷ್ಟೆಂಬುದನ್ನು ರಾಜನಿಗೆ ತಿಳಿಸಿದನು :

**ಏಕತಃ ಶ್ಯಾಮಕರ್ಣಾನಾಂ ಶತಾನ್ಯಷ್ಟೌ ಪ್ರಯಚ್ಛ ಮೇ ।**
**ಹಯಾನಾಂ ಚನ್ದ್ರಶುಭ್ರಾಣಾಂ ದೇಶಜಾನಾಂ ವಪುಷ್ಮತಾಮ್ ॥೫॥**

**ತತಸ್ತವ ಭವಿತ್ರೀಯಂ ಪುತ್ರಾಣಾಂ ಜನನೀ ಶುಭಾ ।**
**ಅರಣೀವ ಹುತಾಶಾನಾಂ ಯೋನಿರಾಯತಲೋಚನಾ ॥೬॥**

“ನೀನು ನನಗೆ ಎಂಟುನೂರು ಕುದುರೆಗಳನ್ನು ಕನ್ಯಾಶುಲ್ಕವನ್ನಾಗಿ ಕೊಡಬೇಕು. ಅವುಗಳು ಒಳ್ಳೆಯ ಜಾತಿಗೆ ಸೇರಿರಬೇಕು. ಹೃಷ್ಟ-ಪುಷ್ಟವಾಗಿರಬೇಕು. ಚಂದ್ರನಂತೆ ಶುಭ್ರವಾದ ಶರೀರಗಳನ್ನು ಹೊಂದಿರಬೇಕು. ಆದರೆ ಅವುಗಳ ಒಂದು ಕಿವಿಯು ಮಾತ್ರ ಕಪ್ಪಾಗಿರಬೇಕು. ಇಂತಹ ಲಕ್ಷಣಗಳುಳ್ಳ ಎಂಟು ನೂರು ಕುದುರೆಗಳನ್ನು ನೀನು ಕನ್ಯಾಶುಲ್ಕವಾಗಿ ಕೊಟ್ಟಪಕ್ಷದಲ್ಲಿ ಇವಳು ನಿನ್ನವಳಾಗುತ್ತಾಳೆ. ಅಗ್ನಿಗಳಿಗೆ ಪ್ರಕೃತಿರೂಪವಾದ ಅರಣಿಯಂತೆ–ಕಮಲನೇತ್ರೆಯಾದ ಈ ಮಾಧವಿಯು ನಿನ್ನ ಶ್ರೇಷ್ಠಸಂತಾನಕ್ಕೆ ಶುಭಪ್ರದೆಯಾದ ತಾಯಿಯಾಗುತ್ತಾಳೆ. (ಇವಳಲ್ಲಿ ಮಹಾತೇಜಸ್ವಿಗಳಾದ ಮಕ್ಕಳು ಹುಟ್ಟುತ್ತಾರೆ.)”

ಗಾಲವನ ಮಾತುಗಳನ್ನು ಕೇಳಿ ಪುತ್ರಕಾಮನೆಯಿಂದ ವಿಮೋಹಿತನಾದ ರಾಜರ್ಷಿಯಾದ ಹರ್ಯಶ್ವನು ದೀನವದನನಾಗಿ ಋಷಿಸತ್ತಮನಾದ ಗಾಲವನನ್ನು ಕುರಿತು ಹೇಳಿದನು :

“ಬ್ರಾಹ್ಮಣೋತ್ತಮ! ನೀನು ಯಾವ ಲಕ್ಷಣದ ಕುದುರೆಗಳನ್ನು ಅಪೇಕ್ಷಿಸಿರುವೆಯೋ–ಆ ಲಕ್ಷಣಗಳುಳ್ಳ ಕುದುರೆಗಳು ನನ್ನಲ್ಲಿ ಎರಡು ನೂರು ಮಾತ್ರವಿವೆ. ಇವುಗಳಲ್ಲದೇ ಅನೇಕಶತಸಂಖ್ಯಾಕವಾದ ಕುದುರೆ ಗಳೂ ನನ್ನ ಪಟ್ಟಣದಲ್ಲಿವೆ. ಆದರೆ ನೀನು ಅಪೇಕ್ಷಿಸಿರುವ ಎಂಟು ನೂರು

ಕುದುರೆಗಳನ್ನು ಕೊಡಲು ನನಗೆ ಸಾಧ್ಯವಿಲ್ಲ. ಆದುದರಿಂದ ನಾನು ಈ ಕನ್ಯಾರತ್ನವನ್ನು ನನ್ನವಳನ್ನಾಗಿಯೇ ಮಾಡಿಕೊಳ್ಳಲಾರೆನು. ನಿನಗೆ ಬೇಕಾದಷ್ಟು ಕುದುರೆಗಳು ನನ್ನಲ್ಲಿಲ್ಲದ ಕಾರಣದಿಂದ ಇವಳನ್ನು ಪರಿಗ್ರಹಿಸಲು ಸಾಧ್ಯ ವಿಲ್ಲವೆಂದೂ ಹೇಳಲಾರೆನು. ಇಂತಹ ಸರ್ವಲಕ್ಷಣಸಂಪನ್ನೆಯಾದ ಕನ್ಯೆಯಲ್ಲಿ ಒಂದೇ ಒಂದು ಸಂತಾನವನ್ನು ಪಡೆದುಕೊಳ್ಳುವ ಇಚ್ಛೆಯುಂಟಾಗಿದೆ. ನೀನು ದಯಮಾಡಿ ನನ್ನ ಶ್ರೇಷ್ಠವಾದ ಮನೋರಥವನ್ನು ಪೂರ್ಣಮಾಡಿಕೊಡು."

ಆ ಸಮಯದಲ್ಲಿ ಗಾಲವನಿಗೆ – 'ಏನು ಮಾಡಬೇಕು? ರಾಜನಿಗೆ ಏನೆಂದು ಹೇಳಬೇಕು?'– ಎಂಬುದೇ ತಿಳಿಯದಾಯಿತು. ಒಬ್ಬನಿಗೆ ಒಪ್ಪಿಸಿದ ಕನ್ಯೆಯನ್ನು ಪುನಃ ಪಡೆದುಕೊಳ್ಳುವುದು ಹೇಗೆ? ಪುನಃ ಪಡೆದುಕೊಳ್ಳದಿದ್ದರೆ ಮುಂದೆ ಉಳಿದ ಆರು ನೂರು ಕುದುರೆಗಳನ್ನು ಗುರುದಕ್ಷಿಣಾರ್ಥವಾಗಿ ಸಂಪಾದಿಸುವ ಮಾರ್ಗ ಯಾವುದಿದೆ? – ಇವೇ ಮುಂತಾಗಿ ಯೋಚಿಸುತ್ತಿದ್ದ ಗಾಲವನನ್ನು ನೋಡಿ, ರಾಜನ ಮಾತುಗಳನ್ನು ಗಾಲವನೊಡನೆಯೇ ಇದ್ದು ಕೇಳುತ್ತಿದ್ದ ಮಾಧವಿಯು ಅವನೊಡನೆ ಹೇಳಿದಳು :

**ಮಮ ದತ್ತೋ ವರಃ ಕಶ್ಚಿತ್ಕೇನಚಿದ್ಬ್ರಹ್ಮವಾದಿನಾ ।**
**ಪ್ರಸೂತ್ಯನ್ತೇ ಪ್ರಸೂತ್ಯನ್ತೇ ಕನ್ಯೈವ ತ್ವಂ ಭವಿಷ್ಯಸಿ ॥೧೧॥**

"ಬ್ರಾಹ್ಮಣೋತ್ತಮ! ರಾಜನು ಹೇಳಿದುದಕ್ಕೆ ನೀನು ಸ್ವಲ್ಪವಾದರೂ ಚಿಂತಿಸುವ ಕಾರಣವಿಲ್ಲ. ನನಗೆ ಒಬ್ಬಾನೊಬ್ಬ ಬ್ರಹ್ಮವಾದಿಯು ಒಂದು ಶ್ರೇಷ್ಠವಾದ ವರವನ್ನು ಕೊಟ್ಟಿದ್ದಾನೆ. 'ಪ್ರತಿಪ್ರಸವದ ಅಂತ್ಯದಲ್ಲಿಯೂ ನೀನು ಕನ್ಯೆಯಾಗಿಯೇ ಉಳಿಯುವೆ'– ಎಂಬುದೇ ಈ ವರವಾಗಿದೆ. ಆದುದರಿಂದ ಎರಡು ನೂರು ಕುದುರೆಗಳನ್ನು ಪಡೆದುಕೊಂಡು ರಾಜನಿಗೆ ನನ್ನನ್ನು ಕೊಡು. ರಾಜನ ಅಪೇಕ್ಷೆಯನ್ನು ಪೂರೈಸಿಕೊಟ್ಟು ಪುನಃ ಬ್ರಹ್ಮವಾದಿಯ ವರದಂತೆ ಕನ್ಯಾವಸ್ಥೆಯನ್ನು ಪಡೆದು ನಿನ್ನೊಡನೆ ಬರುವೆನು.

**ನೃಪೇಭ್ಯೋ ಹಿ ಚತುರ್ಭ್ಯಸ್ತೇ ಪೂರ್ಣಾನ್ಯಷ್ಟೌ ಶತಾನಿ ಚ ।**
**ಭವಿಷ್ಯನ್ತಿ ತಥಾ ಪುತ್ರಾ ಮಮ ಚತ್ವಾರ ಏವ ಚ ॥೧೨॥**

ಇದೇ ರೀತಿಯಲ್ಲಿ ನಾಲ್ವರು ರಾಜರಿಂದ ನೀನು ಎಂಟು ನೂರು ಕುದುರೆ ಗಳನ್ನು ಪಡೆಯಬಹುದಾಗಿದೆ. ನನಗೂ ನಾಲ್ವರು ರಾಜರಿಂದ ನಾಲ್ವರು

ಮಕ್ಕಳು ಹುಟ್ಟುತ್ತಾರೆ. ನೀನು ಈ ರೀತಿಯಾಗಿ ಗುರುದಕ್ಷಿಣೆಯನ್ನು ಸಂಗ್ರಹ ಮಾಡು. ಇಷ್ಟುಮಾತ್ರ ನನ್ನ ಬುದ್ಧಿಗೆ ತೋಚುತ್ತಿದೆ. ಇಷ್ಟರಮೇಲೆ ನೀನು ಹೇಗೆ ಮಾಡುವುದು ಯುಕ್ತವೆಂದು ಭಾವಿಸುವೆಯೋ ಹಾಗೆಯೇ ಮಾಡು."

ಮಾಧವಿಯು ಹೇಳಿದುದನ್ನು ಕೇಳಿದನಂತರ ಗಾಲವನು ಪೃಥಿವೀಪಾಲನಾದ ಹರ್ಯಶ್ವನನ್ನು ಕುರಿತು ಹೇಳಿದನು :

**ಇಯಂ ಕನ್ಯಾ ನರಶ್ರೇಷ್ಠ ಹರ್ಯಶ್ವ ಪ್ರತಿಗೃಹ್ಯತಾಮ್ ।**
**ಚತುರ್ಭಾಗೇನ ಶುಲ್ಕಸ್ಯ ಜನಯಸ್ವೈಕಮಾತ್ಮಜಮ್ ॥೧೫॥**

"ಹರ್ಯಶ್ವನೇ! ನಾಲ್ಕನೆಯ ಒಂದು ಭಾಗ ಕನ್ಯಾಶುಲ್ಕವನ್ನು (ಎರಡು ನೂರು ಕುದುರೆಗಳನ್ನು) ಕೊಟ್ಟು ನೀನು ಈ ಕನ್ಯೆಯನ್ನು ಪರಿಗ್ರಹಿಸು. ಇವಳಲ್ಲಿ ನೀನು ಒಬ್ಬ ಪುತ್ರನನ್ನು ಮಾತ್ರ ಪಡೆಯಬಹುದು."

ಗಾಲವನ ಮಾತನ್ನು ಕೇಳಿ ಹರ್ಯಶ್ವನು ಗಾಲವನನ್ನು ಅಭಿನಂದಿಸಿ ಮಾಧವಿಯನ್ನು ಪರಿಗ್ರಹಿಸಿ ಉಚಿತದೇಶ ಮತ್ತು ಕಾಲಗಳಲ್ಲಿ ತಾನಭಿಲಷಿಸಿದ ಪುತ್ರನನ್ನು ಮಾಧವಿಯಲ್ಲಿ ಪಡೆದನು.

**ತತೋ ವಸುಮನಾ ನಾಮ ವಸುಭ್ಯೋ ವಸುಮತ್ತರಃ ।**
**ವಸುಪ್ರಖ್ಯೋ ನರಪತಿಃ ಸ ಬಭೂವ ವಸುಪ್ರದಃ ॥೧೭॥**

ಹರ್ಯಶ್ವನಿಗೆ ಮಾಧವಿಯಲ್ಲಿ ಹುಟ್ಟಿದ ಆ ಪುತ್ರನು ವಸುಮನಸನೆಂಬ ಹೆಸರಿನಿಂದ ಪ್ರಖ್ಯಾತನಾದನು. ಅಷ್ಟವಸುಗಳಲ್ಲಿರುವ ಐಶ್ವರ್ಯಕ್ಕಿಂತಲೂ ಅಧಿಕವಾದ ಐಶ್ವರ್ಯವು ಅವನಲ್ಲಿದ್ದಿತು. 'ವಸು' ಎಂದು ವಿಖ್ಯಾತನಾಗಿದ್ದ ನರಪತಿಯು ಮುಕ್ತಹಸ್ತದಿಂದ ಸತ್ಪಾತ್ರರಲ್ಲಿ ಅಪಾರವಾದ ವಸು (ಐಶ್ವರ್ಯ) ವನ್ನು ದಾನಮಾಡುತ್ತಿದ್ದುದರಿಂದ ವಸುಪ್ರದನೆಂಬ ಅನ್ವರ್ಥನಾಮವನ್ನೂ ಪಡೆದುಕೊಂಡನು. (ಮಾಧವಿಯಲ್ಲಿ ಅಂತಹ ಶ್ರೇಷ್ಠವಾದ ಮೊದಲನೆಯ ಸಂತಾನವಾಯಿತು.)

ಸ್ವಲ್ಪ ಕಾಲಾನಂತರದಲ್ಲಿ ಧೀಮಂತನಾದ ಗಾಲವನು ಅಯೋಧ್ಯಾ ಪಟ್ಟಣಕ್ಕೆ ಆಗಮಿಸಿ ರಾಜನನ್ನು ಸಂಧಿಸಿ ಸುಪ್ರೀತನಾಗಿದ್ದ ರಾಜನಿಗೆ ಹೇಳಿದನು :

**ಜಾತೋ ನೃಪ ಸುತಸ್ತೇಽಯಂ ಬಾಲೋ ಭಾಸ್ಕರಸಂನಿಭಃ ।**
**ಕಾಲೋ ಗನ್ತುಂ ನರಶ್ರೇಷ್ಠ ಭಿಕ್ಷಾರ್ಥಮಪರಂ ನೃಪಮ್ ॥೧೯॥**

"ಮಹಾರಾಜ! ಸೂರ್ಯಸದೃಶತೇಜಸ್ವಿಯಾದ ಮಗನು ನಿನಗೆ ಹುಟ್ಟಿರುತ್ತಾನೆ. ಗುರುದಕ್ಷಿಣೆಯ ಭಿಕ್ಷೆಗಾಗಿ ಬೇರೊಬ್ಬ ರಾಜನಲ್ಲಿಗೆ ಹೋಗಲು ನನಗೂ ಕಾಲವು ಸನ್ನಿಹಿತವಾಗಿದೆ."

ಹರ್ಯಶ್ವನು ಮಹಾಪರಾಕ್ರಮಿಯಾಗಿದ್ದನು. ಸತ್ಯನಿಷ್ಠನೂ ಆಗಿದ್ದನು. ಅವನ ಪರಾಕ್ರಮವೆಷ್ಟೇ ಇದ್ದರೂ ಗಾಲವನಿಗೆ ಬೇಕಾಗಿದ್ದ ಉಳಿದ ಆರು ನೂರು ಕುದುರೆಗಳನ್ನು ಕೊಡುವುದು ಅವನಿಗೆ ದುಃಸಾಧ್ಯವಾಗಿದ್ದಿತು. ಅವುಗಳು ಅಷ್ಟು ಸುಲಭವಾಗಿ ಲಭ್ಯವಾಗತಕ್ಕುವುಗಳಾಗಿರಲಿಲ್ಲ. ಈ ಕಾರಣಗಳಿಂದಾಗಿ ಹರ್ಯಶ್ವನು ಮಾಧವಿಯನ್ನು ಗಾಲವನಿಗೆ ಒಪ್ಪಿಸಿಬಿಟ್ಟನು.

(ರಾಜನು ಕೇವಲ ಕಾಮುಕನಾಗಿ ಮಾಧವಿಯನ್ನು ಪರಿಗ್ರಹಿಸಲಿಲ್ಲ ವೆಂಬುದು ಇದರಿಂದಲೇ ಸ್ಪಷ್ಟವಾಗಿದೆ. ಮಾಧವಿಯೂ ಅವನೊಡನಿದ್ದಷ್ಟು ಕಾಲ ಚಕ್ರವರ್ತಿನಿಯಂತೆಯೇ ಇದ್ದಳು. ಅವಳಾದರೂ ರಾಜನನ್ನು ಬಿಟ್ಟು ಹೋಗುವುದಿಲ್ಲವೆಂದು ಹೇಳಬಹುದಾಗಿತ್ತು. ಆದರೆ ಸಾಧ್ವಿಯಾದ, ತಪಸ್ವಿನಿಯಾದ, ಯೋಗಿನಿಯಾದ, ಪ್ರಾಜ್ಞಳಾದ ಅವಳು ಹಾಗೆ ಮಾಡಲಿಲ್ಲ. ತನ್ನ ಕರ್ತವ್ಯವೇನೆಂಬುದನ್ನು ಚೆನ್ನಾಗಿ ಅರಿತುಕೊಂಡಿದ್ದಳು.)

**ಮಾಧವೀ ಚ ಪುನರ್ದೀಪ್ತಾಂ ಪರಿತ್ಯಜ್ಯ ನೃಪಶ್ರಿಯಮ್ ।**
**ಕುಮಾರೀ ಕಾಮತೋ ಭೂತ್ವಾ ಗಾಲವಂ ಪೃಷ್ಠತೋಽನ್ವಯಾತ್ ॥**

ಸಕಲಗುಣಸಂಪನ್ನಳಾದ ಮಾಧವಿಯೂ ಕೂಡ ಉಜ್ಜ್ವಲವಾಗಿದ್ದ ರಾಜ್ಯಲಕ್ಷ್ಮಿಯನ್ನೂ ಪರಿತ್ಯಜಿಸಿ (ಅನುಪಮವಾದ ರಾಜಭೋಗವನ್ನು ಕ್ಷಣಮಾತ್ರದಲ್ಲಿ ಪರಿತ್ಯಜಿಸಿ), ಬ್ರಹ್ಮವಾದಿಯ ವರವನ್ನು ಸ್ಮರಿಸಿ, ಸ್ವೇಚ್ಛೆ ಯಿಂದ ಪುನಃ ಕೌಮಾರ್ಯವನ್ನು (ಕನ್ಯಾವಸ್ಥೆಯನ್ನು) ಪಡೆದುಕೊಂಡವಳಾಗಿ ಗಾಲವನನ್ನೇ ಅನುಸರಿಸಿ ಹೊರಟಳು. ಗಾಲವನು 'ಕುದುರೆಗಳು ನಿನ್ನಲ್ಲಿಯೇ ಇರಲಿ' ಎಂಬುದಾಗಿ ಹರ್ಯಶ್ವನಿಗೆ ಹೇಳಿ ಕನ್ಯೆಯೊಡನೆ ಪ್ರಜೇಶ್ವರನಾದ ದಿವೋದಾಸನ ಸಮೀಪಕ್ಕೆ ಪ್ರಯಾಣಮಾಡಿದನು."

೧೧೬ನೆಯ ಅಧ್ಯಾಯವು ಮುಗಿಯಿತು.

## ದಿವೋದಾಸನು ಗಾಲವನಿಗೆ ಕನ್ಯಾಶುಲ್ಕವಾಗಿ ಎರಡು ನೂರು ಕುದುರೆಗಳನ್ನು ಕೊಟ್ಟು ಯಯಾತಿಯ ಮಗಳಾದ ಮಾಧವಿ ಯಲ್ಲಿ ಪ್ರತರ್ದನನೆಂಬ ಸುಪುತ್ರನನ್ನು ಪಡೆದುಕೊಂಡುದು

ಪ್ರಯಾಣಮಾಡುತ್ತಿದ್ದ ಕಾಲದಲ್ಲಿ ಗಾಲವನು ಮಾಧವಿಯೊಡನೆ ಹೇಳಿದನು :

"ಭದ್ರೇ! ಕಾಶೀರಾಜ್ಯಕ್ಕೆ ಅಧಿಪತಿಯಾದ, ಭೀಮಸೇನನ ಮಗನಾದ, ದಿವೋದಾಸನೆಂದು ವಿಖ್ಯಾತನಾದ ಮಹೀಪಾಲನೊಬ್ಬನಿದ್ದಾನೆ. ಅವನು ಮಹಾಪರಾಕ್ರಮಿಯು ; ಧಾರ್ಮಿಕನು ; ಸಂಯಮಿಯು ; ಸತ್ಯಪರಾಯಣನು. ನೀನು ಹರ್ಯಶ್ವನನ್ನು ಪರಿತ್ಯಜಿಸಿ ಬಂದುದಕ್ಕಾಗಿ ದುಃಖಿಸಬೇಡ. ಆಯಾಸಪಟ್ಟುಕೊಳ್ಳದೇ ಮೆಲ್ಲ-ಮೆಲ್ಲನೆ ಹೆಜ್ಜೆಯಿಡು. ಧಾರ್ಮಿಕನಾದ ದಿವೋದಾಸನಲ್ಲಿಗೆ ಹೋಗೋಣ."

ಇಬ್ಬರೂ ದಿವೋದಾಸನ ಅರಮನೆಗೆ ಹೋದರು. ಯಥಾನ್ಯಾಯವಾಗಿ ದಿವೋದಾಸನು ಗಾಲವನನ್ನು ಸತ್ಕರಿಸಿದನು. ಹಿಂದಿನಂತೆಯೇ, ಗಾಲವನು ಕನ್ಯಾಶುಲ್ಕವನ್ನು ಕೊಟ್ಟು ಮಾಧವಿಯನ್ನು ಪರಿಗ್ರಹಿಸುವಂತೆ ದಿವೋದಾಸನನ್ನು ಪ್ರಚೋದಿಸಿದನು.

ದಿವೋದಾಸನು ಗಾಲವನಿಗೆ ಉತ್ತರಿಸುತ್ತಾ ಹೇಳಿದನು :

"ಬ್ರಾಹ್ಮಣೋತ್ತಮ! ನಾನು ಈ ಎಲ್ಲ ವಿಷಯಗಳನ್ನೂ ಹಿಂದೆಯೇ ಕೇಳಿರುವೆನು. ಆದುದರಿಂದ ನೀನು ಪುನಃ ಅವೆಲ್ಲವನ್ನೂ ವಿಸ್ತರಿಸಿ ಹೇಳುವ ಅವಶ್ಯಕತೆಯೇನಿದೆ? ನಿನ್ನ ಮಾತನ್ನು ಕೇಳುತ್ತಲೇ ಇವಳಲ್ಲಿ ಒಬ್ಬ ಸುಪುತ್ರನನ್ನು ಪಡೆದುಕೊಳ್ಳಬೇಕೆನ್ನುವ ಅಭಿಲಾಷೆಯು ನನಗೂ ಮೂಡಿದೆ. ನೀನು ಇತರ ಅನೇಕರಾಜರನ್ನು ಬಿಟ್ಟು ನನ್ನ ಬಳಿಗೇ ಆಗಮಿಸಿರುವೆ. ಇದರಿಂದ ನಾನು ಬಹುಮಾನಿತನಾಗಿದ್ದೇನೆ. ಇದು ನಿಸ್ಸಂದೇಹವಾಗಿ ಹೀಗೆಯೇ ನಡೆಯಬೇಕಾಗಿದೆ.

ಆದರೆ, ಗಾಲವ! ಹರ್ಯಶ್ವನ ಹತ್ತಿರವಿರುವಷ್ಟೇ ಐಶ್ವರ್ಯವು ನನ್ನಲ್ಲಿಯೂ ಇದೆ. ಅವನಲ್ಲಿರುವಂತೆ ನನ್ನಲ್ಲಿಯೂ ಎರಡು ನೂರು ಶ್ಯಾಮ

ಕರ್ಣದ ಬಿಳಿಯ ಕುದುರೆಗಳಿವೆ. ಅವುಗಳನ್ನೇ ಕನ್ಯಾಶುಲ್ಕರೂಪವಾಗಿ ಕೊಟ್ಟು ನಾನೂ ಇವಳಲ್ಲಿ ಒಬ್ಬನೇ ಒಬ್ಬ ಮಗನನ್ನು ಪಡೆದುಕೊಳ್ಳುತ್ತೇನೆ. ಆಗಬಹುದಲ್ಲವೇ?”

ದಿವೋದಾಸನ ಮಾತುಗಳನ್ನು ಕೇಳಿದನಂತರ ಗಾಲವನು ಹಾಗೆಯೇ ಆಗಲೆಂದು ಹೇಳಿ ಮಹೀಪತಿಗೆ ಮಾಧವಿಯನ್ನು ಪ್ರದಾನಮಾಡಿದನು. ವಿಧಿಪೂರ್ವಕವಾಗಿ ಗಾಲವನಿಂದ ಆ ಕನ್ಯೆಯನ್ನು ದಿವೋದಾಸನು ಪರಿಗ್ರಹಿಸಿದನು.

(ದಿವೋದಾಸನು ಮಾಧವಿಯೊಡನೆ ಹೇಗೆ ರಮಿಸಿದನೆಂಬುದನ್ನು ವ್ಯಾಸರು ಅನೇಕ ಪವಿತ್ರಾತ್ಮರ ಹೋಲಿಕೆಗಳೊಡನೆ ಹೇಳಿರುತ್ತಾರೆ. ಪೂತಾತ್ಮರಾದ ಸತಿ-ಪತಿಯರ ನಾಮೋಚ್ಚಾರಣೆಯು ಪುಣ್ಯಪ್ರದವಾದುದರಿಂದ ಯಥಾವತ್ತಾಗಿಯೇ ಉದ್ಧರಿಸಲಾಗಿದೆ.)

ರೇಮೇ ಸ ತಸ್ಯಾಂ ರಾಜರ್ಷಿಃ ಪ್ರಭಾವತ್ಯಾಂ ಯಥಾ ರವಿಃ ।
ಸ್ವಾಹಾಯಾಂ ಚ ಯಥಾ ವಹ್ನಿರ್ಯಥಾ ಶಚ್ಯಾಂ ಚ ವಾಸವಃ ॥

ಯಥಾ ಚನ್ದ್ರಶ್ಚ ರೋಹಿಣ್ಯಾಂ ಯಥಾ ಧೂಮೋರ್ಣಯಾ ಯಮಃ ।
ವರುಣಶ್ಚ ಯಥಾ ಗೌರ್ಯಾಂ ಯಥಾ ಚರ್ದ್ಧ್ಯಾಂ ಧನೇಶ್ವರಃ ॥

ಯಥಾ ನಾರಾಯಣೋ ಲಕ್ಷ್ಮ್ಯಾಂ ಜಾಹ್ನವ್ಯಾಂ ಚ ಯಥೋದಧಿಃ ।
ಯಥಾ ರುದ್ರಶ್ಚ ರುದ್ರಾಣ್ಯಾಂ ಯಥಾ ವೇದ್ಯಾಂ ಪಿತಾಮಹಃ ॥

ಅದೃಶ್ಯನ್ತ್ಯಾಂ ಚ ವಾಸಿಷ್ಠೋ ವಸಿಷ್ಠಶ್ಚಾಕ್ಷಮಾಲಯಾ ।
ಚ್ಯವನಶ್ಚ ಸುಕನ್ಯಾಯಾಂ ಪುಲಸ್ತ್ಯಃ ಸಂಧ್ಯಯಾ ಯಥಾ ॥೧೧॥

ಅಗಸ್ತ್ಯಶ್ಚಾಪಿ ವೈದರ್ಭ್ಯಾಂ ಸಾವಿತ್ರ್ಯಾಂ ಸತ್ಯವಾನ್ಯಥಾ ।
ಯಥಾ ಭೃಗುಃ ಪುಲೋಮಾಯಾಮದಿತ್ಯಾಂ ಕಶ್ಯಪೋ ಯಥಾ ॥

ರೇಣುಕಾಯಾಂ ಯಥಾರ್ಚೀಕೋ ಹೈಮವತ್ಯಾಂ ಚ ಕೌಶಿಕಃ ।
ಬೃಹಸ್ಪತಿಶ್ಚ ತಾರಾಯಾಂ ಶುಕ್ರಶ್ಚ ಶತಪರ್ವಣಾ ॥೧೩॥

ಯಥಾ ಭೂಮ್ಯಾಂ ಭೂಮಿಪತಿರುರ್ವಶ್ಯಾಂ ಚ ಪುರೂರವಾಃ ।
ಋಚೀಕಃ ಸತ್ಯವತ್ಯಾಂ ಚ ಸರಸ್ವತ್ಯಾಂ ಯಥಾ ಮನುಃ ॥೧೪॥

**ಶಕುನ್ತಲಾಯಾಂ ದುಷ್ಯನ್ತೋ ಧೃತ್ಯಾಂ ಧರ್ಮಶ್ಚ ಶಾಶ್ವತಃ ।**
**ದಮಯನ್ತ್ಯಾಂ ನಲಶ್ಚೈವ ಸತ್ಯವತ್ಯಾಂ ಚ ನಾರದಃ ॥೧೫॥**

**ಜರತ್ಕಾರುರ್ಜರತ್ಕಾರ್ವಾಂ ಪುಲಸ್ತ್ಯಶ್ಚ ಪ್ರತೀಚ್ಯಯಾ ।**
**ಮೇನಕಾಯಾಂ ಯಥೋರ್ಣಾಯುಸ್ತುಮ್ಬುರುಶ್ಚೈವ ರಮ್ಭಯಾ ॥**
**ವಾಸುಕಿಃ ಶತಶೀರ್ಷಾಯಾಂ ಕುಮಾರ್ಯಾಂ ಚ ಧನಂಜಯಃ ।**
**ವೈದೇಹ್ಯಾಂ ಚ ಯಥಾ ರಾಮೋ ರುಕ್ಮಿಣ್ಯಾಂ ಚ ಜನಾರ್ದನಃ ॥**

ಸೂರ್ಯನು ಪ್ರಭಾವತಿಯೊಡನೆಯೂ, ಅಗ್ನಿದೇವನು ಸ್ವಾಹಾದೇವಿಯೊಡನೆಯೂ, ದೇವೇಂದ್ರನು ಶಚೀದೇವಿಯೊಡನೆಯೂ, ಚಂದ್ರನು ರೋಹಿಣಿಯೊಡನೆಯೂ, ಯಮರಾಜನು ಧೂಮೋರ್ಣೆಯೊಡನೆಯೂ, ವರುಣನು ಗೌರಿಯೊಡನೆಯೂ, ಕುಬೇರನು ಋದ್ಧಿಯೊಡನೆಯೂ, ನಾರಾಯಣನು ಲಕ್ಷ್ಮಿಯೊಡನೆಯೂ, ಸಮುದ್ರರಾಜನು ಗಂಗಾದೇವಿಯೊಡನೆಯೂ, ರುದ್ರದೇವನು ರುದ್ರಾಣಿಯೊಡನೆಯೂ, ಪಿತಾಮಹನು ವೇದಿಯೊಡನೆಯೂ, ವಸಿಷ್ಠರ ಮಗನಾದ ಶಕ್ತಿಯು ಅದೃಶ್ಯಂತಿಯೊಡನೆಯೂ, ವಸಿಷ್ಠರು ಅಕ್ಷಮಾಲೆ (ಅರುಂಧತಿ)ಯೊಡನೆಯೂ, ಚ್ಯವನನು ಸುಕನ್ಯೆಯೊಡನೆಯೂ, ಪುಲಸ್ತ್ಯನು ಸಂಧ್ಯಾದೇವಿಯೊಡನೆಯೂ, ಅಗಸ್ತ್ಯನು ವಿದರ್ಭರಾಜಕುಮಾರಿಯಾದ ಲೋಪಾಮುದ್ರೆಯೊಡನೆಯೂ, ಸತ್ಯವಾನನು ಸಾವಿತ್ರಿಯೊಡನೆಯೂ, ಭೃಗುಮುನಿಯು ಪುಲೋಮೆಯೊಡನೆಯೂ, ಕಶ್ಯಪನು ಅದಿತಿಯೊಡನೆಯೂ, ಜಮದಗ್ನಿಯು ರೇಣುಕೆಯೊಡನೆಯೂ, ಕುಶಿಕವಂಶಸಂಭೂತನಾದ ವಿಶ್ವಾಮಿತ್ರನು ಹೈಮವತಿಯೊಡನೆಯೂ, ಬೃಹಸ್ಪತಿಯು ತಾರೆಯೊಡನೆಯೂ, ಶುಕ್ರನು ಶತಪರ್ವೆಯೊಡನೆಯೂ, ಭೂಮಿಪತಿಯು ಭೂದೇವಿಯೊಡನೆಯೂ, ಪುರೂರವನು ಊರ್ವಶಿಯೊಡನೆಯೂ, ಋಚೀಕನು ಸತ್ಯವತಿಯೊಡನೆಯೂ, ಮನುವು ಸರಸ್ವತಿಯೊಡನೆಯೂ, ದುಷ್ಯಂತನು ಶಕುಂತಲೆಯೊಡನೆಯೂ, ಸನಾತನನಾದ ಧರ್ಮದೇವನು ಧೃತಿಯೊಡನೆಯೂ, ನಲನು ದಮಯಂತಿಯೊಡನೆಯೂ, ನಾರದನು ಸತ್ಯವತಿಯೊಡನೆಯೂ, ಜರತ್ಕಾರುಮುನಿಯು ನಾಗಕನ್ಯೆಯಾದ ಜರತ್ಕಾರುವಿನೊಡನೆಯೂ, ಪುಲಸ್ತ್ಯನು ಪ್ರತೀಚಿಯೊಡನೆಯೂ, ಊರ್ಣಾಯುವು ಮೇನಕೆಯೊಡನೆಯೂ, ತುಂಬುರುವು

ರಂಭೆಯೊಡನೆಯೂ, ವಾಸುಕಿಯು ಶತಶೀರ್ಷೆಯೊಡನೆಯೂ, ಸರ್ಪ ರಾಜನಾದ ಧನಂಜಯನು ಕುಮಾರಿಯೊಡನೆಯೂ, ಶ್ರೀರಾಮಚಂದ್ರನು ವೈದೇಹಿಯೊಡನೆಯೂ, ಜನಾರ್ದನನು ರುಕ್ಮಿಣಿಯೊಡನೆಯೂ ರಮಿಸಿದಂತೆ ದಿವೋದಾಸನು ಮಾಧವಿಯೊಡನೆ ರಮಿಸಿದನು.

ಹೀಗೆಯೇ ಕೆಲವುಕಾಲ ಮಾಧವಿಯೊಡನೆ ವಿಹರಿಸುತ್ತಿದ್ದ ದಿವೋದಾಸನಿಗೆ ಮಾಧವಿಯಲ್ಲಿ ಪ್ರತರ್ದನನೆಂಬ ಪುತ್ರನು ಹುಟ್ಟಿದನು.

ಕಾಲವು ಸನ್ನಿಹಿತವಾಗಲಾಗಿ ಪುನಃ ಭಗವಾನ್ ಗಾಲವನು ದಿವೋ ದಾಸನ ಬಳಿಗೆ ಬಂದು ಅವನನ್ನು ಕುರಿತು ಈ ಮಾತುಗಳನ್ನು ಹೇಳಿದನು :

"ದಿವೋದಾಸ! ಕನ್ಯೆಯನ್ನು ಹಿಂದಿರುಗಿಸು. ಕನ್ಯಾಶುಲ್ಕವಾಗಿ ಕೊಟ್ಟಿರುವ ಕುದುರೆಗಳು ನಿನ್ನಲ್ಲಿಯೇ ಇರಲಿ. ಉಳಿದ ಕುದುರೆಗಳಿಗಾಗಿ ನಾನೀಗ ಬೇರೊಬ್ಬ ರಾಜನ ಸಮೀಪಕ್ಕೆ ಹೋಗುತ್ತಿದ್ದೇನೆ."

ಧರ್ಮಾತ್ಮನಾದ ದಿವೋದಾಸನೂ ಸತ್ಯಪ್ರತಿಜ್ಞನಾಗಿದ್ದನು. ತಾನು ಕೊಟ್ಟ ಮಾತಿನಂತೆ ಗಾಲವನೊಡನೆ ಕನ್ಯೆಯನ್ನು ಕಳುಹಿಸಿಕೊಟ್ಟನು."

೧೧೭ನೆಯ ಅಧ್ಯಾಯವು ಮುಗಿಯಿತು.

೧೧೮ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ.)

## ಉಶೀನರರನು ಕನ್ಯಾಶುಲ್ಕವನ್ನು ಕೊಟ್ಟು ಮಾಧವಿಯನ್ನು ಪರಿಗ್ರಹಿಸಿ ಶಿಬಿ ಎಂಬ ಪುತ್ರನನ್ನು ಪಡೆದುದು: ಗಾಲವನು ಮಾಧವಿಯೊಡನೆ ಹೋಗುತ್ತಿರಲಾಗಿ ಮಾರ್ಗದಲ್ಲಿ ಪುನಃ ಗರುಡನನ್ನು ಕಂಡುದು

ನಾರದರು ಹೇಳುತ್ತಾರೆ :

"ದುರ್ಯೋಧನ! ಸತ್ಯಪಾಲನಾತತ್ಪರಳಾದ ಯಶಸ್ವಿನಿಯಾದ ಮಾಧವಿಯು ಹಿಂದಿನಂತೆಯೇ ಆಗಲೂ ದಿವೋದಾಸನ ರಾಜಲಕ್ಷ್ಮಿಯನ್ನೂ ಪರಿತ್ಯಜಿಸಿ, ಪುನಃ ಕನ್ಯಾವಸ್ಥೆಯನ್ನು ಬ್ರಹ್ಮವಾದಿಯ ಅನುಗ್ರಹದಿಂದ ಪಡೆದುಕೊಂಡು ವಿಪ್ರೋತ್ತಮನಾದ ಗಾಲವನನ್ನನುಸರಿಸಿ ಹೊರಟಳು.

ಗಾಲವನು ಸ್ವಕಾರ್ಯದ ಸಿದ್ಧಿಯ ವಿಷಯವಾಗಿ ಚಿಂತಿಸುತ್ತಲೇ ಪ್ರಯಾಣಮಾಡುತ್ತಾ ಉಶೀನರನನ್ನು ನೋಡುವ ಸಲುವಾಗಿ ಭೋಜನಗರಿಗೆ ಹೋದನು. ಸತ್ಯವಿಕ್ರಮನಾದ ಉಶೀನರನ ಬಳಿಗೆ ಹೋಗಿ ಅವನೊಡನೆ ಹೇಳಿದನು :

**ಇಯಂ ಕನ್ಯಾ ಸುತೌ ದ್ವೌ ತೇ ಜನಯಿಷ್ಯತಿ ಪಾರ್ಥಿವೌ ।**
**ಅಸ್ಯಾಂ ಭವಾನವಾಪ್ತೋರ್ಥೋ ಭವಿತಾ ಪ್ರೇತ್ಯ ಚೇಹ ಚ ।**
**ಸೋಮಾರ್ಕಪ್ರತಿಸಂಕಾಶೌ ಜನಯಿತ್ವಾ ಸುತೌ ನೃಪ ॥೪॥**

**ಶುಲ್ಕಂ ತು ಸರ್ವಧರ್ಮಜ್ಞ ಹಯಾನಾಂ ಚನ್ದ್ರವರ್ಚಸಾಮ್ ।**
**ಏಕತಃ ಶ್ಯಾಮಕರ್ಣಾನಾಂ ದೇಯಂ ಮಹ್ಯಂ ಚತುಃಶತಮ್ ॥**

“ಮಹಾರಾಜ! ಈ ಕನ್ಯೆಯು ಪೃಥ್ವಿಯನ್ನು ಶಾಸನಮಾಡಲು ಸಮರ್ಥರಾದ ಇಬ್ಬರು ಮಕ್ಕಳನ್ನು ನಿನ್ನಿಂದ ಪಡೆಯುತ್ತಾಳೆ. ಸೂರ್ಯ-ಚಂದ್ರರಿಗೆ ಸಮಾನವಾದ ತೇಜಸ್ಸಿನಿಂದ ಬೆಳಗುವ ಇಬ್ಬರು ಮಕ್ಕಳನ್ನು ಇವಳಲ್ಲಿ ಪಡೆದು ಈ ಲೋಕದಲ್ಲಿಯೂ ಮತ್ತು ಪರಲೋಕ ದಲ್ಲಿಯೂ ಪೂರ್ಣಕಾಮನಾಗುವೆ. ಆದರೆ ಇವಳನ್ನು ನೀನು ಪಡೆದು ಕೊಳ್ಳಬೇಕಾದರೆ ಕನ್ಯಾಶುಲ್ಕವನ್ನು ಕೊಡಬೇಕು. ಸರ್ವಧರ್ಮಜ್ಞನೇ! ಚಂದ್ರನಿಗೆ ಸಮಾನವಾದ ವರ್ಚಸ್ಸುಳ್ಳ (ಶರೀರಕಾಂತಿಯಿಂದ ಕೂಡಿರುವ) ಮತ್ತು ಒಂದು ಕಿವಿ ಮಾತ್ರವೇ ಕಪ್ಪಾಗಿರುವ ನಾಲ್ಕುನೂರು ಕುದುರೆಗಳನ್ನು ನೀನು ಕನ್ಯಾಶುಲ್ಕವನ್ನಾಗಿ ನನಗೆ ಕೊಡಬೇಕು.

ಮೇಲಾಗಿ, ಮಹಾರಾಜ! ಈ ಕುದುರೆಗಳನ್ನು ನನ್ನ ಉಪಯೋಗಕ್ಕಾಗಿ ಕೇಳುತ್ತಿಲ್ಲ. ಇವುಗಳಿಂದ ನನಗಾವ ಪ್ರಯೋಜನವೂ ಇಲ್ಲ. ನಾನು ಅಶ್ವರೂಪವಾದ ಗುರುದಕ್ಷಿಣೆಯನ್ನು ಕೊಡಬೇಕಾಗಿದೆ. ಅದಕ್ಕಾಗಿ ನಾನು ಪ್ರಯತ್ನಮಾಡುತ್ತಿದ್ದೇನೆ. ನಿನಗೇನಾದರೂ ನಾನು ಹೇಳಿದ ಲಕ್ಷಣಗಳಿಂದ ಕೂಡಿದ ನಾಲ್ಕು ನೂರು ಕುದುರೆಗಳನ್ನು ಕೊಡುವ ಸಾಧ್ಯತೆಯಿದ್ದರೆ ಬೇರೆ ಯಾವ ವಿಷಯವನ್ನೂ ವಿಚಾರಿಸಹೋಗದೇ ಇವಳನ್ನು ಪರಿಗ್ರಹಿಸು.

ಮಹಾರಾಜ! ಮೇಲಾಗಿ ನೀನು ಅಪುತ್ರವಂತನೂ ಆಗಿರುವೆ. ಆದುದರಿಂದ ನಾನು ಹೇಳಿದಂತೆ ಈ ಮಾಧವಿಯಲ್ಲಿ ಇಬ್ಬರು ಮಕ್ಕಳನ್ನು

ಪಡೆಯುವೆ. ಪುತ್ರರೆಂಬ ನಾವೆಯ ಮೂಲಕವಾಗಿ ನಿನ್ನ ಪಿತೃಗಳನ್ನು 'ಪುತ್' ಎಂಬ ನರಕದಿಂದ ಪಾರುಮಾಡು ಮತ್ತು ಇದರಿಂದ ನೀನೂ ಪುನ್ನಾಮನರಕಕ್ಕೆ ಹೋಗುವುದನ್ನು ತಪ್ಪಿಸಿಕೊಳ್ಳಬಹುದು.

**ನ ಪುತ್ರಫಲಭೋಕ್ತಾ ಚ ರಾಜರ್ಷೇ ಪಾತ್ಯತೇ ದಿವಃ ।**
**ನ ಯಾತಿ ನರಕಂ ಘೋರಂ ಯಥಾ ಗಚ್ಛನ್ತ್ಯನಾತ್ಮಜಾಃ ॥೮॥**

ಪುತ್ರೋತ್ಪತ್ತಿಯಿಂದ ಲಭ್ಯವಾಗುವ ಪುಣ್ಯಫಲವನ್ನು ಉಪಭುಂಜಿಸುವವನು ಸ್ವರ್ಗದಿಂದ ಎಂದಿಗೂ ಚ್ಯುತನಾಗುವುದಿಲ್ಲ. ಸಂತಾನಹೀನರಾದವರು ಯಾವ ರೀತಿಯಲ್ಲಿ ನರಕದಲ್ಲಿ ಬೀಳುತ್ತಾರೆಯೋ ಆ ರೀತಿಯಲ್ಲಿ ಪುತ್ರವಂತನು ನರಕಕ್ಕೆ ಹೋಗುವುದಿಲ್ಲ."

ಇವೇ ಮುಂತಾಗಿ ನಾನಾಪ್ರಕಾರವಾಗಿ ಹೇಳಿದ ಗಾಲವನ ಮಾತುಗಳನ್ನು ಕೇಳಿ ನರಾಧಿಪನಾದ ಉಶೀನರನು ಗಾಲವನಿಗೆ ಪ್ರತ್ಯುತ್ತರವನ್ನಿತ್ತನು :

"ಗಾಲವ! ನೀನು ಹೇಳಿದುದೆಲ್ಲವನ್ನೂ ಯಥಾವತ್ತಾಗಿ ಕೇಳಿರುತ್ತೇನೆ. ಬ್ರಾಹ್ಮಣೋತ್ತಮ! ವಿಧಿಯು ಬಲವತ್ತರವಾದುದು. ವಿಧಿನಿಯಮವನ್ನು ಉಲ್ಲಂಘಿಸಲು ಯಾರಿಂದಲೂ ಸಾಧ್ಯವಿಲ್ಲ. ಇದ್ದಕ್ಕಿದ್ದಂತೆಯೇ ನನ್ನ ಮನಸ್ಸು ಈ ಕನ್ಯೆಯಲ್ಲಿ ಮಕ್ಕಳನ್ನು ಪಡೆದುಕೊಳ್ಳಬೇಕೆಂದು ತವಕಿಸುತ್ತಿದೆ. ಆದರೆ ನೀನು ಹೇಳಿದ ಲಕ್ಷಣಗಳುಳ್ಳ ಕುದುರೆಗಳು ನನ್ನಲ್ಲಿ ಎರಡು ನೂರು ಮಾತ್ರವೇ ಇವೆ. ನಾಲ್ಕು ನೂರು ಕುದುರೆಗಳು ನನ್ನಲ್ಲಿಲ್ಲ. ಆದರೆ ಬೇರೆಯ ಲಕ್ಷಣಗಳುಳ್ಳ ಕುದುರೆಗಳು ಸಹಸ್ರಸಂಖ್ಯೆಯಲ್ಲಿ ನನ್ನ ರಾಜಧಾನಿಯ ಸುತ್ತಲೂ ಸಂಚರಿಸುತ್ತಿವೆ. ಆದುದರಿಂದ ನನ್ನಲ್ಲಿರುವ ಎರಡು ನೂರು ಕುದುರೆಗಳನ್ನೇ ಕನ್ಯಾಶುಲ್ಕವನ್ನಾಗಿ ಕೊಟ್ಟು ಇವಳಲ್ಲಿ ನಾನು ಒಬ್ಬನೇ ಒಬ್ಬ ಮಗನನ್ನು ಪಡೆದುಕೊಳ್ಳುತ್ತೇನೆ. ಹಿಂದಿನ ಇಬ್ಬರು ಹೇಗೆ ನಡೆದುಕೊಂಡರೋ ಹಾಗೆಯೇ ನಾನೂ ನಡೆದುಕೊಳ್ಳುತ್ತೇನೆ. ಉಳಿದ ಎರಡು ನೂರು ಕುದುರೆಗಳ ಮೌಲ್ಯವನ್ನಾದರೂ ಕೊಟ್ಟು ನಾನಿವಳಲ್ಲಿ ಇಬ್ಬರು ಮಕ್ಕಳನ್ನೇ ಪಡೆಯಬಹುದಾಗಿದ್ದಿತು. ಆದರೆ :

**ಪೌರಜಾನಪದಾರ್ಥಂ ತು ಮಮಾರ್ಥೋ ನಾತ್ಮಭೋಗತಃ ॥೧೩॥**

ನನ್ನಲ್ಲಿರುವ ಐಶ್ವರ್ಯವು–ನನ್ನ ದೇಶದಲ್ಲಿರುವ ಪ್ರಜೆಗಳ ಸಲುವಾಗಿರುವುದೇ ಹೊರತು–ನಾನು ಉಪಭೋಗಿಸುವ ಸಲುವಾಗಿ ಇರುವುದಿಲ್ಲ. ಇರುವ ಐಶ್ವರ್ಯವನ್ನು ಪ್ರಜೆಗಳ ಹಿತಕ್ಕಾಗಿಯೇ ವೆಚ್ಚಮಾಡುವುದು ನನ್ನ ಕರ್ತವ್ಯವಾಗಿರುತ್ತದೆ. ಆತ್ಮಹಿತಕ್ಕಾಗಿ, ಆತ್ಮೋಪ ಭೋಗಕ್ಕಾಗಿ ಬೊಕ್ಕಸದ ಹಣವನ್ನು ವೆಚ್ಚಮಾಡಬಾರದು.

**ಕಾಮತೋ ಹಿ ಧನಂ ರಾಜಾ ಪಾರಕ್ಯಂ ಯಃ ಪ್ರಯಚ್ಛತಿ ।**
**ನ ಸ ಧರ್ಮೇಣ ಧರ್ಮಾತ್ಮನ್ಯುಜ್ಯತೇ ಯಶಸಾ ನ ಚ ॥೧೪॥**

ಧರ್ಮಾತ್ಮನೇ! ಯಾವನು ಇತರರಿಗೆ ಸೇರಿದ ಐಶ್ವರ್ಯವನ್ನು ತನ್ನ ಸುಖಕ್ಕಾಗಿ ಸ್ವೇಚ್ಛೆಯಿಂದ ವೆಚ್ಚಮಾಡುತ್ತಾನೆಯೋ–ಅಂತಹವನು ಧರ್ಮ ದಿಂದಾಗಲೀ–ಯಶಸ್ಸಿನಿಂದಾಗಲೀ ಯುಕ್ತನಾಗುವುದಿಲ್ಲ. (ಅಂತಹವನಿಗೆ ಯಶೋಧರ್ಮಗಳು ಲಭಿಸಲಾರವು.)

ದೇವಕನ್ಯೆಗೆ ಸಮಾನವಾದ ಸೌಂದರ್ಯವುಳ್ಳ ಈ ಕುಮಾರಿಯನ್ನು ಒಬ್ಬನೇ ಒಬ್ಬ ಸುಪುತ್ರನನ್ನು ಪಡೆದುಕೊಳ್ಳುವ ಸಲುವಾಗಿ ನನಗೆ ನೀನು ಕೊಡು. ಹಾಗೆ ಕೊಡುವುದಾದರೆ ಮಾತ್ರವೇ ನಾನಿವಳನ್ನು ಪರಿಗ್ರಹಿಸುತ್ತೇನೆ."

ಈ ಪ್ರಕಾರವಾಗಿ ಪದೇ-ಪದೇ ನ್ಯಾಯಯುಕ್ತವಾದ ಮಾತುಗಳನ್ನೇ ಆಡುತ್ತಿದ್ದ ಉಶೀನರನನ್ನು ದ್ವಿಜಶ್ರೇಷ್ಠನಾದ ಗಾಲವನು ಬಹುವಾಗಿ ಪ್ರಶಂಸಿಸಿದನು. ಉಶೀನರನಿಗೆ ಕನ್ಯೆಯನ್ನು ಪ್ರದಾನಮಾಡಿ ಗಾಲವನು ಅರಣ್ಯಕ್ಕೆ ತೆರಳಿದನು.

ಪುಣ್ಯಮಾಡಿದವನು ಸಂಪತ್ತನ್ನು ಪಡೆಯುವಂತೆ–ಉಶೀನರನು ಮಾಧವಿ ಯನ್ನು ಪಡೆದುಕೊಂಡು ಅವಳೊಡನೆ ಆನಂದದಿಂದ ಕಾಲಕಳೆಯುತ್ತಿದ್ದನು. ಪರ್ವತಗಳ ಕಂದರಗಳಲ್ಲಿ, ನದಿಗಳ ಸುರಮ್ಯವಾದ ತೀರಪ್ರದೇಶಗಳಲ್ಲಿ, ಚಿತ್ರವಾದ ಉದ್ಯಾನವನಗಳಲ್ಲಿ, ವನಗಳಲ್ಲಿ, ಉಪವನಗಳಲ್ಲಿ ರಮ್ಯವಾದ ಪ್ರಾಸಾದಗಳಲ್ಲಿ, ಪ್ರಾಸಾದಗಳ ಉಪ್ಪರಿಗೆಗಳಲ್ಲಿ, ವಾಯುಮಾರ್ಗದಲ್ಲಿ ಸಂಚರಿಸುವ ವಿಮಾನಗಳಲ್ಲಿ, ಗರ್ಭಗೃಹಗಳಲ್ಲಿ–ಉಶೀನರನು ಮಾಧವಿ ಯೊಡನೆ ವಿಹರಿಸುತ್ತಿದ್ದನು. ಕಾಲಾನುಕ್ರಮದಲ್ಲಿ ಉಶೀನರನಿಗೆ ಮಾಧವಿ

ಯಲ್ಲಿ ಒಬ್ಬ ಮಗನು ಹುಟ್ಟಿದನು. ಅವನು ಬಾಲಸೂರ್ಯನಂತೆ ಹೆಚ್ಚು ಪ್ರಕಾಶಮಾನನಾಗಿದ್ದನು. ಪಾರ್ಥಿವಸತ್ತಮನಾದ ಅವನು ಶಿಬಿ ಎಂಬ ಹೆಸರಿನಿಂದ ವಿಶ್ವದಲ್ಲಿ ವಿಖ್ಯಾತನಾದನು.

ಉಶೀನರನಿಗೆ ಮಾಧವಿಯಲ್ಲಿ ಪುತ್ರನೊಬ್ಬನು ಹುಟ್ಟಿದ ಸಮಾಚಾರವು ತಿಳಿದೊಡನೆಯೇ ಗಾಲವನು ರಾಜನ ಆಸ್ಥಾನಕ್ಕೆ ಆಗಮಿಸಿ ಮಾಧವಿಯನ್ನು ಉಶೀನರನಿಂದ ಪಡೆದುಕೊಂಡು ಮುಂದೆ ಪ್ರಯಾಣಮಾಡುತ್ತಿದ್ದಾಗ ವಿನತಾತ್ಮಜನಾದ ಸುಪರ್ಣನನ್ನು ಕಂಡನು."

೧೧೮ನೆಯ ಅಧ್ಯಾಯವು ಮುಗಿಯಿತು.

೧೧೯ನೆಯಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ

## ಗಾಲವನು ಆರು ನೂರು ಕುದುರೆಗಳೊಡನೆ ಮಾಧವಿಯನ್ನೂ ವಿಶ್ವಾಮಿತ್ರನಿಗರ್ಪಿಸಿದುದು: ವಿಶ್ವಾಮಿತ್ರನು ಅವಳಲ್ಲಿ ಅಷ್ಟಕನೆಂಬ ಪುತ್ರನನ್ನು ಪಡೆದುದು: ಅನಂತರದಲ್ಲಿ ಮಾಧವಿಯು ಪುನಃ ಕನ್ಯಾವಸ್ಥೆಯನ್ನು ಹೊಂದಿ ಯಯಾತಿಯ ಬಳಿಗೆ ಸಾರಿದುದು

ನಾರದರು ಹೇಳುತ್ತಾರೆ :

"ಸುಯೋಧನ! ಸುಪರ್ಣನು ಗಾಲವನನ್ನು ನೋಡಿದೊಡನೆಯೇ ನಸುನಗುತ್ತಾ ಹೇಳಿದನು :

**ದಿಷ್ಟ್ಯಾ ಕೃತಾರ್ಥಂ ಪಶ್ಯಾಮಿ ಭವನ್ತಮಿಹ ವೈ ದ್ವಿಜ ॥೧॥**

"ದ್ವಿಜನೇ! ಸೌಭಾಗ್ಯವಶದಿಂದ ಕಾರ್ಯಸಿದ್ಧಿಯನ್ನು ಹೊಂದಿರುವ ನಿನ್ನನ್ನು ನಾನಿಲ್ಲಿ ಕಾಣುತ್ತಿದ್ದೇನೆ."

ವೈನತೇಯನು ಹೇಳಿದ ಮಾತನ್ನು ಕೇಳಿ ಗಾಲವನು ಯಾಥಾತಥ್ಯವಾಗಿ ಉತ್ತರಿಸಿದನು :

"ನಾಲ್ಕನೆಯ ಒಂದು ಭಾಗ ಕಾರ್ಯವು ಮಾತ್ರ ಉಳಿದಿದೆ. ಅದನ್ನು ಈಗ ಪೂರ್ಣಗೊಳಿಸಬೇಕಾಗಿದೆ."

ವಾಗ್ಮಿಗಳಲ್ಲಿ ಶ್ರೇಷ್ಠನಾದ ಗರುಡನು ಗಾಲವನನ್ನು ಕುರಿತು ಹೇಳಿದನು : "ವಯಸ್ಯ! ಉಳಿದಿರುವ ಒಂದು ಭಾಗಕ್ಕಾಗಿ ನೀನು ಪ್ರಯತ್ನಪಡಬೇಡ. ಅದು ಖಂಡಿತವಾಗಿಯೂ ಸಫಲವಾಗತಕ್ಕುದಲ್ಲ. ಅದರ ಕಾರಣವನ್ನು ಹೇಳುವೆನು ; ಕೇಳು :

ಹಿಂದೆ ಕಾನ್ಯಕುಬ್ಜದೇಶದಲ್ಲಿ ಗಾಧಿ ಎಂದು ರಾಜನಿದ್ದನು. ಅವನಿಗೆ ಸತ್ಯವತೀ ಎಂಬ ಮಗಳಿದ್ದಳು. ಅವಳನ್ನು ಪತ್ನಿಯನ್ನಾಗಿ ಮಾಡಿಕೊಳ್ಳಲು ಋಚೀಕನು ಗಾಧಿಯನ್ನು ಪ್ರಾರ್ಥಿಸಿದನು. ಆಗ ಗಾಧಿಯು ಋಚೀಕನೊಡನೆ ಹೀಗೆಂದು ಹೇಳಿದನು :

**ಏಕತಃ ಶ್ಯಾಮಕರ್ಣಾನಾಂ ಹಯಾನಾಂ ಚನ್ದ್ರವರ್ಚಸಾಮ್ ।**
**ಭಗವನ್ದೀಯತಾಂ ಮಹ್ಯಂ ಸಹಸ್ರಮಿತಿ ಗಾಲವ ॥೫॥**

"ಭಗವನ್! ಚಂದ್ರನಿಗೆ ಸಮಾನವಾದ ಕಾಂತಿಯಿಂದ ಕೂಡಿರುವ, ಒಂದು ಕಿವಿಯು ಮಾತ್ರ ಕಪ್ಪಾಗಿರುವ ಒಂದು ಸಾವಿರ ಕುದುರೆಗಳನ್ನು ಕನ್ಯಾಶುಲ್ಕವಾಗಿ ಕೊಟ್ಟು ಈ ನನ್ನ ಮಗಳನ್ನು ನೀನು ಮದುವೆಮಾಡಿಕೊಳ್ಳಬಹುದು."

ಋಚೀಕನು ಹಾಗೆಯೇ ಆಗಲೆಂದು ಹೇಳಿ ವರುಣನ ಲೋಕಕ್ಕೆ ಹೋಗಿ ಅಲ್ಲಿದ್ದ ಅಶ್ವತೀರ್ಥದಿಂದ ಅಂತಹ ಲಕ್ಷಣಗಳಿದ್ದ ಸಾವಿರ ಕುದುರೆಗಳನ್ನು ತಂದು ಗಾಧಿಗೆ ಕೊಟ್ಟನು. ಮುಂದೆ ಗಾಧಿಯು ಪುಂಡರೀಕವೆಂಬ ಯಜ್ಞವನ್ನು ಮಾಡಿ ಆ ಕುದುರೆಗಳನ್ನು ಬ್ರಾಹ್ಮಣರಿಗೆ ದಕ್ಷಿಣಾರೂಪವಾಗಿ ಕೊಟ್ಟುಬಿಟ್ಟನು. ಅದೇ ಸಮಯದಲ್ಲಿ ಮೂವರು ರಾಜರು ಒಬ್ಬೊಬ್ಬರೂ ಎರಡೆರಡು ನೂರರಂತೆ ಬ್ರಾಹ್ಮಣರಿಂದ ಕುದುರೆಗಳನ್ನು ಕೊಂಡುಕೊಂಡರು. ಉಳಿದ ನಾಲ್ಕು ನೂರು ಕುದುರೆಗಳು ವಿತಸ್ತಾನದಿ(ಬಿಯಾಸ್)ಯನ್ನು ದಾಟುತ್ತಿರುವಾಗ ಮಧ್ಯಮಾರ್ಗದಲ್ಲಿ ನದಿಯ ಪ್ರವಾಹಕ್ಕೆ ಸಿಕ್ಕಿ ಕೊಚ್ಚಿಹೋದುವು. ಗಾಲವ! ಆದುದರಿಂದ ಈ ಆರುನೂರು ಕುದುರೆಗಳನ್ನು ಬಿಟ್ಟು ಇದೇ ಲಕ್ಷಣವಿರುವ ಕುದುರೆಗಳು ಖಂಡಿತವಾಗಿಯೂ ಸಿಕ್ಕುವುದಿಲ್ಲ. ಇಲ್ಲದಿರುವ ವಸ್ತುವನ್ನು ಹೊಂದಲು ಎಲ್ಲಿಯೂ ಸಾಧ್ಯವಿಲ್ಲ. ಇದರಿಂದಾಗಿ ನಿನ್ನ ಮುಂದಿನ ಪ್ರಯತ್ನವು ಖಂಡಿತವಾಗಿಯೂ ವ್ಯರ್ಥವಾಗುವುದು. ಆದರೆ

ನೀನು ಇದರಿಂದ ನಿರಾಶನಾಗುವ ಕಾರಣವಿಲ್ಲ. ಎರಡು ನೂರು ಕುದುರೆಗಳಿಗೆ ಇವಳಲ್ಲಿ ಒಬ್ಬ ಮಗನನ್ನು ಪಡೆದುಕೊಳ್ಳಬಹುದೆಂದು ಕನ್ಯಾಶುಲ್ಕವನ್ನು ವಿಧಿಸಿದ್ದಾಗಿದೆ. ಆದುದರಿಂದ ಈಗ ಇವಳ ಮೂಲಕವಾಗಿ ಮೂವರಿಂದ ಲಬ್ಧವಾಗಿರುವ ಆರುನೂರು ಕುದುರೆಗಳನ್ನೂ ಮತ್ತು ಇವಳನ್ನೂ ವಿಶ್ವಾಮಿತ್ರನಿಗೇ ಒಪ್ಪಿಸಿಬಿಡು. ಬಳಿಕ ನೀನು ದುಗುಡವನ್ನು ತೊರೆದು ಕೃತಕೃತ್ಯನಾಗುವೆ."

ಗಾಲವನಿಗೂ ಬೇರೆ ಯಾವ ಮಾರ್ಗವೂ ತೋರಲಿಲ್ಲ. ಸುಪರ್ಣನು ಹೇಳಿದುದಕ್ಕೆ 'ತಥಾಸ್ತು' ಎಂದು ಒಪ್ಪಿಗೆಯನ್ನಿತ್ತು, ಸುಪರ್ಣನನ್ನೂ ಜೊತೆಯಲ್ಲಿಯೇ ಕರೆದುಕೊಂಡು, ಮೂವರು ರಾಜರಿಂದ ಆರುನೂರು ಅಶ್ವಗಳನ್ನೂ ಸಂಗ್ರಹಿಸಿಕೊಂಡವನಾಗಿ ಕನ್ಯಾಸಮೇತನಾಗಿ ವಿಶ್ವಾಮಿತ್ರನ ಬಳಿಗೆ ಹೋದನು.

ಮಹಾತ್ಮನಾದ ವಿಶ್ವಾಮಿತ್ರನನ್ನು ಸಂದರ್ಶಿಸಿ ಅವನನ್ನು ಕುರಿತು ಹೇಳಿದನು :

"ಗುರುದೇವ! ನೀನು ಹೇಳಿದ ರೂಪಲಕ್ಷಣಗಳುಳ್ಳ ಆರು ನೂರು ಕುದುರೆಗಳು ದಕ್ಷಿಣಾರೂಪದಲ್ಲಿ ಸಿದ್ಧವಾಗಿವೆ. ಅವುಗಳನ್ನು ನೀನು ಪರಿಗ್ರಹಿಸು. ಉಳಿದ ಇನ್ನೂರು ಕುದುರೆಗಳಿಗೆ ಪ್ರತಿಯಾಗಿ ಇವಳನ್ನು ಪ್ರತಿಗ್ರಹಿಸು.

ಯಯಾತಿಯ ಮಗಳಾದ ಇವಳಲ್ಲಿ ಮೂವರು ರಾಜರ್ಷಿಗಳಿಂದ ಮೂವರು ಧರ್ಮಾತ್ಮರಾದ ಮಕ್ಕಳು ಹುಟ್ಟಿರುತ್ತಾರೆ. ನೀನೂ ಇವಳಲ್ಲಿ ನಾಲ್ಕನೆಯ ನರೋತ್ತಮನನ್ನು ಪಡೆದುಕೋ. ಇವಳನ್ನು ನೀನು ಪಡೆದುಕೊಳ್ಳುವುದರಿಂದ ಎಂಟುನೂರು ಕುದುರೆಗಳನ್ನೂ ಪೂರ್ಣವಾಗಿ ನಿನಗೆ ಕೊಟ್ಟಂತಾಗುತ್ತದೆ. ನಾನು ನಿನ್ನ ಗುರುದಕ್ಷಿಣಾರೂಪವಾದ ಋಣದಿಂದ ಮುಕ್ತನಾಗಿ ಸುಖದಿಂದ ನಿಶ್ಚಿಂತನಾಗಿ ತಪಸ್ಸು ಮಾಡುತ್ತೇನೆ."

ವಿಶ್ವಾಮಿತ್ರನು ಸುಪರ್ಣನೊಡನಿದ್ದ ಗಾಲವನನ್ನೂ, ಪರಮಸುಂದರಿಯಾದ ಕನ್ಯೆಯನ್ನೂ ನೋಡಿ ಈ ಮಾತುಗಳನ್ನು ಹೇಳಿದನು :

"ಗಾಲವ! ನೀನು ಮೊದಲೇ ಇವಳನ್ನು ನನ್ನ ಬಳಿಗೇಕೆ ಕರೆತರಲಿಲ್ಲ?

ವಂಶಪ್ರವರ್ತಕರಾದ ನಾಲ್ವರು ಮಕ್ಕಳನ್ನು ನಾನೇ ಇವಳಿಂದ ಪಡೆದುಕೊಳ್ಳ ಬಹುದಾಗಿತ್ತಲ್ಲವೇ? ಒಬ್ಬನೇ ಒಬ್ಬ ಪುತ್ರನಿಗಾದರೂ ನಾನು ಈ ಕನ್ಯೆಯನ್ನು ಪರಿಗ್ರಹಿಸುತ್ತೇನೆ. ಆರು ನೂರು ಕುದುರೆಗಳು ಆಶ್ರಮಕ್ಕೆ ಬರಲಿ. ಇಲ್ಲಿ ಅವುಗಳು ಯಥೇಚ್ಛವಾಗಿ ಸಂಚರಿಸಲಿ."

ವಿಶ್ವಾಮಿತ್ರನು ಹೀಗೆ ಹೇಳಿ ಎರಡುನೂರು ಕುದುರೆಗಳ ಕನ್ಯಾಶುಲ್ಕಕ್ಕೆ ವಿನಿಮಯರೂಪವಾಗಿ ಮಾಧವಿಯನ್ನೇ ಪರಿಗ್ರಹಿಸಿದನು. ಅನೇಕ ದಿನಗಳವರೆಗೆ ಅವಳೊಡನೆ ಅತ್ಯಾನಂದದಿಂದ ರಮಿಸುತ್ತಿದ್ದು ಅಷ್ಟಕನೆಂಬ ಪುತ್ರನನ್ನು ವಿಶ್ವಾಮಿತ್ರನು ಮಾಧವಿಯಲ್ಲಿ ಪಡೆದನು.

ಮಗನು ಹುಟ್ಟಿದೊಡನೆಯೇ ಮಹಾಮುನಿಯಾದ ವಿಶ್ವಾಮಿತ್ರನು ಅವನನ್ನು ಧರ್ಮದಿಂದಲೂ, ಅರ್ಥದಿಂದಲೂ ಮತ್ತು ಕುದುರೆಗಳಿಂದಲೂ ಸಂಪನ್ನನನ್ನಾಗಿ ಮಾಡಿದನು. ಅನಂತರದಲ್ಲಿ ಅಷ್ಟಕನು ಚಂದ್ರನ ಲೋಕದಂತೆ ಪ್ರಕಾಶಿಸುತ್ತಿದ್ದ ವಿಶ್ವಾಮಿತ್ರನ ರಾಜಧಾನಿಯನ್ನು ಪ್ರವೇಶಿಸಿದನು. ವಿಶ್ವಾಮಿತ್ರನೂ ಗಾಲವನೊಡನೆ ಮಾಡಿಕೊಂಡಿದ್ದ ನಿಬಂಧನೆಯಂತೆ ಮಗನು ಹುಟ್ಟುತ್ತಲೇ ಮಾಧವಿಯನ್ನು ಗಾಲವನಿಗೆ ವಹಿಸಿಕೊಟ್ಟು ತಪಸ್ಸುಮಾಡಲು ಅರಣ್ಯಕ್ಕೆ ಹೊರಟುಹೋದನು.

ಗರುಡನೊಡನಿದ್ದ ಗಾಲವನು ಗುರುದಕ್ಷಿಣೆಯನ್ನು ಪೂರ್ಣವಾಗಿ ಕೊಟ್ಟನಂತರ ಪರಮಹರ್ಷಿತನಾಗಿ ಕನ್ಯೆಯನ್ನು ಕುರಿತು ಹೀಗೆಂದು ಹೇಳಿದನು :

**ಜಾತೋ ದಾನಪತಿಃ ಪುತ್ರಸ್ತ್ವಯಾ ಶೂರಸ್ತಥಾಪರಃ ।**<br>
**ಸತ್ಯಧರ್ಮರತಶ್ಚಾನ್ಯೋ ಯಜ್ವಾ ಚಾಪಿ ತಥಾಪರಃ ॥೨೨॥**<br>
**ತದಾಗಚ್ಛ ವರಾರೋಹೇ ತಾರಿತಸ್ತೇ ಪಿತಾ ಸುತೈಃ ।**<br>
**ಚತ್ವಾರಶ್ಚೈವ ರಾಜಾನಸ್ತಥಾ ಚಾಹಂ ಸುಮಧ್ಯಮೇ ॥೨೩॥**

"ವರಾರೋಹೇ! ಮಾಧವಿ! ನಿನ್ನಲ್ಲಿ ಹುಟ್ಟಿದ ಮೊದಲನೆಯ ಮಗನು ದಾನಪತಿಯಾಗಿದ್ದಾನೆ. ದಾನಿಗಳಲ್ಲಿಯೇ ಶ್ರೇಷ್ಠನಾಗಿರುತ್ತಾನೆ. ಎರಡನೆಯವನು ವೀರಾಗ್ರಣಿ. ಮೂರನೆಯವನು ಸತ್ಯಧರ್ಮರತನು. ನಾಲ್ಕನೆಯವನು ಯಜ್ಞಶೀಲನು. ಪರಮಶ್ರೇಷ್ಠರೆನಿಸಿದ ನಾಲ್ವರು ಮಕ್ಕಳನ್ನು ನೀನು ಪಡೆದುದರಿಂದ ನಿನ್ನ ತಂದೆಯು ನರಕದಿಂದ ಪಾರಾದನು. ನಾಲ್ವರು

ರಾಜರೂ ಪುನ್ನಾಮನರಕದಿಂದ ಪಾರಾದರು. ನಾನೂ ಅಪಾರವಾದ ದುಃಖಸಾಗರವನ್ನು ದಾಟಿದೆನು. ಗುರುದಕ್ಷಿಣಾಋಣದಿಂದ ವಿಮುಕ್ತನಾದೆನು. ಬಾ! ನಾವಿನ್ನು ನಿನ್ನ ತಂದೆಯ ಬಳಿಗೆ ಹೋಗೋಣ.”

ಗಾಲವನು ಮಾಧವಿಗೆ ಹೀಗೆ ಹೇಳಿ, ಪನ್ನಗಾಶನನಾದ ಸುಪರ್ಣನಿಗೆ ಹೋಗಲು ಅನುಮತಿಯನ್ನಿತ್ತು, ಯಯಾತಿಯ ಬಳಿಗೆ ಹೋಗಿ ಕನ್ಯೆಯನ್ನು ಅವನಿಗೆ ಒಪ್ಪಿಸಿಕೊಟ್ಟು, ತಪಸ್ಸುಮಾಡಲು ಪುನಃ ಅರಣ್ಯಕ್ಕೆ ಹೊರಟುಹೋದನು.”

ಗ೧೯ನೆಯ ಅಧ್ಯಾಯವು ಮುಗಿಯಿತು.

೧೨೦ನೆಯಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ)

## ಮಾಧವಿಯು ಅರಣ್ಯಕ್ಕೆ ಹೋಗಿ ತಪಸ್ಸುಮಾಡಿದುದು: ಯಯಾತಿಯು ಕಾಲಾನಂತರದಲ್ಲಿ ಸ್ವರ್ಗಕ್ಕೆ ಹೋಗಿ ಅಲ್ಲಿ ಅನೇಕವರ್ಷಗಳವರೆಗೆ ಸುಖೋಪಭೋಗಗಳನ್ನನುಭವಿಸುತ್ತಿದ್ದು ಒಮ್ಮೆ ಮೋಹವಶನಾಗಿ ತೇಜೋಹೀನನಾದುದು

ನಾರದರು ಹೇಳುತ್ತಾರೆ :

“ಮಹಾರಾಜ! ಮಾಧವಿಯು ಬ್ರಹ್ಮವಾದಿಯ ವರಪ್ರಸಾದದಿಂದಾಗಿ ನಾಲ್ವರು ರಾಜರಿಂದ ನಾಲ್ವರು ಮಕ್ಕಳನ್ನು ಪಡೆದನಂತರವೂ ಕನ್ಯಾವಸ್ಥೆಯನ್ನೇ ಪುನಃ ಪಡೆದುಕೊಂಡಳು. ಅರ್ಥಾತ್ ಅವಳಲ್ಲಿ ಪುರುಷಸ್ಪರ್ಶ ದೋಷವಿರಲಿಲ್ಲ. ವಿವಾಹಯೋಗ್ಯಳಾಗಿದ್ದಳು. ಆ ಕಾರಣದಿಂದಾಗಿ ಯಯಾತಿಯು ಮಾಧವಿಗೆ ಸ್ವಯಂವರವನ್ನು ಮಾಡಬೇಕೆಂದು ಅಭಿಲಾಷಿಸಿ ಗಂಗಾ-ಯಮುನೆಯರ ಸಂಗಮಸ್ಥಳದಲ್ಲಿದ್ದ ತನ್ನ ಆಶ್ರಮದಲ್ಲಿ (ಪ್ರಯಾಗದಲ್ಲಿ) ಇರತೊಡಗಿದನು. ಸ್ವಯಂವರಮಾಲೆಯನ್ನು ಹಿಡಿದಿದ್ದ ಸೋದರಿಯಾದ ಮಾಧವಿಯನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಪೂರು ಮತ್ತು ಯದುಗಳು ಯಯಾತಿಯಿದ್ದ ಆಶ್ರಮದ ಬಳಿಗೆ ಹೋದರು. ಮಾಧವಿಯ ಆ ಸ್ವಯಂವರಕ್ಕೆ ನಾಗ-ಯಕ್ಷ-ಮನುಷ್ಯರೂ, ಗಂಧರ್ವರೂ, ಪಶು-ಪಕ್ಷಿಗಳೂ, ಪರ್ವತ, ವೃಕ್ಷ ಮತ್ತು ಅರಣ್ಯಗಳಲ್ಲಿ ವಾಸಮಾಡುವ ಎಲ್ಲ ಪ್ರಾಣಿಗಳೂ ಆಗಮಿಸಿದುವು.

ಅನೇಕ ಜನಪದಗಳ ರಾಜರು ಪ್ರಯಾಗಕ್ಕೆ ಆಗಮಿಸಿದರು. ಬ್ರಹ್ಮ ಸದೃಶರಾದ ಋಷಿಗಳಿಂದಲೂ ಆ ವನವು ಆವೃತವಾಯಿತು. ಸಕಲರೂ ಉಪಸ್ಥಿತರಾಗಿದ್ದ ಆ ಸಮಯದಲ್ಲಿ ವರವರ್ಣಿನಿಯಾದ ಮಾಧವಿಯು ಸ್ವಯಂವರಮಾಲೆಯನ್ನು ಹಿಡಿದು ಹೊರಟಳು. ಯದು-ಪೂರುಗಳು ಅನುಕ್ರಮವಾಗಿ ಅಲ್ಲಿ ನೆರೆದಿದ್ದ ರಾಜರ, ನಾಗ-ಯಕ್ಷ-ಮನುಷ್ಯರ, ಗಂಧರ್ವರ, ಮೃಗ-ಪಕ್ಷಿಗಳ ಪರಿಚಯಮಾಡಿಕೊಡುತ್ತಿದ್ದರು. ಆದರೆ ಮಾಧವಿಯು ಎಲ್ಲರನ್ನೂ ಉಪೇಕ್ಷಿಸಿ ಆ ತಪೋವನವನ್ನೇ ತನ್ನ ಪತಿಯನ್ನಾಗಿ ವರಿಸಿದಳು. ಅವಳ ಆಶಯವನ್ನು ಯಾರೂ ವಿರೋಧಿಸಲಿಲ್ಲ. ಇಷ್ಟಬಂದ ವನನ್ನು ವರಿಸುವ ಅಧಿಕಾರವು ಮಾಧವಿಗಿತ್ತಲ್ಲವೇ? ಯಯಾತಿಸುತೆಯು ವನರಾಜನ (ಅಧಿದೇವತೆ) ಕೊರಳಿನಲ್ಲಿ ಮಾಲೆಯನ್ನು ಹಾಕಿ ರಥದಿಂದಿಳಿದು ತನ್ನ ಬಂಧುಗಳೆಲ್ಲರಿಗೂ ನಮಸ್ಕರಿಸಿ, ಪುಣ್ಯತಮವಾದ ವನವನ್ನು ಸೇರಿ ತಪಸ್ಸುಮಾಡಲು ಉಪಕ್ರಮಿಸಿದಳು. ಉಪವಾಸಾದಿಗಳಿಂದಲೂ, ಅನೇಕವಿಧವಾದ ದೀಕ್ಷೆಗಳಿಂದಲೂ, ನಿಯಮಗಳಿಂದಲೂ ಮನಸ್ಸನ್ನು ನಿಶ್ಚಲವನ್ನಾಗಿ ಮಾಡಿಕೊಂಡು ಶುದ್ಧಾಂತಃಕರಣಳಾಗಿ ಅರಣ್ಯದಲ್ಲಿನ ಮೃಗಗಳಂತೆ ಸ್ವೇಚ್ಛೆಯಿಂದ ಮಾಧವಿಯು ಸಂಚರಿಸುತ್ತಿದ್ದಳು. ವೈಡೂರ್ಯದ ಮೊಳಕೆಗಳಂತಿದ್ದ, ಮೃದುವಾಗಿದ್ದ, ಹಸಿರಾಗಿದ್ದ, ಒಗರಾಗಿಯೂ-ಮಧುರವಾಗಿಯೂ ಇದ್ದ ಎಳೆಯ ಗರಿಕೇಹುಲ್ಲನ್ನು ತಿನ್ನುತ್ತಾ, ಪವಿತ್ರನದಿಗಳ ಶುದ್ಧವಾದ, ಶೀತಲವಾದ, ನಿರ್ಮಲವಾದ ನೀರನ್ನು ಕುಡಿಯುತ್ತಾ–ದಾವಾನಲಶೂನ್ಯವಾದ, ನಿರ್ಜನವಾದ (ವ್ಯಾಘ್ರಭಯವಿಲ್ಲದ) ವನದಲ್ಲಿ ಜಿಂಕೆಗಳೊಡನೆ ಸಂಚರಿಸುವ ಹೆಣ್ಣು ಜಿಂಕೆಯೋಪಾದಿಯಲ್ಲಿ–ಮಾಧವಿಯು ಸಂಚರಿಸುತ್ತಿದ್ದಳು. ಬ್ರಹ್ಮಚರ್ಯೆದಿಂದ ಕೂಡಿದ ಮಹಾಧರ್ಮವನ್ನು ಆಚರಿಸುತ್ತಿದ್ದಳು.

ಯಯಾತಿಯೂ ತನ್ನ ಪೂರ್ವಜರ ಸದಾಚಾರ-ಸದ್ವೃತ್ತಿಗಳಲ್ಲಿಯೇ ಇರುತ್ತಾ ಅನೇಕಸಹಸ್ರವರ್ಷಗಳ ಕಾಲ ಜೀವಿಸಿದ್ದು ಅನಂತರ ಮೃತ್ಯುವಶನಾದನು. ಯಯಾತಿಯ ಮಕ್ಕಳಲ್ಲಿ ಪೂರು ಮತ್ತು ಯದು ಗಳೆಂಬ ಇಬ್ಬರು ನರಶ್ರೇಷ್ಠರು ಪ್ರವರ್ಧಮಾನಸ್ಥಿತಿಗೆ ಬಂದರು. ಆ ಇಬ್ಬರು ಮಕ್ಕಳ ಪ್ರಭಾವದಿಂದಾಗಿ ನಹುಷನ ಮಗನಾದ ಯಯಾತಿಯು ಭೂಲೋಕ

ದಲ್ಲಿಯೂ ಮತ್ತು ಸ್ವರ್ಗದಲ್ಲಿಯೂ ಪ್ರತಿಷ್ಠಿತನಾದನು. (ಕೀರ್ತಿಮಂತ ನಾದನು).

ಮಹಾರಾಜ! ಯಯಾತಿಮಹಾರಾಜನು ಮಹರ್ಷಿಗಳಿಗೆ ಸಮಾನ ನಾಗಿಯೂ, ಪುಣ್ಯಾತ್ಮನಾಗಿಯೂ ಇದ್ದನು. ಸ್ವರ್ಗಲೋಕಕ್ಕೆ ಹೋಗಿ ನೆಲೆಸಿದ ಆ ನೃಪತಿಯು ಸ್ವರ್ಗದ ಶ್ರೇಷ್ಠಫಲಗಳನ್ನು ಉಪಭೋಗಿಸಲು ಉಪಕ್ರಮಿಸಿ ದನು. ಈ ಪ್ರಕಾರವಾಗಿ ಅನೇಕ ಗುಣಯುಕ್ತವಾದ ಸಾವಿರಾರು ವರ್ಷಗಳು ಕಳೆದುಹೋದುವು. ಯಯಾತಿಗೆ ತಾನು ಭೂಮಿಯಲ್ಲಿ ಮಹಾಪುಣ್ಯವನ್ನು ಗಳಿಸಿ ಸ್ವರ್ಗಕ್ಕೆ ಬಂದು ಸ್ವರ್ಗಸುಖವನ್ನು ಅನುಭವಿಸುತ್ತಿದ್ದೇನೆಂಬ ವಿಷಯವೇ ಮರೆತುಹೋಯಿತು. ಅದು ಶಾಶ್ವತಸುಖವೆಂದೇ ಭ್ರಮಿಸಿದನು. ಪುಣ್ಯಸಮೃದ್ಧರಾದ, ಮಹಾತ್ಮರಾದ ರಾಜರ್ಷಿಗಳು ತನ್ನ ಸಮೀಪದಲ್ಲಿ ಕುಳಿತಿರುವಾಗಲೇ ಯಯಾತಿಯು ಮನುಷ್ಯರನ್ನೂ, ದೇವತೆಗಳನ್ನೂ, ಋಷಿಸಮೂಹವನ್ನೂ ತೆಗಳಿ ಮಾತನಾಡಿದನು. ಆ ಸಮಯದಲ್ಲಿ ಯಯಾತಿಯು ಮೂಢಬುದ್ಧಿಯವನಾಗಿ, ದುರಭಿಮಾನಿಯಾಗಿದ್ದನು. ಬಲನಿಷೂದನನಾದ, ಸ್ವರ್ಗಾಧಿಪತಿಯಾದ ಇಂದ್ರನು ಅವನ ಅಭಿಪ್ರಾಯವೇನೆಂಬುದನ್ನು ತಿಳಿದುಕೊಂಡನು. ರಾಜರ್ಷಿಗಳು ಅವನ ಮಾತನ್ನು ಕೇಳಿ 'ಧಿಕ್-ಧಿಕ್' ಎಂದು ಮೂದಲಿಸಿದರು.

ಮೂಢಚೇತಸ್ಕನಾಗಿದ್ದ ಯಯಾತಿಯನ್ನು ಕಂಡು ಸ್ವರ್ಗವಾಸಿಗಳಲ್ಲಿ ಜಿಜ್ಞಾಸೆಯುಂಟಾಯಿತು. 'ಇವನಾರು? ಯಾರ ಮಗ? ಇವನು ಸ್ವರ್ಗಕ್ಕೆ ಬಂದುದಾದರೂ ಹೇಗೆ? ಇವನು ಯಾವ ಕರ್ಮದ ಸಿದ್ಧಿಯನ್ನು ಪಡೆದಿರು ತ್ತಾನೆ? ಇವನು ಯಾವ ಮಹತ್ತರವಾದ ತಪಸ್ಸನ್ನು ಮಾಡಿ ಇಲ್ಲಿಗೆ ಬಂದಿ ರುತ್ತಾನೆ? ಸ್ವರ್ಗದಲ್ಲಿ ಇವನ ವಿಚಾರವನ್ನು ತಿಳಿದುಕೊಳ್ಳುವುದೆಂತು? ಅಥವಾ ಇಲ್ಲಿರುವವರಲ್ಲಿ ಇವನ ವಿಷಯವು ಯಾರಿಗೆ ತಿಳಿದಿದೆ?'

ಯಯಾತಿಯ ವಿಷಯವಾಗಿ ಹೀಗೆಂದು ವಿಚಾರಮಾಡುತ್ತಿದ್ದ ಸ್ವರ್ಗ ನಿವಾಸಿಗಳು ಪರಸ್ಪರವಾಗಿಯೇ ಯಯಾತಿಯನ್ನು ಕುರಿತಾದ ಈ ಪ್ರಶ್ನೆಗಳನ್ನು ಹಾಕುತ್ತಿದ್ದರು. ನೂರಾರು ವಿಮಾನಚಾಲಕರನ್ನು ಕೇಳಿದರು. ಸ್ವರ್ಗದ್ವಾರದ ಸಂರಕ್ಷಕರನ್ನು ಕೇಳಿದರು. ಆಸನವ್ಯವಸ್ಥೆಯನ್ನು ಮಾಡು ವವರನ್ನು ಪ್ರಶ್ನಿಸಿದರು. ಯಾರನ್ನೇ ಕೇಳಿದರೂ ಸರಿಯಾದ ಉತ್ತರವು

ಸಿಗಲಿಲ್ಲ. ತಮಗೆ ಇವನಾರೆಂಬುದು ತಿಳಿಯದೆಂದೇ ಎಲ್ಲರೂ ಉತ್ತರಿಸಿದರು. ಅವರ ಸ್ಮರಣಶಕ್ತಿಯು ಅವನ ವಿಷಯದಲ್ಲಿ ಮಸುಕಾಗಿಬಿಟ್ಟಿದ್ದಿತು. ಯಯಾತಿಯನ್ನು ಗುರುತಿಸಲು ಅಸಮರ್ಥರಾದರು. ಸ್ವರ್ಗವಾಸಿಗಳ ಸ್ಮೃತಿಪಥದಿಂದ ಚ್ಯುತನಾದೊಡನೆಯೇ (ಮುಹೂರ್ತಮಾತ್ರದಲ್ಲಿ) ಯಯಾತಿಯು ತೇಜಸ್ಸಿನಿಂದ ಹೀನನಾಗಿ ಹೋದನು. (ನಷ್ಟತೇಜಸ್ಕನಾದನು)"

(ಇಲ್ಲಿಯ ಪ್ರಕರಣವನ್ನು ಹೀಗೆ ವಿಶದೀಕರಿಸಬಹುದಾಗಿದೆ : ಮನುಷ್ಯನು ಸ್ವರ್ಗದಲ್ಲಿಯೇ ಇರಲಿ, ಭೂಮಿಯಲ್ಲಿಯೇ ಇರಲಿ ಕಾಮ-ಕ್ರೋಧ-ಲೋಭ-ಮೋಹ-ಮದ-ಮಾತ್ಸರ್ಯಗಳನ್ನು ತ್ಯಜಿಸಿದ್ದರೆ ಅವನನ್ನು ಒಬ್ಬ ಗಣ್ಯವ್ಯಕ್ತಿಯೆಂದು ಎಲ್ಲರೂ ಪರಿಗಣಿಸುವರು. ಈ ಪರಿಗಣನೆಯೇ ಅವನು ಕೀರ್ತಿಮಂತನಾದುದಕ್ಕೆ ಸಾಕ್ಷಿಯಾಗಿರುತ್ತದೆ. ಕಾಮ-ಕ್ರೋಧಾಭಿಭೂತನಾದವನನ್ನು ಜನರು ತಿರಸ್ಕರಿಸುವರು. ಇದು ಅಪಕೀರ್ತಿಯ ಸೂಚಕವಾಗಿರುತ್ತದೆ. ಕೀರ್ತಿಯು ಮನುಷ್ಯನಿಗೆ ತೇಜಸ್ಸನ್ನು ಹೆಚ್ಚಿಸುತ್ತದೆ. ಅಪಕೀರ್ತಿಯು ಮನುಷ್ಯನ ತೇಜಸ್ಸನ್ನು ಕುಂದಿಸುತ್ತದೆ. ಯಯಾತಿಯು ಅನೇಕಸಹಸ್ರವರ್ಷಗಳವರೆಗೆ ಸ್ವರ್ಗದಲ್ಲಿದ್ದನು. ಅವನು ಭೂಲೋಕದಲ್ಲಿ ಮಾಡಿದ ಪುಣ್ಯಕರ್ಮಗಳನ್ನು ಎಲ್ಲರೂ ಸ್ಮರಿಸುತ್ತಿದ್ದರು. ಇದರಿಂದ ಅವನ ತೇಜಸ್ಸು ಹೆಚ್ಚಿ ಸ್ವರ್ಗದಲ್ಲಿಯೇ ಇರಲು ಸಾಧ್ಯವಾಯಿತು. ಕಾಲ-ಕರ್ಮಸಂಯೋಗದಿಂದ ಯಯಾತಿಯು ಅಹಂಕಾರಿಯಾದನು. ಆ ಒಂದು ಮಹಾದೋಷವು ಅವನು ಮಾಡಿದ್ದ ಪುಣ್ಯಕರ್ಮಗಳೆಲ್ಲವನ್ನೂ ನುಂಗಿಬಿಟ್ಟಿತು. ಅವನು ಅಹಂಕಾರಿಯೆಂಬುದು ಮಾತ್ರ ಎಲ್ಲರ ಮನಸ್ಸಿನಲ್ಲಿಯೂ ಉಳಿಯಿತೇ ಹೊರತು ಅವನು ಹಿಂದೆ ಮಾಡಿದ್ದ ಸತ್ಕರ್ಮಗಳು ಯಾರ ಮನಸ್ಸಿನಲ್ಲಿಯೂ ಉಳಿಯಲೇ ಇಲ್ಲ. ಎಂದರೆ ಸ್ವರ್ಗವಾಸಕ್ಕೆ ಕಾರಣವಾಗಿದ್ದ ಅವನ ಪುಣ್ಯವು ತೀರುವ ಸಮಯವು ಬಂದಿತು. ದುರಹಂಕಾರಿಯೆಂಬ ಅಪಕೀರ್ತಿಯು ಮಾತ್ರ ಎಲ್ಲೆಲ್ಲೂ ಹರಡಿತು. ಇದರಿಂದಾಗಿ ಯಯಾತಿಯು ತೇಜೋಹೀನನಾದನು.)

೧೨೦ನೆಯ ಅಧ್ಯಾಯವು ಮುಗಿಯಿತು.

೧೨೧ನೆಯಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ)

## ಯಯಾತಿಯು ಸ್ವರ್ಗದಿಂದ ಕೆಳಕ್ಕೆ ಬಿದ್ದುದು: ಅವನ ದೌಹಿತ್ರರು, ಮಗಳು ಮಾಧವೀ ಮತ್ತು ಗಾಲವ-ಎಲ್ಲರೂ ತಮ್ಮ ತಮ್ಮ ಪುಣ್ಯಗಳನ್ನು ಧಾರೆಯೆರೆದುಕೊಡಲು ಒಪ್ಪಿದುದು

ನಾರದರು ಹೇಳುತ್ತಾರೆ :

"ಕೌರವೇಂದ್ರ! ಯಾವಾಗ ಸ್ವರ್ಗವಾಸಿಗಳೆಲ್ಲರೂ ಯಯಾತಿಯನ್ನು ಮರೆತೇ ಬಿಟ್ಟರೋ – ಆಗ ಯಯಾತಿಯು ತನ್ನ ಸಿಂಹಾಸನದಿಂದಲೂ ಮತ್ತು ಸ್ವರ್ಗದಿಂದಲೂ ಚ್ಯುತನಾದನು. ಅವನ ಹೃದಯವು ಕಂಪಿಸುತ್ತಿದ್ದಿತು. ಶೋಕಾಗ್ನಿಯು ಯಯಾತಿಯನ್ನು ದಹಿಸಲು ಉಪಕ್ರಮಿಸಿತು. ಅವನು ಧರಿಸಿದ್ದ ದೇವಸುಮಗಳ ಮಾಲೆಯು ಬಾಡಿತು. ಅವನ ಜ್ಞಾಪಕಶಕ್ತಿಯು ಲುಪ್ತವಾಗಿಹೋಯಿತು. ಕಿರೀಟ ಮತ್ತು ಭುಜಕೀರ್ತಿಗಳು ಕಳಚಿ ಬಿದ್ದುವು. ಕೆಳಗೆ ಬೀಳುವಾಗ ಗರ-ಗರನೆ ಚಕ್ರದಂತೆ ತಿರುಗುತ್ತಿದ್ದನು. ಅವನ ಅಂಗಾಂಗಗಳೆಲ್ಲವೂ ಶಿಥಿಲವಾಗಿಹೋದುವು. ಅವಯವಗಳ ಮೇಲೆ ಹತೋಟಿಯೇ ತಪ್ಪಿತು. ಅವನ ಆಭರಣಗಳೂ ಮತ್ತು ವಸ್ತ್ರಗಳೂ ಚೆಲ್ಲಾಪಿಲ್ಲಿಯಾಗಿ ಕೆಳಗೆ ಬಿದ್ದುವು. ಅವನ ಸುತ್ತಲೂ ಅಂಧಕಾರವು ಕವಿಯಿತು. ಅವನು ಯಾರೊಬ್ಬರಿಗೂ ಕಾಣದಂತಾದನು. ಸ್ವರ್ಗವಾಸಿಗಳನ್ನು ನೋಡಲು ಅವನಿಗೆ ಒಮ್ಮೆ ಸಾಧ್ಯವಾಗುತ್ತಿದ್ದಿತು. ಮತ್ತೊಮ್ಮೆ ಅವರೂ ಅವನಿಗೆ ಕಾಣಲಿಲ್ಲ. ಅವನಿಗೆ ಪ್ರಪಂಚವೇ ಶೂನ್ಯವಾಗಿ ಕಂಡಿತು. ಶೂನ್ಯವಾದ ಮನಸ್ಸಿನಿಂದಲೇ ಯಯಾತಿಯು ಭೂಮಿಯ ಕಡೆಗೆ ರಭಸದಿಂದ ಬಿದ್ದನು.

'ನಾನೇನಾದರೂ ಮನಸ್ಸಿನಲ್ಲಿ ಧರ್ಮದೂಷಣವಾದುದನ್ನು ಚಿಂತಿಸಿದೆನೇ? ಅಶುಭವಾದುದನ್ನು ಚಿಂತಿಸಿದೆನೇ? ಯಾವ ಕಾರಣಕ್ಕಾಗಿ ನಾನು ಈ ರೀತಿಯಲ್ಲಿ ಸ್ವರ್ಗದಿಂದ ಚ್ಯುತನಾದೆನು?'– ಹೀಗೆಂಬುದಾಗಿ ಯಯಾತಿಯು ಬಾರಿ ಬಾರಿಗೂ ಯೋಚಿಸುತ್ತಿದ್ದನು.

ಸ್ವರ್ಗದಲ್ಲಿದ್ದ ರಾಜರ್ಷಿಗಳೂ, ಸಿದ್ಧರೂ, ಅಪ್ಸರೆಯರೂ ಕೆಳಕ್ಕೆ ಬೀಳುತ್ತಿರುವ ಅವಲಂಬನಶೂನ್ಯನಾಗಿದ್ದ ಯಯಾತಿಯನ್ನು ಸ್ವರ್ಗದಲ್ಲಿಯೇ ನಿಂತು ನೋಡಿದರು.

ಅನಂತರದಲ್ಲಿ ಅವನಂತಹ ಕ್ಷೀಣಪುಣ್ಯರನ್ನು ಸ್ವರ್ಗದಿಂದ ಕೆಳಕ್ಕೆ ತಳ್ಳುವ ಪುರುಷನೊಬ್ಬನು ದೇವೇಂದ್ರನ ಆಜ್ಞಾನುಸಾರವಾಗಿ ಯಯಾತಿಯ ಸಮೀಪಕ್ಕೆ ಧಾವಿಸಿ ಬಂದವನಾಗಿ ಅವನನ್ನು ಕುರಿತು ಹೇಳಿದನು :

**ಅತೀವ ಮದಮತ್ತಸ್ತ್ವಂ ನ ಕಂಚಿನ್ನಾವಮನ್ಯಸೇ ।**
**ಮಾನೇನ ಭ್ರಷ್ಟಃ ಸ್ವರ್ಗಸ್ತೇ ನಾರ್ಹಸ್ತ್ವಂ ಪಾರ್ಥಿವಾತ್ಮಜ ॥೭॥**

"ರಾಜಪುತ್ರ! ನೀನು ಅತ್ಯಂತಮದಮತ್ತನಾಗಿರುವೆ. 'ನೀನು ಇಂತಹವರನ್ನು ತಿರಸ್ಕಾರಮಾಡಲಿಲ್ಲ'–ಎಂಬುದೇ ಇಲ್ಲ. ಅವರು ಎಷ್ಟೇ ಪುಣ್ಯಪುರುಷರಾಗಿದ್ದರೂ ನಿನ್ನ ತಿರಸ್ಕಾರಕ್ಕೆ ಗುರಿಯಾಗಿದ್ದಾರೆ. ನೀನು ಗುಣಗ್ರಾಹಿಯಲ್ಲ. ಯಾವುದಾದರೂ ಕಾರಣದಿಂದ ಸತ್ಪುರುಷರೆಲ್ಲರನ್ನೂ ತೆಗಳುವುದೇ ನಿನ್ನ ಕಾರ್ಯವಾಗಿದೆ. ನೀನು ಇಷ್ಟು ದೃಪ್ತನಾಗಿರುವ ಕಾರಣದಿಂದಲೇ ನಿನ್ನ ಸ್ಥಾನದಿಂದ ಚ್ಯುತನಾಗಿರುವೆ. ನೀನೀಗ ಸ್ವರ್ಗದಲ್ಲಿರಲು ಖಂಡಿತವಾಗಿಯೂ ಅರ್ಹನಾಗಿಲ್ಲ.

ಇಲ್ಲಿರುವ ಯಾರೂ ನಿನ್ನನ್ನು ಪುಣ್ಯಶಾಲಿಯೆಂದು ಗುರುತಿಸಲಾರರು. ಆದುದರಿಂದ 'ಹೊರಟುಹೋಗು, ಭೂಮಿಯಲ್ಲಿ ಬೀಳು' ಎಂಬುದಾಗಿ ದೇವರಾಜನು ಹೇಳಿದ್ದಾನೆ."

ಪುರುಷನ ಮಾತನ್ನು ಕೇಳಿ ಯಯಾತಿಯು–'ಪತೇಯಂ ಸತ್ಸು–ಸತ್ಪುರುಷರ ಮಧ್ಯದಲ್ಲಿ ಬೀಳುವಂತಾಗಲಿ!'–ಎಂಬುದಾಗಿ ಮೂರು ಬಾರಿ ಹೇಳಿ ಕೆಳಕ್ಕೆ ಬೀಳುತ್ತಿದ್ದನು.

ಜಂಗಮಪ್ರಾಣಿಗಳಲ್ಲಿ ಶ್ರೇಷ್ಠನಾದ ಯಯಾತಿಯು ಕೆಳಕ್ಕೆ ಬೀಳುತ್ತಿರುವಾಗಲೇ ತನ್ನ ಮುಂದಿನ ಗತಿಯೇನೆಂಬುದನ್ನು ಚಿಂತಿಸಿದನು. ಅದೇ ಕಾಲದಲ್ಲಿ ನೈಮಿಷಾರಣ್ಯದಲ್ಲಿದ್ದ ನಾಲ್ವರು ರಾಜಶ್ರೇಷ್ಠರನ್ನು ನೋಡಿದನು. ಅವರು ಸತ್ಪುರುಷರೆಂಬ ಭಾವನೆಯಿಂದ ಅವರ ಮಧ್ಯದಲ್ಲಿ ಬೀಳಲು ಹೋದನು. ಆ ಸಮಯದಲ್ಲಿ ಪ್ರತರ್ದನ, ವಸುಮನಸ, ಉಶೀನರನ ಮಗನಾದ ಶಿಬಿ ಮತ್ತು ಅಷ್ಟಕ – ಈ ನಾಲ್ವರೂ ವಾಜಪೇಯಯಜ್ಞ ಮಾಡಿ ಸುರೇಶ್ವರನನ್ನು (ಇಂದ್ರನನ್ನು) ತೃಪ್ತಿಪಡಿಸಿದ್ದರು. ಸ್ವರ್ಗದ್ವಾರ ದವರೆಗೂ ವ್ಯಾಪಿಸಿದ್ದ, ಅವರು ಮಾಡಿದ ಯಜ್ಞದ ಧೂಮವನ್ನು

ಯಯಾತಿಯು ಆಘ್ರಾಣಿಸುತ್ತಾ ಭೂಮಿಯ ಕಡೆಗೆ ಬೀಳುತ್ತಿದ್ದನು. ಭೂಮಿಯಿಂದ ಆಕಾಶದವರೆಗೂ (ಸ್ವರ್ಗದ್ವಾರದವರೆಗೂ) ಸಂಬದ್ಧವಾಗಿದ್ದ, ಭೂಮಿಯ ಕಡೆಗೆ ಹೋಗುತ್ತಿದ್ದ ಗಂಗಾನದಿಯಂತೆಯೇ ಕಾಣುತ್ತಿದ್ದ ಧೂಮಮಯವಾದ ನದಿಯನ್ನೇ ಅವಲಂಬಿಸಿ ಜಗತೀಪತಿಯಾದ ಯಯಾತಿಯು – ಶ್ರೀಮಂತರಾಗಿದ್ದ, ಯಜ್ಞದ ಅವಭೃಥಸ್ನಾನಮಾಡಿ ಪವಿತ್ರರಾಗಿದ್ದ, ಲೋಕಪಾಲೋಪಮರಾಗಿದ್ದ ನಾಲ್ವರು ಸಂಬಂಧಿಗಳ ಮಧ್ಯದಲ್ಲಿ ಬಿದ್ದನು. ಅರ್ಜಿಸಿದ್ದ ಪುಣ್ಯವೆಲ್ಲವೂ ಕ್ಷಯಿಸಿಹೋಗಲಾಗಿ ಯಯಾತಿಯು ಈಶ್ವರಸದೃಶರಾದ, ಮಹಾಗ್ನಿಗಳಂತೆ ಜಾಜ್ವಲ್ಯಮಾನವಾದ ತೇಜಸ್ಸಿನಿಂದ ಪ್ರಕಾಶಿಸುತ್ತಿದ್ದ ನಾಲ್ವರು ರಾಜಸಿಂಹಾಗ್ನಿಗಳ ಮಧ್ಯದಲ್ಲಿ ಬಿದ್ದನು.

ದಿವ್ಯವಾದ ಕಾಂತಿಯಿಂದ ಪ್ರಕಾಶಿಸುತ್ತಿರುವನೋ ಎಂಬಂತೆ ಕಾಣುತ್ತಿದ್ದ ಯಯಾತಿಯನ್ನು ಆ ನಾಲ್ವರು ರಾಜಪ್ರಮುಖರು ಪ್ರಶ್ನಿಸಿದರು :

"ನೀನು ಯಾರು? ಯಾರ ಬಂಧುವಾಗಿರುವೆ? ಯಾವ ಕುಲಕ್ಕೆ ಸೇರಿದವನಾಗಿರುವೆ? ನಿನ್ನ ಊರು ಯಾವುದು? ನೀನೇನು ಯಕ್ಷನೇ? ದೇವತೆಯೇ? ಗಂಧರ್ವನೇ? ಅಥವಾ ದಿವ್ಯರೂಪವನ್ನು ಹೊಂದಿರುವ ರಾಕ್ಷಸನೇ? ಯಾರೆಂಬುದನ್ನು ಹೇಳು. ನೀನು ಮನುಷ್ಯನಂತೆ ಕಾಣುತ್ತಿಲ್ಲ. ಯಾವ ಪ್ರಯೋಜನವನ್ನು ಉದ್ದೇಶಿಸಿ ನೀನಿಲ್ಲಿಗೆ ಆಗಮಿಸಿರುವೆ?"

ಯಯಾತಿಯು ಹೇಳುತ್ತಾನೆ :

"ರಾಜಕುಮಾರರೇ! ನಾನು ಯಯಾತಿ ಎಂಬ ಹೆಸರಿನ ರಾಜರ್ಷಿಯಾಗಿರುತ್ತೇನೆ. ನನ್ನ ಪುಣ್ಯವೆಲ್ಲವೂ ಕ್ಷಯಿಸಿಹೋಗಲಾಗಿ ನಾನು ಸ್ವರ್ಗದಿಂದ ಚ್ಯುತನಾದೆನು. ಬೀಳುವಾಗ ನಾನು 'ಪತೇಯಂ ಸತ್ಸು' 'ಸತ್ಪುರುಷರ ಮಧ್ಯದಲ್ಲಿ ಬೀಳುವೆನೇ?' ಎಂಬುದಾಗಿಯೇ ಯೋಚಿಸುತ್ತಲಿದ್ದೆನು. ನಾನೀಗ ನಿಮ್ಮ ಮಧ್ಯದಲ್ಲಿ ಬಿದ್ದಿದ್ದೇನೆ."

ಆ ನಾಲ್ವರು ರಾಜರ್ಷಿಗಳೂ ಹೇಳಿದರು :

"ಪುರುಷರ್ಷಭನೇ! ನಿನ್ನ ಅಪೇಕ್ಷೆಯು ಸತ್ಯವಾಗಿ ಪರಿಣಮಿಸಲಿ. ನಮ್ಮಲ್ಲಿರುವ ಎಲ್ಲ ಯಜ್ಞಫಲವನ್ನೂ ಮತ್ತು ಧರ್ಮವನ್ನೂ ನೀನು ಪ್ರತಿಗ್ರಹಿಸು."

"ರಾಜಕುಮಾರರೇ! ಪ್ರತಿಗ್ರಹದಿಂದಲೇ ಧನವನ್ನು ಸಂಚಯಿಸುವ ಬ್ರಾಹ್ಮಣನು ನಾನಲ್ಲ. ನಾನು ಕ್ಷತ್ರಿಯನಾಗಿರುತ್ತೇನೆ. ಸ್ವಾರ್ಥೋನ್ನತಿಗಾಗಿ ಇತರರ ಪುಣ್ಯವಿನಾಶದಲ್ಲಿ ನನ್ನ ಬುದ್ಧಿಯು ಆಸಕ್ತವಾಗಿಲ್ಲ."

ದುರ್ಯೋಧನ! ಅದೇ ಸಮಯಕ್ಕೆ ಸರಿಯಾಗಿ ಮೃಗಚರ್ಯಾಕ್ರಮದಲ್ಲಿ (ಹೆಣ್ಣು ಜಿಂಕೆಯಂತೆ ಹಾರುತ್ತಾ ಕುಣಿಯುತ್ತಾ ಗರಿಕೇಹುಲ್ಲನ್ನು ತಿನ್ನುತ್ತಾ) ಅಲ್ಲಿಗೆ ಆಗಮಿಸಿದ ಮಾಧವಿಯನ್ನು ನೋಡಿದ ರಾಜಪ್ರಮುಖರು ಅವಳಿಗೆ ಅಭಿವಾದನಪೂರ್ವಕವಾಗಿ ನಮಸ್ಕರಿಸಿ ಅವಳನ್ನು ಕುರಿತು ಹೇಳಿದರು : "ತಪೋಧನಳೇ! ನೀನಿಲ್ಲಿಗೆ ಆಗಮಿಸಿದ ಕಾರ್ಯವಾದರೂ ಏನು? ನಿನ್ನ ಯಾವ ಆಜ್ಞೆಯನ್ನು ನಾವು ನಡೆಸಿಕೊಡಬೇಕಾಗಿದೆ? ನಿನ್ನ ಮಕ್ಕಳಾದ ನಾವು ನಿನ್ನಿಂದ ಆಜ್ಞೆಮಾಡಲ್ಪಡತಕ್ಕವರಾಗಿದ್ದೇವೆ. (ನೀನು ಆಜ್ಞೆಮಾಡಿ ಯಥಾಯೋಗ್ಯವಾದ ಸೇವೆಯನ್ನು ನಮ್ಮಿಂದ ಮಾಡಿಸಿಕೊಳ್ಳಲು ಅರ್ಹಳಾಗಿರುತ್ತೀಯೆ.)"

ನಾಲ್ವರು ರಾಜಕುಮಾರರ ಆ ಮಾತುಗಳನ್ನು ಕೇಳಿ ಮಾಧವಿಯು ಪರಮಸಂತೋಷದಿಂದ ತಂದೆಯಾದ ಯಯಾತಿಯ ಸಮೀಪಕ್ಕೆ ಬಂದು ನಮಸ್ಕರಿಸಿ, ಮಕ್ಕಳಲ್ಲಿ ಒಬ್ಬೊಬ್ಬರ ತಲೆಯನ್ನೂ ಮುಟ್ಟಿ ತನ್ನ ತಂದೆಯೊಡನೆ ಹೇಳಿದಳು :

"ರಾಜೇಂದ್ರ! ಇವರು ನನ್ನ ಮಕ್ಕಳು. ನಿನ್ನ ದೌಹಿತ್ರರು. ಬೇರೆ ಯಾರೂ ಅಲ್ಲ. ಇವರು ನಿನ್ನನ್ನು ಉದ್ಧಾರಮಾಡುತ್ತಾರೆ. ಈ ವಿಷಯವು ಬಹಳ ಹಿಂದೆಯೇ ವೇದದಲ್ಲಿಯೇ ಉಕ್ತವಾಗಿದೆ. (ನಿನ್ನ ದೌಹಿತ್ರರೇ ನಿನ್ನನ್ನು ಉದ್ಧರಿಸಬೇಕೆಂದು ಸಿದ್ಧಾಂತವಾಗಿಹೋಗಿದೆ.) ಮೃಗದಂತೆ ಸಂಚರಿಸುತ್ತಿರುವ ನಾನು ನಿನ್ನ ಮಗಳಾದ ಮಾಧವಿಯೇ ಆಗಿರುತ್ತೇನೆ. ನಾನೂ ಧರ್ಮಸಂಗ್ರಹವನ್ನು ಮಾಡಿರುತ್ತೇನೆ. ಅದರಿಂದಲೂ ಅರ್ಧಭಾಗವನ್ನು ನೀನು ಪ್ರತಿಗ್ರಹಿಸು.

**ಯಸ್ಮಾದ್ರಾಜನ್ನರಾಃ ಸರ್ವೇ ಅಪತ್ಯಫಲಭಾಗಿನಃ ।**
**ತಸ್ಮಾದಿಚ್ಛನ್ತಿ ದೌಹಿತ್ರಾನ್ಯಥಾ ತ್ವಂ ವಸುಧಾಧಿಪ ॥೨೫॥**

ವಸುಧಾಧಿಪನೇ! ಯಾವ ಕಾರಣದಿಂದ ಎಲ್ಲ ಮಾನವರೂ ತಮ್ಮ

ಮಕ್ಕಳು ಮಾಡುವ ಪುಣ್ಯಫಲದಲ್ಲಿ ಭಾಗಿಗಳಾಗುತ್ತಾರೆಯೋ ಅದೇ ಕಾರಣದಿಂದ, ದೌಹಿತ್ರಪ್ರಾಪ್ತಿಯಿಂದ ಪ್ರಾಪ್ತವಾಗುವ ಫಲವನ್ನೂ ಅಪೇಕ್ಷಿಸುತ್ತಾರೆ. ನಿನ್ನಂತೆಯೇ ಹೆಣ್ಣುಮಕ್ಕಳನ್ನು ಪಡೆದಿರುವವರೆಲ್ಲರೂ ಅಪಾರವಾದ ಪುಣ್ಯವನ್ನು ಪಡೆದುಕೊಳ್ಳುತ್ತಾರೆ. (ಪುತ್ರಪ್ರಾಪ್ತಿಯಿಂದ ಎಷ್ಟು ಫಲವು ಪ್ರಾಪ್ತವಾಗುವುದೋ ದೌಹಿತ್ರರ ಪ್ರಾಪ್ತಿಯಿಂದಲೂ ಅಷ್ಟೇ ಫಲವು ಲಭ್ಯವಾಗುತ್ತದೆ.)"

ಅನಂತರದಲ್ಲಿ ಆ ನಾಲ್ವರು ರಾಜಪುತ್ರರೂ ತಮ್ಮ ತಾಯಿಯಾದ ಮಾಧವಿಗೆ ತಲೆಬಾಗಿ, ಅಭಿವಾದನಪೂರ್ವಕವಾಗಿ ನಮಸ್ಕರಿಸಿ, ಮಾತಾಮಹನನ್ನು ಕುರಿತು ಹೇಳಿದರು. ಸ್ವರ್ಗದಿಂದ ಚ್ಯುತನಾಗಿದ್ದ ಮಾತಾಮಹನನ್ನು ಉದ್ಧರಿಸುವ ಆಶಯದಿಂದ, ಉಚ್ಚಸ್ಥಾಯಿಯಿಂದ ಕೂಡಿದ್ದ ಅನುಪಮವಾದ ಸ್ವರಗಳಿಂದ ಭೂಮಂಡಲವನ್ನೇ ತುಂಬುತ್ತಿರುವರೋ ಎಂಬಂತೆ ಅವರು ಮಾತನಾಡಿದರು. ಆ ವೇಳೆಗೆ ಸರಿಯಾಗಿ ಆ ಅರಣ್ಯಮಧ್ಯದಿಂದಲೇ ಗಾಲವನೂ ಅಲ್ಲಿಗೆ ಆಗಮಿಸಿ ಯಯಾತಿಯನ್ನು ಕುರಿತು ಹೇಳಿದನು :

**ತಪಸೋ ಮೇಽಷ್ಟಭಾಗೇನ ಸ್ವರ್ಗಮಾರೋಹತಾಂ ಭವಾನ್ ॥**

"ನನ್ನ ತಪಸ್ಸಿನ ಎಂಟನೆಯ ಒಂದು ಭಾಗವನ್ನು ಸ್ವೀಕರಿಸಿ ನೀನು ಪುನಃ ಸ್ವರ್ಗಾರೋಹಣಮಾಡು, ಮಹಾರಾಜ!"

ಂ೨೧ನೆಯ ಅಧ್ಯಾಯವು ಮುಗಿಯಿತು.

೧೨೨ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ)

## ಸತ್ಸಂಗದಿಂದಲೂ, ದೌಹಿತ್ರರು ಮಾಡಿದ ಪುಣ್ಯದ ದಾನದಿಂದಲೂ ಯಯಾತಿಯು ಪುನಃ ಸ್ವರ್ಗಾರೋಹಣಮಾಡಿದುದು

ನಾರದರು ಹೇಳುತ್ತಾರೆ :

"ಸುಯೋಧನ! ಸತ್ಪುರುಷರಾದ ನಾಲ್ವರು ರಾಜಪುತ್ರರಿಂದಲೂ, ಮಾಧವೀ ಮತ್ತು ಗಾಲವರಿಂದಲೂ ಯಯಾತಿಯು ಗುರುತಿಸಲ್ಪಟ್ಟೊಡನೆಯೇ ಭೂಮಿಯನ್ನು ಸ್ಪರ್ಶಿಸದೆಯೇ ಸ್ವರ್ಗಾಭಿಮುಖವಾಗಿ ಪ್ರಯಾಣ

ಮಾಡಲು ಉದ್ಯುಕ್ತನಾದನು. ಆ ಸಮಯದಲ್ಲವನು ದಿವ್ಯವಾದ ಶರೀರವನ್ನು ಧರಿಸಿದ್ದನು. ಚಿಂತಾರಹಿತನಾಗಿದ್ದನು. ದಿವ್ಯವಾದ ಮಾಲೆಯನ್ನೂ ಮತ್ತು ವಸ್ತ್ರಗಳನ್ನೂ ಧರಿಸಿದ್ದನು. ದಿವ್ಯಾಭರಣಗಳಿಂದ ಅಲಂಕೃತನಾಗಿದ್ದನು. ದಿವ್ಯವಾದ ಸುಗಂಧಲೇಪನದಿಂದ ಸುವಾಸಿತನಾಗಿದ್ದನು. ಸತ್ಸಂಗದ ಪ್ರಭಾವದಿಂದ ಕ್ಷಣಮಾತ್ರದಲ್ಲಿ ದಿವ್ಯರೂಪವನ್ನು ತಾಳಿದ ಯಯಾತಿಯು ಕಾಲಿನಿಂದ ಭೂಮಿಯನ್ನು ಸ್ಪರ್ಶಿಸಲೇ ಇಲ್ಲ.

ಅನಂತರದಲ್ಲಿ, ಲೋಕದಲ್ಲಿ ದಾನಪತಿಯೆಂದು ಪ್ರಸಿದ್ಧನಾಗಿದ್ದ ವಸುಮನಸನು ಮೊದಲು ಉಚ್ಚಸ್ವರದಲ್ಲಿ ಯಯಾತಿಮಹಾರಾಜನೊಡನೆ ಹೇಳಿದನು :

**ಪ್ರಾಪ್ತವಾನಸ್ಮಿ ಯಲ್ಲೋಕೇ ಸರ್ವವರ್ಣೇಷ್ವಗರ್ಹಯಾ ।**
**ತದಪ್ಯಥ ಚ ದಾಸ್ಯಾಮಿ ತೇನ ಸಂಯುಜ್ಯತಾಂ ಭವಾನ್ ॥೪॥**

"ಪ್ರಪಂಚದಲ್ಲಿ ಯಾವ ವರ್ಣದವರನ್ನೂ ಯಾವ ಕಾರಣದಿಂದಲೂ ನಿಂದೆಮಾಡದೇ ಇರುವುದರಿಂದ ನಾನು ಯಾವ ಪುಣ್ಯವನ್ನು ಗಳಿಸಿರುವೆನೋ-ಅದನ್ನೂ ನಿನಗೆ ಕೊಡುತ್ತೇನೆ. ನೀನು ಆ ಪುಣ್ಯದಿಂದ ಯುಕ್ತನಾಗು.

**ಯತ್ಫಲಂ ದಾನಶೀಲಸ್ಯ ಕ್ಷಮಾಶೀಲಸ್ಯ ಯತ್ಫಲಮ್ ।**
**ಯಚ್ಚ ಮೇ ಫಲಮಾಧಾನೇ ತೇನ ಸಂಯುಜ್ಯತಾಂ ಭವಾನ್ ॥೫॥**

ದಾನಶೀಲನಾದವನಿಗೆ ಯಾವ ಫಲವು ಪ್ರಾಪ್ತವಾಗುವುದೋ, ಕ್ಷಮಾಶೀಲನಾದವನಿಗೆ ಯಾವ ಫಲವು ಪ್ರಾಪ್ತವಾಗುವುದೋ–ಆ ಫಲಗಳೆಲ್ಲವೂ ನನ್ನಲ್ಲಿ ಸಂಗೃಹೀತವಾಗಿವೆ. ಆ ನನ್ನ ಪುಣ್ಯಫಲವನ್ನೂ ನಾನು ನಿನಗೆ ಕೊಡುತ್ತೇನೆ. ಅದರಿಂದಲೂ ನೀನು ಯುಕ್ತನಾಗು. ಅಗ್ನ್ಯಾಧಾನಾದಿ ವೇದೋಕ್ತಕರ್ಮಾನುಷ್ಠಾನಗಳಿಂದ ನನಗೆ ಯಾವ ಫಲವು ಪ್ರಾಪ್ತವಾಗಿರುವುದೋ–ಅದನ್ನೂ ನಿನಗೆ ಕೊಡುತ್ತೇನೆ. ಅದರಿಂದಲೂ ನೀನು ಯುಕ್ತನಾಗು."

ವಸುಮನಸನು ಹೀಗೆ ಹೇಳಿದನಂತರದಲ್ಲಿ ಕ್ಷತ್ರಿಯಪುಂಗವನಾದ ಪ್ರತರ್ದನನೂ ಯಯಾತಿಯನ್ನು ಕುರಿತು ಹೇಳಿದನು :

**ಯಥಾ ಧರ್ಮರತಿರ್ನಿತ್ಯಂ ನಿತ್ಯಂ ಯುದ್ಧಪರಾಯಣಃ ॥೬॥**

**ಪ್ರಾಪ್ತವಾನಸ್ಮಿ ಯಲ್ಲೋಕೇ ಕ್ಷತ್ರವಂಶೋದ್ಭವಂ ಯಶಃ ।**
**ವೀರಶಬ್ದಫಲಂ ಚೈವ ತೇನ ಸಂಯುಜ್ಯತಾಂ ಭವಾನ್ ॥೭॥**

"ನಾನು ಯಾವ ರೀತಿಯಲ್ಲಿ ಸರ್ವಕಾಲದಲ್ಲಿಯೂ ಧರ್ಮದಲ್ಲೇ ನಿರತನಾಗಿರುವೆನೋ, ಇದರಿಂದ ನನಗೆ ಯಾವ ಫಲವು ಪ್ರಾಪ್ತವಾಗಿರುವುದೋ ಮತ್ತು ನಾನು ಯಾವ ರೀತಿಯಲ್ಲಿ ಯಾವಾಗಲೂ ಧರ್ಮಮೂಲವಾದ ಯುದ್ಧದಲ್ಲಿಯೇ ನಿರತನಾಗಿರುವೆನೋ ಮತ್ತು ಇದರಿಂದ ನನಗೆ ಯಾವ ಫಲವು ಲಭಿಸಿರುವುದೋ, ಈ ಲೋಕದಲ್ಲಿ ನನಗೆ ಕ್ಷತ್ರಿಯಕುಲದಲ್ಲಿ ಹುಟ್ಟಿರುವುದರಿಂದ ಮತ್ತು ಕ್ಷತ್ರಧರ್ಮಾನುಸಾರವಾಗಿ ನಡೆಯುತ್ತಿರುವುದರಿಂದ ಯಾವ ಯಶಸ್ಸು ಅಥವಾ ಪುಣ್ಯವು ಪ್ರಾಪ್ತವಾಗಿರುವುದೋ, ನಾನು ವೀರನೂ ಆಗಿರುವುದರಿಂದ ಆ ವೀರಶಬ್ದಕ್ಕೆ ಯಾವ ಫಲವಿರುವುದೋ –ಈ ಎಲ್ಲ ಫಲಗಳನ್ನೂ ನೀನು ಸ್ವೀಕರಿಸು. ಈ ಎಲ್ಲ ಫಲಗಳೂ ನಿನ್ನೊಡನೆ ಸಂಯೋಗಹೊಂದಲಿ."

(ವೀರಶಬ್ದದ ಫಲವನ್ನು ಹೀಗೆ ವಿವರಿಸಬಹುದಾಗಿದೆ : ದಾನವೀರ, ಧರ್ಮವೀರ, ದಯಾವೀರ, ಯುದ್ಧವೀರ –ಎಂದು ನಾಲ್ಕು ಬಗೆಯ ವೀರರಿದ್ದಾರೆ. ವೀರಶಬ್ದವು ದಾನ, ಧರ್ಮ, ದಯೆ, ಮತ್ತು ಯುದ್ಧ –ಈ ಪದಗಳೊಡನೆ ಸೇರಿದರೆ ಫಲದಾಯಕವಾಗುತ್ತದೆ. 'ನಾನು ದಾನವೀರನೂ, ಧರ್ಮವೀರನೂ, ದಯಾವೀರನೂ ಮತ್ತು ಯುದ್ಧವೀರನೂ ಆಗಿರುತ್ತೇನೆ. ಇದರಿಂದ ಲಭ್ಯವಾಗಿರುವ ಪುಣ್ಯವೂ ನಿನ್ನದಾಗಲಿ' –ಎಂಬ ಅಭಿಪ್ರಾಯದಲ್ಲಿ ವೀರಶಬ್ದವನ್ನು ಪ್ರತರ್ದನನು ಉಪಯೋಗಿಸಿದ್ದಾನೆ.)

ಪ್ರತರ್ದನನು ಹೀಗೆ ಹೇಳಿದನಂತರ ಉಶೀನರನಿಗೆ ಮಾಧವಿಯಲ್ಲಿ ಹುಟ್ಟಿದ ಧೀಮಂತನಾದ ಶಿಬಿಯು ಮಧುರಸ್ವರದಿಂದ ಯಯಾತಿಯನ್ನು ಕುರಿತು ಹೇಳಿದನು :

**ಯಥಾ ಬಾಲೇಷು ನಾರೀಷು ವೈಹಾರ್ಯೇಷು ತಥೈವ ಚ ।**
**ಸಂಗರೇಷು ನಿಪಾತೇಷು ತಥಾ ತದ್ವ್ಯಸನೇಷು ಚ ।**
**ಅನೃತಂ ನೋಕ್ತಪೂರ್ವಂ ಮೇ ತೇನ ಸತ್ಯೇನ ಖಂ ವ್ರಜ ॥೮॥**

**ಯಥಾ ಪ್ರಾಣಾಂಶ್ಚ ರಾಜ್ಯಂ ಚ ರಾಜನ್ಕಾಮಸುಖಾನಿ ಚ ।**
**ತ್ಯಜೇಯಂ ನ ಪುನಃ ಸತ್ಯಂ ತೇನ ಸತ್ಯೇನ ಖಂ ವ್ರಜ ॥೧೦॥**

**ಯಥಾ ಸತ್ಯೇನ ಮೇ ಧರ್ಮೋ ಯಥಾ ಸತ್ಯೇನ ಪಾವಕಃ ।**
**ಪ್ರೀತಃ ಶತಕ್ರತುಶ್ಚೈವ ತೇನ ಸತ್ಯೇನ ಖಂ ವ್ರಜ ॥೧೧॥**

"ಮಹಾರಾಜ! ನಾನು ಬಾಲಕರ ವಿಷಯದಲ್ಲಿಯೇ ಆಗಲೀ ; ಸ್ತ್ರೀಯರ ವಿಷಯದಲ್ಲಿಯೇ ಆಗಲೀ ; ಹಾಸ-ಪರಿಹಾಸಕ್ಕೆ ಯೋಗ್ಯರಾದ ಸಂಬಂಧಿಕರೊಡನೆಯೇ ಆಗಲೀ ; ಯುದ್ಧದಲ್ಲಿಯೇ ಆಗಲೀ ; ಆಪತ್ಕಾಲದಲ್ಲಿಯೇ ಆಗಲೀ ; ಸಂಕಟದ ಸಮಯದಲ್ಲಿಯೇ ಆಗಲೀ–ಸುಳ್ಳುಹೇಳಿರುವುದಿಲ್ಲ. ಇಂತಹ ಸತ್ಯನಿಷ್ಠೆಯಿಂದ ಪ್ರಾಪ್ತವಾಗಿರುವ ಫಲವು ನಿನ್ನದಾಗಲಿ. ಇದೇ ಸತ್ಯದ ಪ್ರಭಾವದಿಂದ ನೀನು ಸ್ವರ್ಗಕ್ಕೆ ಹೋಗು.

ತಾತ! ನಾನು ಪ್ರಾಣಗಳನ್ನಾದರೂ ತ್ಯಜಿಸಿಯೇನು ; ರಾಜ್ಯವನ್ನಾದರೂ ತ್ಯಜಿಸಿಯೇನು ; ಸಕಲವಿಧವಾದ ಕಾಮನೆಗಳನ್ನೂ ತ್ಯಜಿಸಿಯೇನು ; ಸಕಲವಿಧವಾದ ಸುಖಗಳನ್ನೂ ತ್ಯಜಿಸಿಯೇನು, ಆದರೆ ಸತ್ಯವನ್ನು ಮಾತ್ರ ಖಂಡಿತವಾಗಿಯೂ ಪರಿತ್ಯಜಿಸತಕ್ಕವನಲ್ಲ. ಈ ನನ್ನ ಸತ್ಯನಿಷ್ಠೆಯಿಂದ ಪ್ರಾಪ್ತವಾಗಿರುವ ಫಲವು ನಿನ್ನದಾಗಲಿ. ಈ ಸತ್ಯದ ಪ್ರಭಾವದಿಂದ

---

* ಸಾಮಾನ್ಯವಾಗಿ ಬಾಲಕರ ವಿಷಯದಲ್ಲಿ, ಹೆಂಗಸರೊಡನೆ-ಗೆಳೆಯರೊಡನೆ ವಿನೋದಮಾಡುವಾಗ. ಯುದ್ಧಕಾಲದಲ್ಲಿ, ಆಪತ್ಕಾಲದಲ್ಲಿ ಸುಳ್ಳುಹೇಳಿದರೂ ದೋಷವಿಲ್ಲವೆಂದು ಹಿರಿಯರ ಅಭಿಪ್ರಾಯವಾಗಿದೆ. ಇಂದಿನ ವ್ಯವಹಾರದಲ್ಲಂತೂ ಸುಳ್ಳುಮಾತುಗಳು ಪುಂಖಾನುಪುಂಖವಾಗಿ ಹೊರಬರುತ್ತಿರುತ್ತವೆ. 'ನಾನು ಹೇಳಿದುದು ಸುಳ್ಳಲ್ಲವೇ?' ಎಂದೂ ಯೋಚಿಸಹೋಗುವುದಿಲ್ಲ. ಸುಳ್ಳೆಂಬುದು ನಮ್ಮ ನಿತ್ಯಜೀವನದಲ್ಲಿ ಹಾಸು-ಹೊಕ್ಕಾಗಿ ಸೇರಿಕೊಂಡುಬಿಟ್ಟಿದೆ. ಇಂದು ನಾನಾಡಿರುವ ಮಾತುಗಳಲ್ಲಿ ಸುಳ್ಳೆಷ್ಟು, ನಿಜ ಎಷ್ಟು ಎಂದು ಒಮ್ಮೆ ಯಾರಾದರೂ ರಾತ್ರಿ ಮಲಗುವಾಗ ಯೋಚಿಸಿಕೊಂಡಲ್ಲಿ ಇದರ ಅರಿವಾದೀತು. ದಿನವಿಡೀ ಸತ್ಯವೇ ಬಾಯಲ್ಲಿ ಬಾರದಿದ್ದರೂ ಆಶ್ಚರ್ಯವೇನೂ ಇಲ್ಲ. ಹೀಗಿರುವಾಗ ಶಿಬಿಯು ಯಾವ ಕಾಲದಲ್ಲಿಯೂ, ಯಾವ ಕಾರಣದಿಂದಲೂ, ಯಾರೊಡನೆಯೂ ಸುಳ್ಳನ್ನೇ ಆಡಿಲ್ಲವೆಂದು ಸತ್ಯಪ್ರತಿಜ್ಞೆಯನ್ನು ಮಾಡುತ್ತಾನೆ. ಈ ಸತ್ಯನಿಷ್ಠೆಯಿಂದ ಅವನಿಗೆ ಲಭಿಸಿರುವ ಫಲವು ಅಪಾರವೆಂಬುದರಲ್ಲಿ ಸಂಶಯವೇ ಇಲ್ಲ.

ನೀನು ಸ್ವರ್ಗಕ್ಕೆ ಹೋಗು. ನನ್ನ ಸತ್ಯನಿಷ್ಠೆಯಿಂದ ಯಮಧರ್ಮನು ಸುಪ್ರೀತನಾಗಿರುತ್ತಾನೆ. ಅಗ್ನಿಯೂ ಸುಪ್ರೀತನಾಗಿರುತ್ತಾನೆ. ಶತಕ್ರತುವಾದ ದೇವೇಂದ್ರನೂ ಸುಪ್ರೀತನಾಗಿರುತ್ತಾನೆ. ಅಂತಹ ಸತ್ಯದ ಪ್ರಭಾವದಿಂದ ನೀನು ಸ್ವರ್ಗಕ್ಕೆ ಹೋಗು."

ಅನಂತರದಲ್ಲಿ ವಿಶ್ವಾಮಿತ್ರನಿಗೆ ಮಾಧವಿಯಲ್ಲಿ ಹುಟ್ಟಿದ ಅಷ್ಟಕನು ಅನೇಕಶತಯಜ್ಞಗಳನ್ನು ಮಾಡಿದ್ದ, ಮಹಾನುಭಾವನಾದ, ನಹುಷನ ಮಗನಾದ ಯಯಾತಿಯ ಸಮೀಪಕ್ಕೆ ಹೋಗಿ ಅವನೊಡನೆ ಹೇಳಿದನು :

**ಶತಶಃ ಪುಣ್ಡರೀಕಾ ಮೇ ಗೋಸವಾಶ್ಚರಿತಾಃ ಪ್ರಭೋ ।**
**ಕ್ರತವೋ ವಾಜಪೇಯಾಶ್ಚ ತೇಷಾಂ ಫಲಮವಾಪ್ನುಹಿ ॥೧೩॥**

**ನ ಮೇ ರತ್ನಾನಿ ನ ಧನಂ ನ ತಥಾನ್ಯೇ ಪರಿಚ್ಛದಾಃ ।**
**ಕ್ರತುಷ್ವನುಪಯುಕ್ತಾನಿ ತೇನ ಸತ್ಯೇನ ಖಂ ವ್ರಜ ॥೧೪॥**

"ಮಹಾರಾಜ! ನಾನು ನೂರಾರು ಪುಂಡರೀಕಯಾಗಗಳನ್ನೂ, ಗೋಸವಗಳನ್ನೂ ಮತ್ತು ವಾಜಪೇಯಗಳನ್ನೂ ಮಾಡಿದ್ದೇನೆ. ಅವುಗಳೆಲ್ಲದರ ಫಲವೂ ನಿನಗೇ ಇರಲಿ. ಈ ಯಜ್ಞಗಳಿಗಾಗಿ ಉಪಯೋಗಿಸದೇ ಇರುವ ರತ್ನಗಳಾಗಲೀ, ಧನವಾಗಲೀ, ಬೇರಾವ ವಸ್ತುಗಳೇ ಆಗಲಿ-ನನ್ನಲ್ಲಿರುವುದಿಲ್ಲ. ನನ್ನಲ್ಲಿರುವ ಸರ್ವಸ್ವವನ್ನೂ ಯಜ್ಞಕ್ಕಾಗಿಯೇ ವಿನಿಯೋಗಿಸಿದ್ದೇನೆ. ಇದು ಸತ್ಯ. ಸತ್ಯನಿಷ್ಠೆಯಿಂದ ಮಾಡಿದ ಯಜ್ಞಫಲಪ್ರಭಾವದಿಂದ ನೀನು ಸ್ವರ್ಗಕ್ಕೆ ಹೋಗು."

ದುರ್ಯೋಧನ! ನಾಲ್ವರು ರಾಜಪುತ್ರರೂ ಹೇಗೆ-ಹೇಗೆ ಹೇಳುತ್ತಿದ್ದರೋ, ಹೇಗೆ-ಹೇಗೆ ತಮ್ಮ-ತಮ್ಮ ಪುಣ್ಯಫಲಗಳನ್ನು ಯಯಾತಿಗೆ ಧಾರೆಯೆರೆದುಕೊಡುತ್ತಿದ್ದರೋ, ಹಾಗೆ ಅವರು ಹೇಳುತ್ತಿದ್ದಂತೆಯೇ ಯಯಾತಿಯೂ ಭೂಮಿಯಿಂದ ಮೇಲೆ-ಮೇಲೆ ಹೋಗುತ್ತಿದ್ದನು. ಕಟ್ಟಕಡೆಗೆ ನಾಲ್ವರ ಪುಣ್ಯಪ್ರಭಾವದಿಂದ ಸ್ವರ್ಗಕ್ಕೂ ಹೋದನು. ಈ ರೀತಿಯಲ್ಲಿ ಆ ನಾಲ್ವರು ರಾಜಕುಮಾರರು ತಮ್ಮ ಸಮಸ್ತವಾದ ಸತ್ಕರ್ಮಫಲಗಳೆಲ್ಲವನ್ನೂ ಧಾರೆಯೆರೆದು ಸ್ವರ್ಗದಿಂದ ಭ್ರಷ್ಟನಾಗಿ ಭೂಮಿಗೆ ಬಿದ್ದಿದ್ದ ಯಯಾತಿಯನ್ನು ಉದ್ಧರಿಸಿ ಪುನಃ ಸ್ವರ್ಗಕ್ಕೆ ಬಹುಶೀಘ್ರವಾಗಿಯೇ ಕಳುಹಿಸಿಕೊಟ್ಟರು.

ಸುಪ್ರಸಿದ್ಧವಾದ ನಾಲ್ಕು ರಾಜವಂಶಗಳಲ್ಲಿ ಸಂಭೂತರಾದ, ಕುಲವರ್ಧನರಾದ, ಯಯಾತಿಯ ಮಗಳ ಮಕ್ಕಳಾದ ವಸುಮನಸ, ಪ್ರತರ್ದನ, ಶಿಬಿ ಮತ್ತು ಅಷ್ಟಕರು ತಮ್ಮ ಧರ್ಮಾನುಷ್ಠಾನದಿಂದಲೂ ಯಜ್ಞ-ದಾನಾದಿಗಳಿಂದಲೂ ಅರ್ಜಿಸಿದ ಪುಣ್ಯಫಲದಿಂದ ಮಹಾಪ್ರಾಜ್ಞ ನಾದ ತಮ್ಮ ಮಾತಾಮಹನನ್ನು ಸ್ವರ್ಗಕ್ಕೆ ಹತ್ತಿಸಿದರು.

ತಮ್ಮ ಪುಣ್ಯಫಲಪ್ರಭಾವದಿಂದ ಸ್ವರ್ಗದ ಕಡೆಗೆ ಹೋಗುತ್ತಿದ್ದ ಯಯಾತಿಯನ್ನು ಕಂಡು ಹೃಷ್ಟರಾದ ರಾಜಕುಮಾರರು ಪುನಃ ಪುನಃ ಹೇಳಿದರು :

"ಮಹಾರಾಜ! ನಾವು ರಾಜಧರ್ಮದಿಂದ ಕೂಡಿದವರಾಗಿದ್ದೇವೆ. ರಾಜೋಚಿತವಾದ ಗುಣಗಳಿಂದ ಕೂಡಿದವರಾಗಿದ್ದೇವೆ. ಸರ್ವಧರ್ಮ ಗಳನ್ನೂ ತಿಳಿದವರಾಗಿದ್ದು ಸಮಸ್ತಸದ್ಗುಣಗಳಿಂದಲೂ ಸಂಪನ್ನರಾಗಿದ್ದೇವೆ. ಮೇಲಾಗಿ ನಾವು ನಿನ್ನ ದೌಹಿತ್ರರಾಗಿದ್ದೇವೆ. ನಾವು ಮಾಡಿರುವ ಸಕಲ ಸತ್ಕರ್ಮಗಳ ಪುಣ್ಯಗಳೆಲ್ಲವನ್ನೂ ಸ್ವೀಕರಿಸಿ ತತ್ಪ್ರಭಾವದಿಂದ ಸ್ವರ್ಗಾರೋಹಣಮಾಡು."

೧೨೨ನೆಯ ಅಧ್ಯಾಯವು ಮುಗಿಯಿತು.

೧೨೩ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ)

## ಸ್ವರ್ಗವಾಸಿಗಳಿಂದ ಯಯಾತಿಗೆ ಸ್ವಾಗತ : ಸ್ವಾಭಿಮಾನವೇ ಪತನಕ್ಕೆ ಕಾರಣವಾಯಿತೆಂದು ಬ್ರಹ್ಮನು ಯಯಾತಿಗೆ ಹೇಳಿದುದು : ಕಥೆಯನ್ನು ಮುಗಿಸಿ ನಾರದರು ದುರ್ಯೋಧನನಿಗೆ ಸಮಾಧಾನವನ್ನು ಹೇಳಿದುದು

ನಾರದರು ಮುಂದುವರಿದು ಹೇಳುತ್ತಾರೆ :

"ದುರ್ಯೋಧನ! ಯಥೇಚ್ಛವಾಗಿ ಭೂರಿದಕ್ಷಿಣೆಯನ್ನು ಯಜ್ಞ ಕಾಲದಲ್ಲಿ ಬ್ರಾಹ್ಮಣರಿಗೆ ಕೊಡುವ ಸ್ವಭಾವವಿದ್ದ, ಸತ್ಸ್ವಭಾವವುಳ್ಳ ರಾಜ ರಿಂದ ಸ್ವರ್ಗಕ್ಕೆ ಕಳುಹಿಸಲ್ಪಟ್ಟ ಯಯಾತಿಯು ದೌಹಿತ್ರರಿಗೆ ಅನುಜ್ಞೆಯನ್ನು ಕೊಟ್ಟು ಸ್ವರ್ಗಕ್ಕೆ ಹೋದನು. ಸ್ವರ್ಗಕ್ಕೆ ಹೋಗುತ್ತಲೇ ಅವನ ಮೇಲೆ

ಸುಗಂಧಯುಕ್ತವಾದ ಪುಷ್ಪಗಳ ವೃಷ್ಟಿಯಾಯಿತು. ಪುಣ್ಯಗಂಧಯುಕ್ತನಾದ, ಪವಿತ್ರಾತ್ಮನಾದ ವಾಯುವಿನಿಂದಲೂ ಅವನು ಆಲಿಂಗಿಸಲ್ಪಟ್ಟನು. (ಸುವಾಸಿತವಾದ ಮಂದಮಾರುತವು ಯಯಾತಿಯ ಮೇಲೆ ಬೀಸಿತು.) ತನ್ನ ಮಗಳ ಮತ್ತು ದೌಹಿತ್ರರ ತಪಃಫಲದಿಂದ ಜಯಿಸಲ್ಪಟ್ಟ ಸುಸ್ಥಿರವಾದ ಸ್ಥಾನವನ್ನು ಹೊಂದಿ ತನ್ನ ಅನುಷ್ಠಾನಗಳಿಂದಲೂ ವೃದ್ಧಿಹೊಂದಿದ ಯಯಾತಿಯು ಪರಮೋತ್ಕೃಷ್ಟವಾದ ಕಾಂತಿಯಿಂದ ಪ್ರಕಾಶಿಸಿದನು. ಸ್ವರ್ಗವಾಸಿಗಳು ಸ್ವರ್ಗದಲ್ಲವನನ್ನು ಭೇರೀ-ದುಂದುಭಿ-ಮೃದಂಗಾದಿ ಮಂಗಳವಾದ್ಯಗಳೊಡನೆ ಪರಮಪ್ರೀತಿಯಿಂದ ಸ್ವಾಗತಿಸಿದರು. ಗೌರವಾರ್ಥವಾಗಿ ಗಂಧರ್ವಾಪ್ಸರೆಯರು ಅವನ ಗುಣಗಳನ್ನು ಗಾನಮಾಡಿ ನೃತ್ಯವಾಡಿದರು. ದೇವರ್ಷಿಗಳೂ, ರಾಜರ್ಷಿಗಳೂ ಮತ್ತು ಚಾರಣರೂ ಅವನನ್ನು ನಾನಾಪ್ರಕಾರವಾಗಿ ಸ್ತೋತ್ರಮಾಡಿದರು. ದೇವತೆಗಳು ಯಯಾತಿಗೆ ಉತ್ತಮವಾದ ಅರ್ಘ್ಯ-ಪಾದ್ಯಾದಿಗಳನ್ನಿತ್ತು ಬಹುವಾಗಿ ಸತ್ಕರಿಸಿದರು. ಈ ಪ್ರಕಾರವಾಗಿ ಯಯಾತಿಯು ಪುನಃ ಸ್ವರ್ಗವಾಸವನ್ನು ಪಡೆದುಕೊಂಡನು. ಸ್ವರ್ಗವನ್ನು ಪುನಃ ಪಡೆದು ಸಂತುಷ್ಟನಾಗಿದ್ದ ಮತ್ತು ಶಾಂತಮನಸ್ಕನಾಗಿದ್ದ ಯಯಾತಿಯನ್ನು ಮಧುರವಚನಗಳಿಂದಲೂ ಸಂತೃಪ್ತಿಗೊಳಿಸಲೋ ಎಂಬಂತೆ ಪಿತಾಮಹನು (ಬ್ರಹ್ಮನು) ಈ ಮಾತುಗಳನ್ನು ಹೇಳಿದನು :

"ಮಹಾರಾಜ! ನೀನು ಲೋಕಕ್ಕೆ ಹಿತಕರವಾದ ಕರ್ಮಗಳನ್ನು ಮಾಡಿ ನಾಲ್ಕು ಪಾದಗಳಿಂದಲೂ ಯುಕ್ತವಾದ ಧರ್ಮವನ್ನು ಸಂಗ್ರಹಿಸಿರುವೆ. ಆದುದರಿಂದ ನಿನಗಿಂದು ಕ್ಷಯರಹಿತವಾದ ಸ್ವರ್ಗಲೋಕವು ಪ್ರಾಪ್ತವಾಗಿದೆ. ಸ್ವರ್ಗದಲ್ಲಿ ನಿನ್ನ ಕೀರ್ತಿಯೂ ಕ್ಷಯರಹಿತವಾಗಿ–ಶಾಶ್ವತವಾಗಿ ಉಳಿಯುತ್ತದೆ. ಈ ಮೊದಲು ನೀನು ಸ್ವರ್ಗದಿಂದ ಚ್ಯುತನಾಗಲು ಕಾರಣವಿರಲಿಲ್ಲ. ಆದರೆ ನಿನ್ನ ಸುಕೃತವನ್ನು ನೀನೇ ಹಾಳುಮಾಡಿಕೊಂಡೆ. (ನಿನ್ನ ಅವನತಿಗೆ ನೀನೇ ಕಾರಣನಾದೆ.). ಆ ಸಮಯದಲ್ಲಿ ಸಮಸ್ತ ಸ್ವರ್ಗವಾಸಿಗಳ ಮನಸ್ಸು ಕತ್ತಲಿನಿಂದ ಆವೃತವಾಗಿಬಿಟ್ಟಿತು. ಈ ಕಾರಣದಿಂದಲೇ ನೀನಾರೆಂಬುದನ್ನು ಅವರು ಸಂಪೂರ್ಣವಾಗಿ ಮರೆತೇಬಿಟ್ಟರು. ನೀನಾರೆಂಬುದರ ಸ್ಮರಣೆಯೇ ಅವರಿಗೆ

ಬರಲಿಲ್ಲ. ನೀನು ಸ್ವರ್ಗವಾಸಿಗಳಿಗೆ ಅಜ್ಞಾತನಾದುದರಿಂದ ಸ್ವರ್ಗದಿಂದ ಕೆಳಕ್ಕೆ ಬೀಳಬೇಕಾಯಿತು. ಪುನಃ ನಿನ್ನ ದೌಹಿತ್ರರು ಪ್ರೇಮಪೂರ್ವಕವಾಗಿ ತಮ್ಮಲ್ಲಿದ್ದ ಪುಣ್ಯಫಲಗಳೆಲ್ಲವನ್ನೂ ನಿನಗೆ ಕೊಟ್ಟು ನಿನ್ನನ್ನು ಉದ್ಧರಿಸಿದರು. ಅವರ ತಪಃಫಲದಿಂದಾಗಿ ಪುನಃ ನೀನಿಲ್ಲಿಗೆ ಬರಲು ಸಾಧ್ಯವಾಯಿತು. ನಿನ್ನ ಕರ್ಮದಿಂದ ಹಿಂದೆ ಜಯಿಸಲ್ಪಟ್ಟಿದ್ದ, ಅಚಲವಾದ, ಶಾಶ್ವತವಾದ, ಉತ್ತಮೋತ್ತಮವಾದ, ಸುಸ್ಥಿರವಾದ, ಕ್ಷಯರಹಿತವಾದ, ಪುಣ್ಯತಮವಾದ ಸ್ಥಾನವನ್ನು ಪುನಃ ನೀನು ನಿನ್ನ ದೌಹಿತ್ರರ ಪುಣ್ಯಫಲದಿಂದ ಪಡೆದುಕೊಂಡಿರುವೆ.”

ಯಯಾತಿಯು ಹೇಳುತ್ತಾನೆ :

“ಪಿತಾಮಹ! ನನಗೊಂದು ಸಂಶಯವಿದೆ. ಅದನ್ನು ಪರಿಹರಿಸಲು ನೀನೇ ಸಮರ್ಥನಾಗಿರುವೆ. ಭಗವನ್! ಈ ಸಂಶಯದ ಪರಿಹಾರಕ್ಕಾಗಿ ನಾನು ನಿನ್ನನ್ನು ಬಿಟ್ಟು ಬೇರೆಯವರನ್ನು ಪ್ರಶ್ನಿಸುವುದು ಉಚಿತವಲ್ಲವೆಂದು ಭಾವಿಸಿದ್ದೇನೆ.

**ಬಹುವರ್ಷಸಹಸ್ರಾಂತಂ ಪ್ರಜಾಪಾಲನವರ್ಧಿತಮ್ ।**
**ಅನೇಕಕ್ರತುದಾನೌಘೈರರ್ಜಿತಂ ಮೇ ಮಹತ್ಫಲಮ್ ॥೧೨॥**

**ಕಥಂ ತದಲ್ಪಕಾಲೇನ ಕ್ಷೀಣಂ ಯೇನಾಸ್ಮಿ ಪಾತಿತಃ ।**
**ಭಗವನ್ವೇತ್ಥ ಲೋಕಾಂಶ್ಚ ಶಾಶ್ವತಾನ್ಮಮ ನಿರ್ಮಿತಾನ್ ।**
**ಕಥಂ ನು ಮಮ ತತ್ಸರ್ವಂ ವಿಪ್ರಣಷ್ಟಂ ಮಹಾದ್ಯುತೇ ॥೧೩॥**

ಮಹಾದ್ಯುತಿಮಂತನೇ! ಅನೇಕಸಹಸ್ರವರ್ಷಗಳ ಪರ್ಯಂತವಾಗಿ ಧರ್ಮದಿಂದ ಪ್ರಜಾಪಾಲನೆಮಾಡಿ ಉಪಾರ್ಜಿತವಾದ ಫಲ ; ಅನೇಕ ಕ್ರತುಗಳನ್ನು ಮಾಡಿ ಗಳಿಸಿದ ಫಲ ಮತ್ತು ಯಥೇಚ್ಛವಾಗಿ ಬ್ರಾಹ್ಮಣರಿಗೆ ದಾನಮಾಡಿದುದರಿಂದ ಪ್ರಾಪ್ತವಾದ ಮಹಾಫಲ–ಈ ಎಲ್ಲವೂ ಕೇವಲ ಸ್ವಲ್ಪ ಕಾಲದಲ್ಲಿಯೇ ಹೇಗೆ ಕ್ಷೀಣಿಸಿಹೋಯಿತು? ನಾನು ನನ್ನ ಪುಣ್ಯಕರ್ಮದಿಂದ ಎಂತೆಂತಹ ಮಹಾಲೋಕಗಳನ್ನು ಜಯಿಸಿದ್ದೇನೆಂಬ ವಿಷಯವು ನಿನಗೇ ತಿಳಿದಿರುವುದು. ಅಷ್ಟೊಂದು ಫಲವೂ ಅತ್ಯಲ್ಪಕಾಲದಲ್ಲಿಯೇ ಯಾವ ಕಾರಣದಿಂದ ನಷ್ಟವಾಗಿಹೋಯಿತು?”

ಬ್ರಹ್ಮನು ಹೇಳುತ್ತಾನೆ :

ಬಹುವರ್ಷಸಹಸ್ರಾಂತಂ ಪ್ರಜಾಪಾಲನವರ್ಧಿತಮ್ ।
ಅನೇಕಕ್ರತುದಾನೌಘೈರ್ಯತ್ತ್ವಯೋಪಾರ್ಜಿತಂ ಫಲಮ್ ॥೧೪॥
ತದನೇನೈವ ದೋಷೇಣ ಕ್ಷೀಣಂ ಯೇನಾಸಿ ಪಾತಿತಃ ।
ಅಭಿಮಾನೇನ ರಾಜೇನ್ದ್ರ ಧಿಕ್ಕೃತಃ ಸ್ವರ್ಗವಾಸಿಭಿಃ ॥೧೫॥

"ರಾಜೇಂದ್ರ! ಅನೇಕಸಹಸ್ರವರ್ಷಗಳ ಪರ್ಯಂತವಾಗಿ ಧರ್ಮದಿಂದ ಪ್ರಜೆಗಳನ್ನು ಪಾಲಿಸಿದ ಫಲ, ಅನೇಕಾನೇಕ ಕ್ರತುಗಳನ್ನು ಮಾಡಿ ಗಳಿಸಿದ ಫಲ ಮತ್ತು ರಾಶಿ-ರಾಶಿಯಾಗಿ ಸತ್ಪಾತ್ರರಲ್ಲಿ ದಾನಮಾಡಿ ಸಂಪಾದಿಸಿದ ಫಲ– ಈ ಎಲ್ಲವೂ ಸ್ವಾಭಿಮಾನವೆಂಬ ಒಂದೇ ಒಂದು ದೋಷದಿಂದ ನಾಶವಾಗಿಹೋಯಿತು. ಆ ಸ್ವಾಭಿಮಾನದೋಷದಿಂದಲೇ ನೀನು ಸ್ವರ್ಗವಾಸಿಗಳಿಂದ ಧಿಕ್ಕೃತನಾದೆ ಮತ್ತು ಸ್ವರ್ಗದಿಂದಲೂ ಚ್ಯುತನಾದೆ.

ನಾಯಂ ಮಾನೇನ ರಾಜರ್ಷೇ ನ ಬಲೇನ ನ ಹಿಂಸಯಾ ।
ನ ಶಾಠ್ಯೇನ ನ ಮಾಯಾಭಿರ್ಲೋಕೋ ಭವತಿ ಶಾಶ್ವತಃ ॥೧೬॥

ರಾಜರ್ಷಿಯೇ! ಶಾಶ್ವತವಾದ ಪುಣ್ಯಲೋಕಗಳು ದುರಭಿಮಾನದಿಂದ ಸಿಕ್ಕತಕ್ಕುವುಗಳಲ್ಲ ; ಬಲದಿಂದ ಪ್ರಾಪ್ತವಾಗತಕ್ಕುವುಗಳಲ್ಲ. ಹಿಂಸೆಯಿಂದ ಅವನ್ನು ಗೆದ್ದುಕೊಳ್ಳುವ ಸಾಧ್ಯತೆಯಿಲ್ಲ. ಶಠತ್ವದಿಂದ (ಉದ್ಧಟತನದಿಂದ) ಅವನ್ನು ಪಡೆದುಕೊಳ್ಳಲಾಗುವುದಿಲ್ಲ. ಮಾಯಾವಿದ್ಯೆಗಳಿಂದಾಗಲೀ, ಮೋಸದಿಂದಾಗಲೀ ಆ ಪುಣ್ಯಲೋಕಗಳನ್ನು ಜಯಿಸುವ ಸಾಧ್ಯತೆಯಿಲ್ಲ.

ನಾವಮಾನ್ಯಾಸ್ತ್ವಯಾ ರಾಜನ್ನಧಮೋತ್ಕೃಷ್ಟಮಧ್ಯಮಾಃ ।
ನ ಹಿ ಮಾನಪ್ರದಗ್ಧಾನಾಂ ಕಶ್ಚಿದಸ್ತಿ ಶಮಃ ಕ್ವಚಿತ್ ॥೧೭॥

ಮಹಾರಾಜ! ನೀನು ಯಾವಾಗಲೂ ಅಧಮರನ್ನಾಗಲೀ, ಮಧ್ಯಮರನ್ನಾಗಲೀ, ಉತ್ತಮರನ್ನಾಗಲೀ ಅವಮಾನಗೊಳಿಸಬಾರದು. (ಅವರ ವಿಷಯದಲ್ಲಿ ಅನಾದರಣೆಯ ಮಾತುಗಳನ್ನಾಡಬಾರದು.) ಅಭಿಮಾನವೆಂಬ ಅಗ್ನಿಯ ಜ್ವಾಲೆಗೆ ಸಿಕ್ಕಿ ದಗ್ಧವಾಗುತ್ತಿರುವವರಿಗೆ ಉಪಶಮನವು ಯಾವಾಗಲೂ ಯಾವ ಉಪಾಯದಿಂದಲೂ ಸಾಧ್ಯವಾಗುವುದಿಲ್ಲ.

**ಪತನಾರೋಹಣಮಿದಂ ಕಥಯಿಷ್ಯನ್ತಿ ಯೇ ನರಾಃ ।**
**ವಿಷಮಾಣ್ಯಪಿ ತೇ ಪ್ರಾಪ್ತಾಸ್ತರಿಷ್ಯನ್ತಿ ನ ಸಂಶಯಃ ॥೧೮॥**

ಸ್ವರ್ಗದಿಂದ ಚ್ಯುತನಾಗಿ ಪುನಃ ಸ್ವರ್ಗಾರೋಹಣವನ್ನು ಮಾಡಿದ ಈ ನಿನ್ನ ವೃತ್ತಾಂತವನ್ನು ಯಾರು ಹೇಳುತ್ತಾರೆಯೋ ಮತ್ತು ಯಾರು ಕೇಳುತ್ತಾರೆಯೋ ಅಂತಹ ಮನುಷ್ಯರು ಎಂತಹುದೇ ಕಷ್ಟಕ್ಕೊಳಗಾದರೂ ಅದರಿಂದ ಪಾರಾಗುತ್ತಾರೆ. ಇದರಲ್ಲಾವ ಸಂಶಯವೂ ಇಲ್ಲ.” ಹೀಗೆಂದು ಹೇಳಿ ಪಿತಾಮಹನು ಸ್ವಸ್ಥಾನಕ್ಕೆ ತೆರಳಿದನು.”

ನಾರದರು ಕಥೆಯನ್ನು ಸಮಾಪನಗೊಳಿಸುತ್ತಾ ಹೇಳುತ್ತಾರೆ :

**ಏಷ ದೋಷೋಽಭಿಮಾನೇನ ಪುರಾ ಪ್ರಾಪ್ತೋ ಯಯಾತಿನಾ ।**
**ನಿರ್ಬಧ್ನತಾತಿಮಾತ್ರಂ ಚ ಗಾಲವೇನ ಮಹೀಪತೇ ॥೧೯॥**

“ಮಹಾರಾಜ! ಯಯಾತಿಯು ದುರಭಿಮಾನದಿಂದ ಸ್ವರ್ಗಭ್ರಷ್ಟನಾಗುವಂತಹ ಮಹಾದೋಷಕ್ಕೆ ಭಾಗಿಯಾದನು. ಗುರುವನ್ನು ನಿರ್ಬಂಧಿಸಿದ ಕಾರಣದಿಂದ ಮತ್ತು ಹಠಮಾಡಿದುದರ ಕಾರಣದಿಂದ ಗಾಲವನು ಮಹಾಕ್ಲೇಶಕ್ಕೆ ಗುರಿಯಾದನು. (ಆದುದರಿಂದ ಸ್ವಾಭಿಮಾನವೆಂದಿಗೂ ಇರಬಾರದು ; ದೊಡ್ಡವರನ್ನು ನಿರ್ಬಂಧಿಸಬಾರದು ಮತ್ತು ಯಾವುದಕ್ಕೇ ಆದರೂ ಹಠಮಾಡಬಾರದು ಎಂಬುದು ಈ ಪ್ರಕರಣದಿಂದ ತಿಳಿದುಬರುತ್ತದೆ.)

**ಶ್ರೋತವ್ಯಂ ಹಿತಕಾಮಾನಾಂ ಸುಹೃದಾಂ ಹಿತಮಿಚ್ಛತಾಮ್ ।**
**ನ ಕರ್ತವ್ಯೋ ನ ನಿರ್ಬನ್ಧೋ ನಿರ್ಬನ್ಧೋ ಹಿ ಕ್ಷಯೋದಯಃ ॥೨೦॥**

ನಿನ್ನ ಹಿತವನ್ನೇ ಅಪೇಕ್ಷಿಸುವ ಹಿತಾಕಾಂಕ್ಷಿಗಳಾದ ಸುಹೃದರ ಮಾತುಗಳನ್ನು ನೀನು ಕೇಳಲೇಬೇಕು. ನಿನ್ನ ಮನಸ್ಸಿನಲ್ಲಿರುವುದನ್ನೇ (ದುರಾಗ್ರಹವನ್ನೇ) ಇತರರ ಮೇಲೆ ಒತ್ತಾಯಿಸಲು ಹೋಗಬಾರದು. ಹೀಗೆ ಒತ್ತಾಯಿಸುವುದು ವಿನಾಶಕ್ಕೆ ಎಡೆಮಾಡಿಕೊಡುತ್ತದೆ. ಗಾಂಧಾರೇ! ಆದುದರಿಂದ ನೀನಾದರೂ ದುರಭಿಮಾನವನ್ನೂ, ಕ್ರೋಧವನ್ನೂ ಪರಿತ್ಯಜಿಸು. ಪಾಂಡವರೊಡನೆ ಸಂಧಾನಕ್ಕೆ ಸಮ್ಮತಿಸು. ಅವರ ಮೇಲಿರುವ ಕೋಪವನ್ನು ಪೂರ್ಣವಾಗಿ ಪರಿತ್ಯಜಿಸು.

**ದದಾತಿ ಯತ್ಪಾರ್ಥಿವ ಯತ್ಕರೋತಿ**
**ಯದ್ವಾ ತಪಸ್ತಪ್ಯತಿ ಯಜ್ಜುಹೋತಿ ।**
**ನ ತಸ್ಯ ನಾಶೋಽಸ್ತಿ ನ ಚಾಪಕರ್ಷೋ**
**ನಾನ್ಯಸ್ತದಶ್ನಾತಿ ಸ ಏವ ಕರ್ತಾ ॥೨೨॥**

ಮಹಾರಾಜ! ಮನುಷ್ಯನು ಯಾವ ದಾನವನ್ನು ಮಾಡುತ್ತಾನೆಯೋ, ಯಾವ ಪುಣ್ಯಕರ್ಮವನ್ನು ಮಾಡುತ್ತಾನೆಯೋ, ಯಾವ ತಪಸ್ಸನ್ನು ಮಾಡುತ್ತಾನೆಯೋ ಆ ಎಲ್ಲ ಕರ್ಮಗಳ ಅಥವಾ ಕರ್ಮಫಲಗಳ ನಾಶ ವೆಂದಿಗೂ ಆಗುವುದಿಲ್ಲ. ಆ ಶುಭಕರ್ಮಗಳ ಫಲವು ಕಡಿಮೆಯೂ ಆಗುವುದಿಲ್ಲ. ಅವನು ಮಾಡಿದುದನ್ನು ಬೇರೊಬ್ಬರು ಉಪಭೋಗಿಸು ವಂತೆಯೂ ಇಲ್ಲ. ಶುಭಕರ್ಮಗಳ ಕರ್ತೃವೂ ಮತ್ತು ಭೋಕ್ತೃವೂ ಅವನೇ ಆಗುತ್ತಾನೆ.

**ಇದಂ ಮಹಾಖ್ಯಾನಮನುತ್ತಮಂ ಹಿತಂ**
**ಬಹುಶ್ರುತಾನಾಂ ಗತರೋಷರಾಗಿಣಾಮ್ ।**
**ಸಮೀಕ್ಷ್ಯ ಲೋಕೇ ಬಹುಧಾ ಪ್ರಧಾರಿತಂ**
**ತ್ರಿವರ್ಗದೃಷ್ಟಿಃ ಪೃಥಿವೀಮುಪಾಶ್ನುತೇ ॥೨೩॥**

ಅನೇಕಶಾಸ್ತ್ರಗಳನ್ನು ತಿಳಿದಿರುವವರ ಮತ್ತು ಕಾಮ-ಕ್ರೋಧಾದಿಗಳನ್ನು ತ್ಯಜಿಸಿರುವವರ ಉತ್ತಮೋತ್ತಮವಾದ ಮಹಾಖ್ಯಾನವಿದಾಗಿದೆ. ಲೋಕ ದಲ್ಲಿ ನಾನಾಶಾಸ್ತ್ರಗಳ ಆಧಾರದಿಂದ ಸಿದ್ಧಾಂತವಾಗಿರುವ ಈ ವಿಷಯವನ್ನು ಚೆನ್ನಾಗಿ ಪರಿಶೀಲಿಸಿ, ಧರ್ಮಾರ್ಥ-ಕಾಮಗಳಲ್ಲಿ ದೃಷ್ಟಿಯಿಡುವ ಮಾನವನು ಈ ಮಹಾಖ್ಯಾನದಲ್ಲಿರುವ ನೀತಿಗನುಸಾರವಾಗಿ ನಡೆದುಕೊಂಡಿದ್ದೇ ಆದರೆ ಅಂತಹವನು ಈ ಪೃಥ್ವಿಯನ್ನೇ ಉಪಭೋಗಿಸಲು ಅರ್ಹನಾಗುತ್ತಾನೆ.”

ಗ೨೩ನೆಯ ಅಧ್ಯಾಯವು ಮುಗಿಯಿತು.

## ಧೃತರಾಷ್ಟ್ರನ ಅನುರೋಧದಿಂದ ಭಗವಾನ್ ಶ್ರೀಕೃಷ್ಣನು ದುರ್ಯೋಧನನಿಗೆ ವಿವೇಕವನ್ನು ಹೇಳಿದುದು

ಮಹರ್ಷಿಗಳಾದ ನಾರದರು ಹೀಗೆ ಹೇಳಿದನಂತರ ಧೃತರಾಷ್ಟ್ರನು ನಾರದರೊಡನೆ ಹೇಳುತ್ತಾನೆ :

"ನಾರದರೇ! ತಾವು ಹೇಗೆ ಹೇಳಿದಿರೋ ಅದು ಹಾಗೆಯೇ ಸರಿ. (ಅಹಂಕಾರಪಡಬಾರದು. ತನ್ನ ಅಭಿಪ್ರಾಯವನ್ನು ಇತರರ ಮೇಲೆ ಒತ್ತಾಯಿಸಲೂ ಹೋಗಬಾರದು.) ನಾನೂ ಹೀಗೆಯೇ ಇರಬೇಕೆಂಬ ಇಚ್ಛೆಯುಳ್ಳವನಾಗಿರುತ್ತೇನೆ. ಪೂಜ್ಯರೇ! ಆದರೆ ನಾನು ಈಶನಾಗಿಲ್ಲ. (ನನ್ನ ಅಧೀನದಲ್ಲಿ ನನ್ನ ಮಗನಿಲ್ಲ. ನಾನವನಿಗೆ ಅನುಶಾಸನಮಾಡಲು ಸಮರ್ಥನಾಗಿಲ್ಲ. ನನ್ನ ಮಾತನ್ನು ಇವನು ಕೇಳುವುದಿಲ್ಲ.)"

ಧೃತರಾಷ್ಟ್ರನು ನಾರದರೊಡನೆ ಹೀಗೆ ಹೇಳಿ ಶ್ರೀಕೃಷ್ಣನ ಕಡೆಗೆ ತಿರುಗಿ ಹೇಳಿದನು :

"ಕೇಶವ! ನನ್ನೊಡನೆ ನೀನು ಐಹಿಕಫಲದಾಯಕವಾಗಿಯೂ, ಆಮುಷ್ಮಿಕಫಲದಾಯಕವಾಗಿಯೂ, ಧರ್ಮಸಮ್ಮತವಾಗಿಯೂ, ನ್ಯಾಯ ಸಮ್ಮತವಾಗಿಯೂ ಇರುವ ಮಾತುಗಳನ್ನೇ ಹೇಳಿರುವೆ. ಆದರೆ, ಕೃಷ್ಣ! ನಾನೀವಿಷಯದಲ್ಲಿ ಸ್ವತಂತ್ರನಲ್ಲ. (ನನ್ನ ಅಭಿಪ್ರಾಯವನ್ನು ನನ್ನ ಮಗನ ಮೇಲೆ ಒತ್ತಾಯಿಸುವ ಸಾಮರ್ಥ್ಯವು ನನಗಿಲ್ಲ.) ಅಂಗ! ಕೃಷ್ಣ! ಮಹಾಬಾಹೋ! ಪುರುಷೋತ್ತಮ! ನೀನೀ ಸಮಯದಲ್ಲಿ ನನಗಾಗಿ ಒಂದು ಕಾರ್ಯವನ್ನು ಮಾಡಿಕೊಡಬೇಕಾಗಿದೆ. ನನಗೆ ಅಪ್ರಿಯವನ್ನೇ ಮಾಡುತ್ತಿರುವ, ಮೂಢನಾದ, ಶಾಸ್ತ್ರಗಳ ವಿಧಿ-ನಿಯಮಗಳನ್ನು ಮೀರಿ ನಡೆಯುವ ದುರ್ಯೋಧನನನ್ನು ಸನ್ಮಾರ್ಗಕ್ಕೆ ಸೆಳೆದು ತರಲು ನೀನಾದರೂ ಪ್ರಯತ್ನಿಸು. (ಮಹಾಮಹಿಮನಾದ ನಿನ್ನ ಮಾತನ್ನಾದರೂ ಕೇಳಿ ನನ್ನ ಮಗನು ಸನ್ಮಾರ್ಗಪ್ರವೃತ್ತನಾಗಬಹುದು.)

ಮಹಾಬಾಹೋ! ಮಾಧವ! ಮೂಢನಾದ ಈ ನನ್ನ ಮಗನು ಸತ್ಪುರುಷರು ಹೇಳಿದ ಸದ್ವಚನಗಳನ್ನು ಕೇಳುವುದಿಲ್ಲ. ಗಾಂಧಾರಿಯ

ಮತ್ತು ಧೀಮಂತನಾದ ವಿದುರನ ಮಾತನ್ನೂ ಕೇಳುವುದಿಲ್ಲ. ಬೇರೆಯ ಸ್ನೇಹಿತರ ಮಾತನ್ನೂ ಕೇಳುವುದಿಲ್ಲ. ಹಿತೈಷಿಗಳಾದ ಭೀಷ್ಮಾದಿಗಳ ಮಾತನ್ನೂ ನಿರ್ಲಕ್ಷಿಸಿರುವನು.

ಪಾಪಕಾರ್ಯಗಳನ್ನೇ ಸದಾಕಾಲದಲ್ಲಿಯೂ ಚಿಂತಿಸುವ, ಪಾಪಬುದ್ಧಿಯವನಾದ, ಪಾಪಕಾರ್ಯದಲ್ಲಿಯೇ ಲೀನವಾದ ಮನಸ್ಸುಳ್ಳ, ವಿವೇಕಶೂನ್ಯನಾದ, ಕ್ರೂರಿಯಾದ, ದುರಾತ್ಮನಾದ ದುರ್ಯೋಧನನನ್ನು ನೀನೇ ಅನುಶಾಸನಮಾಡು. ಹೀಗೆಯೇ ಮಾಡಬೇಕೆಂದು ಕಟ್ಟುನಿಟ್ಟಾಗಿ ಹೇಳು. ಒಂದು ವೇಳೆ ದೈವವಶದಿಂದ ನಿನ್ನ ಅನುಶಾಸನದಂತೆ ನನ್ನ ಮಗನು ನಡೆದುಕೊಂಡರೆ ಸುಹೃದರ ಒಂದು ಮಹಾಕಾರ್ಯವನ್ನೇ ನೀನು ಸಾಧಿಸಿದಂತಾಗುತ್ತದೆ, ಜನಾರ್ದನ!"

ಧೃತರಾಷ್ಟ್ರನ ಆ ಪ್ರಾರ್ಥನೆಯನ್ನಂಗೀಕರಿಸಿ ಸಕಲಧರ್ಮಾರ್ಥಗಳ ತತ್ತ್ವಗಳನ್ನೂ ತಿಳಿದಿದ್ದ ವೃಷ್ಣಿಕುಲಾವತಂಸನಾದ ಶ್ರೀಕೃಷ್ಣನು ಅಸಹನಶೀಲನಾದ ದುರ್ಯೋಧನನ ಕಡೆಗೆ ತಿರುಗಿ ಸುಮಧುರವಾದ, ಕರ್ಣಾನಂದಕರವಾದ ಈ ಮಾತುಗಳನ್ನು ಹೇಳಿದನು :

"ಕುರುಸತ್ತಮ! ದುರ್ಯೋಧನ! ನನ್ನ ಈ ಮಾತನ್ನು ಕೇಳು : ಅದರಲ್ಲಿಯೂ ವಿಶೇಷವಾಗಿ ಬಂಧು-ಬಾಂಧವಸಮೇತನಾದ ನಿನ್ನ ಸುಖಕ್ಕಾಗಿಯೇ ಹೇಳಲಿರುವ ನನ್ನ ಮಾತುಗಳನ್ನು ಗಮನವಿಟ್ಟು ಲಾಲಿಸು. ನೀನು ಮಹಾಪ್ರಾಜ್ಞರಾದವರ ವಂಶದಲ್ಲಿ ಹುಟ್ಟಿರುವೆ. ನಿನಗೆ ಶಾಸ್ತ್ರಗಳ ಪೂರ್ಣಪರಿಚಯವಿದೆ. ಶಾಸ್ತ್ರವಿಧಿಗೆ ಅನುಸಾರವಾದ ವ್ಯವಹಾರದಿಂದಲೂ ಸಂಪನ್ನನಾಗಿರುವೆ. ಸಕಲವಾದ ಉತ್ತಮಗುಣಗಳಿಂದಲೂ ವಿಶಿಷ್ಟನಾಗಿರುವೆ. ಇಂತಹ ನೀನು ನಿನ್ನ ಸುಖಕ್ಕಾಗಿಯೇ ಹೇಳುವ ನನ್ನ ಮಾತಿನಂತೆ ನಡೆಯುವುದು ಸಾಧುವಾಗಿದೆ. ನೀನು ಸಕಲಗುಣಪರಿಪೂರ್ಣನಾಗಿದ್ದರೂ ನಿನ್ನ ಕೆಲವು ನಿರ್ಧಾರಗಳು ಸತ್ಪುರುಷರ ವ್ಯವಹಾರಗಳಿಗೆ ಅನುಗುಣವಾಗಿರುವುದಿಲ್ಲ. ದುಷ್ಟಕುಲದಲ್ಲಿ ಹುಟ್ಟಿದವರು, ದುರಾತ್ಮರು, ಕ್ರೂರಿಗಳು, ನಾಚಿಕೆಗೆಟ್ಟವರು ಮಾತ್ರವೇ ನೀನು ನಿರ್ಧರಿಸಿರುವಂತಹ ಕಾರ್ಯಗಳನ್ನು ಮಾಡುತ್ತಾರೆ.

**ಧರ್ಮಾರ್ಥಯುಕ್ತಾ ಲೋಕೇಽಸ್ಮಿನ್ಪ್ರವೃತ್ತಿರ್ಲಕ್ಷ್ಯತೇ ಸತಾಮ್ ।**
**ಅಸತಾಂ ವಿಪರೀತಾ ತು ಲಕ್ಷ್ಯತೇ ಭರತರ್ಷಭ ॥೧೦॥**

ಭರತಶ್ರೇಷ್ಠನೇ! ಈ ಪ್ರಪಂಚದಲ್ಲಿ ಸತ್ಪುರುಷರ ವ್ಯವಹಾರಗಳು ಧರ್ಮಾರ್ಥಗಳಿಂದ ಯುಕ್ತವಾಗಿ ಕಾಣುತ್ತವೆ. ಅಸತ್ಪುರುಷರ ವ್ಯವಹಾರ ಗಳು ಇದಕ್ಕೆ ವಿಪರೀತವಾಗಿರುತ್ತವೆ. (ಧರ್ಮಾರ್ಥಹೀನವಾಗಿರುತ್ತವೆ. ಕಾಮಾನುಸಾರಿಯಾಗಿರುತ್ತವೆ.)

ಅಸತ್ಪುರುಷರಲ್ಲಿರಬಹುದಾದ ಇಂತಹ ವಿಪರೀತಬುದ್ಧಿಯು ನಿನ್ನಲ್ಲಿಯೂ ಕಾಣಿಸಿಕೊಳ್ಳುತ್ತಿದೆ. ಅದನ್ನು ನಿನ್ನಲ್ಲಿ ಪದೇ ಪದೇ ಕಾಣಬಹುದಾಗಿದೆ. ಧರ್ಮಾರ್ಥಗಳಿಗೆ ವಿಪರೀತವಾದ ಅಂತಹ ಒಂದು ಅಭಿಪ್ರಾಯವನ್ನು ನಾವು ನಿನ್ನಲ್ಲಿ ಕಾಣುತ್ತಿದ್ದೇವೆ. ಈ ನಿನ್ನ ಅಭಿಪ್ರಾಯವು ಧರ್ಮಹೀನವಾಗಿದೆ. ಇದು ಪ್ರಾಣವನ್ನೂ ಅಪಹರಿಸುವಷ್ಟು ಘೋರತರ ವಾಗಿದೆ. ಹೆಚ್ಚು ಅನಿಷ್ಟಪ್ರಾಪಕವಾಗಿದೆ. ನಿನ್ನಲ್ಲಿ ಈ ದುರಭಿಪ್ರಾಯವು ಮೂಡಲು ಯಾವುದಾದರೂ ದೊಡ್ಡದಾದೊಂದು ಕಾರಣವಿರಬಹುದೇ? ಎಂದು ವಿವೇಚಿಸಿದರೆ ಅಂತಹ ಕಾರಣವೇನೂ ಕಂಡುಬರುವುದಿಲ್ಲ. ನಿರ್ನಿಮಿತ್ತವಾಗಿ ನಿನ್ನಲ್ಲಿ ಈ ದುರಭಿಪ್ರಾಯವು ಮೂಡಿಬಂದಿದೆ. ಈ ದುರಭಿಪ್ರಾಯದ ಫಲಿತಾಂಶವೇನೆಂಬುದನ್ನೂ ನಾನು ಹೇಳಿಬಿಡುತ್ತೇನೆ. ನಿನ್ನ ಅಭಿಪ್ರಾಯದಂತೆ ಕಾರ್ಯವನ್ನು ಸಾಧಿಸಿಕೊಳ್ಳಲು ಖಂಡಿತವಾಗಿಯೂ ಶಕ್ಯವಿಲ್ಲ.

ಅಂತಹ ಅನರ್ಥಯುಕ್ತವಾದ ಅಭಿಪ್ರಾಯವನ್ನು ದೂರೀಕರಿಸು. ಇದರಿಂದ ಆತ್ಮಶ್ರೇಯಸ್ಸನ್ನೇ ಮಾಡಿಕೊಂಡಂತಾಗುತ್ತದೆ. ಮಿಗಿಲಾಗಿ ನಿನ್ನ ಸಹೋದರರಿಗೂ, ನಿನ್ನನ್ನೇ ಅವಲಂಬಿಸಿರುವ ಸೇವಕರಿಗೂ ಮತ್ತು ನಿನ್ನ ಮಿತ್ರರಿಗೂ ಶ್ರೇಯಸ್ಸನ್ನುಂಟುಮಾಡಿದಂತಾಗುತ್ತದೆ. ಅಧಾರ್ಮಿಕವಾದ ಮತ್ತು ಅಯಶಸ್ಕರವಾದ ಕಾರ್ಯದಿಂದ ನೀನು ವಿಮುಕ್ತಿಹೊಂದಿದಂತಾಗುತ್ತದೆ. ಭರತರ್ಷಭನೇ! ಪುರುಷವ್ಯಾಘ್ರನೇ! ಆದುದರಿಂದ ನಿನ್ನ ದುರಭಿಪ್ರಾಯ ವನ್ನು ತೊರೆದು ಪ್ರಾಜ್ಞರಾದ, ಪರಮೋತ್ಸಾಹಿಗಳಾದ, ದೃಢಚಿತ್ತರಾದ, ಬಹುಶ್ರುತರಾದ ಪಾಂಡವರೊಡನೆ ಸಂಧಿಗೆ ಸಮ್ಮತಿಸು . ನೀನು ಹೀಗೆ ಮಾಡುವುದು ಧೀಮಂತನಾದ ಧೃತರಾಷ್ಟ್ರನಿಗೂ ಹಿತಕರವಾಗಿದೆ ;

ಪ್ರಿಯವಾಗಿಯೂ ಇದೆ. ಭೀಷ್ಮನಿಗೂ, ದ್ರೋಣರಿಗೂ, ಮಹಾಮತಿಯಾದ ವಿದುರನಿಗೂ, ಕೃಪರಿಗೂ, ಸೋಮದತ್ತನಿಗೂ, ಧೀಮಂತನಾದ ಬಾಹ್ಲಿಕನಿಗೂ, ಅಶ್ವತ್ಥಾಮನಿಗೂ, ವಿಕರ್ಣನಿಗೂ, ಸಂಜಯನಿಗೂ, ವಿವಿಂಶತಿಗೂ, ಎಲ್ಲ ಜ್ಞಾತಿಜನರಿಗೂ ಮತ್ತು ಎಲ್ಲ ಮಿತ್ರರಿಗೂ ಹೆಚ್ಚು ಹಿತಕರವಾಗುವುದು.

**ಶಮೇ ಶರ್ಮ ಭವೇತ್ತಾತ ಸರ್ವಸ್ಯ ಜಗತಸ್ತಥಾ ।**
**ಹ್ರೀಮಾನಸಿ ಕುಲೇ ಜಾತಃ ಶ್ರುತವಾನನೃಶಂಸವಾನ್ ।**
**ತಿಷ್ಠ ತಾತ ಪಿತುಃ ಶಾಸ್ತ್ರೇ ಮಾತುಶ್ಚ ಭರತರ್ಷಭ ॥೧೯॥**

ನೀನು ಪಾಂಡವರೊಡನೆ ಸಂಧಾನಮಾಡಿಕೊಂಡೆಯಾದರೆ ಎಲ್ಲ ಜಗತ್ತಿಗೂ ಸುಖವುಂಟಾದೀತು. ದುರ್ಯೋಧನ! ನೀನು ಲಜ್ಜಾಶೀಲನಾಗಿರುವೆ ; ಸತ್ಕುಲಪ್ರಸೂತನಾಗಿರುವೆ ; ಶಾಸ್ತ್ರಪಾರಂಗತನಾಗಿರುವೆ ; ಮೇಲಾಗಿ ನೀನು ಕ್ರೂರಿಯೂ ಅಲ್ಲ. ಭರತರ್ಷಭನೇ! ಆದುದರಿಂದ ತಂದೆಯ ಮತ್ತು ತಾಯಿಯ ಶಾಸನಕ್ಕೊಳಪಡುವವನಾಗು. ಅವರ ಆಜ್ಞೆಯನ್ನು ಪರಿಪಾಲಿಸು. ಅವರು ಹೇಳಿದಂತೆ ಆಚರಿಸು.

ತಂದೆಯ ಅನುಶಾಸನವನ್ನು ಅಥವಾ ಆಜ್ಞೆಯನ್ನು ಶ್ರೇಯಸ್ಕರವೆಂದು ಉತ್ತಮಪುರುಷರು ಭಾವಿಸುತ್ತಾರೆ ಮತ್ತು ಅದರಂತೆಯೇ ನಡೆದುಕೊಳ್ಳುತ್ತಾರೆ. ದೊಡ್ಡ ಆಪತ್ತಿಗೊಳಗಾದ ಪ್ರತಿಯೊಬ್ಬನೂ ತಂದೆಯ ಹಿತವಾಕ್ಯವನ್ನು ಸ್ಮರಿಸಿ ಅದರಂತೆ ನಡೆದುಕೊಳ್ಳುತ್ತಾನೆ. ಕುರುಶ್ರೇಷ್ಠನೇ! ಈಗಿನ ಸಂದರ್ಭದಲ್ಲಿ ಪಾಂಡವರೊಂದಿಗೆ ಸಂಧಿಮಾಡಿಕೊಳ್ಳುವುದೇ ಅಮಾತ್ಯಸಹಿತನಾದ ನಿನ್ನ ತಂದೆಗೆ ಉತ್ತಮಮಾರ್ಗವಾಗಿ ಕಾಣುತ್ತಿದೆ. ನಿನ್ನ ತಂದೆಯ ಈ ಅಭಿಪ್ರಾಯವು ನಿನಗೂ ಮಾನ್ಯವಾಗಲಿ. ಪಾಂಡವರೊಡನೆ ಸಂಧಿಮಾಡಿಕೊಳ್ಳುವುದೇ ಉತ್ತಮವೆಂಬ ಅಭಿಪ್ರಾಯವು ನಿನಗೂ ಮೂಡಲಿ.

**ಶ್ರುತ್ವಾ ಯಃ ಸುಹೃದಾಂ ಶಾಸ್ತ್ರಂ ಮರ್ತ್ಯೋ ನ ಪ್ರತಿಪದ್ಯತೇ ।**
**ವಿಪಾಕಾನ್ತೇ ದಹತ್ಯೇನಂ ಕಿಮ್ಪಾಕಮಿವ ಭಕ್ಷಿತಮ್ ॥೨೨॥**

ಯಾವನು ಸುಹೃದರ ಅನುಶಾಸನವನ್ನು (ಸುಹೃದರು ಹೇಳಿದ ಶಾಸ್ತ್ರಸಮ್ಮತವಾದ ಮಾತನ್ನು) ಕೇಳಿ ಅನಂತರ ಅದರಂತೆ ನಡೆಯುವು

ದಿಲ್ಲವೋ (ಸತ್ಪುರುಷರ ಅನುಶಾಸನವನ್ನು ಪರಿಗ್ರಹಿಸುವುದಿಲ್ಲವೋ) ಅಂತಹವನನ್ನು ಆ ಅಪರಾಧವು–ವಿಷದ ಹಣ್ಣನ್ನು (ಇಂದ್ರಾಯಣಫಲವನ್ನು) ತಿಂದವನನ್ನು, ಆ ಹಣ್ಣು ಹೊಟ್ಟೆಯೊಳಗೆ ಹೋದನಂತರ ದಹಿಸಿಬಿಡುವಂತೆ ಕಾಲವು ಪರಿಪಕ್ವವಾದಾಗ ದಹಿಸುತ್ತದೆ.

**ಯಸ್ತು ನಿಃಶ್ರೇಯಸಂ ವಾಕ್ಯಂ ಮೋಹಾನ್ನ ಪ್ರತಿಪದ್ಯತೇ ।**
**ಸ ದೀರ್ಘಸೂತ್ರೋ ಹೀನಾರ್ಥಃ ಪಶ್ಚಾತ್ತಾಪೇನ ಯುಜ್ಯತೇ ॥೨೩॥**

ಯಾವನು ಮಿತ್ರರ ಶ್ರೇಯಸ್ಕರವಾದ ಮಾತನ್ನು ಕೇಳಿಯೂ ಮೋಹವಶನಾಗಿ ಅದರಂತೆ ನಡೆದುಕೊಳ್ಳದೆ ವಿಳಂಬಿಸುವನೋ ಅಂತಹ ದೀರ್ಘಸೂತ್ರನು ಸ್ವಾರ್ಥದಿಂದಲೇ ವಂಚಿತನಾಗಿ ಕಡೆಗೆ ಪಶ್ಚಾತ್ತಾಪ ಪಡುತ್ತಾನೆ.

**ಯಸ್ತು ನಿಃಶ್ರೇಯಸಂ ಶ್ರುತ್ವಾ ಪ್ರಾಕ್ತದೇವಾಭಿಪದ್ಯತೇ ।**
**ಆತ್ಮನೋ ಮತಮುತ್ಸೃಜ್ಯ ಸ ಲೋಕೇ ಸುಖಮೇಧತೇ ॥೨೪॥**

ಯಾವನು ತನಗೆ ಶ್ರೇಯಸ್ಕರವಾಗುವಂತಹ ಹಿರಿಯರ ಮಾತನ್ನು ಕೇಳಿ ಬಳಿಕ, ತನ್ನ ರೂಢಮೂಲವಾಗಿದ್ದ ಅಭಿಪ್ರಾಯವನ್ನು ವಿಸರ್ಜಿಸಿ ಹಿರಿಯರ ಶ್ರೇಯಸ್ಕರವಾದ ಮಾತಿಗೆ ಮೊದಲನೆಯ ಸ್ಥಾನವನ್ನು ಕೊಡುತ್ತಾನೆಯೋ, ಹಿರಿಯರ ಹಿತಕರವಾದ ಸಲಹೆಯನ್ನು ಪರಿಗ್ರಹಿಸುತ್ತಾನೆಯೋ ಅವನು ಲೋಕದಲ್ಲಿ ಸುಖವನ್ನು ಹೊಂದುತ್ತಾನೆ.

**ಯೋಽರ್ಥಕಾಮಸ್ಯ ವಚನಂ ಪ್ರಾತಿಕೂಲ್ಯಾನ್ನ ಮೃಷ್ಯತೇ ।**
**ಶೃಣೋತಿ ಪ್ರತಿಕೂಲಾನಿ ದ್ವಿಷತಾಂ ವಶಮೇತಿ ಸಃ ॥೨೫॥**

ತನ್ನ ಇಷ್ಟಾರ್ಥಸಾಧನೆಗಾಗಿಯೇ ಹೇಳುವ ಮಿತ್ರನೊಬ್ಬನ ಮಾತು ತನ್ನ ಅಭಿಪ್ರಾಯಕ್ಕೆ ವಿರುದ್ಧವಾಗಿರಬಹುದು. ತನ್ನ ಅಭಿಪ್ರಾಯಕ್ಕೆ ತನ್ನ ಹಿತಚಿಂತಕನ ಮಾತು ವಿರುದ್ಧವಾಗಿದೆಯೆಂಬ ಕಾರಣದಿಂದ ಅಂತಹ ಹಿತೋಕ್ತಿಗಳನ್ನು ಯಾವನು ಸಹಿಸಿಕೊಳ್ಳುವುದಿಲ್ಲವೋ, ಅಂತಹ ಇಷ್ಟಾರ್ಥಸಾಧಕನಾದ ಸನ್ಮಿತ್ರನ ಸಲಹೆಯಂತೆ ನಡೆದುಕೊಳ್ಳುವುದಿಲ್ಲವೋ ಮತ್ತು ತನ್ನ ಅಭಿಪ್ರಾಯಕ್ಕೆ ಅನುಗುಣವಾಗಿದೆಯೆಂಬ ಕಾರಣದಿಂದ ತನಗೆ ಅಹಿತವಾಗುವಂತಹ ಮಾತುಗಳನ್ನೂ, ಶ್ರೇಯಸ್ಸಿಗೆ ಪ್ರತಿಕೂಲವಾಗುವಂತಹ

ಮಾತುಗಳನ್ನೂ ಆದರದಿಂದ ಕೇಳುತ್ತಾನೆಯೋ ಮತ್ತು ಅದರಂತೆ ನಡೆಯುತ್ತಾನೆಯೋ ಅಂತಹವನು ಶತ್ರುಗಳ ವಶನಾಗುತ್ತಾನೆ.

**ಸತಾಂ ಮತಮತಿಕ್ರಮ್ಯ ಯೋಽಸತಾಂ ವರ್ತತೇ ಮತೇ ।**
**ಶೋಚನ್ತೇ ವ್ಯಸನೇ ತಸ್ಯ ಸುಹೃದೋ ನಚಿರಾದಿವ ॥೨೬॥**

ಸತ್ಪುರುಷರ ಅಭಿಪ್ರಾಯವನ್ನು ಅತಿಕ್ರಮಿಸಿ (ಅಭಿಪ್ರಾಯಕ್ಕೆ ವಿರುದ್ಧ ವಾಗಿ ವರ್ತಿಸುತ್ತಾ) ಯಾವನು ಅಸತ್ಪುರುಷರ-ದುಷ್ಟರ ಅಭಿಪ್ರಾಯದಂತೆ ನಡೆದುಕೊಳ್ಳುತ್ತಾನೆಯೋ ಅಂತಹವನಿಗೆ ಬಹುಶೀಘ್ರವಾಗಿಯೇ ವಿಪತ್ತು ಸಂಭವಿಸುವುದು. ಅವನ ವಿಪತ್ತಿನಲ್ಲಿ ಅವನ ಸುಹೃದರೂ ದುಃಖಿತ ರಾಗುವರು.

**ಮುಖ್ಯಾನಮಾತ್ಯಾನುತ್ಸೃಜ್ಯ ಯೋ ನಿಹೀನಾನ್ನಿಷೇವತೇ ।**
**ಸ ಘೋರಾಮಾಪದಂ ಪ್ರಾಪ್ಯ ನೋತ್ತಾರಮಧಿಗಚ್ಛತಿ ॥೨೭॥**

ಯಾವನು ಸತ್ಕುಲಪ್ರಸೂತರಾದ, ವೃದ್ಧರಾದ ಮಂತ್ರಿಮುಖ್ಯರನ್ನು ಬದಿಗೊತ್ತಿ–ಅಸತ್ಕುಲಪ್ರಸೂತರನ್ನೂ, ವಂಶವು ಯಾವುದೆಂಬುದೇ ತಿಳಿಯದವರನ್ನೂ (ಕರ್ಣಾದಿಗಳಂತಹವರನ್ನೂ) ಸೇವಿಸುತ್ತಾನೆಯೋ-ಅಂತಹವನು ಘೋರವಾದ ಆಪತ್ತಿನಲ್ಲಿ ಸಿಕ್ಕಿಹಾಕಿಕೊಂಡು ಅದರಿಂದ ಉದ್ಧಾರವಾಗುವ ಅಥವಾ ಪಾರಾಗುವ ಮಾರ್ಗವನ್ನೇ ಕಂಡುಕೊಳ್ಳಲಾರ ದವನಾಗುತ್ತಾನೆ.

**ಯೋಽಸತ್ಸೇವೀ ವೃಥಾಚಾರೋ ನ ಶ್ರೋತಾ ಸುಹೃದಾಂ ಸತಾಮ್ ।**
**ಪರಾನ್ವೃಣೀತೇ ಸ್ವಾನ್ದ್ವೇಷ್ಟಿ ತಂ ಗೌಸ್ತ್ಯಜತಿ ಭಾರತ ॥೨೮॥**

ಯಾವನು ಅಸತ್ಪುರುಷರ ಸೇವೆಮಾಡುತ್ತಿರುತ್ತಾನೆಯೋ, ದಾಂಭಿಕನಾಗಿ ರುತ್ತಾನೆಯೋ, ಸುಹೃದರಾಗಿಯೂ ಮತ್ತು ಸತ್ಪುರುಷರಾಗಿಯೂ ಇರತಕ್ಕವರ ಮಾತನ್ನು ಕೇಳುವುದಿಲ್ಲವೋ, ಪರಕೀಯರ ಸ್ನೇಹಮಾಡಿ ಆತ್ಮೀಯರನ್ನು ದ್ವೇಷಿಸುತ್ತಾನೆಯೋ–ಅಂತಹವನನ್ನು ಭೂದೇವಿಯೂ ಪರಿತ್ಯಜಿಸುತ್ತಾಳೆ."

ದುರ್ಯೋಧನನಿಗೆ ಸಮನ್ವಯಿಸಿ ಸೂಕ್ತನೀತಿಯನ್ನು ಹೇಳುತ್ತಿದ್ದ

ಶ್ರೀಕೃಷ್ಣನು ನೇರವಾಗಿಯೇ ದುರ್ಯೋಧನನನ್ನು ಉದ್ದೇಶಿಸಿ ಹೇಳತೊಡಗಿದನು :

**ಸ ತ್ವಂ ವಿರುಧ್ಯ ತೈರ್ವೀರೈರನ್ಯೇಭ್ಯಸ್ತ್ರಾಣಮಿಚ್ಛಸಿ ।**
**ಅಶಿಷ್ಟೇಭ್ಯೋಽಸಮರ್ಥೇಭ್ಯೋ ಮೂಢೇಭ್ಯೋ ಭರತರ್ಷಭ ॥೨೯॥**

"(ನಾನು ಮೇಲೆ ಹೇಳಿದುದೆಲ್ಲವೂ ನಿನಗೆ ಸಮನ್ವಯವಾಗುತ್ತದೆ.) ಸತ್ಕುಲಪ್ರಸೂತನಾದ ನೀನು ಅಂತಹ ಮಹಾವೀರರೊಡನೆ (ಪಾಂಡವರೊಡನೆ) ದ್ವೇಷಕಟ್ಟಿಕೊಂಡು ಶಿಷ್ಟರಲ್ಲದವರಿಂದ, ಅಸಮರ್ಥರಿಂದ, ಮೂಢರಿಂದ ರಕ್ಷಣೆಯನ್ನು ಅಪೇಕ್ಷಿಸುತ್ತಿರುವೆ.

**ಕೋ ಹಿ ಶಕ್ರಸಮಾನ್ ಜ್ಞಾತೀನತಿಕ್ರಮ್ಯ ಮಹಾರಥಾನ್ ।**
**ಅನ್ಯೇಭ್ಯಸ್ತ್ರಾಣಮಾಶಂಸೇತ್ತ್ವದನ್ಯೋ ಭುವಿ ಮಾನವಃ ॥೩೦॥**

ಪರಾಕ್ರಮದಲ್ಲಿ ಇಂದ್ರನಿಗೆ ಸಮಾನರಾದ, ಮಹಾರಥರಾದ ಅಣ್ಣ-ತಮ್ಮಂದಿರನ್ನು ಅತಿಕ್ರಮಿಸಿ ಇತರರಿಂದ ರಕ್ಷಣೆಯನ್ನು ಪಡೆಯಲು ನಿನ್ನ ಹೊರತಾಗಿ ಈ ಪ್ರಪಂಚದಲ್ಲಿ ಬೇರಾವ ಮನುಷ್ಯನು ತಾನೇ ಇಚ್ಛಿಸುತ್ತಾನೆ?

**ಜನ್ಮಪ್ರಭೃತಿ ಕೌನ್ತೇಯಾ ನಿತ್ಯಂ ವಿನಿಕೃತಾಸ್ತ್ವಯಾ ।**
**ನ ಚ ತೇ ಜಾತು ಕುಪ್ಯನ್ತಿ ಧರ್ಮಾತ್ಮಾನೋ ಹಿ ಪಾಣ್ಡವಾ ॥೩೧॥**

ಹುಟ್ಟಿದಂದಿನಿಂದಲೂ ಕುಂತಿಯ ಮಕ್ಕಳು ನಿನ್ನಿಂದ ಯಾವುದಾದರೊಂದು ರೀತಿಯಲ್ಲಿ ವಂಚಿತರಾಗುತ್ತಲೇ ಇದ್ದಾರೆ. ಆದರೆ ಧರ್ಮಾತ್ಮರಾದ ಪಾಂಡವರು ನಿನ್ನಲ್ಲಿ ಯಾವಾಗಲೂ ಕೋಪದಿಂದ ವರ್ತಿಸಿರುವುದಿಲ್ಲ.

**ಮಿಥ್ಯೋಪಚರಿತಾಸ್ತಾತ ಜನ್ಮಪ್ರಭೃತಿ ಬಾನ್ಧವಾಃ ।**
**ತ್ವಯಿ ಸಮ್ಯಙ್ಮಹಾಬಾಹೋ ಪ್ರತಿಪನ್ನಾ ಯಶಸ್ವಿನಃ ॥೩೨॥**

ಮಹಾಬಾಹುವೇ! ಜನ್ಮಾರಭ್ಯ ಪಾಂಡವರು ನಿನ್ನಿಂದ ವಂಚಿತರೇ ಆಗುತ್ತಿದ್ದಾರೆ. ನೀನವರನ್ನು ಬಾರಿ-ಬಾರಿಗೂ ವಂಚಿಸುತ್ತಲೇ ಇರುವೆ. ಆದರೂ ಯಶೋವಂತರಾದ ಪಾಂಡವರು ನಿನ್ನ ವಿಷಯದಲ್ಲಿ ಸದ್ಭಾವನೆಯಿಂದಲೇ ಇರುತ್ತಾರೆ. ಅವರು ನಿನ್ನ ವಿಷಯದಲ್ಲಿ ಸದ್ಭಾವನೆಯಿಂದಲೇ ಇರುವುದು ; ನೀನು ಮಾತ್ರ ಅವರನ್ನು ಪದೇ ಪದೇ ವಂಚಿಸು

ತ್ತಿರುವುದು–ಇದು ಎಲ್ಲ ಕಾಲಕ್ಕೂ ಸಾಧ್ಯವಾಗುವುದಿಲ್ಲ. ನಿನ್ನ ಬುದ್ಧಿಯನ್ನು ನೀನು ತಿದ್ದಿಕೊಳ್ಳಲೇಬೇಕು.

**ತ್ವಯಾಪಿ ಪ್ರತಿಪತ್ತವ್ಯಂ ತಥೈವ ಭರತರ್ಷಭ ।**
**ಸ್ವೇಷು ಬನ್ಧುಷು ಮುಖ್ಯೇಷು ಮಾ ಮನ್ಯುವಶಮನ್ವಗಾಃ ॥೩೩॥**

ಅವರು ಯಾವ ರೀತಿಯಲ್ಲಿ ನಿನ್ನ ವಿಷಯದಲ್ಲಿ ಸದ್ಭಾವನೆಯನ್ನಿಟ್ಟು ಕೊಂಡಿರುವರೋ–ನೀನೂ ನಿನ್ನ ಬಹುಮುಖ್ಯರಾದ ಬಂಧುಗಳ ವಿಷಯದಲ್ಲಿ ಅದೇ ರೀತಿಯಲ್ಲಿ ನಡೆದುಕೊಳ್ಳಬೇಕು. ಕ್ರೋಧವಶನಾಗಬೇಡ.

**ತ್ರಿವರ್ಗಯುಕ್ತಃ ಪ್ರಾಜ್ಞಾನಾಮಾರಮ್ಭೋ ಭರತರ್ಷಭ ।**
**ಧರ್ಮಾರ್ಥಾವನುರುಧ್ಯನ್ತೇ ತ್ರಿವರ್ಗಾಸಮ್ಭವೇ ನರಾಃ ॥೩೪॥**

ಪ್ರಾಜ್ಞರಾದವರು ಪ್ರಾರಂಭಿಸುವ ಪ್ರತಿಯೊಂದು ಕಾರ್ಯವೂ ಧರ್ಮಾರ್ಥ-ಕಾಮಗಳೆಂಬ ತ್ರಿವರ್ಗದ ಸಿದ್ಧಿಗೆ ಸಾಧಕವಾಗಿರುತ್ತದೆ. ಮಾನವರು ತಾವು ಮಾಡಿದ ಕಾರ್ಯದಿಂದ ತ್ರಿವರ್ಗದ ಸಾಧನೆಯಾಗ ದಿದ್ದರೆ ಧರ್ಮ ಮತ್ತು ಅರ್ಥಗಳನ್ನಾದರೂ ಸಾಧಿಸಿಕೊಳ್ಳುತ್ತಾರೆ. ಧರ್ಮಾರ್ಥಗಳ ಅನುಸರಣೆಯಿಂದಲಾದರೂ ಇರುತ್ತಾರೆ. (ಮನಸೋದ್ದಿಷ್ಟ ವಾದ ಫಲವು ಸಿಕ್ಕದ ಕಾರಣ ಧರ್ಮಾರ್ಥಗಳನ್ನೂ ಬಿಟ್ಟುಬಿಡುವುದಿಲ್ಲ.)

**ಪೃಥಕ್ತ್ವ ವಿನಿವಿಷ್ಟಾನಾಂ ಧರ್ಮಂ ಧೀರೋಽನುರುಧ್ಯತೇ ।**
**ಮಧ್ಯಮೋಽರ್ಥಂ ಕಲಿಂ ಬಾಲಃ ಕಾಮಮೇವಾನುರುಧ್ಯತೇ ॥೩೫॥**

ಧರ್ಮ, ಅರ್ಥ, ಕಾಮ–ಈ ಮೂರನ್ನೂ ಪ್ರತ್ಯೇಕಗೊಳಿಸಿ ಒಂದೊಂದರ ಅನುಸರಣೆಯನ್ನೂ ಮಾಡಬಹುದು. ಇದರಲ್ಲಿ ಮೊದಲನೆಯದಾದ ಧರ್ಮ ವನ್ನು ಅನುಸರಣೆಮಾಡುವುದು ಕಷ್ಟಸಾಧ್ಯ. ಆದುದರಿಂದ ಧೀರನಾದವನು ಮಾತ್ರ ಧರ್ಮವನ್ನು ಅನುಸರಣೆಮಾಡುತ್ತಾನೆ. ಮಧ್ಯಮವರ್ಗದವನು ಕಲಹಕ್ಕೆ ಕಾರಣಭೂತವಾದ ಅರ್ಥಾನುಸರಣೆಯನ್ನು ಮಾಡುತ್ತಾನೆ. (ಕಲಿಂ ಎಂಬುದಕ್ಕೆ **ಕಲಹಹೇತುಂ** ಎಂದು ವ್ಯಾಖ್ಯಾನಕಾರರು ಅರ್ಥಮಾಡಿದ್ದಾರೆ.) ಅಧಮನಾದವನು, ಅಜ್ಞಾನಿಯಾದವನು, ಬಾಲಭಾವವುಳ್ಳವನು ಕಾಮವನ್ನು ಮಾತ್ರವೇ ಅನುಸರಿಸುತ್ತಾನೆ.

**ಇನ್ದ್ರಿಯೈಃ ಪ್ರಾಕೃತೋ ಲೋಭಾದ್ಧರ್ಮಂ ವಿಪ್ರಜಹಾತಿ ಯಃ ।**
**ಕಾಮಾರ್ಥಾವನುಪಾಯೇನ ಲಿಪ್ಸಮಾನೋ ವಿನಶ್ಯತಿ ॥೩೬॥**

ಯಾವ ನೀಚಮನುಷ್ಯನು ಇಂದ್ರಿಯಗಳಿಗೆ ಅಧೀನನಾಗಿ ಲೋಭದಿಂದ ಮೊದಲನೆಯದಾದ ಧರ್ಮವನ್ನು ಪರಿತ್ಯಜಿಸುತ್ತಾನೆಯೋ, ಹೀನವಾದ ಉಪಾಯಗಳಿಂದ ಅಥವಾ ಮಾರ್ಗಗಳಿಂದ ಕಾಮ ಮತ್ತು ಅರ್ಥಗಳನ್ನು ಪಡೆದುಕೊಳ್ಳಬೇಕೆಂಬ ಇಚ್ಛೆಯುಳ್ಳವನಾಗಿರುತ್ತಾನೆಯೋ – ಅಂತಹವನು ಖಂಡಿತವಾಗಿಯೂ ವಿನಾಶಹೊಂದುತ್ತಾನೆ.

**ಕಾಮಾರ್ಥೌ ಲಿಪ್ಸಮಾನಸ್ತು ಧರ್ಮಮೇವಾದಿತಶ್ಚರೇತ್ ।**
**ನ ಹಿ ಧರ್ಮಾದಪೈತ್ಯರ್ಥಃ ಕಾಮೋ ವಾಪಿ ಕದಾಚನ ॥೩೭॥**

ಕಾಮ ಮತ್ತು ಅರ್ಥಗಳು ಮನುಷ್ಯನಿಗೆ ಬೇಡವೆಂದಲ್ಲ. ಕಾಮಾರ್ಥಗಳನ್ನು ಪಡೆದುಕೊಳ್ಳಲಿಚ್ಛಿಸುವವನು ಧರ್ಮಕಾರ್ಯಗಳನ್ನೇ ಮೊದಲಿನಿಂದಲೂ ಮಾಡುತ್ತಿರಬೇಕು. ಧರ್ಮಾಚರಣೆಯಿಂದ ಅರ್ಥವು ಲುಪ್ತವಾಗಿ ಹೋಗುವುದಿಲ್ಲ. ಕಾಮವೂ ಹೋಗಿಬಿಡುವುದಿಲ್ಲ. ಧರ್ಮದೊಡನೆ ಕಾಮಾರ್ಥಗಳ ಸಿದ್ಧಿಯೂ ಆಗುತ್ತದೆ. ಧರ್ಮದೊಡನೆ ಅಥವಾ ಧರ್ಮದ ಚೌಕಟ್ಟಿನಲ್ಲಿ ಅರ್ಥ-ಕಾಮಗಳಿರುವುದರಿಂದಲೇ ಅವು ಮನುಷ್ಯನ ಯಶಸ್ಸಿಗೆ ಕಾರಣವಾಗುತ್ತವೆ. ಧರ್ಮದ ಚೌಕಟ್ಟಿನಲ್ಲಿಲ್ಲದ ಅರ್ಥ-ಕಾಮಗಳು ಮನುಷ್ಯನ ಅಧೋಗತಿಗೆ ಕಾರಣವಾಗುತ್ತವೆ.

**ಉಪಾಯಂ ಧರ್ಮಮೇವಾಹುಸ್ತ್ರಿವರ್ಗಸ್ಯ ವಿಶಾಮ್ಪತೇ ।**
**ಲಿಪ್ಸಮಾನೋ ಹಿ ತೇನಾಶು ಕಕ್ಷೇಽಗ್ನಿರಿವ ವರ್ಧತೇ ॥೩೮॥**

ದುರ್ಯೋಧನ! ಧರ್ಮ-ಕಾಮಾರ್ಥಗಳ ಸಿದ್ಧಿಗೆ ಧರ್ಮವೇ ಉಪಾಯ ಅಥವಾ ಸಾಧನವೆಂದು ವಿದ್ವಾಂಸರು ಹೇಳುತ್ತಾರೆ. ಆದುದರಿಂದ ಧರ್ಮಮೂಲವಾಗಿ ಕಾಮಾರ್ಥಗಳನ್ನು ಅಪೇಕ್ಷಿಸುವವನು ಹುಲ್ಲುಮೆದೆಗೆ ಬಿದ್ದ ಅಗ್ನಿಯ ಕಿಡಿಯಂತೆ ಬಹಳ ಬೇಗ ವೃದ್ಧಿಹೊಂದುತ್ತಾನೆ.

ಹೀಗಿರುವಾಗ ನೀನು ಸರ್ವರಾಜರುಗಳಲ್ಲಿಯೂ ಪ್ರಖ್ಯಾತವಾಗಿರುವ ವಿಶಾಲವಾದ ಮತ್ತು ಉಜ್ವಲವಾದ ಈ ಸಾಮ್ರಾಜ್ಯವನ್ನು ಹೀನವಾದ ಉಪಾಯದಿಂದ ಪಡೆದುಕೊಳ್ಳಲಿಚ್ಛಿಸಿರುವೆ.

ಇದರ ಫಲಿತಾಂಶವೇನೆಂಬುದನ್ನೂ ಹೇಳಿಬಿಡುವೆನು ಕೇಳು, ದುರ್ಯೋಧನ!

**ಆತ್ಮಾನಂ ತಕ್ಷತಿ ಹ್ಯೇಷ ವನಂ ಪರಶುನಾ ಯಥಾ ।**
**ಯಃ ಸಮ್ಯಗ್ವರ್ತಮಾನೇಷು ಮಿಥ್ಯಾ ರಾಜನ್ಪ್ರವರ್ತತೇ ॥೪೦॥**

ಅರಣ್ಯವು ತನ್ನಲ್ಲಿಯೇ ಬೆಳೆದ ಕೊಡಲಿಯ ಕಾವಿನ ಮೂಲಕ ತನ್ನ ಛೇದನಕ್ಕೆ ತಾನೇ ಕಾರಣವಾಗುವಂತೆ (ಕುಲಕ್ಕೆ ಮೃತ್ಯು ಕೊಡಲಿಯ ಕಾವು – ಎಂಬ ನಾಣ್ಣುಡಿಯಂತೆ)–ಸದ್ವ್ಯವಹಾರವುಳ್ಳವರೊಡನೆ, ಅಸದ್ವ್ಯವಹಾರ ದಿಂದ ಅಥವಾ ವಂಚನೆಯಿಂದ ನಡೆದುಕೊಳ್ಳುವವನು ತನ್ನ ವಿನಾಶಕ್ಕೆ ತಾನೇ ಕಾರಣನಾಗುತ್ತಾನೆ.

**ನ ತಸ್ಯ ಹಿ ಮತಿಂ ಛಿನ್ದ್ಯಾದ್ಯಸ್ಯ ನೇಚ್ಛೇತ್ಪರಾಭವಮ್ ।**
**ಅವಿಚ್ಛಿನ್ನಮತೇರಸ್ಯ ಕಲ್ಯಾಣೇ ಧೀಯತೇ ಮತಿಃ ॥೪೧॥**

**ಆತ್ಮವಾನ್ನಾವಮನ್ಯೇತ ತ್ರಿಷು ಲೋಕೇಷು ಭಾರತ ।**
**ಅಪ್ಯನ್ಯಂ ಪ್ರಾಕೃತಂ ಕಿಂಚಿತ್ಕಿಮು ತಾನ್ಪಾಣ್ಡವರ್ಷಭಾನ್ ।**
**ಅಮರ್ಷವಶಮಾಪನ್ನೋ ನ ಕಿಂಚಿದ್ಬುಧ್ಯತೇ ಜನಃ ॥೪೨॥**

ಯಾವನಿಗೆ ಅವಮಾನವಾಗುವುದನ್ನು ನಾವು ಇಚ್ಛಿಸುವುದಿಲ್ಲವೋ ಅಂತಹವನ ಮನಸ್ಸನ್ನೆಂದಿಗೂ ನಾವು ಕೆಡಿಸಬಾರದು. ಯಾವನಿಗೆ ಮನಸ್ಸು ಕೆಟ್ಟುಹೋಗಿರುವುದಿಲ್ಲವೋ–ಅಂತಹವನ ಬುದ್ಧಿಯು ಯಾವಾಗಲೂ ಸತ್ಕಾರ್ಯದಲ್ಲಿಯೇ ಲೀನವಾಗಿರುತ್ತದೆ. ಬುದ್ಧಿವಂತನಾದ ಮನುಷ್ಯನು ಮೂರು ಲೋಕಗಳಲ್ಲಿ ಯಾರನ್ನೂ ಅವಮಾನಪಡಿಸಬಾರದು. ಸಾಮಾನ್ಯ ಮನುಷ್ಯನನ್ನೂ ಸಹ ಅವಮಾನಗೊಳಿಸಬಾರದು. ಹೀಗಿರುವಾಗ ಭರತರ್ಷಭ ರಾದ ಪಾಂಡವರನ್ನು ಖಂಡಿತವಾಗಿಯೂ ಅವಮಾನಗೊಳಿಸುವ ಯತ್ನವನ್ನು ಮಾಡಬಾರದು. ಕ್ರೋಧಪರವಶನಾಗಿರುವ, ಅಸೂಯಾಪರನಾಗಿರುವ, ಅಸಹನಶೀಲನಾದ ಮನುಷ್ಯನು ಈ ವಿಷಯವನ್ನು ತಿಳಿದಿರುವುದಿಲ್ಲ.

(ಪಾಂಡವರನ್ನು ಅವಮಾನಗೊಳಿಸಬಾರದು. ಅವರಿಗೆ ಸಲ್ಲಬೇಕಾದ ಅರ್ಧರಾಜ್ಯವನ್ನು ಕೊಟ್ಟು ಗೌರವಿಸಬೇಕು. ಅವರನ್ನು ಅವಮಾನಗೊಳಿ

ಸುವ ಆಶಯವಿಲ್ಲದಿದ್ದರೆ ಕೆಟ್ಟ ಮಾತುಗಳನ್ನು, ಚುಚ್ಚುಮಾತುಗಳನ್ನು ಆಡಿ ಅವರ ಮನಸ್ಸು ನೋಯುವಂತೆ ಮಾಡಬಾರದು. ಅವರ ಮನಸ್ಸನ್ನು ನೋಯಿಸದಿದ್ದ ಪಕ್ಷದಲ್ಲಿ ಅವರ ಮನಸ್ಸು ಯಾವಾಗಲೂ ಶುಭಕರವಾದ ವಿಷಯಗಳಲ್ಲಿಯೇ ಲೀನವಾಗಿರುತ್ತದೆ. ಹಾಗೆ ಮಾಡದೇ ಸತ್ಪುರುಷರಾದ ಅವರನ್ನು ಅವಮಾನಗೊಳಿಸಲು ಹೋಗಿ ನಿಷ್ಠುರವಾದ ಮಾತುಗಳನ್ನಾಡಿದ ಪಕ್ಷದಲ್ಲಿ ಅವರ ಮನಸ್ಸು ಕೆಟ್ಟು ಅವರು ಪ್ರತೀಕಾರಮಾಡಲು ಉದ್ಯುಕ್ತರಾಗುವರು.)

ಛಿದ್ಯತೇ ಹ್ಯಾತತಂ ಸರ್ವಂ ಪ್ರಮಾಣಂ ಪಶ್ಯ ಭಾರತ ।
ಶ್ರೇಯಸ್ತೇ ದುರ್ಜನಾತ್ತಾತ ಪಾಣ್ಡವೈಃ ಸಹ ಸಂಗತಮ್ ॥೪೩॥

ಕ್ರೋಧಪರವಶನಾಗಿ ಕೆಲಸಮಾಡುವುದರಿಂದ ನಿನ್ನ ಅಪಾರವಾದ ಕೀರ್ತಿ, ಅಪಾರವಾದ ಸೈನ್ಯ–ಎಲ್ಲವೂ ಛಿದ್ರ-ವಿಚ್ಛಿದ್ರವಾಗಿ ಹೋಗುತ್ತವೆ. ಕ್ರೋಧಪರವಶರಾದವರ ಇತಿಹಾಸಗಳು ಲೋಕದಲ್ಲಿ-ವೇದಗಳಲ್ಲಿ ಪ್ರಮಾಣಭೂತವಾಗಿ ತಿಳಿದುಕೊಳ್ಳಲು ಸಿಕ್ಕುತ್ತವೆ. ಅವನ್ನು ಗಮನಿಸು, ದುರ್ಯೋಧನ! ದುರ್ಜನರ ಸಹವಾಸವನ್ನು ಮಾಡುವುದಕ್ಕಿಂತಲೂ ಪಾಂಡವರೊಡನೆ ಹೊಂದಿಕೊಂಡಿರುವುದೇ ನಿನಗೆ ಶ್ರೇಯಸ್ಕರ.

ತೈರ್ಹಿ ಸಮ್ಪ್ರೀಯಮಾಣಸ್ತ್ವಂ ಸರ್ವಾನ್ಕಾಮಾನವಾಪ್ಸ್ಯಸಿ ।
ಪಾಣ್ಡವೈರ್ನಿರ್ಮಿತಾಂ ಭೂಮಿಂ ಭುಞ್ಜಾನೋ ರಾಜಸತ್ತಮ ।
ಪಾಣ್ಡವಾನ್ಪೃಷ್ಠತಃ ಕೃತ್ವಾ ತ್ರಾಣಮಾಶಂಸಸೇಽನ್ಯತಃ ॥೪೪॥

ಪಾಂಡವರೊಡನೆ ಪ್ರೀತಿ ಮತ್ತು ಸೌಹಾರ್ದಗಳಿಂದಿರುವ ನೀನು ಪಾಂಡವರು ಗೆದ್ದ ರಾಜ್ಯವನ್ನು ಅಥವಾ ಪಾಂಡವರು ಕಟ್ಟಿದ ಸಾಮ್ರಾಜ್ಯವನ್ನು ಉಪಭೋಗಿಸುತ್ತಾ ಸಕಲವಿಧವಾದ ಕಾಮನೆಗಳನ್ನೂ ಪಡೆದುಕೊಳ್ಳುವೆ. ಹೀಗಿರುವಾಗ ಅವರನ್ನು ತಿರಸ್ಕರಿಸಿ ಇತರರನ್ನು ರಕ್ಷಣೆಗಾಗಿ ಅವಲಂಬಿಸಹೊರಟಿರುವೆ. (ನಿನ್ನ ಬುದ್ಧಿಗೆ ನಾನು ಏನೆಂದು ಹೇಳಲಿ?)

ದುಃಶಾಸನೇ ದುರ್ವಿಷಹೇ ಕರ್ಣೇ ಚಾಪಿ ಸಸೌಬಲೇ ।
ಏತೇಷ್ವೈಶ್ವರ್ಯಮಾಧಾಯ ಭೂತಿಮಿಚ್ಛಸಿ ಭಾರತ ॥೪೫॥

ದುಃಶಾಸನನಲ್ಲಿ, ದುರ್ವಿಷಹನಲ್ಲಿ, ಶಕುನಿಸಮೇತನಾದ ಕರ್ಣನಲ್ಲಿ ರಾಜ್ಯದ ಪರಮಾಧಿಕಾರವನ್ನಿಟ್ಟು ನೀನು ಔನ್ನತ್ಯವನ್ನಪೇಕ್ಷಿಸುತ್ತಿರುವೆ, ಅಲ್ಲವೇ?

ಭಾರತ! ನಾನು ನಿಶ್ಚಯವಾಗಿ ಹೇಳುವೆನು ; ಕೇಳು :

**ನ ಚೈತೇ ತವ ಪರ್ಯಾಪ್ತಾ ಜ್ಞಾನೇ ಧರ್ಮಾರ್ಥಯೋಸ್ತಥಾ ।**
**ವಿಕ್ರಮೇ ಚಾಪ್ಯಪರ್ಯಾಪ್ತಾಃ ಪಾಣ್ಡವಾನ್ಪ್ರತಿ ಭಾರತ ॥೪೬॥**

(ಈ ನಿನ್ನ ಮಂತ್ರಿಗಳು ನಿನ್ನನ್ನು ಹುರಿದುಂಬಿಸಲು ಸಮರ್ಥರಿರಬಹುದು.) ಆದರೆ ಜ್ಞಾನೋಪದೇಶದಲ್ಲಿ, ಧರ್ಮಾರ್ಥಗಳ ನಿಜಸ್ವರೂಪವನ್ನು ತಿಳಿಯಹೇಳುವುದರಲ್ಲಿ ಇವರು ಖಂಡಿತವಾಗಿಯೂ ಸಮರ್ಥರಲ್ಲ. ಪರಾಕ್ರಮದಲ್ಲಾದರೂ ಕರ್ಣಾದಿಗಳು ಅತ್ಯಂತಸಮರ್ಥರೆಂದು ನೀನು ಭಾವಿಸಿರಬಹುದು. ಪಾಂಡವರನ್ನು ಇವರೊಡನೆ ಹೋಲಿಸಿದರೆ ಪರಾಕ್ರಮದಲ್ಲಿಯೂ ಪಾಂಡವರಿಗೆ ಇವರು ಸಮಾನರಾಗಲಾರರು.

**ನ ಹೀಮೇ ಸರ್ವರಾಜಾನಃ ಪರ್ಯಾಪ್ತಾಃ ಸಹಿತಾಸ್ತ್ವಯಾ ।**
**ಕ್ರುದ್ಧಸ್ಯ ಭೀಮಸೇನಸ್ಯ ಪ್ರೇಕ್ಷಿತುಂ ಮುಖಮಾಹವೇ ॥೪೭॥**

ಪೃಥ್ವಿಯ ಅನೇಕರಾಜರು ನಿನ್ನ ಪಕ್ಷವನ್ನು ಸೇರಿದ್ದಾರೆಂದೂ ನೀನು ಭಾವಿಸಿರಬಹುದು. ಅವರ ಬಲವು ಪಾಂಡವರ ಬಲಕ್ಕಿಂತಲೂ ಅತ್ಯಧಿಕವಾದುದೆಂದೂ ಭ್ರಮಿಸಿರಬಹುದು. ಆದರೆ ನಿನ್ನಿಂದೊಡಗೂಡಿದ ಈ ಎಲ್ಲ ರಾಜರೂ ಪಾಂಡವರೈವರಿಗೆ ಪರಾಕ್ರಮದಲ್ಲಿ ಸಮಾನರಾಗುವುದಿಲ್ಲ. 'ಪರಾಕ್ರಮದಲ್ಲಿ ಸಮಾನತೆ' ಎಂಬುದು ಒತ್ತಟ್ಟಿಗಿರಲಿ, ದುರ್ಯೋಧನ! ಯುದ್ಧರಂಗದಲ್ಲಿ ಕ್ರುದ್ಧನಾದ ಭೀಮಸೇನನೊಬ್ಬನ ರೌದ್ರಮುಖವನ್ನು ಕಣ್ಣೆತ್ತಿ ನೋಡಲೂ ಇವರಿಂದ ಸಾಧ್ಯವಾಗುವುದಿಲ್ಲ.

ದುರ್ಯೋಧನಮಹಾರಾಜ! ಸಮಸ್ತರಾಜರೂ ತಮ್ಮ ತಮ್ಮ ಅಸಂಖ್ಯಾತಸೇನೆಯೊಡನೆ ಇಲ್ಲಿ ಸನ್ನಿಹಿತರಾಗಿದ್ದಾರೆ. ನಿನ್ನ ಕಡೆಯಲ್ಲಿ ಭೀಷ್ಮನಿದ್ದಾನೆ ; ದ್ರೋಣರಿದ್ದಾರೆ ; ಕರ್ಣನಿದ್ದಾನೆ ; ಕೃಪರಿದ್ದಾರೆ ;

ಸೋಮದತ್ತನ ಮಗನಾದ ಭೂರಿಶ್ರವನಿದ್ದಾನೆ ; ದ್ರೋಣಪುತ್ರನಾದ ಅಶ್ವತ್ಥಾಮನಿದ್ದಾನೆ ; ಜಯದ್ರಥನಿದ್ದಾನೆ–ಈ ಎಲ್ಲರೂ ಒಟ್ಟಾಗಿ ಸೇರಿದರೂ ಧನಂಜಯನೊಡನೆ ಯುದ್ಧಮಾಡಲು ಖಂಡಿತವಾಗಿಯೂ ಅಸಮರ್ಥರು. ಅವನನ್ನೆದುರಿಸಿ ಯುದ್ಧಮಾಡಲು ಇವರಿಂದ ಖಂಡಿತವಾಗಿಯೂ ಸಾಧ್ಯವಾಗುವುದಿಲ್ಲ, ದುರ್ಯೋಧನ!

**ಅಜೇಯೋ ಹ್ಯರ್ಜುನಃ ಸಂಖ್ಯೇ ಸರ್ವೈರಪಿ ಸುರಾಸುರೈಃ ।**
**ಮಾನುಷೈರಪಿ ಗನ್ಧರ್ವೈರ್ಮಾ ಯುದ್ಧೇ ಚೇತ ಆಧಿಥಾಃ ॥೫೦॥**

ಧಾರ್ತರಾಷ್ಟ್ರ! ಅರ್ಜುನನು ಯುದ್ಧದಲ್ಲಿ ದೇವತೆಗಳಿಂದಲೂ, ಅಸುರರಿಂದಲೂ, ಮನುಷ್ಯರಿಂದಲೂ ಮತ್ತು ಗಂಧರ್ವರಿಂದಲೂ ಅಜೇಯನು. ಅವನನ್ನು ಜಯಿಸಲು ಖಂಡಿತವಾಗಿಯೂ ಯಾರಿಂದಲೂ ಸಾಧ್ಯವಿಲ್ಲ. ಆದುದರಿಂದ ನೀನು ಯುದ್ಧದಲ್ಲಿ ಮನಸ್ಸನ್ನಿಡಬೇಡ. ಯುದ್ಧವನ್ನೇ ಮಾಡುವೆನೆಂದು ನಿಶ್ಚಯಿಸಲು ಹೋಗಬೇಡ. ನಾನೀ ಮಾತನ್ನು ಉತ್ಪ್ರೇಕ್ಷಿಸಿ ಹೇಳುತ್ತಿಲ್ಲ, ಸುಯೋಧನ!

**ದೃಶ್ಯತಾಂ ವಾ ಪುಮಾನ್ಕಶ್ಚಿತ್ಸಮಗ್ರೇ ಪಾರ್ಥಿವೇ ಬಲೇ ।**
**ಯೋಽರ್ಜುನಂ ಸಮರೇ ಪ್ರಾಪ್ಯ ಸ್ವಸ್ತಿಮಾನಾವ್ರಜೇದ್ಗೃಹಾನ್ ॥೫೧॥**

ಈ ಸಮಗ್ರವಾದ ರಾಜರ ಸೈನ್ಯದಲ್ಲಿ ಯಾವನಾದರೂ ಒಬ್ಬನು ಅರ್ಜುನನೊಡನೆ ಯುದ್ಧಕ್ಕೆ ಹೋಗಿ ವಿಜಯವನ್ನು ಗಳಿಸಿ ಕ್ಷೇಮವಾಗಿ ಮನೆಗೆ ಹಿಂದಿರುಗಿ ಬರಬಲ್ಲನೇ? ನಿನಗೆ ತಿಳಿದಿರುವಂತೆ ವಿಜಯಗಳಿಸಿ ಬಂದಿರುವವರು ಯಾರಾದರೂ ಇದ್ದಾರೆಯೇ? ಹೇಳುವೆಯಾ?

**ಕಿಂ ತೇ ಜನಕ್ಷಯೇಣೇಹ ಕೃತೇನ ಭರತರ್ಷಭ ।**
**ಯಸ್ಮಿಞ್ಜಿತೇ ಜಿತಂ ತತ್ಸ್ಯಾತ್ಪುಮಾನೇಕಃ ಸ ದೃಶ್ಯತಾಮ್ ॥೫೨॥**

ಭರತರ್ಷಭನೇ! ಯುದ್ಧದ ಕಾರಣದಿಂದಾಗಿ ಆಗುವ ಪ್ರಾಣಿಗಳ (ಅಸಂಖ್ಯಾತಸೈನಿಕರ) ನಾಶದಿಂದಾಗಿ ನಿನಗಾಗುವ ಲಾಭವಾದರೂ ಏನು? ಯಾವ ಒಬ್ಬ ಅರ್ಜುನನನ್ನು ಜಯಿಸುವುದರಿಂದ ಪಾಂಡವರ ಪಕ್ಷದಲ್ಲಿನ ಎಲ್ಲ ಯೋಧರನ್ನೂ ಜಯಿಸಿದಂತಾಗುವುದೋ ಅಂತಹ ಮಹಾಪರಾಕ್ರಮಿ

ಯಾದ ಅರ್ಜುನನನ್ನು ಜಯಿಸಲು ಸಾಮರ್ಥ್ಯವಿರುವವರು ನಿನ್ನ ಪಕ್ಷದಲ್ಲಿ ಒಬ್ಬರಾದರೂ ಇರುವರೇ? ಎಂಬುದನ್ನು ಚೆನ್ನಾಗಿ ಪರಿಶೀಲಿಸಿ ನೋಡು.

**ಯಃ ಸ ದೇವಾನ್ಸಗನ್ಧರ್ವಾನ್ಸಯಕ್ಷಾಸುರಪನ್ನಗಾನ್ ।**
**ಅಜಯತ್ಖಾಣ್ಡವಪ್ರಸ್ಥೇ ಕಸ್ತಂ ಯುಧ್ಯೇತ ಮಾನವಃ ॥೫೩॥**

ದುರ್ಯೋಧನ! ಯಾವನು ಖಾಂಡವದಾಹದ ಸಮಯದಲ್ಲಿ ಗಂಧರ್ವ-ಯಕ್ಷಾಸುರ-ನಾಗರುಗಳನ್ನು ಕೂಡಿಕೊಂಡು ಬಂದ ದೇವತೆಗಳೆಲ್ಲರನ್ನೂ ಜಯಿಸಿದನೋ-ಅಜೇಯನಾದ ಅಂತಹ ಪಾರ್ಥನೊಡನೆ ಯುದ್ಧಮಾಡುವ ಮಾನವನಾದರೂ ಈ ಪೃಥ್ವಿಯಲ್ಲಿದ್ದಾನೆಯೇ?

ಧಾರ್ತರಾಷ್ಟ್ರ! ನಾನೀ ಮಾತುಗಳನ್ನು ಅರ್ಜುನನನ್ನು ಹೊಗಳಬೇಕೆಂಬ ಕಾರಣದಿಂದಾಗಲೀ, ಇತರ ಮಹಾಯೋಧರನ್ನು ತೆಗಳಬೇಕೆಂಬ ಕಾರಣದಿಂದಾಗಲೀ ಹೇಳುತ್ತಿಲ್ಲ. ನಿಜಸ್ಥಿತಿಯನ್ನು ಯಥಾವತ್ತಾಗಿ ನಿನ್ನ ಮುಂದಿಡುತ್ತಿದ್ದೇನೆ. ಮೇಲಾಗಿ ಪಾರ್ಥನ ಪರಾಕ್ರಮದ ವಿಷಯವಾಗಿ ನಾನು ನಿನಗೆ ಹೇಳಬೇಕಾದ ಕಾರಣವೂ ಇಲ್ಲ. ಅದು ನಿನಗೆ ಸ್ವಯಂ ವೇದ್ಯವೇ ಆಗಿದೆ.

**ತಥಾ ವಿರಾಟನಗರೇ ಶ್ರೂಯತೇ ಮಹದದ್ಭುತಮ್ ।**
**ಏಕಸ್ಯ ಚ ಬಹೂನಾಂ ಚ ಪರ್ಯಾಪ್ತಂ ತನ್ನಿದರ್ಶನಮ್ ॥೫೪॥**

ನಾವು ವಿರಾಟನಗರದಲ್ಲಿ ನಡೆದ ಅದ್ಭುತಪ್ರಸಂಗವನ್ನು ಕೇಳಿ ಮಾತ್ರ ತಿಳಿದೆವು. ಆದರೆ ಅದು ನಿನಗೆ ಪ್ರತ್ಯಕ್ಷಪ್ರಮಾಣದ ವಿಷಯವಾಗಿದೆ. ಒಬ್ಬನೇ ಒಬ್ಬ ಪಾರ್ಥನಿಗೂ ಅನೇಕ ಅತಿರಥ-ಮಹಾರಥರಿಗೂ ಯುದ್ಧವಾಯಿತೆಂಬ ಮತ್ತು ಯುದ್ಧದಲ್ಲಿ ಪಾರ್ಥನೇ ಗೆದ್ದು ವಿರಾಟನ ಗೋವುಗಳನ್ನು ಬಿಡಿಸಿಕೊಂಡು ಹೋದನೆಂಬ ಅದ್ಭುತವಿಷಯವು ಸರ್ವತ್ರ ಕೇಳಿಬರುತ್ತಿದೆ. ಪಾಂಡವ-ಕೌರವರಲ್ಲಿ ಯುದ್ಧವೇ ನಡೆದರೆ ಫಲಿತಾಂಶವೇನಾಗಬಹುದೆಂಬುದನ್ನು ನಿರ್ಧರಿಸಲು ಇದೊಂದು ನಿದರ್ಶನವೇ ಸಾಕಲ್ಲವೇ? (ಇದರಿಂದಲೇ ನಾವು ಯಾವ ಪಕ್ಷಕ್ಕೆ ಜಯ ಮತ್ತು ಯಾವ ಪಕ್ಷಕ್ಕೆ ಅಪಜಯವೆಂಬುದನ್ನು ನಿಶ್ಚಯಮಾಡಬಹುದಾಗಿದೆ.)

**ಯುದ್ಧೇ ಯೇನ ಮಹಾದೇವಃ ಸಾಕ್ಷಾತ್ಸಂತೋಷಿತಃ ಶಿವಃ ।**
**ತಮಜೇಯಮನಾಧೃಷ್ಯಂ ವಿಜೇತುಂ ಜಿಷ್ಣುಮಚ್ಯುತಮ್ ।**
**ಆಶಂಸಸೀಹ ಸಮರೇ ವೀರಮರ್ಜುನಮೂರ್ಜಿತಮ್ ॥೫೫॥**

ಯಾವನು ಯುದ್ಧದಲ್ಲಿ ಮಹಾದೇವನಾದ ಸಾಕ್ಷಾತ್ ಪರಶಿವನನ್ನೇ ತನ್ನ ಭುಜಬಲಪರಾಕ್ರಮಪ್ರದರ್ಶನದಿಂದ ಸಂತೋಷಗೊಳಿಸಿದನೋ- ಅಂತಹ ಅಜೇಯನಾದ, ಎದುರಿಸಲಸಾಧ್ಯನಾದ, ಎಂತಹ ವಿಪತ್ತಿನಲ್ಲಿಯೂ ಮಾನವಮರ್ಯಾದೆಯಿಂದ ಚ್ಯುತನಾಗದ, ಜಯಶೀಲನಾದ, ವೀರನಾದ, ಮಹಾಬಲಿಷ್ಠನಾದ ಅರ್ಜುನನನ್ನು ಯುದ್ಧದಲ್ಲಿ ಜಯಿಸಲು ನೀನು ಆಶಿಸಿರುವೆ. ಇದು ನಿಶ್ಚಯವಾಗಿಯೂ ಆಶ್ಚರ್ಯದ ವಿಷಯವೇ ಆಗಿದೆ, ದುರ್ಯೋಧನ!

**ಮದ್ದ್ವಿತೀಯಂ ಪುನಃ ಪಾರ್ಥಂ ಕಃ ಪ್ರಾರ್ಥಯಿತುಮರ್ಹತಿ ।**
**ಯುದ್ಧೇ ಪ್ರತೀಪಮಾಯಾನ್ತಮಪಿ ಸಾಕ್ಷಾತ್ಪುರಂದರಃ ॥೫೬॥**

ದುರ್ಯೋಧನ! ಮತ್ತೂ ನಿನಗೆ ಎಚ್ಚರಿಕೆ ನೀಡುತ್ತೇನೆ. ಯುದ್ಧದ ವಿಷಯದಲ್ಲಿ ಪುನಃ ಯೋಚಿಸಿ ನೋಡು. ಅಜೇಯನಾದ ಪಾರ್ಥನೊಬ್ಬನೇ ರಣರಂಗಕ್ಕೆ ಬರುವುದಿಲ್ಲ. ನಾನೂ ಅವನೊಡನೆ ಬರುತ್ತೇನೆ. ಇದೂ ನಿನಗೆ ನೆನಪಿರಲಿ. ನಾನವನಿಗೆ ಸಾರಥಿಯಾಗಿ ಬರುತ್ತೇನೆ. ನಾನು ರಥದಲ್ಲಿ ಮೊದಲನೆಯವನಾಗಿ ಮುಂದೆ ಕುಳಿತಿರುತ್ತೇನೆ. ಪಾರ್ಥನು ಎರಡನೆಯವ ನಾಗಿ ನನ್ನ ಹಿಂದೆ ಕುಳಿತಿರುತ್ತಾನೆ. ಯುದ್ಧಸಮಯದಲ್ಲಿ ನನ್ನೊಡನೆ ಕೂಡಿ ರುವ ಪಾರ್ಥನನ್ನು ಎದುರಾಳಿಯನ್ನಾಗಿ ಮಾಡಿಕೊಂಡು ಯುದ್ಧಮಾಡುವ ಇಚ್ಛೆಯನ್ನು ಪ್ರಕಟಿಸಿ ಸಾಕ್ಷಾತ್ ಪುರಂದರನಾದರೂ ಬಂದಾನೆಯೇ?

ದುರ್ಯೋಧನ! ಒಂದು ವೇಳೆ ಪಾರ್ಥನನ್ನು ಜಯಿಸುವವನು ಯಾರಾ ದರೂ ಇದ್ದಾನೆಂದೇ ಭಾವಿಸೋಣ. ಅವನು ಎಂತಹವನಾಗಿರಬೇಕೆಂಬುದು ತಿಳಿದಿರುವುದೇ? ಅವನಿಗೆ ಪರಾಕ್ರಮವಾದರೂ ಎಷ್ಟಿರಬೇಕೆಂಬುದನ್ನು ಊಹಿಸಿರುವೆಯಾ?

**ಬಾಹುಭ್ಯಾಮುದ್ವಹೇದ್ಭೂಮಿಂ ದಹೇತ್ಕ್ರುದ್ಧ ಇಮಾಃ ಪ್ರಜಾಃ ।**
**ಪಾತಯೇತ್ತ್ರಿದಿವಾದ್ದೇವಾನ್ಯೋಽರ್ಜುನಂ ಸಮರೇ ಜಯೇತ್ ॥೫೭॥**

ಯಾವನು ಅರ್ಜುನನನ್ನು ಯುದ್ಧದಲ್ಲಿ ಜಯಿಸಬಲ್ಲನೋ-ಅವನು ತನ್ನೆರಡು ಬಾಹುಗಳಿಂದಲೇ ಈ ಭೂಮಿಯನ್ನೇ ಎತ್ತಬಲ್ಲವನಾಗುತ್ತಾನೆ. ಕೋಪಗೊಂಡ ಅವನು ಈ ಪ್ರಜೆಗಳೆಲ್ಲರನ್ನೂ ದೃಷ್ಟಿಮಾತ್ರದಿಂದಲೇ ದಹಿಸಬಲ್ಲನು. ದೇವತೆಗಳೆಲ್ಲರನ್ನೂ ಏಕಕಾಲದಲ್ಲಿ ಸ್ವರ್ಗದಿಂದ ಕೆಳಕ್ಕೆ ಬೀಳಿಸಬಲ್ಲನು. ಇಂತಹ ಸಾಮರ್ಥ್ಯವಿರುವವನು ಮಾತ್ರವೇ ಅರ್ಜುನನನ್ನು ಜಯಿಸಬಲ್ಲನು.

**ಪಶ್ಯ ಪುತ್ರಾಂಸ್ತಥಾ ಭ್ರಾತೄಞ್ಜ್ಞಾತೀನ್ಸಮ್ಬನ್ಧಿನಸ್ತಥಾ ।**
**ತ್ವತ್ಕೃತೇ ನ ವಿನಶ್ಯೇಯುರಿಮೇ ಭರತಸತ್ತಮಾಃ ॥೫೮॥**

ದುರ್ಯೋಧನ! ನಿನ್ನ ಮಕ್ಕಳನ್ನು ನೋಡು. ಅನುಜರನ್ನು ನೋಡು. ಬಂಧು-ಬಾಂಧವರನ್ನು ನೋಡು. (ಇವರೆಲ್ಲರೂ ಈಗ ಸುಖ-ಸಂತೋಷಗಳಿಂದಿದ್ದಾರೆ.) ನಿನ್ನೊಬ್ಬನ ಕಾರಣದಿಂದಾಗಿ ಭರತ ಕುಲೋತ್ಪನ್ನರಾಗಿರುವ ಈ ಎಲ್ಲರೂ ವಿನಾಶಹೊಂದದಿರಲಿ. (ಅದು ನಿನ್ನೊಬ್ಬನ ನಿರ್ಧಾರವನ್ನವಲಂಬಿಸಿ ನಿಂತಿದೆ.)

**ಅಸ್ತು ಶೇಷಂ ಕೌರವಾಣಾಂ ಮಾ ಪರಾಭೂದಿದಂ ಕುಲಮ್ ।**
**ಕುಲಘ್ನ ಇತಿ ನೋಚ್ಯೇಥಾ ನಷ್ಟಕೀರ್ತಿರ್ನರಾಧಿಪ ॥೫೯॥**

ಕೌರವರ ಶೇಷವಿನ್ನೂ ಉಳಿದಿರಲಿ, ದುರ್ಯೋಧನ! ನಿನ್ನ ಕಾರಣದಿಂದಾಗಿ ಈ ಕುಲವೇ ಅಳಿಸಿಹೋಗದಿರಲಿ. ಭಾರತಕುಲದ ವಿನಾಶಕ್ಕೇ ಕಾರಣನಾಗಿ 'ಕುಲಘ್ನ' ಎಂಬ ತೆಗಳಿಕೆಗೆ ಪಾತ್ರನಾಗಬೇಡ. ಅಕೀರ್ತಿಮಂತನಾಗಬೇಡ. ಒಂದು ವೇಳೆ ಪಾಂಡವರೊಡನೆ ಸಂಧಿಮಾಡಿ ಕೊಂಡು ಬಿಟ್ಟರೆ ನನ್ನ ಸ್ಥಾನ-ಮಾನಗಳೇನು?-ಎಂದೂ ಚಿಂತಿಸಬೇಡ.

**ತ್ವಾಮೇವ ಸ್ಥಾಪಯಿಷ್ಯನ್ತಿ ಯೌವರಾಜ್ಯೇ ಮಹಾರಥಾಃ ।**
**ಮಹಾರಾಜ್ಯೇಽಪಿ ಪಿತರಂ ಧೃತರಾಷ್ಟ್ರಂ ಜನೇಶ್ವರಮ್ ॥೬೦॥**

ಮಹಾರಥರಾದ ಪಾಂಡವರು ನಿನ್ನನ್ನೇ ಯುವರಾಜಪದವಿಯಲ್ಲಿ

ನಿಯೋಜಿಸುತ್ತಾರೆ. ನಿನ್ನ ತಂದೆಯಾದ ಜನೇಶ್ವರನಾದ ಧೃತರಾಷ್ಟ್ರನನ್ನೇ ಮಹಾರಾಜಪದವಿಯಲ್ಲಿ ಸ್ಥಾಪಿಸುತ್ತಾರೆ. ಆದುದರಿಂದ ನಿನ್ನ ಮತ್ತು ನಿನ್ನ ತಂದೆಯ ಸ್ಥಾನ-ಮಾನಗಳಿಗೆ ಯಾವ ವಿಧವಾದ ಲೋಪವೂ ಬರುವುದಿಲ್ಲ.

ದುರ್ಯೋಧನ! ಪುನಃ ಪುನಃ ಹೇಳುತ್ತೇನೆ. ಸಂಧಾನಕಾರ್ಯವನ್ನು ವಿಫಲಗೊಳಿಸಬೇಡ. ಬಾಗಿಲಿಗೆ ಬಂದಿರುವ ಭಾಗ್ಯಲಕ್ಷ್ಮಿಯನ್ನು ದೂರೀ ಕರಿಸಬೇಡ.

**ಮಾ ತಾತ ಶ್ರಿಯಮಾಯಾನ್ತೀಮವಮಂಸ್ಥಾಃ ಸಮುದ್ಯತಾಮ್ ।**
**ಅರ್ಧಂ ಪ್ರದಾಯ ಪಾರ್ಥೇಭ್ಯೋ ಮಹತೀಂ ಶ್ರಿಯಮಾಪ್ಸ್ಯಸಿ ॥**

ರಾಜಲಕ್ಷ್ಮಿಯು ನಿನ್ನ ಬಳಿಗೆ ತಾನೇ ತಾನಾಗಿ ಬರುತ್ತಿರುವಳೆಂದು ಭಾವಿಸು. (ನಿನ್ನ ಭಾಗದ ರಾಜ್ಯವಾದರೂ ನಿನಗೆ ಉಳಿಯಲೆಂದೇ ನಾನಿಂದು ಸಂಧಾನಕ್ಕೆ ಬಂದಿದ್ದೇನೆ.) ರಾಜ್ಯಲಕ್ಷ್ಮಿಯನ್ನು ಅಪಮಾನಗೊಳಿಸಬೇಡ. ನಿನ್ನ ಅಧೀನದಲ್ಲಿರುವ ಪೂರ್ವರಾಜ್ಯವನ್ನೇನೂ ಅವರು ಕೇಳುತ್ತಿಲ್ಲ. ದ್ಯೂತದ ಕಾರಣದಿಂದಾಗಿ ಅವರಿಂದ ನೀನು ಆಕ್ರಮಿಸಿಕೊಂಡ ಅರ್ಧರಾಜ್ಯವನ್ನು ಮಾತ್ರವೇ ಅವರು ನಿನ್ನಿಂದ ಅಪೇಕ್ಷಿಸುತ್ತಿದ್ದಾರೆ. ಆದುದರಿಂದ ನ್ಯಾಯರೀತಿಯಲ್ಲಿ ಅವರಿಗೆ ಸಲ್ಲಬೇಕಾಗಿರುವ ಅರ್ಧರಾಜ್ಯವನ್ನು ಅವರಿಗೆ ಕೊಟ್ಟುಬಿಡು. ಆಗಲೂ ನೀನು ಮಹತ್ತಾದ ಸಂಪತ್ತಿಗೆ ಅಧಿಪತಿಯಾಗುವೆ. ಮಹತ್ತಾದ ಸಂಪತ್ತನ್ನು ಉಪಭೋಗಿಸುವೆ.

**ಪಾಣ್ಡವೈಃ ಸಂಶಮಂ ಕೃತ್ವಾ ಕೃತ್ವಾ ಚ ಸುಹೃದಾಂ ವಚಃ ।**
**ಸಮ್ಪ್ರೀಯಮಾಣೋ ಮಿತ್ರೈಶ್ಚ ಚಿರಂ ಭದ್ರಾಣ್ಯವಾಪ್ಸ್ಯಸಿ ॥೬೨॥**

ಸುಹೃದರ ಹಿತವಚನವನ್ನು ಕೇಳಿ ಪಾಂಡವರೊಡನೆ ಸಂಧಿಮಾಡಿ ಕೊಂಡಿದ್ದೇ ಆದರೆ ಬಂಧು-ಮಿತ್ರರೊಡನೆ ಪ್ರೀತಿ-ವಿಶ್ವಾಸಗಳಿಂದಿರುತ್ತಾ ಚಿರಕಾಲದವರೆಗೂ ಶಾಂತಿಯನ್ನೂ, ಪುಷ್ಟಿಯನ್ನೂ, ತುಷ್ಟಿಯನ್ನೂ, ಸನ್ಮಂಗಳವನ್ನೂ ಪಡೆದು ಸುಖಿಯಾಗುವೆ."

೧೨೪ನೆಯ ಅಧ್ಯಾಯವು ಮುಗಿಯಿತು.

೧೨೫ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ)

## ಭೀಷ್ಮ-ದ್ರೋಣ-ವಿದುರ-ಧೃತರಾಷ್ಟ್ರರು ದುರ್ಯೋಧನನನ್ನು ಸಮಾಧಾನಪಡಿಸಿದುದು

ವೈಶಂಪಾಯನರು ಜನಮೇಜಯನನ್ನು ಕುರಿತು ಹೇಳುತ್ತಾರೆ :

**ತತಃ ಶಾನ್ತನವೋ ಭೀಷ್ಮೋ ದುರ್ಯೋಧನಮಮರ್ಷಣಮ್ ।**
**ಕೇಶವಸ್ಯ ವಚಃ ಶ್ರುತ್ವಾ ಪ್ರೋವಾಚ ಭರತರ್ಷಭ ॥೧॥**

"ಭರತರ್ಷಭನೇ! ಜನಮೇಜಯ! ಶ್ರೀಕೇಶವನು ಹೇಳಿದ ಮಾತುಗಳನ್ನು ಕೇಳಿ ಶಾಂತನುವಿನ ಮಗನಾದ ಭೀಷ್ಮನು ಕ್ರೋಧಾಭಿಭೂತ ನಾಗಿದ್ದ ದುರ್ಯೋಧನನನ್ನು ಸಾಂತ್ವನಗೊಳಿಸುತ್ತಾ ಹೇಳತೊಡಗಿದನು :

"ಮಗು, ದುರ್ಯೋಧನ! ಸುಹೃದರಲ್ಲಿ ಪರಸ್ಪರವಾಗಿ ಶಾಂತಿಯನ್ನೇ ಅಪೇಕ್ಷಿಸುವ ಶ್ರೀಕೃಷ್ಣನು ನಿನಗೆ ಅತ್ಯುತ್ತಮವಾದ ಸಲಹೆಯನ್ನೇ ನೀಡಿದ್ದಾನೆ. ಅವನ ಮಾತಿನಂತೆಯೇ ನೀನು ನಡೆದುಕೊ. ಕ್ರೋಧಪರವಶನಾಗಬೇಡ. ಮಹಾತ್ಮನಾದ ಕೇಶವನ ಮಾತಿನಂತೆ ನಡೆದುಕೊಳ್ಳದಿದ್ದರೆ–ಅವನು ಹೇಳಿದಂತೆ ಮಾಡದಿದ್ದರೆ–ನಿನಗೆ ಶ್ರೇಯಸ್ಸು ಯಾವಾಗಲೂ ಲಭಿಸುವುದಿಲ್ಲ. ಸುಖವುಂಟಾಗುವುದಿಲ್ಲ. ಸನ್ಮಂಗಳವೂ ಉಂಟಾಗುವುದಿಲ್ಲ. ಶ್ರೇಯಃ-ಪ್ರೇಯಗಳನ್ನು ಪಡೆಯಬೇಕಾದರೆ–ಮಂಗಳಮಯ ಜೀವನವನ್ನು ನಡೆಸುವ ಆಶಯವಿದ್ದರೆ–ಕೇಶವನು ಹೇಳಿದಂತೆ ಮಾಡು.

ಮಹಾಬಾಹುವಾದ ಕೇಶವನು ಧರ್ಮ ಮತ್ತು ಅರ್ಥಗಳ ಪ್ರಾಪ್ತಿಗೆ ಸಾಧಕವಾದ ಮಾತನ್ನೇ ಹೇಳಿದ್ದಾನೆ. ಅವನು ಹೇಳಿದ ಮಾತಿನ ಅರ್ಥವನ್ನು ಗ್ರಹಿಸು. ಅದರಂತೆ ಆಚರಿಸು. ಹಾಗೆ ಮಾಡದೇ ಕ್ರೋಧಾಭಿಭೂತನಾಗಿ ನಿಷ್ಕಾರಣವಾಗಿ ನಿನ್ನನ್ನೇ ಆಶ್ರಯಿಸಿರುವ ಪ್ರಜೆಗಳನ್ನು ವಿನಾಶಗೊಳಿಸಬೇಡ. ಭರತವಂಶದ ರಾಜ್ಯಲಕ್ಷ್ಮಿಯು ಈ ಎಲ್ಲ ರಾಜರ ಮಧ್ಯದಲ್ಲಿ ವಿರಾಜ ಮಾನಳಾಗಿದ್ದಾಳೆ. ಪ್ರಜ್ವಲಿಸುತ್ತಿರುವ ಇಂತಹ ರಾಜ್ಯಲಕ್ಷ್ಮಿಯನ್ನು ನಿನ್ನ ಕೆಟ್ಟಬುದ್ಧಿಯ ಕಾರಣದಿಂದಾಗಿ, ಈ ಧೃತರಾಷ್ಟ್ರನಿನ್ನೂ ಬದುಕಿರುವಾಗಲೇ ಹಾಳುಮಾಡಿಕೊಳ್ಳುವೆ. ನಿನ್ನ ಅಹಂಕಾರಯುಕ್ತವಾದ ಬುದ್ಧಿಯಿಂದಾಗಿ

ನೀನೂ ಜೀವಿತದಿಂದ ಭ್ರಷ್ಟನಾಗುವೆ. (ಪ್ರಾಣತೊರೆಯುವೆ.) ಇಷ್ಟುಮಾತ್ರ ವಲ್ಲ. ಅಮಾತ್ಯ-ಪುತ್ರ-ಭ್ರಾತೃ-ಬಾಂಧವರ ಪ್ರಾಣಗಳನ್ನೂ ತೊರೆಸುವೆ. ದುರ್ಯೋಧನ! ಶ್ರೀಕೇಶವನ ಮಾತು ಸತ್ಯಯುಕ್ತವೂ ಅರ್ಥವುಳ್ಳದ್ದೂ ಆಗಿದೆ. ಕೇಶವನ ಅಂತಹ ಮಾತನ್ನೂ, ತಂದೆಯ ಮತ್ತು ಧೀಮಂತನಾದ ವಿದುರನ ಮಾತನ್ನೂ ಅತಿಕ್ರಮಿಸಿ ಕುಲಘ್ನನೂ, ಕುಪುರುಷನೂ, ದುರ್ಮತಿಯೂ ಆಗಬೇಡ. ಕುಮಾರ್ಗವನ್ನು ಹಿಡಿದು ಹೋಗಬೇಡ. ನಿನ್ನ ತಂದೆಯನ್ನೂ ಮತ್ತು ತಾಯಿಯನ್ನೂ ಶೋಕಸಾಗರದಲ್ಲಿ ಮುಳುಗಿಸಬೇಡ."

ಭೀಷ್ಮನ ಸಾಂತ್ವವಚನಗಳಿಗೂ ಸಮಾಧಾನತಂದುಕೊಳ್ಳದೇ ಕ್ರೋಧ ಪರವಶನಾಗಿದ್ದ, ಬಾರಿ-ಬಾರಿಗೂ ನಿಟ್ಟುಸಿರುಬಿಡುತ್ತಿದ್ದ ದುರ್ಯೋಧನ ನನ್ನು ಕುರಿತು ಆಚಾರ್ಯದ್ರೋಣರು ಈ ಮಾತುಗಳನ್ನು ಹೇಳಿದರು :

"ಮಗು! ದುರ್ಯೋಧನ! ಕೇಶವನು ನಿನ್ನ ಸಂಗಡ ಧರ್ಮಾರ್ಥ ಯುಕ್ತವಾದ ಮಾತುಗಳನ್ನೇ ಆಡಿರುತ್ತಾನೆ. ಅದೇ ರೀತಿಯಲ್ಲಿ ಭೀಷ್ಮನೂ ನಿನಗೆ ಹಿತಕರವಾದ ಮಾತುಗಳನ್ನೇ ಆಡಿರುತ್ತಾನೆ. ಮನುಜೇಶ್ವರ! ನೀನು ಈ ಇಬ್ಬರ ಮಾತಿನಂತೆ ನಡೆದುಕೊಳ್ಳುವುದು ಸೂಕ್ತವಾಗಿದೆ.

**ಪ್ರಾಜ್ಞೌ ಮೇಧಾವಿನೌ ದಾನ್ತಾವರ್ಥಕಾಮೌ ಬಹುಶ್ರುತೌ ।**
**ಆಹತುಸ್ತ್ವಾಂ ಹಿತಂ ವಾಕ್ಯಂ ತಜ್ಜುಷಸ್ವ ನರಾಧಿಪ ॥೧೧॥**

ಈ ಇಬ್ಬರೂ ಮಹಾಪ್ರಾಜ್ಞರಾಗಿರುತ್ತಾರೆ. ಮೇಧಾವಿಗಳಾಗಿರುತ್ತಾರೆ. ಜಿತೇಂದ್ರಿಯರಾಗಿರುತ್ತಾರೆ. ನಿನಗೆ ಒಳ್ಳೆಯದನ್ನು ಮಾಡುವ ಅಭಿಲಾಷೆ ಯುಳ್ಳವರಾಗಿರುತ್ತಾರೆ. ಅನೇಕಾನೇಕಶಾಸ್ತ್ರಗಳನ್ನೂ ತಿಳಿದವರಾಗಿರುತ್ತಾರೆ. ಇಂತಹ ಸಕಲಸದ್ಗುಣಪರಿಪೂರ್ಣರಾದ ಕೃಷ್ಣ-ಭೀಷ್ಮರು ನಿನಗೆ ಹಿತವಾದ ಮಾತುಗಳನ್ನೇ ಹೇಳಿರುತ್ತಾರೆ. ನೀನು ಇವರ ಮಾತನ್ನು ಅಂಗೀಕರಿಸು. ಅವರು ಹೇಳಿದಂತೆಯೇ ನಡೆದುಕೋ, ದುರ್ಯೋಧನ!

ಕೃಷ್ಣ-ಭೀಷ್ಮರು ಹೇಳಿದಂತೆ ಮಾಡು. ಪರಂತಪನೇ! ಬುದ್ಧಿಯ ಮೋಹದಿಂದಾಗಿ ಮಾಧವನನ್ನು ಅಪಮಾನಗೊಳಿಸಲು ಯತ್ನಿಸಬೇಡ. ಇತರರು ಹೇಳುವ ಮಾತಿನಿಂದ ವಂಚಿತನಾಗಬೇಡ.

**ಯೇ ತ್ವಾಂ ಪ್ರೋತ್ಸಾಹಯನ್ತ್ಯೇತೇ ನೈತೇ ಕೃತ್ಯಾಯ ಕರ್ಹಿಚಿತ್ ।**
**ವೈರಂ ಪರೇಷಾಂ ಗ್ರೀವಾಯಾಂ ಪ್ರತಿಮೋಕ್ಷ್ಯನ್ತಿ ಸಂಯುಗೇ ॥**

ಯಾರು ನಿನ್ನನ್ನೀಗ ಯುದ್ಧಕ್ಕೆ ಪ್ರೋತ್ಸಾಹಿಸುತ್ತಿರುವರೋ ಅವರೆಲ್ಲರೂ ಆಡಿದುದನ್ನು ಕೃತಿಯಲ್ಲಿ ಮಾಡಿತೋರಿಸುವ ಕಾಲವು ಬಂದಾಗ ಇರುವುದೇ ಇಲ್ಲ. ಯುದ್ಧಸಮಯದಲ್ಲಿ ಇದೇ ನಿನ್ನ 'ಹಿತಚಿಂತಕರು' ವೈರವನ್ನು (ವೈರದ ಪ್ರತಿಕ್ರಿಯೆಯಿಂದಾದ ಯುದ್ಧದ ಹೊಣೆಗಾರಿಕೆಯನ್ನು) ಮತ್ತೊಬ್ಬರ ಕುತ್ತಿಗೆಗೆ ಕಟ್ಟಿಬಿಡುತ್ತಾರೆ. ಆದುದರಿಂದ ಖಂಡಿತವಾಗಿಯೂ ಪಾಂಡವರೊಡನೆ ಯುದ್ಧಮಾಡಲು ನಿಶ್ಚಯಿಸಬೇಡ. ಯುದ್ಧಮಾಡಿ ಸರ್ವಪ್ರಜೆಗಳ ಮತ್ತು ಪುತ್ರ-ಭ್ರಾತೃ-ಬಂಧು-ಬಾಂಧವರ ಹತ್ಯೆಮಾಡಬೇಡ. (ಹತ್ಯೆಗೆ ಕಾರಣನಾಗ ಬೇಡ.) ಯಾವ ಪಕ್ಷದಲ್ಲಿ ಕೃಷ್ಣಾರ್ಜುನರಿರುವರೋ–ಆ ಪಕ್ಷದವರನ್ನು ಅಜೇಯರೆಂದೇ ನಿಶ್ಚಯಿಸಿಬಿಡು. ಕೃಷ್ಣಾರ್ಜುನರಿರುವೆಡೆಯಲ್ಲಿ ವಿಜಯವು ಶತಶಃ ಸಿದ್ಧವಾದುದು. ನಿನಗೆ ನಿಜವಾಗಿ ಹಿತಬಯಸುವ ಸುಹೃದರಾದ ಕೃಷ್ಣ-ಭೀಷ್ಮರ ಹಿತವಚನವನ್ನು ನೀನೀಗ ಪರಿಗ್ರಹಿಸದಿದ್ದರೆ ಕಾರ್ಯವು ಮಿಂಚಿಹೋದ ನಂತರ ನೀನು ಖಂಡಿತವಾಗಿಯೂ ಪಶ್ಚಾತ್ತಾಪಪಡುತ್ತೀಯೆ. ಭಗವಾನ್ ಪರಶುರಾಮನು ದಂಭೋದ್ಭವನ ಕಥೆಯ ಮೂಲಕವಾಗಿ ನರರೂಪಿಯಾದ ಅರ್ಜುನನ ಸಾಮರ್ಥ್ಯವನ್ನು ವಿವರಿಸಿ ಹೇಳಿರುವುದಕ್ಕಿಂತಲೂ ಹೆಚ್ಚಿನ ಸಾಮರ್ಥ್ಯವು ಅರ್ಜುನನಲ್ಲಿದೆ. ದೇವಕೀ ಪುತ್ರನಾದ ಶ್ರೀಕೃಷ್ಣನು ದೇವತೆಗಳಿಗೂ ದುಃಸಹನೆಂಬುದರಲ್ಲಿ ಸಂಶಯವೇ ಇಲ್ಲ. ಇಂದ್ರಪ್ರಮುಖರಾದ ದೇವತೆಗಳೂ ಶ್ರೀಕೃಷ್ಣನನ್ನೆದುರಿಸಿ ನಿಲ್ಲಲಾರರು. ಆದುದರಿಂದ ಪಾಂಡವರೊಡನೆ ಸಂಧಿಮಾಡಿಕೊಳ್ಳುವುದು ಸರ್ವಥಾ ಉಚಿತವಾಗಿದೆ, ದುರ್ಯೋಧನ!"

ದುರ್ಯೋಧನನ ಮುಖವು ಯಥಾಪೂರ್ವವಾಗಿಯೇ ಇತ್ತು. ಕೋಪಾವಿಷ್ಟನಾಗಿಯೇ ಇದ್ದನು. ದ್ರೋಣರಾಡಿದ ಮಾತಿನಿಂದಲೂ ಅವನ ಮನಸ್ಸಿನಲ್ಲಿ ಯಾವ ವಿಧವಾದ ಪರಿವರ್ತನೆಯೂ ಉಂಟಾಗಲಿಲ್ಲ. ಅದನ್ನು ಗಮನಿಸಿದ ದ್ರೋಣರು ನಿಟ್ಟುಸಿರುಬಿಡುತ್ತಾ ಹೇಳಿದರು :

**ಕಿಂ ತೇ ಸುಖಪ್ರಿಯೇಣೇಹ ಪ್ರೋಕ್ತೇನ ಭರತರ್ಷಭ ।**

**ಏತತ್ತೇ ಸರ್ವಮಾಖ್ಯಾತಂ ಯಥೇಚ್ಛಸಿ ತಥಾ ಕುರು ।**
**ನ ಹಿ ತ್ವಾಮುತ್ಸಹೇ ವಕ್ತುಂ ಭೂಯೋ ಭರತಸತ್ತಮ ॥೧೮॥**

"ವತ್ಸ! ನಿನಗೆ ಸುಖವನ್ನು ಬಯಸಿ ಹೇಳುವ ಪ್ರಿಯವಾದ ಮಾತುಗಳಿಂದ ಆಗುವ ಪ್ರಯೋಜನವಾದರೂ ಏನಿದೆ? ನನ್ನ ಕರ್ತವ್ಯದೃಷ್ಟಿಯಿಂದ ಎಲ್ಲ ವಿಷಯಗಳನ್ನೂ ಹೇಳಿದ್ದಾಯಿತು. ಭರತರ್ಷಭನೇ! ನಿನ್ನ ಇಚ್ಛೆಯಿದ್ದಂತೆ ಮಾಡು. ಪುನಃ ಪುನಃ ನಿನಗೆ ಹಿತೋಪದೇಶಮಾಡಲಾರೆನು."

ವೈಶಂಪಾಯನರು ಹೇಳುತ್ತಾರೆ :

ಪಾರಿಕ್ಷಿತ! ದ್ರೋಣರು ಮಾತನ್ನು ಮುಗಿಸುತ್ತಿದ್ದಾಗಲೇ ವಿದುರನು ದುರ್ಯೋಧನನನ್ನೊಮ್ಮೆ ನೋಡಿ ಕ್ರೋಧಾಭಿಭೂತನಾಗಿದ್ದ ಅವನನ್ನು ಕುರಿತು ಹೇಳಿದನು :

**ದುರ್ಯೋಧನ ನ ಶೋಚಾಮಿ ತ್ವಾಮಹಂ ಭರತರ್ಷಭ ।**
**ಇಮೌ ತು ವೃದ್ಧೌ ಶೋಚಾಮಿ ಗಾನ್ಧಾರೀಂ ಪಿತರಂ ಚ ತೇ ॥೧೯॥**

"ದುರ್ಯೋಧನ! ನಾನು ನಿನ್ನ ವಿಷಯವಾಗಿ ಶೋಕಿಸ ಹೋಗುವುದಿಲ್ಲ. ದುಷ್ಟಮಾರ್ಗವನ್ನು ಹಿಡಿದಿರುವ ನೀನು ಪ್ರತಿನಿವೃತ್ತನಾಗುವುದಿಲ್ಲ. ಈ ಸಮಯದಲ್ಲಿ ನೀನು ಸಂಪೂರ್ಣವಾಗಿ ನಾಶವಾಗುವುದಂತೂ ನಿಶ್ಚಯ. ಇದಕ್ಕಾಗಿ ನಾನಷ್ಟು ದುಃಖಿಸುವುದಿಲ್ಲ. ನಿನ್ನ ವಿನಾಶವಾದನಂತರದ ಪರಿಣಾಮವನ್ನು ಕುರಿತು ನಾನೀಗ ಶೋಕಿಸಬೇಕಾಗಿದೆ. ನೀನು ವಿನಾಶಹೊಂದಿದನಂತರ ಈ ನಿನ್ನ ತಂದೆ-ತಾಯಿಗಳಾದ ವೃದ್ಧ ಧೃತರಾಷ್ಟ್ರ-ಗಾಂಧಾರಿಯರ ಗತಿಯೇನು? ಎಂಬುದರ ವಿಷಯವಾಗಿ ನಾನು ವ್ಯಥೆಪಡುತ್ತಿದ್ದೆ.

**ಯಾವನಾಥೌ ಚರಿಷ್ಯೇತೇ ತ್ವಯಾ ನಾಥೇನ ದುರ್ಹೃದಾ ।**
**ಹತಮಿತ್ರೌ ಹತಾಮಾತ್ಯೌ ಲೂನಪಕ್ಷಾವಿವಾಣ್ಡಜೌ ॥೨೦॥**

ದುಷ್ಟಹೃದಯನಾದ ನಿನ್ನನ್ನು ರಕ್ಷಕನನ್ನಾಗಿ ಪಡೆದುಕೊಂಡಿರುವ ಇವರು ನಿನ್ನ ದುಷ್ಟವರ್ತನೆಯಿಂದಾಗಿ ಮಿತ್ರರನ್ನೂ, ಅಮಾತ್ಯರನ್ನೂ ಕಳೆದುಕೊಂಡು ಅನಾಥರಾಗಿ–ರೆಕ್ಕೆಗಳನ್ನು ಕತ್ತರಿಸಿದ ಪಕ್ಷಿಗಳಂತಾಗುವರಲ್ಲಾ–ಎಂಬುದನ್ನು ಬಾರಿ-ಬಾರಿಗೂ ನೆನೆದು ಶೋಕಿಸುತ್ತೇನೆ.

**ಭಿಕ್ಷುಕೌ ವಿಚರಿಷ್ಯೇತೇ ಶೋಚನ್ತೌ ಪೃಥಿವೀಮಿಮಾಮ್ ।**
**ಕುಲಘ್ನಮೀದೃಶಂ ಪಾಪಂ ಜನಯಿತ್ವಾ ಕುಪೂರುಷಮ್ ॥೨೧॥**

ಕುಲಘ್ನನಾದ, ಕುಪುರುಷನಾದ, ಮಹಾಪಾಪಿಷ್ಠನಾದ ನಿನ್ನಂತಹ ಪುತ್ರನನ್ನು ಪಡೆದ ಈ ನಿನ್ನ ತಾಯಿ-ತಂದೆಗಳು ಸರ್ವಸ್ವವನ್ನೂ ಕಳೆದು ಕೊಂಡನಂತರ ಗೋಳಿಡುತ್ತಾ ಭಿಕ್ಷುಕರಂತೆ ಈ ಪೃಥ್ವಿಯಲ್ಲಿ ಸಂಚರಿಸುತ್ತಾರೆ. ಇದನ್ನು ನೆನೆದರೆ ನನ್ನ ಹೃದಯವೇ ಶೋಕದಿಂದ ಸೀಳಿಹೋಗುತ್ತದೆ.”

ವಿದುರನು ಹೀಗೆ ಹೇಳಿದನಂತರದಲ್ಲಿ ತಮ್ಮಂದಿರೊಡನೆ ಕುಳಿತಿದ್ದ ಮತ್ತು ರಾಜರಿಂದ ಪರಿವೃತನಾಗಿದ್ದ ದುರ್ಯೋಧನನನ್ನು ಕುರಿತು ಧೃತರಾಷ್ಟ್ರರಾಜನು ಹೇಳಿದನು :

“ವತ್ಸ, ದುರ್ಯೋಧನ! ನಾನು ಹೇಳಲಿರುವ ಈ ಮಾತುಗಳನ್ನು ಮನಸ್ಸಿಟ್ಟು ಕೇಳು. ಮಹಾತ್ಮನಾದ ಶೌರಿಯ ಸಲಹೆಯು ಅತ್ಯಂತ ಮಂಗಳಕರವಾದುದು. ಯೋಗ-ಕ್ಷೇಮಗಳ ಪ್ರಾಪ್ತಿಗೆ ಸಾಧಕವಾದುದೂ ಮತ್ತು ಚಿರಸ್ಥಾಯಿಯಾಗಿ ಉಳಿಯತಕ್ಕದ್ದೂ ಆಗಿದೆ. ಅಮೋಘವಾದ ಈ ಸಲಹೆಯನ್ನು ನೀನು ಅಂಗೀಕರಿಸು. ಎಂತಹ ಮಹಾಕಾರ್ಯವನ್ನೂ ಬಹು ಸುಲಭವಾಗಿ ಮಾಡಿ ಮುಗಿಸುವ ಸಾಮರ್ಥ್ಯವುಳ್ಳ ಈ ಶ್ರೀಕೃಷ್ಣನ ಸಹಾಯವನ್ನೇ ಪಡೆದು ನಾವು ಸರ್ವರಾಜರಿಂದಲೂ ಸನ್ಮಾನಿತರಾಗಿ ನಮ್ಮ ಸಕಲವಾದ ಇಷ್ಟಾರ್ಥಗಳನ್ನೂ ಪಡೆದುಕೊಳ್ಳೋಣ. ಶ್ರೀಕೇಶವನ ಜೊತೆ ಸೇರಿ ಯುಧಿಷ್ಠಿರನ ಬಳಿಗೆ ಹೋಗು. ಭರತವಂಶೀಯರಿಗೆ ಯಾವ ವಿಧವಾದ ಉಪದ್ರವವೂ ಉಂಟಾಗದ ರೀತಿಯಲ್ಲಿ ಪರಿಪೂರ್ಣವಾಗಿ ಸ್ವಸ್ತ್ಯಯನ ಮಾಡು. ಮಂಗಳಾಶಾಸನಮಾಡು. ಮುಂದೆ ಭರತವಂಶೀಯರೆಲ್ಲರೂ ಸುಖ-ಸಂತೋಷಗಳಿಂದಿರಲು ಪ್ರಪ್ರಥಮವಾಗಿ ಸ್ವಸ್ತಿವಾಚನಮಾಡು.

(ಕಾರ್ಯಾರಂಭದಲ್ಲಿ ಪುಣ್ಯಾಹ-ಸ್ವಸ್ತಿವಾಚನಗಳನ್ನು ಮಾಡುವ ಪದ್ಧತಿಯು ಈಗಲೂ ಇದೆ. ಅದೇ ರೀತಿಯಲ್ಲಿ ಶಾಂತಿಸಂಧಾನದ ಆರಂಭ ಸಮಯದಲ್ಲಿ ಭಾರತರ ಉಪದ್ರವನಿವಾರಣೆಗಾಗಿ ಮತ್ತು ಸುಖಪ್ರಾಪ್ತಿಗಾಗಿ

ಸ್ವಸ್ತಿವಾಚನ ಅಥವಾ ಸ್ವಸ್ತ್ಯಯನಮಾಡುವಂತೆ ದುರ್ಯೋಧನನಿಗೆ ಧೃತರಾಷ್ಟ್ರನು ಹೇಳುತ್ತಾನೆ.)

ಪಂಡಿತಶ್ರೇಷ್ಠನಾದ ಭಗವಾನ್ ಶ್ರೀಕೃಷ್ಣನೊಡನೆ ಯುಧಿಷ್ಠಿರನ ಬಳಿಗೆ ಹೋಗಿ ಇವನ ಮಧ್ಯಸ್ಥಿಕೆಯಲ್ಲಿ ಪಾಂಡವರೊಡನೆ ಸಂಧಿಮಾಡಿಕೊ. ಸಂಧಿಮಾಡಿಕೊಳ್ಳಲು ಇದು ಸಕಾಲವಾಗಿದೆಯೆಂದು ನಾನು ಭಾವಿಸುತ್ತೇನೆ. ದುರ್ಯೋಧನ! ಈ ನನ್ನ ಆಜ್ಞೆಯನ್ನು ಖಂಡಿತವಾಗಿಯೂ ನೀನು ಕಡೆಗಾಣಿಸಬೇಡ (ಉಲ್ಲಂಘಿಸಬೇಡ). ಸಂಧಿಗಾಗಿ ಯಾಚಿಸಲು ಬಂದಿರುವ ಶ್ರೀಕೃಷ್ಣನು ನಿನ್ನ ಹಿತಾರ್ಥವಾಗಿಯೇ ಹೇಳುತ್ತಿರುವ ಮಾತುಗಳನ್ನು ಕೇಳದೇ ನೀನು ತಿರಸ್ಕರಿಸಿದೆಯಾದರೆ, ನಿನಗೆ ಖಂಡಿತವಾಗಿಯೂ ಪರಾಜಯವು ತಪ್ಪುವುದಿಲ್ಲ."

೧೨೫ನೆಯ ಅಧ್ಯಾಯವು ಮುಗಿಯಿತು.

೧೨೬ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ)

## ಭೀಷ್ಮ-ದ್ರೋಣರು ಪುನಃ ದುರ್ಯೋಧನನನ್ನು ಸಮಾಧಾನಗೊಳಿಸಲು ಯತ್ನಿಸಿದುದು

ವೈಶಂಪಾಯನರು ಹೇಳುತ್ತಾರೆ :

**ಧೃತರಾಷ್ಟ್ರವಚಃ ಶ್ರುತ್ವಾ ಭೀಷ್ಮದ್ರೋಣೌ ಸಮವ್ಯಥೌ ।**
**ದುರ್ಯೋಧನಮಿದಂ ವಾಕ್ಯಮೂಚತುಃ ಶಾಸನಾತಿಗಮ್ ॥೧॥**

ಜನಮೇಜಯ! ಧೃತರಾಷ್ಟ್ರನಾಡಿದ ಮಾತನ್ನು ಕೇಳಿ, ಯುದ್ಧವಾದರೆ ಜನನಷ್ಟವಾಗುವುದೆಂಬ ಸಮಾನವಾದ ವ್ಯಥೆಯನ್ನು ಹೊಂದಿದ್ದ ಭೀಷ್ಮ-ದ್ರೋಣರು, ಗುರುಜನರ ಆಜ್ಞೆಯನ್ನು ಮೀರುವುದರಲ್ಲಿಯೇ ಹೆಚ್ಚಿನ ಆಸಕ್ತಿಯನ್ನು ಹೊಂದಿದ್ದ ದುರ್ಯೋಧನನನ್ನು ಕುರಿತು ಹೇಳಿದರು :

**ಯಾವತ್ಕೃಷ್ಣಾವಸಂನದ್ಧೌ ಯಾವತ್ತಿಷ್ಠತಿ ಗಾಣ್ಡಿವಮ್ ।**
**ಯಾವದ್ಧೌಮ್ಯೋ ನ ಮೇಧಾಗ್ನೌ ಜುಹೋತೀಹ ದ್ವಿಷದ್ಬಲಮ್ ॥೨॥**

**ಯಾವನ್ನ ಪ್ರೇಕ್ಷತೇ ಕ್ರುದ್ಧಃ ಸೇನಾಂ ತವ ಯುಧಿಷ್ಠಿರಃ ।**
**ಹ್ರೀನಿಷೇವೋ ಮಹೇಷ್ವಾಸಸ್ತಾವಚ್ಛಾಮ್ಯತು ವೈಶಸಮ್ ॥೩॥**

"ಎಂದಿನವರೆಗೆ ಕೃಷ್ಣಾರ್ಜುನರು ಕವಚಗಳನ್ನು ಧರಿಸಿ ಯುದ್ಧ ಸನ್ನದ್ಧರಾಗಿ ರಣಾಂಗಣಕ್ಕೆ ಬರುವುದಿಲ್ಲವೋ, ಎಂದಿನವರೆಗೆ ಗಾಂಡೀವ ಧನುಸ್ಸು ಶಸ್ತ್ರಾಗಾರದಲ್ಲಿಯೇ ಸ್ವಸ್ಥವಾಗಿರುವುದೋ, ಎಂದಿನವರೆಗೆ ಧೌಮ್ಯರು ಯಜ್ಞಾಗ್ನಿಯಲ್ಲಿ ಶತ್ರುಸೈನ್ಯದ ಮಾರಣಹೋಮ ಮಾಡುವುದಿಲ್ಲವೋ ಮತ್ತು ಎಂದಿನವರೆಗೆ ಲಜ್ಜಾಶೀಲನಾದ, ಮಹಾಧನುಷ್ಮಂತನಾದ ಯುಧಿಷ್ಠಿರನು ಕುಪಿತನಾಗಿ ನಿನ್ನ ಸೈನ್ಯವನ್ನು ನೋಡುವುದಿಲ್ಲವೋ, ಅಷ್ಟರೊಳಗಾಗಿ ಸರ್ವನಾಶಕರವಾದ ಯುದ್ಧವು ನಿಲ್ಲಲಿ ; ಶಾಂತಿಯು ನೆಲೆಸಲಿ.

**ಯಾವನ್ನ ದೃಶ್ಯತೇ ಪಾರ್ಥಃ ಸ್ವೇಽಪ್ಯನೀಕೇ ವ್ಯವಸ್ಥಿತಃ ।**
**ಭೀಮಸೇನೋ ಮಹೇಷ್ವಾಸಸ್ತಾವಚ್ಛಾಮ್ಯತು ವೈಶಸಮ್ ॥೪॥**

ಎಂದಿನವರೆಗೆ ಕುಂತೀಪುತ್ರನಾದ ಮಹಾಧನುರ್ಧರನಾದ ಭೀಮ ಸೇನನು ತನ್ನ ಸೇನೆಯ ಅಗ್ರಭಾಗದಲ್ಲಿ ವ್ಯವಸ್ಥಿತನಾಗಿ ನಿಂತಿರುವುದನ್ನು ನಾವು ಕಾಣುವುದಿಲ್ಲವೋ, ಅಷ್ಟರೊಳಗಾಗಿ ಸರ್ವವಿನಾಶಕರವಾದ ಯುದ್ಧವು ನಿಲ್ಲಲಿ ; ಶಾಂತಿಯು ನೆಲೆಸಲಿ.

**ಯಾವನ್ನ ಚರತೇ ಮಾರ್ಗಾನ್ಪೃತನಾಮಭಿಧರ್ಷಯನ್ ।**
**ಭೀಮಸೇನೋ ಗದಾಪಾಣಿಸ್ತಾವತ್ಸಂಶಾಮ್ಯ ಪಾಣ್ಡವೈಃ ॥೫॥**

ದುರ್ಯೋಧನ! ಎಂದಿನವರೆಗೆ ಗದಾಪಾಣಿಯಾದ ಭೀಮಸೇನನು ನಿನ್ನ ಸೇನೆಯನ್ನು ಕಂಡ-ಕಂಡಲ್ಲಿ ಸಂಹರಿಸುತ್ತಾ ಸಮರಾಂಗಣದ ನಾನಾ ಮಾರ್ಗಗಳಲ್ಲಿ ಸಂಚರಿಸುವುದಿಲ್ಲವೋ, ಅಷ್ಟರೊಳಗಾಗಿ ಶಾಂತಿಯು ನೆಲೆಸಲಿ. ಪಾಂಡವರೊಡನೆ ಸಂಧಾನಕ್ಕೆ ಸಮ್ಮತಿಸು.

**ಯಾವನ್ನ ಶಾತಯತ್ಯಾಜೌ ಶಿರಾಂಸಿ ಗಜಯೋಧಿನಾಮ್ ।**
**ಗದಯಾ ವೀರಘಾತಿನ್ಯಾ ಫಲಾನೀವ ವನಸ್ಪತೇಃ ।**
**ಕಾಲೇನ ಪರಿಪಕ್ವಾನಿ ತಾವಚ್ಛಾಮ್ಯತು ವೈಶಸಮ್ ॥೬॥**

ಎಂದಿನವರೆಗೆ ಭೀಮಸೇನನು ತನ್ನ ವೀರಘಾತಿಯಾದ ಗದೆಯಿಂದ–

ಸಕಾಲದಲ್ಲಿ ಪರಿಪಕ್ವವಾದ ವೃಕ್ಷದ ಫಲಗಳನ್ನುದುರಿಸುವಂತೆ-ಗಜಸೈನಿಕರ ತಲೆಗಳನ್ನು ಭೇದಿಸಿ ಕೆಳಗುರುಳಿಸುವುದಿಲ್ಲವೋ, ಅಷ್ಟರೊಳಗಾಗಿ ಸರ್ವನಾಶಕರವಾದ ಯುದ್ಧವು ನಿಲ್ಲಲಿ ; ಪಾಂಡವರೊಡನೆ ಸಂಧಾನವನ್ನೇರ್ಪಡಿಸು, ದುರ್ಯೋಧನ!

**ನಕುಲಃ ಸಹದೇವಶ್ಚ ಧೃಷ್ಟದ್ಯುಮ್ನಶ್ಚ ಪಾರ್ಷತಃ ।**
**ವಿರಾಟಶ್ಚ ಶಿಖಣ್ಡೀ ಚ ಶೈಶುಪಾಲಿಶ್ಚ ದಂಶಿತಾಃ ॥೭॥**
**ಯಾವನ್ನ ಪ್ರವಿಶನ್ತ್ಯೇತೇ ನಕ್ರಾ ಇವ ಮಹಾರ್ಣವಮ್ ।**
**ಕೃತಾಸ್ತ್ರಾಃ ಕ್ಷಿಪ್ರಮಸ್ಯನ್ತಸ್ತಾವಚ್ಛಾಮ್ಯತು ವೈಶಸಮ್ ॥೮॥**

ಅಸ್ತ್ರವಿದ್ಯೆಯಲ್ಲಿ ನಿಪುಣರಾದ ನಕುಲ-ಸಹದೇವರು, ದ್ರುಪದನ ಮಗನಾದ ಧೃಷ್ಟದ್ಯುಮ್ನ, ವಿರಾಟ, ಶಿಖಂಡಿ, ಶಿಶುಪಾಲನ ಮಗನಾದ ಧೃಷ್ಟಕೇತು–ಇವರು ಕವಚಗಳನ್ನೂ, ಧನುರ್ಬಾಣಗಳನ್ನೂ ಧರಿಸಿದವರಾಗಿ– ಮೊಸಳೆಗಳು ಮಹಾಸಮುದ್ರವನ್ನು ಹೊಗುವಂತೆ – ಸಮರಾಂಗಣವನ್ನು ಪ್ರವೇಶಿಸುವುದಿಲ್ಲವೋ ಅಷ್ಟರೊಳಗಾಗಿ ಸರ್ವನಾಶಕರವಾದ ಯುದ್ಧವು ನಿಲ್ಲಲಿ. ಶ್ರೀಕೃಷ್ಣನ ಮೂಲಕ ಸಂಧಾನವನ್ನು ನಡೆಸು.

**ಯಾವನ್ನ ಸುಕುಮಾರೇಷು ಶರೀರೇಷು ಮಹೀಕ್ಷಿತಾಮ್ ।**
**ಗಾರ್ಧ್ರಪತ್ರಾಃ ಪತನ್ತ್ಯುಗ್ರಾಸ್ತಾವಚ್ಛಾಮ್ಯತು ವೈಶಸಮ್ ॥೯॥**

ಎಂದಿನವರೆಗೆ ರಾಜರ ಸುಕೋಮಲಶರೀರಗಳಲ್ಲಿ ಹದ್ದಿನ ರೆಕ್ಕೆಗಳನ್ನು ಹೊಂದಿರುವ ತೀಕ್ಷ್ಣವಾದ ಬಾಣಗಳು ನಾಟಿಕೊಳ್ಳುವುದಿಲ್ಲವೋ ಅಷ್ಟರೊಳಗಾಗಿ ಸರ್ವನಾಶಕರವಾದ ಯುದ್ಧವು ನಿಲ್ಲಲಿ. ಆದುದರಿಂದ ಶೀಘ್ರವಾಗಿ ಪಾಂಡವರೊಡನೆ ಸಂಧಾನಮಾಡಿಕೋ.

**ಚನ್ದನಾಗುರುದಿಗ್ಧೇಷು ಹಾರನಿಷ್ಕಧರೇಷು ಚ ।**
**ನೋರಃಸು ಯಾವದ್ಯೋಧಾನಾಂ ಮಹೇಷ್ವಾಸೈರ್ಮಹೇಷವಃ ॥೧೦॥**
**ಕೃತಾಸ್ತ್ರೈಃ ಕ್ಷಿಪ್ರಮಸ್ಯದ್ಭಿರ್ದೂರಪಾತಿಭಿರಾಯಸಾಃ ।**
**ಅಭಿಲಕ್ಷ್ಯೈರ್ನಿಪಾತ್ಯನ್ತೇ ತಾವಚ್ಛಾಮ್ಯತು ವೈಶಸಮ್ ॥೧೧॥**

ಮಹಾಧನುರ್ಧರರಾದ, ಅಸ್ತ್ರವಿಶಾರದರಾದ, ಬಲುದೂರದವರೆಗೂ

ಬಾಣಗಳನ್ನು ಬಿಡಬಲ್ಲ, ಗುರಿಯಿಟ್ಟು ಹೊಡೆಯುವುದರಲ್ಲಿ ಕುಶಲರಾದ, ಪಾಂಡವಪಕ್ಷದಲ್ಲಿರುವ ಯೋಧರು ತಮ್ಮ ತೀಕ್ಷ್ಣವಾದ ಬಾಣಗಳಿಂದ ತಮಗೆದುರಾಗಿ ಬರುವ ಬಾಣಗಳನ್ನು ಕ್ಷಣಮಾತ್ರದಲ್ಲಿ ಕತ್ತರಿಸಿ–ಮರುಕ್ಷಣದಲ್ಲಿಯೇ ಉಕ್ಕಿನಿಂದ ಸಿದ್ಧಪಡಿಸಿದ ಬಾಣಗಳಿಂದ, ಚಂದನಾಗುರುಗಳಿಂದ ಲೇಪಿತವಾದ ಮತ್ತು ಪುಷ್ಪಹಾರಗಳನ್ನೂ ಕಂಠಾಭರಣಗಳನ್ನೂ ಧರಿಸಿರುವ ನಿನ್ನ ಕಡೆಯ ಯೋಧರ ಎದೆಗಳನ್ನು ಭೇದಿಸುವುದಿಲ್ಲವೋ–ಅಷ್ಟರೊಳಗಾಗಿ ಸರ್ವನಾಶಕರವಾದ ಯುದ್ಧವು ನಿಲ್ಲಲಿ. ನಿಮ್ಮೆರಡು ಪಂಗಡಗಳ ನಡುವೆ ಸಂಧಾನವೇರ್ಪಡಲಿ.

ನಮ್ಮ ಆಶಯವು ಹೀಗಿದೆ, ದುರ್ಯೋಧನ! ಅದೇನು ನನಸಾಗುವುದೋ ಅಥವಾ ಕನಸಾಗಿಯೇ ಉಳಿಯುವುದೋ ತಿಳಿಯದು. ಆದರೆ ಅದರ ಆಗು-ಹೋಗುಗಳು ಮಾತ್ರ ನಿನ್ನನ್ನೇ ಅವಲಂಬಿಸಿವೆ.

**ಅಭಿವಾದಯಮಾನಂ ತ್ವಾಂ ಶಿರಸಾ ರಾಜಕುಞ್ಜರಃ ।**
**ಪಾಣಿಭ್ಯಾಂ ಪ್ರತಿಗೃಹ್ಣಾತು ಧರ್ಮರಾಜೋ ಯುಧಿಷ್ಠಿರಃ ॥೧೨॥**

ಧೃತರಾಷ್ಟ್ರನ ಅಭಿಮತದಂತೆ ಶ್ರೀಕೃಷ್ಣನೊಡನೆ ಯುಧಿಷ್ಠಿರನ ಸಮೀಪಕ್ಕೆ ಹೋಗಿ ಅವನಿಗೆ ತಲೆಬಾಗಿ ಅಭಿವಾದನಮಾಡುವ ನಿನ್ನನ್ನು ರಾಜಕುಂಜರನಾದ, ಧರ್ಮಾತ್ಮನಾದ ಯುಧಿಷ್ಠಿರನು ತನ್ನೆರಡು ಕೈಗಳಿಂದಲೂ ಮೇಲೆತ್ತಿ ಆಲಿಂಗಿಸಿಕೊಳ್ಳಲಿ.

**ಧ್ವಜಾಙ್ಕುಶಪತಾಕಾಙ್ಕಂ ದಕ್ಷಿಣಂ ತೇ ಸುದಕ್ಷಿಣಃ ।**
**ಸ್ಕನ್ಧೇ ನಿಕ್ಷಿಪತಾಂ ಬಾಹುಂ ಶಾನ್ತಯೇ ಭರತರ್ಷಭ ॥೧೩॥**

ಯಜ್ಞ-ಯಾಗಾದಿಗಳ ಸಮಯದಲ್ಲಿ ಬ್ರಾಹ್ಮಣರಿಗೆ ಯಥೇಚ್ಛವಾಗಿ ದಕ್ಷಿಣೆಯನ್ನು ಕೊಡುವ ಯುಧಿಷ್ಠಿರನು ಧ್ವಜ, ಅಂಕುಶ ಮತ್ತು ಪತಾಕೆಗಳ ಗುರುತಿನಿಂದ ಸುಶೋಭಿತವಾದ ಮತ್ತು ಸುಲಕ್ಷಣವಾದ ತನ್ನ ಬಲತೋಳನ್ನು ಶಾಂತಿಸ್ಥಾಪನೆಯ ಕುರುಹಾಗಿ ನಿನ್ನ ಹೆಗಲಮೇಲಿರಿಸಲಿ.

**ರತ್ನೌಷಧಿಸಮೇತೇನ ರತ್ನಾಙ್ಗುಲಿತಲೇನ ಚ ।**
**ಉಪವಿಷ್ಟಸ್ಯ ಪೃಷ್ಠಂ ತೇ ಪಾಣಿನಾ ಪರಿಮಾರ್ಜತು ॥೧೪॥**

ನೀನವನ ಬಲಪಾರ್ಶ್ವದಲ್ಲಿ ಕುಳಿತಿರುವಾಗ ರತ್ನ ಮತ್ತು ಓಷಧೀಲತೆಗಳಿಂದ ಕೂಡಿದ ಕಂಕಣಯುಕ್ತವಾದ ಮತ್ತು ಕೆಂಪಾದ ಬೆರಳುಗಳಿಂದ ಕೂಡಿದ ತನ್ನ ಬಲಗೈಯಿಂದ ನಿನ್ನ ಪೃಷ್ಠಭಾಗವನ್ನು ಎಂದರೆ ಬೆನ್ನನ್ನು ಮುಟ್ಟಿ ಆದರಪೂರ್ವಕವಾಗಿ ಸವರಲಿ. (ಹೆಗಲಮೇಲೆ ತೋಳುಹಾಕುವುದು ; ಆದರದಿಂದ ಬೆನ್ನುಸವರುವುದು ಇವೆಲ್ಲವೂ ವಿಶ್ವಾಸದ ಲಕ್ಷಣ.)

**ಶಾಲಸ್ಕನ್ಧೋ ಮಹಾಬಾಹುಸ್ತ್ವಾಂ ಸ್ವಜಾನೋ ವೃಕೋದರಃ ।**
**ಸಾಮ್ನಾಭಿವದತಾಂ ಚಾಪಿ ಶಾನ್ತಯೇ ಭರತರ್ಷಭ ॥೧೫॥**

ಭರತಶ್ರೇಷ್ಠನೇ! ಶಾಲವೃಕ್ಷದಂತೆ ವಿಶಾಲವಾದ ಹೆಗಲುಗಳಿಂದ ಕೂಡಿರುವ ಮಹಾಬಾಹುವಾದ ವೃಕೋದರನು ಎರಡು ಪಕ್ಷಗಳಲ್ಲಿಯೂ ಶಾಂತಿಯು ನೆಲೆಸುವ ಸಲುವಾಗಿ ನಿನ್ನ ಬಳಿಗೆ ಬಂದು ಪ್ರೀತಿಯಿಂದ ನಿನ್ನನ್ನಾಲಿಂಗಿಸಿ ಸೌಜನ್ಯಯುಕ್ತವಾದ ಮಾತುಗಳನ್ನಾಡಲಿ.

**ಅರ್ಜುನೇನ ಯಮಾಭ್ಯಾಂ ಚ ತ್ರಿಭಿಸ್ತೈರಭಿವಾದಿತಃ ।**
**ಮೂರ್ಧ್ನಿ ತಾನ್ಸಮುಪಾಘ್ರಾಯ ಪ್ರೇಮ್ಣಾಭಿವದ ಪಾರ್ಥಿವ ॥೧೬॥**

ಭೀಮನು ನಿನ್ನನ್ನು ಆಲಿಂಗಿಸಿಕೊಂಡು ಸೌಜನ್ಯಯುಕ್ತವಾದ ಮಾತುಗಳನ್ನಾಡಿದನಂತರ, ಅರ್ಜುನನು ತನ್ನ ಅನುಜರಾದ ನಕುಲ-ಸಹದೇವರಿಂದೊಡಗೂಡಿ ನಿನ್ನ ಬಳಿಗೆ ಬಂದು ಅಭಿವಾದನಮಾಡುತ್ತಾನೆ. ಆ ಮೂವರೂ ಅನುಕ್ರಮವಾಗಿ ಅಭಿವಾದನಮಾಡುವಾಗ ಅವರ ನೆತ್ತಿಯನ್ನು ಆಘ್ರಾಣಿಸಿ ಅವರೊಡನೆ ಸವಿಮಾತುಗಳನ್ನಾಡು.

**ದೃಷ್ಟ್ವಾ ತ್ವಾಂ ಪಾಣ್ಡವೈರ್ವೀರೈರ್ಭ್ರಾತೃಭಿಃ ಸಹ ಸಂಗತಮ್ ।**
**ಯಾವದಾನನ್ದಜಾಶ್ರೂಣಿ ಪ್ರಮುಞ್ಚನ್ತು ನರಾಧಿಪಾಃ ॥೧೭॥**

ನಿನ್ನ ಅಣ್ಣ-ತಮ್ಮಂದಿರೇ ಆದ ವೀರರಾದ ಪಾಂಡವರೊಡನೆ ನಿನ್ನ ಪುನರ್ಮಿಲನವನ್ನು ನೋಡಿದ ರಾಜರು ಸಂತೋಷಾಧಿಕ್ಯದಿಂದ ಆನಂದಬಾಷ್ಪಗಳನ್ನು ಸುರಿಸಲಿ.

**ಘುಷ್ಯತಾಂ ರಾಜಧಾನೀಷು ಸರ್ವಸಮ್ಪನ್ಮಹೀಕ್ಷಿತಾಮ್ ।**
**ಪೃಥಿವೀ ಭ್ರಾತೃಭಾವೇನ ಭುಜ್ಯತಾಂ ವಿಜ್ವರೋ ಭವ ॥೧೮॥**

ಭೂಮಂಡಲದಲ್ಲಿರುವ ಎಲ್ಲ ರಾಜರ ರಾಜಧಾನಿಗಳಲ್ಲಿಯೂ ಪಾಂಡವ-ಕೌರವರು ಸಂಧಿಮಾಡಿಕೊಂಡು ಪರಸ್ಪರಪ್ರೀತಿಯಿಂದಿರುವ ರೆಂದು ಘೋಷಿಸಲ್ಪಡಲಿ. ಇನ್ನು ಮುಂದೆ ನೀನೂ ಮತ್ತು ಯುಧಿಷ್ಠಿರನೂ ಪರಸ್ಪರ ಭ್ರಾತೃಭಾವದಿಂದಿದ್ದು ಈ ಪೃಥ್ವಿಯನ್ನು ಏಕರೀತಿಯಲ್ಲಿ ಉಪಭುಂಜಿಸಿರಿ. ಹೀಗೆ ಮಾಡಿ ನೀನು ನಿಶ್ಚಿಂತೆಯಿಂದ ಚಿರಕಾಲ ಬಾಳು."

೧೨೬ನೆಯ ಅಧ್ಯಾಯವು ಮುಗಿಯಿತು.

೧೨೭ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ)

## ಶ್ರೀಕೃಷ್ಣನಿಗೆ ದುರ್ಯೋಧನನ ಉತ್ತರ : ದುರ್ಯೋಧನನು ಪಾಂಡವರಿಗೆ ರಾಜ್ಯವನ್ನು ಕೊಡುವುದಿಲ್ಲವೆಂದು ನಿಶ್ಚಯಿಸಿದುದು

ವೈಶಂಪಾಯನರು ಹೇಳುತ್ತಾರೆ :

**ಶ್ರುತ್ವಾ ದುರ್ಯೋಧನೋ ವಾಕ್ಯಮಪ್ರಿಯಂ ಕುರುಸಂಸದಿ ।**
**ಪ್ರತ್ಯುವಾಚ ಮಹಾಬಾಹುಂ ವಾಸುದೇವಂ ಯಶಸ್ವಿನಮ್ ॥೧॥**

ಜನಮೇಜಯ! ಕುರುರಾಜರ ಆ ಮಹಾಸಭೆಯಲ್ಲಿ ಶ್ರೀಕೃಷ್ಣ, ಭೀಷ್ಮ, ದ್ರೋಣರು, ವಿದುರ, ಧೃತರಾಷ್ಟ್ರ–ಇವರುಗಳು ಹೇಳಿದ, ತನಗೆ ಬಹಳ ಅಪ್ರಿಯವಾದ ಮಾತುಗಳನ್ನು ಕೇಳಿದನಂತರ ದುರ್ಯೋಧನನು– ಯಶೋವಂತನಾದ, ಮಹಾಬಾಹುವಾದ ವಾಸುದೇವನನ್ನು ಕುರಿತು ಹೇಳತೊಡಗಿದನು :

"ಕೇಶವ! ನೀನೇ ಈ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಹೇಳುವುದು ಯುಕ್ತವಾಗಿದೆ. ನಾನೇ ದೋಷಿಯೆಂದು ಭಾವಿಸಿ ಕಠಿನೋಕ್ತಿಗಳನ್ನಾಡುತ್ತಾ ವಿಶೇಷವಾಗಿ ನನ್ನನ್ನೇ ನೀನು ನಿಂದಿಸುತ್ತಿರುವೆ. ಮಧುಸೂದನ! ಪಾಂಡವರ ಭಕ್ತಿಯುಕ್ತವಾದ ಸವಿಮಾತುಗಳಿಗೆ ಮಾರುಹೋಗಿರುವ ನೀನು ಕಾರಣವೇ ಇಲ್ಲದೇ ಯಾವಾಗಲೂ ನಮ್ಮನ್ನು ತೆಗಳುತ್ತಿರುವೆ. ಇದರ ಕಾರಣವೇನೆಂದು ಕೇಳಬಹುದೇ? ನಮ್ಮಿಬ್ಬರಲ್ಲೂ (ಕೌರವ-ಪಾಂಡವರಲ್ಲಿ) ಇರುವ ನ್ಯಾಯದ ಯಾವ ಬಲಾಬಲಗಳನ್ನು

ನೋಡಿ ಹೀಗೆ ಮಾತನಾಡುತ್ತಿರುವೆ? ನೀನು, ವಿದುರ, ಧೃತರಾಷ್ಟ್ರ, ಆಚಾರ್ಯ ದ್ರೋಣರು, ಭೀಷ್ಮ–ಈ ಎಲ್ಲರೂ ನನ್ನನ್ನೇ ನಿಂದಿಸುತ್ತಿರುವಿರಿ. ಭೂಮಂಡಲದಲ್ಲಿರುವ ಇಷ್ಟೊಂದು ರಾಜರಲ್ಲಿ ಬೇರಾರನ್ನೂ ನಿಂದಿಸಹೋಗುವುದಿಲ್ಲ. ಆದರೆ ನನ್ನಲ್ಲಿ ಯಾವ ದೋಷವನ್ನೂ ನಾನು ಕಾಣುತ್ತಿಲ್ಲ. ನಾನು ಯಾರಿಗೂ ಯಾವ ವಿಷಯದಲ್ಲಿಯೂ ಅನ್ಯಾಯವನ್ನೇನೂ ಮಾಡಿರುವುದಿಲ್ಲ. ಹೀಗಿದ್ದರೂ ಧೃತರಾಷ್ಟ್ರಸಮೇತರಾದ ನೀವೆಲ್ಲರೂ ನನ್ನನ್ನೇ ದ್ವೇಷಿಸುತ್ತಿರುವಿರಿ. ನೀವು ದೂಷಣೆಮಾಡಲು ಕಾರಣವೇನಿದೆಯೆಂಬುದನ್ನೇ ನಾನು ತಿಳಿದುಕೊಳ್ಳಲು ಅಸಮರ್ಥ ನಾಗಿರುತ್ತೇನೆ. ನಾನೆಷ್ಟೇ ಆಳವಾಗಿ ಯೋಚಿಸಿದರೂ ನನ್ನಲ್ಲಿ ಲೇಶಮಾತ್ರ ಅಪರಾಧವನ್ನೂ ಕಾಣುತ್ತಿಲ್ಲ. ಹೀಗಿರುವಾಗ ನನ್ನನ್ನೇಕೆ ನೀವು ನಿಂದಿಸುವಿರೆಂಬುದು ನನಗೆ ಅರ್ಥವಾಗುತ್ತಿಲ್ಲ. ವಸ್ತುಸ್ಥಿತಿಯನ್ನೇ ನಿನ್ನ ಮುಂದಿಡುತ್ತೇನೆ. ಅನಂತರವಾದರೂ ನನ್ನದೇನಾದರೂ ಅಪರಾಧ ವಿರುವುದೇ? ಎಂಬುದನ್ನು ನೀನೇ ಪರಿಶೀಲಿಸಿ ಹೇಳು.

**ಪ್ರಿಯಾಭ್ಯುಪಗತೇ ದ್ಯೂತೇ ಪಾಣ್ಡವಾ ಮಧುಸೂದನ ।**
**ಜಿತಾಃ ಶಕುನಿನಾ ರಾಜ್ಯಂ ತತ್ರ ಕಿಂ ಮಮ ದುಷ್ಕೃತಮ್ ॥೭॥**

ಮಧುಸೂದನ! ಪಾಂಡವರಿಗೆ ಜೂಜಾಟವು ಬಹುಪ್ರಿಯವಾಗಿತ್ತು. ಆಸಕ್ತಿಯಿಂದಲೇ ಅವರು ನಮ್ಮೊಡನೆ ಪಗಡೆಯಾಟಕ್ಕೆ ಬಂದರು. ಶಕುನಿಯು ನನ್ನ ಪರವಾಗಿ ಅವರೊಡನೆ ಆಟವಾಡಿ ಅವರ ರಾಜ್ಯವನ್ನು ಗೆದ್ದುಕೊಟ್ಟನು. ಇದರಲ್ಲಿ ನನ್ನ ಅಪರಾಧವೇನಿದೆ?

**ಯತ್ಪುನರ್ದ್ರವಿಣಂ ಕಿಂಚಿತ್ತತ್ರಾಜೀಯನ್ತ ಪಾಣ್ಡವಾಃ ।**
**ತೇಭ್ಯ ಏವಾಭ್ಯನುಜ್ಞಾತಂ ತತ್ತದಾ ಮಧುಸೂದನ ॥೮॥**

ಅವರಲ್ಲಿ ಇಷ್ಟೋ-ಅಷ್ಟೋ ಹಣವೂ ಇದ್ದಿತು. ಅವರು ಅದನ್ನೂ ಪಣವಾಗಿಟ್ಟು ಕಳೆದುಕೊಂಡರು. ಆದರೆ ಆಗ ನಾನೇ ಗೆದ್ದ ದ್ರವ್ಯವನ್ನೂ ರಾಜ್ಯದ ಸಹಿತವಾಗಿ ಅವರಿಗೇ ಕೊಟ್ಟುಬಿಟ್ಟೆನು. (ಧೃತರಾಷ್ಟ್ರನು ದ್ರೌಪದಿಗೆ ವರದಾನಮಾಡಿದುದನ್ನು ವಿರೋಧಿಸಲಿಲ್ಲ.) ಇದೂ ನನ್ನ ಅಪರಾಧವೇ?

**ಅಪರಾಧೋ ನ ಚಾಸ್ಮಾಕಂ ಯತ್ತೇ ದ್ಯೂತೇ ಪರಾಜಿತಾಃ ।**
**ಅಜೇಯಾ ಜಯತಾಂ ಶ್ರೇಷ್ಠ ಪಾರ್ಥಾಃ ಪ್ರವ್ರಾಜಿತಾ ವನಮ್ ॥೯॥**

ಪಾಂಡವರು ಪುನಃ ದ್ಯೂತಕ್ಕೆ ಬಂದರು. ಎರಡನೆಯ ಬಾರಿ ದ್ಯೂತ ವಾಡಿದಾಗ–ಪಣವು, ಸೋತವರು ಕಾಡಿಗೆ ಹೋಗುವುದಾಗಿದ್ದಿತು. ಆಗಲೂ ಅವರೇ ಸೋತರು. ಅಜೇಯರಾದ ಪಾರ್ಥರನ್ನು ಅವರೇ ಒಪ್ಪಿದ್ದ ನಿಬಂಧನೆಗೆ ಅನುಸಾರವಾಗಿ ಕಾಡಿಗೆ ಕಳುಹಿಸಬೇಕಾಯಿತು. ಜಯಶಾಲಿಗಳಲ್ಲಿ ಶ್ರೇಷ್ಠನಾದವನೇ! ಇದರಲ್ಲಿಯೂ ನಮ್ಮ ಅಪರಾಧವೇನೂ ಇರುವುದಿಲ್ಲ.

**ಕೇನ ವಾಪ್ಯಪರಾಧೇನ ವಿರುಧ್ಯನ್ತ್ಯರಿಭಿಃ ಸಹ ।**
**ಅಶಕ್ತಾಃ ಪಾಣ್ಡವಾಃ ಕೃಷ್ಣ ಪ್ರಹೃಷ್ಟಾಃ ಪ್ರತ್ಯಮಿತ್ರವತ್ ॥೧೦॥**

ಹನ್ನೆರಡು ವರ್ಷಗಳ ಪರ್ಯಂತವಾಗಿ ವನವಾಸಮಾಡಿ, ಒಂದು ವರ್ಷದ ಅಜ್ಞಾತವಾಸವನ್ನೂ ಮಾಡಿ ಅಶಕ್ತರಾಗಿರುವ ಪಾಂಡವರು ನಮ್ಮ ವಿಷಯದಲ್ಲಿ ಅಮಿತ್ರರಂತೆ ವರ್ತಿಸುತ್ತಾ ನಮ್ಮ ಶತ್ರುಗಳೊಡನೆ ಸೇರಿಕೊಂಡು ಪ್ರಹೃಷ್ಟರಾಗಿ ನಾವು ಮಾಡಿದ ಯಾವ ಅಪರಾಧಕ್ಕಾಗಿ ನಮ್ಮನ್ನು ದ್ವೇಷಿಸುತ್ತಿದ್ದಾರೆ?

(ಜೂಜಾಡಿದೆವು ; ನಿಬಂಧನೆಯಂತೆ ಅವರು ಅರಣ್ಯಕ್ಕೆ ಹೋದರು, ಇದರಲ್ಲಿ ನಮ್ಮದೇನೂ ಅಪರಾಧವಿಲ್ಲ. ನಿಬಂಧನೆಯಂತೆ ಅರಣ್ಯವಾಸ ಮತ್ತು ಅಜ್ಞಾತವಾಸಗಳನ್ನು ಮುಗಿಸಿಕೊಂಡು ಬಂದರು. ಅಲ್ಲವರು ಬಹುವಾಗಿ ಕಷ್ಟಪಟ್ಟಿರಬಹುದು. ಅದು ನಮ್ಮ ಅಪರಾಧವಲ್ಲ. ನಾವೇ ಸೋತಿದ್ದರೂ ನಾವೂ ಆ ಕಷ್ಟವನ್ನು ಅನುಭವಿಸಲೇಬೇಕಾಗಿತ್ತಲ್ಲವೇ? ಅರಣ್ಯಾಜ್ಞಾತವಾಸಗಳನ್ನು ಮುಗಿಸಿದ ಪಾಂಡವರು ವಸ್ತುತಃ ಅಶಕ್ತ ರಾಗಿಯೂ ಇದ್ದಿರಬಹುದು. ಆದರೆ ಅಜ್ಞಾತವಾಸವು ಮುಗಿದೊಡನೆಯೇ ಅವರು ನಮ್ಮ ವಿಷಯದಲ್ಲಿ ಯಾವ ವಿಧವಾದ ಮೈತ್ರೀಭಾವವನ್ನೂ ತೋರಿಸಲಿಲ್ಲ. ನಮ್ಮ ವಿಷಯದಲ್ಲಿ ಅಮಿತ್ರರಂತೆ, ಅವಿಶ್ವಾಸಿಗಳಂತೆ ನಡೆದು ಕೊಂಡರು. ಹೀಗೆ ನಡೆದುಕೊಳ್ಳಲು ಕಾರಣವೇನು? ನಾವೇನು ಅಪರಾಧ

ಮಾಡಿದ್ದೆವು? ನಮ್ಮ ಶತ್ರುಗಳನ್ನು ಅವರು ಮಿತ್ರರನ್ನಾಗಿ ಮಾಡಿಕೊಂಡರು.)

ಇಷ್ಟುಮಾತ್ರವಲ್ಲ. ನಮ್ಮ ಶತ್ರುಗಳನ್ನು ಮಿತ್ರರನ್ನಾಗಿ ಮಾಡಿಕೊಂಡಿದ್ದರಿಂದಲೇ ಪ್ರಬಲರಾಗಿದ್ದೇವೆಂಬ ಭಾವನೆಯೂ ಅವರಲ್ಲುಂಟಾಯಿತು. ನಮ್ಮ ಶತ್ರುಗಳೊಡನೆ ಸೇರಿಕೊಂಡುದಕ್ಕಾಗಿ ಅವರು ನಾಚಲಿಲ್ಲ. ಪ್ರಹೃಷ್ಟರಾದರು. ನಾವು ಮಾಡಿದ ಯಾವ ಅಪರಾಧಕ್ಕಾಗಿ ಅವರು ಹೀಗೆ ಮಾಡಿದರು, ಹೇಳುವೆಯಾ? ಕೃಷ್ಣ!

**ಕಿಮಸ್ಮಾಭಿಃ ಕೃತಂ ತೇಷಾಂ ಕಸ್ಮಿನ್ವಾ ಪುನರಾಗಸಿ ।**
**ಧಾರ್ತರಾಷ್ಟ್ರಾಞ್ಜಿಘಾಂಸನ್ತಿ ಪಾಣ್ಡವಾಃ ಸೃಂಜಯೈಃ ಸಹ ॥೧೧॥**

ನಾವು ಅವರಿಗೆ ಯಾವ ಅಪರಾಧವನ್ನು ಮಾಡಿದೆವು? ನಾವು ಮಾಡಿದ ಯಾವ ತಪ್ಪಿಗಾಗಿ ಅವರು ನಮ್ಮ ಶತ್ರುಗಳಾದ ಸೃಂಜಯರೊಡನೆ ಸೇರಿಕೊಂಡು ಧೃತರಾಷ್ಟ್ರನ ಮಕ್ಕಳನ್ನು ಸಂಹರಿಸಲು ಇಚ್ಛಿಸುತ್ತಿದ್ದಾರೆ? ಇದಕ್ಕಾದರೂ ಕಾರಣವನ್ನು ಹೇಳುವೆಯಾ? ಕೃಷ್ಣ! ಈ ವಿಷಯಗಳೆಲ್ಲವನ್ನೂ ನೀನೇ ಪಕ್ಷಪಾತವಿಲ್ಲದೇ ಕೂಲಂಕಷವಾಗಿ ಪರಿಶೀಲಿಸಿದೆಯಾದರೆ ನನ್ನಲ್ಲಿ ಅಪರಾಧಲೇಶವೂ ಇಲ್ಲವೆಂಬುದು ನಿನಗೇ ಅರಿವಾಗುತ್ತದೆ.

(ಪಾಂಡವರು ನಮ್ಮ ಶತ್ರುಗಳೊಡನೆ ಸೇರಿ ಯುದ್ಧಕ್ಕೆ ಸನ್ನದ್ಧರಾಗುತ್ತಿರುವಾಗ ನಾವೂ ನಮ್ಮ ಕರ್ತವ್ಯವನ್ನು ಮಾಡಲೇಬೇಕಾಗಿದೆ. ಇನ್ನು ಅವರ ಪರಾಕ್ರಮದ ವಿಷಯವಾಗಿ ಶ್ರಮವಹಿಸಿ ವರ್ಣಿಸಿದೆಯಲ್ಲವೇ?)

**ನ ಚಾಪಿ ವಯಮುಗ್ರೇಣ ಕರ್ಮಣಾ ವಚನೇನ ವಾ ।**
**ಪ್ರಭ್ರಷ್ಟಾಃ ಪ್ರಣಮಾಮೇಹ ಭಯಾದಪಿ ಶತಕ್ರತುಮ್ ॥೧೨॥**

ನಮ್ಮ ಎದುರಾಳಿಯು ಸಾಕ್ಷಾತ್ ಶತಕ್ರತುವೇ ಆಗಿದ್ದರೂ ಅವನ ಭಯಂಕರವಾದ, ಅಮಾನುಷವಾದ ಕಾರ್ಯದಿಂದಾಗಲೀ, ಭಯಂಕರವಾದ ಮಾತಿನಿಂದಾಗಲೀ ನಾವು ಭೀತಿಗೊಂಡು ಕ್ಷತ್ರಿಯಧರ್ಮದಿಂದ ಚ್ಯುತರಾಗಿ, ತಲೆತಗ್ಗಿಸಿಕೊಂಡು ಹೋಗುವುದಿಲ್ಲ (ಶರಣಾಗತರಾಗುವುದಿಲ್ಲ). ಉಭಯ ಪಕ್ಷಗಳಲ್ಲಿರುವ ವೀರರ ವಿಷಯವಾಗಿ ಹೇಳುವುದಾದರೆ–ನನ್ನ ಪಕ್ಷದಲ್ಲಿಯೂ

ವೀರಾಧಿವೀರರೇ ಇದ್ದಾರೆ. ಶತ್ರುನಿಬರ್ಹಣನೇ! ಕೃಷ್ಣ! ನಮ್ಮ ಕಡೆಯಲ್ಲಿರುವ ಯೋಧರನ್ನು ಎದುರಿಸಿನಿಂತು ಯುದ್ಧಮಾಡಿ ಗೆಲ್ಲುವೆನೆಂಬ ಉತ್ಸಾಹವಿರುವ ಯಾವನೊಬ್ಬ ಕ್ಷತ್ರಧರ್ಮಾನುವರ್ತಿಯಾದ ವೀರನನ್ನೂ ನಾನಿದುವರೆಗೆ ನೋಡಿರುವುದಿಲ್ಲ. ಕರ್ಣಸಹಿತರಾದ ಭೀಷ್ಮ-ಕೃಪ-ದ್ರೋಣರನ್ನು ಯುದ್ಧದಲ್ಲಿ ಜಯಿಸಲು ದೇವತೆಗಳಿಂದಲೇ ಸಾಧ್ಯವಾಗದೆಂದಮೇಲೆ ಪಾಂಡವರ ವಿಷಯವಾಗಿ ಹೇಳುವುದೇನಿದೆ?

ನಿನ್ನ ಭ್ರಾಂತಿಯಂತೆ ಪಾಂಡವರದೇ ಮೇಲ್ಗೈಯಾಗಿ ನಾವೇ ಯುದ್ಧದಲ್ಲಿ ಪ್ರಾಣತೊರೆಯಬೇಕಾಗುವುದೆಂದೇ ಭಾವಿಸಿದರೂ ಚಿಂತಿಸಬೇಕಾದ ಕಾರಣವಿಲ್ಲ.

**ಸ್ವಧರ್ಮಮನುಪಶ್ಯನ್ತೋ ಯದಿ ಮಾಧವ ಸಂಯುಗೇ ।**
**ಅಸ್ತ್ರೇಣ ನಿಧನಂ ಕಾಲೇ ಪ್ರಾಪ್ಸ್ಯಾಮಃ ಸ್ವರ್ಗ್ಯಮೇವ ತತ್ ॥೧೫॥**

ಮಾಧವ! ಸ್ವಧರ್ಮನಿಷ್ಠೆಯಿಂದಿರುತ್ತಾ ನಾವು ಯುದ್ಧದಲ್ಲಿ ಒಂದು ವೇಳೆ ಅಸ್ತ್ರದಿಂದ ನಿಧನವನ್ನೇ ಹೊಂದುವುದಾದರೆ ಆ ಮರಣದಿಂದ ವೀರ ಸ್ವರ್ಗವನ್ನೇ ಪಡೆಯುತ್ತೇವೆ.

**ಮುಖ್ಯಶ್ಚೈವೈಷ ನೋ ಧರ್ಮಃ ಕ್ಷತ್ರಿಯಾಣಾಂ ಜನಾರ್ದನ ।**
**ಯಚ್ಛಯೀಮಹಿ ಸಂಗ್ರಾಮೇ ಶರತಲ್ಪಗತಾ ವಯಮ್ ॥೧೬॥**

ಒಂದು ವೇಳೆ ನಾವು ಕ್ಷತ್ರಿಯಧರ್ಮೋಚಿತವಾಗಿ ಯುದ್ಧಮಾಡುತ್ತಾ ಅಸ್ತ್ರದ ಆಘಾತದಿಂದ ಬಾಣಗಳನ್ನೇ ಹಾಸಿಗೆಯನ್ನಾಗಿ ಮಾಡಿಕೊಂಡು ಮಲಗಿ ಪ್ರಾಣಬಿಡುವುದಾದರೆ–ಅದು ಕ್ಷತ್ರಿಯರ ಮುಖ್ಯಧರ್ಮವೇ ಆಗುತ್ತದೆ. ಇದೇ ಕ್ಷತ್ರಿಯರಾದ ನಮಗಿರುವ ಮುಖ್ಯಧರ್ಮ, ಜನಾರ್ದನ!

**ತೇ ವಯಂ ವೀರಶಯನಂ ಪ್ರಾಪ್ಸ್ಯಾಮೋ ಯದಿ ಸಂಯುಗೇ ।**
**ಅಪ್ರಣಮ್ಯೈವ ಶತ್ರೂಣಾಂ ನ ನಸ್ತಪ್ಸ್ಯನ್ತಿ ಮಾಧವ ॥೧೭॥**

ನಾವು ನಮ್ಮ ಶತ್ರುಗಳಿಗೆ ತಲೆಬಾಗಿಸದೇ (ಶರಣಾಗತರಾಗದೆ) ಯುದ್ಧದಲ್ಲಿ ವೀರೋಚಿತವಾದ ಶರತಲ್ಪದಲ್ಲಿ ಅಸುವನ್ನು ತೊರೆದು ಮಲಗಿದ್ದೇ ಆದರೆ ನಮ್ಮ ಬಂಧು-ಮಿತ್ರರು ಖಂಡಿತವಾಗಿಯೂ ನಮಗಾಗಿ ಪರಿತಪಿಸುವು

ದಿಲ್ಲ. (ವೀರಸ್ವರ್ಗವನ್ನು ಪಡೆದುದಕ್ಕಾಗಿ ಸಂತೋಷಪಡುತ್ತಾರೆ. ನನ್ನ ತಂದೆ-ತಾಯಿಗಳೂ ನಾವು ವೀರಸ್ವರ್ಗವನ್ನು ಪಡೆದುದಕ್ಕೆ ಸಂತೋಷಿಸುವರೇ ಹೊರತು ದುಃಖಿಸಲಾರರು.)

**ಕಶ್ಚ ಜಾತು ಕುಲೇ ಜಾತಃ ಕ್ಷತ್ರಧರ್ಮೇಣ ವರ್ತಯನ್ ।**
**ಭಯಾದ್ವೃತ್ತಿಂ ಸಮೀಕ್ಷ್ಯೈವಂ ಪ್ರಣಮೇದಿಹ ಕರ್ಹಿಚಿತ್ ॥೧೮॥**

ಸತ್ಕುಲಪ್ರಸೂತನಾದ, ಕ್ಷತ್ರಿಯಧರ್ಮಾನುಸಾರವಾಗಿ ನಡೆಯುತ್ತಿರುವ ಯಾವ ಕ್ಷತ್ರಿಯನು–ತನ್ನ ಕ್ಷತ್ರಿಯೋಚಿತವಾದ ವೃತ್ತಿಯನ್ನು ಚೆನ್ನಾಗಿ ಸಮೀಕ್ಷಿಸಿಯೂ–ನೀನು ಉಪದೇಶಿಸುತ್ತಿರುವ ರೀತಿಯಲ್ಲಿ ಶತ್ರುವಿನ ಮುಂದೆ ತಲೆತಗ್ಗಿಸಿ ನಿಲ್ಲುತ್ತಾನೆ?

**ಉದ್ಯಚ್ಛೇದೇವ ನ ನಮೇದುದ್ಯಮೋ ಹ್ಯೇವ ಪೌರುಷಮ್।**
**ಅಪ್ಯಪರ್ವಣಿ ಭಜ್ಯೇತ ನ ನಮೇದಿಹ ಕರ್ಹಿಚಿತ್ ॥೧೯॥**

ವಿಜಯಕ್ಕಾಗಿ ಪ್ರಯತ್ನಿಸುತ್ತಲೇ ಇರಬೇಕು. ಶರಣಾಗತನೆಂದಿಗೂ ಆಗಬಾರದು. ಸರ್ವಕಾಲದಲ್ಲಿಯೂ ವಿಜಯದ ಸಿದ್ಧಿಗಾಗಿ ಪ್ರಯತ್ನಿಸುವುದೇ ಪೌರುಷ. ವೀರನಾದವನು ಅಕಾಲದಲ್ಲಿ ಮುರಿಯಲಾಗದ ಸ್ಥಳದಲ್ಲಿ ಮುರಿದುಹೋಗಬಹುದು (ಸತ್ತುಹೋಗಬಹುದು). ಆದರೆ ಶತ್ರುವಿನ ಮುಂದೆ ತಲೆಯನ್ನು ಮಾತ್ರ ಯಾವಾಗಲೂ ತಗ್ಗಿಸಬಾರದು. ಕಬ್ಬು-ಬಿದಿರು ಇವುಗಳಿಗೆ ಪರ್ವಗಳು ಅಥವಾ ಗಿಣ್ಣುಗಳಿರುತ್ತವೆ. ಇವುಗಳು ಸಾಮಾನ್ಯವಾಗಿ ಬಗ್ಗಿರುವುದಿಲ್ಲ. ಬಗ್ಗಿಸಲೂ ಸಾಧ್ಯವಾಗುವುದಿಲ್ಲ. ಬಲಾತ್ಕಾರವಾಗಿ ಬಗ್ಗಿಸಲು ಹೋದರೆ ಗಿಣ್ಣುಗಳು ಇಲ್ಲದಿರುವ ಸ್ಥಳದಲ್ಲಾದರೂ ಮುರಿದು ಹೋಗುತ್ತವೆ. ಆದರೆ ಅವೆಂದಿಗೂ ಡೊಂಕಾಗಿ ನಿಲ್ಲುವುದಿಲ್ಲ. ಹಾಗೆಯೇ ವೀರಕ್ಷತ್ರಿಯನು ಸಂಗ್ರಾಮದಲ್ಲಿ ಪ್ರಾಣತೊರೆಯುವನೇ ಹೊರತು ಎಂದಿಗೂ ಶತ್ರುವಿಗೆ ತಲೆಬಾಗುವುದಿಲ್ಲ.

ಕೃಷ್ಣ! ಆತ್ಮಹಿತವನ್ನಪೇಕ್ಷಿಸುವ ವೀರಕ್ಷತ್ರಿಯನು–ಮತಂಗಮಹರ್ಷಿಯು ಹೇಳಿದ ಈ ಮಾತನ್ನು ಗ್ರಹಿಸುತ್ತಾನೆ. ಮತಂಗಮಹರ್ಷಿಯ ಈ ಉಕ್ತಿಯನ್ನೇ ನಾನೂ ಅನುಸರಿಸುತ್ತೇನೆ. ಇದೇ ನನಗೆ ಗ್ರಾಹ್ಯವಾಗಿದೆ. ಆದರೆ ನಮ್ಮಂತಹವರು ಯಾರಿಗೂ ನಮಸ್ಕಾರವನ್ನೇ ಮಾಡುವುದಿಲ್ಲವೆಂದಲ್ಲ.

ನಮ್ಮಂತಹವರು ಯಾವಾಗಲೂ ಧರ್ಮಪುರುಷನಿಗೆ ಮತ್ತು ಬ್ರಾಹ್ಮಣರಿಗೆ ನಮಸ್ಕಾರಮಾಡುತ್ತಾರೆ. ವೀರನಾದವನು ಬ್ರಾಹ್ಮಣರಿಗೆ ಮತ್ತು ಧರ್ಮಕ್ಕೆ ಮಾತ್ರವೇ ನಮಸ್ಕಾರಮಾಡಬೇಕೆಂಬುದು ನನ್ನ ನಿಶ್ಚಿತವಾದ ಅಭಿಪ್ರಾಯವಾಗಿದೆ. ಬೇರೆಯವರನ್ನು ಗಣನೆಗೇ ತೆಗೆದುಕೊಳ್ಳಬಾರದು. ಯಾವಜ್ಜೀವವೂ ಹೀಗೆಯೇ ನಡೆಯಬೇಕು. ಇದೇ ಕ್ಷತ್ರಧರ್ಮ. ನನ್ನ ಮತವಾದರೂ ಇದೇ ಆಗಿರುವುದು. ನಾನು ಸದಾಕಾಲದಲ್ಲಿಯೂ ಈ ಧರ್ಮವನ್ನೇ ಅನುಷ್ಠಾನಮಾಡುತ್ತೇನೆ.

ಕೇಶವ! ಇನ್ನು ಪಾಂಡವರಿಗೆ ಅರ್ಧರಾಜ್ಯವನ್ನು ಕೊಡುವ ವಿಷಯವಾಗಿ ಹೇಳುತ್ತೇನೆ :

**ರಾಜ್ಯಾಂಶಶ್ಚಾಭ್ಯನುಜ್ಞಾತೋ ಯೋ ಮೇ ಪಿತ್ರಾ ಪುರಾಭವತ್ ।**
**ನ ಸ ಲಭ್ಯಃ ಪುನರ್ಜಾತು ಮಯಿ ಜೀವತಿ ಕೇಶವ ॥೨೨॥**

ಕೇಶವ! ಯಾವ ರಾಜ್ಯಾಂಶವನ್ನು (ಅರ್ಧರಾಜ್ಯವನ್ನು) ಹಿಂದೆ ನಮ್ಮ ತಂದೆಯು ಅವರಿಗೆ ಕೊಟ್ಟಿದ್ದನೋ–ಅದು ಅವರಿಗೆ ಪುನಃ ನಾನು ಬದುಕಿರುವವರೆಗೂ ಲಭ್ಯವಾಗುವುದಿಲ್ಲ.

ಪಾಂಡುವಿನ ಮರಣಾನಂತರ ಎಂದಿನವರೆಗೆ ಧೃತರಾಷ್ಟ್ರನು ರಾಜ್ಯಾಧಿಕಾರವನ್ನು ನಡೆಸುತ್ತಿದ್ದನೋ ಅಂದಿನವರೆಗೆ ನಾವೂ ಮತ್ತು ಪಾಂಡವರೂ ಶಸ್ತ್ರಾಸ್ತ್ರಗಳನ್ನು ಬದಿಗಿಟ್ಟು ಕಾಲ-ಕಾಲಕ್ಕೆ ಸಿದ್ಧವಾಗಿರುತ್ತಿದ್ದ ಅನ್ನವನ್ನು ಉಪಭುಂಜಿಸುತ್ತಾ ಇದ್ದುಬಿಟ್ಟೆವು. ನಾನು ಪರಾಧೀನನಾಗಿದ್ದುದರಿಂದ (ನನ್ನ ತಂದೆಯ ಅಧೀನದಲ್ಲಿದ್ದುದರಿಂದ) ನನ್ನ ರಾಜ್ಯವನ್ನು ಎಂದರೆ ರಾಜ್ಯದ ಭಾಗವನ್ನು ಹಿಂದೆ ನಮ್ಮ ತಂದೆಯು ಅವರಿಗೆ ಕೊಟ್ಟುಬಿಟ್ಟನು. ಆಗಲೇ ಅದನ್ನು ಕೊಡಬಾರದಾಗಿತ್ತು. ನಾನಿನ್ನೂ ಆಗ ಬಾಲನಾಗಿದ್ದುದರಿಂದ ನಮ್ಮ ತಂದೆಯು ಭಯದಿಂದಲೋ-ಅಜ್ಞಾನ ದಿಂದಲೋ ಅರ್ಧರಾಜ್ಯವನ್ನು ಕೊಟ್ಟುಬಿಟ್ಟನು. ಆಗಲೇ ಕೊಡಬಾರದಾಗಿತ್ತೆಂದಮೇಲೆ ಈಗ ಪುನಃ ಕೊಡುವ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಕಾರಣಾಂತರದಿಂದ ನಮ್ಮ ಕೈತಪ್ಪಿ ಹೋಗಿದ್ದ ಅರ್ಧರಾಜ್ಯವು ಅದೃಷ್ಟವಶದಿಂದ ನಮ್ಮ ಕೈವಶವಾದ ಮೇಲೆ ಪುನಃ ಕೊಡಲು ಸಾಧ್ಯವಾಗುವುದೇ? ಆ ಅರ್ಧರಾಜ್ಯವನ್ನು ಪುನಃ ಪಾಂಡುನಂದನರು ಖಂಡಿತವಾಗಿಯೂ ನನ್ನಿಂದ ಪಡೆದುಕೊಳ್ಳಲಾರರು.

ಕೇಶವ! ಈ ವಿಷಯವನ್ನು ಇನ್ನೂ ಸ್ಪಷ್ಟವಾದ ಮಾತುಗಳಲ್ಲಿ ಹೇಳುವೆನು ; ಕೇಳು.

**ಧ್ರಿಯಮಾಣೇ ಮಹಾಬಾಹೌ ಮಯಿ ಸಮ್ಪ್ರತಿ ಕೇಶವ ।**
**ಯಾವದ್ಧಿ ತೀಕ್ಷ್ಣಯಾ ಸೂಚ್ಯಾ ವಿಧ್ಯೇದಗ್ರೇಣ ಕೇಶವ ।**
**ತಾವದಪ್ಯಪರಿತ್ಯಾಜ್ಯಂ ಭೂಮೇರ್ನಃ ಪಾಣ್ಡವಾನ್ಪ್ರತಿ ॥೨೫॥**

ಕೇಶವ! ಮಹಾಬಾಹುವಾದ ನಾನು ಬದುಕಿರುವವರೆಗೆ ಸೂಜಿಯ ಅಗ್ರಭಾಗದಿಂದ ಬೇರ್ಪಡಿಸಬಹುದಾದಷ್ಟು ಭೂಭಾಗವನ್ನೂ (ಸೂಜಿಯ ಮೊನೆಯಷ್ಟು ಪ್ರಮಾಣದ ನೆಲವನ್ನೂ) ಪಾಂಡವರ ಸಲುವಾಗಿ ನಾವು ಪರಿತ್ಯಜಿಸುವುದಿಲ್ಲ. ತಿಳಿಯಿತೇ? ಕೃಷ್ಣ!”

ನಿ೨೭ನೆಯ ಅಧ್ಯಾಯವು ಮುಗಿಯಿತು.

ನಿ೨೮ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ.)

## ಶ್ರೀಕೃಷ್ಣನು ದುರ್ಯೋಧನನನ್ನು ನಿಂದಿಸಿದುದು : ಅಸಹನಶೀಲನಾದ ದುರ್ಯೋಧನನ ಸಭಾತ್ಯಾಗ : ಶ್ರೀಕೃಷ್ಣನನ್ನು ಬಂಧಿಸುವ ಯೋಜನೆ

ವೈಶಂಪಾಯನರು ಹೇಳುತ್ತಾರೆ :

**ತತಃ ಪ್ರಶಮ್ಯ ದಾಶಾರ್ಹಃ ಕ್ರೋಧಪರ್ಯಾಕುಲೇಕ್ಷಣಃ ।**
**ದುರ್ಯೋಧನಮಿದಂ ವಾಕ್ಯಮಬ್ರವೀತ್ಕುರುಸಂಸದಿ ॥೧॥**

ಜನಮೇಜಯ! ದುರ್ಯೋಧನನು ಹೇಳಿದ ಮಾತುಗಳನ್ನು ಕೇಳಿದೊಡನೆಯೇ ಶ್ರೀಕೃಷ್ಣನು ಕೋಪದಿಂದ ಕಿಡಿ-ಕಿಡಿಯಾದನು. ಕಣ್ಣುಗಳು ಕೆಂಪಾದುವು. ಆದರೂ ಸ್ವಲ್ಪ ವಿಚಾರಮಾಡಿ ಶಾಂತನಾಗಿಯೇ ಕೌರವರ ಸಭೆಯಲ್ಲಿದ್ದ ದುರ್ಯೋಧನನನ್ನು ಕುರಿತು ಪುನಃ ಹೇಳಿದನು :

“ದುರ್ಯೋಧನ! ನಿನ್ನ ಆಶಯವು ಪೂರ್ಣವಾಗುತ್ತದೆ.

**ಲಪ್ಸ್ಯಸೇ ವೀರಶಯನಂ ಕಾಮಮೇತದವಾಪ್ಸ್ಯಸಿ ।**
**ಸ್ಥಿರೋ ಭವ ಸಹಾಮಾತ್ಯೋ ವಿಮರ್ದೋ ಭವಿತಾ ಮಹಾನ್ ॥೨॥**

ನೀನು ರಣಾಂಗಣದಲ್ಲಿ ವೀರಶಯ್ಯೆಯನ್ನೇ ಪಡೆಯುವೆ. ನಿನ್ನ ಈ ಕಾಮನೆಯು ಖಂಡಿತವಾಗಿಯೂ ಪೂರ್ಣವಾಗುವುದು. ಅಮಾತ್ಯಸಹಿತನಾದ ನೀನು ಸುಸ್ಥಿರನಾಗಿರು. ಮಹಾಯುದ್ಧವೊಂದು ಮುಂದೆ ನಡೆಯಲಿದೆ.

ಮೂಢ! ಪಾಂಡವರ ವಿಷಯದಲ್ಲಿ ನಾನೇನೂ ಅಪರಾಧವನ್ನೇ ಮಾಡಿಲ್ಲವೆಂದು ಹೇಳುತ್ತಿರುವೆಯಲ್ಲವೇ? ನೀನವರ ವಿಷಯದಲ್ಲಿ ಎಷ್ಟೊಂದು ಅಪರಾಧಗಳನ್ನೆಸಗಿರುವೆಯೆಂಬುದನ್ನು ಹೇಳಿಬಿಡುತ್ತೇನೆ. ಇಲ್ಲಿ ನೆರೆದಿರುವ ರಾಜರೇ! ನೀವೆಲ್ಲರೂ ನಾನು ಹೇಳಲಿರುವುದನ್ನು ಆಲಿಸಿರಿ.

ದುರ್ಯೋಧನ! ಮಹಾತ್ಮರಾದ ಪಾಂಡವರಲ್ಲಿದ್ದ ಅಪಾರವಾದ ಐಶ್ವರ್ಯವನ್ನು ಕಂಡು ಪರಿತಪಿಸುತ್ತಿದ್ದ ನಿನ್ನಿಂದ ಮತ್ತು ಸೌಬಲನಿಂದ ದುರ್ದ್ಯೂತದ ಯೋಜನೆಯೊಂದು ಸಿದ್ಧವಾಯಿತು. ನೀವು ಆ ದುರ್ದ್ಯೂತದ ಯೋಜನೆಯನ್ನು ಸಿದ್ಧಪಡಿಸಿ ಸಾಧುಸಮ್ಮತರಾದ, ಶ್ರೀಮಂತರಾದ, ನಿಷ್ಕಪಟಿಗಳಾದ ಪಾಂಡವರ ವಿಷಯದಲ್ಲಿ ವಂಚನೆಯಿಂದ ಅನ್ಯಾಯವನ್ನು ಆಚರಿಸಿದುದು ಅಪರಾಧವಲ್ಲವೇ?

**ಅಕ್ಷದ್ಯೂತಂ ಮಹಾಪ್ರಾಜ್ಞ ಸತಾಂ ಮತಿವಿನಾಶನಮ್ ।**
**ಅಸತಾಂ ತತ್ರ ಜಾಯನ್ತೇ ಭೇದಾಶ್ಚ ವ್ಯಸನಾನಿ ಚ ॥೬॥**

ಮಹಾಪ್ರಾಜ್ಞನೇ! ಪಗಡೆಯಾಟವು ಸಾಮಾನ್ಯವಾಗಿಯೇ ಸತ್ಪುರುಷರ ಬುದ್ಧಿಯನ್ನೂ ಕೆಡಿಸಿಬಿಡುತ್ತದೆ. ಅಸತ್ಪುರುಷರೇನಾದರೂ ಆ ಪಗಡೆಯಾಟದಲ್ಲಿ ಸೇರಿಕೊಂಡರೆಂದರೆ ಕಲಹ ಮತ್ತು ಅನೇಕವಿಧವಾದ ವ್ಯಸನಗಳು ತಾವೇ ತಾವಾಗಿ ಹುಟ್ಟಿಕೊಳ್ಳುತ್ತವೆ.

ಪಾಂಡವರು ಸದಾಚಾರಿಗಳೆಂಬುದನ್ನು ಮನಸ್ಸಿಗೆ ತಂದುಕೊಳ್ಳದೇ ಅವರು ಅಸತ್ಪುರುಷರೊಡನೆ ಪಗಡೆಯಾಡುವಂತೆ ಮಾಡಿ ಆ ದ್ಯೂತದ ಮೂಲಕವಾಗಿ ನೀನಿಂದು ಘೋರವಾದ ಸಂಕಟವನ್ನು ತಂದೊಡ್ಡಿರುವೆ.

ನಿನ್ನನ್ನು ಬಿಟ್ಟರೆ ಯಾವ ಅಧಮಾಧಮನು ತನ್ನ ದೊಡ್ಡಣ್ಣನ ಪತ್ನಿಯನ್ನು ಸಭೆಗೆ ಸೆಳೆದುತಂದು ನೀನು ಅವಮಾನಿಸಿದಂತೆ ಅವಮಾನಿಸುವನು? ನಿನ್ನನ್ನು ಬಿಟ್ಟರೆ ಯಾವ ಅಧಮನು ತಾನೇ ನೀನವಳೊಂದಿಗೆ ಹೇಳಿದ ಹೇಯ

ವಾದ ಮಾತುಗಳನ್ನು ಹೇಳಿಯಾನು? ಅಂದು ನೀನು ಅವಳೊಂದಿಗೆ ಹೇಳಿದ ಮಾತುಗಳು ಮತ್ತೊಮ್ಮೆ ಉಚ್ಚರಿಸಲೂ ಅರ್ಹವಾದುವುಗಳಲ್ಲ. ಸತ್ಕುಲ ಪ್ರಸೂತಳಾದ, ಶೀಲಸಂಪನ್ನಳಾದ, ಮಿಗಿಲಾಗಿ ಪಾಂಡವರ ಪಟ್ಟಮಹಿಷಿಯಾದ ದ್ರೌಪದಿಯು ನಿನ್ನಿಂದ ಅಷ್ಟು ಹೇಯವಾದ ರೀತಿಯಲ್ಲಿ ಅವಮಾನಿತಳಾದಳು. ಶತ್ರುಗಳನ್ನು ಸಂತಾಪಗೊಳಿಸುವ ಸಾಮರ್ಥ್ಯವಿದ್ದ ಪಾಂಡವರು ದುರ್ದ್ಯೂತದ ನಿಬಂಧನೆಗೆ ಕಟ್ಟುಬಿದ್ದು ನತಶಿರರಾಗಿ ಕಾಡಿಗೆ ಹೊರಟಾಗ ಈ ದುಃಶಾಸನನು ಎಂತೆಂತಹ ಕರ್ಣಕಠೋರವಾದ ಮಾತುಗಳನ್ನಾಡಿದನೆಂಬುದು ಇಲ್ಲಿ ಉಪಸ್ಥಿತರಾಗಿರುವ ಕೌರವರೆಲ್ಲರಿಗೂ ತಿಳಿದ ವಿಷಯವೇ ಆಗಿದೆ. ಸದಾ ಧರ್ಮದಲ್ಲಿಯೇ ನಿರತರಾಗಿರುವ, ಲೋಭರಹಿತರಾದ, ಸದಾಚಾರಸಂಪನ್ನರಾದ ತನ್ನ ಬಂಧುಗಳ ವಿಷಯದಲ್ಲಿ ಯಾವ ಸತ್ಪುರುಷನು ತಾನೇ ಇಷ್ಟು ಅಯೋಗ್ಯ ರೀತಿಯಿಂದ ನಡೆದುಕೊಳ್ಳುತ್ತಾನೆ, ದುರ್ಯೋಧನ! ನೀನು, ಕರ್ಣ, ದುಃಶಾಸನ– ಈ ಮೂವರೂ–ನಿರ್ದಯರಾದ, ಅನಾರ್ಯರಾದ ಮನುಷ್ಯರಾಡುವ ರೀತಿಯಲ್ಲಿ–ಅನೇಕ ಕುತ್ಸಿತವಾದ ಮಾತುಗಳನ್ನು ಪಾಂಡವರ ವಿಷಯದಲ್ಲಾಡಿರುವಿರಿ. ಕೇವಲ ಒಂದು ಬಾರಿ ಹೇಳಿ ಸುಮ್ಮನಾಗಲಿಲ್ಲ. ಹಲವಾರುಬಾರಿ ಅನೇಕವಿಧವಾಗಿ ಹೇಳಿ ಕುಚೋದ್ಯಮಾಡಿದಿರಿ. ಪಾಂಡವರಿನ್ನೂ ಎಳೆಯರಾಗಿದ್ದಾಗ ಅವರ ವಿಷಯದಲ್ಲಿ ನೀವು ಹೇಗೆ ನಡೆದುಕೊಂಡಿರೆಂಬುದನ್ನೂ ಜ್ಞಾಪಿಸುತ್ತೇನೆ. ಕೇಳು, ದುರ್ಯೋಧನ! ಎಳೆಯರಾಗಿದ್ದ ಪಾಂಡವರನ್ನು ತಾಯಿಯಾದ ಕುಂತಿಯೊಡನೆ ವ್ಯಾಜಾಂತರದಿಂದ ವಾರಣಾವತಕ್ಕಟ್ಟಿದಿರಿ. ತಾಯಿಯೊಡನೆಯೇ ಅವರನ್ನು ನೀನು ಸುಟ್ಟುಹಾಕಲೂ ಬಹುವಾಗಿ ಯತ್ನಿಸಿದೆ. ಆದರೆ ಅದೃಷ್ಟವಿಶೇಷದಿಂದ ನಿನ್ನ ಪ್ರಯತ್ನವು ಸಫಲವಾಗಲಿಲ್ಲ. ನೀನೊಡ್ಡಿದ್ದ ಬಲೆಯಿಂದ ತಪ್ಪಿಸಿಕೊಂಡ ಪಾಂಡವರು ತಾಯಿಯೊಡನೆ ಬಹಳ ಕಾಲ ವೇಷಮರೆಸಿಕೊಂಡೇ ಏಕಚಕ್ರನಗರಿಯಲ್ಲಿ ಬ್ರಾಹ್ಮಣನೊಬ್ಬನ ಮನೆಯಲ್ಲಿ ವಾಸವಾಗಿದ್ದರು.

ಅವರಿನ್ನೂ ಚಿಕ್ಕ ಬಾಲಕರಾಗಿ ನಿನ್ನೊಡನೆ ಆಟ-ಪಾಟಗಳನ್ನಾಡು ತ್ತಿದ್ದಾಗಲೇ ಅವರನ್ನು ನೀನು ಸಂಹರಿಸಬೇಕೆಂದು ಬಹುವಾಗಿ ಪ್ರಯತ್ನಿಸಿದೆ. ವಿಷಪ್ರಯೋಗಮಾಡಿದೆ. ಭೀಮಸೇನನನ್ನು ವಿಷಸರ್ಪಗಳಿಂದ ಕಚ್ಚಿಸಿದೆ.

ಅವರ ವಿನಾಶಕ್ಕಾಗಿ ಸರ್ವೋಪಾಯಗಳನ್ನೂ ಮಾಡಿದೆ. ಆದರೆ ನಿನ್ನ ಪ್ರಯತ್ನಗಳಾವುವೂ ಫಲಿಸಲಿಲ್ಲ.

ಇದೇ ರೀತಿಯಲ್ಲಿ ಪಾಂಡವರ ವಿಷಯದಲ್ಲಿ ನಿನ್ನ ಬುದ್ಧಿಯು ಹಿಂದೆಯೂ ವಂಚನೆಯಿಂದಲೇ ಕೂಡಿದ್ದಿತು. ಈಗ ಮಾಡುತ್ತಿರುವ ವಂಚನೆಯು ನೂತನವಾದುದೇನೂ ಅಲ್ಲ. ಹೀಗಿರುವಾಗ ಅವರ ವಿಷಯದಲ್ಲಿ ಯಾವ ಅಪರಾಧವನ್ನೂ ಮಾಡಿಲ್ಲವೆಂದು ಹೇಳಿಕೊಳ್ಳುತ್ತಿರುವೆ. ಮಹಾತ್ಮರಾದ ಪಾಂಡವರ ವಿಷಯದಲ್ಲಿ ನೀನು ಅಪರಾಧವನ್ನೇ ಮಾಡಿಲ್ಲವೆಂಬುದು ಹೇಗೆತಾನೇ ಸಮಂಜಸವಾದೀತು? ದುರ್ಯೋಧನ! ನೀನು ಹೇಳುತ್ತಿರುವುದು ಸತ್ಯಕ್ಕೆ ದೂರವಾದುದಲ್ಲವೇ?

ಈಗವರು ಯಾಚಿಸುತ್ತಿರುವ ಪಿತ್ರಾರ್ಜಿತವಾದ ಅರ್ಧರಾಜ್ಯವನ್ನು ಕೊಡದಿದ್ದರೆ–ಐಶ್ವರ್ಯದಿಂದ ಭ್ರಷ್ಟನಾಗಿ, ನಿನ್ನ ಇಚ್ಛೆಯಂತೆಯೇ ರಣಾಂಗಣದಲ್ಲಿ ಶರತಲ್ಪದ ಮೇಲೆ ಪವಡಿಸಿದನಂತರವಾದರೂ ಪಾಪಿಷ್ಠನಾದ ನೀನು ಕೊಟ್ಟೇಕೊಡಬೇಕಾಗುತ್ತದೆ. (ಆಗ ಪಾಂಡವರೇ ಅಖಂಡಸಾಮ್ರಾಜ್ಯವನ್ನೂ ಪಡೆದುಕೊಳ್ಳುತ್ತಾರೆ. ಅವರು ಯಾಚಿಸಬೇಕಾದುದೂ ಇಲ್ಲ ; ನೀನು ಕೊಡಬೇಕಾದುದೂ ಇಲ್ಲ.) ಕ್ರೂರಕರ್ಮಿಯಾದ ಮನುಷ್ಯನಂತೆ ಪಾಂಡವರ ವಿಷಯದಲ್ಲಿ ನೀನು ಅನೇಕವಾದ ಅಕಾರ್ಯಗಳನ್ನು ಮಾಡಿರುವೆ. ಅವರಿಗೆ ವಂಚನೆಮಾಡಿರುವೆ. ಅವರ ವಿಷಯದಲ್ಲಿ ಅನಾರ್ಯನಂತೆ, ಅನಾಗರಿಕನಂತೆ ವರ್ತಿಸಿರುವೆ. ಇಷ್ಟು ಮಾಡಿಯೂ ಯಾವ ವಿಷಯವೂ ತಿಳಿಯದವನಂತೆ ವಾದಮಾಡುವೆ. ಪಾಂಡವರೊಡನೆ ಸಂಧಾನಮಾಡಿಕೊಳ್ಳುವಂತೆ ನಿನ್ನ ತಾಯಿ-ತಂದೆಗಳೂ ಹೇಳಿದ್ದಾಯಿತು ; ದ್ರೋಣ-ಭೀಷ್ಮರೂ ಹೇಳಿದರು ; ವಿದುರನೂ ಹೇಳಿದನು. ಒಮ್ಮೆಯಲ್ಲ ; ಹಲವು ಬಾರಿ ಸಂಧಿಮಾಡಿಕೊಳ್ಳುವಂತೆ ಹೇಳಿದ್ದಾರೆ. ಆದರೂ ನೀನು ಪಾಂಡವರೊಡನೆ ಸಂಧಿಮಾಡಿಕೊಳ್ಳಲು ಇಚ್ಛಿಸುತ್ತಿಲ್ಲ.

**ಶಮೇ ಹಿ ಸುಮಹಾಲ್ಲಾಭಸ್ತವ ಪಾರ್ಥಸ್ಯ ಚೋಭಯೋಃ ।**
**ನ ಚ ರೋಚಯಸೇ ರಾಜನ್ಕಿಮನ್ಯದ್ಬುದ್ಧಿಲಾಘವಾತ್ ॥೨೦॥**

ಸಂಧಿಮಾಡಿಕೊಳ್ಳುವುದರಿಂದ ನಿನಗೂ ಲಾಭವಿದೆ ; ಯುಧಿಷ್ಠಿರನಿಗೂ ಲಾಭವಿದೆ. ನಿಮ್ಮಿಬ್ಬರಿಗೂ ಇದರಿಂದ ಶ್ರೇಯಸ್ಸುಂಟಾಗುತ್ತದೆ. ಆದರೆ ಸಂಧಿಮಾಡಿಕೊಳ್ಳುವುದನ್ನು ನೀನು ಪೂರ್ಣವಾಗಿ ಇಚ್ಛಿಸುತ್ತಿಲ್ಲ. ಇದಕ್ಕೆ ಕಾರಣ – ನಿನ್ನ ಬುದ್ಧಿಮಾಂದ್ಯವಲ್ಲದೇ ಮತ್ತೇನು ತಾನೇ ಇದ್ದೀತು? ದುರ್ಯೋಧನ! ಸುಹೃದರ ಮಾತನ್ನು ಉಲ್ಲಂಘಿಸುವುದರಿಂದ ನಿನಗೆ ಖಂಡಿತವಾಗಿಯೂ ಸುಖವಿಲ್ಲ. ನೀನು ಯಾವಾಗಲೂ ಅಯಶಸ್ಕರವಾದ ಅಧರ್ಮಕಾರ್ಯಗಳನ್ನೇ ಮಾಡುವೆ. ಹೀಗೆ ಮಾಡುವುದು ನಿನ್ನ ಸ್ವಭಾವವಾಗಿಬಿಟ್ಟಿದೆ."

ಜನಮೇಜಯ! ದಾಶಾರ್ಹಕುಲದೀಪಕನಾದ ಶ್ರೀಕೃಷ್ಣನು ಅಸಹನ ಶೀಲನಾದ ದುರ್ಯೋಧನನೊಡನೆ ಹೀಗೆ ಹೇಳುತ್ತಿರುವಾಗಲೇ ಆ ಕುರುರಾಜರ ಸಭೆಯಲ್ಲಿದ್ದ ದುಃಶಾಸನನು ತನ್ನಣ್ಣನಾದ ದುರ್ಯೋಧನನನ್ನು ಕುರಿತು ಈ ಮಾತುಗಳನ್ನು ಹೇಳಿದನು :

**ನ ಚೇತ್ಸನ್ಧಾಸ್ಯಸೇ ರಾಜನ್ಸ್ವೇನ ಕಾಮೇನ ಪಾಣ್ಡವೈಃ ।**
**ಬದ್ಧ್ವಾ ಕಿಲ ತ್ವಾಂ ದಾಸ್ಯನ್ತಿ ಕುನ್ತೀಪುತ್ರಾಯ ಕೌರವಾಃ ॥೨೩॥**

"ಅಣ್ಣ! ನೀನೇನಾದರೂ ಸ್ವೇಚ್ಛೆಯಿಂದಲೇ ಪಾಂಡವರೊಡನೆ ಸಂಧಿಯನ್ನು ಮಾಡಿಕೊಳ್ಳದಿದ್ದರೆ, ಕೌರವರೆಲ್ಲರೂ ಸೇರಿ ನಿನ್ನನ್ನು ಬಿಗಿದುಕಟ್ಟಿ ಕುಂತೀಪುತ್ರನಾದ ಯುಧಿಷ್ಠಿರನಿಗೆ ಒಪ್ಪಿಸಿಬಿಡುತ್ತಾರೆ. ಎಚ್ಚರಿಕೆಯಿಂದಿರು.

**ವೈಕರ್ತನಂ ತ್ವಾಂ ಚ ಮಾಂ ಚ ತ್ರೀನೇತಾನ್ಮನುಜರ್ಷಭ ।**
**ಪಾಣ್ಡವೇಭ್ಯಃ ಪ್ರದಾಸ್ಯನ್ತಿ ಭೀಷ್ಮೋ ದ್ರೋಣಃ ಪಿತಾ ಚ ತೇ ॥೨೪॥**

ಭೀಷ್ಮ, ದ್ರೋಣ ಮತ್ತು ನಿನ್ನ ತಂದೆ ಧೃತರಾಷ್ಟ್ರ–ಈ ಮೂವರೂ ಸೇರಿ ನನ್ನನ್ನೂ, ನಿನ್ನನ್ನೂ ಮತ್ತು ಕರ್ಣನನ್ನೂ ಬಂಧಿಸಿ ಪಾಂಡವರಿಗೆ ಒಪ್ಪಿಸಿಬಿಡುತ್ತಾರೆ."

(ದುಃಶಾಸನನು ಹೇಳಿದ ಆ ಮಾತು ದುರ್ಯೋಧನನಿಗೆ ಸಭಾತ್ಯಾಗ ಮಾಡಿ ಹೊರಟುಹೋಗಲು ಒಂದು ನೆಪವಾಯಿತು.) ದುರ್ಮತಿಯಾದ, ನಾಚಿಕೆಗೆಟ್ಟ, ಅಶಿಷ್ಟರಂತೆ ಮರ್ಯಾದಾಶೂನ್ಯನಾದ, ದುರಭಿಮಾನಿ

ಯಾದ, ಮಾನ್ಯರಾದವರನ್ನು ಅಪಮಾನಗೊಳಿಸುವ ಸ್ವಭಾವವುಳ್ಳ ದುರ್ಯೋಧನನು–ದುಃಶಾಸನನು ಹೇಳಿದ ಮಾತನ್ನು ಕೇಳಿ ಪರಮಕ್ರುದ್ಧನಾಗಿ, ದೊಡ್ಡದಾದೊಂದು ಘಟಸರ್ಪದಂತೆ ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಸಿಂಹಾಸನದಿಂದ ಮೇಲೆದ್ದು–ವಿದುರನನ್ನೂ, ಧೃತರಾಷ್ಟ್ರನನ್ನೂ, ಬಾಹ್ಲಿಕರಾಜನನ್ನೂ, ಕೃಪರನ್ನೂ, ಸೋಮದತ್ತನನ್ನೂ, ಭೀಷ್ಮನನ್ನೂ, ದ್ರೋಣರನ್ನೂ ಮತ್ತು ಜನಾರ್ದನನನ್ನೂ ಅನಾದರಣೆಮಾಡಿ ಸಭೆಯನ್ನು ಬಿಟ್ಟು ಹೊರಟೇಹೋದನು. ದುರ್ಯೋಧನನು ಹೊರಟುದನ್ನು ಕಂಡು ಅವನ ತಮ್ಮಂದಿರೂ, ತಮ್ಮ-ತಮ್ಮ ಮಂತ್ರಿಗಳೊಡಗೂಡಿ ಎಲ್ಲ ರಾಜರೂ ದುರ್ಯೋಧನನನ್ನೇ ಅನುಸರಿಸಿ ಸಭೆಯನ್ನು ಬಿಟ್ಟು ಹೊರಟುಹೋದರು.

ತುಂಬಿದ ಸಭೆಯಲ್ಲಿ ಮೇಲೆದ್ದು ಕ್ರುದ್ಧನಾಗಿ ತನ್ನನುಜರೊಡನೆ ಹೊರಟುಹೋದ ದುರ್ಯೋಧನನನ್ನು ನೋಡಿ ಶಾಂತನುವಿನ ಮಗನಾದ ಭೀಷ್ಮನು ಹೇಳಿದನು :

**ಧರ್ಮಾರ್ಥಾವಭಿಸಂತ್ಯಜ್ಯ ಸಂರಮ್ಭಂ ಯೋಽನುಮನ್ಯತೇ।**
**ಹಸನ್ತಿ ವ್ಯಸನೇ ತಸ್ಯ ದುರ್ಹೃದೋ ನಚಿರಾದಿವ ॥೩೦॥**

"ಧರ್ಮಾರ್ಥಗಳೆರಡನ್ನೂ ಪರಿತ್ಯಜಿಸಿ ಕ್ರೋಧದಿಂದ ಯಾವನು ವರ್ತಿಸುತ್ತಾನೆಯೋ-ಅವನು ಶೀಘ್ರಾತಿಶೀಘ್ರವಾಗಿ ವಿಪತ್ತಿಗೊಳಗಾಗುತ್ತಾನೆ. ಅದನ್ನು ನೋಡಿ ಅವನು ಶತ್ರುಗಳು ಸಂತೋಷಿಸುತ್ತಾರೆ.

ಧೃತರಾಷ್ಟ್ರರಾಜನ ಮಗನಾದ ಈ ದುರ್ಯೋಧನನು ನಿಶ್ಚಯವಾಗಿಯೂ ದುರಾತ್ಮನು. ಕಾರ್ಯಸಿದ್ಧಿಯ ಉಪಾಯಕ್ಕೆ ವಿಪರೀತವಾಗಿ ನಡೆದುಕೊಳ್ಳತಕ್ಕವನು. ದಾಂಭಿಕನು ; ದುರಭಿಮಾನಿಯು ; ಕ್ರೋಧ-ಲೋಭಗಳಿಗೆ ವಶನಾಗಿರತಕ್ಕವನು. ಸಾರ್ವಭೌಮತ್ವದ ವಿಷಯವಾಗಿ ಮಿಥ್ಯಾಭಿಮಾನವನ್ನು ತಾಳಿದ್ದಾನೆ.

ಜನಾರ್ದನ! ಪಕ್ವವಾದ ಫಲವು ಕೆಳಗೆ ಬೀಳುವಂತೆ-ಕಾಲಪಕ್ವರಾದ ಈ ಕ್ಷತ್ರಿಯರಾಜರೆಲ್ಲರೂ ಮೃತ್ಯುವಿನ ಮುಖದಲ್ಲಿ ಬೀಳುವ ಕಾಲವು ಸನ್ನಿಹಿತವಾಗಿದೆಯೆಂದೇ ಭಾವಿಸುತ್ತೇನೆ. ಮೋಹಪರವಶರಾಗಿರುವ ಎಲ್ಲ

ರಾಜರೂ ತಮ್ಮ-ತಮ್ಮ ಮಂತ್ರಿಗಳೊಡನೆ ದುರ್ಯೋಧನನನ್ನನುಸರಿಸಿ ಹೊರಟೇ ಹೋದರು."

ಭೀಷ್ಮನ ಮಾತನ್ನು ಕೇಳಿ ದಾಶಾರ್ಹಕುಲತಿಲಕನಾದ, ಕಮಲ ದಳಾಯತಾಕ್ಷನಾದ, ವೀರ್ಯವಂತನಾದ ಜನಾರ್ದನನು ಭೀಷ್ಮ-ದ್ರೋಣ ಪ್ರಮುಖರೆಲ್ಲರನ್ನೂ ಉದ್ದೇಶಿಸಿ ಹೇಳಿದನು :

**ಸರ್ವೇಷಾಂ ಕುರುವೃದ್ಧಾನಾಂ ಮಹಾನಯಮತಿಕ್ರಮಃ ।**
**ಪ್ರಸಹ್ಯ ಮನ್ದಮೈಶ್ವರ್ಯೇ ನ ನಿಯಚ್ಛತ ಯನ್ನೃಪಮ್ ॥೩೪॥**

"ಕುರುಕುಲದ ಎಲ್ಲ ವೃದ್ಧರ ಅತಿಕ್ರಮವೇ ಇದಾಗಿದೆ. (ಈಗಿನ ಪರಿಸ್ಥಿತಿಗೆ ಕುರುವೃದ್ಧರೂ ಕಾರಣರಾಗಿದ್ದಾರೆ.) ಭೀಷ್ಮ-ದ್ರೋಣಾದಿಗಳೂ ತಪ್ಪುದಾರಿಯಲ್ಲಿ ನಡೆದಿದ್ದಾರೆ. ಮಂದಬುದ್ಧಿಯವನಾದ ದುರ್ಯೋಧನನನ್ನು ಅತುಲೈಶ್ವರ್ಯಕ್ಕೂ ಒಡೆಯನನ್ನಾಗಿ ಮಾಡಿದ ಇವರು ಈ ಮೂಢನನ್ನು ನಿಯಂತ್ರಿಸಲು ಅಸಮರ್ಥರಾಗಿರುತ್ತಾರೆ. ಇದೊಂದು ದೊಡ್ಡ ಅತಿಕ್ರಮವೇ ಸರಿ. ಶತ್ರುಗಳನ್ನು ದಮನಮಾಡುವ ಸಾಮರ್ಥ್ಯವುಳ್ಳ ನಿಷ್ಪಾಪರಾದ ಕೌರವರೇ! ಈಗ ನಾನು ಸಮಯೋಚಿತವಾದ ಕಾರ್ಯವೇನೆಂಬುದನ್ನು ನಿರ್ಧರಿಸುತ್ತೇನೆ. ನಾನು ಹೇಳಿದಂತೆ ಮಾಡಿದರೆ ಈಗಲೂ ಸರ್ವರಿಗೂ ಶ್ರೇಯಸ್ಸುಂಟಾದೀತು. ಕಾಲವಿನ್ನೂ ಮೀರಿಹೋಗಿಲ್ಲವೆಂದು ನಾನು ಭಾವಿಸಿದ್ದೇನೆ. ಈಗ ಮಾಡಬೇಕಾಗಿರುವ ಕಾರ್ಯವೇನೆಂಬುದನ್ನು ಕೇಳಿರಿ. ನಾನಾದರೋ ನಿಮಗೆ ಹಿತವಾಗುವುದನ್ನೇ ಹೇಳುತ್ತಿದ್ದೇನೆ. ನೀವೆಲ್ಲರೂ ಇದುವರೆಗೆ ಇಲ್ಲೇನು ನಡೆಯಿತೆಂಬುದನ್ನು ಪ್ರತ್ಯಕ್ಷವಾಗಿಯೇ ನೋಡಿರುವಿರಿ. ಭಾರತರೇ! ನಾನು ಹೇಳಲಿರುವುದು ನಿಮಗೆ ಅನುಕೂಲವಾಗಿ ಸಮೀಚೀನವಾಗಿ ಕಂಡರೆ ಅದರಂತೆ ನಡೆಯಿರಿ. ಭೋಜರಾಜನಾದ, ವೃದ್ಧನಾದ ಉಗ್ರಸೇನನಿಗೆ–ದುರಾಚಾರಿಯಾದ, ಇಂದ್ರಿಯನಿಗ್ರಹವಿಲ್ಲದ ಕಂಸನೆಂಬ ಮಗನಿದ್ದನು. ತಂದೆಯು ಜೀವಿಸಿದ್ದಾಗಲೇ ಅವನು ತನ್ನ ತಂದೆಯ ಸಕಲೈಶ್ವರ್ಯವನ್ನೂ ಅಪಹರಣಮಾಡಿ ತಾನೇ ರಾಜ್ಯಸಿಂಹಾಸನದಲ್ಲಿ ಕುಳಿತುಬಿಟ್ಟನು. ಅದರ ಪರಿಣಾಮವಾಗಿ ಅವನು ಬಹಳ ಬೇಗ ಮೃತ್ಯುವಶನಾಗಬೇಕಾಯಿತು. ಉಗ್ರಸೇನನ ಮಗ ನಾದ ಕಂಸನನ್ನು ಅವನ ಬಂಧು-ಬಾಂಧವರೆಲ್ಲರೂ ಪರಿತ್ಯಜಿಸಿದ್ದರು.

ಜ್ಞಾತಿ-ಬಾಂಧವರಿಗೆ ಹಿತವನ್ನುಂಟುಮಾಡಬೇಕೆನ್ನುವ ಅಭಿಲಾಷೆಯಿಂದ ನಾನು ಯುದ್ಧದಲ್ಲಿ ಕಂಸನನ್ನು ಕೊಂದೆನು. ಅನಂತರದಲ್ಲಿ ಕುಲದವರೆಲ್ಲರೂ ಸೇರಿ ಭೋಜವಂಶದ ಕೀರ್ತಿಸಂವರ್ಧಕನಾದ ಆಹುಕಉಗ್ರಸೇನನನ್ನು ಯಥೋಚಿತವಾಗಿ ಗೌರವಿಸಿ ಅವನನ್ನೇ ರಾಜನನ್ನಾಗಿ ಮಾಡಿದೆವು. ಭಾರತಕುಲನಂದನರೇ! ಸಮಸ್ತಯಾದವರೂ, ಅಂಧಕ-ವೃಷ್ಣಿಗಳೂ ಸಂಘಟಿತರಾಗಿ– ಕುಲದ ಸಂರಕ್ಷಣಾರ್ಥವಾಗಿ ಕಂಸನೊಬ್ಬನನ್ನು ಪರಿತ್ಯಾಗಮಾಡಿ–ಉತ್ತರೋತ್ತರ ಅಭಿವೃದ್ಧಿಯನ್ನು ಹೊಂದುತ್ತಿದ್ದಾರೆ. ಆದುದರಿಂದ ಕುಲದ ರಕ್ಷಣೆಗಾಗಿ ಒಬ್ಬನನ್ನು ಪರಿತ್ಯಜಿಸುವುದು ಸೂಕ್ತವಾಗಿ ಕಾಣುತ್ತದೆ. ಇದಲ್ಲದೇ ಮತ್ತೊಂದು ನಿದರ್ಶನವನ್ನೂ ಕೊಡುತ್ತೇನೆ, ಆಲಿಸಿರಿ. ಹಿಂದೊಂದು ಸಮಯದಲ್ಲಿ ದೇವತೆಗಳೂ ಮತ್ತು ಅಸುರರೂ ತಮ್ಮ ಆಯುಧಗಳನ್ನೆತ್ತಿಕೊಂಡು ಯುದ್ಧಸನ್ನದ್ಧರಾಗಿದ್ದರು. ಲೋಕದ ಜನಗಳೆಲ್ಲರೂ ಎರಡು ವಿಭಾಗವಾಗಿ (ಕೆಲವರು ದೇವತೆಗಳೊಡನೆಯೂ ಮತ್ತೆ ಕೆಲವರು ಅಸುರರೊಡನೆಯೂ ಸೇರಿಕೊಂಡು) ಸರ್ವವಿನಾಶದ ಮಾರ್ಗವನ್ನು ಅವಲಂಬಿಸಿ ನಿಂತಿದ್ದರು. ಆ ಸಮಯದಲ್ಲಿ ಸೃಷ್ಟಿಕರ್ತನಾದ, ಭಗವಂತನಾದ, ಲೋಕಭಾವನನಾದ, ಪರಮೇಷ್ಠೀ ಪ್ರಜಾಪತಿಯು ಹೀಗೆಂದು ತನ್ನಲ್ಲಿಯೇ ಹೇಳಿಕೊಂಡನು :

"ಈ ಯುದ್ಧದಲ್ಲಿ ಅಸುರರು–ದೈತ್ಯರಿಂದಲೂ, ದಾನವರಿಂದಲೂ ಕೂಡಿಕೊಂಡು ಯುದ್ಧಮಾಡಿ ಪರಾಭವಹೊಂದುತ್ತಾರೆ. ಆದಿತ್ಯರೂ, ವಸುಗಳೂ ಮತ್ತು ರುದ್ರಾದಿದೇವತೆಗಳೂ ವಿಜಯಶಾಲಿಗಳಾಗುತ್ತಾರೆ. ದೇವತೆಗಳು, ಅಸುರರು, ಮನುಷ್ಯರು, ಗಂಧರ್ವರು, ನಾಗ-ಯಕ್ಷ-ರಾಕ್ಷಸರು ಇವರೆಲ್ಲರೂ ಈ ಯುದ್ಧದಲ್ಲಿ ಅತ್ಯಂತಕ್ರುದ್ಧರಾಗಿ ಕಾದಾಡುತ್ತಾ ಪರಸ್ಪರವಾಗಿ ಬಡಿದಾಡಿ ಸಾಯುತ್ತಾರೆ."

ಪರಮೇಷ್ಠೀಪ್ರಜಾಪತಿಯು ಹೀಗೆ ಮುಂದಾಗಬಹುದಾದ ಪರಿಣಾಮವನ್ನು ಯೋಚಿಸಿ ಯಮಧರ್ಮನೊಡನೆ ಹೇಳಿದನು :

"ಯಮಧರ್ಮ! ಪ್ರಪಂಚದ ವಿನಾಶಕ್ಕೆ ಕಾರಣರಾಗಲಿರುವ ಈ ದೈತ್ಯ-ದಾನವರನ್ನು ಬಂಧಿಸಿ ವರುಣನಿಗೆ ಒಪ್ಪಿಸಿಬಿಡು."

ಪರಮೇಷ್ಠೀಪ್ರಜಾಪತಿಯು ಹೀಗೆ ಹೇಳಿದನಂತರ ಯಮಧರ್ಮ

ರಾಜನು ಅವನ ಅನುಶಾಸನದಂತೆ ದೈತ್ಯ-ದಾನವರನ್ನು ಪಾಶಗಳಿಂದ ಬಿಗಿದು ವರುಣದೇವನಿಗೊಪ್ಪಿಸಿದನು.

ಜಲಾಧಿಪತಿಯಾದ ವರುಣನಾದರೋ ದೈತ್ಯ-ದಾನವರನ್ನು ಧರ್ಮಪಾಶಗಳಿಂದಲೂ ತನ್ನದೇ ಆದ ವರುಣಪಾಶಗಳಿಂದಲೂ ಬಂಧಿಸಿ ಸಮುದ್ರದಲ್ಲಿಟ್ಟು ನಿತ್ಯವೂ ಸಾವಧಾನದಿಂದ ರಕ್ಷಿಸುತ್ತಿದ್ದಾನೆ. ಹಾಗೆಯೇ ನೀವೆಲ್ಲರೂ ಸೇರಿ ದುರ್ಯೋಧನನನ್ನೂ, ಕರ್ಣನನ್ನೂ, ಶಕುನಿಯನ್ನೂ ಮತ್ತು ದುಃಶಾಸನನನ್ನೂ ಬಂಧಿಸಿ ಪಾಂಡವರ ವಶಕ್ಕೊಪ್ಪಿಸಿಬಿಡಿರಿ.

**ತ್ಯಜೇತ್ಕುಲಾರ್ಥೇ ಪುರುಷಂ ಗ್ರಾಮಸ್ಯಾರ್ಥೇ ಕುಲಂ ತ್ಯಜೇತ್ ।**
**ಗ್ರಾಮಂ ಜನಪದಸ್ಯಾರ್ಥೇ ಆತ್ಮಾರ್ಥೇ ಪೃಥಿವೀಂ ತ್ಯಜೇತ್ ॥೪೯॥**

ಕುಲದ ಸಂರಕ್ಷಣಾರ್ಥವಾಗಿ ಒಬ್ಬ ಪುರುಷನನ್ನು ಪರಿತ್ಯಜಿಸಬೇಕು. ಗ್ರಾಮದ ರಕ್ಷಣಾರ್ಥವಾಗಿ ಒಂದು ಕುಲವನ್ನೇ ಪರಿತ್ಯಜಿಸಬೇಕು. ಒಂದು ದೇಶದ ಸಂರಕ್ಷಣೆಗಾಗಿ ಒಂದು ಗ್ರಾಮವನ್ನೇ ಪರಿತ್ಯಜಿಸಬೇಕು. ಆತ್ಮೋದ್ಧಾರಕ್ಕಾಗಿ ಪೃಥ್ವಿಯನ್ನೇ ಪರಿತ್ಯಜಿಸಬೇಕು.

ಧೃತರಾಷ್ಟ್ರರಾಜ! ಆದುದರಿಂದ, ಅಮಾತ್ಯಸಹಿತನಾದ ದುರ್ಯೋಧನ ನನ್ನು ಈ ಕೂಡಲೇ ಬಂಧಿಸು. ಪಾಂಡವರೊಡನೆ ಸಂಧಿಮಾಡಿಕೊ. ಕ್ಷತ್ರಿಯರ್ಷಭನೇ! ಹೀಗೆ ಮಾಡುವುದರಿಂದ ನಿನ್ನ ಸಲುವಾಗಿ ಸರ್ವಕ್ಷತ್ರಿಯರೂ ವಿನಾಶಹೊಂದದಿರಲಿ."

೧೨೮ನೆಯ ಅಧ್ಯಾಯವು ಮುಗಿಯಿತು.

೧೨೯ನೆಯಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ)

## ಧೃತರಾಷ್ಟ್ರನು ಗಾಂಧಾರಿಗೆ ಹೇಳಿಕಳುಹಿಸಿದುದು : ಗಾಂಧಾರಿಯು ದುರ್ಯೋಧನನನ್ನು ಸನ್ಮಾರ್ಗಕ್ಕೆ ತರಲು ಯತ್ನಿಸಿದುದು

ವೈಶಂಪಾಯನರು ಹೇಳುತ್ತಾರೆ :

**ಕೃಷ್ಣಸ್ಯ ತು ವಚಃ ಶ್ರುತ್ವಾ ಧೃತರಾಷ್ಟ್ರೋ ಜನೇಶ್ವರಃ ।**
**ವಿದುರಂ ಸರ್ವಧರ್ಮಜ್ಞಂ ತ್ವರಮಾಣೋಽಭ್ಯಭಾಷತ ॥೧॥**

ಜನಮೇಜಯ! ಶ್ರೀಕೃಷ್ಣನ ಮಾತನ್ನು ಕೇಳಿ ಜನೇಶ್ವರನಾದ ಧೃತರಾಷ್ಟ್ರನು ಸರ್ವಧರ್ಮಜ್ಞನಾದ ವಿದುರನನ್ನು ಕುರಿತು ಅತ್ಯಾತುರದಿಂದ ಈ ಮಾತುಗಳನ್ನು ಹೇಳಿದನು.:

"ಬೇಗ ಹೋಗು, ವಿದುರ! ದೂರಾಲೋಚನೆಯುಳ್ಳ ಮಹಾಪ್ರಾಜ್ಞೆಯಾದ ಗಾಂಧಾರಿಯನ್ನು ಈ ಕೂಡಲೇ ಕರೆದುಕೊಂಡು ಬಾ. ಅವಳ ಮೂಲಕವಾದರೂ ದುರ್ಮತಿಯಾದ ದುರ್ಯೋಧನನನ್ನು ಸನ್ಮಾರ್ಗಕ್ಕೆ ತರಲು ಪ್ರಯತ್ನಿಸುತ್ತೇನೆ. ಅವಳಿಂದಾದರೂ ದುಷ್ಟಮತಿಯಾದ ದುರಾತ್ಮನಾದ ದುರ್ಯೋಧನನನ್ನು ಶಾಂತಗೊಳಿಸಲು ಸಾಧ್ಯವಾದರೆ ಸುಹೃದನಾದ ಶ್ರೀಕೃಷ್ಣನ ಮಾತಿನಂತೆ ನಡೆದುಕೊಳ್ಳಲು ಸಮರ್ಥರಾಗುತ್ತೇವೆ. ಲೋಭಾಭಿಭೂತನಾಗಿರುವ, ದುರ್ಬುದ್ಧಿಯಿಂದ ಕೂಡಿರುವ, ದುಷ್ಟರ ಸಹಾಯವನ್ನು ಪಡೆಯುತ್ತಿರುವ ದುರ್ಯೋಧನನ ದುರ್ಮಾರ್ಗಾನುಸರಣೆಯನ್ನು ಗಾಂಧಾರಿಯಾದರೂ ತನ್ನ ಶಾಂತಿಪ್ರತಿಪಾದಕವಾದ ಮಾತುಗಳಿಂದ ತಪ್ಪಿಸಬಹುದೆಂಬ ಆಶಯದಿಂದಿರುತ್ತೇನೆ. ದುರ್ಯೋಧನನು ತಂದೊಡ್ಡಿರುವ ಘೋರವಿಪತ್ತನ್ನು ಗಾಂಧಾರಿಯು ತಪ್ಪಿಸುವಳೇ? ಚಿರಕಾಲದವರೆಗೂ ವ್ಯಯರಹಿತವಾದ ಯೋಗ-ಕ್ಷೇಮವು ನಮಗೆ ಲಭ್ಯವಾಗುವುದೇ? ವಿದುರ! ಕಡೆಯದಾಗಿ ಇದನ್ನೂ ಪ್ರಯತ್ನಿಸಿ ನೋಡೋಣ. ತಾಯಿಯ ಮಾತಿಗೆ ದುರ್ಯೋಧನನು ಸಮ್ಮತಿಸಿದರೂ ಸಮ್ಮತಿಸಬಹುದು." ಧೃತರಾಷ್ಟ್ರನ ಮಾತುಗಳನ್ನು ಕೇಳಿ ಅವನ ಆಜ್ಞೆಯಂತೆ ವಿದುರನು ಗಾಂಧಾರಿಯನ್ನು ಕರೆತಂದನು. ದೀರ್ಘದರ್ಶಿನಿಯಾದ ಗಾಂಧಾರಿಯು ತನ್ನ ಬಳಿಗೆ ಬಂದು ಆಸನದಲ್ಲಿ ಉಪವಿಷ್ಟಳಾದನಂತರ ಧೃತರಾಷ್ಟ್ರನು ಹೇಳತೊಡಗಿದನು :

**ಏಷ ಗಾನ್ಧಾರಿ ಪುತ್ರಸ್ತೇ ದುರಾತ್ಮಾ ಶಾಸನಾತಿಗಃ ।**
**ಐಶ್ವರ್ಯಲೋಭಾದೈಶ್ವರ್ಯಂ ಜೀವಿತಂ ಚ ಪ್ರಹಾಸ್ಯತಿ ॥೭॥**

"ಗಾಂಧಾರಿ! ಈ ನಿನ್ನ ಹಿರಿಯ ಮಗನು ಬಹಳ ದುರಾತ್ಮನಾಗಿರುತ್ತಾನೆ. ಗುರುಜನರ ಆಜ್ಞೆಯನ್ನೂ ಅತಿಕ್ರಮಿಸಿ ನಡೆಯುತ್ತಿದ್ದಾನೆ. ಐಶ್ವರ್ಯದ ಲೋಭದಿಂದಾಗಿ ಐಶ್ವರ್ಯವನ್ನೂ (ರಾಜ್ಯವನ್ನೂ) ಮತ್ತು ಪ್ರಾಣವನ್ನೂ ತೊರೆಯುವುದರಲ್ಲಿದ್ದಾನೆ.

**ಅಶಿಷ್ಟವದಮರ್ಯಾದಃ ಪಾಪೈಃ ಸಹ ದುರಾತ್ಮವಾನ್ ।**
**ಸಭಾಯಾ ನಿರ್ಗತೋ ಮೂಢೋ ವ್ಯತಿಕ್ರಮ್ಯ ಸುಹೃದ್ವಚಃ ॥೮॥**

ದುರಾತ್ಮನಾದ, ಮೂಢನಾದ ದುರ್ಯೋಧನನು ಅಶಿಷ್ಟರಂತೆ ಮರ್ಯಾದೆಗೆಟ್ಟವನಾಗಿ, ಸುಹೃದರ ಮಾತುಗಳನ್ನೂ ಅನಾದರಣೆಮಾಡಿ, ಪಾಪಿಷ್ಠರಾದ ಸಂಗಡಿಗರೊಡನೆ ಸಭೆಯನ್ನು ಬಿಟ್ಟು ಹೊರಟುಹೋಗಿದ್ದಾನೆ."

ಜನಮೇಜಯ! ಪತಿಯು ಹೇಳಿದ ಮಾತನ್ನು ಕೇಳಿ ಯಶಸ್ವಿನಿಯಾದ, ರಾಜಪುತ್ರಿಯಾದ ಗಾಂಧಾರಿಯು ತಾನು ಸೇರಿದ ಕುಲಕ್ಕೆ ಶ್ರೇಯಸ್ಸನ್ನುಂಟುಮಾಡಬೇಕೆನ್ನುವ ಅಭಿಲಾಷೆಯಿಂದ ಪತಿಯನ್ನು ಕುರಿತು ಹೀಗೆಂದು ಹೇಳಿದಳು :

"ರಾಜ್ಯಕಾಮುಕನಾದ, ಆಶಾರೋಗಪೀಡಿತನಾದ ನನ್ನ ಮಗನನ್ನು ಈಗಲೇ ಕರೆತನ್ನಿರಿ. ಧರ್ಮಾರ್ಥಲೋಭಿಯಾದವನು ಮತ್ತು ಅಶಿಷ್ಟನು ರಾಜ್ಯಭಾರಮಾಡಬಾರದು. ಅಂತಹವನಿಗೆ ರಾಜ್ಯಸಿಂಹಾಸನವು ಸಿಗಬಾರದಾಗಿತ್ತು. ಆದರೆ ಅವಿನಯಶೀಲನಾದ ಉದ್ಧತನಾದ ಅವನು ರಾಜ್ಯವನ್ನು ಪಡೆದುಕೊಂಡಿರುತ್ತಾನೆ.

**ತ್ವಂ ಹ್ಯೇವಾತ್ರ ಭೃಶಂ ಗರ್ಹ್ಯೋ ಧೃತರಾಷ್ಟ್ರ ಸುತಪ್ರಿಯಃ ।**
**ಯೋ ಜಾನನ್ಪಾಪತಾಮಸ್ಯ ತತ್ಪ್ರಜ್ಞಾಮನುವರ್ತಸೇ ॥೧೧॥**

ಮಹಾರಾಜ! ಕಾರ್ಯವು ಮಿಂಚಿಹೋದಮೇಲೆ ಮಗನನ್ನು ಹಳಿದು ಯಾವ ಪ್ರಯೋಜನವೂ ಇಲ್ಲ. ನಿನಗೆ ನಿನ್ನ ಮಗನ ಮೇಲೆ ಅಪಾರ ಪ್ರೇಮವಿದೆ. ಅವಿನೀತನ ಮೇಲೆ ನೀನಿಟ್ಟಿರುವ ಅಪಾರಪ್ರೇಮವೇ ಇಂದಿನ ಇಂತಹ ಪರಿಸ್ಥಿತಿಗೆ ಕಾರಣವಾಗಿದೆ. ಆದುದರಿಂದ ಈ ವಿಷಯದಲ್ಲಿ ನೀನೇ ಗರ್ಹಣೀಯನು. ಅವನಲ್ಲಿ ಪಾಪಬುದ್ಧಿಯು ಇಂದೇ ಉತ್ಪನ್ನವಾಗಲಿಲ್ಲ. ಹುಟ್ಟಿದಾಗಿನಿಂದಲೂ ಅವನಲ್ಲಿ ಪಾಪಬುದ್ಧಿಯೇ ಇದೆ. ಈ ವಿಷಯವು ನಿನಗೂ ತಿಳಿಯದೇ ಇಲ್ಲ. ಅವನು ಪಾಪಬುದ್ಧಿಯವನೆಂಬುದು ತಿಳಿದಿದ್ದರೂ ಅವನ ಇಚ್ಛೆಯಂತೆಯೇ ನೀನು ಇದುವರೆಗೂ ನಡೆಯುತ್ತಾ ಬಂದಿರುವೆ. ಹೀಗೆ ಯಾರು ತಾನೇ ಮಾಡುತ್ತಾರೆ?

ಈಗವನು ಕಾಮ-ಕ್ರೋಧಗಳಿಗೆ ವಶನಾಗಿಬಿಟ್ಟಿದ್ದಾನೆ. ರಾಜ್ಯ ಲೋಭಿಯಾಗಿದ್ದಾನೆ. ಆದುದರಿಂದ ನೀನು ಈ ಸಮಯದಲ್ಲಿ ಅವನನ್ನು ಬಲಾತ್ಕಾರದಿಂದಾದರೂ ತಿದ್ದಲು ಅಸಮರ್ಥನಾಗಿರುವೆ. ನಿನ್ನಿಂದ ಅವನನ್ನು ಸನ್ಮಾರ್ಗಕ್ಕೆ ತರುವ ಸಾಧ್ಯತೆಯಿಲ್ಲ. ಮೂಢನಿಗೆ, ಬಾಲಿಶಬುದ್ಧಿಯವನಿಗೆ, ದುಷ್ಟರ ಸಹವಾಸದಲ್ಲಿರುವವನಿಗೆ, ಲುಬ್ಧನಿಗೆ, ದುರಾತ್ಮನಿಗೆ ರಾಜ್ಯವನ್ನೊಪ್ಪಿಸಿದುದರ ಫಲವನ್ನು ಧೃತರಾಷ್ಟ್ರನು ಅನುಭವಿಸುತ್ತಿದ್ದಾನೆ ಅಥವಾ ಅನುಭವಿಸಲೇಬೇಕು. ಮಹಾರಾಜ! ಸ್ವಜನರಲ್ಲಿಯೇ ಪರಸ್ಪರವಾಗಿ ಉಂಟಾದ ಭೇದವನ್ನು ನೀನು ಇದುವರೆಗೂ ಉಪೇಕ್ಷಿಸಿದುದೇಕೆ? ಸ್ವಜನರಿಂದಲೇ ಬೇರ್ಪಟ್ಟ ನಿನ್ನನ್ನು ಕಂಡು ನಿನ್ನ ಶತ್ರುಗಳು ಗಹಗಹಿಸಿ ನಗುತ್ತಿದ್ದಾರೆ.

**ಯಾ ಹಿ ಶಕ್ಯಾ ಮಹಾರಾಜ ಸಾಮ್ನಾ ಭೇದೇನ ವಾ ಪುನಃ ।**
**ನಿಸ್ತರ್ತುಮಾಪದಃ ಸ್ವೇಷು ದಣ್ಡಂ ಕಸ್ತತ್ರ ಪಾತಯೇತ್ ॥೧೫॥**

ಯಾವ ಆಪತ್ತನ್ನು ಸಾಮೋಪಾಯದಿಂದ ಅಥವಾ ಭೇದೋಪಾಯ ದಿಂದ ಪರಿಹರಿಸಿಕೊಳ್ಳಲು ಸಾಧ್ಯವಾಗುತ್ತಿದ್ದಿತೋ – ಅಂತಹ ಆಪತ್ತಿನ ನಿವಾರಣೆಗಾಗಿ ಸ್ವಜನರ ಮೇಲೆಯೇ ದಂಡಪ್ರಯೋಗವನ್ನು ಯಾರು ತಾನೇ ಮಾಡುತ್ತಾರೆ?"

ಧೃತರಾಷ್ಟ್ರನ ಆಜ್ಞಾನುಸಾರವಾಗಿಯೂ ತಾಯಿಯ ಅನುಶಾಸನ ದಿಂದಲೂ ಅಸಹನಶೀಲನಾದ ದುರ್ಯೋಧನನನ್ನು ವಿದುರನು ಪುನಃ ಕೌರವಮಹಾಸಭೆಗೆ ಕರೆತಂದನು. ತಾಯಿಯ ಮಾತನ್ನು ಕೇಳುವ ಇಚ್ಛೆಯಿಂದ ದುರ್ಯೋಧನನು ಪುನಃ ಸಭೆಯನ್ನು ಪ್ರವೇಶಿಸಿದನು. ಆದರೆ ಅವನ ಕೋಪವು ಸ್ವಲ್ಪವೂ ಕಡಿಮೆಯಾಗಿರಲಿಲ್ಲ. ಕಣ್ಣುಗಳು ಕೆಂಪಾಗಿದ್ದುವು. ಘಟಸರ್ಪದಂತೆ ಕ್ರೋಧಪರೀತನಾದ ದುರ್ಯೋಧನನು ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಿದ್ದನು. ದುರ್ಮಾರ್ಗಾವಲಂಬಿಯಾಗಿದ್ದ ಪುತ್ರನು ಸಭಾಪ್ರವೇಶಮಾಡಿದುದನ್ನು ತಿಳಿದು ಗಾಂಧಾರಿಯು ಅವನನ್ನು ಬಹುವಾಗಿ ನಿಂದಿಸುತ್ತಾ ಶಾಂತಿಯ ಸ್ಥಾಪನೆಗಾಗಿ ಅವನೊಡನೆ ಈ ಮಾತುಗಳನ್ನು ಹೇಳಿದಳು :

“ಪುತ್ರಕ! ದುರ್ಯೋಧನ! ನಾನು ಹೇಳಲಿರುವ ಮಾತನ್ನು ಸಾವಧಾನಚಿತ್ತನಾಗಿ ಕೇಳು. ನಾನು ಹೇಳುವಂತೆ ನಡೆದುಕೊಂಡರೆ ಬಂಧು-ಬಾಂಧವಸಹಿತನಾದ ನಿನಗೆ ನಿಶ್ಚಯವಾಗಿಯೂ ಹಿತವುಂಟಾಗು ವುದು. ಮುಂದೆಯೂ ಸುಖೋದಯಕ್ಕೆ ದಾರಿಯಾಗುವುದು. ಭರತಸತ್ತಮನೇ! ದುರ್ಯೋಧನ! ಸಂಧಿಯ ವಿಷಯವಾಗಿ ನಿನ್ನ



ತಂದೆಯೂ, ಭೀಷ್ಮ-ದ್ರೋಣ-ಕೃಪ-ವಿದುರರೂ ಮತ್ತು ಇತರ ಸುಹೃದರೂ ಹೇಗೆ ಹೇಳಿದ್ದಾರೆಯೋ ಅದರಂತೆ ನಡೆದುಕೊ. ಅವರು ಹೇಳಿದಂತೆ ನೀನು ಶಾಂತಿಗೆ ಒಪ್ಪಿದರೆ ಭೀಷ್ಮನನ್ನೂ, ನಿನ್ನ ತಂದೆಯನ್ನೂ, ನನ್ನನ್ನೂ, ದ್ರೋಣ ಪ್ರಮುಖರಾದ ಸುಹೃದರನ್ನೂ ಗೌರವಿಸಿದಂತಾಗುತ್ತದೆ. ಮಹಾಪ್ರಾಜ್ಞನೇ!

ಇಚ್ಛಾಮಾತ್ರದಿಂದಲೇ ರಾಜ್ಯವನ್ನು ಪಡೆಯಲು, ಪಡೆದ ರಾಜ್ಯವನ್ನು ರಕ್ಷಿಸಲು ಮತ್ತು ಉಪಭೋಗಿಸಲು ಸಾಧ್ಯವಾಗುವುದಿಲ್ಲ.

**ನ ಹ್ಯವಶ್ಯೇನ್ದ್ರಿಯೋ ರಾಜ್ಯಮಶ್ನೀಯಾದ್ದೀರ್ಘಮನ್ತರಮ್ ।**
**ವಿಜಿತಾತ್ಮಾ ತು ಮೇಧಾವೀ ಸ ರಾಜ್ಯಮಭಿಪಾಲಯೇತ್ ॥೨೩॥**

ಜಿತೇಂದ್ರಿಯನಲ್ಲದವನಿಗೆ ದೀರ್ಘಕಾಲದವರೆಗೆ ರಾಜ್ಯವನ್ನಾಳಲು ಸಾಧ್ಯವಾಗುವುದಿಲ್ಲ. ಜಿತೇಂದ್ರಿಯನಾದವನು, ಮೇಧಾವಿಯಾದವನು ಮಾತ್ರವೇ ರಾಜ್ಯವನ್ನು ಪರಿಪಾಲಿಸಲು ಸಮರ್ಥನಾಗುತ್ತಾನೆ.

**ಕಾಮಕ್ರೋಧೌ ಹಿ ಪುರುಷಮರ್ಥೇಭ್ಯೋ ವ್ಯಪಕರ್ಷತಃ।**
**ತೌ ತು ಶತ್ರೂ ವಿನಿರ್ಜಿತ್ಯ ರಾಜಾ ವಿಜಯತೇ ಮಹೀಮ್ ॥೨೪॥**

ಕಾಮ-ಕ್ರೋಧಗಳು ಮನುಷ್ಯನ ಮಹತ್ತಾದ ಎರಡು ಶತ್ರುಗಳು. ಅವು ಮನುಷ್ಯನನ್ನು ಚತುರ್ವಿಧಪುರುಷಾರ್ಥಗಳಿಂದಲೂ ಹೀನನನ್ನಾಗಿ ಮಾಡುತ್ತವೆ. ಆ ಎರಡು ಶತ್ರುಗಳನ್ನೂ ಜಯಿಸಿದ ರಾಜನು ಪ್ರಪಂಚವನ್ನೇ ಜಯಿಸಲು ಸಮರ್ಥನಾಗುತ್ತಾನೆ.

**ಲೋಕೇಶ್ವರ ಪ್ರಭುತ್ವಂ ಹಿ ಮಹದೇತದ್ದುರಾತ್ಮಭಿಃ ।**
**ರಾಜ್ಯಂ ನಾಮೇಪ್ಸಿತಂ ಸ್ಥಾನಂ ನ ಶಕ್ಯಮಭಿರಕ್ಷಿತುಮ್ ॥೨೫॥**

ಲೋಕೇಶ್ವರ! ಪ್ರಭುತ್ವವೆಂಬುದು ಅತಿಮಹತ್ತ್ವದ ವಿಷಯವಾಗಿದೆ. ರಾಜ್ಯವೆಂಬುದು ಸುಲಭವಾಗಿ ಲಭ್ಯವಾಗಬಹುದು. ಆದರೆ ರಾಜ್ಯದ ಪ್ರಭುತ್ವವು ಅತಿಮಹತ್ತ್ವದ್ದು. ರಾಜ್ಯವನ್ನು ಸುಲಭವಾಗಿ ಪಡೆದುಕೊಂಡಂತೆ ಪ್ರಭುತ್ವವನ್ನು ಪಡೆದುಕೊಳ್ಳಲು ಸಾಧ್ಯವಾಗುವುದಿಲ್ಲ. ಪ್ರಭುತ್ವವೆಂದರೆ ಪಡೆದ ರಾಜ್ಯವನ್ನು ಧರ್ಮದಿಂದ ರಕ್ಷಿಸುವುದು. ರಾಜ್ಯದ ಒಡೆತನವು ಎಲ್ಲರಿಗೂ ಬೇಕಾಗಿರಬಹುದು. ಆದರೆ ದುರಾತ್ಮರಾದವರಿಂದ ರಾಜ್ಯವನ್ನು ಧರ್ಮದಿಂದ ರಕ್ಷಿಸಲು ಸಾಧ್ಯವಾಗುವುದಿಲ್ಲ.

**ಇನ್ದ್ರಿಯಾಣಿ ಮಹತ್ಪ್ರೇಪ್ಸುರ್ನಿಯಚ್ಛೇದರ್ಥಧರ್ಮಯೋಃ ।**
**ಇನ್ದ್ರಿಯೈರ್ನಿಯತೈರ್ಬುದ್ಧಿರ್ವರ್ಧತೇऽಗ್ನಿರಿವೇನ್ಧನೈಃ ॥೨೬॥**

ಮಹತ್ವದ ಪ್ರಾಪ್ತಿಯನ್ನು ಆಶಿಸತಕ್ಕವನು ಇಂದ್ರಿಯಗಳನ್ನು ಧರ್ಮಾರ್ಥಗಳ ವಿಷಯದಲ್ಲಿ ನಿಯಂತ್ರಿಸಬೇಕು. ಜಿತವಾದ ಇಂದ್ರಿಯ

ಗಳುಳ್ಳವನ ಬುದ್ಧಿಯು–ಕಟ್ಟಿಗೆಗಳಿಂದ ಅಗ್ನಿಯು ಪ್ರಜ್ವಲಿಸುವಂತೆ ದಿನ-ದಿನಕ್ಕೂ ವರ್ಧಿಸುತ್ತದೆ.

**ಅವಿಧೇಯಾನಿ ಹೀಮಾನಿ ವ್ಯಾಪಾದಯಿತುಮಪ್ಯಲಮ್ ।**
**ಅವಿಧೇಯಾ ಇವಾದಾನ್ತಾ ಹಯಾಃ ಪಥಿ ಕುಸಾರಥಿಮ್ ॥೨೮॥**

ಹತೋಟಿಗೆ ಸಿಕ್ಕದ ಕುದುರೆಗಳು ಕುಶಲನಲ್ಲದ ಸಾರಥಿಯನ್ನು ಮಾರ್ಗಮಧ್ಯದಲ್ಲಿ ಯಾವ ರೀತಿಯಲ್ಲಿ ಕೆಳಕ್ಕೆ ಬೀಳಿಸಿಬಿಡುವುವೋ–ಅದೇ ರೀತಿಯಲ್ಲಿ ಮನುಷ್ಯನ ಹತೋಟಿಗೆ ಸಿಕ್ಕದ ಇಂದ್ರಿಯಗಳು ಆ ಮನುಷ್ಯನನ್ನೇ ನಾಶಮಾಡಲೂ ಸಮರ್ಥವಾಗುತ್ತವೆ.

**ಅವಿಜಿತ್ಯ ಯ ಆತ್ಮಾನಮಮಾತ್ಯಾನ್ವಿಜಿಗೀಷತೇ ।**
**ಅಮಿತ್ರಾನ್ವಾಜಿತಾಮಾತ್ಯಃ ಸೋಽವಶಃ ಪರಿಹೀಯತೇ ॥೨೯॥**

ಯಾವನು ಮೊದಲು ತನ್ನನ್ನು (ತನ್ನ ಇಂದ್ರಿಯಗಳನ್ನು) ಜಯಿಸದೇ ಅಮಾತ್ಯರನ್ನು ಜಯಿಸಲು (ವಶದಲ್ಲಿಟ್ಟುಕೊಳ್ಳಲು) ಹೋಗುತ್ತಾನೆಯೋ ಅಥವಾ ಮೊದಲು ತನ್ನ ಅಮಾತ್ಯರನ್ನು ತನ್ನ ಹತೋಟಿಯಲ್ಲಿಟ್ಟುಕೊಳ್ಳದೇ ಶತ್ರುಗಳನ್ನು ಜಯಿಸಲು ಹೋಗುತ್ತಾನೆಯೋ–ಅಂತಹ ಅಜಿತೇಂದ್ರಿಯನು ರಾಜ್ಯ ಮತ್ತು ಜೀವಿತಗಳೆರಡರಿಂದಲೂ ಕ್ಷೀಣನಾಗುತ್ತಾನೆ.

**ಆತ್ಮಾನಮೇವ ಪ್ರಥಮಂ ದ್ವೇಷ್ಯರೂಪೇಣ ಯೋಜಯೇತ್ ।**
**ತತೋಽಮಾತ್ಯಾನಮಿತ್ರಾಂಶ್ಚ ನ ಮೋಘಂ ವಿಜಿಗೀಷತೇ ॥೩೦॥**

ಯಾವಾಗಲೂ ಮನುಷ್ಯನು ಮೊದಲು ತಾನೇ ತನಗೆ ಶತ್ರುವೆಂಬುದನ್ನು ಮನಗಾಣಬೇಕು. (ತನ್ನಲ್ಲಿಯೇ ಕಾಮ-ಕ್ರೋಧಾದಿ ಆರು ಮಂದಿ ಶತ್ರುಗಳು ನಿವಾಸಮಾಡಿಕೊಂಡಿದ್ದಾರೆಂಬ ವಿಷಯವನ್ನು ತಿಳಿದುಕೊಳ್ಳಬೇಕು.) ಅನಿಯಂತ್ರಿತವಾದ ಪಂಚೇಂದ್ರಿಯಗಳನ್ನೂ ಐವರು ಶತ್ರುಗಳೆಂದೇ ತಿಳಿಯಬೇಕು. ಆರು ಮಂದಿ ಕಾಮ-ಕ್ರೋಧಾದಿ ಶತ್ರುಗಳನ್ನೂ, ಅನಿಯಂತ್ರಿತ ಪಂಚೇಂದ್ರಿಯಗಳನ್ನೂ ಜಯಿಸಿದನಂತರ ತನಗೆ ತಾನೇ ಮಿತ್ರನಾಗುತ್ತಾನೆ. ತನ್ನನ್ನು ತಾನು ಜಯಿಸಿಕೊಂಡನಂತರ ಅಮಾತ್ಯ ರನ್ನೂ, ಶತ್ರುಗಳನ್ನೂ ಜಯಿಸಲು ಹೊರಡಬೇಕು. ಮೊದಲು ತನ್ನನ್ನು

ತಾನು ಜಯಿಸಿಕೊಂಡು ಅನಂತರ ಇತರರನ್ನು ಜಯಿಸಲು ಹೊರಟವನ ಪ್ರಯತ್ನವು ಖಂಡಿತವಾಗಿಯೂ ವ್ಯರ್ಥವಾಗುವುದಿಲ್ಲ.

**ವಶ್ಯೇನ್ದ್ರಿಯಂ ಜಿತಾಮಾತ್ಯಂ ಧೃತದಣ್ಡಂ ವಿಕಾರಿಷು ।**
**ಪರೀಕ್ಷ್ಯಕಾರಿಣಂ ಧೀರಮತ್ಯರ್ಥಂ ಶ್ರೀರ್ನಿಷೇವತೇ ॥೩೦॥**

ಯಾವನು ತನ್ನ ಇಂದ್ರಿಯಗಳನ್ನು ಜಯಿಸಿರುತ್ತಾನೆಯೋ (ಇಂದ್ರಿಯಗಳನ್ನು ತನ್ನ ಹತೋಟಿಯಲ್ಲಿಟ್ಟುಕೊಂಡಿರುತ್ತಾನೆಯೋ) ಮತ್ತು ಅಮಾತ್ಯರನ್ನು ತನ್ನ ಹತೋಟಿಯಲ್ಲಿಟ್ಟುಕೊಂಡಿರುತ್ತಾನೆಯೋ, ಅಪರಾಧಿಗಳ ವಿಷಯದಲ್ಲಿ ನಿರ್ದಾಕ್ಷಿಣ್ಯವಾಗಿ ದಂಡಪ್ರಯೋಗಮಾಡುತ್ತಾನೆಯೋ, ಪ್ರತಿಯೊಂದು ಕಾರ್ಯಮಾಡುವಾಗಲೂ ಚೆನ್ನಾಗಿ ಯೋಚಿಸಿ ಪರೀಕ್ಷಿಸಿದ ನಂತರವೇ ಮಾಡುತ್ತಾನೆಯೋ ಅಂತಹ ಧೀರನನ್ನು ಲಕ್ಷ್ಮಿಯು ಬಹುವಾಗಿ ಸೇವಿಸುತ್ತಾಳೆ. (ಅಂತಹವನ ಬಳಿಗೆ ಲಕ್ಷ್ಮಿಯು ಒಲಿದು ಬರುತ್ತಾಳೆ.)

**ಕ್ಷುದ್ರಾಕ್ಷೇಣೇವ ಜಾಲೇನ ಝಷಾವಪಿಹಿತಾವುಭೌ ।**
**ಕಾಮಕ್ರೋಧೌ ಶರೀರಸ್ಥೌ ಪ್ರಜ್ಞಾನಂ ತೌ ವಿಲುಮ್ಪತಃ ॥೩೧॥**

ಸಣ್ಣದಾದ ರಂಧ್ರವುಳ್ಳ ಬಲೆಯಿಂದ ಮುಚ್ಚಲ್ಪಟ್ಟ ಎರಡು ಮೀನುಗಳಂತೆ ಕಾಮ-ಕ್ರೋಧಗಳು ಶರೀರದಿಂದ ಮುಚ್ಚಲ್ಪಟ್ಟಿವೆ. ಶರೀರದಲ್ಲಡಗಿರುವ ಈ ಕಾಮ-ಕ್ರೋಧಗಳು ಇಂದ್ರಿಯಗಳೆಂಬ ರಂಧ್ರಗಳ ಮೂಲಕವಾಗಿ ಹೊರಬಂದು ಮನುಷ್ಯನ ಜ್ಞಾನವನ್ನೇ ಹಾಳುಮಾಡಿಬಿಡುತ್ತವೆ.

**ಯಾಭ್ಯಾಂ ಹಿ ದೇವಾಃ ಸ್ವರ್ಯಾತುಃ ಸ್ವರ್ಗಸ್ಯ ಪಿದಧುರ್ಮುಖಮ್ ।**
**ಬಿಭ್ಯತೋಽನುಪರಾಗಸ್ಯ ಕಾಮಕ್ರೋಧೌ ಸ್ಮ ವರ್ಧಿತೌ ॥೩೨॥**

ಇಂತಹ ಕಾಮ-ಕ್ರೋಧಗಳ ಕಾರಣದಿಂದಲೇ ಸ್ವರ್ಗಕ್ಕೆ ಹೋಗಲಿಚ್ಛಿಸುವವನು ಸ್ವರ್ಗದೊಳಕ್ಕೆ ಹೋಗದಂತೆ ದೇವತೆಗಳು ಸ್ವರ್ಗದ ಬಾಗಿಲನ್ನು ಮುಚ್ಚಿಬಿಡುತ್ತಾರೆ. ಹೆಚ್ಚು ಸಂಖ್ಯೆಯಲ್ಲಿ ಮಾನವರು ಸ್ವರ್ಗಕ್ಕೆ ಬಂದುಬಿಟ್ಟಾರೆಂಬ ಭಯದಿಂದಾಗಿ ದೇವತೆಗಳೂ ಮನುಷ್ಯರಲ್ಲಿ ಕಾಮ-ಕ್ರೋಧಗಳನ್ನು ವರ್ಧಿಸುವ ಅಪೇಕ್ಷೆಯಿಂದಿರುತ್ತಾರೆ. (ಎಂತಹುದೇ ಪುಣ್ಯಕಾರ್ಯ

ಮಾಡಿದ್ದರೂ ಕಾಮ-ಕ್ರೋಧಗಳು ಕ್ಷಣಮಾತ್ರದಲ್ಲಿ ಎಲ್ಲ ಪುಣ್ಯಫಲಗಳನ್ನೂ ಹಾಳುಮಾಡಿಬಿಡುತ್ತವೆ. ತನ್ನ ಪುಣ್ಯಕರ್ಮಗಳಿಂದ ಸ್ವರ್ಗಕ್ಕೆ ಹೋಗಲು ಅರ್ಹನಾದ ಮನುಷ್ಯನು ಕಾಮ-ಕ್ರೋಧಗಳ ಪ್ರಭಾವದಿಂದಾಗಿ ಅರ್ಜಿಸಿದ ಪಾಪದಿಂದ ಸ್ವರ್ಗಕ್ಕೆ ಹೋಗಲು ಅನರ್ಹನಾಗುತ್ತಾನೆ. ಕೋಪಿಷ್ಠನಾದವನು ಕ್ಷಣಮಾತ್ರದಲ್ಲಿ ಮಹಾಪಾಪಕಾರ್ಯಗಳನ್ನು ಮಾಡಲು ಕೂಡ ಹೇಸುವುದಿಲ್ಲ. ಆದುದರಿಂದ ಪುಣ್ಯಮಾಡಿ ಸ್ವರ್ಗಕ್ಕೆ ಹೋಗುವ ಅರ್ಹತೆಯಿದ್ದರೂ ಕಾಮ-ಕ್ರೋಧಗಳನ್ನು ಜಯಿಸದವನು ಸ್ವರ್ಗಕ್ಕೆ ಹೋಗುವ ಸಾಧ್ಯತೆಯಿಲ್ಲ. ಮನುಷ್ಯನು ನಿಷ್ಕಾಮನಾಗಿ ಕರ್ಮಗಳನ್ನು ಮಾಡಬೇಕು. ಇದು ಬಹಳ ಕಷ್ಟಸಾಧ್ಯ. ದೇವತೆಗಳೇ ಉದ್ದೇಶಪೂರ್ವಕವಾಗಿ ಮನುಷ್ಯನ ಕಾಮನೆಗಳನ್ನು ಪೂರೈಸುತ್ತಾರೆ. ಒಂದು ಕಾಮನೆಯು ಪೂರ್ತಿಯಾಯಿತೆಂದರೆ ಮನಸ್ಸಿನಲ್ಲಿ ಮತ್ತೊಂದು ಕಾಮನೆಯು ಉದಯಿಸುತ್ತದೆ. ಅದಕ್ಕೆ ತುದಿ–ಮೊದಲಿಲ್ಲ. ಕಾಮದಿಂದ ಕ್ರೋಧವು ಹುಟ್ಟಿಕೊಳ್ಳುತ್ತದೆ. ಅರ್ಥಾತ್ ದೇವತೆಗಳೇ ಮನುಷ್ಯನಿಗೆ ಕಾಮ-ಕ್ರೋಧಗಳನ್ನು ಹೆಚ್ಚಿಸುತ್ತಾರೆ. ವೀತರಾಗನಾಗಿಬಿಟ್ಟರೆ, ಕಾಮ-ಕ್ರೋಧಾದಿಗಳನ್ನು ಜಯಿಸಿಬಿಟ್ಟರೆ, ಅಂತಹವನಿಗೆ ಸ್ವರ್ಗದಲ್ಲಿ ಅವಕಾಶವನ್ನೀಯಬೇಕಾಗುವುದೆಂಬ ಭಯದಿಂದ ದೇವತೆಗಳು ಹೀಗೆ ಮಾಡುತ್ತಾರೆ.)

**ಕಾಮಂ ಕ್ರೋಧಂ ಚ ಲೋಭಂ ಚ ದಮ್ಭಂ ದರ್ಪಂ ಚ ಭೂಮಿಪಃ।**
**ಸಮ್ಯಗ್ವಿಜೇತುಂ ಯೋ ವೇದ ಸ ಮಹೀಮಭಿಜಾಯತೇ ॥೩೩॥**

ಯಾವ ರಾಜನು ಕಾಮ-ಕ್ರೋಧ-ಲೋಭಗಳು, ದಾಂಭಿಕತನ, ದರ್ಪ–ಇವುಗಳನ್ನು ಸಂಪೂರ್ಣವಾಗಿ ಜಯಿಸುವ ವಿಧಾನವನ್ನು ತಿಳಿದುಕೊಂಡಿರುತ್ತಾನೆಯೋ ಅಂತಹವನು ಪೃಥ್ವಿಯನ್ನೇ ಶಾಸನಮಾಡಬಲ್ಲನು.

**ಸತತಂ ನಿಗ್ರಹೇ ಯುಕ್ತ ಇನ್ದ್ರಿಯಾಣಾಂ ಭವೇನ್ನೃಪಃ।**
**ಈಪ್ಸನ್ನರ್ಥಂ ಚ ಧರ್ಮಂ ಚ ದ್ವಿಷತಾಂ ಚ ಪರಾಭವಮ್ ॥೩೪॥**

ಆದುದರಿಂದ ಧರ್ಮಾರ್ಥಗಳನ್ನೂ, ಶತ್ರುಗಳ ಪರಾಭವವನ್ನೂ ಆಶಿಸ

ತಕ್ಕ ರಾಜನು ನಿರಂತರವಾಗಿ ಇಂದ್ರಿಯಗಳನ್ನು ನಿಗ್ರಹಿಸುವ ಅಥವಾ ಹತೋಟಿಯಲ್ಲಿಟ್ಟುಕೊಳ್ಳುವ ಪ್ರಯತ್ನದಲ್ಲಿಯೇ ಇರಬೇಕು.

**ಕಾಮಾಭಿಭೂತಃ ಕ್ರೋಧಾದ್ವಾ ಯೋ ಮಿಥ್ಯಾ ಪ್ರತಿಪದ್ಯತೇ ।**
**ಸ್ವೇಷು ಚಾನ್ಯೇಷು ವಾ ತಸ್ಯ ನ ಸಹಾಯಾ ಭವನ್ತ್ಯುತ ॥೩೫॥**

ಯಾವ ರಾಜನು ಕಾಮ-ಕ್ರೋಧಾಭಿಭೂತನಾಗಿ ಸ್ವಜನರಲ್ಲಿಯೂ ಮತ್ತು ಪರಕೀಯರಲ್ಲಿಯೂ ವಂಚನೆಯಿಂದ ವರ್ತಿಸುತ್ತಿರುತ್ತಾನೆಯೋ ಅಂತಹವನಿಗೆ ಸಮಯದಲ್ಲಿ ಯಾರೂ ಸಹಾಯಕರಾಗಿ ಬರುವುದಿಲ್ಲ.

**ಏಕೀಭೂತೈರ್ಮಹಾಪ್ರಾಜ್ಞೈಃ ಶೂರೈರರಿನಿಬರ್ಹಣೈಃ ।**
**ಪಾಣ್ಡವೈಃ ಪೃಥಿವೀಂ ತಾತ ಭೋಕ್ಷ್ಯಸೇ ಸಹಿತಃ ಸುಖೀ ॥೩೬॥**

ಪಾಂಡವರು ಪರಸ್ಪರ ಸಂಘಟಿತರಾಗಿರುವುದರಿಂದ ಏಕೀಭೂತರಾಗಿದ್ದಾರೆ. ಅವರು ಮಹಾಪ್ರಾಜ್ಞರಾಗಿರುತ್ತಾರೆ. ಶೂರರಾಗಿದ್ದಾರೆ. ಶತ್ರುಗಳನ್ನು ಸಂಹರಿಸುವುದರಲ್ಲಿ ಅತ್ಯಂತವಿಚಕ್ಷಣರಾಗಿದ್ದಾರೆ. ನೀನೂ ಸಹ ಅವರೊಡನೆ ಸೇರಿಕೊಂಡು ಪೃಥ್ವಿಯನ್ನು ಉಪಭೋಗಿಸುತ್ತಾ ಸುಖವಾಗಿರು. (ಸುಖವಾಗಿ ಭೂಮಿಯನ್ನು ಪರಿಪಾಲಿಸುತ್ತಿರು.)

ಮಗು! ಶಾಂತನುವಿನ ಮಗನಾದ ಭೀಷ್ಮನೂ, ಮಹಾರಥರಾದ ದ್ರೋಣರೂ ಹೇಳಿರುವುದು ಸತ್ಯ. ಶ್ರೀಕೃಷ್ಣನೂ-ಪಾಂಡವರೂ ನಿಶ್ಚಯವಾಗಿಯೂ ಅಜೇಯರು. ಆದುದರಿಂದ ಎಂತಹ ಕ್ಲಿಷ್ಟಕಾರ್ಯವನ್ನಾದರೂ ಅನಾಯಾಸವಾಗಿ ಮಾಡಿಮುಗಿಸುವ ಮಹಾಬಾಹುವಾದ ಶ್ರೀಕೃಷ್ಣನನ್ನೇ ಶರಣ್ಯನನ್ನಾಗಿ ಆಶ್ರಯಿಸು. ಪ್ರಸನ್ನನಾದ ಶ್ರೀಕೇಶವನು ಎರಡು ಪಕ್ಷದವರ ಸುಖಕ್ಕೂ ಕಾರಣನಾಗುತ್ತಾನೆ. ಎರಡು ಪಕ್ಷದವರನ್ನೂ ಸುಖದಲ್ಲಿಡುತ್ತಾನೆ.

**ಸುಹೃದಾಮರ್ಥಕಾಮಾನಾಂ ಯೋ ನ ತಿಷ್ಠತಿ ಶಾಸನೇ ।**
**ಪ್ರಾಜ್ಞಾನಾಂ ಕೃತವಿದ್ಯಾನಾಂ ಸ ನರಃ ಶತ್ರುನನ್ದನಃ ॥೩೯॥**

ಸುಹೃದರೂ, ಒಳ್ಳೆಯದನ್ನು ಅಪೇಕ್ಷಿಸುವವರೂ, ಪ್ರಾಜ್ಞರೂ ಮತ್ತು ವಿದ್ಯಾವಂತರೂ ಆಗಿರುವ ಮಿತ್ರರ ಉಪದೇಶದಂತೆ ಯಾವನು ನಡೆಯುವು

ದಿಲ್ಲವೋ–ಅಂತಹ ಮನುಷ್ಯನು ಶತ್ರುಗಳಿಗೆ ಮಾತ್ರವೇ ಆನಂದದಾಯಕನಾಗುತ್ತಾನೆ. (ಶಿಷ್ಟರ, ವಿದ್ಯಾವಂತರ ಮಾತನ್ನು ಕೇಳದವನು ಕ್ರಮೇಣ ವಿನಾಶಹೊಂದುತ್ತಾನೆ. ಅವನ ದುಃಸ್ಥಿತಿಯನ್ನು ನೋಡಿ ಶತ್ರುಗಳು ಆನಂದಿಸುತ್ತಾರೆ.)

**ನ ಯುದ್ಧೇ ತಾತ ಕಲ್ಯಾಣಂ ನ ಧರ್ಮಾರ್ಥೌ ಕುತಃ ಸುಖಮ್ ।**
**ನ ಚಾಪಿ ವಿಜಯೋ ನಿತ್ಯಂ ಮಾ ಯುದ್ಧೇ ಚೇತ ಆಧಿಥಾಃ ॥೪೦॥**

ಯುದ್ಧಮಾಡುವುದು ಕಲ್ಯಾಣಕರವಲ್ಲ. ಯುದ್ಧದಿಂದ ಧರ್ಮಾರ್ಥಗಳ ಸಾಧನೆಯಾಗುವುದಿಲ್ಲ. ಧರ್ಮಾರ್ಥಗಳ ಸಾಧನೆಯೇ ಆಗದೆಂದಮೇಲೆ ಸುಖವೆಲ್ಲಿಂದ ಬಂತು? ಯುದ್ಧದಲ್ಲಿ ಜಯವನ್ನೇ ಗಳಿಸಿದರೂ, ಸೋತು ಹೋದರೂ ಸುಖವಂತೂ ಇಲ್ಲ. ಯುದ್ಧಮಾಡಿದರೆ ವಿಜಯವು ಲಭಿಸಿಯೇ ಲಭಿಸುವುದೆಂಬ ನಿಶ್ಚಯವೂ ಇಲ್ಲ. ವಿಜಯವೆಂಬುದು ಅನಿಶ್ಚಿತವಾದುದು. ಅನಿತ್ಯವಾದುದು. ಈಗ ವಿಜಯಗಳಿಸಿದವನು ಮತ್ತೊಮ್ಮೆ ಪರಾಜಿತನೂ ಆಗಬಹುದು. ಯುದ್ಧದಲ್ಲಿ ಇಷ್ಟು ದೋಷಗಳಿವೆಯಾದುದರಿಂದ ಯುದ್ಧ ಮಾಡಲು ಮನಗೊಡಬೇಡ.

ನಿಮ್ಮಿಬ್ಬರಲ್ಲಿಯೂ ಪರಸ್ಪರವಾಗಿ ಭೇದಭಾವವುಂಟಾಗಿರುವುದನ್ನು ನೋಡಿ ಭಯಗೊಂಡ ಮಹಾಪ್ರಾಜ್ಞನಾದ ಭೀಷ್ಮ, ನಿನ್ನ ತಂದೆ ಮತ್ತು ಬಾಹ್ಲಿಕ– ಇವರೆಲ್ಲರೂ ಸೇರಿ ಪಾಂಡುಪುತ್ರರಿಗೆ ದೇಶವನ್ನು ವಿಭಾಗಮಾಡಿ ಕೊಟ್ಟರು. ಅವರಿಗಂದು ಭಾಗಮಾಡಿಕೊಟ್ಟ ರಾಜ್ಯದ ಫಲವನ್ನು ನೀನಿಂದು ಅನುಭವಿಸುತ್ತಿರುವೆ. ಪಾಂಡುವೀರರು ಇಂದ್ರಪ್ರಸ್ಥವನ್ನು ರಾಜಧಾನಿಯನ್ನಾಗಿ ಮಾಡಿಕೊಂಡನಂತರ ಪೃಥ್ವಿಯ ಎಲ್ಲ ವೀರರನ್ನೂ ಗೆದ್ದು ಸಂಪೂರ್ಣರಾಜ್ಯ ವನ್ನು ನಿಷ್ಕಂಟಕವನ್ನಾಗಿ ಮಾಡಿದ್ದರು. ಅಂತಹ ಶೂರ-ವೀರರಿಂದ ನಿಷ್ಕಂಟಕವಾಗಿ ಮಾಡಲ್ಪಟ್ಟ ರಾಜ್ಯವನ್ನು ನೀನಿಂದು ಉಪಭೋಗಿಸುತ್ತಿ ರುವೆ. ಅರಿಂದಮನೇ! ನೀನು ನಿನ್ನ ಮಂತ್ರಿಗಳೊಡನೆ ಮುಂದೆಯೂ ಈ ನಿಷ್ಕಂಟಕವಾದ ಸಾಮ್ರಾಜ್ಯವನ್ನು ಉಪಭೋಗಿಸಬೇಕೆಂದು ಆಶಿಸುವು ದಾದರೆ ಪಾಂಡುಪುತ್ರರಿಗೆ ನ್ಯಾಯೋಚಿತವಾದ ಅರ್ಧರಾಜ್ಯವನ್ನು ಕೊಟ್ಟುಬಿಡು. ಅಮಾತ್ಯಸಹಿತನಾದ ನೀನು ಜೀವಿಸಿರಲು, ಉಳಿದ ಅರ್ಧ

ರಾಜ್ಯವೇ ಪರ್ಯಾಪ್ತವಾಗಿದೆ. ಸುಹೃದರ ಮಾತಿನಂತೆ ನಡೆದುಕೋ. ಇದರಿಂದ ನಿನಗೆ ಮಹತ್ತರವಾದ ಯಶಸ್ಸು ಲಭಿಸುತ್ತದೆ.

**ಶ್ರೀಮದ್ಭಿರಾತ್ಮವದ್ಭಿಸ್ತೈರ್ಬುದ್ಧಿಮದ್ಭಿರ್ಜಿತೇನ್ದ್ರಿಯೈಃ ।**
**ಪಾಣ್ಡವೈರ್ವಿಗ್ರಹಸ್ತಾತ ಭ್ರಂಶಯೇನ್ಮಹತಃ ಸುಖಾತ್ ॥೪೫॥**

ಶ್ರೀಮಂತರಾದ, ಮನೋನಿಗ್ರಹವಿರುವ, ಬುದ್ಧಿವಂತರಾದ, ಜಿತೇಂದ್ರಿಯರಾದ ಪಾಂಡವರೊಡನೆ ಮಾಡುವ ಯುದ್ಧವು ನಿಮ್ಮನ್ನು ಮಹತ್ತಾದ ಸುಖದಿಂದ ವಂಚಿತರಾಗುವಂತೆ ಮಾಡುತ್ತದೆ.

ಭರತರ್ಷಭನೇ! ಪಾಂಡವರಿಗೆ ಸಲ್ಲಬೇಕಾದ ಅರ್ಧರಾಜ್ಯವನ್ನು ಅವರಿಗೆ ಬಿಟ್ಟುಕೊಟ್ಟು, ಸುಹೃದರಿಗೆ ಈಗ ನಿನ್ನ ವಿಷಯದಲ್ಲುಂಟಾಗಿರುವ ಕೋಪವನ್ನು ಶಮನಗೊಳಿಸಿ, ಉಳಿದ ಅರ್ಧರಾಜ್ಯವನ್ನು ಯಥೋಚಿತವಾಗಿ ಆಳು. ಮಗು! ನಿನ್ನ ಕಾಮ ಮತ್ತು ಕ್ರೋಧಗಳಿಂದಾಗಿ ಹದಿಮೂರು ವರ್ಷಗಳ ಕಾಲ ಪಾಂಡವರನ್ನು ಕಾಡಿಗಟ್ಟಿ, ಅವರಿಗೆ ಮಾಡಿರುವ ಅನ್ಯಾಯವೇ ಸಾಕಾಗಿದೆ. ನಿನ್ನ ಕಾಮ-ಕ್ರೋಧಗಳ ಕಾರಣದಿಂದಾಗಿ ಅವರಿಗೆ ಮಾಡಿರುವ ಅಪಕಾರವನ್ನು ಸಂಧಿಯ ಮೂಲಕವಾಗಿ ಉಪಶಮನಮಾಡು. ಕಾಮ-ಕ್ರೋಧಗಳನ್ನೂ ಪರಿತ್ಯಜಿಸು. ಪಾಂಡವರಿಗೆ ಸೇರಬೇಕಾಗಿರುವ ರಾಜ್ಯವನ್ನು ಅವರಿಗೆ ಕೊಡದೇ ನಿನ್ನಲ್ಲಿಯೇ ಉಳಿಸಿಕೊಳ್ಳಲು ಇಚ್ಛಿಸಿರುವೆಯಲ್ಲವೇ? ನೀನು ಪಾಂಡವರನ್ನು ಜಯಿಸಲು ಶಕ್ತನಲ್ಲ. ಇದನ್ನು ನಿನಗೆ ಉಳಿಸಿಕೊಡಲು ಮಹಾಕೋಪಿಷ್ಠನಾದ ಕರ್ಣನಾಗಲೀ, ನಿನ್ನ ತಮ್ಮನಾದ ದುಃಶಾಸನನಾಗಲೀ ಶಕ್ತರಲ್ಲ. ನನ್ನ ಈ ಅಭಿಪ್ರಾಯವೇನೋ ಸತ್ಯವಾದುದು. ಭೀಷ್ಮ, ದ್ರೋಣ, ಕೃಪ, ಕರ್ಣ, ಭೀಮಸೇನ, ಧನಂಜಯ ಮತ್ತು ಧೃಷ್ಟದ್ಯುಮ್ನರು ಕುಪಿತರಾದರೆಂದರೆ ಈ ಪೃಥ್ವಿಯಲ್ಲಿ ಪ್ರಜೆಗಳೇ ಉಳಿಯುವುದಿಲ್ಲ. ಕ್ರೋಧಪರವಶನಾದ ನೀನು ಖಂಡಿತವಾಗಿಯೂ ಕುರುಗಳ ವಧೆಮಾಡಬೇಡ. ನಿನ್ನ ಸಲುವಾಗಿ ಈ ಸಂಪೂರ್ಣಜಗತ್ತಿನ ವಿನಾಶವಾಗುವುದು ಬೇಡ.

**ಯಚ್ಚ ತ್ವಂ ಮನ್ಯಸೇ ಮೂಢ ಭೀಷ್ಮದ್ರೋಣಕೃಪಾದಯಃ ।**
**ಯೋತ್ಸ್ಯನ್ತೇ ಸರ್ವಶಕ್ತ್ಯೇತಿ ನೈತದದ್ಯೋಪಪದ್ಯತೇ ॥೫೧॥**

ಈ ಒಂದು ಭರವಸೆಯು ನಿನಗಿರಬಹುದು : ಭೀಷ್ಮ-ದ್ರೋಣ-ಕೃಪಾದಿಗಳು ತಮ್ಮ ಸರ್ವಶಕ್ತಿಯನ್ನೂ ವಿನಿಯೋಗಿಸಿ ಯುದ್ಧಮಾಡುತ್ತಾರೆಂದು ನೀನು ಭಾವಿಸಿರುವೆ. ಆದರೆ ಅದು ಈಗ ಸಾಧ್ಯವಾಗದ ಮಾತು.

**ಸಮಂ ಹಿ ರಾಜ್ಯಂ ಪ್ರೀತಿಶ್ಚ ಸ್ಥಾನಂ ಹಿ ವಿದಿತಾತ್ಮನಾಮ್।**
**ಪಾಣ್ಡವೇಷ್ವಥ ಯುಷ್ಮಾಸು ಧರ್ಮಸ್ತ್ವಭ್ಯಧಿಕಸ್ತತಃ ॥೫೨॥**

ಏಕೆಂದರೆ : ಆತ್ಮಜ್ಞಾನಿಗಳಾದ ಈ ಪುರುಷಪುಂಗವರ ದೃಷ್ಟಿಯಿಂದ ಈ ರಾಜ್ಯವು ನಿನ್ನಲ್ಲಿದ್ದರೂ-ಅವರಲ್ಲಿದ್ದರೂ ಒಂದೇ. ಅವರ ಹೃದಯಗಳಲ್ಲಿ ನಿಮ್ಮಿಬ್ಬರ ಮೇಲೂ ಒಂದೇ ವಿಧವಾದ ಪ್ರೀತಿ-ವಿಶ್ವಾಸಗಳಿವೆ. ನಿಮ್ಮಿಬ್ಬರಿಗೂ ಒಂದೇ ಸ್ಥಾನವನ್ನು ಅವರು ಕೊಡುತ್ತಾರೆ. ಒಬ್ಬರು ಮೇಲೆಂದಾಗಲೀ ಮತ್ತೊಬ್ಬರು ಕೀಳೆಂದಾಗಲೀ ಅವರು ಭಾವಿಸುವುದಿಲ್ಲ. ಹೀಗಿದ್ದರೂ ಧರ್ಮಾತ್ಮರಾದ ಅವರು ಧರ್ಮದ ಕಡೆಗೇ ವಾಲುವುದು ಸಹಜವಾಗಿಯೇ ಇದೆ. ಆದುದರಿಂದ ಸರ್ವಶಕ್ತಿಯನ್ನೂ ವಿನಿಯೋಗಿಸಿ ಅವರು ನಿನ್ನ ಪರವಾಗಿ ಯುದ್ಧಮಾಡಲಾರರು.

**ರಾಜಪಿಣ್ಡಭಯಾದೇತೇ ಯದಿ ಹಾಸ್ಯನ್ತಿ ಜೀವಿತಮ್ ।**
**ನ ಹಿ ಶಕ್ಷ್ಯನ್ತಿ ರಾಜಾನಂ ಯುಧಿಷ್ಠಿರಮುದೀಕ್ಷಿತುಮ್ ॥೫೩॥**

ರಾಜನ ಅನ್ನವನ್ನು ತಿಂದಿದ್ದೇವೆಂಬ ಒಂದೇ ಒಂದು ಕಾರಣದಿಂದ–ಈ ಸಮಯದಲ್ಲಿ ನಿನಗೆ ಪ್ರತಿಯಾಗಿ ನಡೆದುಕೊಂಡರೆ ಪಾಪಸಂಘಟನೆಯಾಗುವುದೆಂಬ ಭಯದಿಂದ–ಇವರೆಲ್ಲರೂ ನಿನ್ನ ಪರವಾಗಿ ಯುದ್ಧಮಾಡಿ ಯುದ್ಧದಲ್ಲಿ ಪ್ರಾಣವನ್ನೂ ಬಿಡಬಹುದು. ಆದರೆ ಈ ಎಲ್ಲ ಮಹಾಯೋಧರೂ ಧರ್ಮಾತ್ಮನಾದ ಯುಧಿಷ್ಠಿರನನ್ನು ಕೋಪೋದ್ರಿಕ್ತವಾದ ವಕ್ರದೃಷ್ಟಿಯಿಂದ ನೋಡಲು ಖಂಡಿತವಾಗಿಯೂ ಸಮರ್ಥರಲ್ಲ. (ಉಪ್ಪುಂಡ ಮನೆಗೆ ಎರಡು ಬಗೆಯಬಾರದೆಂಬ ದೃಷ್ಟಿಯಿಂದ ನಿನ್ನ ಪರವಾಗಿ ಯುದ್ಧಮಾಡಿ ಪ್ರಾಣತೊರೆಯುವರೇ ಹೊರತು ತಮ್ಮ ಸರ್ವಶಕ್ತಿಯನ್ನೂ ಕೇಂದ್ರೀಕರಿಸಿ ಯುಧಿಷ್ಠಿರನನ್ನಾಗಲೀ ಅವನ ಅನುಜರನ್ನಾಗಲೀ ಖಂಡಿತವಾಗಿಯೂ ಸಂಹರಿಸುವುದಿಲ್ಲ.)

**ನ ಲೋಭಾದರ್ಥಸಮ್ಪತ್ತಿರ್ನರಾಣಾಮಿಹ ದೃಶ್ಯತೇ ।**
**ತದಲಂ ತಾತ ಲೋಭೇನ ಪ್ರಶಾಮ್ಯ ಭರತರ್ಷಭ ॥೫೪॥**

ಭರತರ್ಷಭನೇ! ಪ್ರಪಂಚದಲ್ಲಿ ಲೋಭದಿಂದಲೇ ಅರ್ಥ ಸಂಪತ್ತಿಯುಂಟಾಗುವ ನಿದರ್ಶನವು ನಮಗೆಲ್ಲೂ ಕಂಡುಬಂದಿಲ್ಲ. ಆದುದರಿಂದ ನಿನ್ನ ರಾಜ್ಯಲೋಭವನ್ನು ಸಾಕುಮಾಡು. ಪಾಂಡವರೊಡನೆ ಸಂಧಿಗೆ ಸಮ್ಮತಿಸು."*

ಂ೨೯ನೆಯ ಅಧ್ಯಾಯವು ಮುಗಿಯಿತು.

೧೩೦ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ)

## ದುರ್ಯೋಧನನ ಷಡ್ಯಂತ್ರವನ್ನು ಸಾತ್ಯಕಿಯು ಭೇದಿಸಿದುದು : ಶ್ರೀಕೃಷ್ಣನ ಸಿಂಹಗರ್ಜನೆ : ಧೃತರಾಷ್ಟ್ರ-ವಿದುರರು ಪುನಃ ದುರ್ಯೋಧನನನ್ನು ಸಮಾಧಾನಗೊಳಿಸಿದುದು

ತಾಯಿಯಾಡಿದ ಮಾತುಗಳೂ ದುರ್ಯೋಧನನ ವಿಷಯದಲ್ಲಿ ಗೋರ್ಕಲ್ಲ ಮೇಲೆ ಮಳೆಗರೆದಂತೆ ನಿಷ್ಫಲವಾದುವು.

ವೈಶಂಪಾಯನರು ಜನಮೇಜಯನನ್ನು ಕುರಿತು ಹೇಳುತ್ತಾರೆ :

---

* ಗಾಂಧಾರಿಯ ಮಾತುಗಳು ಹೃದ್ಯವಾಗಿವೆ. ಭೀಷ್ಮ-ದ್ರೋಣಾದಿಗಳ ವಿಷಯವಾಗಿ ಅವಳು ಹೇಳಿರುವ ಮಾತುಗಳು ಕಡೆಯಲ್ಲಿ ಸತ್ಯವಾಗಿ ಪರಿಣಮಿಸುತ್ತವೆ. ಅವಳು ಈ ಪ್ರಕರಣದಲ್ಲಿ ಹೇಳಿರುವ ಪ್ರತಿಯೊಂದು ಮಾತೂ ಆಣಿಮುತ್ತಿನಂತಿದೆ. ಗಂಡನ ವಿಷಯದಲ್ಲಾಗಲೀ, ಮಗನ ವಿಷಯದಲ್ಲಾಗಲೀ, ಭೀಷ್ಮ-ದ್ರೋಣರ ವಿಷಯದಲ್ಲಾಗಲೀ ನಿರ್ಭಯದಿಂದ ಮಾತನಾಡಿರುತ್ತಾಳೆ. ಸತ್ಯಾಂಶವನ್ನು ಯಥಾವತ್ತಾಗಿ ಮುಂದಿಟ್ಟಿದ್ದಾಳೆ. ಇಂತಹ ಪ್ರಕರಣಗಳನ್ನು ಓದಿದರೆ ಹೊಸ-ಹೊಸ ಭಾವನೆಗಳು ಮೂಡುತ್ತಿರುತ್ತವೆ. ಭಾರತದ ನಾರಿಯರಲ್ಲಿ ಸ್ತ್ರೀಯರ ಸ್ಥಾನ-ಮಾನಗಳೇನೆಂಬುದನ್ನು ಗಾಂಧಾರಿಯು ಎತ್ತಿತೋರಿಸಿದ್ದಾಳೆ. ಹಿಂದಿನದೆಲ್ಲವನ್ನೂ ಹಳಿಯಲು ಹೋಗುವ ಸಮಾಜಸುಧಾರಕರು ಇಂತಹ ಪ್ರಕರಣಗಳನ್ನು ಮನದಟ್ಟು ಮಾಡಿಕೊಳ್ಳುವುದೊಳ್ಳೆಯದು.

**ತತ್ತು ವಾಕ್ಯಮನಾದೃತ್ಯ ಸೋಽರ್ಥವಾನ್ಮಾತೃಭಾಷಿತಮ್ ।**
**ಪುನಃ ಪ್ರತಸ್ಥೇ ಸಂರಮ್ಭಾತ್ಸಕಾಶಮಕೃತಾತ್ಮನಾಮ್ ॥೧॥**

"ಜನಮೇಜಯ! ತಾಯಿಯು ಹೇಳಿದ ನೀತಿಯುಕ್ತವಾದ ಮಾತುಗಳನ್ನೂ ದುರ್ಯೋಧನನು ಅನಾದರಣೆಮಾಡಿ ಪುನಃ ಕೋಪ ಗೊಂಡು ಅಜಿತೇಂದ್ರಿಯರಾದ ಮಂತ್ರಿಗಳ ಬಳಿಗೆ ಹೊರಟುಹೋದನು. ಸಭೆಯಿಂದ ಹೊರಟ ದುರ್ಯೋಧನನು ದ್ಯೂತವಿದ್ಯಾವಿಶಾರದನಾದ, ಸುಬಲನ ಮಗನಾದ ಶಕುನಿರಾಜನೊಡನೆ ಮಂತ್ರಾಲೋಚನೆಮಾಡಿದನು.

ದುರ್ಯೋಧನ, ಕರ್ಣ, ಸುಬಲನ ಮಗನಾದ ಶಕುನಿ ಮತ್ತು ದುಃಶಾಸನ–ಈ ನಾಲ್ವರ ಪರಸ್ಪರ ಮಾತುಕತೆಗಳು ಹೀಗಿದ್ದುವು :

**ಪುರಾಯಮಸ್ಮಾನ್ಗೃಹ್ಣಾತಿ ಕ್ಷಿಪ್ರಕಾರೀ ಜನಾರ್ದನಃ ।**
**ಸಹಿತೋ ಧೃತರಾಷ್ಟ್ರೇಣ ರಾಜ್ಞಾ ಶಾನ್ತನವೇನ ಚ ॥೪॥**

**ವಯಮೇವ ಹೃಷೀಕೇಶಂ ನಿಗೃಹ್ಣೀಮ ಬಲಾದಿವ ।**
**ಪ್ರಸಹ್ಯ ಪುರುಷವ್ಯಾಘ್ರಮಿನ್ದ್ರೋ ವೈರೋಚನಿಂ ಯಥಾ ॥೫॥**

"ಕೆಲಸಗಳನ್ನು ಅತಿಶೀಘ್ರವಾಗಿ ಮಾಡುವ ಸಾಮರ್ಥ್ಯವುಳ್ಳ ಜನಾರ್ದನನು ಶಾಂತನವನೊಡನೆ ಮತ್ತು ಧೃತರಾಷ್ಟ್ರನೊಡನೆ ಸಮಾಲೋಚಿಸಿ ನಮ್ಮನ್ನು ಬಂಧಿಸಿ ಯುಧಿಷ್ಠಿರನಿರುವೆಡೆಗೆ ಕರೆದೊಯ್ಯುವುದು ನಿಶ್ಚಯ. ಅದಕ್ಕೆ ಮೊದಲು ನಾವೇ–ಇಂದ್ರನು ವಿರೋಚನನ ಮಗನಾದ ಬಲಿಯನ್ನು ಬಂಧಿಸಿದಂತೆ–ಪುರುಷವ್ಯಾಘ್ರನಾದ ಹೃಷೀಕೇಶನನ್ನು ಬಲಾತ್ಕಾರಪೂರ್ವಕವಾಗಿ ಬಂಧಿಸಿಬಿಡೋಣ.

**ಶ್ರುತ್ವಾ ಗೃಹೀತಂ ವಾರ್ಷ್ಣೇಯಂ ಪಾಣ್ಡವಾ ಹತಚೇತಸಃ ।**
**ನಿರುತ್ಸಾಹಾ ಭವಿಷ್ಯನ್ತಿ ಭಗ್ನದಂಷ್ಟ್ರಾ ಇವೋರಗಾಃ ॥೬॥**

ವಾರ್ಷ್ಣೇಯನು ನಮ್ಮಿಂದ ಬಂಧಿತನಾದುದನ್ನು ತಿಳಿದೊಡನೆಯೇ ಪಾಂಡವರು – ಹಲ್ಲುಕಿತ್ತ ಸರ್ಪಗಳಂತೆ–ನಿರುತ್ಸಾಹರಾಗುತ್ತಾರೆ. ಮಹಾ ಬಾಹುವಾದ ಕೃಷ್ಣನೇ ಪಾಂಡವರಿಗೆ ಕಲ್ಯಾಣದಾಯಕನು ಮತ್ತು ಕವಚ ದೋಪಾದಿಯಲ್ಲಿ ಅವರ ರಕ್ಷಣೆಯಲ್ಲಿಯೇ ಸದಾ ನಿರತನಾಗಿರತಕ್ಕವನು.

ವರದನಾದ, ಯದುವಂಶಶಿರೋಮಣಿಯಾದ, ಪುರುಷರ್ಷಭನಾದ ಕೃಷ್ಣನು ನಮ್ಮ ಬಂದಿಯಾಗಿಬಿಟ್ಟರೆ ಸೋಮಕರಿಂದ ಕೂಡಿದ ಪಾಂಡವರು ಉದ್ಯಮ ಶೂನ್ಯರಾಗುತ್ತಾರೆ. ಕೃಷ್ಣನಿಲ್ಲದಿದ್ದರೆ ಅವರಿಗೇನು ಮಾಡಬೇಕೆಂಬುದೇ ತೋರುವುದಿಲ್ಲ. ಈ ಕಾರಣದಿಂದ ನಾವು ಬಹುಶೀಘ್ರವಾಗಿ ಕಾರ್ಯಗಳನ್ನು ಮಾಡಿ ಮುಗಿಸುವ ಸಾಮರ್ಥ್ಯವುಳ್ಳ ಕೇಶವನನ್ನು ಈ ಕುರುರಾಜಸಭೆಯಲ್ಲಿಯೇ–ಧೃತರಾಷ್ಟ್ರನು ಪ್ರಲಪಿಸುತ್ತಿರುವಾಗಲೇ–ಬಂಧಿಸಿ ಕಾರಾಗೃಹದಲ್ಲಿಟ್ಟು ಅನಂತರ ಶತ್ರುಗಳೊಡನೆ ಯುದ್ಧಮಾಡೋಣ."

ದುರ್ಹೃದಯರಾದ, ಪಾಪಿಷ್ಠರಾದ ದುರ್ಯೋಧನಾದಿಗಳ ಪಾಪಪೂರಿತವಾದ ಈ ಕೆಟ್ಟ ಅಭಿಪ್ರಾಯವನ್ನು ಪರೇಂಗಿತಜ್ಞನಾದ ವಿದ್ವಾಂಸನಾದ ಸಾತ್ಯಕಿಯು ಬಹಳಬೇಗ ತಿಳಿದುಕೊಂಡನು. ಒಡನೆಯೇ ಸಾತ್ಯಕಿಯು ಸಭಾಭವನದಿಂದ ಹೊರಕ್ಕೆ ಬಂದು ಕೃತವರ್ಮನನ್ನು ಸಂಧಿಸಿ ಹೇಳಿದನು.:

"ಕೃತವರ್ಮ! ನೀನೀಗಲೇ ಶೀಘ್ರಾತಿಶೀಘ್ರವಾಗಿ ಸೇನೆಯನ್ನು ಸಜ್ಜುಗೊಳಿಸು. ನೀನೂ ಕವಚವನ್ನು ತೊಟ್ಟುಕೊಂಡು ವ್ಯೂಹಾಕಾರದಲ್ಲಿ ಸಜ್ಜಾದ ಸೇನೆಯೊಡನೆ ಸಭಾಭವನದ ಮಹಾದ್ವಾರದಲ್ಲಿ ಉಪಸ್ಥಿತನಾಗಿರು. ನಾನು ಅಕ್ಲಿಷ್ಟಕರ್ಮನಾದ ಶ್ರೀಕೃಷ್ಣನಿಗೆ ಈ ವಿಷಯವನ್ನು ತಿಳಿಸಿ ಬರುವವರೆಗೂ ನೀನು ಮಹಾದ್ವಾರದಲ್ಲಿಯೇ ಸಜ್ಜಾದ ಸೇನೆಯೊಡನೆ ನಿಂತಿರಬೇಕು."

ಸಾತ್ಯಕಿಯು ಕೃತವರ್ಮನೊಡನೆ ಹೀಗೆ ಹೇಳಿ–ಸಿಂಹವು ಗುಹೆಯನ್ನು ಪ್ರವೇಶಮಾಡುವಂತೆ–ಸಭಾಭವನವನ್ನು ಪುನಃ ಪ್ರವೇಶಿಸಿ ಮಹಾತ್ಮನಾದ ಶ್ರೀಕೇಶವನಿಗೆ ದುರ್ಯೋಧನಾದಿಗಳ ಯೋಜನೆಯನ್ನು ವಿವರಿಸಿ ಹೇಳಿದನು. ಅನಂತರದಲ್ಲಿ ಸಾತ್ಯಕಿಯು ಧೃತರಾಷ್ಟ್ರನೊಡನೆಯೂ ವಿದುರನೊಡನೆಯೂ ಮಾತನಾಡಿದನು.

ಸಾತ್ಯಕಿಯು ನಸುನಗುತ್ತಾ ದುರ್ಯೋಧನಾದಿಗಳ ದುರ್ಯೋಜನೆಯ ವಿಷಯವನ್ನು ಧೃತರಾಷ್ಟ್ರಾದಿಗಳ ಮುಂದಿಡುತ್ತಾ ಹೇಳಿದನು :

**ಧರ್ಮಾದರ್ಥಾಚ್ಚ ಕಾಮಾಚ್ಚ ಕರ್ಮ ಸಾಧುವಿಗರ್ಹಿತಮ್ ।**
**ಮನ್ದಾಃ ಕರ್ತುಮಿಹೇಚ್ಛನ್ತಿ ನ ಚಾವಾಪ್ಯಂ ಕಥಂಚನ ॥೧೪॥**

“ಧರ್ಮದ ದೃಷ್ಟಿಯಿಂದಲೂ, ಅರ್ಥದ ದೃಷ್ಟಿಯಿಂದಲೂ ಮತ್ತು ಕಾಮದ ದೃಷ್ಟಿಯಿಂದಲೂ ಸತ್ಪುರುಷರಿಂದ ನಿಂದ್ಯವಾದ ಒಂದು ಕಾರ್ಯವನ್ನು ಮಾಡಲು ಕೆಲವು ಮೂರ್ಖರು ಇಚ್ಛಿಸಿದ್ದಾರೆ. ಆದರೆ ಅದನ್ನು ಕಾರ್ಯಗತಮಾಡಲು ಅವರಿಂದ ಖಂಡಿತವಾಗಿಯೂ ಸಾಧ್ಯವಾಗುವುದಿಲ್ಲ.

**ಪುರಾ ವಿಕುರ್ವತೇ ಮೂಢಾಃ ಪಾಪಾತ್ಮಾನಃ ಸಮಾಗತಾಃ ।**
**ಧರ್ಷಿತಾಃ ಕಾಮಮನ್ಯುಭ್ಯಾಂ ಕ್ರೋಧಲೋಭವಶಾನುಗಾಃ ॥೧೫॥**

ಕಾಮ ಮತ್ತು ಕೋಪಗಳಿಂದ ಉದ್ರೇಕಿಸಲ್ಪಟ್ಟ (ಕಾಮ-ಕ್ರೋಧಗಳಿಂದ ಆಕ್ರಮಿಸಲ್ಪಟ್ಟ) ಮತ್ತು ಕ್ರೋಧ ಮತ್ತು ಲೋಭಗಳಿಗೆ ವಶರಾಗಿರುವ ಪಾಪಾತ್ಮರಾದ ಮೂಢರು ಇಲ್ಲಿಗೆ ಬಂದು ಮೊದಲು ಗದ್ದಲವನ್ನೆಬ್ಬಿಸುತ್ತಾರೆ.

**ಇಮಂ ಹಿ ಪುಣ್ಡರೀಕಾಕ್ಷಂ ಜಿಘೃಕ್ಷನ್ತ್ಯಲ್ಪಚೇತಸಃ ।**
**ಪಟೇನಾಗ್ನಿಂ ಪ್ರಜ್ವಲಿತಂ ಯಥಾ ಬಾಲಾ ಯಥಾ ಜಡಾಃ ॥೧೬॥**

ಯಾವ ರೀತಿಯಲ್ಲಿ ಅರಿಯದ ಹುಡುಗರು, ಮೂರ್ಖರು, ಜಡರು ಪ್ರಜ್ವಲಿಸುತ್ತಿರುವ ಬೆಂಕಿಯನ್ನು ವಸ್ತ್ರದಿಂದ ಕಟ್ಟಲು ಪ್ರಯತ್ನಿಸುವರೋ ಅದೇ ರೀತಿಯಲ್ಲಿ ಅಲ್ಪಬುದ್ಧಿಯವರಾದ ಕೌರವರು ಪುಂಡರೀಕಾಕ್ಷನನ್ನು ಬಂಧಿಸಲಿಚ್ಛಿಸಿದ್ದಾರೆ.”

ಸಾತ್ಯಕಿಯ ಮಾತನ್ನು ಕೇಳಿ ದೀರ್ಘದರ್ಶಿಯಾದ ವಿದುರನು ಆ ಕೌರವಸಭೆಯಲ್ಲಿ ಮಹಾಬಾಹುವಾದ ಧೃತರಾಷ್ಟ್ರನನ್ನು ಕುರಿತು ಹೇಳಿದನು :

**ರಾಜನ್ಪರೀತಕಾಲಾಸ್ತೇ ಪುತ್ರಾಃ ಸರ್ವೇ ಪರಂತಪ ।**
**ಅಶಕ್ಯಮಯಶಸ್ಯಂ ಚ ಕರ್ತುಂ ಕರ್ಮ ಸಮುದ್ಯತಾಃ ॥೧೮॥**

“ಮಹಾರಾಜ! ನಿನ್ನ ಎಲ್ಲ ಮಕ್ಕಳ ಆಯುಷ್ಯವೂ ಮುಗಿದುಹೋಗಿದೆ. ಸಾಧಿಸಲು ಅಶಕ್ಯವಾದ ಮತ್ತು ಅತ್ಯಂತಹೇಯವಾದ ಕಾರ್ಯಮಾಡಲು ಇವರು ಉದ್ಯುಕ್ತರಾಗಿದ್ದಾರೆ. ನನಗೆ ತಿಳಿದುಬಂದಿರುವ ವರ್ತಮಾನದ ಪ್ರಕಾರ ನಿನ್ನ ಮಕ್ಕಳು ಪುಂಡರೀಕಾಕ್ಷನನ್ನು ಅವಮಾನಗೊಳಿಸಿ ಇವನ ಮೇಲೆ ಬಲಪ್ರಯೋಗಮಾಡಿ ಸಾಕ್ಷಾತ್ ಇಂದ್ರನ ತಮ್ಮನಾದ ಇವನನ್ನು ಬಂಧಿಸಬೇಕೆಂದು ನಿಶ್ಚಯಿಸಿದ್ದಾರೆ. ಆದರೆ, ಧೃತರಾಷ್ಟ್ರ! ಇಷ್ಟು

ಮಾತ್ರ ನಿಶ್ಯಯ. ನಾನು ಮೊದಲೇ ಹೇಳಿದಂತೆ ಇವರ ಆಯುಃಪ್ರಮಾಣವು ಮುಗಿದುಹೋಗಿರುವುದರಿಂದ ಇವರು ಈ ಅಕಾರ್ಯದಲ್ಲಿ ಪ್ರವರ್ತಿಸಿದ್ದಾರೆ. ಪುರುಷಶಾರ್ದೂಲನಾದ, ಎದುರಿಸಿ ನಿಲ್ಲಲೂ ಮತ್ತು ಹತ್ತಿರಹೋಗಲು ಕೂಡ ಅಸಾಧ್ಯನಾದ ಇವನ ಸಮೀಪಕ್ಕೆ ಹೋಗುವ ನಿನ್ನ ಮಕ್ಕಳು – ಪತಂಗದ ಹುಳುಗಳು ಯಜ್ಞೇಶ್ವರನ ಸಮೀಪಕ್ಕೆ ಹೋಗಿ ಗತಾಸುಗಳಾಗಿ ಯಜ್ಞೇಶ್ವರನಲ್ಲಿ ಬೀಳುವಂತೆ – ಪ್ರಾಣತೊರೆದು ಕೆಳಗುರುಳುತ್ತಾರೆ. ಶ್ರೀಕೃಷ್ಣನೇನಾದರೂ ಇಚ್ಛಿಸಿದ್ದೇ ಆದರೆ, ಕೋಪಗೊಂಡ ಇವನು, ತನ್ನೆದುರಾಗಿ ಯುದ್ಧಮಾಡಲು ಬರುವ ಎಲ್ಲ ಯೋಧರನ್ನೂ ಏಕಕಾಲದಲ್ಲಿ ಎದುರಿಸಿ ನಿಂತು–ಸಿಂಹವು ಆನೆಗಳನ್ನು ಸಂಹರಿಸುವಂತೆ – ಎಲ್ಲರನ್ನೂ ಏಕಕಾಲದಲ್ಲಿ ಯಮಾಲಯಕ್ಕೆ ಕಳುಹಿಸಿಬಿಟ್ಟಾನು. ಆದರೆ ಪುರುಷೋತ್ತಮನಾದ ಶ್ರೀಕೃಷ್ಣನು ನಿಂದಿತವಾದ, ಪಾಪಕರವಾದ ಕಾರ್ಯವನ್ನೆಂದಿಗೂ ಮಾಡತಕ್ಕವನಲ್ಲ. ಅಚ್ಯುತನೆಂದು ಕರೆಯಲ್ಪಡುವ ಪುರುಷೋತ್ತಮನು ತನ್ನ ಹೆಸರಿಗೆ ಅನ್ವರ್ಥವಾಗಿ ಧರ್ಮದಿಂದ ಎಂದಿಗೂ ಚ್ಯುತನಾಗತಕ್ಕವನಲ್ಲ. ಧರ್ಮದ ಹಾದಿಯನ್ನು ಬಿಟ್ಟು ಹೋಗತಕ್ಕವನಲ್ಲ."

ಜನಮೇಜಯ! ವಿದುರನು ಹೀಗೆಂದು ಹೇಳಿದನಂತರ ಶ್ರೀಕೇಶವನು ಧೃತರಾಷ್ಟ್ರನ ಕಡೆಗೆ ತಿರುಗಿ ಸುಹೃದರು ಕೇಳುತ್ತಿದ್ದಂತೆ ಈ ಮಾತುಗಳನ್ನು ಹೇಳಿದನು :

"ಮಹಾರಾಜ! ಈ ದುಷ್ಟಕೌರವರು ಕುಪಿತರಾಗಿ ನನ್ನ ಮೇಲೆ ಬಲಪ್ರಯೋಗಮಾಡಿ ಬಂಧಿಸಲಿಚ್ಛಿಸುವುದಾದರೆ ಹಾಗೆ ಮಾಡಲು ನೀನವರಿಗೆ ಅನುಮತಿಯನ್ನು ಕೊಡು. ಅನಂತರದಲ್ಲಿ ಅವರು ನನ್ನನ್ನು ಬಂಧಿಸುತ್ತಾರೆಯೋ ಅಥವಾ ನಾನೇ ಈ ಎಲ್ಲರನ್ನೂ ಬಂಧಿಸುತ್ತೇನೆಯೋ ಎಂಬುದನ್ನಾದರೂ ನೋಡೋಣ. ನನಗೂ ಅನುಮತಿಯನ್ನು ಕೊಡು. ಕೋಪಾಭಿಭೂತರಾಗಿರತಕ್ಕ ಈ ಎಲ್ಲ ಕೌರವರನ್ನೂ ಬಂಧಿಸಲು ನಾನೂ ಉತ್ಸುಕನಾಗಿದ್ದೇನೆ. ಆದರೆ ನಾನೆಂದಿಗೂ ನಿಂದಿತವಾದ ಮತ್ತು ಪಾಪಕರವಾದ ಕಾರ್ಯವನ್ನು ಮಾಡತಕ್ಕವನಲ್ಲ. ಪಾಂಡವರ ವಿಷಯದಲ್ಲಿ ಪರಮಲೋಭಿಗಳಾಗಿರುವ

ನಿನ್ನ ಮಕ್ಕಳು ತಮ್ಮದ್ದನ್ನೂ ಕಳೆದುಕೊಳ್ಳುತ್ತಾರೆ. (ಪಾಂಡವರಿಗೆ ಸೂಜಿಯ ಮೊನೆಯಷ್ಟೂ ಭೂಮಿಯನ್ನು ಕೊಡಕೂಡದೆಂಬ ಅಭಿಪ್ರಾಯವಿರುವ ಪರಮಲೋಭಿಗಳಾದ ನಿನ್ನ ಮಕ್ಕಳು ಪರ್ಯವಸಾನದಲ್ಲಿ ಎಲ್ಲವನ್ನೂ ಕಳೆದುಕೊಳ್ಳುತ್ತಾರೆ.)

ನಿನ್ನ ಮಕ್ಕಳು ಇದನ್ನೇ ಇಚ್ಛಿಸುವುದಾದರೆ ಯುಧಿಷ್ಠಿರನು ಕೃತಾರ್ಥನಾದಂತೆಯೇ ಸರಿ. ಧೃತರಾಷ್ಟ್ರ! ನಾನೀಗಲೇ ಈ ಕ್ಷಣದಲ್ಲಿಯೇ ನಿನ್ನ ಈ ಮೂರ್ಖರಾದ ಮಕ್ಕಳನ್ನೂ, ಅವರ ಅನುಯಾಯಿಗಳನ್ನೂ ಬಂಧಿಸಿ ಪಾಂಡವರ ವಶಕ್ಕೊಪ್ಪಿಸಿಬಿಟ್ಟೇನು. ಹೀಗೆ ಮಾಡುವುದು ನನಗೆ ಅಸಾಧ್ಯವೇ ಅಥವಾ ದುಷ್ಕರವೇ? ಆದರೆ ಹೀಗೆ ಮಾಡುವುದು ಸಂಧಿಕಾರ್ಯಕ್ಕಾಗಿ ಬಂದಿರುವ ನನಗೆ ಉಚಿತವಾದ ಕಾರ್ಯವಲ್ಲ. ಆದುದರಿಂದ ನಿನ್ನ ಸನ್ನಿಧಿಯಲ್ಲಿ ಕ್ರೋಧದಿಂದ ಉತ್ಪನ್ನವಾದ ಮತ್ತು ಪಾಪಾನುಬಂಧಿಯಾದ ನಿಂದಿತಕಾರ್ಯದಲ್ಲಿ ನಾನೆಂದಿಗೂ ಪ್ರವೃತ್ತನಾಗುವುದಿಲ್ಲ. ಅಂತಹ ಅನುಚಿತವಾದ ಕಾರ್ಯವನ್ನು ನಾನೆಂದಿಗೂ ಮಾಡಲಾರೆನು. ನಿನ್ನ ಮಗನಾದ ದುರ್ಯೋಧನನು ಏನು ಮಾಡಲು ಇಚ್ಛಿಸಿದ್ದಾನೆಯೋ ಅದು ಹಾಗೆಯೇ ನಡೆದುಹೋಗಲಿ. ನಿನ್ನೆಲ್ಲ ಮಕ್ಕಳಿಗೂ ಅವನು ಹೇಳಿದಂತೆ ಮಾಡಲು ಅನುಮತಿಯನ್ನು ಕೊಟ್ಟುಬಿಡುತ್ತೇನೆ."

ಶ್ರೀಕೃಷ್ಣನ ಮಾತುಗಳನ್ನು ಕೇಳಿದೊಡನೆಯೇ ಭ್ರಾಂತನಾದ ಧೃತರಾಷ್ಟ್ರನು ವಿದುರನನ್ನು ಕುರಿತು ಪುನಃ ಹೇಳಿದನು :

"ವಿದುರ! ರಾಜ್ಯಲುಬ್ಧನಾದ, ಪಾಪಿಷ್ಠನಾದ ದುರ್ಯೋಧನನನ್ನು ಶೀಘ್ರಾತಿಶೀಘ್ರವಾಗಿ ಇಲ್ಲಿಗೆ ಕರೆದುಕೊಂಡು ಬಾ. ಅವನನ್ನನುಸರಿಸಿ ಹೋಗಿರುವ ರಾಜರೂ ಬರಲಿ. ಒಂದು ವೇಳೆ ಸಾಧ್ಯವಾಗುವುದಾದರೆ ಅವನನ್ನು ಸನ್ಮಾರ್ಗಕ್ಕೆ ತರಲು ಮತ್ತೊಮ್ಮೆ ಪ್ರಯತ್ನಿಸೋಣ."

ದುರ್ಯೋಧನನಿಗೆ ಸಭಾಭವನಕ್ಕೆ ಬರುವ ಇಚ್ಛೆಯಿಲ್ಲದಿದ್ದರೂ ವಿದುರನು ಬಲಾತ್ಕಾರಪೂರ್ವಕವಾಗಿ ಪುನಃ ಸಭಾಮಂಟಪಕ್ಕೆ ಅವನನ್ನು ಕರೆತಂದನು. ರಾಜನ ಆಜ್ಞೆಯಂತೆ ಅವನೊಡನೆ ಅವನ ಮಿತ್ರಾಮಾತ್ಯ-ಸೋದರರೂ ಮತ್ತು ರಾಜರೂ ಸಭಾಮಂದಿರವನ್ನು ಪ್ರವೇಶಿಸಿದರು. ಕರ್ಣ-

ದುಃಶಾಸನರಿಂದ ಪರಿವೃತನಾಗಿದ್ದ ದುರ್ಯೋಧನನನ್ನು ಕುರಿತು ಧೃತರಾಷ್ಟ್ರ ರಾಜನು ಹೇಳಿದನು :

**ಅಶಕ್ಯಮಯಶಸ್ಯಂ ಚ ಸದ್ಭಿಶ್ಚಾಪಿ ವಿಗರ್ಹಿತಮ್ ।**
**ಯಥಾ ತ್ವಾದೃಶಕೋ ಮೂಢೋ ವ್ಯವಸ್ಯೇತ್ಕುಲಪಾಂಸನಃ ॥೩೫॥**

"ನಿನ್ನಂತಹ ಮೂಢನಾದವನೂ ಮತ್ತು ಕುಲಕಳಂಕನೂ ಸಿದ್ಧಮಾಡಿರುವ ಕೃಷ್ಣಬಂಧನದ ಯೋಜನೆಯು ನಿಸ್ಸಂಶಯವಾಗಿಯೂ ಸಾಧಿಸಲಶಕ್ಯವಾದುದು. ಇಂತಹ ಕುತ್ಸಿತಕಾರ್ಯಕ್ಕೆ ಪ್ರಯತ್ನಿಸುವುದೂ ಅಯಶಸ್ಕರವಾದುದು ಮತ್ತು ಈ ಕಾರ್ಯವು ಸತ್ಪುರುಷರ ನಿಂದೆಗೂ ಪಾತ್ರವಾದುದು.

ಮಹಾವೀರರಿಂದಲೂ ಎದುರಿಸಲು ಸಾಧ್ಯವಾಗದ, ಹತ್ತಿರ ಹೋಗಲೂ ಕಷ್ಟಸಾಧ್ಯನಾದ ಈ ಪುಂಡರೀಕಾಕ್ಷನನ್ನು ಪಾಪಿಷ್ಠರ ಸಹಾಯದಿಂದ ಬಲಾತ್ಕಾರವಾಗಿ ಬಂಧಿಸಲು ಇಚ್ಛಿಸಿರುವೆಯಲ್ಲವೇ?

**ಯೋ ನ ಶಕ್ಯೋ ಬಲಾತ್ಕರ್ತುಂ ದೇವೈರಪಿ ಸವಾಸವೈಃ ।**
**ತಂ ತ್ವಂ ಪ್ರಾರ್ಥಯಸೇ ಮನ್ದ ಬಾಲಶ್ಚನ್ದ್ರಮಸಂ ಯಥಾ ॥೩೬॥**

ಮೂರ್ಖ! ಇಂದ್ರಪ್ರಮುಖರಾದ ದೇವತೆಗಳಿಗೂ ಯಾವನನ್ನು ಬಲಾತ್ಕಾರಪೂರ್ವಕವಾಗಿ ಬಂಧಿಸಲು ಸಾಧ್ಯವಿಲ್ಲವೋ ಅಂತಹ ಮಹಾಪುರುಷನನ್ನು ನೀನು–ಬಾಲಕನೊಬ್ಬನು ಅಂತರಿಕ್ಷದಲ್ಲಿ ಕಾಣುವ ಚಂದ್ರನನ್ನು ಹಿಡಿದುಕೊಳ್ಳಲು ಕೈಚಾಚುವಂತೆ–ಬಂಧಿಸಲು ಇಚ್ಛಿಸಿರುವೆ.

**ದೇವೈರ್ಮನುಷ್ಯೈರ್ಗನ್ಧರ್ವೈರಸುರೈರುರಗೈಶ್ಚ ಯಃ ।**
**ನ ಸೋಢುಂ ಸಮರೇ ಶಕ್ಯಸ್ತಂ ನ ಬುಧ್ಯಸಿ ಕೇಶವಮ್ ॥೩೭॥**

ಮೂಢ! ನಿನಗೆ ಶ್ರೀಕೇಶವನ ಮಹಿಮೆಯೇನೆಂಬುದು ಸ್ವಲ್ಪವೂ ತಿಳಿಯದು. ಇವನ ಪರಾಕ್ರಮವೆಷ್ಟೆಂಬುದನ್ನು ನೀನರಿಯೆ. ದೇವ-ಮನುಷ್ಯ-ಗಂಧರ್ವಾಸುರ-ಸರ್ಪಗಳಿಂದಲೂ ಇವನನ್ನು ಯುದ್ಧದಲ್ಲಿ ಎದುರಿಸಿ ನಿಲ್ಲಲು ಸಾಧ್ಯವಾಗುವುದಿಲ್ಲ, ತಿಳಿಯಿತೇ?

**ದುರ್ಗ್ರಾಹ್ಯಃ ಪಾಣಿನಾ ವಾಯುರ್ದುಃಸ್ಪರ್ಶಃ ಪಾಣಿನಾ ಶಶೀ ।**
**ದುರ್ಧರಾ ಪೃಥಿವೀ ಮೂರ್ಧ್ನಾ ದುರ್ಗ್ರಾಹ್ಯಃ ಕೇಶವೋ ಬಲಾತ್ ॥**

ಗಾಳಿಯನ್ನು ಕೈಯಿಂದ ಹಿಡಿದುಕೊಳ್ಳಲು ಸಾಧ್ಯವಾಗುವುದಿಲ್ಲ. ಶೀತಾಂಶುವಾದ ಚಂದ್ರನನ್ನು ಕೈಯಿಂದ ಸ್ಪರ್ಶಿಸಲು ಸಾಧ್ಯವಾಗುವುದಿಲ್ಲ. ಪೃಥ್ವಿಯನ್ನು ತಲೆಯಿಂದ ಹೊರಲು (ಧರಿಸಲು) ಸಾಧ್ಯವಾಗುವುದಿಲ್ಲ. ಹಾಗೆಯೇ ಶ್ರೀಕೃಷ್ಣನನ್ನು ಬಲಾತ್ಕಾರದಿಂದ ಬಂಧಿಸಲೂ ಸಾಧ್ಯವಾಗುವುದಿಲ್ಲ."

ಧೃತರಾಷ್ಟ್ರನು ಹೀಗೆಂದು ಹೇಳಿದನಂತರ ವಿದುರನು ಕೋಪಾಭಿಭೂತನಾಗಿದ್ದ ದುರ್ಯೋಧನನನ್ನೊಮ್ಮೆ ವೀಕ್ಷಿಸಿ ಹೇಳಿದನು :

"ದುರ್ಯೋಧನ! ಈಗ ನಾನು ಹೇಳಲಿರುವ ಮಾತನ್ನು ಮನಸ್ಸಿಟ್ಟು ಕೇಳು. ಅನಂತರ ನಿನಗೆ ತೋರಿದಂತೆ ಮಾಡು.

ದ್ವಿವಿದನೆಂಬ ದಾನವೇಂದ್ರನು ಸೌಭವೆಂಬ ಪಟ್ಟಣದ ಮಹಾದ್ವಾರದಲ್ಲಿ ಮಹತ್ತರವಾದ ಕಲ್ಲಿನ ಮಳೆಯಿಂದ ಶ್ರೀಕೇಶವನನ್ನು ಮುಚ್ಚಿಬಿಟ್ಟನು. ಪರಾಕ್ರಮದ ಮೂಲಕವಾಗಿ ಶ್ರೀಕೃಷ್ಣನನ್ನು ಹಿಡಿಯುವ ಇಚ್ಛೆಯಿಂದ ದಾನವನು ಸರ್ವಪ್ರಯತ್ನಗಳನ್ನೂ ಮಾಡಿದನು. ಆದರೂ ಇವನನ್ನು ಬಂಧಿಸಲು ದ್ವಿವಿದನಿಗೆ ಸಾಧ್ಯವಾಗಲಿಲ್ಲ. ಅಂತಹವನನ್ನು ನೀನು ಬಲಾತ್ಕಾರದಿಂದ ನಿನ್ನ ವಶಮಾಡಿಕೊಳ್ಳಲು ಇಚ್ಛಿಸಿರುವೆ. ನರಕಾಸುರನ ಪ್ರಾಗ್ಜ್ಯೋತಿಷವೆಂಬ ಪಟ್ಟಣಕ್ಕೆ ಶೌರಿಯೊಮ್ಮೆ ಹೋಗಿದ್ದಾಗ ನರಕಾಸುರನು ಸಕಲದಾನವರ ಸಹಾಯವನ್ನೂ ಪಡೆದು ಶ್ರೀಕೃಷ್ಣನನ್ನು ಬಂಧಿಸಲು ಪ್ರಯತ್ನಿಸಿ ವಿಫಲನಾದನು. ಅಂತಹವನನ್ನು ನೀನಿಂದು ಬಲಾತ್ಕಾರ ಪೂರ್ವಕವಾಗಿ ಬಂಧಿಸಲು ಇಚ್ಛಿಸಿರುವೆ. ಅನೇಕಸಹಸ್ರಯುಗಗಳ ಆಯುಷ್ಯವನ್ನು ಪಡೆದಿದ್ದ ನರಕಾಸುರನನ್ನು ಶ್ರೀಕೃಷ್ಣನು ಯುದ್ಧದಲ್ಲಿ ಸಂಹರಿಸಿ ಅವನ ಕಾರಾಗೃಹದಲ್ಲಿದ್ದ ಸಾವಿರಾರು ಕನ್ಯೆಯರನ್ನು ಬಿಡಿಸಿಕೊಂಡು ಬಂದು ಯಥಾವಿಧಿಯಾಗಿ ಅವರನ್ನು ವಿವಾಹ ಮಾಡಿಕೊಂಡನು. ಅಂತಹ ಪರಾಕ್ರಮಿಯಾದ ಶೌರಿಯನ್ನು ನೀನು ಬಂಧಿಸಲಿಚ್ಛಿಸಿರುವೆ. ನಿರ್ಮೋಚನವೆಂಬ ಪಟ್ಟಣದಲ್ಲಿ ಆರುಸಾವಿರ ಮಹಾಸುರರೂ ಶ್ರೀಕೃಷ್ಣನನ್ನು ಬಂಧನದಲ್ಲಿಡಲು ಸಮರ್ಥರಾಗಲಿಲ್ಲ. ಅವರೇ ಶ್ರೀಕೃಷ್ಣನಿಂದ ಪಾಶಗಳ ಮೂಲಕವಾಗಿ ಬಂಧಿಸಲ್ಪಟ್ಟರು.

ಅಂತಹ ಶೌರಿಯನ್ನು ನೀನು ಬಲಾತ್ಕಾರದಿಂದ ವಶಪಡಿಸಿಕೊಳ್ಳಲು ಯತ್ನಿಸಿರುವೆ. ಇವನು ಬಾಲನಾಗಿದ್ದಾಗಲೇ ಪೂತನಾ ಎಂಬ ರಾಕ್ಷಸಿಯನ್ನೂ - ಕಂಸನ ಪರಿವಾರದಲ್ಲಿ ಪಕ್ಷಿಯ ರೂಪದಲ್ಲಿದ್ದ ಬಕನೆಂಬ ರಾಕ್ಷಸನನ್ನೂ ಸಂಹರಿಸಿದನು. ಇಂದ್ರನೊಮ್ಮೆ ಕುಪಿತನಾಗಿ ಪ್ರಪಂಚವೇ ಕೊಚ್ಚಿಹೋಗುವಂತೆ ಮಳೆಗರೆದಾಗ ಗೋವುಗಳ ಸಲುವಾಗಿ ಗೋವರ್ಧ ಪರ್ವತವನ್ನೇ ತನ್ನ ಕೈಯಿಂದ ಮೇಲೆತ್ತಿ ಗೋವುಗಳನ್ನೂ ಗೋಪಾಲಕರನ್ನೂ ಸಂರಕ್ಷಿಸಿದನು.

ಅರಿಷ್ಟಾಸುರ, ಧೇನುಕಾಸುರ, ಮಹಾಬಲನಾದ ಚಾಣೂರ, ಅಶ್ವರಾಜನಾದ ಕೇಶೀ – ಇವರೆಲ್ಲರನ್ನೂ ಇವನು ಬಾಲ್ಯದಲ್ಲಿಯೇ ಸಂಹರಿಸಿದನು. ಧರ್ಮವಿರುದ್ಧವಾದ ಕಾರ್ಯವೆಸಗಿದ್ದರಿಂದ ಸೋದರಮಾವನಾದ ಕಂಸನನ್ನೂ ಇವನು ಬಾಲಕನಾಗಿದ್ದಾಗಲೇ ಸಂಹರಿಸಿದನು. ಜರಾಸಂಧ, ದಂತವಕ್ತ್ರ, ಮಹಾಪರಾಕ್ರಮಿಯಾದ ಶಿಶುಪಾಲ, ಬಾಣ–ಇವರೇ ಮುಂತಾದ ಅನೇಕ ರಾಜರು ಇವನೊಡನೆ ಯುದ್ಧಮಾಡಿ ವಿನಾಶಹೊಂದಿದರು. ಇವನಿಂದ ನಿರ್ಜಿತರಾದವರು ಮನುಷ್ಯರು ಮಾತ್ರವೇ ಅಲ್ಲ. ದೇವತೆಗಳೂ ಇವನಿಂದ ಪರಾಜಿತರಾಗಿದ್ದಾರೆ. ದಿಕ್ಪಾಲಕರಲ್ಲೊಬ್ಬನಾದ ವರುಣನು ಶ್ರೀಕೃಷ್ಣನಿಂದ ಪರಾಜಿತನಾದನು. ಮಹಾತೇಜಸ್ವಿಯಾದ ಅಗ್ನಿಯನ್ನೂ ಶ್ರೀಕೃಷ್ಣನೊಮ್ಮೆ ಯುದ್ಧದಲ್ಲಿ ಸೋಲಿಸಿದನು. ಪಾರಿಜಾತಾಪಹರಣಕಾಲದಲ್ಲಿ ಸಾಕ್ಷಾತ್ ಶಚೀಪತಿಯೇ ಇವನಿಂದ ಪರಾಜಿತನಾದನು. ಪ್ರಪಂಚವೆಲ್ಲವೂ ಏಕಮಾತ್ರ ಜಲಮಯವಾಗಿದ್ದಾಗ ನೀರಿನ ಮೇಲೆ ಮಲಗಿದ್ದ ಈ ಶ್ರೀಕೃಷ್ಣನು ಮಧು-ಕೈಟಭರೆಂಬ ಮಹಾಪರಾಕ್ರಮಿಗಳಾದ ರಾಕ್ಷಸರನ್ನು ಸಂಹರಿಸಿದನು. ಆದಿಶಕ್ತಿಯಿಂದ ವರವನ್ನು ಪಡೆದಿದ್ದ ಹಯಗ್ರೀವನೆಂಬ ರಾಕ್ಷಸನನ್ನು ಶ್ರೀಕೃಷ್ಣನು ಹಯಗ್ರೀವನ ಅವತಾರವನ್ನೆತ್ತಿ ಸಂಹರಿಸಿದನು. ಶ್ರೀಕೃಷ್ಣನನ್ನು ಮಾನವಸಾಮಾನ್ಯನೆಂದು ತಿಳಿಯಬೇಡ, ದುರ್ಯೋಧನ! ಇವನು ಸಚ್ಚಿದಾನಂದಪರಬ್ರಹ್ಮರೂಪಿಯಾದ ಪರಮಾತ್ಮನೇ ಆಗಿದ್ದಾನೆ.

**ಅಯಂ ಕರ್ತಾ ನ ಕ್ರಿಯತೇ ಕಾರಣಂ ಚಾಪಿ ಪೌರುಷೇ ।**
**ಯದ್ಯದಿಚ್ಛೇದಯಂ ಶೌರಿಸ್ತತ್ತತ್ಕುರ್ಯಾದಯತ್ನತಃ ॥೫೧॥**

ಇವನೇ ಲೋಕಕರ್ತೃವು. ಹಾಗಿದ್ದರೂ ಯಾವುದೊಂದನ್ನೂ ಇವನು ಮಾಡುವುದಿಲ್ಲ. ನಾಲ್ಕು ವಿಧವಾದ ಪುರುಷಾರ್ಥಗಳಿಗೂ ಇವನೇ ಕಾರಣನು. (ಪೌರುಷಕ್ಕೂ ಇವನೇ ಕಾರಣನಾಗಿರುತ್ತಾನೆ.) ಈ ಶೌರಿಯು ಯಾವ ಕಾರ್ಯವು ನಡೆಯಬೇಕೆಂದು ಇಚ್ಛಿಸುತ್ತಾನೆಯೋ – ಆ ಕಾರ್ಯವು ಯಾವ ಪ್ರಯತ್ನವೂ ಇಲ್ಲದೆಯೇ ನಡೆದುಹೋಗುತ್ತದೆ (ಇಚ್ಛಾಮಾತ್ರದಿಂದಲೇ ಇವನು ಏನನ್ನು ಬೇಕಾದರೂ ಸಾಧಿಸಬಲ್ಲನು).

ಇಂತಹ ಗೋವಿಂದನ ನಿಜಸ್ವರೂಪವೇನೆಂಬುದನ್ನು ನೀನು ತಿಳಿದವನಾಗಿಲ್ಲ. ಇವನು ಘೋರವಿಕ್ರಮನು ; ಭಯಂಕರಪರಾಕ್ರಮಿಯು. ತನ್ನ ಸ್ಥಾನದಿಂದ ಯಾವಾಗಲೂ ಚಲಿಸದವನು. ಸರ್ಪದಂತೆ ಅತ್ಯುಗ್ರವಾದ ಕೋಪವುಳ್ಳವನು. ಶತ್ರುಗಳ ದರ್ಪವನ್ನು ಮುರಿಯುವವನು. ತೇಜೋರಾಶಿಯು. ಇಂತಹ ಅಪಾರಮಹಿಮನಾದ ಶ್ರೀಕೃಷ್ಣನ ನಿಜಸ್ವರೂಪ ವೇನೆಂಬುದು ನಿನಗಿನ್ನೂ ತಿಳಿದಿರುವುದಿಲ್ಲ. ಮಹಾಬಾಹುವಾದ, ಕ್ಲಿಷ್ಟವಾದ ಕಾರ್ಯವನ್ನು ಬಹುಸುಲಭವಾಗಿ ಇಚ್ಛಾಮಾತ್ರದಿಂದಲೇ ಮಾಡಿ ಮುಗಿಸುವ ಶ್ರೀಕೃಷ್ಣನನ್ನು ಬಲಾತ್ಕಾರವಾಗಿ ಬಂಧಿಸಲು ಹೋದರೆ–ಧಗ-ಧಗನೆ ಪ್ರಜ್ವಲಿಸುವ ಯಜ್ಞೇಶ್ವರನ ಹತ್ತಿರಕ್ಕೆ ಹೋಗಿ ಭಸ್ಮವಾಗುವ ಪತಂಗದ ಹುಳುವಿನಂತೆ–ಅಮಾತ್ಯಸಹಿತನಾಗಿ ನೀನು ನಾಶಹೊಂದುವೆ."

೧೩೦ನೆಯ ಅಧ್ಯಾಯವು ಮುಗಿಯಿತು.

೧೩೧ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ.)

## ಶ್ರೀಕೃಷ್ಣನು ವಿಶ್ವರೂಪದರ್ಶನವನ್ನು ತೋರಿಸಿ ಕೌರವರ ಸಭಾಭವನದಿಂದ ಹೊರಟುದು

ವೈಶಂಪಾಯನರು ಜನಮೇಜಯನನ್ನು ಕುರಿತು ಹೇಳುತ್ತಾರೆ :

"ಜನಮೇಜಯ! ವಿದುರನು ಹೀಗೆಂದು ಹೇಳಿದನಂತರ, ಏಕಾಕಿಯಾಗಿ ನಿಂತು ಶತ್ರುಸಮೂಹವನ್ನೇ ಸಂಹಾರಮಾಡುವ ಸಾಮರ್ಥ್ಯವುಳ್ಳ ಶ್ರೀಕೇಶವನು ಧೃತರಾಷ್ಟ್ರಪುತ್ರನನ್ನು ಕುರಿತು ಹೇಳಿದನು :

**ಏಕೋಽಹಮಿತಿ ಯನ್ಮೋಹಾನ್ಮನ್ಯಸೇ ಮಾಂ ಸುಯೋಧನ ।**
**ಪರಿಭೂಯ ಸುದುರ್ಬುದ್ಧೇ ಗ್ರಹೀತುಂ ಮಾಂ ಚಿಕೀರ್ಷಸಿ ॥೨॥**

"ಸುಯೋಧನ! ನೀನು ಮೋಹಪರವಶನಾಗಿ ನಾನಿಲ್ಲಿ ಒಬ್ಬನೇ ಇರುವೆನೆಂದು ಭಾವಿಸಿರುವೆ. ದುಷ್ಟಬುದ್ಧಿಯವನಾದ ನೀನು–ಈ ಒಬ್ಬನೇನು ಮಾಡಿಯಾನೆಂಬ ತಿರಸ್ಕಾರಬುದ್ಧಿಯಿಂದ – ನನ್ನನ್ನು ಸೆರೆಹಿಡಿಯಲೂ ಪ್ರಯತ್ನಿಸುತ್ತಿರುವೆ.

**ಇಹೈವ ಪಾಣ್ಡವಾಃ ಸರ್ವೇ ತಥೈವಾನ್ಧಕವೃಷ್ಣಯಃ ।**
**ಇಹಾದಿತ್ಯಾಶ್ಚ ರುದ್ರಾಶ್ಚ ವಸವಶ್ಚ ಮಹರ್ಷಿಭಿಃ ॥೩॥**

ಇಲ್ಲಿ ನಾನೊಬ್ಬನೇ ಇಲ್ಲ, ದುರ್ಯೋಧನ! ಇಲ್ಲಿಯೇ (ನನ್ನಲ್ಲಿಯೇ) ಎಲ್ಲ ಪಾಂಡವರೂ ಇದ್ದಾರೆ. ಅದೇ ರೀತಿಯಲ್ಲಿ ಅಂಧಕ-ವೃಷ್ಣಿಗಳೂ ಇದ್ದಾರೆ. ನನ್ನಲ್ಲಿಯೇ ದ್ವಾದಶಾದಿತ್ಯರೂ, ಏಕಾದಶರುದ್ರರೂ, ಅಷ್ಟವಸುಗಳೂ ಮಹರ್ಷಿಗಳೊಡನಿದ್ದಾರೆ."

ವಿಪಕ್ಷೀಯರಾದ ವೀರರನ್ನು ವಿನಾಶಗೊಳಿಸುವ ಸಾಮರ್ಥ್ಯವುಳ್ಳ ಕೇಶವನು ದುರ್ಯೋಧನನಿಗೆ ಹೀಗೆ ಹೇಳಿ ಗಟ್ಟಿಯಾಗಿ ಗಹ-ಗಹಿಸಿ ನಕ್ಕನು. ಅಟ್ಟಹಾಸದಿಂದ ನಗುತ್ತಿದ್ದ ಮಹಾತ್ಮನಾದ ಶೌರಿಯ ಶರೀರದಿಂದ ವಿದ್ಯುದ್ರೂಪರಾದ, ಅಂಗುಷ್ಠಮಾತ್ರಶರೀರಗಳಿಂದ ಕೂಡಿದ್ದ ದೇವತೆಗಳು-(ಯಜ್ಞೇಶ್ವರನ ಜ್ವಾಲೆಗಳಂತಹ) ಜ್ವಾಲೆಗಳನ್ನು ಹೊರಹೊಮ್ಮಿಸಿದರು. ಬ್ರಹ್ಮನು ಶೌರಿಯ ಹಣೆಯಲ್ಲಿ ಕಾಣಿಸಿಕೊಂಡನು. ರುದ್ರನು ಹೃದಯದಲ್ಲಿ ಕಾಣಿಸಿಕೊಂಡನು. ಅವನ ಭುಜಗಳಲ್ಲಿ ಲೋಕಪಾಲರು ಕಾಣಿಸಿಕೊಂಡರು. ಮುಖದಿಂದ ಯಜ್ಞೇಶ್ವರನು ಹೊರಟನು. ಆದಿತ್ಯರು, ಸಾಧ್ಯರು, ವಸುಗಳು, ಅಶ್ವಿನೀದೇವತೆಗಳು, ಇಂದ್ರನಿಂದ ಕೂಡಿದ ಮರುತ್ತುಗಳು, ವಿಶ್ವೇದೇವತೆಗಳು, ಯಕ್ಷರು, ಗಂಧರ್ವರು, ಉರಗರು, ರಾಕ್ಷಸರು– ಎಲ್ಲರೂ ಶೌರಿಯ ಶರೀರದ ನಾನಾಭಾಗಗಳಲ್ಲಿ ಕಾಣಿಸಿಕೊಂಡರು. ಶ್ರೀಕೃಷ್ಣನ ದಕ್ಷಿಣಬಾಹುವಿನಲ್ಲಿ ಧನುರ್ಧರನಾದ ಅರ್ಜುನನೂ, ವಾಮಬಾಹುವಿನಲ್ಲಿ ಹಲಾಯುಧನಾದ ಬಲರಾಮನೂ ಕಾಣಿಸಿಕೊಂಡರು. ಶ್ರೀಕೃಷ್ಣನ

ಹಿಂಭಾಗದಲ್ಲಿ ಭೀಮ, ಯುಧಿಷ್ಠಿರ ಮತ್ತು ಮಾದ್ರಿಯ ಮಕ್ಕಳಾದ ನಕುಲ-ಸಹದೇವರು ಕಾಣಿಸಿಕೊಂಡರು. ಪ್ರದ್ಯುಮ್ನಪ್ರಮುಖರಾದ ಅಂಧಕ-ವೃಷ್ಣಿಗಳೂ ಶ್ರೀಕೃಷ್ಣನ ಶರೀರದ ಮುಂಭಾಗದಲ್ಲಿ ದೊಡ್ಡ-ದೊಡ್ಡ ಆಯುಧ



ಗಳನ್ನು ಎತ್ತಿ ಹಿಡಿದುಕೊಂಡಿರುವಂತೆ ಕಾಣಿಸಿಕೊಂಡರು. ಶಂಖ, ಚಕ್ರ, ಗದೆ, ಶಕ್ತ್ಯಾಯುಧ, ಶಾರ್ಙ್ಗಧನುಸ್ಸು, ಹಲಾಯುಧ, ನಂದಕವೆಂಬ ಖಡ್ಗ– ಈ ಎಲ್ಲವೂ ತಮ್ಮ ಪ್ರಕಾಶದಿಂದ ಬೆಳಗುತ್ತಾ ಯುದ್ಧಕ್ಕೆ ಸಜ್ಜಾಗಿ ಎದ್ದು ನಿಂತಿರುವುವೋ ಎಂಬಂತೆ–ಶ್ರೀಕೃಷ್ಣನ ಬಾಹುಗಳಲ್ಲಿ ಕಾಣಿಸಿಕೊಂಡುವು. ಕಿವಿಗಳಿಂದಲೂ ಮತ್ತು ಶರೀರದ ಎಲ್ಲ ಭಾಗಗಳಿಂದಲೂ ಬಹುಭಯಂಕರವಾದ ಧೂಮಮಿಶ್ರವಾದ ಅಗ್ನಿಜ್ವಾಲೆಗಳು ಪ್ರಾದುರ್ಭೂತವಾದುವು.

ಸೂರ್ಯನ ತೀಕ್ಷ್ಣವಾದ ಕಿರಣಗಳೋಪಾದಿಯಲ್ಲಿ ಶ್ರೀಕೃಷ್ಣನ ರೋಮಕೋಟಿಗಳಿಂದ ತೀಕ್ಷ್ಣವಾದ ಕಿರಣಗಳು ಹೊರಸೂಸತೊಡಗಿದುವು.

ಮಹಾತ್ಮನಾದ ಶ್ರೀಕೇಶವನ ಭಯಂಕರಸ್ವರೂಪವನ್ನು ಕಂಡು ಸುತ್ತಲೂ ಇದ್ದ ರಾಜರು ಭಯದಿಂದ ಉದ್ವಿಗ್ನರಾದರು. ಶ್ರೀಕೃಷ್ಣನ ಆ ಭಯಂಕರಸ್ವರೂಪವನ್ನು ನೋಡಲಾರದೇ ಎಲ್ಲರ ನೇತ್ರಗಳೂ ತಾವಾಗಿಯೇ ಮುಚ್ಚಿಕೊಂಡುವು. ದ್ರೋಣ, ಭೀಷ್ಮ, ಮಹಾಮತಿಯಾದ ವಿದುರ, ಸಂಜಯ ಮತ್ತು ತಪೋಧನರಾದ ಮಹಾಭಾಗರಾದ ಮಹರ್ಷಿಗಳು–ಇವರುಗಳನ್ನು ಬಿಟ್ಟು ಉಳಿದವರೆಲ್ಲರೂ ಶ್ರೀಕೃಷ್ಣನ ಭಯಂಕರವಾದ ಶರೀರವನ್ನು ನೋಡಲಾರದೇ ಕಣ್ಣುಮುಚ್ಚಿಕೊಂಡರು. ಭೀಷ್ಮಾದಿಗಳಿಗೂ ಚರ್ಮಚಕ್ಷುಸ್ಸಿನಿಂದ ಶ್ರೀಕೃಷ್ಣನನ್ನು ನೋಡಲು ಸಾಧ್ಯವಾಗಲಿಲ್ಲ. ದಯಾಮಯನಾದ ಶ್ರೀಕೃಷ್ಣನು ಭೀಷ್ಮ-ದ್ರೋಣ-ವಿದುರ-ಸಂಜಯರಿಗೂ, ಮಹರ್ಷಿಗಳಿಗೂ ವಿಶ್ವರೂಪವನ್ನು ಸಂದರ್ಶಿಸಲು ಸಾಧ್ಯವಾಗುವಂತೆ ದಿವ್ಯಚಕ್ಷುಸ್ಸನ್ನು ದಯಪಾಲಿಸಿದನು. ಕೌರವಸಭಾಭವನದಲ್ಲಿ ಮಾಧವನು ಪರಮಾಶ್ಚರ್ಯಕರವಾದ ರೂಪವನ್ನು ತಾಳಿದಾಗ ದೇವದುಂದುಭಿಗಳು ಮೊಳಗಿದುವು. ಪುಷ್ಪವೃಷ್ಟಿಯಾಯಿತು. ಇತರ ರಾಜರು ದಿವ್ಯರೂಪವನ್ನು ನೋಡಲಾಗದೇ ಕಣ್ಣುಮುಚ್ಚಿದರೆ ಧೃತರಾಷ್ಟ್ರನು ಕಣ್ಣುತೆಗೆಯುವ ಸ್ಥಿತಿಯಲ್ಲೇ ಇರಲಿಲ್ಲ. ಆದರೂ ಏನೋ ಅದ್ಭುತವು ನಡೆಯುತ್ತಿದೆಯೆಂಬ ವಿಷಯವು ಧೃತರಾಷ್ಟ್ರನಿಗೆ ತಿಳಿಯಿತು. ಕೈಜೋಡಿಸಿ ಹೇಳಿದನು :

**ತ್ವಮೇವ ಪುಣ್ಡರೀಕಾಕ್ಷ ಸರ್ವಸ್ಯ ಜಗತೋ ಹಿತಃ ।**
**ತಸ್ಮಾತ್ತ್ವಂ ಯಾದವಶ್ರೇಷ್ಠ ಪ್ರಸಾದಂ ಕರ್ತುಮರ್ಹಸಿ ॥೧೭॥**

"ಕಮಲನಯನ! ಯದುಕುಲತಿಲಕ! ಶ್ರೀಕೃಷ್ಣ! ನೀನೇ ಸರ್ವಜಗತ್ತುಗಳಿಗೂ ಹಿತೈಷಿಯಾಗಿರುವೆ. ದಯಾಮಯನಾದ ನೀನು ನನ್ನ ವಿಷಯದಲ್ಲೂ ಕೃಪೆದೋರಲು ಅರ್ಹನಾಗಿರುವೆ.

**ಭಗವನ್ಮಮ ನೇತ್ರಾಣಾಮನ್ತರ್ಧಾನಂ ವೃಣೇ ಪುನಃ ।**
**ಭವನ್ತಂ ದ್ರಷ್ಟುಮಿಚ್ಛಾಮಿ ನಾನ್ಯಂ ದ್ರಷ್ಟುಮಿಹೋತ್ಸಹೇ ॥೧೮॥**

ಭಗವನ್! ನಾನೂ ಸಹ ನಿನ್ನ ದಿವ್ಯಸ್ವರೂಪವನ್ನು ನೋಡಲಿಚ್ಛಿಸಿದ್ದೇನೆ. ಆದರೆ ಬೇರೆ ಯಾರನ್ನೂ ನೋಡುವ ಇಚ್ಛೆಯು ನನಗಿಲ್ಲ. ನಿನ್ನನ್ನು ಸಂದರ್ಶಿಸಬಹುದಾದ ದಿವ್ಯಚಕ್ಷುಸ್ಸನ್ನು ದಯಪಾಲಿಸು. ನಿನ್ನನ್ನು ಸಂದರ್ಶಿಸಿದ ನಂತರ ನನ್ನ ಕಣ್ಣುಗಳ ತಿರೋಗಮನವನ್ನು ನಾನು ಪುನಃ ಪಡೆದುಕೊಳ್ಳುತ್ತೇನೆ."

ಅನಂತರದಲ್ಲಿ ಮಹಾಬಾಹುವಾದ ಜನಾರ್ದನನು ಧೃತರಾಷ್ಟ್ರನನ್ನು ಕುರಿತು ಕೇಳಿದನು : "ನನ್ನ ನಿಜಸ್ವರೂಪವನ್ನು ನೋಡಲು ಸಾಧ್ಯವಾಗುವಂತೆ ಅದೃಶ್ಯವಾದ ಎರಡು ಕಣ್ಣುಗಳು ನಿನಗೆ ಪ್ರಾಪ್ತವಾಗುತ್ತವೆ."

ಜನಮೇಜಯ! ಪರಮಾದ್ಭುತವೆನಿಸುವ ರೀತಿಯಲ್ಲಿ ಧೃತರಾಷ್ಟ್ರನಿಗೆ ಕಣ್ಣುಗಳು ಬಂದುವು. ವಿಶ್ವರೂಪವನ್ನು ನೋಡುವ ಅಪೇಕ್ಷೆಯಿಂದ ವಾಸುದೇವನನ್ನೇ ಪ್ರಾರ್ಥಿಸಿ ಅವನ ಕೃಪೆಯಿಂದ ಅದೃಶ್ಯವಾದ ಕಣ್ಣುಗಳನ್ನು ಭಗವಂತನಿಂದ ಪಡೆದುಕೊಂಡನಂತರ ಆ ದಿವ್ಯರೂಪವನ್ನು ನೋಡಿ ಆನಂದಬಾಷ್ಪಗಳನ್ನು ಸುರಿಸುತ್ತಾ ಸಂತೋಷಪಡುತ್ತಿದ್ದ ಧೃತರಾಷ್ಟ್ರನನ್ನು ಕಂಡು ಅಲ್ಲಿದ್ದ ರಾಜರೆಲ್ಲರೂ ವಿಸ್ಮಿತರಾದರು. ಅಲ್ಲಿ ಉಪಸ್ಥಿತರಾಗಿದ್ದ ಋಷಿಗಳೊಡನೆ ಮಧುಸೂದನನನ್ನು ಸ್ತೋತ್ರಮಾಡಿದರು.

ಮಾಧವನು ವಿಶ್ವರೂಪವನ್ನು ಧರಿಸಲಾಗಿ ಸಮಗ್ರವಾದ ಭೂಮಿಯೇ ನಡುಗಿತು. ಸಮುದ್ರವು ಅಲ್ಲೋಲ-ಕಲ್ಲೋಲವಾಯಿತು. ಅಲ್ಲಿ ಸೇರಿದ ರಾಜರೆಲ್ಲರೂ ಬಹುವಾಗಿ ವಿಸ್ಮಯಗೊಂಡರು.

ಜನಮೇಜಯ! ಅನಂತರದಲ್ಲಿ ಅರಿಂದಮನಾದ ಪುರುಷವ್ಯಾಘ್ರನಾದ ಶ್ರೀಕೃಷ್ಣನು ತನ್ನ ಪರಮಾದ್ಭುತವಾದ, ದಿವ್ಯವಾದ, ವಿಚಿತ್ರವಾದ, ವೈಭವೋಪೇತವಾಗಿದ್ದ ಶರೀರವನ್ನು ಉಪಸಂಹರಿಸಿದನು. ಅನಂತರ ಒಂದು ಕೈಯಿಂದ ಸಾತ್ಯಕಿಯನ್ನೂ ಮತ್ತೊಂದು ಕೈಯಿಂದ ಕೃತವರ್ಮನನ್ನೂ ಹಿಡಿದು ಕೊಂಡು ಅಲ್ಲಿದ್ದ ಋಷಿಗಳ ಅನುಮತಿಯನ್ನು ಪಡೆದು ಮಧುಸೂದನನು ಸಭಾಭವನದಿಂದ ನಿರ್ಗಮಿಸಿದನು. ಶ್ರೀಕೃಷ್ಣನು ಸಭಾಭವನದಿಂದ ನಿರ್ಗಮಿಸಿದನಂತರ ನಾರದಾದಿ ಋಷಿಗಳೂ ಅಂತರ್ಹಿತರಾದರು. ಕೋಲಾ

ಹಲವು ಶೂನ್ಯವಾಗಲಾಗಿ ಅದ್ಭುತಘಟನೆಯೊಂದು ಕ್ಷಣಮಾತ್ರದಲ್ಲಿ ನಡೆದುಹೋಯಿತೆಂಬ ಭಾವನೆಯು ಎಲ್ಲರ ಮನಸ್ಸಿನಲ್ಲೂ ಉಂಟಾಯಿತು. ಶ್ರೀಕೃಷ್ಣನು ಸಭಾಭವನದಿಂದ ನಿರ್ಗಮಿಸಿದುದನ್ನು ನೋಡಿ ಕೌರವರೆಲ್ಲರೂ ಅಲ್ಲಿ ಉಪಸ್ಥಿತರಾಗಿದ್ದ ರಾಜರೊಡನೆ – ಇಂದ್ರನನ್ನನುಸರಿಸಿ ದೇವತೆಗಳು ಹೋಗುವಂತೆ–ನರವ್ಯಾಘ್ರನಾದ ಶ್ರೀಕೃಷ್ಣನನ್ನನುಸರಿಸಿ ಹೊರಟರು. ರಾಜಸಮೂಹವು ತನ್ನ ಹಿಂದೆಯೇ ಬರುತ್ತಿರುವುದನ್ನೂ ಗಣನೆಗೆ ತೆಗೆದುಕೊಳ್ಳದೇ, ಅವರನ್ನೊಮ್ಮೆ ಕೂಡ ನೋಡದೆಯೇ ಅಮೇಯಾತ್ಮನಾದ ಶ್ರೀಕೃಷ್ಣನು–ಧೂಮದಿಂದ ಆವೃತನಾದ ಯಜ್ಞೇಶ್ವರನಂತೆ–ಸಭಾಭವನ ದಿಂದ ನಿರ್ಗಮಿಸಿದನು.

ಶ್ರೀಕೃಷ್ಣನು ಸಾತ್ಯಕಿ-ಕೃತವರ್ಮರೊಡನೆ ಸಭಾಭವನದಿಂದ ಹೊರಕ್ಕೆ ಬರುವ ವೇಳೆಗೆ ಸರಿಯಾದ ದಾರುಕನು ಶೈಬ್ಯ-ಸುಗ್ರೀವಗಳಿಂದ ಯುಕ್ತವಾಗಿದ್ದ ರಥವನ್ನು ಅಲ್ಲಿಗೆ ತಂದು ನಿಲ್ಲಿಸಿದ್ದನು. ರಥವು ಶುಭ್ರವಾಗಿದ್ದಿತು. ವಿಶಾಲವಾಗಿದ್ದಿತು. ರಥದ ಸುತ್ತಲೂ ಕಿರುಗಂಟೆಗಳಿದ್ದುವು. ರಥವು ಸುವರ್ಣಾಭರಣಗಳಿಂದ ಚಿತ್ರ-ವಿಚಿತ್ರವಾಗಿ ಅಲಂಕರಿಸಲ್ಪಟ್ಟಿದ್ದಿತು. ಶೀಘ್ರಗಾಮಿಯಾಗಿದ್ದಿತು. ಅದು ಹೋಗುತ್ತಿದ್ದಾಗ ಮೇಘನಾದದಂತೆ ಪ್ರತಿಧ್ವನಿಸುತ್ತಿದ್ದಿತು. ರಥದಲ್ಲಿ ಯುದ್ಧಕ್ಕೆ ಬೇಕಾಗುವ ಸಕಲೋಪಸ್ಕರಗಳೂ ಇದ್ದುವು. ರಥಕ್ಕೆ ವ್ಯಾಘ್ರದ ಚರ್ಮವನ್ನು ಹೊದ್ದಿಸಲಾಗಿತ್ತು. ರಥದ ಹಿಂಬದಿಯಲ್ಲಿ ಸಜ್ಜಾದ ಸೈನಿಕರು ನಿಂತಿದ್ದರು. ಅದೇ ರೀತಿಯಲ್ಲಿ ಮಹಾರಥನಾದ, ಹೃದೀಕನ ಮಗನಾದ, ವೃಷ್ಣಿಸಮ್ಮತನಾದ ಕೃತವರ್ಮನೂ ಬೇರೊಂದು ರಥದಲ್ಲಿ ಕುಳಿತನು. 'ಶೌರಿಯು ರಥದ ಸಮೀಪಕ್ಕೆ ಹೋಗುತ್ತಿದ್ದಾನೆ ; ಮುಂದಿನ ಒಂದೆರಡು ಕ್ಷಣಗಳಲ್ಲಿ ಇಲ್ಲಿಂದ ಹೊರಟುಹೋಗುತ್ತಾನೆ' – ಎಂಬ ವಾರ್ತೆಯನ್ನು ಚಾರರ ಮುಖೇನ ಕೇಳಿ ಧೃತರಾಷ್ಟ್ರ ಮಹಾರಾಜನು ಶ್ರೀಕೃಷ್ಣನನ್ನು ಸಮೀಪಿಸಿ ಪುನಃ ಹೇಳಿದನು :

**ಯಾವದ್ಬಲಂ ಮೇ ಪುತ್ರೇಷು ಪಶ್ಯಸ್ಯೇತಜ್ಜನಾರ್ದನ ।**
**ಪ್ರತ್ಯಕ್ಷಂ ತೇ ನ ತೇ ಕಿಂಚಿತ್ಪರೋಕ್ಷಂ ಶತ್ರುಕರ್ಶನ ॥೩೨॥**

"ಜನಾರ್ದನ! ನನ್ನ ಮಕ್ಕಳ ಮೇಲೆ ನನ್ನ ಬಲ-ಪ್ರಭಾವಗಳು

ಎಷ್ಟರಮಟ್ಟಿಗಿವೆಯೆಂಬುದನ್ನು ನೀನೇ ನೋಡಿದೆಯಲ್ಲವೇ? ನನ್ನ ಮಕ್ಕಳು ನನ್ನ ಮಾತನ್ನು ಎಷ್ಟರಮಟ್ಟಿಗೆ ಕೇಳುತ್ತಾರೆಂಬುದನ್ನೂ ನೀನೇ ಪ್ರತ್ಯಕ್ಷವಾಗಿ ನೋಡಿರುವೆ. ಶತ್ರುಕರ್ಶನನೇ! ನಿನಗೆ ಪರೋಕ್ಷವಾದುದು ಯಾವುದೂ ಇಲ್ಲ (ನಿನಗೆ ತಿಳಿಯದೇ ಇರುವುದು ಯಾವುದೂ ಇರುವುದಿಲ್ಲ). ಕೇಶವ! ನನಗೂ ಕೌರವ-ಪಾಂಡವರಲ್ಲಿ ಸಂಧಿಯೇರ್ಪಡಬೇಕೆಂಬ ಆಶಯವಿದೆ. ಅದಕ್ಕಾಗಿ ನಾನೂ ಪ್ರಯತ್ನಿಸುತ್ತಿದ್ದೇನೆ. ಆದರೆ ನನ್ನ ಅವಸ್ಥೆಯು ಮಾತ್ರ ಈ ರೀತಿಯಾಗಿದೆ. ನನ್ನ ಮಾತು ಬಹಳ ದುರ್ಬಲವಾಗಿದೆ. ನನ್ನ ಮಾತಿಗೆ ಬೆಲೆಯೆಂಬುದೇ ಇಲ್ಲವಾಗಿದೆ. ಈ ವಿಷಯವನ್ನು ಪ್ರತ್ಯಕ್ಷವಾಗಿಯೇ ನೋಡಿರುವ ನೀನು ದಯಮಾಡಿ ನನ್ನ ವಿಷಯದಲ್ಲಿ ಸಂಶಯಪಡಬೇಡ. ಪಾಂಡವರ ವಿಷಯದಲ್ಲಿ ನನಗೆ ಖಂಡಿತವಾಗಿಯೂ ಕೆಟ್ಟ ಅಭಿಪ್ರಾಯವಿಲ್ಲ. ಸದಭಿಪ್ರಾಯವೇ ಇದೆ. (ಅವರನ್ನೂ ನನ್ನ ಮಕ್ಕಳೆಂದೇ ನಾನು ಭಾವಿಸಿದ್ದೇನೆ.) ಈ ವಿಷಯವಾಗಿ ನಾನು ದುರ್ಯೋಧನನಿಗೆ ಹೇಳಿದ ಹಿತವಾಕ್ಯವನ್ನೂ ನೀನು ಪ್ರತ್ಯಕ್ಷದಲ್ಲಿಯೇ ಇದ್ದು ಕೇಳಿರುವೆ. ಸರ್ವಪ್ರಯತ್ನದಿಂದಲೂ ಪಾಂಡವ-ಕೌರವರ ನಡುವೆ ಶಾಂತಿಸ್ಥಾಪನೆಯಾಗಬೇಕೆಂದು ಹಗಲಿರುಳೂ ನಾನು ಪ್ರಯತ್ನಿಸುತ್ತಿರುವ ವಿಷಯವು ಕೌರವರಿಗೂ ತಿಳಿದಿದೆ ಮತ್ತು ಹೊರದೇಶಗಳಿಂದ ಬಂದಿರತಕ್ಕ ರಾಜರೆಲ್ಲರೂ ಈ ವಿಷಯವನ್ನರಿತಿದ್ದಾರೆ."

ಜನಮೇಜಯ! ಧೃತರಾಷ್ಟ್ರನು ಶ್ರೀಕೃಷ್ಣನೊಡನೆ ಹೀಗೆಂದು ಹೇಳಿದ ನಂತರ ಮಹಾಬಾಹುವಾದ ಜನಾರ್ದನನು ಧೃತರಾಷ್ಟ್ರನನ್ನೂ, ಪಿತಾಮಹನಾದ ಭೀಷ್ಮನನ್ನೂ, ದ್ರೋಣರನ್ನೂ, ವಿದುರನನ್ನೂ, ಬಾಹ್ಲಿಕನನ್ನೂ ಮತ್ತು ಕೃಪರನ್ನೂ ಕುರಿತು ಹೇಳಿದನು :

"ಕೌರವರ ಮಹಾಸಭೆಯಲ್ಲಿ ನಡೆದ ವೃತ್ತಾಂತವು ನಿಮ್ಮೆಲ್ಲರಿಗೂ ತಿಳಿದ ವಿಷಯವೇ ಆಗಿದೆ. ಮೂರ್ಖನಾದ ದುರ್ಯೋಧನನು ಯಾವ ರೀತಿಯಲ್ಲಿ ಅಶಿಷ್ಟರಂತೆ ರೋಷಪೂರಿತನಾಗಿ ಸಭೆಯನ್ನು ಬಿಟ್ಟು ಹೊರಟು ಹೋದನೆಂಬುದನ್ನು ನೀವೆಲ್ಲರೂ ಪ್ರತ್ಯಕ್ಷವಾಗಿಯೇ ನೋಡಿರುತ್ತೀರಿ. (ಆದುದರಿಂದ ಸಂಧಿಗೆ ಅವನು ಸಿದ್ಧನಾಗಿಲ್ಲವೆಂಬುದು ಸ್ಪಷ್ಟವಾಗಿಯೇ

ಇದೆ.) 'ಧೃತರಾಷ್ಟ್ರನೇ ರಾಜನಾಗಿದ್ದಾನೆ. ಅವನಾದರೂ ಸಂಧಿಗೆ ಒಪ್ಪಲಿ. ಮೂರ್ಖನಾದ ಮಗನನ್ನು ನಿಗ್ರಹಿಸಲಿ. ಕುಲದ ವಿನಾಶವಾಗುವುದಕ್ಕಿಂತ ಒಬ್ಬನನ್ನು ನಿಗ್ರಹಿಸುವುದೇ ಲೇಸು' – ಎಂದು ಭಾವಿಸಿ ಸಲಹೆ ನೀಡಿದರೆ ಇವನಾಡುವ ಮಾತನ್ನು ಕೇಳಿದಿರಾ?

**ವದತ್ಯನೀಶಮಾತ್ಮಾನಂ ಧೃತರಾಷ್ಟ್ರೋ ಮಹೀಪತಿಃ ॥೩೮॥**

'ನಾನು ಸ್ವಾಮಿಯಲ್ಲ; ರಾಜನಲ್ಲ; ನನ್ನ ಮಗನನ್ನು ನಿಯಂತ್ರಿಸುವ ಸಾಮರ್ಥ್ಯವು ನನಗಿಲ್ಲ' – ಎಂದು ಸ್ಪಷ್ಟವಾಗಿಯೇ ಮಹೀಪತಿಯಾದ ಧೃತರಾಷ್ಟ್ರನು ಹೇಳಿಬಿಟ್ಟಿದ್ದಾನೆ. ಆದುದರಿಂದ ಇಲ್ಲಿ ನನ್ನ ಕಾರ್ಯವೇನೂ ಇರುವುದಿಲ್ಲ. ನಿಮ್ಮೆಲ್ಲರ ಅನುಮತಿಯನ್ನೂ ಪಡೆದು ಯುಧಿಷ್ಠಿರನಿರುವೆಡೆಗೆ ಹೋಗುತ್ತೇನೆ" – ಹೀಗೆ ಹೇಳಿ ಮಾಧವನು ರಥದಲ್ಲಿ ಕುಳಿತನು.

ಜನಮೇಜಯ! ಶ್ರೀಕೃಷ್ಣನ ಅಪ್ಪಣೆಯನ್ನು ಪಡೆದು ಮಹಾಧನುರ್ಧರರಾದ ಪುರುಷವೀರರಾದ ಭರತರ್ಷಭರು ರಥಸ್ಥನಾಗಿದ್ದ ಕೇಶವನನ್ನೇ ಅನುಸರಿಸಿ ಹೊರಟರು. ಶ್ರೀಕೃಷ್ಣನ ಹಿಂದೆ ಭೀಷ್ಮ, ದ್ರೋಣ, ಕೃಪ, ವಿದುರ, ಧೃತರಾಷ್ಟ್ರ, ಬಾಹ್ಲಿಕ, ಅಶ್ವತ್ಥಾಮಾ, ವಿಕರ್ಣ, ಮಹಾರಥನಾದ ಯುಯುತ್ಸು–ಇವರುಗಳೂ ಹೊರಟರು. ಸಣ್ಣ-ಸಣ್ಣ ಗಂಟೆಗಳಿಂದ ಶಬ್ದಾಯಮಾನವಾಗಿದ್ದ, ಶುಭ್ರವಾಗಿದ್ದ ಮಹಾರಥದಲ್ಲಿ ಕುಳಿತು ಶೌರಿಯು ಕುರುಪ್ರವೀರರು ನೋಡುತ್ತಿದ್ದಂತೆಯೇ-ತನ್ನ ತಂದೆಯ ತಂಗಿಯಾದ ಕುಂತೀದೇವಿಯಿದ್ದ ಭವನದ ಕಡೆಗೆ ಪ್ರಯಾಣಮಾಡಿದನು.

೧೩೧ನೆಯ ಅಧ್ಯಾಯವು ಮುಗಿಯಿತು.

೧೩೨ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ)

## ಕುಂತೀದೇವಿಯು ಶ್ರೀಕೃಷ್ಣನ ಮೂಲಕವಾಗಿ ಮಕ್ಕಳಿಗೆ ಕಳುಹಿಸಿಕೊಟ್ಟ ಸಂದೇಶ

ಜನಮೇಜಯ! ಶ್ರೀಕೃಷ್ಣನು ಸೋದರತ್ತೆಯಾದ ಕುಂತಿಯ ಮನೆ

ಯನ್ನು ಪ್ರವೇಶಿಸಿ ಅವಳ ಕಾಲುಗಳಿಗೆ ಅಭಿವಾದನಪೂರ್ವಕವಾಗಿ ನಮಸ್ಕರಿಸಿ ಕೌರವರ ಸಭೆಯಲ್ಲಿ ನಡೆದುದನ್ನು ಸಂಕ್ಷೇಪವಾಗಿ ಕುಂತಿಗೆ ತಿಳಿಸಿದನು :

"ಅತ್ತೇ! ನಾನೂ ಮತ್ತು ಸಂಧಾನಾಕಾಂಕ್ಷಿಗಳಾಗಿ ಆಗಮಿಸಿದ್ದ ಋಷಿಗಳೂ ನಾನಾಪ್ರಕಾರವಾಗಿ, ಹಿಂದೆ ನಡೆದ ನಿದರ್ಶನಗಳೊಡನೆ ಕೌರವನಿಗೆ ತಿಳಿಹೇಳಿದೆವು. ದುರ್ಯೋಧನನು ಒಪ್ಪಿಕೊಳ್ಳಬಹುದಾದ ರೀತಿಯಲ್ಲೇ ಹೇಳಿದೆವು. ಆದರೆ ಅವನು ನಮ್ಮ ಮಾತನ್ನು ಮಾನ್ಯಮಾಡ ಲಿಲ್ಲ. ಹೆಚ್ಚು ಪ್ರಯತ್ನಿಸಿ ಪ್ರಯೋಜನವೇನೂ ಇಲ್ಲ. ದುರ್ಯೋಧನನ ವಶವರ್ತಿಯಾಗಿರುವ ರಾಜಸಮೂಹವೆಲ್ಲವೂ ಕಾಲದ ಪಕ್ವತೆಯನ್ನು (ಅಂತ್ಯಕಾಲವನ್ನು) ಹೊಂದಿರುವಂತೆ ಕಾಣುತ್ತದೆ. ನಿನ್ನ ಅನುಮತಿಯನ್ನು ಪಡೆದು ಶೀಘ್ರವಾಗಿ ಪಾಂಡವರಲ್ಲಿಗೆ ಹೋಗಬೇಕೆಂದಿರುತ್ತೇನೆ.

'ಕೃಷ್ಣ! ನಿನ್ನ ಅತ್ತೆಯು ಏನು ಹೇಳಿದಳು?' – ಎಂದು ನಿನ್ನ ಮಕ್ಕಳು ಕೇಳಿದರೆ ನಾನು ಏನೆಂದು ಹೇಳಲಿ? ಮಹಾಪ್ರಾಜ್ಞಳೇ! ಈ ವಿಷಯವನ್ನು ನೀನು ನನ್ನೊಡನೆ ಹೇಳು. ನೀನು ನಿನ್ನ ಮಕ್ಕಳಿಗೆ ನೀಡಲಿರುವ ಸಂದೇಶವನ್ನು ನಾನು ನಿನ್ನಿಂದ ಕೇಳಬೇಕೆಂದಿರುತ್ತೇನೆ."

ಕುಂತಿಯು ಹೇಳಿದಳು :

"ಕೇಶವ! ಧರ್ಮಾತ್ಮನಾದ ಯುಧಿಷ್ಠಿರನೊಡನೆ ನೀನು ಹೀಗೆ ಹೇಳಬೇಕು :

**ಭೂಯಾಂಸ್ತೇ ಹೀಯತೇ ಧರ್ಮೋ ಮಾ ಪುತ್ರಕ ವೃಥಾ ಕೃಥಾಃ ।**<br>
**ಶ್ರೋತ್ರಿಯಸ್ಯೇವ ತೇ ರಾಜನ್ಮನ್ದ ಕಸ್ಯಾವಿಪಶ್ಚಿತಃ ।**<br>
**ಅನುವಾಕಹತಾ ಬುದ್ಧಿರ್ಧರ್ಮಮೇವೈಕಮೀಕ್ಷತೇ ॥೬॥**

"ಮಗು! ನಿನ್ನ ಪ್ರಜಾಪಾಲನಧರ್ಮಕ್ಕೆ ಹೆಚ್ಚು ಹಾನಿಯುಂಟಾಗುತ್ತದೆ. ಮಾಡಬೇಕಾದ ಕರ್ತವ್ಯವನ್ನು ಮಾಡದೇ ವ್ಯರ್ಥವಾಗಿ ಕಾಲಯಾಪನೆ ಮಾಡಬೇಡ. ಕಾಲಯಾಪನೆಮಾಡಿದಷ್ಟೂ ಪ್ರಜಾಪಾಲನಧರ್ಮವು ಹಾಳಾಗುತ್ತದೆ.

ನೀನೊಬ್ಬ ಶುದ್ಧಶ್ರೋತ್ರಿಯ ಬ್ರಾಹ್ಮಣನಂತಿರುವೆ. ಶ್ರೋತ್ರಿಯನು

ವೇದವನ್ನು ಕಂಠಪಾಠಮಾಡುವುದರಲ್ಲೇ ನೆಟ್ಟದೃಷ್ಟಿಯುಳ್ಳವನಾಗಿರುವಂತೆ - ನೀನು ಧರ್ಮದಲ್ಲಿಯೇ ನೆಟ್ಟಮನಸ್ಸುಳ್ಳವನಾಗಿರುವೆ. ನಿನ್ನ ಬುದ್ಧಿಯು ಧರ್ಮವೊಂದರಲ್ಲಿಯೇ ಲೀನವಾಗಿಬಿಟ್ಟಿದೆ. ಶ್ರೋತ್ರಿಯನು ವೇದಾಧ್ಯಯನ ಮಾಡಬೇಕು. ಅಂತೆಯೇ ನೀನು ಧಾರ್ಮಿಕನಾಗಿರಬೇಕು. ವೇದಾಧ್ಯಯನ ಮಾಡಿದ ಶ್ರೋತ್ರಿಯನು ವೇದದ ಅರ್ಥವನ್ನೂ ತಿಳಿದುಕೊಳ್ಳಬೇಕು. ವೇದವನ್ನು ಕಂಠಪಾಠಮಾಡುವುದರಲ್ಲಿಯೇ ಕಾಲಕಳೆಯಬಾರದು. ವೇದಾಧ್ಯಯನಮಾಡಿದವನು 'ಶ್ರೋತ್ರಿಯ' ಎಂಬುದೇನೋ ನಿಜ. ಆದರೆ ಅವನು ವೇದಾರ್ಥವನ್ನು ತಿಳಿದುಕೊಳ್ಳದಿದ್ದರೆ 'ಮಂದಕ, ಅವಿಪಶ್ಚಿತ, ಮಂದಬುದ್ಧಿಯವನು, ಅವಿದ್ಯಾವಂತ' ಎಂಬ ಅಪವಾದವನ್ನು ಪಡೆದುಕೊಳ್ಳುತ್ತಾನೆ. ಅನುವಾಕಹತಬುದ್ಧಿಯವನಾಗುತ್ತಾನೆ.

(ಒಂದು, ಎರಡು, ಮೂರು ಅಥವಾ ನಾಲ್ಕು ಹನಸ್ಸುಗಳು ಸೇರಿ ಒಂದು ಅನುವಾಕವಾಗುತ್ತದೆ. ಅನುವಾಕವು ಎಲ್ಲಿಗೆ ಮುಗಿಯಿತು ? ಮುಂದಿನ ಹನಸ್ಸು ಯಾವುದು? ಅನುವಾಕದ ಕಡೆಯ ಹನಸ್ಸಿನಲ್ಲಿ ಎಷ್ಟು ಪದಗಳಿವೆ ಅಥವಾ ಎಷ್ಟು ವಾಕ್ಯಗಳಿವೆ ? ಕೋವೆಯಲ್ಲಿ ಹೇಳಿರುವ ಸಂಖ್ಯಾನುಸಾರವಾಗಿ ಪದಗಳು ಅಥವಾ ವಾಕ್ಯಗಳು ಬಂದಿವೆಯೇ? ಲೋಪವಾಯಿತೇ? ಇತ್ಯಾದಿಗಳ ಕಡೆ ಬುದ್ಧಿಯು ಹೋಗುತ್ತದೆಯೇ ಹೊರತು ಅರ್ಥದ ಕಡೆ ಒಮ್ಮೆಯಾದರೂ ಹೋಗುವುದಿಲ್ಲ. ಅದರಂತೆ ನಿನ್ನ ಬುದ್ಧಿಯೂ ಕೇವಲ ಧರ್ಮದ ಕಡೆಗಿರುವುದೇ ಹೊರತು ಅರ್ಥದ ಕಡೆಗೆ ತಿರುಗಿರುವುದಿಲ್ಲ. ರಾಜವಂಶದಲ್ಲಿ ಹುಟ್ಟಿರುವ ನೀನು ನಿನ್ನ ಬುದ್ಧಿಯನ್ನು ಅರ್ಥದ ಕಡೆಗೂ ತಿರುಗಿಸದಿದ್ದರೆ ನೀನೂ ಮಂದನೂ ಅವಿಪಶ್ಚಿತನೂ ಆಗುವೆ. ನೀನು ಕ್ಷತ್ರಿಯನಾಗಿ ಪ್ರಜಾಪಾಲನಧರ್ಮವನ್ನು ಪರಿಪಾಲಿಸಬೇಕಾಗಿರುವುದರಿಂದ ನಿನ್ನ ಮನಸ್ಸು ಧರ್ಮಮಾತ್ರದಲ್ಲಿ ಲೀನವಾಗಿದ್ದರೆ ಸಾಲದು ; ಅರ್ಥ-ಕಾಮಗಳಲ್ಲಿಯೂ ಇರಬೇಕು. ಕೇವಲ ಸಾಮಾನ್ಯಧರ್ಮದಲ್ಲಿರ ಬಾರದು ; ವಿಶೇಷಧರ್ಮದಲ್ಲಿಯೂ ಇರಬೇಕು.)

**ಅಜ್ಞಾವೇಕ್ಷಸ್ವ ಧರ್ಮಂ ತ್ವಂ ಯಥಾ ಸೃಷ್ಟಃ ಸ್ವಯಮ್ಭುವಾ ।**
**ಬಾಹುಭ್ಯಾಂ ಕ್ಷತ್ರಿಯಾಃ ಸೃಷ್ಟಾ ಬಾಹುವೀರ್ಯೋಪಜೀವಿನಃ ॥೭॥**

ಮಗು! ಬ್ರಹ್ಮನು ನಿನಗಾಗಿ ಯಾವ ಧರ್ಮವನ್ನು ಸಿದ್ಧಪಡಿಸಿರುವ ನೆಂಬುದನ್ನು ಮನಗಾಣು. ಪರಮಪುರುಷನ ಬಾಹುಗಳಿಂದ ಕ್ಷತ್ರಿಯರ ಸೃಷ್ಟಿ ಯಾಗಿದೆ. 'ಬಾಹೂ ರಾಜನ್ಯಃ ಕೃತಃ' ಎಂಬ ಪುರುಷಸೂಕ್ತದ ಉಕ್ತಿಯಿದೆ. ಕ್ಷತ್ರಿಯರು ಪರಮಪುರುಷನ ಬಾಹುಗಳಿಂದ ಹುಟ್ಟಿದವರಾದುದರಿಂದ ಅವರು ಬಾಹುವೀರ್ಯೋಪಜೀವಿಗಳು. ಭುಜಬಲ-ಪರಾಕ್ರಮಗಳಿಂದ ಜೀವಿಸತಕ್ಕವರು.

**ಕ್ರೂರಾಯ ಕರ್ಮಣೇ ನಿತ್ಯಂ ಪ್ರಜಾನಾಂ ಪರಿಪಾಲನೇ ॥೮॥**

ಕ್ಷತ್ರಿಯರಾದವರು ದುಷ್ಟಶಿಕ್ಷಣರೂಪವಾದ ಕ್ರೂರಕರ್ಮಕ್ಕೂ ಸಿದ್ಧರಾಗಿರಬೇಕು. ಪ್ರಜೆಗಳ ಪರಿಪಾಲನೆಗೂ ಸಿದ್ಧರಾಗಿರಬೇಕು.

ಈ ವಿಷಯದಲ್ಲಿ ನಾನು ವೃದ್ಧರಿಂದ ಕೇಳಿರುವ ಒಂದು ದೃಷ್ಟಾಂತವನ್ನು ಹೇಳುತ್ತೇನೆ ; ಕೇಳು, ಮಗು! ಹಿಂದೊಮ್ಮೆ ಧನಾಧ್ಯಕ್ಷನಾದ ಕುಬೇರನು ರಾಜರ್ಷಿಯಾದ ಮುಚುಕುಂದನ ವಿಷಯದಲ್ಲಿ ಸುಪ್ರೀತನಾಗಿ ಅವನಿಗೆ ಈ ಭೂಮಂಡಲವನ್ನೇ ಕೊಟ್ಟುಬಿಟ್ಟನು. ಆದರೆ ಮುಚುಕುಂದನು ಅದನ್ನು ಪರಿಗ್ರಹಿಸಲಿಲ್ಲ. ಅವನು ಕುಬೇರನು ಕೊಟ್ಟ ಭೂಮಂಡಲವನ್ನು ಪರಿಗ್ರಹಿಸದಿರಲು ಕಾರಣವು ಗೊತ್ತೇ? ಮಗು! ಮುಚುಕುಂದನು ಭೂಮಿಯನ್ನು ಪರಿಗ್ರಹಿಸದೇ ಇದ್ದುದು ಭೂಮಿಯೇ ಬೇಡವೆಂಬ ಅಭಿಪ್ರಾಯದಿಂದಲ್ಲ.

**ಬಾಹುವೀರ್ಯಾರ್ಜಿತಂ ರಾಜ್ಯಮಶ್ನೀಯಾಮಿತಿ ಕಾಮಯೇ ॥೧೧॥**

'ಬಾಹುಬಲದಿಂದ ಜಯಿಸಲ್ಪಟ್ಟ ಭೂಮಿಯನ್ನು ಮಾತ್ರವೇ ಆಳಲು ಅಪೇಕ್ಷಿಸುತ್ತೇನೆ' ಹೀಗೆಂದೇ ಮುಚುಕುಂದನು ಕುಬೇರನಿಗೆ ಹೇಳಿಬಿಟ್ಟನು. ಮುಚುಕುಂದನ ಮಾತನ್ನು ಕೇಳಿ ಕುಬೇರನು ಆಶ್ಚರ್ಯಗೊಂಡನು ಮತ್ತು ಸುಪ್ರೀತನಾದನು. ಅನಂತರದಲ್ಲಿ ಕ್ಷತ್ರಧರ್ಮಾನುವ್ರತನಾದ ಮುಚು ಕುಂದನು ತನ್ನ ಇಚ್ಛೆಯಂತೆ ಸ್ವಭುಜಬಲ-ಪರಾಕ್ರಮಗಳಿಂದ ಅಖಂಡ ಭೂಮಂಡಲವನ್ನೂ ಜಯಿಸಿ ಅನೇಕ ವರ್ಷಗಳ ಪರ್ಯಂತವಾಗಿ ಆಳಿದನು.

**ಯಂ ಹಿ ಧರ್ಮಂ ಚರನ್ತೀಹ ಪ್ರಜಾ ರಾಜ್ಞಾ ಸುರಕ್ಷಿತಾಃ ।**
**ಚತುರ್ಥಂ ತಸ್ಯ ಧರ್ಮಸ್ಯ ರಾಜಾ ವಿನ್ದೇತ ಭಾರತ ॥೧೨॥**

ಭಾರತ! ರಾಜನಿಂದ ಸಂರಕ್ಷಿತರಾದ ಪ್ರಜೆಗಳು ಯಾವ ಧರ್ಮವನ್ನು ಆಚರಿಸುತ್ತಾರೆಯೋ – ಆ ಧರ್ಮದ ನಾಲ್ಕನೆಯ ಒಂದು ಭಾಗ ಫಲವನ್ನು ಪ್ರಜೆಗಳನ್ನು ಪರಿಪಾಲನೆಮಾಡಿದ ರಾಜನು ಪಡೆದುಕೊಳ್ಳುತ್ತಾನೆ.

**ರಾಜಾ ಚರತಿ ಚೇದ್ಧರ್ಮಂ ದೇವತ್ವಾಯೈವ ಕಲ್ಪತೇ ।**
**ಸ ಚೇದಧರ್ಮಂ ಚರತಿ ನರಕಾಯೈವ ಗಚ್ಛತಿ ॥೧೩॥**

ರಾಜನಾದವನು ದುಷ್ಟಶಿಕ್ಷಣ-ಶಿಷ್ಟರಕ್ಷಣಧರ್ಮವನ್ನು ಆಚರಿಸಿದರೆ ಅವನಿಗೆ ದೇವತ್ವವೇ ಪ್ರಾಪ್ತವಾಗುತ್ತದೆ. (ಅವಸಾನಾನಂತರದಲ್ಲಿ ಸ್ವರ್ಗಪ್ರಾಪ್ತಿಯಾಗಿ ದೇವತೆಗಳಂತೆಯೇ ಸುಖೋಪಭೋಗಗಳನ್ನು ಪಡೆಯುತ್ತಾನೆ.) ರಾಜಧರ್ಮಕ್ಕೆ ವಿರುದ್ಧವಾಗಿ ನಡೆದುಕೊಂಡಿದ್ದೇ ಆದರೆ ನರಕಕ್ಕೇ ಹೋಗುತ್ತಾನೆ.

**ದಣ್ಡನೀತಿಃ ಸ್ವಧರ್ಮೇಣ ಚಾತುರ್ವರ್ಣ್ಯಂ ನಿಯಚ್ಛತಿ ।**
**ಪ್ರಯುಕ್ತಾ ಸ್ವಾಮಿನಾ ಸಮ್ಯಗಧರ್ಮೇಭ್ಯಶ್ಚ ಯಚ್ಛತಿ ॥೧೪॥**

ರಾಜನಾದವನು ಸ್ವಧರ್ಮಾನುಸಾರವಾಗಿ ದಂಡನೀತಿಯನ್ನು ಸಮಯವರಿತು ಪ್ರಯೋಗಿಸಿದರೆ ನಾಲ್ಕುವರ್ಣಗಳವರನ್ನೂ ಅವರವರ ಧರ್ಮದಲ್ಲಿರಲು ಆ ದಂಡನೀತಿಯು ನಿಯಂತ್ರಿಸುತ್ತದೆ ; ಅಧರ್ಮದಲ್ಲಿ ಬೀಳದಂತೆಯೂ ಮಾಡುತ್ತದೆ. (ಆದುದರಿಂದ ರಾಜನಾದವನು ದಂಡನೀತಿಯನ್ನೇ ಅನುಸರಿಸಿ ನಡೆಯಬೇಕು. ಸಾಮ-ದಾನ-ಭೇದಗಳು ಪ್ರಯೋಜನಕ್ಕೆ ಬರಲಾರವು.)

**ದಣ್ಡನೀತ್ಯಾಂ ಯದಾ ರಾಜಾ ಸಮ್ಯಕ್ಕಾರ್ತ್ಸ್ನ್ಯೇನ ವರ್ತತೇ ।**
**ತದಾ ಕೃತಯುಗಂ ನಾಮ ಕಾಲಃ ಶ್ರೇಷ್ಠಃ ಪ್ರವರ್ತತೇ ॥೧೫॥**

ಯಾವಾಗ ರಾಜನು ದಂಡನೀತಿಯನ್ನು ಪೂರ್ಣವಾಗಿ ವಿವೇಚಿಸಿ ಸಮಯಗಳಲ್ಲಿ ಚೆನ್ನಾಗಿ ಪ್ರಯೋಗಿಸುತ್ತಾನೆಯೋ – ಆಗ ಕೃತಯುಗವೆಂಬ ಹೆಸರಿನ ಕಾಲವು ಪ್ರಾರಂಭವಾಗುತ್ತದೆ.

(ರಾಜ್ಯದಲ್ಲಿ ನಿಷ್ಪಕ್ಷಪಾತವಾದ ರೀತಿಯಿಂದ ತಪ್ಪಿಗೆ ತಕ್ಕುದಾದ ಶಿಕ್ಷೆ

ಕೊಡುವ ವ್ಯವಸ್ಥೆಯಿರಬೇಕು. ಆ ವ್ಯವಸ್ಥೆಯೊಂದಿದ್ದರೆ ಜನರಾಗಲೀ, ಅಧಿಕಾರಿಗಳಾಗಲೀ – ಯಾವ ವಿಧವಾದ ಅಪರಾಧಗಳನ್ನೂ ಮಾಡುವುದಿಲ್ಲ. ಜನರೆಲ್ಲರೂ ಕೃತಯುಗದಲ್ಲಿರುವಂತೆ ಸತ್ಯನಿಷ್ಠರೇ ಆಗಿರುತ್ತಾರೆ.)

**ಕಾಲೋ ವಾ ಕಾರಣಂ ರಾಜ್ಞೋ ರಾಜಾ ವಾ ಕಾಲಕಾರಣಮ್ ।**
**ಇತಿ ತೇ ಸಂಶಯೋ ಮಾ ಭೂದ್ರಾಜಾ ಕಾಲಸ್ಯ ಕಾರಣಮ್ ॥೧೬॥**

ರಾಜ್ಯದಲ್ಲಾಗುವ ಏರು-ಪೇರುಗಳಿಗೆ ಕಾಲವು ಕಾರಣವೇ? ಕಾಲದ ವಿಪರ್ಯಾಸಕ್ಕೆ ರಾಜನು ಕಾರಣನೇ? – ಎಂಬ ವಿಷಯದಲ್ಲಿ ಸ್ವಲ್ಪವಾದರೂ ಸಂಶಯಪಡಬೇಡ. ರಾಜನೇ ಕಾಲದ ವಿಪರ್ಯಾಸಕ್ಕೆ ಕಾರಣನಾಗುತ್ತಾನೆ.*

**ರಾಜಾ ಕೃತಯುಗಸ್ರಷ್ಟಾ ತ್ರೇತಾಯಾ ದ್ವಾಪರಸ್ಯ ಚ ।**
**ಯುಗಸ್ಯ ಚ ಚತುರ್ಥಸ್ಯ ರಾಜಾ ಭವತಿ ಕಾರಣಮ್ ॥೧೭॥**

ಕೃತಯುಗದ ಪ್ರವರ್ತಕನು ರಾಜನೇ ಆಗಿದ್ದಾನೆ. ತ್ರೇತಾ ಮತ್ತು ದ್ವಾಪರಯುಗಗಳ ಪ್ರವರ್ತಕನೂ ರಾಜನೇ ಆಗಿದ್ದಾನೆ. ನಾಲ್ಕನೆಯದಾದ ಕಲಿಯುಗದ ಸ್ರಷ್ಟ್ರವೂ ರಾಜನೇ ಆಗಿದ್ದಾನೆ. (ಕಾಲವನ್ನು ಸತ್ಯಯುಗವನ್ನಾಗಿ ಅಥವಾ ಕಲಿಯುಗವನ್ನಾಗಿ ಪರಿವರ್ತಿಸುವ ಕಾರ್ಯವು ರಾಜನ

---

* ರಾಜ್ಯದ ಔನ್ನತ್ಯಕ್ಕೆ ಅಥವಾ ಅಧೋಗತಿಗೆ ಕಾಲವು ಕಾರಣವಾಗುವುದೇ? ಕಾಲವು ಕೆಟ್ಟುಹೋಯಿತೆಂದರೆ ಅರ್ಥವೇನು? ಕಾಲವು ಏಕೆ ಕೆಡುತ್ತದೆ? ಹೇಗೆ ಕೆಡುತ್ತದೆ? ಇದಕ್ಕೆ ಕಾರಣರಾರು? - ಇತ್ಯಾದಿಗಳು ನಮ್ಮ ದೈನಂದಿನಪ್ರಶ್ನೆಯೇ ಆಗಿದೆ. ಕಾಲವು ಕೆಟ್ಟುಹೋಯಿತೆಂದರೆ ಸೂರ್ಯ-ಚಂದ್ರಾದಿಗಳ ಗಮನವೇನಾದರೂ ನಿಂತುಹೋಗಿರುವುದೇ? ಮಳೆ-ಬೆಳೆಗಳಾಗುತ್ತಿಲ್ಲವೇ? ಹಾಕಿದ ಪೈರು ಫಲಕೊಡುತ್ತಿಲ್ಲವೇ? ಹಣ್ಣುಗಿಡಗಳು ಹಣ್ಣು ಕೊಡುತ್ತಿಲ್ಲವೇ? ಹಸುಗಳು ಹಾಲು ಕರೆಯುತ್ತಿಲ್ಲವೇ? ಪ್ರಕೃತಿಯಲ್ಲಿ ಯಾವುದು ತಾನೇ ತನ್ನ ಕಾರ್ಯವನ್ನು ನಿಲ್ಲಿಸಿದೆ? ಆದರೂ ಕಾಲವು ಕೆಟ್ಟಿದೆಯೆಂದು ಎಲ್ಲರೂ ಹೇಳುತ್ತಾರೆ. ಎಲ್ಲರೂ ಹೀಗೆ ಭಾವಿಸಿದ್ದಾರೆ. ಆದರೆ ಕಾಲವು ಕೆಟ್ಟಿದೆಯೆಂದು ಹೇಳುವವರೆಲ್ಲರೂ ಯಾವುದೋ ಒಂದು ವಿಷಯವನ್ನೇ ಲಕ್ಷ್ಯವನ್ನಾಗಿಟ್ಟುಕೊಂಡು ಹೇಳುವುದಿಲ್ಲ. ಒಬ್ಬೊಬ್ಬರಿಗೆ ಒಂದೊಂದು ವಿಷಯವು ಕಾಲ ಕೆಟ್ಟಿರುವ ಭಾವನೆಯನ್ನುಂಟುಮಾಡುತ್ತದೆ. ಕೆಲವರು ಈಗಿನಕಾಲದ ಸ್ತ್ರೀ-ಪುರುಷರ ವೇಷ-ಭೂಷಣಗಳನ್ನು ನೋಡಿ ಕಾಲ ಕೆಟ್ಟಿತೆನ್ನು

ದಾಗಿದೆ. ಕೃತಯುಗದಲ್ಲಿ ನಾಲ್ಕು ಪಾದ ಧರ್ಮವಿರುತ್ತದೆಂದೂ ಕಲಿಯುಗದಲ್ಲಿ ಒಂದು ಪಾದ ಮಾತ್ರ ಧರ್ಮವಿರುತ್ತದೆಂದೂ ಹೇಳುತ್ತಾರೆ. ರಾಜನು ದಂಡನೀತಿಯನ್ನು ವಿಚಕ್ಷಣತೆಯಿಂದ ಪ್ರಯೋಗಿಸಿದರೆ ಕಲಿಯುಗದಲ್ಲಿಯೇ ಕೃತಯುಗದ ಧರ್ಮವನ್ನೂ ತರಬಹುದು ; ಎಲ್ಲರೂ ಧಾರ್ಮಿಕರಾಗಿರುವಂತೆ ಮಾಡಬಹುದು.)

**ಕೃತಸ್ಯ ಕರಣಾದ್ರಾಜಾ ಸ್ವರ್ಗಮತ್ಯನ್ತಮಶ್ನುತೇ ।**
**ತ್ರೇತಾಯಾಃ ಕರಣಾದ್ರಾಜಾ ಸ್ವರ್ಗಂ ನಾತ್ಯನ್ತಮಶ್ನುತೇ ॥೧೮॥**

ವ್ಯವಸ್ಥಿತವಾದ ದಂಡನೀತಿಯಿಂದಾಗಿ ರಾಜನಾದವನು ಕಾಲವನ್ನು ಕೃತಯುಗವನ್ನಾಗಿ ಪರಿವರ್ತಿಸುವುದರಿಂದ (ನಾಲ್ಕು ಪಾದ ಧರ್ಮವುಳ್ಳದ್ದನ್ನಾಗಿ ಮಾಡುವುದರಿಂದ) ಅಕ್ಷಯವಾದ ಸ್ವರ್ಗಸುಖವನ್ನು ಪಡೆಯುತ್ತಾನೆ. ರಾಜನು ಕಾಲವನ್ನು ತ್ರೇತಾಯುಗವನ್ನಾಗಿ ಪರಿವರ್ತಿಸುವುದರಿಂದ (ಮೂರು ಪಾದ ಧರ್ಮವುಳ್ಳ ಕಾಲವನ್ನಾಗಿ ಪರಿವರ್ತಿಸುವುದರಿಂದ) ಸ್ವರ್ಗಕ್ಕೆ ಹೋಗುತ್ತಾನೆ. ಆದರೆ ಕೃತಯುಗಪರಿವರ್ತಕನಿಗೆ ಲಭ್ಯವಾಗುವ ಅಕ್ಷಯವಾದ ಸ್ವರ್ಗಸುಖವು ಅವನಿಗೆ ಲಭ್ಯವಾಗುವುದಿಲ್ಲ.

**ಪ್ರವರ್ತನಾದ್ದ್ವಾಪರಸ್ಯ ಯಥಾಭಾಗಮುಪಾಶ್ನುತೇ ।**
**ಕಲೇಃ ಪ್ರವರ್ತನಾದ್ರಾಜಾ ಪಾಪಮತ್ಯನ್ತಮಶ್ನುತೇ ॥೧೯॥**

ಕಾಲವನ್ನು ದ್ವಾಪರಕ್ಕೆ ಪರಿವರ್ತಿಸುವ ರಾಜನು (ಎರಡು ಪಾದ ಧರ್ಮವುಳ್ಳದ್ದನ್ನಾಗಿ ಪರಿವರ್ತಿಸುವುದರಿಂದ) ಸುಖೋಪಭೋಗಗಳನ್ನು ಪೃಥ್ವಿಯಲ್ಲಿ ಯಥಾಯೋಗ್ಯವಾಗಿ ಅನುಭವಿಸುತ್ತಾನೆ. ಆದರೆ ಕಲಿಯುಗ ವನ್ನಾಗಿ ಪರಿವರ್ತಿಸುವುದರಿಂದ ಹೆಚ್ಚು ಪಾಪವನ್ನು ಸಂಚಯನ ಮಾಡಿಕೊಳ್ಳುತ್ತಾನೆ. ಅಂತಹವನಿಗೆ ಇಹ-ಪರಗಳೆರಡರಲ್ಲಿಯೂ ಸುಖವಿಲ್ಲ.

---

ತ್ತಾರೆ. ಮತ್ತೆ ಕೆಲವರು ಕಾರ್ಯಸಾಧನೆಗೆ ಹೋದಾಗ ಲಂಚಕೇಳುವುದನ್ನುದ್ದೇಶಿಸಿ ಕಾಲ ಕೆಟ್ಟಿತೆನ್ನುತ್ತಾರೆ. ಮತ್ತೆ ಕೆಲವರು ಊಟಮಾಡುವಾಗ ಅಕ್ಕಿಯಲ್ಲಿ ಹೇರಳವಾದ ಕಲ್ಲಿರುವುದನ್ನು ಅನುಭವಿಸಿ ಕಾಲ ಕೆಟ್ಟಿತೆನ್ನುತ್ತಾರೆ. ಹೀಗೆಯೇ ಕಾಲ ಕೆಟ್ಟ ಪರಿಣಾಮವಾಗಿ ಒಂದೊಂದು ವಿಷಯವು ಒಬ್ಬೊಬ್ಬನ ಮನಸ್ಸಿಗೆ ಬರುತ್ತದೆ. ಈ

**ತತೋ ವಸತಿ ದುಷ್ಕರ್ಮಾ ನರಕೇ ಶಾಶ್ವತೀಃ ಸಮಾಃ ।**
**ರಾಜದೋಷೇಣ ಹಿ ಜಗತ್ಸ್ಪೃಶ್ಯತೇ ಜಗತಃ ಸ ಚ ॥೨೦॥**

ಕಾಲವನ್ನು ಕಲಿಯುಗವನ್ನಾಗಿ ಪರಿವರ್ತಿಸಿದ ರಾಜನು ಮಹಾ ಪಾಪಿಷ್ಠನಾಗಿ ದುಷ್ಕರ್ಮಿಯಾಗಿ ನರಕದಲ್ಲಿಯೇ ಅನೇಕಸಹಸ್ರವರ್ಷ ಗಳವರೆಗೆ ಬಿದ್ದಿರುತ್ತಾನೆ. ನರಕದುಃಖವನ್ನು ಕೇವಲ ಅವನೊಬ್ಬನೇ ಅನುಭವಿಸುವುದಿಲ್ಲ. ಅಂತಹ ದುಷ್ಕರ್ಮಿಯಾದ ರಾಜನ ದುಷ್ಕರ್ಮಗಳು ಜಗತ್ತಿನ ಮೇಲೂ ಕೆಟ್ಟ ಪರಿಣಾಮವನ್ನುಂಟುಮಾಡುತ್ತವೆ. ಪ್ರಜೆಗಳೂ ಪಾಪಕರ್ಮಗಳಲ್ಲಿ ನಿರತರಾಗುತ್ತಾರೆ. ಅವರು ಮಾಡಿದ ಪಾಪಕರ್ಮದ ಫಲಕ್ಕೆ ದುಷ್ಕರ್ಮಿಯಾದ ರಾಜನೂ ಭಾಗಿಯಾಗುತ್ತಾನೆ.

**ರಾಜಧರ್ಮಾನವೇಕ್ಷಸ್ವ ಪಿತೃಪೈತಾಮಹೋಚಿತಾನ್ ।**
**ನೈತದ್ರಾಜರ್ಷಿವೃತ್ತಂ ಹಿ ಯತ್ರ ತ್ವಂ ಸ್ಥಾತುಮಿಚ್ಛಸಿ ॥೨೧॥**

ಮಗು, ಯುಧಿಷ್ಠಿರ! ನಿನ್ನ ಪಿತೃ-ಪಿತಾಮಹ-ಪ್ರಪಿತಾಮಹರು ಪಾಲನೆಮಾಡುತ್ತಿದ್ದ ರಾಜಧರ್ಮದ ಕಡೆಗೇ ಲಕ್ಷ್ಯವಿಡು. (ಈಗ ನೀನು

---

ಪ್ರಕರಣಗಳಲ್ಲಿ ಕಾಲ ಕೆಟ್ಟಿತೆಂಬುದಕ್ಕೆ ಸೂರ್ಯ-ಚಂದ್ರರ ಚಲನೆ ಸರಿಯಾಗಿಲ್ಲವೆಂದಲ್ಲ. ಇದನ್ನು ಕೂಲಂಕಷವಾಗಿ ಪರಿಶೀಲಿಸಿದರೆ ಸಾಮಾಜಿಕವ್ಯವಸ್ಥೆಯು ಸರಿಯಾಗಿಲ್ಲದಿರುವುದಕ್ಕೇ ಕಾಲ ಕೆಟ್ಟಿತೆಂಬ ಮಾತು ಬಳಕೆಗೆ ಬಂದಿದೆಯೆಂದು ನಿರ್ಧರಿಸಬಹುದಾಗಿದೆ. ಆದರೆ ಸಾಮಾಜಿಕವ್ಯವಸ್ಥೆಯು ಕೆಡಲು ಕಾರಣವೇನು? ಇದಕ್ಕೆ ಕಾರಣರಾರು? - ಎಂದು ವಿವೇಚಿಸಬೇಕಾಗಿ ಬಂದಾಗ ನಾವು ಕುಂತಿಯ ಮಾತನ್ನು ಆಧಾರಭೂತವಾಗಿ ತೆಗೆದುಕೊಳ್ಳಬೇಕಾಗುತ್ತದೆ.

ದಂಡನೀತಿಯೆಂದರೆ ವ್ಯಾಖ್ಯಾನಕಾರರ ಅಭಿಪ್ರಾಯದಂತೆ :

ಧರ್ಮೇಭ್ಯಃ ಧರ್ಮಾರ್ಥಂ ನಿಯಚ್ಛತಿ ನಿರ್ಬನ್ಧಂ ಕರೋತಿ ಇತಿ ದಣ್ಡನೀತಿಃ । ಧರ್ಮವನ್ನು ಪ್ರತಿಷ್ಠಾಪಿಸುವುದಕ್ಕಾಗಿ ನಿರ್ಬಂಧಿಸುವುದೇ ದಂಡನೀತಿ.

'ರಾಜಾ ಕಾಲಸ್ಯ ಕಾರಣಂ' ಕಾಲವು ಕೆಟ್ಟುಹೋಗುವುದಕ್ಕೆ ಅರ್ಥಾತ್ ಸಮಾಜದ ವ್ಯವಸ್ಥೆಯು ಅವ್ಯವಸ್ಥಿತವಾಗುವುದಕ್ಕೆ - ಜನರ ಸ್ವೇಚ್ಛಾಪ್ರವರ್ತನೆಗೆ ರಾಜನೇ ಕಾರಣ. ರಾಜನು ಹೇಗೆ ಕಾರಣ? ಕುಂತಿಯ ಮಾತಿನಲ್ಲಿ - 'ರಾಜನು ದಂಡನೀತಿಯನ್ನು ಸರಿಯಾಗಿ ಪ್ರಯೋಗಿಸುತ್ತಿಲ್ಲ. ದಂಡನೀತಿಯನ್ನು ವ್ಯವಸ್ಥೆಗೊಳಿಸಿದರೆ ಸಮಾಜದ ಸುಧಾರಣೆಯೂ ಆಗುತ್ತದೆ. ಕಾಲವೂ ಸರಿಹೋಗುತ್ತದೆ.'

ಹಾಗೆ ಮಾಡುತ್ತಿಲ್ಲ. ಶಾಂತಿಗಾಗಿ ಭಿಕ್ಷೆಬೇಡುತ್ತಿರುವೆ.) ಈ ರೀತಿಯಲ್ಲಿ ನೀನು ರಾಜ್ಯಭಿಕ್ಷೆಯನ್ನು ನಿರೀಕ್ಷಿಸಿ ಕುಳಿತುಕೊಳ್ಳುವುದು ರಾಜರ್ಷಿಗಳ ಸದ್ವೃತ್ತಿಯಲ್ಲ ; ರಾಜಧರ್ಮವೂ ಅಲ್ಲ.

**ನ ಹಿ ವೈಕ್ಲವ್ಯಸಂಸೃಷ್ಟ ಆನೃಶಂಸ್ಯೇ ವ್ಯವಸ್ಥಿತಃ ।**
**ಪ್ರಜಾಪಾಲನಸಮ್ಭೂತಂ ಫಲಂ ಕಿಂಚನ ಲಬ್ಧವಾನ್ ॥೨೨॥**

ಅನಿಶ್ಚಿತವಾದ ಬುದ್ಧಿಯಿಂದ ಕೂಡಿರುವವನು ಅಥವಾ ಹೃದಯ ದೌರ್ಬಲ್ಯವಿರುವವನು, ಯಾವಾಗಲೂ ಎಲ್ಲರ ವಿಷಯದಲ್ಲಿಯೂ ದಯಾಭಾವದಿಂದಿರತಕ್ಕವನು – ಪ್ರಜಾಪಾಲನದಿಂದ ಪ್ರಾಪ್ತವಾಗುವ ಪುಣ್ಯದಲ್ಲಿ ಕಿಂಚಿತ್ತನ್ನಾದರೂ ಪಡೆದುಕೊಳ್ಳಲಾರನು.

(ರಾಜನು ಸರ್ವದಾ ದಯಾಪರನಾಗಿರಕೂಡದು. ಮಾಡಬೇಕಾದ ಕಾರ್ಯಗಳಲ್ಲಿ ಅನಿಶ್ಚಿತನಾಗಿಯೂ ಇರಕೂಡದು. ದಯೆತೋರಬೇಕಾದರೂ ಪಾತ್ರಾಪಾತ್ರವಿವೇಚನೆಯನ್ನು ಮಾಡಬೇಕು. ಧೂರ್ತನಲ್ಲಿ ದಯೆ ತೋರಲು ಹೋಗಬಾರದು. ಯುದ್ಧವಾದರೆ ಏನಾಗಿಬಿಡುವುದೋ ಎಂಬ ವಿಹ್ವಲತೆಯಿಂದಿರಬಾರದು. ಹೃದಯದ ದೌರ್ಬಲ್ಯವನ್ನು ದೂರಮಾಡಬೇಕು.)

**ನ ಹ್ಯೇತಾಮಾಶಿಷಂ ಪಾಣ್ಡುರ್ನ ಚಾಹಂ ನ ಪಿತಾಮಹಃ ।**
**ಪ್ರಯುಕ್ತವನ್ತಃ ಪೂರ್ವಂ ತೇ ಯಯಾ ಚರಸಿ ಮೇಧಯಾ ॥೨೩॥**

ಯುಧಿಷ್ಠಿರ! ನಿನಗೆ ಈ ವಿಧವಾದ ವಿಹ್ವಲತೆಯ ಮತ್ತು ದಯಾಪರತೆಯ ಬುದ್ಧಿಯು ಬರಲೆಂದು ಪಾಂಡುವಾಗಲೀ, ಪಿತಾಮಹನಾಗಲೀ, ನಾನಾಗಲೀ ಆಶೀರ್ವಾದಮಾಡಿರಲಿಲ್ಲ.

**ಯಜ್ಞೋ ದಾನಂ ತಪಃ ಶೌರ್ಯಂ ಪ್ರಜ್ಞಾ ಸಂತಾನಮೇವ ಚ ।**
**ಮಾಹಾತ್ಮ್ಯಂ ಬಲಮೋಜಶ್ಚ ನಿತ್ಯಮಾಶಂಸಿತಂ ಮಯಾ ॥೨೪॥**

ನೀನು ಯಾವಾಗಲೂ ಯಜ್ಞಶೀಲನಾಗಿರಬೇಕು ; ದಾನಿಯಾಗಿರಬೇಕು ; ತಪಸ್ಸಿನಲ್ಲಿ ನಿರತನಾಗಿರಬೇಕು ; ಶೌರ್ಯವಂತನಾಗಿರಬೇಕು ; ಪ್ರಜ್ಞಾವಂತನಾಗಿರಬೇಕು ; ಪುತ್ರವಂತನಾಗಿರಬೇಕು ; ಓಜೋವಂತನಾಗಿರ

ಬೇಕು ; ಮಹಾತ್ಮನೂ ಆಗಿರಬೇಕು ; ಬಲಶಾಲಿಯೂ ಆಗಿರಬೇಕು-ಎಂಬುದು ನನ್ನ ನಿತ್ಯದ ಅಪೇಕ್ಷೆಯಾಗಿತ್ತು.

**ನಿತ್ಯಂ ಸ್ವಾಹಾ ಸ್ವಧಾ ನಿತ್ಯಂ ದದ್ಯುರ್ಮಾನುಷದೇವತಾಃ ।**
**ದೀರ್ಘಮಾಯುರ್ಧನಂ ಪುತ್ರಾನ್ಸಮ್ಯಗಾರಾಧಿತಾಃ ಶುಭಾಃ ॥೨೫॥**

ಸುಸಂಸ್ಕೃತರಾದ, ಪರಿಶುದ್ಧರಾದ ಮನುಷ್ಯದೇವತೆಗಳು (ಬ್ರಾಹ್ಮಣರು) ನಿನಗಾಗಿ ಆಯಾ ಕಾಲಗಳಲ್ಲಿ ದೇವತೆಗಳ ಪ್ರೀತ್ಯರ್ಥವಾಗಿಯೂ, ಪಿತೃಗಳ ಪ್ರೀತ್ಯರ್ಥವಾಗಿಯೂ ಸ್ವಾಹಾಕಾರ-ಸ್ವಧಾಕಾರಗಳನ್ನು ಮಾಡುತ್ತಾ ನಿನಗೆ ದೀರ್ಘಾಯುಷ್ಯವನ್ನೂ, ಐಶ್ವರ್ಯವನ್ನೂ, ಸತ್ಸಂತಾನವನ್ನೂ ಅನುಗ್ರಹಿಸುವರು.

**ಪುತ್ರೇಷ್ವಾಶಾಸತೇ ನಿತ್ಯಂ ಪಿತರೋ ದೈವತಾನಿ ಚ ।**
**ದಾನಮಧ್ಯಯನಂ ಯಜ್ಞಂ ಪ್ರಜಾನಾಂ ಪರಿಪಾಲನಮ್ ॥೨೬॥**

ತಮ್ಮನ್ನು ಉಪಾಸನೆಮಾಡುವವರಿಗೆ ದೇವತೆಗಳೂ ಮತ್ತು ತಮ್ಮ ವಂಶದಲ್ಲಿ ಹುಟ್ಟಿರುವವರಿಗೆ ಪಿತೃಗಳೂ ದಾನಶೀಲತೆಯನ್ನೂ, ಅಧ್ಯಯನವನ್ನೂ, ಯಜ್ಞಶೀಲತೆಯನ್ನೂ ಮತ್ತು ಪ್ರಜಾಪಾಲನಸಾಮರ್ಥ್ಯವನ್ನೂ ಸರ್ವದಾ ಆಶಿಸುತ್ತಿರುತ್ತಾರೆ.

**ಏತದ್ಧರ್ಮ್ಯಮಧರ್ಮ್ಯಂ ವಾ ಜನ್ಮನೈವಾಭ್ಯಜಾಯಥಾಃ ॥೨೭॥**

ಯುದ್ಧಮಾಡುವುದು ಧರ್ಮವೋ-ಅಧರ್ಮವೋ ತಿಳಿಯದು. ಸರ್ವರಲ್ಲಿಯೂ ದಯಾಪರನಾಗಿರುವುದು ಧರ್ಮವೋ, ದಯಾಪರನಾಗಿಲ್ಲದಿರುವುದು ಧರ್ಮವೋ ತಿಳಿಯದು. ಆದರೆ ನೀನು ಮಾತ್ರ ಸರ್ವದಾ ದಯಾಪರನಾಗಿರಲು ಸಾಧ್ಯವಿಲ್ಲ. ಯುದ್ಧಮಾಡಿದರೆ ಪ್ರಾಣಿಗಳ ಹತ್ಯೆಯಾಗುವುದೆಂದು ಯೋಚಿಸುವಂತೆಯೂ ಇಲ್ಲ. ನೀನು ಕ್ರೂರಿಗಳಿಗೆ ಕ್ರೂರಿಯೂ, ಸತ್ಪುರುಷರಿಗೆ ದಯಾಪರನೂ ಆಗಿರಬೇಕು. ದುಷ್ಟರನ್ನು ಶಿಕ್ಷಿಸಬೇಕು ; ಶಿಷ್ಟರನ್ನು ಪರಿಪಾಲಿಸಬೇಕು. ನೀನು ಹುಟ್ಟಿನಿಂದಲೇ ಕ್ಷತ್ರಿಯನಾಗಿರುವುದರಿಂದ ನೀನು ಈ ಕಾರ್ಯವನ್ನು ಮಾಡಲೇಬೇಕು.

**ತೇ ತು ವೈದ್ಯಾಃ ಕುಲೇ ಜಾತಾ ಅವೃತ್ತ್ಯಾ ತಾತ ಪೀಡಿತಾಃ ।**
**ಯತ್ರ ದಾನಪತಿಂ ಶೂರಂ ಕ್ಷುಧಿತಾಃ ಪೃಥಿವೀಚರಾಃ ।**
**ಪ್ರಾಪ್ಯ ತುಷ್ಟಾಃ ಪ್ರತಿಷ್ಠನ್ತೇ ಧರ್ಮಃ ಕೋಽಭ್ಯಧಿಕಸ್ತತಃ ॥೨೮॥**

ಒಳ್ಳೆಯ ಕುಲದಲ್ಲಿ ಹುಟ್ಟಿ ವಿದ್ವಾಂಸರಾಗಿದ್ದರೂ ಜೀವನವೃತ್ತಿಯಿಲ್ಲದೇ ಪೀಡಿತರಾಗಿ, ಹಸಿದು ಬಳಲಿ-ಬೆಂಡಾಗಿ ದಿಕ್ಕುತೋಚದೆ ಭೂಮಿಯಲ್ಲಿ ಅಲೆಯುತ್ತಿರುವ ಮಾನವರು-ದಾನಶೀಲನೂ ಶೂರನೂ ಆದ ರಾಜನ ಬಳಿಗೆ ಹೋಗಿ ತಮ್ಮ ಇಷ್ಟಾರ್ಥಗಳನ್ನು ಪೂರೈಸಿಕೊಂಡು ಸಂತುಷ್ಟರಾಗಿ ಹಿಂದಿರುಗಿದರೆ ಅದಕ್ಕಿಂತಲೂ ಶ್ರೇಷ್ಠವಾದ ಧರ್ಮವು ಯಾವುದಿದೆ?

(ರಾಜನಾದವನು ತನ್ನ ಕರ್ತವ್ಯದಂತೆ ದುಷ್ಟಶಿಕ್ಷಣವನ್ನು ಮಾಡಲೇಬೇಕು. ಐಶ್ವರ್ಯವನ್ನೂ ಸಂಪಾದಿಸಬೇಕು. ದಾನವನ್ನೂ ಯಥೇಚ್ಛವಾಗಿ ಕೊಡಬೇಕು. ಇದೇ ರಾಜಧರ್ಮ.)

**ದಾನೇನಾನ್ಯಂ ಬಲೇನಾನ್ಯಂ ತಥಾ ಸೂನೃತಯಾ ಪರಮ್ ।**
**ಸರ್ವತಃ ಪ್ರತಿಗೃಹ್ಣೀಯಾದ್ರಾಜ್ಯಂ ಪ್ರಾಪ್ಯೇಹ ಧಾರ್ಮಿಕಃ ॥೨೯॥**

ಧಾರ್ಮಿಕನಾದ ರಾಜನು ರಾಜ್ಯವನ್ನು ಪಡೆದುಕೊಂಡು ಕೆಲವು ರಾಜರನ್ನು ದಾನೋಪಾಯದಿಂದಲೂ, ಕೆಲವು ರಾಜರನ್ನು ದಂಡೋಪಾಯ ದಿಂದಲೂ, ಕೆಲವು ರಾಜರನ್ನು ಸಾಮೋಪಾಯದಿಂದಲೂ ಸಾಮಂತರನ್ನಾಗಿ ಮಾಡಿಕೊಳ್ಳಬೇಕು. ಹೀಗೆ ರಾಜರೆಲ್ಲರನ್ನೂ ಗೆದ್ದು ಎಲ್ಲ ಕಡೆಗಳಿಂದಲೂ ಕಪ್ಪ-ಕಾಣಿಕೆಗಳನ್ನು ಪಡೆದುಕೊಳ್ಳಬೇಕು.

**ಬ್ರಾಹ್ಮಣಃ ಪ್ರಚರೇದ್ಭೈಕ್ಷಂ ಕ್ಷತ್ರಿಯಃ ಪರಿಪಾಲಯೇತ್ ।**
**ವೈಶ್ಯೋ ಧನಾರ್ಜನಂ ಕುರ್ಯಾಚ್ಛೂದ್ರಃ ಪರಿಚರೇಚ್ಚ ತಾನ್ ॥೩೦॥**

ಬ್ರಾಹ್ಮಣನಾದವನು ಭಿಕ್ಷಾವೃತ್ತಿಯಿಂದ ಜೀವನಮಾಡಬೇಕು. ಕ್ಷತ್ರಿಯನಾದವನು ಪ್ರಜಾಪಾಲನೆಯನ್ನು ಮಾಡಬೇಕು. ವೈಶ್ಯನು ಧನಾರ್ಜನೆಯನ್ನು ಮಾಡಬೇಕು. ಶೂದ್ರನು ಈ ಎಲ್ಲರ ಸೇವೆಯನ್ನು ಮಾಡಬೇಕು.

**ಭೈಕ್ಷಂ ವಿಪ್ರತಿಷಿದ್ಧಂ ತೇ ಕೃಷಿರ್ನೈವೋಪಪದ್ಯತೇ ।**
**ಕ್ಷತ್ರಿಯೋಽಸಿ ಕ್ಷತಾತ್ತ್ರಾತಾ ಬಾಹುವೀರ್ಯೋಪಜೀವಿತಾ ॥೩೧॥**

ರಾಜನಾದವನು ಭಿಕ್ಷಾವೃತ್ತಿಯಿಂದ ಜೀವಿಸುವುದು ಸರ್ವಥಾ ನಿಷಿದ್ಧವಾಗಿದೆ. ಕೃಷಿ-ವಾಣಿಜ್ಯಗಳಿಂದ ಜೀವಿಸುವುದೂ ನಿನಗೆ ಯೋಗ್ಯವಲ್ಲ. ನೀನು ಕ್ಷತ್ರಿಯನಾಗಿರುವೆ. **ಕ್ಷತಾತ್** - (ಇತರರನ್ನು) ಪೀಡೆಯಿಂದ **ತ್ರಾತಾ**-ಕಾಪಾಡುವವನು ; ಇತರರ ಕಷ್ಟವನ್ನು ಪರಿಹರಿಸುವವನು - ಇದು ಕ್ಷತ್ರಿಯ ಶಬ್ದಾರ್ಥ. ನಿನ್ನ ದೇಶದಲ್ಲಿ ನಿನ್ನ ಪ್ರಜೆಗಳಿಗೆ ಯಾವ ವಿಧವಾದ ತೊಂದರೆಯೂ ಆಗದಂತೆ ನೋಡಿಕೊಳ್ಳುವುದೇ ಕ್ಷತ್ರಿಯನಾದ ನಿನ್ನ ಕರ್ತವ್ಯವಾಗಿದೆ ಮತ್ತು ಧರ್ಮವಾಗಿದೆ. ಬಾಹುವೀರ್ಯದಿಂದಲೇ ನೀನು ನಿನ್ನ ಜೀವಿಕೆಯನ್ನು ನಡೆಸಬೇಕು.

**ಪಿತ್ರ್ಯಮಂಶಂ ಮಹಾಬಾಹೋ ನಿಮಗ್ನಂ ಪುನರುದ್ಧರ ।**
**ಸಾಮ್ನಾ ಭೇದೇನ ದಾನೇನ ದಣ್ಡೇನಾಥ ನಯೇನ ವಾ ॥೩೨॥**

ಪಿತ್ರಾರ್ಜಿತವಾದ ನಿನ್ನ ರಾಜ್ಯವು ಲುಪ್ತವಾಗಿ ಕೈತಪ್ಪಿಹೋಗಿದೆ. ನಿನ್ನ ಶತ್ರುಗಳು ನಿನ್ನ ತಂದೆಗೆ ಸಂಬಂಧಿಸಿದ ರಾಜ್ಯವನ್ನು ತಮ್ಮ ರಾಜ್ಯದೊಡನೆ ಸೇರಿಸಿಕೊಂಡುಬಿಟ್ಟಿದ್ದಾರೆ. ಅದನ್ನು ನೀನು ಪುನಃ ಉದ್ಧರಿಸಬೇಕಾಗಿದೆ. (ಪುನಃ ಪಡೆದುಕೊಳ್ಳಬೇಕಾಗಿದೆ. ಪಡೆದುಕೊಳ್ಳುವುದು ನಿನ್ನ ಮುಖ್ಯಕರ್ತವ್ಯವಾಗಿದೆ.) ಪಿತ್ರಾರ್ಜಿತವಾದ ನಿನ್ನ ರಾಜ್ಯವನ್ನು ಶತ್ರುಗಳಿಂದ ಪಡೆದುಕೊಳ್ಳಲು ಸಾಮ-ದಾನ-ಭೇದ-ದಂಡ-ನಯ ಈ ಐದು ಉಪಾಯ ಗಳಲ್ಲಿ ಯಾವುದನ್ನಾದರೂ ಉಪಯೋಗಿಸಿಕೊಳ್ಳಬಹುದು. (ಸಾಮ-ದಾನ ಗಳಿಂದ ಪಡೆದುಕೊಳ್ಳಲು ಸಾಧ್ಯವಾಗದಿದ್ದರೆ ದಂಡೋಪಾಯದಿಂದ ಲಾದರೂ ನಿನ್ನ ಪಿತ್ರಾರ್ಜಿತವಾದ ರಾಜ್ಯವನ್ನು ನೀನು ಪಡೆದುಕೊಳ್ಳಲೇಬೇಕು.)

**ಇತೋ ದುಃಖತರಂ ಕಿಂ ನು ಯದಹಂ ಹೀನಬಾನ್ಧವಾ ।**
**ಪರಪಿಣ್ಡಮುದೀಕ್ಷೇ ವೈ ತ್ವಾಂ ಸೂತ್ವಾಮಿತ್ರನನ್ದನ ॥೩೩॥**

ಮಗು, ಯುಧಿಷ್ಠಿರ! ನೀನು ಮಿತ್ರನಂದನನಾಗಿಲ್ಲ. ಸುಹೃದರಿಗೆ

ಸಂತೋಷವನ್ನುಂಟುಮಾಡತಕ್ಕವನಲ್ಲ. ನಿನ್ನ ಧರ್ಮಪಾಷಂಡಿತನದಿಂದ ಶತ್ರುಗಳಿಗೆ ಸಂತೋಷವನ್ನುಂಟುಮಾಡತಕ್ಕವನಾಗಿರುವೆ. ನಿನ್ನ ತಾಯಿ ಯಾದ ನನ್ನ ಸ್ಥಿತಿಯನ್ನಾದರೂ ನೋಡು. ನನಗೆ ಇದಕ್ಕಿಂತಲೂ ದುಃಖ ತರವಾದುದು ಮತ್ತೇನಿದೆ? ನಿನ್ನಂತಹ ಸುಪುತ್ರನನ್ನು ಪಡೆದೂ ನಾನು ಬಾಂಧವಹೀನಳಾಗಿ ಇತರರು ಹಾಕುವ ಕೂಳಿನ ನಿರೀಕ್ಷೆಯಲ್ಲಿರುತ್ತೇನೆ.

**ಯುಧ್ಯಸ್ವ ರಾಜಧರ್ಮೇಣ ಮಾ ನಿಮಜ್ಜೀಃ ಪಿತಾಮಹಾನ್ ।**
**ಮಾಗಮಃ ಕ್ಷೀಣಪುಣ್ಯಸ್ತ್ವಂ ಸಾನುಜಃ ಪಾಪಿಕಾಂ ಗತಿಮ್ ॥೩೪॥**

ಮಗನೇ! ನೀನು ರಾಜಧರ್ಮಾನುಸಾರವಾಗಿ ಯುದ್ಧಮಾಡು. ಯುದ್ಧಮಾಡಲು ಹೆದರಿ ಕ್ಷತ್ರಿಯರಿಗೆ ಅನುಚಿತವಾದ ಬ್ರಾಹ್ಮಣರ ಭಿಕ್ಷಾವೃತ್ತಿಯನ್ನೇ ಅವಲಂಬಿಸಿ ನಿನ್ನ ಪಿತಾಮಹರನ್ನು ನರಕದಲ್ಲಿ ಮುಳುಗಿಸಬೇಡ. ಸಾನುಜನಾದ ನೀನು ಮಾಡಬಾರದುದನ್ನು ಮಾಡಿ ಪುಣ್ಯವನ್ನೆಲ್ಲಾ ಕಳೆದುಕೊಂಡು ಪಾಪಿಷ್ಠರು ಹೋಗುವ ಮಾರ್ಗವನ್ನು ಅನುಸರಿಸಿ ಹೋಗಬೇಡ.”

೧೩೨ನೆಯ ಅಧ್ಯಾಯವು ಮುಗಿಯಿತು.

೧೩೩ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ)

## ವಿದುಲೋಪಾಖ್ಯಾನ :
## ರಣಾಂಗಣದಿಂದ ಭಯಗೊಂಡು ಹಿಂದಿರುಗಿಬಂದ ಮಗನನ್ನು ವಿದುಲೆಯು ನಿಂದಿಸಿ ಪುನಃ ಯುದ್ಧಮಾಡಲು ಪ್ರೋತ್ಸಾಹಿಸಿದುದು

ಕುಂತಿಯು ಮುಂದುವರಿದು ಹೇಳುತ್ತಾಳೆ :

“ಶ್ರೀಕೃಷ್ಣ! ಪರಂತಪ! ಕ್ಷತ್ರಿಯನ ಕರ್ತವ್ಯವೇನೆಂಬುವ ವಿಷಯದಲ್ಲಿ ವಿದುಲೆಗೂ ಅವಳ ಮಗನಿಗೂ ನಡೆದ ಸಂವಾದವನ್ನು ವಿದ್ವಾಂಸರು ಉದಾಹರಿಸುತ್ತಾರೆ. ದೊಡ್ಡವರಿಂದ ಕೇಳಿದ ಆ ವಿಷಯವನ್ನೇ ನಾನೂ ನಿನಗೆ ಹೇಳುತ್ತೇನೆ. ಈ ಪ್ರಸಂಗದಲ್ಲಿ ಶ್ರೇಯಸ್ಸನ್ನುಂಟುಮಾಡುವ

ಉಪದೇಶಗಳು ಅನೇಕವಾಗಿವೆ. ಇದನ್ನು ನೀನು ಧರ್ಮರಾಜನಿಗೆ ಯಥಾವತ್ತಾಗಿ ತಿಳಿಸಬೇಕು.

ಯಶಸ್ವಿನಿಯಾದ, ಕೋಪಿಷ್ಠಳಾದ, ಸತ್ಕುಲಪ್ರಸೂತಳಾದ, ತೇಜಸ್ವಿನಿಯಾದ, ಮಾನಿಷ್ಠೆಯಾದ, ಕ್ಷತ್ರಧರ್ಮರತಳಾದ, ಜಿತೇಂದ್ರಿಯಳಾದ, ದೂರದರ್ಶಿನಿಯಾದ, ರಾಜಸಭೆಗಳಲ್ಲಿ ವಿಖ್ಯಾತೆಯಾಗಿದ್ದ, ಮಹಾಪುರುಷರಿಂದ ಅನೇಕವಿಧವಾದ ಉಪದೇಶಗಳನ್ನು ಪಡೆದಿದ್ದ, ಅನೇಕಶಾಸ್ತ್ರಗಳಲ್ಲಿ ಪಾರಂಗತಳಾಗಿದ್ದ ವಿದುಲಾ ಎಂಬ ಚಕ್ರವರ್ತಿನಿಯು, ಸಿಂಧುರಾಜನಿಂದ ಪರಾಜಯಹೊಂದಿ ದೀನನಾಗಿ ಮಲಗಿದ್ದ ತನ್ನ ಔರಸಪುತ್ರನನ್ನು ಬಹುವಾಗಿ ನಿಂದಿಸಿದಳು :

**ಅನನ್ದನ ಮಯಾ ಜಾತ ದ್ವಿಷತಾಂ ಹರ್ಷವರ್ಧನ ।**
**ನ ಮಯಾ ತ್ವಂ ನ ಪಿತ್ರಾ ಚ ಜಾತಃ ಕ್ವಾಭ್ಯಾಗತೋ ಹ್ಯಸಿ ॥೫॥**

"ಎಲವೋ! ನೀನು ನನ್ನ ಗರ್ಭದಲ್ಲಿಯೇ ಜನಿಸಿರುವೆ. ಆದರೂ ನನಗೆ ನೀನು ಆನಂದವನ್ನುಂಟುಮಾಡುವವನಾಗಿಲ್ಲ. ಶತ್ರುಗಳಿಗೆ ಆನಂದದಾಯಕನಾಗಿರುವೆ. ಆದುದರಿಂದ ನೀನು ನನ್ನ ಹೊಟ್ಟೆಯಲ್ಲಿ ಹುಟ್ಟಿದವನೂ ಅಲ್ಲ. ನಿನ್ನ ತಂದೆಯೂ ನಿನ್ನ ಜನ್ಮಕ್ಕೆ ಕಾರಣನಲ್ಲ. ನೀನು ಎಲ್ಲಿಂದ ಬಂದೆ? (ಎಲ್ಲಿಂದಲೋ ಬಂದವನಂತಿರುವೆ.)

**ನಿರ್ಮನ್ಯುಶ್ಚಾಪ್ಯಸಂಖ್ಯೇಯಃ ಪುರುಷಃ ಕ್ಲೀಬಸಾಧನಃ ।**
**ಯಾವಜ್ಜೀವಂ ನಿರಾಶೋಽಸಿ ಕಲ್ಯಾಣಾಯ ಧುರಂ ವಹ ॥೬॥**

ನಿನಗೆ ಕೋಪವೆಂಬುದೇ ಇಲ್ಲವಾಗಿದೆ. ಕ್ಷತ್ರಿಯರಲ್ಲಿ ನೀನು ಅಗಣ್ಯನಾಗಿರುವೆ. ನಿನ್ನನ್ನು ಮನುಷ್ಯನೆಂದೂ ಕ್ಷತ್ರಿಯರು ಪರಿಗಣಿಸುತ್ತಿಲ್ಲ. ನೀನು ಹೆಸರಿಗೆ ಮಾತ್ರ ಪುರುಷನಾಗಿರುವೆ. ನಿನ್ನ ಸಾಧನೆಯೆಲ್ಲವೂ ನಪುಂಸಕನದೇ ಆಗಿದೆ. ತೋರಿಕೆಗೆ ನೀನು ಪುರುಷಾಕೃತಿಯನ್ನು ಹೊಂದಿದ್ದರೂ ನಿನ್ನ ಮನಸ್ಸು, ಕರಣ-ಕಳೇಬರಗಳೆಲ್ಲವೂ ನಪುಂಸಕನದ್ದೇ ಆಗಿದೆ. ನಿನ್ನ ಇಂದಿನ ಸ್ಥಿತಿಯನ್ನು ನೋಡಿದರೆ ಜೀವನಪರ್ಯಂತವಾದ ನಿರಾಶೆಯಿಂದ ತುಂಬಿರುವಂತೆ ಕಾಣುತ್ತಿರುವೆ. ಕ್ಷತ್ರಿಯರಾಜಕುಮಾರನು

ಹೀಗೆಂದಿಗೂ ನಿರಾಶನಾಗಿ ಕುಳಿತುಕೊಳ್ಳಬಾರದು. ಮೇಲೇಳು. ಕಲ್ಯಾಣ ಪ್ರಾಪ್ತಿಗಾಗಿ ಪುನಃ ಯುದ್ಧಕ್ಕೆ ಹೊರಡು. ಯುದ್ಧದ ಭಾರವನ್ನು ವಹಿಸು.

**ಮಾತ್ಮಾನಮವಮನ್ಯಸ್ವ ಮೈನಮಲ್ಪೇನ ಬೀಭರಃ ।**
**ಮನಃ ಕೃತ್ವಾ ಸುಕಲ್ಯಾಣಂ ಮಾ ಭೈಸ್ತ್ವಂ ಪ್ರತಿಸಂಹರ ॥೭॥**

ನಿನ್ನಲ್ಲಿರುವ ಚೇತನವು ಬಹಳ ದೊಡ್ಡದು. ಅದನ್ನು ನೀನು ಅವಮಾನಗೊಳಿಸಬೇಡ. ನಿನ್ನನ್ನು ಸಾಮಾನ್ಯನೆಂದು ಭಾವಿಸಿಕೊಳ್ಳಬೇಡ. 'ಈಗ ರಾಜಪುತ್ರನು ; ಮುಂದೆ ಚಕ್ರವರ್ತಿಯಾಗತಕ್ಕವನು' - ಎಂಬ ಕೆಚ್ಚು ನಿನಗಿರಲಿ. ವೀರಪುರುಷರ ವಂಶದಲ್ಲಿ ಜನ್ಮತಾಳಿರುವ ನೀನು ದುರ್ಬಲ ನೆಂದು ಕ್ಷಣಮಾತ್ರವಾದರೂ ಚಿಂತಿಸಬೇಡ. ಹಾಗೆ ಚಿಂತಿಸಿದಲ್ಲಿ ನಿನ್ನ ಆತ್ಮಕ್ಕೆ ನೀನೇ ಅವಮಾನಮಾಡಿಕೊಂಡಂತಾಗುತ್ತದೆ. ಅಲ್ಪಸಂತುಷ್ಟನಾಗಬೇಡ. ಇದು ರಾಜರಿಗಿರಬೇಕಾದ ಗುಣವಲ್ಲ. ಸಂತುಷ್ಟರಾದ ರಾಜರು ಬೇಗ ವಿನಾಶಹೊಂದುತ್ತಾರೆ. 'ಎಷ್ಟಿದ್ದರಷ್ಟೇ ಜೀವನಹೊರೆಯಲು ಸಾಕು' – ಈ ವಿಧವಾಗಿ ಕ್ಷಣಮಾತ್ರವೂ ಯೋಚಿಸಬೇಡ. ಮನಸ್ಸನ್ನು ಉತ್ಸಾಹಗೊಳಿಸು. ಶತ್ರುಗಳನ್ನು ಜಯಿಸುವೆನೆಂದು ಶುಭಸಂಕಲ್ಪಮಾಡು. ಭಯಪಡಬೇಡ. ಭಯವನ್ನು ಉಪಸಂಹರಿಸು."

ವಿದುಲಾಪುತ್ರನು ಶತ್ರುಗಳಿಂದ ಪೆಟ್ಟುತಿಂದು ಬಂದಿದ್ದನು. ಬಹಳ ಬಳಲಿದ್ದನು. ತಾಯಿಯ ಮಾತನ್ನು ಅಷ್ಟಾಗಿ ಲಕ್ಷ್ಯಕ್ಕೆ ತೆಗೆದುಕೊಳ್ಳದೇ ಮಲಗಿಯೇ ಇದ್ದನು. ವಿದುಲೆಗೆ ಕೋಪವು ಮಿತಿಮೀರಿತು. ಗರ್ಜಿಸುತ್ತಾ ಹೇಳಿದಳು :

**ಉತ್ತಿಷ್ಠ ಹೇ ಕಾಪುರುಷ ಮಾ ಶೇಷ್ವೈವಂ ಪರಾಜಿತಃ ।**
**ಅಮಿತ್ರಾನ್ನಂದಯನ್ಸರ್ವಾನ್ನಿರ್ಮಾನೋ ಬನ್ಧುಶೋಕದಃ ॥೮॥**

"ಎಲವೋ ಹೇಡಿ! ಮೇಲೇಳು ಸಾಕು. ಸೋತುಬಂದು ಹೀಗೆ ಬಿದ್ದುಕೊಳ್ಳಬೇಡ. ನೀನು ಮಾನಗೆಟ್ಟವನು. ಸರ್ವಶತ್ರುಗಳಿಗೂ ಆನಂದ ವನ್ನುಂಟುಮಾಡುತ್ತಾ ಸರ್ವಬಂಧುಗಳಿಗೂ ದುಃಖದಾಯಕನಾಗಿರುವೆ.

**ಸುಪೂರಾ ವೈ ಕುನದಿಕಾ ಸುಪೂರೋ ಮೂಷಿಕಾಞ್ಜಲಿಃ ।**
**ಸುಸಂತೋಷಃ ಕಾಪುರುಷಃ ಸ್ವಲ್ಪಕೇನೈವ ತುಷ್ಯತಿ ॥೯॥**

ಸಣ್ಣದಾದ ನದಿಯು ಸ್ವಲ್ಪ ಮಳೆಯಾದರೂ ತುಂಬಿ ಹರಿಯುತ್ತದೆ. ಇಲಿಯ ಬೊಗಸೆಯು ಸ್ವಲ್ಪವೇ ಅನ್ನದಿಂದ ತುಂಬಿಹೋಗುತ್ತದೆ. ಹೇಡಿಯಾದವನನ್ನು ಸಂತೋಷಗೊಳಿಸುವುದೂ ಬಹಳ ಸುಲಭ. ಸ್ವಲ್ಪದಿಂದಲೇ ತೃಪ್ತಿಪಟ್ಟುಕೊಳ್ಳುತ್ತಾನೆ.

**ಅಪ್ಯಹೇರಾರುಜನ್ದಂಷ್ಟ್ರಾಮಾಶ್ವೇವ ನಿಧನಂ ವ್ರಜ ।**
**ಅಪಿ ವಾ ಸಂಶಯಂ ಪ್ರಾಪ್ಯ ಜೀವಿತೇಽಪಿ ಪರಾಕ್ರಮೇಃ ॥೧೦॥**

ನಿನ್ನಂತಹ ಕುಪುರುಷನು ನಿಮಿಷಮಾತ್ರವೂ ಬದುಕಿರಬಾರದು. ಹಾವಿನ ಹಲ್ಲನ್ನಾದರೂ ಕೀಳಲು ಹೋಗಿ ಒಡನೆಯೇ ಪ್ರಾಣಬಿಡು. ಹಾವಿನೊಡನೆ ಸೆಣಸಾಡಿಯೂ ಒಂದು ವೇಳೆ ಪ್ರಾಣವು ಹೋಗದೇ ಜೀವಿಸಿಯೇ ಇದ್ದುದ್ದಾದರೆ – ನಿನ್ನ ಪ್ರಾಣವು ಹಾಗೂ ಹೋಗದೆಂಬ ಸಂಶಯ ವಿರುವುದಾದರೆ (ಬದುಕುವೆನೋ ಇಲ್ಲವೋ ಎಂಬ ಸಂಶಯವು ಒದಗಿದರೂ) ಶತ್ರುವಿನೊಡನೆ ಪರಾಕ್ರಮದಿಂದ ಕಾದಾಡು. (ಮಾಡು ಅಥವಾ ಮಡಿ.)

ಆಪ್ಯರೇಃ – ಎಂಬ ಪಾಠಾಂತರದ ಪ್ರಕಾರ : ಈಗಲೇ ನೀನು ಶತ್ರುವಿನ ಹಲ್ಲುಕೀಳಲು ಹೋಗು. ಅವನ ದರ್ಪವನ್ನು ಮುರಿಯಲು ಹೋಗು. ಅವನೊಡನೆ ಕಾದಾಡುತ್ತಲೇ ಸತ್ತುಹೋಗು. (ಅದು ನನಗೆ ದುಃಖವೆನಿಸುವುದಿಲ್ಲ.) ಒಂದು ವೇಳೆ ಅನೇಕದಿವಸಗಳವರೆಗೂ ಹೋರಾಡಿ ಪ್ರಾಣವೂ ಹೋಗದೇ ವಿಜಯವೂ ಸಿಕ್ಕದಿದ್ದರೆ ಪುನಃ ಸಮಯವನ್ನು ಸಾಧಿಸಿ ಶತ್ರುವಿಗೆ ನಿನ್ನ ಪರಾಕ್ರಮವನ್ನು ತೋರಿಸಬೇಕು. ಎಂದಾದರೊಂದು ದಿನ ಅವನನ್ನು ಗೆಲ್ಲಲೇಬೇಕು.

**ಅಪ್ಯರೇಃ ಶ್ಯೇನವಚ್ಛಿದ್ರಂ ಪಶ್ಯೇಸ್ತ್ವಂ ವಿಪರಿಕ್ರಮನ್ ।**
**ವಿನದನ್ವಾಥವಾ ತೂಷ್ಣೀಂ ವ್ಯೋಮ್ನಿ ವಾ ಪರಿಶಙ್ಕಿತಃ ॥೧೧॥**

ಆಕಾಶದಲ್ಲಿ ಸಂಚರಿಸುವ ಗಿಡಗದ ಹಕ್ಕಿಯು ಭೂಮಿಯ ಮೇಲೆ ಏನಿದೆಯೆಂಬುದನ್ನು ಸ್ಪಷ್ಟವಾಗಿ ತಿಳಿದುಕೊಳ್ಳುವಂತೆ – ನೀನೂ ಶತ್ರುವಿಗೆ ತಿಳಿಯದ ರೀತಿಯಲ್ಲಿ ಅವನ ಸಮೀಪದಲ್ಲಿಯೇ ಸಂಚರಿಸುತ್ತಿದ್ದು ಅವನ ಲ್ಲಿರುವ ಲೋಪ-ದೋಷಗಳನ್ನು ತಿಳಿದುಕೊಳ್ಳಬೇಕು ಅಥವಾ–ಗಿಡಗವು

ಆಕಾಶದಲ್ಲಿ ನಿರ್ಭಯವಾಗಿ ನಿಃಶಂಕೆಯಿಂದ ಸಂಚರಿಸುವಂತೆ–ನೀನೂ ಗರ್ಜನೆಮಾಡುತ್ತಾ ನಿರ್ಭಯವಾಗಿ ರಣರಂಗವನ್ನು ಪ್ರವೇಶಿಸಬೇಕು.”

ಕೃಷ್ಣ! ಇಷ್ಟು ನಿಷ್ಠುರವಾಗಿ ಹೇಳಿದರೂ ಪುತ್ರನು ಮೇಲೇಳಲಿಲ್ಲ. ಕುಪಿತಳಾದ ವಿದುಲೆಯು ಹಲ್ಲುಗಳನ್ನು ಕಟ-ಕಟನೆ ಕಡಿಯುತ್ತಾ ಪುನಃ ಹೇಳಿದಳು :

**ತ್ವಮೇವಂ ಪ್ರೇತವಚ್ಛೇಷೇ ಕಸ್ಮಾದ್ವಜ್ರಹತೋ ಯಥಾ ।**
**ಉತ್ತಿಷ್ಠ ಹೇ ಕಾಪುರುಷ ಮಾ ಸ್ವಾಪ್ಸೀಃ ಶತ್ರುನಿರ್ಜಿತಃ ॥೧೨॥**

“ರಣಹೇಡಿಯೇ! ಸಿಡಿಲುಬಡಿದವನು ಹೆಣವಾಗಿ ಕೆಳಗೆ ಬೀಳುವಂತೆ – ನೀನೇಕೆ ಹೆಣದಂತೆ ಮಲಗಿರುವೆ? ಶತ್ರುವಿನಿಂದ ಸೋತುಹೋಗಿರುವ ನೀನು ಮಲಗಲು ಬಂದಿರುವೆಯಾ? ಮೇಲೇಳು. ಮಲಗಿದುದು ಸಾಕು. ಹೆಣದಂತೆ ಸದಾ ಮಲಗಬೇಡ.

**ಮಾಸ್ತಂ ಗಮಸ್ತ್ವಂ ಕೃಪಣೋ ವಿಶ್ರೂಯಸ್ವ ಸ್ವಕರ್ಮಣಾ ।**
**ಮಾ ಮಧ್ಯೇ ಮಾ ಜಘನ್ಯೇ ತ್ವಂ ಮಾಧೋ ಭೂಸ್ತಿಷ್ಠಗರ್ಜಿತಃ ॥**

ವೀರಕ್ಷತ್ರಿಯಕುಲದಲ್ಲಿ ಹುಟ್ಟಿರುವ ನೀನು ದೀನನಾಗಬೇಡ. ನಿನ್ನ ಭುಜಬಲ-ಪರಾಕ್ರಮಗಳನ್ನು ತೋರಿ ಲೋಕಪ್ರಸಿದ್ಧನಾಗು. ನಾನು ಪರಾಕ್ರಮಿಯಲ್ಲವೆಂದಾಗಲೀ, ಮಧ್ಯಮವರ್ಗಕ್ಕೆ ಸೇರಿದವನೆಂದಾಗಲೀ, ಅಧಮವರ್ಗಕ್ಕೆ ಸೇರಿದವನೆಂದಾಗಲೀ, ನಿಕೃಷ್ಟವರ್ಗಕ್ಕೆ ಸೇರಿದವ ನೆಂದಾಗಲೀ ನಿನ್ನನ್ನೇ ನೀನು ಭಾವಿಸಿಕೊಳ್ಳಬೇಡ. ಸಾಮ-ದಾನೋಪಾಯ ಗಳು ಮಧ್ಯಮ-ಜಘನ್ಯಗಳು. ಭೇದೋಪಾಯವು ಅಧಮವಾದುದು. ಕಡೆಯದಾದ ದಂಡೋಪಾಯವೇ ಪರಮಶ್ರೇಷ್ಠವಾದುದು. ಅದನ್ನೇ ಆಶ್ರಯಿಸು. ‘ನಾನು ವೀರಕ್ಷತ್ರಿಯ’ ಎಂಬ ಕೆಚ್ಚೆದೆಯು ನಿನಗಿರಲಿ. ಸಿಂಹದಂತೆ ಗರ್ಜನೆಮಾಡುತ್ತಾ ಯುದ್ಧಭೂಮಿಗೆ ಹೋಗು.

**ಅಲಾತಂ ತಿನ್ದುಕಸ್ಯೇವ ಮುಹೂರ್ತಮಪಿ ವಿಜ್ವಲ।**
**ಮಾ ತುಷಾಗ್ನಿರಿವಾನರ್ಚಿರ್ಧೂಮಾಯಸ್ವ ಜಿಜೀವಿಷುಃ ॥೧೪॥**

ಒಣಗಿದ ತುಂಬೇಗಿಡದ ಕಡ್ಡಿಯಂತೆ ಮುಹೂರ್ತಮಾತ್ರವಾದರೂ ಪ್ರಜ್ವಲಿಸು. (ವೀರನಾಗಿ ಬಾಳು.) ಒಣಗಿದ ತುಂಬೇಗಿಡವು ಹೊತ್ತಿಸಿ

ದೊಡನೆಯೇ ಉರಿಯಲು ಪ್ರಾರಂಭಿಸಿ ಮರುಕ್ಷಣದಲ್ಲಿಯೇ ಚಟ-ಚಟನೆ ಶಬ್ದಮಾಡುತ್ತಾ ಅಗ್ನಿಯ ಕಣಗಳನ್ನು ಹೊರಚೆಲ್ಲುತ್ತದೆ. ಜೀವಿಸಿರಬೇಕೆಂಬ ಒಂದೇ ಒಂದು ಆಸೆಯನ್ನಿಟ್ಟುಕೊಂಡು ತುಷಾಗ್ನಿಯಂತೆ ಉರಿಯಿಲ್ಲದ ಹೊಗೆಯೆಂಬ ಕಳಂಕದಿಂದ ಪರಿವೃತನಾಗಬೇಡ. (ಭತ್ತದ ಹೊಟ್ಟು, ಬೇಳೆಯ ಹೊಟ್ಟು ಮುಂತಾದುವುಗಳಿಗೆ ತುಷಾ ಎಂದು ಹೆಸರು. ಇವಕ್ಕೆ ಬೆಂಕಿಯನ್ನು ಹೊತ್ತಿಸಿದರೆ ಕ್ಷಣಮಾತ್ರವಾದರೂ ಉರಿಯುವುದಿಲ್ಲ. ಹೊಗೆಯು ಸುತ್ತಿಕೊಳ್ಳುತ್ತದೆ. ಕರಿತುಕೊಂಡೇ ಬೂದಿಯಾಗುತ್ತದೆ.)

**ಮುಹೂರ್ತಂ ಜ್ವಲಿತಂ ಶ್ರೇಯೋ ನ ಚ ಧೂಮಾಯಿತಂ ಚಿರಮ್ ।**
**ಮಾ ಹ ಸ್ಮ ಕಸ್ಯಚಿದ್ಗೇಹೇ ಜನಿ ರಾಜ್ಞಃ ಖರೋ ಮೃದುಃ ॥೧೫॥**

ಚಿರಕಾಲಪರ್ಯಂತವಾಗಿ ಅಗ್ನಿಯನ್ನೊಳಗಿಟ್ಟುಕೊಂಡು ಹೊಗೆಯಾಡುವುದಕ್ಕಿಂತಲೂ ಕ್ಷಣಮಾತ್ರ ಭಗ್ಗನೆ ಹೊತ್ತಿ ಉರಿದು ಆರಿ ಹೋಗುವುದೇ ಮೇಲು. ಅಂತೆಯೇ ನೀನು ವೃಥಾ ಜೀವಿಸಿರುವುದಕ್ಕಿಂತಲೂ ರಣರಂಗಕ್ಕೆ ಹೋಗಿ ಕ್ಷಣಕಾಲವಾದರೂ ವೀರ್ಯ-ಶೌರ್ಯ-ಪರಾಕ್ರಮಗಳಿಂದ ಯುದ್ಧಮಾಡಿ ಪ್ರಾಣಬಿಡುವುದು ಶ್ರೇಯಸ್ಕರವಾದುದು. ಯಾವೊಬ್ಬ ರಾಜನ ಮನೆಯಲ್ಲಿಯೂ ನಿನ್ನಂತಹ ಮೃದುಸ್ವಭಾವದ ಹೇಡಿಯಾದ ಕತ್ತೆಯು ಹುಟ್ಟದಿರಲಿ.

**ಕೃತ್ವಾ ಮಾನುಷ್ಯಕಂ ಕರ್ಮ ಸೃತ್ವಾಜಿಂ ಯಾವದುತ್ತಮಮ್ ।**
**ಧರ್ಮಸ್ಯಾನೃಣ್ಯಮಾಪ್ನೋತಿ ನ ಚಾತ್ಮಾನಂ ವಿಗರ್ಹತೇ ॥೧೬॥**

ಕ್ಷತ್ರಿಯನಾದವನು ಯುದ್ಧರಂಗಕ್ಕೆ ಹೋಗಿ ಮನುಷ್ಯಪ್ರಯತ್ನವನ್ನು ಸಂಪೂರ್ಣವಾಗಿ ಮಾಡಿ ಪೌರುಷವಿರುವಷ್ಟೂ (ಕೊನೆಯ ಉಸಿರು ಇರುವವರೆಗೂ) ಉತ್ತಮೋತ್ತಮವಾಗಿ ಶತ್ರುವಿನೊಡನೆ ಕಾದಾಡಿದರೆ ಕ್ಷತ್ರಿಯಧರ್ಮದ ಋಣದಿಂದ ಮುಕ್ತನಾಗುತ್ತಾನೆ. ಅಂತಹವನು ಆತ್ಮನಿಂದೆಯನ್ನೂ ಮಾಡಿಕೊಳ್ಳುವುದಿಲ್ಲ. (ಮಾಡಿಕೊಳ್ಳಬೇಕಾಗುವುದಿಲ್ಲ.)

**ಅಲಬ್ಧ್ವಾ ಯದಿ ವಾ ಲಬ್ಧ್ವಾ ನಾನುಶೋಚತಿ ಪಣ್ಡಿತಃ ।**
**ಆನನ್ತರ್ಯಂ ಚಾರಭತೇ ನ ಪ್ರಾಣಾನಾಂ ಧನಾಯತೇ ॥೧೭॥**

ಅಭೀಷ್ಟಫಲದ ಸಿದ್ಧಿಯಾದರೂ, ಸಿದ್ಧಿಯಾಗದಿದ್ದರೂ ಪಂಡಿತನಾದ ವನು ದುಃಖಪಡುವುದಿಲ್ಲ. ಮೇಲಾಗಿ ಕಾರ್ಯಸಿದ್ಧಿಯಾದರೆ ಹಿಗ್ಗುವುದೂ ಇಲ್ಲ; ಕಾರ್ಯಸಿದ್ಧಿಯಾಗದಿದ್ದರೆ ಕುಗ್ಗಿ ಕುಳಿತುಕೊಳ್ಳುವುದೂ ಇಲ್ಲ. ಸ್ವಲ್ಪವಾದರೂ ವ್ಯವಧಾನವೇ ಇಲ್ಲದೇ ಮುಂದೆ-ಮುಂದೆ ಕಾರ್ಯ ಮಾಡುತ್ತಲೇ ಹೋಗುತ್ತಾನೆ. ಅವನಿಗೆ ತನ್ನ ಕರ್ತವ್ಯವೊಂದರ ಹೊರತಾಗಿ ಪ್ರಾಣದ ಮೇಲಾಗಲೀ, ಧನದ ಮೇಲಾಗಲೀ ಲಕ್ಷ್ಯವಿರುವುದಿಲ್ಲ. (ಉಸಿರಿರುವವರೆಗೂ ಕಾರ್ಯಮಾಡುತ್ತಲೇ ಇರುತ್ತಾನೆ. ಪ್ರಾಣವನ್ನೇ ಧನವೆಂದು ಭಾವಿಸಿ ಪ್ರಾಣಹೋಗಿಬಿಡುವುದೆಂದು ಹೆದರಿ ಸುಮ್ಮ ನಿರುವುದಿಲ್ಲ.)

**ಉದ್ಭಾವಯಸ್ವ ವೀರ್ಯಂ ವಾ ತಾಂ ವಾ ಗಚ್ಛ ಧ್ರುವಾಂ ಗತಿಮ್ ।**
**ಧರ್ಮಂ ಪುತ್ರಾಗ್ರತಃ ಕೃತ್ವಾ ಕಿಂ ನಿಮಿತ್ತಂ ಹಿ ಜೀವಸಿ ॥೧೮॥**

ಮಗನೇ! ಧರ್ಮವನ್ನು ಮುಂದೆಮಾಡಿಕೊಂಡು ಪರಾಕ್ರಮ ವನ್ನಾದರೂ ಪ್ರದರ್ಶಿಸು ಅಥವಾ ಸಮಸ್ತಪ್ರಾಣಿಗಳೂ ಒಂದು ದಿವಸ ಹೋಗಲೇಬೇಕಾಗಿರುವ ಶಾಶ್ವತವಾದ ಮಾರ್ಗವನ್ನಾದರೂ ಅರಸಿ ಹೋಗು. (ಸತ್ತುಹೋಗು.) ಈ ಎರಡು ಮಾರ್ಗಗಳನ್ನೂ ಬಿಟ್ಟು ನೀನು ಏಕೆ ಜೀವಿಸುತ್ತಿರುವೆ? (ನಿನ್ನ ಜೀವಿತದ ಪ್ರಯೋಜನವಾದರೂ ಏನು?)

**ಇಷ್ಟಾಪೂರ್ತಂ ಹಿ ತೇ ಕ್ಲೀಬ ಕೀರ್ತಿಶ್ಚ ಸಕಲಾ ಹತಾ ।**
**ವಿಚ್ಛಿನ್ನಂ ಭೋಗಮೂಲಂ ತೇ ಕಿಂ ನಿಮಿತ್ತಂ ಹಿ ಜೀವಸಿ ॥೧೯॥**

ನಪುಂಸಕನೇ! ನಿನ್ನ ಧರ್ಮಕಾರ್ಯಗಳೆಲ್ಲವೂ ನಿಂತುಹೋದುವು. ನಿನ್ನ ಕೀರ್ತಿಯೂ ನಾಶವಾಗಿಹೋಯಿತು. ನಿನ್ನ ಭೋಗಕ್ಕೆ ಮೂಲವಾದ ರಾಜ್ಯವೂ ಛಿದ್ರ-ವಿಚ್ಛಿದ್ರವಾಗಿ ಹೋಯಿತು. ಇಷ್ಟಾದರೂ ನೀನು ಯಾವ ಕಾರಣದಿಂದ ಜೀವಿಸುತ್ತಿರುವೆ? (ನಿನ್ನ ಜೀವಿತದ ಪ್ರಯೋಜನವಾದರೂ ಏನು?)

**ಶತ್ರುರ್ನಿಮಜ್ಜತಾ ಗ್ರಾಹ್ಯೋ ಜಙ್ಘಾಯಾಂ ಪ್ರಪತಿಷ್ಯತಾ ।**
**ವಿಪರಿಚ್ಛಿನ್ನಮೂಲೋಽಪಿ ನ ವಿಷೀದೇತ್ಕಥಂಚನ ।**
**ಉದ್ಯಮ್ಯ ಧುರಮುತ್ಕರ್ಷೇದಾಜಾನೇಯಕೃತಂ ಸ್ಮರನ್ ॥೨೦॥**

ಮುಳುಗುತ್ತಿರುವವನು ಅಥವಾ ಬೀಳುತ್ತಿರುವವನು ತಾನೊಬ್ಬನೇ ಮುಳುಗಲೂಬಾರದು-ಬೀಳಲೂಬಾರದು. ತನ್ನ ಜೊತೆಯಲ್ಲಿಯೇ ಶತ್ರುವಿನ ಮೊಣಕಾಲು ಹಿಡಿದು ಮುಳುಗಬೇಕು ಅಥವಾ ಬೀಳಬೇಕು. ತಾನು ನಾಶವಾಗುವುದರ ಜೊತೆಗೆ ಶತ್ರುವನ್ನೂ ಸಂಪೂರ್ಣವಾಗಿ ನಾಶಮಾಡಲು ಯತ್ನಿಸಬೇಕು. ಹೀಗೆ ಮಾಡುವಾಗ ತಾನು ಸಂಪೂರ್ಣವಾಗಿ ನಾಶಹೊಂದಿದರೂ ವಿಷಾದಪಡುವ ಕಾರಣವಿಲ್ಲ. ಒಳ್ಳೆಯ ಜಾತಿಯ ಆಜಾನೇಯವೆಂಬ ಕುದುರೆಯು ಯಾವ ರೀತಿಯಲ್ಲಿ ಎಷ್ಟೇ ಭಾರ ಹೊರೆಸಿದರೂ, ಎಷ್ಟೇ ದೂರ ಪ್ರಯಾಣಮಾಡಬೇಕಾಗಿಬಂದರೂ ಸ್ವಲ್ಪವೂ ಆಯಾಸಗೊಳ್ಳದೇ ಕೆಲಸ ಮಾಡುತ್ತದೆಯೆಂಬುದನ್ನು ಸ್ಮರಿಸಿಕೊಂಡು–ಯುದ್ಧವೇ ಮೊದಲಾದುವುಗಳ ಭಾರವನ್ನು ಪ್ರಯತ್ನಪೂರ್ವಕವಾಗಿ ವಹಿಸಿಕೊಂಡು ಶ್ರೇಷ್ಠತೆಯನ್ನು ಸಾಧಿಸಬೇಕು.

**ಕುರು ಸತ್ತ್ವಂ ಚ ಮಾನಂ ಚ ವಿದ್ಧಿ ಪೌರುಷಮಾತ್ಮನಃ ।**
**ಉದ್ಭಾವಯ ಕುಲಂ ಮಗ್ನಂ ತ್ವತ್ಕೃತೇ ಸ್ವಯಮೇವ ಹಿ ॥೨೧॥**

ಮಗು! ನಿನ್ನಲ್ಲಿ ವೀರ್ಯವನ್ನೂ ಮತ್ತು ಸ್ವಾಭಿಮಾನವನ್ನೂ ಹುಟ್ಟಿಸಿಕೋ. ಅನಂತರ ನಿನ್ನ ಪೌರುಷವೆಷ್ಟಿರುವುದೆಂಬುದನ್ನು ಮನಗಾಣು. ನಿನ್ನ ಸಲುವಾಗಿ ಮುಳುಗಿಹೋಗಲಿರುವ ವಂಶವನ್ನು (ವಂಶದ ಕೀರ್ತಿಯನ್ನು) ಪುನಃ ನೀನೇ ಉದ್ಧರಿಸು. (ಕುಲದ ಕೀರ್ತಿಯನ್ನು ಉಳಿಸು.)

**ಯಸ್ಯ ವೃತ್ತಂ ನ ಜಲ್ಪನ್ತಿ ಮಾನವಾ ಮಹದದ್ಭುತಮ್ ।**
**ರಾಶಿವರ್ಧನಮಾತ್ರಂ ಸ ನೈವ ಸ್ತ್ರೀ ನ ಪುನಃ ಪುಮಾನ್ ॥೨೨॥**

ಯಾವನ ಅದ್ಭುತವಾದ ಸಾಧನೆಗಳನ್ನು ಮಾನವರು ಪ್ರಸ್ತಾಪಮಾಡುವುದಿಲ್ಲವೋ ಅಥವಾ ಮಾನವರ ಪ್ರಶಂಸೆಗೆ ಅರ್ಹವಾದ ಅದ್ಭುತಕಾರ್ಯವನ್ನು ಯಾವನು ಮಾಡುವುದಿಲ್ಲವೋ–ಅವನು ಜನಸಂಖ್ಯೆಯನ್ನು ವೃದ್ಧಿಗೊಳಿಸಲು ಮಾತ್ರವೇ ಅರ್ಹನಾಗಿರುತ್ತಾನೆ. ಅಂತಹವನು ಹೆಂಗಸೂ ಅಲ್ಲ ; ಗಂಡಸೂ ಅಲ್ಲ–ಎಂಬುದು ನನ್ನ ನಿಶ್ಚಿತಾಭಿಪ್ರಾಯವಾಗಿದೆ.

ದಾನೇ ತಪಸಿ ಸತ್ಯೇ ಚ ಯಸ್ಯ ನೋಚ್ಚರಿತಂ ಯಶಃ ।
ವಿದ್ಯಾಯಾಮರ್ಥಲಾಭೇ ವಾ ಮಾತುರುಚ್ಚಾರ ಏವ ಸಃ ॥೨೩॥

ಮನುಷ್ಯನಾಗಿ ಹುಟ್ಟಿದ ಮೇಲೆ ಯಾವುದಾದರೂ ರೀತಿಯಲ್ಲಿ ಕೀರ್ತಿಮಂತನಾಗಿ ಬಾಳಬೇಕು. ದಾನಶೀಲನೆಂಬ ಕೀರ್ತಿಯನ್ನು ಪಡೆದುಕೊಳ್ಳಬೇಕು. ಅಥವಾ ತಪಸ್ವೀ, ಸತ್ಯಸಂಧ, ವಿದ್ಯಾವಂತ, ಸಕಲಶಾಸ್ತ್ರಪಂಡಿತ ಎಂಬ ಹೆಸರನ್ನಾದರೂ ಪಡೆದುಕೊಳ್ಳಬೇಕು. ಅಥವಾ 'ಅಪಾರ ಧನವಂತ' ಹೆಚ್ಚು ಹಣವನ್ನು ಗಳಿಸಿದ್ದಾನೆ – ಎಂದಾದರೂ ಜನರು ಆಡಿಕೊಳ್ಳುವಂತಾಗಬೇಕು. ಇವುಗಳಲ್ಲಿ ಯಾವುದೊಂದನ್ನೂ ಸಾಧಿಸದೇ ಯಾವುದರಲ್ಲಿಯೂ ಕೀರ್ತಿಯನ್ನು ಗಳಿಸದೇ ಜನಗಣತಿಗೆ ಮಾತ್ರವೇ ಯೋಗ್ಯನಾದ ಮನುಷ್ಯನು ತನ್ನ ತಾಯಿಯ ಮಲ-ಮೂತ್ರರೂಪನೇ ಹೊರತು ಪುತ್ರನಾಗುವುದಿಲ್ಲ.

ಶ್ರುತೇನ ತಪಸಾ ವಾಪಿ ಶ್ರಿಯಾ ವಾ ವಿಕ್ರಮೇಣ ವಾ ।
ಜನಾನ್ಯೋಽಭಿಭವತ್ಯನ್ಯಾನ್ಕರ್ಮಣಾ ಹಿ ಸ ವೈ ಪುಮಾನ್ ॥೨೪॥

ನಾನು ಇಂತಹವನನ್ನು ಮಾತ್ರವೇ ಪುರುಷನೆಂದು ಕರೆಯುತ್ತೇನೆ : ಯಾವನು ಶಾಸ್ತ್ರಜ್ಞಾನದಿಂದ ಇತರರನ್ನು ವಾದದಲ್ಲಿ ಪರಾಭವ ಗೊಳಿಸುತ್ತಾನೆಯೋ, ತಪಸ್ಸುಮಾಡಿ ಇತರರಿಗಿಂತಲೂ ಮಿಗಿಲಾದ ಸಿದ್ಧಿಯನ್ನು ಪಡೆದುಕೊಳ್ಳುತ್ತಾನೆಯೋ, ತನ್ನ ಅಕ್ಕ-ಪಕ್ಕದವರ ಮತ್ತು ಬಂಧುಗಳ ಐಶ್ವರ್ಯಕ್ಕಿಂತಲೂ ಹೆಚ್ಚು ಹಣವನ್ನು ಸಂಪಾದಿಸಿ ಶ್ರೀಮಂತನೆಂಬ ಹೆಸರು ಗಳಿಸುವನೋ, ಅತಿಶಯವಾದ ಪರಾಕ್ರಮದಿಂದ ಯಾವನು ತನ್ನ ಶತ್ರುಗಳನ್ನು ಪರಾಜಯಗೊಳಿಸುತ್ತಾನೆಯೋ ಮತ್ತು ಯಾವುದಾದರೂ ಮಹಾಕಾರ್ಯ ಮಾಡಿ ಕೀರ್ತಿಯನ್ನು ಗಳಿಸುತ್ತಾನೆಯೋ– ಅಂತಹವನು ಮಾತ್ರವೇ ಪುರುಷನೆನಿಸಿಕೊಳ್ಳುತ್ತಾನೆ.

ನ ತ್ವೇವ ಜಾಲ್ಮೀಂ ಕಾಪಾಲೀಂ ವೃತ್ತಿಮೇಷಿತುಮರ್ಹಸಿ ।
ನೃಶಂಸ್ಯಾಮಯಶಸ್ಯಾಂ ಚ ದುಃಖಾಂ ಕಾಪುರುಷೋಚಿತಾಮ್ ॥೨೫॥

ಹೇಡಿಗಳಿಗೆ ಉಚಿತವಾದ, ಕ್ರೂರವಾದ, ಅಯಶಸ್ಕರವಾದ, ದುಃಖ

ಕರವಾದ, ನೀಚರ ಮತ್ತು ಭಿಕ್ಷಾವೃತ್ತಿಯಿಂದ ಜೀವಿಸುವವರ ವೃತ್ತಿಯನ್ನು ಮಾತ್ರ ನೀನು ಆಶ್ರಯಿಸಲು ಹೋಗಬೇಡ. (ನೀಚನೂ ಆಗಬೇಡ ; ಭಿಕ್ಷುಕರಂತೆ ದೀನನೂ ಆಗಬೇಡ.)

**ಯಮೇನಮಭಿನನ್ದೇಯುರಮಿತ್ರಾಃ ಪುರುಷಂ ಕೃಶಮ್ ।**
**ಲೋಕಸ್ಯ ಸಮವಜ್ಞಾತಂ ನಿಹೀನಾಸನವಾಸಸಮ್ ॥೨೭॥**

**ಅಹೋ ಲಾಭಕರಂ ಹೀನಮಲ್ಪಜೀವನಮಲ್ಪಕಮ್ ।**
**ನೇದೃಶಂ ಬನ್ಧುಮಾಸಾದ್ಯ ಬಾನ್ಧವಃ ಸುಖಮೇಧತೇ ॥೨೮॥**

ದುರ್ಬಲನಾದ ಯಾವ ಮನುಷ್ಯನನ್ನು ಕಂಡೊಡನೆಯೇ ಶತ್ರುಗಳು ಅಭಿನಂದಿಸುತ್ತಾರೆಯೋ (ತಮ್ಮ ಶತ್ರುವಿನ ಅವಸ್ಥೆಯನ್ನು ನೋಡಿ ಸಂತೋಷದಿಂದ ಹಿಗ್ಗುತ್ತಾರೆಯೋ), ಯಾವನ ಇರುವಿಕೆಯೇ ಲೋಕಕ್ಕೆ ತಿಳಿದಿರುವುದಿಲ್ಲವೋ ಅಥವಾ ಯಾವನನ್ನು ಕಂಡೊಡನೆಯೇ ಲೋಕವು 'ಹೇಡಿ' 'ನಪುಂಸಕ' – ಮುಂತಾದ ಮಾತುಗಳಿಂದ ಹಳಿಯುವುದೋ, ಯಾವನ ಆಸನ-ವಸ್ತ್ರಗಳು ಹೀನವಾಗಿರುವುವೋ, ಅಲ್ಪಲಾಭಕ್ಕೇ ಯಾವನು ಸಂತುಷ್ಟನಾಗಿ ಅಚ್ಚರಿಯನ್ನು ಪ್ರಕಟಿಸುತ್ತಾನೆಯೋ, ಯಾವನು ಹೀನನಾಗಿರುವನೋ, ಅಲ್ಪಜೀವಿಯೋ (ಲಬ್ಧವಾದಷ್ಟರಿಂದಲೇ ತೃಪ್ತಿಪಟ್ಟುಕೊಂಡು ಜೀವನನಡೆಸುವನೋ) ಮತ್ತು ಯಾವನು ಅಲ್ಪತನವಿರತಕ್ಕವನೋ– ಅಂತಹ ಬಂಧುವಿನ ಬಳಿಗೆ ಮತ್ತೊಬ್ಬ ಬಂಧುವು ಹೋಗಿ ಲೇಶವಾದರೂ ಸುಖವನ್ನು ಪಡೆಯುವುದಿಲ್ಲ.

**ಅವೃತ್ತ್ಯೈವ ವಿಪತ್ಸ್ಯಾಮೋ ವಯಂ ರಾಷ್ಟ್ರಾತ್ಪ್ರವಾಸಿತಾಃ ।**
**ಸರ್ವಕಾಮರಸೈರ್ಹೀನಾಃ ಸ್ಥಾನಭ್ರಷ್ಟಾ ಅಕಿಂಚನಾಃ ॥೨೯॥**

ನೀನು ಹೇಡಿಯಾಗಿರುವ ಕಾರಣದಿಂದಾಗಿ ನಾವು ನಮ್ಮ ರಾಷ್ಟ್ರದಿಂದಲೇ ದೂಡಲ್ಪಡುತ್ತೇವೆ. ಶತ್ರುಗಳು ರಾಜ್ಯವನ್ನು ಸ್ವಾಧೀನಪಡಿಸಿಕೊಂಡು ನಮ್ಮನ್ನು ದೇಶಭ್ರಷ್ಟರನ್ನಾಗಿ ಮಾಡುತ್ತಾರೆ. ಅನಂತರ ನಾವು ಸಕಲಸುಖೋಪಭೋಗಗಳಿಂದಲೂ ವಿಹೀನರಾಗಿ, ಸ್ಥಾನಭ್ರಷ್ಟರಾಗಿ, ದರಿದ್ರರಾಗಿ, ಜೀವನೋಪಾಯಕ್ಕೂ ಯಾವ ವೃತ್ತಿಯೂ ಇಲ್ಲದೇ ಸತ್ತುಹೋಗುತ್ತೇವೆ.

**ಅವಲುಗ್ಕಾರಿಣಂ ಸತ್ಸು ಕುಲವಂಶಸ್ಯ ನಾಶನಮ್ ।**
**ಕಲಿಂ ಪುತ್ರಪ್ರವಾದೇನ ಸಂಜಯ ತ್ವಾಮಜೀಜನಮ್ ॥೨೯॥**

ಮಗು, ಸಂಜಯ! ಸತ್ಪುರುಷರ ಮಧ್ಯದಲ್ಲಿ ಅಮಂಗಲಕರವಾದ ಕಾರ್ಯಮಾಡುವ, ಕುಲ ಮತ್ತು ವಂಶಗಳಿಗೆ ಪ್ರಾಪ್ತವಾಗಿರುವ ಪ್ರತಿಷ್ಠೆಯ ನಾಶಕನಾದ ನಿನ್ನನ್ನು ಪಡೆದುಕೊಂಡಿರುವ ನಾನು ಪುತ್ರನೆಂಬ ಹೆಸರಿನಿಂದ ಕಲಿಪುರುಷನನ್ನೇ ಪಡೆದುಕೊಂಡೆನು.

**ನಿರಮರ್ಷಂ ನಿರುತ್ಸಾಹಂ ನಿರ್ವೀರ್ಯಮರಿನನ್ದನಮ್ ।**
**ಮಾ ಸ್ಮ ಸೀಮನ್ತಿನೀ ಕಾಚಿಜ್ಜನಯೇತ್ಪುತ್ರಮೀದೃಶಮ್ ॥೩೦॥**

ಕೋಪರಹಿತನಾದ, ಉತ್ಸಾಹರಹಿತನಾದ, ನಿರ್ವೀರ್ಯನಾದ, ಶತ್ರುಗಳಿಗೆ ಸಂತೋಷದಾಯಕನಾದ ಇಂತಹ ಪುತ್ರನನ್ನು ಸಾಧ್ವಿಯಾದ ಯಾವ ಸ್ತ್ರೀಯೂ ಪ್ರಸವಿಸದಿರಲಿ.

**ಮಾ ಧೂಮಾಯ ಜ್ವಲಾತ್ಯನ್ತಮಾಕ್ರಮ್ಯ ಜಹಿ ಶಾತ್ರವಾನ್ ।**
**ಜ್ವಲ ಮೂರ್ಧನ್ಯಮಿತ್ರಾಣಾಂ ಮುಹೂರ್ತಮಪಿ ವಾ ಕ್ಷಣಮ್ ॥**

ಮಗು! ಧೂಮಪ್ರಾಯನಾಗಬೇಡ. ಅಗ್ನಿಯಂತೆ ಪ್ರಜ್ವಲಿಸು. ಶತ್ರುಗಳನ್ನು ಆಕ್ರಮಿಸಿ ನಾಶಪಡಿಸು. ಮುಹೂರ್ತಮಾತ್ರವಾಗಲೀ, ಕ್ಷಣ ಮಾತ್ರವಾಗಲೀ–ಶತ್ರುಗಳ ತಲೆಯ ಮೇಲೆ ಪ್ರಜ್ವಲಿಸು. ಅವರ ದರ್ಪವನ್ನಡಗಿಸು. (ಪರಾಕ್ರಮದಿಂದ ಅವರನ್ನು ಮೆಟ್ಟಿನಿಲ್ಲು.)

**ಏತಾವಾನೇವ ಪುರುಷೋ ಯದಮರ್ಷೀ ಯದಕ್ಷಮೀ ।**
**ಕ್ಷಮಾವಾನ್ನಿರಮರ್ಷಶ್ಚ ನೈವ ಸ್ತ್ರೀ ನ ಪುನಃ ಪುಮಾನ್ ॥೩೨॥**

ಯಾವ ಕ್ಷತ್ರಿಯನ ಹೃದಯದಲ್ಲಿ ಕೋಪವಿರುತ್ತದೋ ಮತ್ತು ಯಾರು ಶತ್ರುವಿನ ವಿಷಯದಲ್ಲಿ ಕ್ಷಮಾಗುಣರಹಿತನಾಗಿರುತ್ತಾನೆಯೋ – ಅಂತಹ ಕ್ಷತ್ರಿಯನನ್ನು ಪುರುಷನೆಂದು ಕರೆಯಬಹುದಾಗಿದೆ. ಕ್ಷತ್ರಿಯ ನಾಗಿದ್ದುಕೊಂಡೂ ಯಾವನು ಕ್ಷಮಾವಂತನಾಗಿಯೂ, ಕೋಪರಹಿತ ನಾಗಿಯೂ ಇರುತ್ತಾನೆಯೋ ಅವನು ಗಂಡಸೂ ಅಲ್ಲ ; ಹೆಂಗಸೂ ಅಲ್ಲ.

**ಸಂತೋಷೋ ವೈ ಶ್ರಿಯಂ ಹನ್ತಿ ತಥಾನುಕ್ರೋಶ ಏವ ಚ ।**
**ಅನುತ್ಥಾನಭಯೇ ಚೋಭೇ ನಿರೀಹೋ ನಾಶ್ನುತೇ ಮಹತ್ ॥**

ಅಲ್ಪಸಂತುಷ್ಟಿ, ದಯೆ, ಉದ್ಯೋಗಶೂನ್ಯತೆ ಮತ್ತು ಭಯ–ಇವುಗಳು ಸಂಪತ್ತನ್ನು ನಾಶಗೊಳಿಸುತ್ತವೆ. ನಿರಪೇಕ್ಷನು ಜೀವನದಲ್ಲಿ ಮಹಾಫಲಗಳನ್ನು ಅಥವಾ ಉಚ್ಚಸ್ಥಾನಗಳನ್ನು ಖಂಡಿತವಾಗಿಯೂ ಪಡೆದುಕೊಳ್ಳಲಾರನು.

**ಏಭ್ಯೋ ನಿಕೃತಿಪಾಪೇಭ್ಯಃ ಪ್ರಮುಞ್ಚಾತ್ಮಾನಮಾತ್ಮನಾ ।**
**ಆಯಸಂ ಹೃದಯಂ ಕೃತ್ವಾ ಮೃಗಯಸ್ವ ಪುನಃ ಸ್ವಕಮ್ ॥೩೪॥**

ಅಲ್ಪಸಂತುಷ್ಟಿ, ದಯೆ, ನಿರುದ್ಯೋಗ ಮತ್ತು ಭಯ–ಈ ನಾಲ್ಕೂ ಮನುಷ್ಯನಿಗೆ ಪರಾಭವವನ್ನುಂಟುಮಾಡುತ್ತವೆ. ಪರಾಭವವನ್ನುಂಟು ಮಾಡುವ ಈ ಮಹಾದೋಷಗಳನ್ನು ಹೃದಯದಿಂದ ಕಿತ್ತುಹಾಕು. ಇವುಗಳನ್ನು ಕಿತ್ತುಹಾಕಿದನಂತರ ಹೃದಯವು ಸ್ವಾಭಾವಿಕವಾಗಿಯೇ ಉಕ್ಕಿನಂತಾಗುತ್ತದೆ. ಉಕ್ಕಿನ ಹೃದಯವನ್ನು ಹೊಂದಿದವನಾಗಿ ನಿನ್ನ ರಾಜ್ಯಕೋಶಗಳನ್ನು ಪುನಃ ಸಂಪಾದಿಸು.

**ಪರಂ ವಿಷಹತೇ ಯಸ್ಮಾತ್ತಸ್ಮಾತ್ಪುರುಷ ಉಚ್ಯತೇ ।**
**ತಮಾಹುರ್ವ್ಯರ್ಥನಾಮಾನಂ ಸ್ತ್ರೀವದ್ಯ ಇಹ ಜೀವತಿ ॥೩೫॥**

ಶತ್ರುವನ್ನು ಎದುರಿಸಿ ನಿಲ್ಲುತ್ತಾನೆ ಮತ್ತು ಶತ್ರುವಿನ ಶಕ್ತಿಯನ್ನು ಸಹಿಸಿಕೊಳ್ಳುತ್ತಾನೆ – ಎಂಬ ಕಾರಣದಿಂದಲೇ 'ಪುರುಷ' ಎಂಬ ಪದದ ನಿರ್ವಚನವಾಗಿದೆ. (ಶತ್ರುಗಳನ್ನೆದುರಿಸದ ಭೀರುಗಳನ್ನೂ ಪುರುಷರೆಂದು ಕರೆಯುವುದು ರೂಢಿಯಲ್ಲಿ ಬಂದುಬಿಟ್ಟಿದೆ.) ಆದರೆ ಸ್ತ್ರೀಯಂತೆ ಯಾವನು ಭೀರುಜೀವನವನ್ನೇ ನಡೆಸುತ್ತಿರುತ್ತಾನೆಯೋ (ಪರೋಪಜೀವಿಯೋ) ಅಂತಹವನನ್ನು ಪುರುಷ ಎಂಬ ಹೆಸರಿನಿಂದ ಕರೆಯುವುದು ವ್ಯರ್ಥವೆಂದು ವಿದ್ವಾಂಸರು ಹೇಳುತ್ತಾರೆ.

**ಶೂರಸ್ಯೋರ್ಜಿತಸತ್ತ್ವಸ್ಯ ಸಿಂಹವಿಕ್ರಾನ್ತಚಾರಿಣಃ ।**
**ದಿಷ್ಟಭಾವಂ ಗತಸ್ಯಾಪಿ ವಿಷಯೇ ಮೋದತೇ ಪ್ರಜಾ ॥೩೬॥**

ಶೂರನಾದವನು, ಸುಸ್ಥಿರವಾದ ವೀರ್ಯಪರಾಕ್ರಮವುಳ್ಳವನು, ಸಿಂಹ ಸಮಾನವಿಕ್ರಮನು (ಸಿಂಹದಂತೆ ನಡೆಯುವವನು) ಒಂದು ವೇಳೆ ದೈವವಶ ದಿಂದ ಯುದ್ಧಮಾಡುತ್ತಾ ಪ್ರಾಣತೊರೆದರೂ ಅವನ ದೇಶದ ಪ್ರಜೆಯು

ಸುಖ-ಸಂತೋಷದಿಂದಿರುತ್ತದೆ. (ಅವನ ವಿಷಯದಲ್ಲಿ ಸಂತೋಷ ಪಡುತ್ತದೆ.)

**ಯ ಆತ್ಮನಃ ಪ್ರಿಯಸುಖೇ ಹಿತ್ವಾ ಮೃಗಯತೇ ಶ್ರಿಯಮ್ ।**
**ಅಮಾತ್ಯಾನಾಮಥೋ ಹರ್ಷಮಾದಧಾತ್ಯಚಿರೇಣ ಸಃ ॥೩೭॥**

ಯಾವ ರಾಜನು ತನಗೆ ಪ್ರಿಯವಾಗುವುದನ್ನೂ ಮತ್ತು ಸುಖವನ್ನೂ ಪರಿತ್ಯಜಿಸಿ ಸಂಪತ್ತಿನ ಅನ್ವೇಷಣಕ್ಕಾಗಿ ಪ್ರಯತ್ನಿಸುತ್ತಿರುತ್ತಾನೆಯೋ - ಅಂತಹವನು ಬಹುಶೀಘ್ರವಾಗಿ ತನ್ನ ಅಮಾತ್ಯರಿಗೆ ಸಂತೋಷದಾಯಕ ನಾಗುತ್ತಾನೆ."

ವಿದುಲೆಯು ಇಷ್ಟು ಕಠಿನವಾದ ಮಾತುಗಳನ್ನು ಹೇಳಿದನಂತರ ಸಂಜಯನು ಒಂದು ಮಾತನ್ನಾಡಿದನು :

**ಕಿಂ ನು ತೇ ಮಾಮಪಶ್ಯನ್ತ್ಯಾಃ ಪೃಥಿವ್ಯಾ ಅಪಿ ಸರ್ವಯಾ ।**
**ಕಿಮಾಭರಣಕೃತ್ಯಂ ತೇ ಕಿಂ ಭೋಗೈರ್ಜೀವಿತೇನ ವಾ ॥೩೯॥**

"ಅಮ್ಮ! ಮನುಷ್ಯನು ಮೊದಲು ಪ್ರಾಣದಿಂದ ಉಳಿಯಬೇಕು. ಶತ್ರುವನ್ನು ಪರಾಭವಗೊಳಿಸುವ ಉತ್ಸಾಹದಲ್ಲಿ ಪ್ರಾಣವನ್ನೇ ತೊರೆಯುವುದನ್ನು ಅನುಚಿತವೆಂದು ನಾನು ಭಾವಿಸುತ್ತೇನೆ. ಒಂದು ವೇಳೆ ನಾನು ಪ್ರಾಣ ತೊರೆದೆನೆಂದೇ ಇಟ್ಟುಕೊಳ್ಳೋಣ. ಆಗ ನಿನಗೆ ಲಭಿಸುವ ಸುಖ-ಸಂತೋಷಗಳಾದರೂ ಏನು? ನಾನೇ ಇಲ್ಲದಿದ್ದ ಮೇಲೆ ಈ ಅಖಂಡಪೃಥ್ವಿಯನ್ನೂ ಇಟ್ಟುಕೊಂಡು ಏನು ಮಾಡುವೆ? ಈಗ ನೀನು ತೊಟ್ಟುಕೊಂಡಿರುವ ಆಭರಣಗಳಾದರೂ ನಾನು ಸತ್ತುಹೋದನಂತರದಲ್ಲಿ ನಿನಗೆ ಬೇಕಾಗುವುವೇ? ನಾನು ಸತ್ತುಹೋಗಿಬಿಟ್ಟರೆ ಭೋಗ-ಜೀವನಗಳಾದರೂ ನಿನಗೆ ಬೇಕಾಗುವುವೇ? ನನ್ನನ್ನು ಬಿಟ್ಟು ಪ್ರಾಣದಿಂದಿರಲು ತಾನೇ ನೀನು ಇಚ್ಛಿಸುವೆಯಾ?"

ಮಗನ ಆ ಪ್ರಶ್ನೆಗೆ ವೀರಮಾತೆಯಾದ ವಿದುಲೆಯು ಯಥಾನುರೂಪವಾಗಿಯೇ ಉತ್ತರಿಸಿದಳು :

**ಕಿಮದ್ಯಕಾನಾಂ ಯೇ ಲೋಕಾ ದ್ವಿಷನ್ತಸ್ತಾನವಾಪ್ನುಯುಃ ।**
**ಯೇ ತ್ವಾದೃತಾತ್ಮನಾಂ ಲೋಕಾಃ ಸುಹೃದಸ್ತಾನ್ವ್ರಜನ್ತು ನಃ ॥೪೦॥**

“ಈಗೇನವಸರ? ನಾಳೆ ಮಾಡಿದರಾಯಿತು– ಎಂಬ ಸ್ವಭಾವವುಳ್ಳ ದೀರ್ಘಸೂತ್ರಿಗಳಿಗೂ ಅಥವಾ ಈಗೇನು ಮಾಡುವುದು? – ಎಂದು ಯೋಚಿಸುತ್ತಾ ತಲೆಯ ಮೇಲೆ ಕೈಯಿಟ್ಟು ಕುಳಿತುಕೊಳ್ಳುವ ಹೇಡಿಗಳಿಗೂ ಯಾವ ಲೋಕಗಳು ಲಭಿಸುತ್ತವೆಯೋ – ಅಂತಹ ಲೋಕಗಳು ನಮ್ಮ ಶತ್ರುಗಳಿಗೆ ಲಭಿಸಲಿ. ಸರ್ವತ್ರ ಸಮ್ಮಾನಿತರಾದ, ಸತ್ಕೀರ್ತಿಯನ್ನು ಪಡೆದಿರುವ ಪುಣ್ಯಾತ್ಮರಿಗೆ ಯಾವ ಲೋಕಗಳು ಲಭ್ಯವಾಗುತ್ತವೆಯೋ – ಅಂತಹ ಪುಣ್ಯಲೋಕಗಳಿಗೆ ನಮ್ಮ ಸುಹೃದರು ಹೋಗಲಿ. (ಲೋಕದ ಆದರವನ್ನು ಪಡೆಯದೇ ಇರತಕ್ಕವನ ಜೀವನವು ವ್ಯರ್ಥವೇ ಸರಿ. ಮಾನವನು ಕೀರ್ತಿಮಂತನಾಗಿ ಬಾಳಬೇಕು. ದೀರ್ಘಸೂತ್ರಿಯೂ, ಸೋಮಾರಿಯೂ ಆಗಿರಬಾರದು.)

**ಭೃತ್ಯೈರ್ವಿಹೀಯಮಾನಾನಾಂ ಪರಪಿಣ್ಡೋಪಜೀವಿನಾಮ್ ।**
**ಕೃಪಣಾನಾಮಸತ್ತ್ವಾನಾಂ ಮಾ ವೃತ್ತಿಮನುವರ್ತಿಥಾಃ ॥೪೧॥**

ಸೇವಕರಿಲ್ಲದೇ ಜೀವನವನ್ನು ನಡೆಸುವವರ, ಪರಾನ್ನದಿಂದಲೇ ಜೀವನ ನಡೆಸುವವರ, ದೀನ-ದುರ್ಬಲರ ವೃತ್ತಿಯನ್ನು ಮಾತ್ರ ನೀನು ಅವಲಂಬಿಸಬೇಡ.

**ಅನು ತ್ವಾಂ ತಾತ ಜೀವನ್ತು ಬ್ರಾಹ್ಮಣಾಃ ಸುಹೃದಸ್ತಥಾ ।**
**ಪರ್ಜನ್ಯಮಿವ ಭೂತಾನಿ ದೇವಾ ಇವ ಶತಕ್ರತುಮ್ ॥೪೨॥**

ದೇವತೆಗಳು ಇಂದ್ರನ ಆಶ್ರಯವನ್ನು ಪಡೆದು ಸುರಕ್ಷಿತರಾಗಿರುವಂತೆ, ಪ್ರಪಂಚದ ಸಕಲಪ್ರಾಣಿಗಳೂ ಪರ್ಜನ್ಯನ ಆಶ್ರಯದಿಂದ ಜೀವಿಸಿರುವಂತೆ– ಬ್ರಾಹ್ಮಣರೂ ಮತ್ತು ಸುಹೃದರೂ ನಿನ್ನನ್ನೇ ಆಶ್ರಯಿಸಿ ಜೀವಿಸಲಿ.

**ಯಮಾಜೀವನ್ತಿ ಪುರುಷಂ ಸರ್ವಭೂತಾನಿ ಸಂಜಯ ।**
**ಪಕ್ವಂ ದ್ರುಮಮಿವಾಸಾದ್ಯ ತಸ್ಯ ಜೀವಿತಮರ್ಥವತ್ ॥೪೩॥**

ಸಂಜಯ! ಪಕ್ವವಾದ ಹಣ್ಣುಗಳಿಂದ ಕೂಡಿರುವ ವೃಕ್ಷದ ಬಳಿಗೆ ಫಲಾಪೇಕ್ಷಿಗಳು ಹೋಗುವಂತೆ–ಪ್ರಪಂಚದ ಸರ್ವಪ್ರಾಣಿಗಳೂ ಜೀವಿಕೆಗಾಗಿ ಯಾವ ರಾಜನನ್ನು ಆಶ್ರಯಿಸುತ್ತಾರೆಯೋ – ಅಂತಹ ರಾಜನ ಜೀವನವು ಸಾರ್ಥಕವಾದಂತಾಗುತ್ತದೆ.

**ಯಸ್ಯ ಶೂರಸ್ಯ ವಿಕ್ರಾನ್ತೈರೇಧನ್ತೇ ಬಾನ್ಧವಾಃ ಸುಖಮ್ ।**
**ತ್ರಿದಶಾ ಇವ ಶಕ್ರಸ್ಯ ಸಾಧು ತಸ್ಯೇಹ ಜೀವಿತಮ್ ॥೪೪॥**

ಪರಾಕ್ರಮಿಯಾದ ಇಂದ್ರನ ಪರಾಕ್ರಮವನ್ನು ಆಶ್ರಯಿಸಿ ದೇವತೆಗಳು ಸುಖಿಗಳಾಗಿರುವಂತೆ–ಶೂರನಾದ ಮಹಾಪರಾಕ್ರಮಿಯಾದ ಯಾವ ರಾಜನ ಆಶ್ರಯವನ್ನು ಪಡೆದು ಅವನ ಬಂಧುಗಳು ಸುಖಿಗಳಾಗುತ್ತಾರೆಯೋ ಪ್ರಪಂಚದಲ್ಲಿ ಅಂತಹ ರಾಜನ ಜೀವಿತವೇ ಸಾರ್ಥಕವಾದುದು.

**ಸ್ವಬಾಹುಬಲಮಾಶ್ರಿತ್ಯ ಯೋಽಭ್ಯುಜ್ಜೀವತಿ ಮಾನವಃ ।**
**ಸ ಲೋಕೇ ಲಭತೇ ಕೀರ್ತಿಂ ಪರತ್ರ ಚ ಶುಭಾಂ ಗತಿಮ್ ॥೪೫॥**

ಯಾವ ಮನುಷ್ಯನು ಸ್ವಭುಜಬಲ-ಪರಾಕ್ರಮಗಳಿಂದ ಉತ್ಕೃಷ್ಟವಾದ ಜೀವನವನ್ನು ನಡೆಸುತ್ತಿರುತ್ತಾನೆಯೋ – ಅವನು ಇಹದಲ್ಲಿ ಕೀರ್ತಿಯನ್ನೂ ಅವಸಾನಾನಂತರದಲ್ಲಿ ಶುಭವಾದ ಗತಿಯನ್ನೂ (ಲೋಕವನ್ನೂ) ಪಡೆಯುತ್ತಾನೆ."

ಒ೩೩ನೆಯ ಅಧ್ಯಾಯವು ಮುಗಿಯಿತು.

೧೩೪ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ)

## ವಿದುಲೆಯು ಮಗನನ್ನು ಯುದ್ಧಮಾಡಲು ಪ್ರೋತ್ಸಾಹಿಸಿದುದು

ವಿದುಲೆಯು ಮುಂದುವರಿದು ಹೇಳುತ್ತಾಳೆ :

"ಸಂಜಯ! ಈ ಅವಸ್ಥೆಯಲ್ಲಿ ನೀನು ಪೌರುಷವನ್ನು ಪರಿತ್ಯಜಿಸಲು ನಿಶ್ಚಯಿಸಿರುವುದೇ ಆದರೆ ಬಹುಶೀಘ್ರದಲ್ಲಿಯೇ ಹೀನಪುರುಷರ ಮಾರ್ಗವನ್ನೇ ಅನುಸರಿಸಿ ಹೋಗುವೆ.

**ಯೋ ಹಿ ತೇಜೋ ಯಥಾಶಕ್ತಿ ನ ದರ್ಶಯತಿ ವಿಕ್ರಮಾತ್ ।**
**ಕ್ಷತ್ರಿಯೋ ಜೀವಿತಾಕಾಂಕ್ಷೀ ಸ್ತೇನ ಇತ್ಯೇವ ತಂ ವಿದುಃ ॥೨॥**

ಯಾವ ಕ್ಷತ್ರಿಯನು ಜೀವಿಸಿರಲೇಬೇಕೆಂಬ ಒಂದೇ ಆಶಯದಿಂದ ಶಕ್ತಿ ಮೀರಿ ತನ್ನ ಪರಾಕ್ರಮವನ್ನು ಪ್ರದರ್ಶಿಸಿ ತೇಜಸ್ಸನ್ನು ಪ್ರಕಟಪಡಿಸುವುದಿಲ್ಲವೋ – ಅಂತಹವನನ್ನು ಕಳ್ಳನೆಂದೇ ಜನಗಳು ಭಾವಿಸುತ್ತಾರೆ.

**ಅರ್ಥವನ್ತ್ಯುಪಪನ್ನಾನಿ ವಾಕ್ಯಾನಿ ಗುಣವನ್ತಿ ಚ ।**
**ನ ವೈ ಸಮ್ಪ್ರಾಪ್ನುವನ್ತಿ ತ್ವಾಂ ಮುಮೂರ್ಷುಮಿವ ಭೇಷಜಮ್ ॥೩॥**

ಸಾಯುವುದಕ್ಕೆ ಸಿದ್ಧನಾಗಿರುವವನಿಗೆ ಔಷಧಗಳು ಯಾವ ರೀತಿಯ ಪರಿಣಾಮವನ್ನೂ ಉಂಟುಮಾಡದಿರುವಂತೆ – ನಾನು ಹೇಳುತ್ತಿರುವ ಯಥಾರ್ಥವಾದ, ಯುಕ್ತಿಯುಕ್ತವಾಗಿ ಉಪಪಾದಿತವಾದ, ಗುಣಯುಕ್ತವಾದ ವಾಕ್ಯಗಳು ನಿನ್ನ ಮೇಲೆ ಯಾವ ವಿಧವಾದ ಪರಿಣಾಮವನ್ನೂ ಉಂಟುಮಾಡುತ್ತಿಲ್ಲ.

ಸಿಂಧುರಾಜನ ವಿಷಯದಲ್ಲಿ ಅವನ ಪ್ರಜೆಗಳಲ್ಲಿ ಅಷ್ಟಾಗಿ ಸಂತೋಷಪಡದವರೂ ಇದ್ದಾರೆ. ಆದರೂ ನಿನ್ನ ದೌರ್ಬಲ್ಯದ ಕಾರಣದಿಂದ ಅವರು ಏನು ಮಾಡಲೂ ತಿಳಿಯದವರಾಗಿ ಕುಳಿತಿದ್ದಾರೆ. ತಮ್ಮ ರಾಜನಿಗೆ ಅನೇಕವಿಧವಾದ ವಿಪತ್ತುಗಳು ಒದಗಬಹುದೆಂಬ ನಿರೀಕ್ಷಣೆಯಲ್ಲಿದ್ದಾರೆ. ಇತರ ರಾಜರೂ ನಿನ್ನ ಪೌರುಷವನ್ನು ನೋಡಿದನಂತರ ಹಲವು ಕಡೆಗಳಿಂದ ನಿನಗೆ ಸಹಾಯಸಂಪತ್ತಿಯನ್ನು ಒದಗಿಸಿ ಸಿಂಧುರಾಜನೊಡನೆ ಶತ್ರುತ್ವವನ್ನು ಕಟ್ಟಿಕೊಳ್ಳಬಹುದು. ಆದರೆ ನೀನು ಸಿಂಧುರಾಜನೊಡನೆ ಪುನಃ ಯುದ್ಧಮಾಡಿ ಜಯಿಸುವೆಯೆಂಬ ಭರವಸೆಯು ಅವರಿಗುಂಟಾಗಬೇಕು. ಅವರೊಡನೆ ನೀನು ಸಂಧಿಮಾಡಿಕೊಂಡು ಸಿಂಧುರಾಜನಿಗೆ ವಿಪತ್ತು ಒದಗುವ ಕಾಲವನ್ನು ನಿರೀಕ್ಷಿಸುತ್ತಾ ರಹಸ್ಯವಾಗಿ ಗಿರಿ-ದುರ್ಗಾಲಯಗಳಲ್ಲಿ ಸಂಚರಿಸುತ್ತಿರಬೇಕು. 'ನೈವಾಯಮಜರಾಮರಃ' ಈ ಸಿಂಧುರಾಜನೇನು ಮುಪ್ಪಿಲ್ಲದವನೂ ಅಲ್ಲ.; ಸಾವಿಲ್ಲದವನೂ ಅಲ್ಲ. ಮನುಷ್ಯನಾಗಿ ಹುಟ್ಟಿದ ಮೇಲೆ ಅವನೂ ಒಂದು ದಿನ ಯಾವುದಾದರೂ ವಿಪತ್ತಿಗೊಳಗಾಗಿ ಸಾಯಲೇಬೇಕು.

**ಸಂಜಯೋ ನಾಮತಶ್ಚ ತ್ವಂ ನ ಚ ಪಶ್ಯಾಮಿ ತತ್ತ್ವಯಿ ।**
**ಅನ್ವರ್ಥನಾಮಾ ಭವ ಮೇ ಪುತ್ರ ಮಾ ವ್ಯರ್ಥನಾಮಕಃ ॥೭॥**

ನಿನಗೆ ನಾವು ಸಂಜಯನೆಂದು ಹೆಸರಿಟ್ಟಿದ್ದೇವೆ. 'ಚೆನ್ನಾಗಿ ಜಯಿಸುವವನು' ಎಂದು ನಿನ್ನ ಹೆಸರಿನ ಅರ್ಥ. ಆದರೆ ನಿನ್ನಲ್ಲಿ ಆ ಸಮ್ಯಕ್ ಜಯತ್ವವನ್ನೇ ನಾನು ಕಾಣದವಳಾಗಿದ್ದೇನೆ. ಮಗು! ನೀನು ಅನ್ವರ್ಥನಾಮನಾಗು. ವ್ಯರ್ಥನಾಮನಾಗಬೇಡ. (ನಿನ್ನ ಹೆಸರಿಗೆ ವಿರೋಧವಾದ ಅರ್ಥಬರುವಂತೆ ನಡೆದುಕೊಳ್ಳಬೇಡ).

ಹಿಂದೆ ನೀನಿನ್ನೂ ಬಾಲಕನಾಗಿದ್ದಾಗ ಶುಭಲೋಚನನಾದ (ದಿವ್ಯಜ್ಞಾನವಿದ್ದ) ಮಹಾಪ್ರಾಜ್ಞನಾದ ಬ್ರಾಹ್ಮಣನೊಬ್ಬನು ನಿನ್ನನ್ನು ನೋಡಿ 'ಇವನು ಮುಂದೆ ಒಮ್ಮೆ ಮಹಾಕಷ್ಟಕ್ಕೊಳಗಾಗುವನು. ಅನಂತರ ಅಭಿವೃದ್ಧಿಯನ್ನು ಹೊಂದುವನು' – ಎಂದು ಹೇಳಿದ್ದನು. ಅವನು ಹೇಳಿರುವುದರಲ್ಲಿ ಒಂದು ಭಾಗ ನಿಜವಾಗಿ ಪರಿಣಮಿಸಿದೆ. ಎರಡನೆಯ ಭಾಗವೂ ನಿಜವಾಗಿ ಪರಿಣಮಿಸುವುದೆಂಬ ಆಕಾಂಕ್ಷೆಯಿಂದ ನಾನು ನಿನಗೆ ಈ ಮಾತುಗಳನ್ನು ಹೇಳುತ್ತಿದ್ದೇನೆ. ಅವನು ಹೇಳಿದ್ದ ಮಾತುಗಳನ್ನೇ ಸ್ಮರಿಸುತ್ತಾ ನಾನು ನಿನ್ನ ವಿಜಯಕಾಂಕ್ಷಿಣಿಯಾಗಿದ್ದೇನೆ. ಈ ಕಾರಣದಿಂದಲೇ ಹೇಡಿಯಂತೆ ಕುಳಿತುಕೊಳ್ಳಬೇಡವೆಂದೂ ನಿನಗೆ ಹೇಳುತ್ತಿದ್ದೇನೆ. ಪುನಃ ಪುನಃ ಅದನ್ನೇ ಹೇಳುತ್ತೇನೆ.

ಯಾವನ ಪ್ರಯೋಜನದ ಸಿದ್ಧಿಯಲ್ಲಿ ಇತರರೂ ಸಂತುಷ್ಟರಾಗುತ್ತಾರೆಯೋ ಮತ್ತು ತಾನೂ ಔನ್ನತ್ಯವನ್ನು ಹೊಂದುತ್ತಾನೆಯೋ– ಅಂತಹ ನೀತಿಶಾಸ್ತ್ರಾನುಸಾರವಾದ ಅರ್ಥಸಿದ್ಧಿಗೆ ಪ್ರಯತ್ನಿಸುವವನ ಅಭೀಷ್ಟಗಳು ಸಿದ್ಧಿಸಿಯೇ ಸಿದ್ಧಿಸುತ್ತವೆ. ಸಂಜಯ! ನಮ್ಮ ಹಿಂದಿನವರಿಗೆ ಮತ್ತು ನನಗೆ ಪ್ರಯೋಜನವಾಗಲಿ, ಆಗದಿರಲಿ–ಯುದ್ಧಮಾಡುವುದೇ ಕ್ಷತ್ರಿಯರ ಧರ್ಮವೆಂದು ಭಾವಿಸಿ ಯುದ್ಧಮಾಡಲು ನಿಶ್ಚಯಿಸು. ಯುದ್ಧಕ್ಕೆ ಉಪಸಂಹಾರಮಾಡಬೇಡ. (ಯುದ್ಧವನ್ನು ನಿಲ್ಲಿಸಬಿಡಬೇಡ.)

ಶಂಬರನು ಹೇಳಿದ ನೀತಿಯುಕ್ತವಾದ ಮಾತಿದು, ಸಂಜಯ!

**ನಾತಃ ಪಾಪೀಯಸೀಂ ಕಾಂಚಿದವಸ್ಥಾಂ ಶಮ್ಬರೋಽಬ್ರವೀತ್ ।**
**ಯತ್ರ ನೈವಾದ್ಯ ನ ಪ್ರಾತರ್ಭೋಜನಂ ಪ್ರತಿದೃಶ್ಯತೇ ॥೧೨॥**

'ಯಾವ ಸ್ಥಿತಿಯಲ್ಲಿ ಈ ದಿನದ ಮತ್ತು ನಾಳೆ ಬೆಳಗಿನ ಭೋಜನಕ್ಕೂ ಅವಕಾಶವಿರುವುದಿಲ್ಲವೋ (ಮಧ್ಯಾಹ್ನದ ಊಟಕ್ಕೂ ಗತಿಯಿರುವುದಿಲ್ಲವೋ) ಅದಕ್ಕಿಂತಲೂ ಪಾಪಿಷ್ಠವಾದ ಅವಸ್ಥೆಯೇ ಬೇರೊಂದಿಲ್ಲ'–ಎಂಬುದಾಗಿ ಶಂಬರನು ಹೇಳಿದ್ದಾನೆ.

**ಪತಿಪುತ್ರವಧಾದೇತತ್ಪರಮಂ ದುಃಖಮಬ್ರವೀತ್ ।**
**ದಾರಿದ್ರ್ಯಮಿತಿ ಯತ್ಪ್ರೋಕ್ತಂ ಪರ್ಯಾಯಮರಣಂ ಹಿ ತತ್ ॥೧೩॥**

ಪಾಪಿಷ್ಠವಾದ ಈ ಅವಸ್ಥೆಯು ಪತಿ-ಪುತ್ರವಧೆಗಿಂತಲೂ ಪರಮ ದುಃಖದಾಯಕವಾದುದೆಂದು ಶಂಬರನು ಹೇಳಿದ್ದಾನೆ. 'ದಾರಿದ್ರ್ಯ-ದಾರಿದ್ರ್ಯ' ಎಂದು ಯಾವ ದುರವಸ್ಥೆಯನ್ನು ಕರೆಯುತ್ತಾರೆಯೋ–ಅದು ಮರಣಕ್ಕೆ ಪರ್ಯಾಯವಾದುದು. (ಮರಣಸಮಾನವಾದುದು.)



ಸಂಜಯ! ನಾನಾದರೋ ವಿಖ್ಯಾತವಾದ ಕುಲದಲ್ಲಿ ಹುಟ್ಟಿದವಳು. ಹಂಸಪಕ್ಷಿಯು ಒಂದು ಸರೋವರದಿಂದ ಮತ್ತೊಂದು ಸರೋವರಕ್ಕೆ ಹೋಗುವಂತೆ–ನಾನು ಒಂದು ಮಹಾಕುಲದಿಂದ ಮತ್ತೊಂದು ಮಹಾ ಕುಲಕ್ಕೆ ಬಂದು ಸೇರಿರುತ್ತೇನೆ. ನಾನಿಲ್ಲಿ ಚಕ್ರವರ್ತಿನಿಯಾಗಿದ್ದೆನು. ಸಕಲ ವಿಧವಾದ ಕಲ್ಯಾಣಸಾಧನಗಳಿಂದಲೂ ಸಂಪನ್ನಳಾಗಿದ್ದೆನು. ಪತಿದೇವನ ಆದರಕ್ಕೆ ಪಾತ್ರಳಾಗಿದ್ದೆನು. ಹಿಂದೆ ನಾನು ಮಹಾರ್ಹವಾದ ಆಭರಣಗಳನ್ನು ತೊಟ್ಟು,

ಪರಮಸುಂದರವಾದ ಮತ್ತು ಸ್ವಚ್ಛವಾದ ವಸ್ತ್ರಗಳನ್ನುಟ್ಟು ಬಂಧು-ಬಾಂಧವರ ಮಧ್ಯದಲ್ಲಿದ್ದುದನ್ನು ನನ್ನ ಹಿತೈಷಿಗಳು ನೋಡಿ ಬಹಳವಾಗಿ ಸಂತೋಷಪಟ್ಟಿದ್ದರು. ಅಂತಹ ಸಂಪತ್ಸಮೃದ್ಧವಾದ ಸ್ಥಿತಿಯಲ್ಲಿ ನಾನಿದ್ದೆನು. ಆದರೆ ಈಗ ನಿನ್ನ ಹೇಡಿತನದಿಂದಾಗಿ ಶಂಬರನು ಹೇಳಿದ ದರಿದ್ರಾವಸ್ಥೆಯು ಬರಲಿದೆ. 'ನಾನೇ ಇಲ್ಲದಿದ್ದ ಮೇಲೆ ಈ ಐಶ್ವರ್ಯದಿಂದ ನಿನಗೇನಾಗಬೇಕಾಗಿದೆ?' – ಎಂದು ನೀನೇನೋ ಪ್ರಶ್ನಿಸುವೆ. ಆದರೆ ದಾರಿದ್ರ್ಯದುಃಖದಿಂದ ಪೀಡಿತಳಾಗಿ ದುರ್ಬಲಳಾಗುವ ನನ್ನನ್ನೂ ಮತ್ತು ನಿನ್ನ ಭಾರ್ಯೆಯನ್ನೂ ಯಾವಾಗ ನೀನು ನೋಡುವೆಯೋ ಆಗ ನಿನಗೇ – 'ನಾನು ಬದುಕಿದ್ದೂ ಸುಖವಿಲ್ಲ. ನನ್ನ ಬದುಕು ನಿರರ್ಥಕ' – ಎಂಬ ಭಾವನೆಯುಂಟಾಗುತ್ತದೆ. ದರಿದ್ರಾವಸ್ಥೆಯು ಬಂದನಂತರ ನಿನ್ನ ತಾಯಿಯ ಮತ್ತು ಭಾರ್ಯೆಯ ಅವಸ್ಥೆಯೇ ಹೀಗಾಗುವಾಗ ನಮ್ಮ ಭೃತ್ಯವರ್ಗದವರ ವಿಷಯವನ್ನು ಹೇಳಬೇಕಾಗಿಯೇ ಇಲ್ಲ. ಅವರ ಪೋಷಣೆಯನ್ನು ಮಾಡಲೂ ಅಸಮರ್ಥರಾಗುತ್ತೇವೆ. ಅವರಿಗೆ ನಾವು ಕೆಲಸಕೊಡಲೂ ಅಸಮರ್ಥರಾಗುತ್ತೇವೆ. ಸೇವಕರು, ಭೃತ್ಯರು, ಆಚಾರ್ಯರು, ಋತ್ವಿಜರು ಮತ್ತು ಪುರೋಹಿತರು ನಮ್ಮ ಅರಮನೆಯಲ್ಲಿ ಮಾಡಲು ಕೆಲಸವಿಲ್ಲದೇ ತಮ್ಮ ಜೀವಿಕೆಗಾಗಿ ನಮ್ಮನ್ನು ಬಿಟ್ಟು ಹೊರಡುತ್ತಾರೆ. ಸೇವಕವರ್ಗದವರು ನಿನ್ನ ಮನೆಯನ್ನು ಬಿಟ್ಟು ಹೋದನಂತರ ನೀನು ಜೀವಿಸಿದ್ದೇನು ಫಲ?

ಮಗು, ಸಂಜಯ! ನೀನು ಹಿಂದೆ ಹೀಗಿರಲಿಲ್ಲ. ಎಲ್ಲ ವಿಷಯಗಳಲ್ಲಿಯೂ ಉತ್ಸಾಹಿಯಾಗಿದ್ದೆ. ಹಿಂದಿನಂತೆಯೇ ನೀನು ಶ್ಲಾಘನೀಯವಾದ ಯಶಃಪ್ರಾಪಕವಾದ ಕಾರ್ಯಮಾಡುವುದನ್ನು ನಾನು ನೋಡದಿದ್ದರೆ ನನ್ನ ಹೃದಯಕ್ಕೆ ಶಾಂತಿಯು ಹೇಗೆ ತಾನೇ ಲಭಿಸೀತು? (ಯುದ್ಧದಲ್ಲಿ ಸೋತುಬಂದು ಹೇಡಿಯಂತೆ ಮಲಗಿರುವುದನ್ನು ನಾನು ನೋಡಿಕೊಂಡಿರಲು ಸಾಧ್ಯವಾಗುವುದೇ?) ನಿನ್ನ ಹೇಡಿತನದ ಪರಿಣಾಮ ವೇನೆಂಬುದನ್ನು ಬಹಳವಾಗಿ ಯೋಚಿಸುತ್ತಿದ್ದೇನೆ. ಮಗು! ನೀನು ಯಶಸ್ಕರವಾದ ಕಾರ್ಯದಲ್ಲಿ ಪ್ರವೃತ್ತನಾಗದೇ ಹೀಗೆಯೇ ಹೇಡಿಯಾಗಿದ್ದು ನಾವು ಪರಮದಾರುಣವಾದ ದರಿದ್ರಾವಸ್ಥೆಯನ್ನನುಭವಿಸಬೇಕಾಗಿ

ಬಂದಾಗ :

**ನೇತಿ ಚೇದ್ಬ್ರಾಹ್ಮಣಂ ಬ್ರೂಯಾಂ ದೀರ್ಯೇತ ಹೃದಯಂ ಮಮ ।**
**ನ ಹ್ಯಹಂ ನ ಚ ಮೇ ಭರ್ತಾ ನೇತಿ ಬ್ರಾಹ್ಮಣಮುಕ್ತವಾನ್ ॥೧೯॥**

ಬ್ರಾಹ್ಮಣನೊಬ್ಬನು ಬಂದು ಯಾಚನೆಮಾಡಿದಾಗ ನಾನವನಿಗೆ 'ಇಲ್ಲ' ಎನ್ನುವ ಸಂದರ್ಭವೇನಾದರೂ ಬಂದುಬಿಟ್ಟರೆ ನನ್ನ ಹೃದಯವೇ ಸೀಳಿಹೋಗುತ್ತದೆ. ಅಂತಹ ಕಾಲವು ಬಂದುಬಿಡುವುದೋ ಎಂದು ಈಗಲೇ ನಾನು ಭಯಪಡುತ್ತಿದ್ದೇನೆ. ನಾನಾಗಲೀ ; ನಿನ್ನ ತಂದೆಯಾಗಲೀ – ಯಾಚಕನಾಗಿ ಬಂದ ಬ್ರಾಹ್ಮಣನಿಗೆ ಇದುವರೆಗೂ 'ಇಲ್ಲ' ಎಂದು ಹೇಳಿರುವುದಿಲ್ಲ. ಮಗು! ನಾವು ಇನ್ನೊಬ್ಬರಿಗೆ ಆಶ್ರಯಕೊಡತಕ್ಕವರು. ಇನ್ನೊಬ್ಬರ ಆಶ್ರಯದಿಂದ ಜೀವಿಸತಕ್ಕವರಲ್ಲ. ನಿನ್ನ ಹೇಡಿತನದ ಕಾರಣದಿಂದಾಗಿ ನಾನೇನಾದರೂ ಅನ್ಯರ ಆಶ್ರಯವನ್ನು ಪಡೆದು ಜೀವಿಸಬೇಕಾದ ಕಾಲವು ಬಂದುಬಿಟ್ಟರೆ ನಾನು ಖಂಡಿತವಾಗಿಯೂ ಜೀವಿಸಿರುವುದಿಲ್ಲ. ಒಡನೆಯೇ ಪ್ರಾಣಬಿಡುತ್ತೇನೆ.

ಮಗು! ನಾನು ಹೇಳುತ್ತಿರುವ ಮಾತುಗಳನ್ನು ನಿರ್ಲಕ್ಷಿಸಬೇಡ.

**ಅಪಾರೇ ಭವ ನಃ ಪಾರಮಪ್ಲವೇ ಭವ ನ ಪ್ಲವಃ ।**
**ಕುರುಷ್ವ ಸ್ಥಾನಮಸ್ಥಾನೇ ಮೃತಾನ್ಸಂಜೀವಯಸ್ವ ನಃ ॥೨೦॥**

ನಾವಿಂದು ತೀರವೇ ಇಲ್ಲದಂತಿರುವ ದುಃಖಸಮುದ್ರದಲ್ಲಿ ಮುಳುಗಿಬಿಟ್ಟಿದ್ದೇವೆ. ಅಂತಹ ನಮಗೆ ನೀನಿಂದು ತೀರಪ್ರಾಯನಾಗು. ದುಃಖಸಮುದ್ರದಲ್ಲಿ ಬಿದ್ದು ತೊಳಲುತ್ತಿದ್ದೇವೆ. ಹೊರಬರಲು ನಮಗೆ ನೌಕೆಯೇ ಕಾಣುತ್ತಿಲ್ಲ. ಈ ಸಮಯದಲ್ಲಿ ನೀನು ನಮಗೆ ನೌಕೆಯಾಗು. ನಿನ್ನ ನಿರುತ್ಸಾಹದಿಂದಾಗಿ ನಮಗಿರುವ ಸ್ಥಾನ-ಮಾನಗಳೆಲ್ಲವೂ ಕಳಚಿ ಕೆಳಗೆ ಬೀಳುವುದರಲ್ಲಿದೆ. ನಮಗೊಂದು ಸ್ಥಾನವನ್ನು ಕಲ್ಪಿಸಿಕೊಡು. ನಾವೀಗ ನಿಶ್ಚಯವಾಗಿಯೂ ಮೃತಪ್ರಾಯರಾಗಿದ್ದೇವೆ. ನಮ್ಮನ್ನು ಬದುಕಿಸು. ಮಗು! ನೀನು ಜೀವನದ ಹಂಗನ್ನು ತೊರೆದು ಹೋರಾಡಿದ ಪಕ್ಷದಲ್ಲಿ ಎಲ್ಲ ಶತ್ರುಗಳನ್ನೂ ಪರಾಜಯಗೊಳಿಸಬಹುದು. ಹಾಗಿಲ್ಲದೇ ವಿಷಾದ ಗ್ರಸ್ತನಾಗಿ ನಿರುತ್ಸಾಹಿಯಾಗಿ ಈ ವಿಧವಾದ ನಪುಂಸಕವೃತ್ತಿಯನ್ನೇ ಅವ

ಲಂಬಿಸುವೆಯಾದರೆ ಈ ವಿಧವಾದ ಪಾಪಜೀವನವನ್ನು ಈಗಲೇ ತೊರೆದುಬಿಡು. (ಈ ಪಾಪಜೀವಿಕೆಯಲ್ಲಿ ಯಾವ ಪ್ರಯೋಜನವೂ ಇಲ್ಲ ; ಇದಕ್ಕಿಂತಲೂ ಮರಣವೇ ಲೇಸು.) ಸಂಜಯ! ಒಬ್ಬ ಶತ್ರುವನ್ನು ಸಂಹರಿಸಿದರೂ ಶೂರನಾದವನು ವಿಖ್ಯಾತಿಯನ್ನು ಹೊಂದುತ್ತಾನೆ. ಇಂದ್ರನು ವೃತ್ರನೊಬ್ಬನ ವಧೆಮಾಡಿ ಮಹೇಂದ್ರನೆಂದು ಪ್ರಸಿದ್ಧನಾದನು. ಅದರಿಂದಾಗಿ ಅವನಿಗೆ ವೈಜಯಂತವೆಂಬ ಅರಮನೆಯೂ ಸಿಕ್ಕಿತು ; ಅವನು ಮೂರು ಲೋಕಗಳಿಗೂ ಈಶ್ವರನೂ ಆದನು.

ವೀರಪುರುಷನು ಕವಚವನ್ನೂ, ಧನುರ್ಬಾಣಗಳನ್ನೂ, ಕತ್ತಿ-ಗುರಾಣಿ ಗಳನ್ನೂ ಧರಿಸಿ ನಿರ್ಭಯನಾಗಿ ರಣಾಂಗಣಕ್ಕೆ ಹೋಗಬೇಕು. ಇಂತಹವನ ಪುತ್ರ, ಇಂತಹವನು ಯುದ್ಧಕ್ಕೆ ಬಂದಿದ್ದೇನೆಂದು ಶತ್ರುಗಳಿಗೆ ತಿಳಿಯಪಡಿಸಿ ಕವಚಧಾರಿಗಳಾದ ಶತ್ರುಗಳನ್ನು ಯುದ್ಧಕ್ಕೆ ಆಹ್ವಾನಿಸಬೇಕು. ಎದುರಾಗಿ ಬರುವ ಸೇನೆಯ ಅಗ್ರಭಾಗವನ್ನು ನಿಶಿತವಾದ ಶಸ್ತ್ರಾಸ್ತ್ರಗಳ ಪ್ರಯೋಗದಿಂದ ಕ್ಷಣಮಾತ್ರದಲ್ಲಿ ಚೆದುರಿಸಿಬಿಡಬೇಕು ಅಥವಾ ಶತ್ರುಪಕ್ಷದಲ್ಲಿರುವ ಶ್ರೇಷ್ಠ ಪುರುಷನೊಬ್ಬನನ್ನು ಸಂಹರಿಸಬೇಕು. ಯಾವಾಗ ವೀರನಾದವನು ಉತ್ತಮವಾಗಿ ಯುದ್ಧಮಾಡಿ ತನ್ಮೂಲಕವಾಗಿ ಮಹತ್ತರವಾದ ಯಶಸ್ಸನ್ನು ಸಂಪಾದಿಸುತ್ತಾನೆಯೋ– ಆಗ ಶತ್ರುಗಳೂ ದುಃಖಿತರಾಗುತ್ತಾರೆ ಮತ್ತು ಆ ವೀರನ ಮುಂದೆ ತಮ್ಮ ತಲೆಯನ್ನೂ ತಗ್ಗಿಸಿ ನಿಲ್ಲುತ್ತಾರೆ. ಪ್ರಾಣದ ಹಂಗನ್ನು ತೊರೆದು ರಣರಂಗದಲ್ಲಿ ಯುದ್ಧಮಾಡುವ, ದಕ್ಷನಾದ ಮತ್ತು ಶೂರನಾದ ರಾಜಕುಮಾರನನ್ನು ಜಿತೇಂದ್ರಿಯರಲ್ಲದ ಹೇಡಿಗಳಾದ ಜನರು ಸರ್ವಕಾಮಸಮೃದ್ಧಿಗಳಿಂದಲೂ ತೃಪ್ತಿಪಡಿಸುತ್ತಾರೆ.

ರಾಜ್ಯವನ್ನು ಪುನಃ ಪಡೆದುಕೊಳ್ಳಲು ಸಾಧ್ಯವಾಗದಷ್ಟು ನಿಸ್ಸತ್ತ್ವನಾಗಿ ಅಸಹಾಯನಾಗಿರಬಹುದು ; ಮುಂದಿನ ಘಳಿಗೆಯಲ್ಲಿಯೇ ಪ್ರಾಣವುಳಿಯ ದೆಂಬ ಸಂಶಯವೂ ಉಂಟಾಗಬಹುದು. ಅಂತಹ ಸಂದರ್ಭದಲ್ಲಿಯೂ ವೀರಶ್ರೇಷ್ಠನೆನಿಸಿಕೊಂಡಿರುವವನು ತನ್ನ ಕೈಗೆ ಸಿಕ್ಕಿದ ಶತ್ರುವನ್ನು ನಿಃಶೇಷ ಮಾಡದೇ ಬಿಡಲಾರನು. (ಯುದ್ಧಮಾಡದಿದ್ದರೆ ರಾಜ್ಯವೂ ಹೋಗ

ಬಹುದು ; ಪ್ರಾಣವೂ ಹೋಗಬಹುದು. ಏಕೆಂದರೆ : ರಾಜನೀತಿ ವಿಶಾರದರು ಕೈಗೆ ಸಿಕ್ಕಿದ ಶತ್ರುವನ್ನು ಉಳಿಸುವುದಿಲ್ಲ.)

**ಸ್ವರ್ಗದ್ವಾರೋಪಮಂ ರಾಜ್ಯಮಥವಾಪ್ಯಮೃತೋಪಮಮ್ ।**
**ಯುದ್ಧಮೇಕಾಯನಂ ಮತ್ವಾ ಪತೋಲ್ಮುಕ ಇವಾರಿಷು ॥೨೯॥**

ಯುದ್ಧವು ಸ್ವರ್ಗದ್ವಾರಸದೃಶವಾದುದು. (ಸ್ವರ್ಗಪ್ರಾಪಕವಾದುದು). ಅಮೃತರೂಪವಾದ ರಾಜ್ಯದಾಯಕವಾದುದು. ಸ್ವರ್ಗಪ್ರಾಪ್ತಿಗೆ ಮತ್ತು ಅಮೃತರೂಪವಾದ ರಾಜ್ಯಪ್ರಾಪ್ತಿಗಿರುವ ಒಂದೇ ಒಂದು ಹಾದಿಯೆಂದರೆ ಯುದ್ಧವೇ ಸರಿ. ಈ ವಿಷಯವನ್ನು ಮನನಮಾಡಿಕೊಂಡು ಧಗ-ಧಗಿ ಸುತ್ತಿರುವ ಕೊಳ್ಳಿಯಂತೆ ಶತ್ರುಗಳ ಮೇಲೆ ಬೀಳು.

ಸಂಜಯ! ಯುದ್ಧದಲ್ಲಿ ಶತ್ರುಗಳನ್ನು ಸಂಹರಿಸು ಮತ್ತು ಕ್ಷತ್ರಿಯ ಧರ್ಮವನ್ನು ಪರಿಪಾಲನೆಮಾಡು. ಶತ್ರುಗಳಿಗೆ ಭಯವನ್ನುಂಟುಮಾಡತಕ್ಕ ಸಾಮರ್ಥ್ಯವುಳ್ಳ ನೀನಿಂದು ಅತ್ಯಂತಕೃಪಣನಾಗಿ, ದೀನನಾಗಿ ಮಲಗಿರುವುದನ್ನು ನಾನು ನೋಡಲಾರೆನು. ನಾವುಗಳು ನಿನ್ನ ಅವಸ್ಥೆಯನ್ನು ನೋಡಿ ಶೋಕಿಸುತ್ತಾ ನಿನ್ನ ಸುತ್ತಲೂ ಕುಳಿತಿದ್ದೇವೆ. ಶತ್ರುಗಳಾದರೋ ನಿನ್ನ ಸ್ಥಿತಿಯನ್ನರಿತು ಆನಂದತುಂದಿಲರಾಗಿ ಕುಣಿದಾಡುತ್ತಿದ್ದಾರೆ. ನೀನಾದರೋ ನಾನಿಷ್ಟು ಹೇಳಿದರೂ ದೀನರಲ್ಲಿಯೂ ದೀನನಂತೆ ಮಂಕಾಗಿ ಕುಳಿತಿರುವೆ. ಇಂತಹ ನಿನ್ನನ್ನು ನಾನು ಖಂಡಿತವಾಗಿಯೂ ನೋಡಲಾರೆನು.

ಸೌವೀರದೇಶದ ಕನ್ಯೆಯರೊಡನೆ (ನಿನ್ನ ಪತ್ನಿಯರೊಡನೆ) ಸಂತೋಷದಿಂದಿರು. ಹಿಂದಿನಂತೆಯೇ ಅಪಾರಸಂಪತ್ಸಮೃದ್ಧಿಯನ್ನು ಪಡೆದು ಅವರಿಂದ ಶ್ಲಾಘಿತನಾಗು. ವಿಪತ್ತಿಗೊಳಗಾಗಿ ಸಿಂಧುದೇಶದ (ಶತ್ರುದೇಶದ) ಕನ್ಯೆಯರಿಗೆ ವಶನಾಗಬೇಡ. ನೀನಿನ್ನೂ ಯುವಕನಾಗಿರುವೆ ; ರೂಪಸಂಪನ್ನನಾಗಿರುವೆ ; ವಿದ್ಯಾವಂತನಾಗಿರುವೆ ; ಸತ್ಕುಲಪ್ರಸೂತನಾಗಿರುವೆ ; ಯಶೋವಂತನಾಗಿರುವೆ ; ಲೋಕವಿಖ್ಯಾತನಾಗಿರುವೆ. ಇಂತಹ ನೀನು ಪರಾಕ್ರಮವನ್ನು ತೋರಿಸಬೇಕಾಗಿರುವ ಸಮಯದಲ್ಲಿ ಹೇಡಿಯಂತೆ ಕುಳಿತಿರುವೆ. ಕರ್ತವ್ಯಭ್ರಷ್ಟನಾಗಿ ಕುಳಿತಿರುವೆ. ಭಾರವನ್ನು ಎಳೆಯಬೇಕಾದ ಸಮಯದಲ್ಲಿ ಪಳಗದ ಎತ್ತು ನೊಗದಿಂದ ನುಣುಚಿ

ಕೊಳ್ಳುವಂತೆ – ನೀನು ನಿನ್ನ ಕರ್ತವ್ಯದಿಂದ ವಿಮುಖನಾಗಿರುವೆ. ಇದು ನಿನ್ನ ಮರಣವೆಂದೇ ನಾನು ಭಾವಿಸಿದ್ದೇನೆ. ಮುಂದೆ ನೀನು ಜೀವನವನ್ನು ಹೊರೆಯಬೇಕಾದರೆ ಇತರರನ್ನು ಹೊಗಳಿಕೊಂಡು ಅವರ ಸೌಜನ್ಯದಿಂದ ಬದುಕಬೇಕಾಗುವುದು. ನೀನು ಇತರರನ್ನು ಹೊಗಳಿಕೊಂಡು ತಿರುಗುವುದನ್ನೂ, ಶತ್ರುಗಳ ಶುಶ್ರೂಷೆಮಾಡುವುದನ್ನೂ ಮತ್ತು ಕೃಪೆತೋರುವವರ ಹಿಂದೆ-ಹಿಂದೆ ಹೋಗುವುದನ್ನೂ ನೋಡುವ ನನ್ನ ಹೃದಯಕ್ಕೆ ಶಾಂತಿಯು ಹೇಗೆತಾನೇ ಉಂಟಾಗುತ್ತದೆ? (ಇನ್ನೊಬ್ಬರ ಅನುಚರನಾಗಿ ಅವರ ಸೇವೆಮಾಡಿಕೊಂಡು ಜೀವಿಸಿರುವವನು ನಮ್ಮ ವಂಶದಲ್ಲಿಯೇ ಇದುವರೆಗೂ ಹುಟ್ಟಿಲ್ಲ. ಹೀಗಿರುವಾಗ ನೀನು ಪರೋಪಜೀವಿಯಾಗುವುದು ಉಚಿತವಲ್ಲ.) ಸ್ವಯಂ ಪ್ರಜಾಪತಿಯೇ ಸೃಷ್ಟಿಸಿರುವ, ಸರ್ವಕಾಲದಲ್ಲಿಯೂ ಶಾಶ್ವತವಾಗಿ ಉಳಿಯತಕ್ಕುದಾದ–ನಮ್ಮ ವಂಶಜರಾದ ಪ್ರಾಚೀನರಿಂದಲೂ ಮತ್ತು ಅತಿ ಪ್ರಾಚೀನರಿಂದಲೂ–ಅನ್ಯ ವಂಶಜರಿಂದಲೂ–ವೃದ್ಧರಿಂದಲೂ ಹೇಳಲ್ಪಟ್ಟಿರುವ ಶಾಶ್ವತವಾದ, ವ್ಯಯ ರಹಿತವಾದ, ಸನಾತನವಾದ ಕ್ಷತ್ರಹೃದಯವನ್ನು ನಾನು ತಿಳಿದವಳಾಗಿದ್ದೇನೆ.

**ಯೋ ವೈ ಕಶ್ಚಿದಿಹಾಜಾತಃ ಕ್ಷತ್ರಿಯಃ ಕ್ಷತ್ರಕರ್ಮವಿತ್ ।**
**ಭಯಾದ್ವೃತ್ತಿಸಮೀಕ್ಷೋ ವಾ ನ ನಮೇದಿಹ ಕಸ್ಯಚಿತ್ ॥೩೮॥**

ಈ ಪ್ರಪಂಚದಲ್ಲಿ ಸತ್ಕುಲಪ್ರಸೂತನಾದ ಕ್ಷತ್ರಧರ್ಮವನ್ನು ತಿಳಿದಿರುವ ಕ್ಷತ್ರಿಯನೊಬ್ಬನು ಭಯದಿಂದಾಗಲೀ, ಜೀವಿಕೆಗಾಗಲೀ, ಬೇರೊಬ್ಬನ ಮುಂದೆ ನತಶಿರನಾಗಿ ನಿಲ್ಲಬಾರದು.

**ಉದ್ಯಚ್ಛೇದೇವ ನ ನಮೇದುದ್ಯಮೋ ಹ್ಯೇವ ಪೌರುಷಮ್ ।**
**ಅಪ್ಯಪರ್ವಣಿ ಭಜ್ಯೇತ ನ ನಮೇತೇಹ ಕಸ್ಯಚಿತ್ ॥೩೯॥**

ವಿಜಯಕ್ಕಾಗಿ ಪ್ರಯತ್ನಿಸುತ್ತಲೇ ಇರಬೇಕು. ಎಂದಿಗೂ ಶರಣಾಗತನಾಗಬಾರದು. ಸರ್ವಕಾಲದಲ್ಲಿಯೂ ವಿಜಯದ ಸಿದ್ಧಿಗಾಗಿ ಪ್ರಯತ್ನಿಸುವುದೇ ಅಥವಾ ವಿಜಯದ ಸಿದ್ಧಿಗಾಗಿ ಮಾಡುವ ಉದ್ಯೋಗವೇ ಪೌರುಷ. ವೀರನಾದವನು ಅಕಾಲದಲ್ಲಿ ಸತ್ತುಹೋಗಬಹುದು. ಆದರೆ ಶತ್ರುವಿನ ಮುಂದೆ ತಲೆಯನ್ನು ಮಾತ್ರ ಯಾವಾಗಲೂ ತಗ್ಗಿಸಬಾರದು. (ಕಬ್ಬಿಗೆ ಪರ್ವಗಳು

ಅಥವಾ ಗಿಣ್ಣುಗಳಿರುತ್ತವೆ. ಕಬ್ಬಿನ ಜಲ್ಲೆಯು ಸಾಮಾನ್ಯವಾಗಿ ಬಗ್ಗಿರುವುದಿಲ್ಲ. ನೇರವಾಗಿಯೇ ಇರುತ್ತದೆ. ಬಲಾತ್ಕಾರವಾಗಿ ಬಗ್ಗಿಸಲು ಹೋದರೆ ಗಿಣ್ಣಿಗೆ ಸರಿಯಾಗಿ ಮುರಿದುಹೋಗುತ್ತದೆ. ಆದರೆ ಜಲ್ಲೆಯು ಬಗ್ಗಿಕೊಂಡು ಮಾತ್ರ ಇರುವುದಿಲ್ಲ. ಹಾಗೆಯೇ ವೀರಕ್ಷತ್ರಿಯನನ್ನು ಬಗ್ಗಿಸಲು ಹೋದರೆ ಆತನು ಮೂಳೆಗಳನ್ನು ಮುರಿದುಕೊಂಡು ಪ್ರಾಣವನ್ನಾದರೂ ಬಿಡುವನೇ ಹೊರತು ಶತ್ರುವಿನ ಮುಂದೆ ಕ್ಷಣಮಾತ್ರವಾದರೂ ಬಗ್ಗಿ ನಿಲ್ಲುವುದಿಲ್ಲ.)

**ಮಾತಙ್ಗೋ ಮತ್ತ ಇವ ಚ ಪರೀಯಾತ್ಸುಮಹಾಮನಾಃ ।**
**ಬ್ರಾಹ್ಮಣೇಭ್ಯೋ ನಮೇನ್ನಿತ್ಯಂ ಧರ್ಮಾಯೈವ ಚ ಸಂಜಯ ॥೪೦॥**

ಸಂಜಯ! ಮಹಾಮನಸ್ವಿಯಾದ ಕ್ಷತ್ರಿಯನು ಮದಿಸಿದ ಆನೆಯಂತೆ ಸರ್ವತ್ರ ಭಯರಹಿತನಾಗಿ ಸಂಚರಿಸಬೇಕು. ಬ್ರಾಹ್ಮಣರಿಗೂ ಮತ್ತು ಧರ್ಮಕ್ಕೂ ಪ್ರತಿನಿತ್ಯವೂ ನಮಸ್ಕರಿಸಬೇಕು. (ಬೇರಾರಿಗೂ ಕ್ಷತ್ರಿಯನು ತಲೆತಗ್ಗಿಸಬಾರದು.)

**ನಿಯಚ್ಛನ್ನಿತರಾನ್ವರ್ಣಾನ್ವಿನಿಘ್ನನ್ಸರ್ವದುಷ್ಕೃತಃ ।**
**ಸಸಹಾಯೋಽಸಹಾಯೋ ವಾ ಯಾವಜ್ಜೀವಂ ತಥಾ ಭವೇತ್ ॥**

ಮತ್ತೊಬ್ಬರ ಸಹಾಯವಿರಲಿ ; ಇಲ್ಲದಿರಲಿ–ರಾಜನಾದವನು ಜೀವನಪರ್ಯಂತವಾಗಿ ನಾಲ್ಕು ವರ್ಣಗಳವರನ್ನೂ ಅವರವರ ವರ್ಣಾಶ್ರಮಧರ್ಮಗಳಲ್ಲಿ ನಿರತರಾಗಿರುವಂತೆ ನಿಯಂತ್ರಿಸುತ್ತಾ ಪಾಪಿಗಳನ್ನು ದಂಡಿಸುತ್ತಾ ರಾಜ್ಯವನ್ನು ಪರಿಪಾಲಿಸಬೇಕು.”

ನಿ೩೪ನೆಯ ಅಧ್ಯಾಯವು ಮುಗಿಯಿತು.



## ವಿದುಲಾ–ಸಂಜಯರ ಸಂವಾದ : ವಿದುಲೆಯು ಕಾರ್ಯಸಿದ್ಧಿಯ ಮತ್ತು ಶತ್ರುನಿರ್ಮೂಲನದ ಉಪಾಯವನ್ನು ಸಂಜಯನಿಗೆ ಹೇಳಿದುದು

ವಿದುಲೆಯು ಸುದೀರ್ಘವಾಗಿ ಉಪನ್ಯಾಸಮಾಡಿದನಂತರ ಸಂಜಯನು ಮತ್ತೊಮ್ಮೆ ಬಾಯ್ದೆರೆದನು :

**ಕೃಷ್ಣಾಯಸಸ್ಯೇವ ಚ ತೇ ಸಂಹತ್ಯ ಹೃದಯಂ ಕೃತಮ್ ।**
**ಮಮ ಮಾತಸ್ತ್ವಕರುಣೇ ವೀರಪ್ರಜ್ಞೇ ಹ್ಯಮರ್ಷಣೇ ॥೧॥**

“ಅಮ್ಮ! ನಿನ್ನ ಹೃದಯವು ಕಬ್ಬಿಣದ ಗುಂಡಿನಂತೆ ಅತಿದೃಢವಾಗಿ ಮಾಡಿದ್ದಾಗಿರಬೇಕು. ನನಗೆ ಸಾಕ್ಷಾತ್ ತಾಯಿಯಾಗಿದ್ದುಕೊಂಡು ನೀನಿಷ್ಟು ನಿಷ್ಕರುಣೆಯಾಗಿರುವೆ. ನಿನ್ನ ಬುದ್ಧಿಯು ವೀರರ ಬುದ್ಧಿಗೆ ಸಮಾನವಾಗಿದೆ. ಮೇಲಾಗಿ ನೀನು ಬಹಳ ಕುಪಿತಳಾಗಿರುವೆ. ನಿಶ್ಚಯವಾಗಿಯೂ ಈ ಕ್ಷಾತ್ರ ಧರ್ಮದ ಆಚಾರ-ವಿಚಾರಗಳು ಎಷ್ಟು ಆಶ್ಚರ್ಯಕರವಾಗಿರುವುವಮ್ಮಾ! ನಾನು ನಿನ್ನ ಮಗನೆಂಬುದನ್ನೇ ನೀನು ಪರಿಗಣಿಸುತ್ತಿಲ್ಲ. ಸಂಬಂಧವೇ ಇಲ್ಲದ ಒಬ್ಬ ಯುವಕನನ್ನು ಯುದ್ಧಕ್ಕೆ ನಿಯೋಜಿಸುವಂತೆ ನನ್ನನ್ನು ಯುದ್ಧಕ್ಕೆ ನಿಯೋಜಿಸುತ್ತಿರುವೆ. ನೀನಾಡುತ್ತಿರುವ ಮಾತುಗಳನ್ನು ಕೇಳುತ್ತಿದ್ದರೆ ನೀನು ನನ್ನ ತಾಯಿಯೋ ಅಥವಾ ಬೇರೊಬ್ಬರ ತಾಯಿಯೋ ಎಂಬ ಸಂದೇಹವೂ ಉಂಟಾಗುತ್ತದೆ. ಮೇಲಾಗಿ ನೀನು ಏಕಮಾತ್ರಪುತ್ರಳು. ಹೀಗಿದ್ದರೂ ನನ್ನನ್ನು ಯುದ್ಧಕ್ಕೆ ಹೋಗುವಂತೆ ಪೀಡಿಸುತ್ತಿರುವೆ. ನನ್ನನ್ನು ಕಾಣದ ನಿನಗೆ ಈ ಅಖಂಡವಾದ ಪೃಥ್ವಿಯಿಂದಾದರೂ ಪ್ರಯೋಜನವೇನಿದೆ? ನಿನ್ನ ಪುತ್ರನು ಅದರಲ್ಲಿಯೂ ಏಕಮಾತ್ರ ಪ್ರಿಯಪುತ್ರನು ಯುದ್ಧದಲ್ಲಿ ಹತನಾದನಂತರ ನಿನಗೆ ಆಭರಣಗಳಿಂದಾಗಲೀ, ಭೋಗಸಾಮಗ್ರಿಗಳಿಂದಾಗಲೀ, ಮಿಗಿಲಾಗಿ ಜೀವಿತದಿಂದಾಗಲೀ – ಪ್ರಯೋಜನವೇನಿದೆಯಮ್ಮಾ?”

“ಸಂಜಯ! ನೀನು ಹೇಳುವುದು ನಿಜ. ನೀನಿಲ್ಲದಿದ್ದರೆ ನನಗೇನೂ ಬೇಕಾಗುವುದಿಲ್ಲ. ಜೀವಿತವೂ ಬೇಕಾಗುವುದಿಲ್ಲ. ಆದರೂ ನಾವು ಕ್ಷತ್ರಿಯೋಚಿತವಾದ ಧರ್ಮಾನುಸಾರವಾಗಿ ನಡೆದುಕೊಳ್ಳುವಾಗ ನಮ್ಮ ಪರಿಣಾಮವು ಏನಾದೀತೆಂಬುದನ್ನು ಗಮನಿಸಬಾರದು. ಧರ್ಮಾರ್ಥಗಳಿಗೆ ಅನುಸಾರವಾಗಿ ನಡೆದುಕೊಳ್ಳಬೇಕು.

**ಸರ್ವಾವಸ್ಥಾ ಹಿ ವಿದುಷಾಂ ತಾತ ಧರ್ಮಾರ್ಥಕಾರಣಾತ್ ।**
**ತಾವೇವಾಭಿಸಮೀಕ್ಷ್ಯಾಹಂ ಸಂಜಯ ತ್ವಾಮಚೂಚುದಮ್ ॥೩॥**

ವಿದ್ವಾಂಸರಾದವರಿಗೆ ಸರ್ವಾವಸ್ಥೆಗಳೂ ಧರ್ಮಾರ್ಥಗಳ ನಿಮಿತ್ತ ವಾಗಿಯೇ ಇರುತ್ತವೆ. ಧರ್ಮ ಮತ್ತು ಅರ್ಥಗಳ ವಿಷಯವನ್ನೇ ನಾನು ಕೂಲಂಕಷವಾಗಿ ಪರಿಶೀಲಿಸಿ ನೀನೀ ಸಮಯದಲ್ಲಿ ಯುದ್ಧಮಾಡುವುದೇ ಶ್ರೇಯಸ್ಕರವೆಂದೂ ಮತ್ತು ಅದೇ ಧರ್ಮಾರ್ಥಗಳ ಸಾಧಕವೆಂದೂ ನಿಶ್ಚಯಿಸಿ ನಿನ್ನನ್ನು ಯುದ್ಧಕ್ಕೆ ಹೋಗಲು ಪ್ರಚೋದಿಸುತ್ತಿದ್ದೇನೆ.

ನೀನು ನಿನ್ನ ದರ್ಶನೀಯಪರಾಕ್ರಮವನ್ನು ತೋರಿಸುವ ಮತ್ತು ಅಂತಹ ನಿನ್ನ ಪರಾಕ್ರಮವನ್ನು ನಾನು ನೋಡುವ ಅತಿಮುಖ್ಯವಾದ ಕಾಲವೀಗ ಸನ್ನಿಹಿತವಾಗಿದೆ. ಇಂತಹ ಸಮಯವು ಪ್ರಾಪ್ತವಾಗಿರುವಾಗಲೂ ನೀನೇನಾದರೂ ಕಾರ್ಯವಿಮುಖನಾಗಿ ಯುದ್ಧಕ್ಕೆ ಹೋಗದಿದ್ದರೆ, ಅಸ್ವಾಭಾವಿಕವಾದ ಬುದ್ಧಿಯನ್ನು ಹೊಂದಿ ಕುಳಿತಿರುವ ನೀನು ಶತ್ರುವಿನ ವಿಷಯದಲ್ಲಿ ಕ್ರೌರ್ಯದಿಂದ ವರ್ತಿಸದಿದ್ದರೆ – ನಿನಗೆ ಸರ್ವತ್ರ ಅಪಯಶಸ್ಸು ಉಂಟಾಗುತ್ತದೆ. ಇಂತಹ ಪರಿಸ್ಥಿತಿಯಲ್ಲಿ ನಾನೇನಾದರೂ ನಿನಗೆ ಸರಿಯಾದ ತಿಳಿವಳಿಕೆಯನ್ನು ಕೊಡದಿದ್ದರೆ, ಧರ್ಮಾರ್ಥಪ್ರಾಪಕವಾದ ಸಲಹೆಯನ್ನು ಕೊಡದಿದ್ದರೆ–ನಾನು ನಿನ್ನ ಮೇಲಿಟ್ಟಿರುವ ವಾತ್ಸಲ್ಯವನ್ನು ಗಾರ್ದಭಿಯ ವಾತ್ಸಲ್ಯವೆನ್ನುತ್ತಾರೆ. ಹೆಣ್ಣುಕತ್ತೆಯ ವಾತ್ಸಲ್ಯದಂತೆ ನನ್ನ ವಾತ್ಸಲ್ಯವೂ ಸಾಮರ್ಥ್ಯರಹಿತವೂ ಅಕಾರಣವೂ ಆಗುತ್ತದೆ. ಅಂತಹ ವಾತ್ಸಲ್ಯದಿಂದ ಯಾವ ಪ್ರಯೋಜನವೂ ಇಲ್ಲ. ಆದುದರಿಂದ ನೀನು ಕಾರ್ಯಪ್ರವೃತ್ತನಾಗುವವರೆಗೂ ನಾನು ಸಲಹೆ ಕೊಡುವುದನ್ನು ನಿಲ್ಲಿಸುವುದಿಲ್ಲ. ಮೂರ್ಖರಿಂದ ಸೇವಿಸಲ್ಪಡುವ ಮತ್ತು ಸತ್ಪುರುಷರಿಂದ ನಿಂದಿಸಲ್ಪಡುವ ಮಾರ್ಗವನ್ನು ಪರಿತ್ಯಜಿಸು.

**ಅವಿದ್ಯಾ ವೈ ಮಹತ್ಯಸ್ತಿ ಯಾಮಿಮಾಂ ಸಂಶ್ರಿತಾಃ ಪ್ರಜಾಃ ।**
**ತವ ಸ್ಯಾದ್ಯದಿ ಸದ್ವೃತ್ತಂ ತೇನ ಮೇ ತ್ವಂ ಪ್ರಿಯೋ ಭವೇಃ ॥೯॥**

ಅವಿದ್ಯೆಯೆಂಬುದು ಮಹತ್ತರವಾಗಿದೆ. ಈ ಅವಿದ್ಯೆಯನ್ನೇ ಪ್ರಜೆಗಳೂ ಆಶ್ರಯಿಸಿದ್ದಾರೆ. ನಿನ್ನಲ್ಲೇನಾದರೂ ಸದ್ವೃತ್ತಿಯಿರುವುದಾದರೆ, ಸದ್ವಿದ್ಯೆಯಿರುವುದಾದರೆ ಮಾತ್ರವೇ ನೀನು ನನಗೆ ಪ್ರಿಯನಾಗುವೆ.

(ದೇಹದಲ್ಲಿ ಆತ್ಮಭಾವವಿರುವುದೇ ಅವಿದ್ಯೆ. ದೇಹವೇ ನಾನೆಂದು ಭಾವಿಸಿ ಬಿಡಬಾರದು. ದೇಹಾಭಿಮಾನವನ್ನು ತೊರೆದು ಆತ್ಮೋನ್ನತಿಗಾಗಿ ಯುದ್ಧ ಮಾಡಬೇಕು. ದೇಹಾಭಿಮಾನದಿಂದ ಧರ್ಮಾರ್ಥಯುಕ್ತವಾದ ಯುದ್ಧವನ್ನು ಮಾಡದಿದ್ದರೆ ಪಾಪದ ಸಂಘಟನೆಯಾಗುತ್ತದೆ. ಆದುದರಿಂದ ದೇಹವು 'ನಾನಲ್ಲ' ಎಂಬುದನ್ನು ಮನಗಂಡು ಯುದ್ಧಮಾಡಿ ಶತ್ರುಗಳನ್ನು ನಿಗ್ರಹಿಸಬೇಕು. ಸಾಮಾನ್ಯಪ್ರಜೆಗಳಿಗೆ ದೇಹಾತ್ಮಬುದ್ಧಿಯಿದ್ದೇ ಇರುತ್ತದೆ. ದೇಹಾತ್ಮಬುದ್ಧಿಯನ್ನಿಟ್ಟುಕೊಳ್ಳದೇ ಆತ್ಮೋನ್ನತಿಗಾಗಿ ಕಾರ್ಯಮಾಡುವುದೇ ಸದ್ವೃತ್ತಿ. ಅಂತಹ ಸದ್ವೃತ್ತಿಯವನು ನೀನಾದರೆ ನಾನು ನಿನ್ನನ್ನು ಪ್ರೀತಿಸುತ್ತೇನೆ.)

**ಧರ್ಮಾರ್ಥಗುಣಯುಕ್ತೇನ ನೇತರೇಣ ಕಥಂಚನ ।**
**ದೈವಮಾನುಷಯುಕ್ತೇನ ಸದ್ಭಿರಾಚರಿತೇನ ಚ ॥೧೦॥**

ನೀನು ಧರ್ಮಾರ್ಥಗುಣಯುಕ್ತನಾಗುವ ಪಕ್ಷದಲ್ಲಿ (ಧರ್ಮಾರ್ಥಗಳ ಸಾಧಕನಾದ ಪಕ್ಷದಲ್ಲಿ), ದೈವದ ಕೃಪೆಯಿಂದ ಮತ್ತು ಮಾನುಷಪ್ರಯತ್ನದಿಂದ ಯುಕ್ತವಾದ ಕಾರ್ಯವನ್ನು ಮಾಡುವುದಾದ ಪಕ್ಷದಲ್ಲಿ, ಸತ್ಪುರುಷರಿಂದ ಆಚರಿಸಲ್ಪಟ್ಟಿರುವುದನ್ನು ಆಚರಿಸುವುದಾದ ಪಕ್ಷದಲ್ಲಿ – ನೀನು ನನಗೆ ಪ್ರಿಯನಾಗುತ್ತೀಯೆ. ಬೇರೆ ಯಾವ ಕಾರ್ಯಮಾಡಿದರೂ ನೀನು ನನಗೆ ಪ್ರಿಯನಾಗುವುದಿಲ್ಲ."*

---

* (ಒಂದು ಕಾರ್ಯಕ್ಕೆ ದೈವಬಲವೂ ಬೇಕು. ಮನುಷ್ಯಪ್ರಯತ್ನವೂ ಬೇಕು. ಮನುಷ್ಯಪ್ರಯತ್ನವೊಂದರಿಂದಲೇ ಎಲ್ಲವೂ ಸಾಧ್ಯವಾಗುವುದಿಲ್ಲ. ದೈವಕ್ಕೆ ಮನುಷ್ಯಪ್ರಯತ್ನವೇ ಇಲ್ಲದೇ ಅನುಗ್ರಹಮಾಡುವ ಸಾಧ್ಯತೆಯಿದ್ದರೂ ನಿಮಿತ್ತಮಾತ್ರದ ಮನುಷ್ಯಪ್ರಯತ್ನವಾದರೂ ಆಗಲೇಬೇಕಾಗುತ್ತದೆ. ಪ್ರಯತ್ನಮಾಡಲು ಪ್ರೇರಿಸುವವನೂ ಅವನೇ, ಫಲಕೊಡುವವನೂ ಅವನೇ–ಎಂಬುದೂ ಕೆಲವರ ನಂಬಿಕೆ. ಆದರೆ ಪ್ರಕೃತ ಸಂದರ್ಭದಲ್ಲಿ ಮನುಷ್ಯಪ್ರಯತ್ನಕ್ಕೆ ದೈವಬಲವು ಬೇಕೆಂಬ ಅಭಿಪ್ರಾಯದಿಂದ ವಿದುಲೆಯು ಹೇಳಿದ್ದಾಳೆ. ಜನಸಾಮಾನ್ಯರ ಇಂದಿನ ನಂಬಿಕೆಯೂ ಹಾಗೆಯೇ ಇದೆ.)

ವಿದುಲೆಯು ಮುಂದುವರಿದು ಹೇಳುತ್ತಾಳೆ :

“ಮಗು! ‘ಮಗನು ದುರ್ವಿನೀತನಾದರೆ ತಂದೆ-ತಾಯಿಗಳಿಗೇನು?’– ಎಂಬುದಾಗಿಯೂ ನೀನು ಪ್ರಶ್ನಿಸಬಹುದು. ಮಕ್ಕಳು ಹುಟ್ಟಿದಮಾತ್ರ ದಿಂದಲೇ ತಂದೆ-ತಾಯಿಗಳು ಕೃತಾರ್ಥರಾಗುವುದಿಲ್ಲ. ಮಕ್ಕಳು ಸನ್ಮಾರ್ಗಪ್ರವೃತ್ತರಾದರೆ ಮಾತ್ರವೇ ತಂದೆ-ತಾಯಿಗಳು ಇಹ-ಪರಗಳೆರಡ ರಲ್ಲಿಯೂ ಸುಖವನ್ನು ಅನುಭವಿಸುವರು.

ಸಂಜಯ! ಯಾವನು ನೀನಿರುವ ರೀತಿಯಲ್ಲಿ ಅವಿನೀತನಾಗಿರುವ ಮೊಮ್ಮಗನೊಡನೆ ಕ್ರೀಡಿಸುತ್ತಾನೆಯೋ, ಉದ್ಯೋಗಶೀಲನಲ್ಲದ (ಮೇಲಕ್ಕೇಳದೆಯೇ ಯಾವಾಗಲೂ ಮಲಗಿರುವ) ಅವಿಧೇಯನಾದ ದುರ್ಮತಿಯಾದ ಪುತ್ರನೊಡನೆ ಸಂತೋಷಿಸುತ್ತಾನೆಯೋ – ಅವನಿಗೆ ಪೌತ್ರ ಅಥವಾ ಪುತ್ರಪ್ರಾಪ್ತಿಗಳಿಂದ ಲಭಿಸಬೇಕಾದ ಐಹಿಕಸುಖವಾಗಲೀ ಆಮುಷ್ಮಿಕಸುಖವಾಗಲೀ ಲಭ್ಯವಾಗುವುದಿಲ್ಲ.*

**ಅಕುರ್ವನ್ತೋ ಹಿ ಕರ್ಮಾಣಿ ಕುರ್ವನ್ತೋ ನಿನ್ದಿತಾನಿ ಚ ।**
**ಸುಖಂ ನೈವೇಹ ನಾಮುತ್ರ ಲಭನ್ತೇ ಪುರುಷಾಧಮಾಃ ॥೧೨॥**

ಮಾಡಬೇಕಾದ, ಧರ್ಮಾರ್ಥಪ್ರಾಪಕವಾದ ಕರ್ಮಗಳನ್ನು ಮಾಡದೆ ನಿಂದಿತವಾದ ಕಾರ್ಯಗಳನ್ನು ಸ್ವಲ್ಪವಾದರೂ ಹಿಂಜರಿಯದೇ ಮಾಡುತ್ತಿರು

---

* ಇದು ಸಾಮಾನ್ಯವಾಗಿ ಈಗಿನ ಕಾಲದಲ್ಲಿ ಅನೇಕರ ಅನುಭವದ ಮಾತಾಗಿದೆ. ಅವಿಧೇಯರಾದ ದುರ್ಮತಿಗಳಾದ ಮಕ್ಕಳ ತಾಯಿ-ತಂದೆಗಳು ಬದುಕಿರುವಾಗಲೇ ನರಕಯಾತನೆಯನ್ನನುಭವಿಸುತ್ತಾರೆ. ಸತ್ತಮೇಲೂ ಅವರಿಗೆ ಸದ್ಗತಿಯು ಸಿಕ್ಕುವುದಿಲ್ಲ. ಕರ್ಮಗಳಲ್ಲೇ ನಂಬಿಕೆಯಿಲ್ಲದ ಮಕ್ಕಳು ಸದ್ಗತಿಗಾಗಿ ಯಾವ ವಿಧವಾದ ಕರ್ಮಗಳನ್ನೂ ಮಾಡಹೋಗುವುದಿಲ್ಲ. ವಿದುಲೆಯು ಹೇಳುವಾಗ ಮೊಮ್ಮಗನನ್ನೂ ಸೇರಿಸಿಕೊಂಡಿದ್ದಾಳೆ. ಅರ್ಥಾತ್ ಒಂದು ವಂಶದಲ್ಲಿ ಯಾರೇ ಅವಿಧೇಯರಾದರೂ, ಮೂರ್ಖರಾದರೂ ಸಹ ತಂದೆ-ತಾಯಿಗಳೂ, ತಾತಂದಿರೂ ಬಹಳ ವ್ಯಥೆಪಡುತ್ತಾರೆ. ಇದು ಸಾರ್ವಕಾಲಿಕ ಸತ್ಯವಾಗಿದೆ. ಪುರುಷಾಧಮರಾದ ಮಕ್ಕಳು ಅಥವಾ ಮೊಮ್ಮಕ್ಕಳು ಯಾವ ಕಾರಣದಿಂದ ಐಹಿಕವಾದ ಮತ್ತು ಆಮುಷ್ಮಿಕವಾದ ಫಲಗಳನ್ನು ಪಡೆಯುವುದಿಲ್ಲವೆಂಬುದಕ್ಕೆ ಕಾರಣವನ್ನು ವಿದುಲೆಯು ಮುಂದೆ ಹೇಳುತ್ತಾಳೆ.

ತ್ತಾರೆ. ಹೀಗೆ ಮಾಡುವುದರಿಂದ ಅಂತಹ ಪುರುಷಾಧಮರಿಗೆ ಐಹಿಕ ಮತ್ತು ಆಮುಷ್ಮಿಕಫಲಗಳೆರಡೂ ಲಭಿಸುವುದಿಲ್ಲ.

**ಯುದ್ಧಾಯ ಕ್ಷತ್ರಿಯಃ ಸೃಷ್ಟಃ ಸಂಜಯೇಹ ಜಯಾಯ ಚ ।**
**ಜಯನ್ವಾ ವಧ್ಯಮಾನೋ ವಾ ಪ್ರಾಪ್ನೋತೀನ್ದ್ರಸಲೋಕತಾಮ್ ॥೧೩॥**

**ನ ಶಕ್ರಭವನೇ ಪುಣ್ಯೇ ದಿವಿ ತದ್ವಿದ್ಯತೇ ಸುಖಮ್ ।**
**ಯದಮಿತ್ರಾನ್ವಶೇ ಕೃತ್ವಾ ಕ್ಷತ್ರಿಯಃ ಸುಖಮಶ್ನುತೇ ॥೧೪॥**

ಸಂಜಯ! ಯುದ್ಧಮಾಡುವ ಸಲುವಾಗಿಯೇ ಕ್ಷತ್ರಿಯನ ಸೃಷ್ಟಿಯಾಗಿದೆ. ಧರ್ಮಯುದ್ಧಮಾಡುವುದು ಮತ್ತು ಜಯಗಳಿಸುವುದು – ಇವೇ ಕ್ಷತ್ರಿಯನ ಕರ್ತವ್ಯ ಅಥವಾ ಧರ್ಮ. ಕ್ಷತ್ರಿಯನು ಜಯವನ್ನೇ ಗಳಿಸಿದರೂ–ಯುದ್ಧದಲ್ಲಿ ಸಂಹೃತನೇ ಆದರೂ ಇಂದ್ರನ ಲೋಕವನ್ನು ಪಡೆದುಕೊಳ್ಳುತ್ತಾನೆ. ಆದರೆ ಕ್ಷತ್ರಿಯನಾದವನು ಶತ್ರುಗಳನ್ನು ಗೆದ್ದು ಅವರನ್ನು ತನ್ನ ಆಶ್ರಿತರನ್ನಾಗಿ ಮಾಡಿಕೊಂಡು ಇಹಲೋಕದಲ್ಲಿ ಯಾವ ವಿಧವಾದ ಸುಖವನ್ನು ಪಡೆಯುತ್ತಾನೆಯೋ ಅಂತಹ ಅನಿರ್ವಾಚ್ಯವಾದ ಸುಖವನ್ನು ಪುಣ್ಯತಮವಾದ ಸ್ವರ್ಗದಲ್ಲಿರುವ ಇಂದ್ರನ ಅರಮನೆಯಲ್ಲಿಯೂ ಪಡೆಯಲಾರನು.

ಶತ್ರುವಿನಿಂದ ಅನೇಕಬಾರಿ ಸೋಲನ್ನನುಭವಿಸಿದ, ಮನಸ್ವಿಯಾದ, ಕೋಪಾಗ್ನಿಯಿಂದ ದಹಿಸಲ್ಪಡುತ್ತಿರುವ ಕ್ಷತ್ರಿಯಪುರುಷನು ಮತ್ತೊಮ್ಮೆ ಶತ್ರುವಿನ ಮೇಲೆ ಯುದ್ಧಕ್ಕೆ ಹೋಗಿ ಆತ್ಮತ್ಯಾಗವನ್ನಾದರೂ ಮಾಡಬೇಕು ; ಶತ್ರುವನ್ನಾದರೂ ಕೆಳಕ್ಕುರುಳಿಸಬೇಕು–ಈ ಎರಡು ಮಾರ್ಗಗಳನ್ನು ಬಿಟ್ಟರೆ ಅವನ ಮನಸ್ಸಿಗೆ ಶಾಂತಿಯು ಹೇಗೆತಾನೇ ಸಿಕ್ಕೀತು? (ಕ್ರೋಧಾಗ್ನಿಯ ಉಪಶಮನವು ಹೇಗೆತಾನೇ ಆದೀತು?)

**ಇಹ ಪ್ರಾಜ್ಞೋ ಹಿ ಪುರುಷಃ ಸ್ವಲ್ಪಮಪ್ರಿಯಮಿಚ್ಛತಿ ।**
**ಯಸ್ಯ ಸ್ವಲ್ಪಂ ಪ್ರಿಯಂ ಲೋಕೇ ಧ್ರುವಂ ತಸ್ಯಾಲ್ಪಮಪ್ರಿಯಮ್ ॥**

ಪ್ರಾಜ್ಞನಾದ ಪುರುಷನು ಸ್ವಲ್ಪವನ್ನು (ಸ್ವಲ್ಪವಾದ ಐಶ್ವರ್ಯವನ್ನು) ಅಪ್ರಿಯವನ್ನಾಗಿ (ಅನಿಷ್ಟವೆಂದು) ಇಚ್ಛಿಸುತ್ತಾನೆ (ತಿಳಿಯುತ್ತಾನೆ.) ಯಾವನಿಗೆ

ಸ್ವಲ್ಪವೇ ಪ್ರಿಯವಾಗುತ್ತದೆಯೋ (ಅಲ್ಪೈಶ್ವರ್ಯದಿಂದಲೇ ಯಾವ ಕ್ಷತ್ರಿಯನು ತೃಪ್ತನಾಗಿರುತ್ತಾನೆಯೋ) ಅಂತಹವನಿಗೆ ಆ ಅಲ್ಪತ್ವವೇ (ಅಲ್ಪೈಶ್ವರ್ಯ ತೃಪ್ತಿಯೇ) ಅಪ್ರಿಯವಾಗುತ್ತದೆ. (ಅನಿಷ್ಟಕಾರಿಯಾಗುತ್ತದೆ.) ಇದು ಸತ್ಯ. (ಪ್ರಾಜ್ಞನಾದ ರಾಜನೆಂದಿಗೂ ಅಲ್ಪೈಶ್ವರ್ಯದಿಂದ ತೃಪ್ತಿಪಡುವುದಿಲ್ಲ. ಅಲ್ಪೈಶ್ವರ್ಯದಿಂದಲೇ ತೃಪ್ತಿಪಟ್ಟುಕೊಳ್ಳುವ ರಾಜನು ಬಹಳ ಬೇಗ ಅನಿಷ್ಟಕ್ಕೆ ಗುರಿಯಾಗುತ್ತಾನೆ. ಇದು ನಿಶ್ಚಯ.)

**ಪ್ರಿಯಾಭಾವಾಚ್ಚ ಪುರುಷೋ ನೈವ ಪ್ರಾಪ್ನೋತಿ ಶೋಭನಮ್ ।**
**ಧ್ರುವಂ ಚಾಭಾವಮಭ್ಯೇತಿ ಗತ್ವಾ ಗಙ್ಗೇವ ಸಾಗರಮ್ ॥೧೮॥**

ಅಲ್ಪೈಶ್ವರ್ಯವಿರತಕ್ಕವನು ತನಗೆ ಪ್ರಿಯವಾದುದೆಲ್ಲವನ್ನೂ ಪಡೆದುಕೊಳ್ಳಲಾಗುವುದಿಲ್ಲ. ಪ್ರಿಯವಾದ ವಸ್ತುವು ಲಭಿಸದಿದ್ದರೆ ಮನುಷ್ಯನು ಕಲ್ಯಾಣವನ್ನೇ ಹೊಂದುವುದಿಲ್ಲ. ಎಲ್ಲಕ್ಕೂ ಅಭಾವವಿರುವ ಮನುಷ್ಯನು–ಗಂಗಾನದಿಯು ಸಮುದ್ರದಲ್ಲಿ ಲೀನವಾಗಿ ಹೋಗುವಂತೆ–ಹೇಳಹೆಸರಿಲ್ಲದೆ ವಿನಾಶಹೊಂದುತ್ತಾನೆ."

ತಾಯಿಯ ಬಹುತೀಕ್ಷ್ಣವಾದ ಮಾತನ್ನು ಕೇಳಿದನಂತರ ಸಂಜಯನು ಹೇಳಿದನು :

"ಜಡನಂತೆಯೂ ಮೂಕನಂತೆಯೂ ಆಗಿ ಬಳಲಿರುವವನ ವಿಷಯದಲ್ಲಿ ನೀನು ಈ ವಿಧವಾದ ಬುದ್ಧಿಯನ್ನಿಟ್ಟುಕೊಳ್ಳಬಾರದು. ಇಂತಹ ಕರ್ಣಕಠೋರವಾದ ಮಾತುಗಳನ್ನೂ ಆಡಬಾರದು. ಅದರಲ್ಲಿಯೂ ಪುತ್ರನ ವಿಷಯದಲ್ಲಿ ಹೆಚ್ಚು ಕರುಣೆಯಿಂದ ವರ್ತಿಸುವುದು ತಾಯಿಯ ಕರ್ತವ್ಯವಾಗುತ್ತದೆ."

('ಜಡಳಂತೆಯೂ ಮೂಕಳಂತೆಯೂ ಇದ್ದು ನನ್ನನ್ನು ಕರುಣೆಯಿಂದ ಕಾಣು' ಎಂಬುದಾಗಿ ಒಬ್ಬರು ಅರ್ಥಮಾಡಿರುತ್ತಾರೆ.)

"ಪುತ್ರಕ! ತಾಯಿಯು ಮಗನನ್ನು ಕರುಣೆಯಿಂದ ನೋಡಬೇಕೆಂಬ ನಿನ್ನ ಈ ಮಾತನ್ನು ಕೇಳಿ ನನಗೂ ಬಹಳ ಸಂತೋಷವಾಗಿದೆ. ನೀನು ನನ್ನ ಕರ್ತವ್ಯವನ್ನು ಕುರಿತು ಚಿಂತಿಸುತ್ತಿರುವೆಯಲ್ಲವೇ? ಪುತ್ರನ ವಿಷಯದಲ್ಲಿ ದಯೆತೋರುವುದು ತಾಯಿಯ ಕರ್ತವ್ಯವೆಂದು ಭಾವಿಸಿ ಜಡನಂತೆಯೂ

ಮೂಕನಂತೆಯೂ ಇರುವ ನಿನ್ನ ಮೇಲೆ ಕರುಣೆತೋರಿಸಬೇಕೆಂದು ಹೇಳುತ್ತಿರುವೆಯಲ್ಲವೇ? ಇನ್ನೊಬ್ಬರಿಗೆ ಅವರ ಕರ್ತವ್ಯವೇನೆಂಬುದನ್ನು ಬೋಧಿಸುವ ಮೊದಲು ತಾನು ತನ್ನ ಕರ್ತವ್ಯವನ್ನು ಮಾಡಬೇಡವೇ? ಸಂಸಾರದಲ್ಲಿ ಒಬ್ಬೊಬ್ಬರಿಗೂ ಒಂದೊಂದು ಕರ್ತವ್ಯವಿರುವುದು ನಿಜ. ತಾಯಿಯಾದವಳು ಮಕ್ಕಳನ್ನು ಕರುಣೆಯಿಂದ ನೋಡಿಕೊಳ್ಳಬೇಕೆಂಬುದೂ ನಿಜ. ಆದರೆ ಮಗನ ಕರ್ತವ್ಯವೇನು? ನಿನ್ನ ಕರ್ತವ್ಯವೇನೆಂಬುದನ್ನೇ ನೀನಿನ್ನೂ ಅರಿತವನಾಗಿಲ್ಲ. ಎಲ್ಲರೂ ತಮ್ಮ ತಮ್ಮ ಕರ್ತವ್ಯಗಳನ್ನು ಮಾಡುತ್ತಿದ್ದರೆ ಮತ್ತೊಬ್ಬರಿಗೆ ಅವರ ಕರ್ತವ್ಯದ ವಿಷಯದಲ್ಲಿ ಉಪದೇಶಿಸುವ ಅಗತ್ಯವೇ ಇರುವುದಿಲ್ಲ. ನಿನಗದರ ಅರಿವಿಲ್ಲದಿರುವುದರಿಂದಲೇ ನಾನಿದನ್ನು ಹೇಳುತ್ತಿದ್ದೇನೆ. ನೀನು ಕ್ಷತ್ರಿಯನಾಗಿ ಹುಟ್ಟಿರುವಾಗ ಯುದ್ಧಮಾಡುವುದು ನಿನ್ನ ಕರ್ತವ್ಯ. ನಿನ್ನ ಈ ಕರ್ತವ್ಯವನ್ನೇ ಮಾಡಬೇಕೆಂದು ನಾನು ಬಾರಿ-ಬಾರಿಗೂ ಪ್ರಚೋದಿಸುತ್ತಿದ್ದೇನೆ ; ಪುನಃ ಪ್ರಚೋದಿಸುತ್ತೇನೆ.

ಸಂಜಯ! ನೀನು ಹೇಳಿದಂತೆಯೇ, ನಾನು ನಿನ್ನನ್ನು ಅತ್ಯಂತ ಕರುಣಾದೃಷ್ಟಿಯಿಂದ, ಪುತ್ರವಾತ್ಸಲ್ಯದಿಂದ ಯಾವಾಗ ನೋಡುವೆನು, ಗೊತ್ತೇ? ನೀನು ಎಲ್ಲ ಸೈಂಧವರನ್ನೂ ಸಂಹರಿಸಿ, ಕಷ್ಟಸಾಧ್ಯವಾದ ವಿಜಯವನ್ನು ಗಳಿಸಿಬಂದನಂತರ ನಿನ್ನನ್ನು ಕರುಣೆಯಿಂದ ನೋಡುತ್ತೇನೆ. ಅಷ್ಟು ಮಾತ್ರವಲ್ಲ ; ನಿನ್ನನ್ನು ಬಹುವಾಗಿ ಕೊಂಡಾಡಿಯೂ ಕೊಂಡಾಡುತ್ತೇನೆ."

ಆಗ ಸಂಜಯನು ಆಗಿನ ತನ್ನ ಸ್ಥಿತಿಯನ್ನು ತಾಯಿಗೆ ವಿವರಿಸಿ ಹೇಳುತ್ತಾನೆ :

"ಅಮ್ಮ! ಯುದ್ಧೋಪಕರಣಗಳಿಲ್ಲದೇ ಏಕಾಕಿಯಾಗಿ ನಿಂತು ಅಪಾರ ಸೈನ್ಯವನ್ನೆದುರಿಸಿ ಯುದ್ಧಮಾಡಲು ಸಾಧ್ಯವಾಗುವುದೇ? ನನ್ನಲ್ಲೀಗ ಧನ ಸಮೃದ್ಧಿಯಿಲ್ಲ ; ಜನಸಮೃದ್ಧಿಯೂ ಇಲ್ಲ ; ಸಹಾಯಕ್ಕೆ ಸೈನಿಕರಿಲ್ಲ. ಹೀಗಿರುವಾಗ ಜಯದ ಸಿದ್ಧಿಯು ಹೇಗೆ ಸಾಧ್ಯವಾದೀತು? ಈ ನನ್ನ ದಾರುಣಾವಸ್ಥೆಯನ್ನು ನಾನು ಮನಸ್ಸಿನಲ್ಲಿಯೇ ಬಹುವಾಗಿ ತರ್ಕಿಸಿದ್ದೇನೆ. ಈ ನನ್ನ ದುರವಸ್ಥೆಯನ್ನು ಮನಗಂಡು–ದುಷ್ಕೃತಿಯ ಮನಸ್ಸು ಸ್ವರ್ಗದಿಂದ ಪ್ರತಿನಿವೃತ್ತವಾಗುವಂತೆ–ರಾಜ್ಯಪ್ರಾಪ್ತಿಯ ಅಭಿಲಾಷೆಯಿಂದ ನನ್ನ ಮನಸ್ಸು ಹಿಂಜರಿದಿದೆ. ಪರಿಸ್ಥಿತಿಯು ಹೀಗಿರುವಾಗ ನಾನು ರಾಜ್ಯವನ್ನು ಪಡೆದು

ಕೊಳ್ಳುವ ಬೇರಾವುದಾದರೂ ಉಪಾಯವನ್ನು ನೀನು ಕಂಡುಕೊಂಡಿರು ವೆಯಾ? ಪರಿಪಕ್ವವಾದ ಬುದ್ಧಿಯುಳ್ಳವಳೇ! ನಿನಗಾದರೂ ಅಂತಹ ಉಪಾಯವು ತಿಳಿದಿರಲೇಬೇಕು. ಈ ವಿಷಯವನ್ನು ಕೇಳುತ್ತಿರುವ ನನಗೆ ಉತ್ತಮವಾದ ಉಪಾಯವೊಂದನ್ನು ಯೋಚಿಸಿ ಹೇಳು. ನೀನೀ ವಿಷಯದಲ್ಲಿ ಹೇಗೆ ಅನುಶಾಸನವನ್ನು ಮಾಡುವೆಯೋ ನಾನು ಹಾಗೆಯೇ ನಡೆದುಕೊಳ್ಳುವೆನು."

**ಪುತ್ರ ನಾತ್ಮಾವಮನ್ತವ್ಯಃ ಪೂರ್ವಾಭಿರಸಮೃದ್ಧಿಭಿಃ ।**
**ಅಭೂತ್ವಾ ಹಿ ಭವನ್ತ್ಯರ್ಥಾ ಭೂತ್ವಾ ನಶ್ಯನ್ತಿ ಚಾಪರೇ ।**
**ಅಮರ್ಷೇಣೈವ ಚಾಪ್ಯರ್ಥಾ ನಾರಬ್ಧವ್ಯಾಃ ಸುಬಾಲಿಶೈಃ ॥೨೫॥**

"ಮಗು! 'ಇದ್ದ ಸಂಪತ್ತೆಲ್ಲವೂ ಹಾಳಾಗಿಹೋಯಿತು. ಈಗ ನಮ್ಮಲ್ಲಿ ಹಿಂದಿದ್ದ ಸಂಪತ್ತಿಲ್ಲ' – ಎಂಬುದಾಗಿ ಯೋಚಿಸುತ್ತಾ ತನ್ನನ್ನು ತಾನೇ ಅವಮಾನಿಸಿಕೊಳ್ಳಬಾರದು. ಏಕೆಂದರೆ : ಧನ, ವೈಭವ–ಇತ್ಯಾದಿಗಳೆಲ್ಲವೂ ಒಮ್ಮೆ ನಷ್ಟವಾಗಿಹೋದರೂ ಪುನಃ ಪ್ರಯತ್ನದಿಂದ ಲಭ್ಯವಾಗತಕ್ಕುವುಗಳು. ಅಂತೆಯೇ ಒಮ್ಮೆ ಇವುಗಳ ಸಮೃದ್ಧಿಯಿದ್ದರೂ ಕಾರಣಾಂತರಗಳಿಂದ ಇವು ನಾಶವಾಗತಕ್ಕುವುಗಳು. ಕೇವಲ ಅಸಹನೆ ಅಥವಾ ಕೋಪದಿಂದಲೇ ಕಡುಮೂರ್ಖರಾದವರಿಂದ ಅರ್ಥಪ್ರಾಪಕವಾದ ಕಾರ್ಯಗಳು ಆರಂಭಿಸಲ್ಪಡುವುದಿಲ್ಲ. (ಅಸಹನೆ, ಕೋಪ–ಇತ್ಯಾದಿಗಳಿರುವಿಕೆಯಿಂದಲೇ ಮೂರ್ಖರಾದವರು ಧರ್ಮಾರ್ಥಪ್ರಾಪಕವಾದ ಕಾರ್ಯವನ್ನು ಆರಂಭಿಸಲಾರರು.)

**ಸರ್ವೇಷಾಂ ಕರ್ಮಣಾಂ ತಾತ ಫಲೇ ನಿತ್ಯಮನಿತ್ಯತಾ ।**
**ಅನಿತ್ಯಮಿತಿ ಜಾನನ್ತೋ ನ ಭವನ್ತಿ ಭವನ್ತಿ ಚ ॥೨೬॥**

ಪುತ್ರಕ! ಎಲ್ಲ ವಿಧವಾದ ಕಾರ್ಯಗಳಲ್ಲಿಯೂ ಫಲವು ನಿತ್ಯವಾಗಿಯೂ ಇರುತ್ತದೆ ; ಅನಿತ್ಯವಾಗಿಯೂ (ಅನಿಶ್ಚಿತವಾಗಿಯೂ) ಇರುತ್ತದೆ. ಮಾಡಿದ ಕಾರ್ಯಕ್ಕೆ ಫಲವು ಲಭಿಸಲೂಬಹುದು ; ಲಭಿಸದೆಯೂ ಇರಬಹುದು. 'ಫಲವು ಅನಿತ್ಯ. ಒಮ್ಮೆ ಸಿಕ್ಕುತ್ತದೆ ; ಮತ್ತೊಮ್ಮೆ ಸಿಕ್ಕುವುದಿಲ್ಲ' – ಎಂಬ ವಿಷಯವನ್ನು ಪೂರ್ಣವಾಗಿ ಗ್ರಹಿಸಿರತಕ್ಕವನು ಸರ್ವದಾ ಕಾರ್ಯಪ್ರವೃತ್ತನಾಗಿಯೇ ಇರುತ್ತಾನೆ. (ಒಮ್ಮೆ ತಾನು ಮಾಡಿದ ಕಾರ್ಯಕ್ಕೆ ಫಲವನ್ನು ಪಡೆದುಕೊಳ್ಳುತ್ತಾನೆ. ಆದುದರಿಂದ ಫಲದ ಅನಿತ್ಯತೆ

ಯನ್ನೇ ಯೋಚಿಸುತ್ತಾ ಕುಳಿತುಕೊಳ್ಳಬಾರದು. ಇದನ್ನೇ ವಿದುಲೆಯು ಮುಂದೆ ವಿವರಿಸಿ ಹೇಳುತ್ತಾಳೆ.

**ಅಥ ಯೇ ನೈವ ಕುರ್ವನ್ತಿ ನೈವ ಜಾತು ಭವನ್ತಿ ತೇ।**
**ಐಕಗುಣ್ಯಮನೀಹಾಯಾಮಭಾವಃ ಕರ್ಮಣಾಂ ಫಲಮ್ ।**
**ಅಥ ದ್ವೈಗುಣ್ಯಮೀಹಾಯಾಂ ಫಲಂ ಭವತಿ ವಾ ನ ವಾ ॥೨೭॥**

ಯಾರು ಕರ್ಮವನ್ನೇ ಮಾಡುವುದಿಲ್ಲವೋ (ತಮ್ಮ ಕರ್ತವ್ಯವನ್ನೇ ಮಾಡುವುದಿಲ್ಲವೋ) ಅವರ ಅಭೀಷ್ಟಗಳು ಖಂಡಿತವಾಗಿಯೂ ಸಿದ್ಧಿಸಲಾರವು. ಮಾಡಬೇಕಾದ ಕರ್ತವ್ಯವನ್ನು ಪರಿತ್ಯಜಿಸಿ ನಿಶ್ಚೇಷ್ಟನಾಗಿ ಯೋಚಿಸುತ್ತಾ ಕುಳಿತುಕೊಳ್ಳುವವನಿಗೆ ಲಭಿಸತಕ್ಕ ಫಲವೆಂದರೆ : ಅವನ ಯಾವ ಅಭೀಷ್ಟಗಳೂ ಸಿದ್ಧಿಯಾಗದಿರುವುದೊಂದೇ. ಅವನು ನಿಶ್ಚೇಷ್ಟನಾಗಿ ಕುಳಿತುದಕ್ಕೆ ಇದೊಂದೇ ಫಲ. ಇದೇ ಅದರ ಏಕೈಕಪರಿಣಾಮ. ಇನ್ನಾವ ಫಲವನ್ನೂ ಯೋಚಿಸುವಂತೆಯೂ ಇಲ್ಲ. ಆದರೆ ತಾನು ಮಾಡಬೇಕಾದ ಕರ್ತವ್ಯವನ್ನು ಉತ್ಸಾಹದಿಂದ ಮಾಡಿ ಮುಗಿಸುವವನಿಗೆ ಎರಡು ವಿಧವಾದ ಪರಿಣಾಮಗಳೂ ಉಂಟಾಗಲು ಸಾಧ್ಯ. ಮಾಡಿದ ಕಾರ್ಯಕ್ಕೆ ಫಲವಾಗಲೂ ಬಹುದು-ಫಲವಾಗದೆಯೂ ಇರಬಹುದು.

**ಯಸ್ಯ ಪ್ರಾಗೇವ ವಿದಿತಾ ಸರ್ವಾರ್ಥಾನಾಮನಿತ್ಯತಾ ।**
**ನುದೇದ್ವೃದ್ಧ್ಯ ಸಮೃದ್ಧೀ ಸ ಪ್ರತಿಕೂಲೇ ನೃಪಾತ್ಮಜ ॥೨೮॥**

ರಾಜಪುತ್ರ! ಯಾವ ವಿವೇಕಿಗೆ ತಾನು ಕಾರ್ಯಮಾಡಿದರೂ ಫಲ ವಾಗಲಾರದೆಂಬ ವಿಷಯವು ಮೊದಲೇ ತಿಳಿದಿರುವುದೋ–ಅಂತಹವನು ತನಗೆ ಪ್ರತಿಕೂಲನಾದ ಶತ್ರುವಿನ ಔನ್ನತ್ಯವನ್ನು ತೊಡೆದುಹಾಕಲು ಮತ್ತು ತನಗಾಗಿರುವ ಅವನತಿಯ ದುಃಖವನ್ನು (ಅಸಮೃದ್ಧಿಯನ್ನು) ಹೋಗ ಲಾಡಿಸಿಕೊಳ್ಳಲು ಬುದ್ಧಿಯಿಂದ ವಿಚಾರಮಾಡಿ ಮುಂದೆ ಮಾಡಬೇಕಾದ ಉಪಾಯಗಳನ್ನು ನಿರ್ಧರಿಸಬೇಕು. (ದೈವವು ಪ್ರತಿಕೂಲವಾಗಿದ್ದರೂ ತನ್ನ ವೃದ್ಧಿ-ಅಸಮೃದ್ಧಿಗಳನ್ನು ಗಮನಿಸದೇ ತನ್ನ ಕರ್ತವ್ಯವನ್ನು ಮಾಡುತ್ತಲೇ ಇರಬೇಕು.)

**ಉತ್ಥಾತವ್ಯಂ ಜಾಗೃತವ್ಯಂ ಯೋಕ್ತವ್ಯಂ ಭೂತಿಕರ್ಮಸು।**
**ಭವಿಷ್ಯತೀತ್ಯೇವ ಮನಃ ಕೃತ್ವಾ ಸತತಮವ್ಯಥೈಃ ॥೨೯॥**

'ನಾನು ಪ್ರಾರಂಭಿಸುವ ಕಾರ್ಯವು ಸಿದ್ಧಿಸಿಯೇ ಸಿದ್ಧಿಸುತ್ತದೆ' – ಎಂಬ ದೃಢತೆಯಿಂದ ಮನಸ್ಸಿನಲ್ಲಿ ಯಾವ ವಿಧವಾದ ಶಂಕೆಯನ್ನಾಗಲೀ, ವ್ಯಥೆಯನ್ನಾಗಲೀ ಇಟ್ಟುಕೊಳ್ಳದೇ ಉತ್ಸಾಹದಿಂದ ಏಳಬೇಕು. ಕಾರ್ಯಕ್ಕೆ ಸಜ್ಜಾಗಬೇಕು. ಎಚ್ಚರಿಕೆಯಿಂದ ಐಶ್ವರ್ಯಪ್ರಾಪ್ತಿಯಾಗುವ ಕರ್ಮಗಳಲ್ಲಿ ತೊಡಗಬೇಕು.

ದೇವ–ಬ್ರಾಹ್ಮಣರನ್ನು ಯಥಾಸೂಕ್ತವಾಗಿ ಸಂಪೂಜಿಸಿ ಮಂಗಳ ಕಾರ್ಯಪುರಸ್ಸರವಾಗಿ ಕಾರ್ಯಾರಂಭಮಾಡುವ ಪ್ರಾಜ್ಞನಾದ ರಾಜನಿಗೆ ಬಹುಶೀಘ್ರವಾಗಿ ಉನ್ನತಿಯುಂಟಾಗುತ್ತದೆ. ಮಗು! ಪೂರ್ವದಿಕ್ಕಿನಲ್ಲಿ ಉದಯಿಸುವ ದಿವಾಕರನು ಕ್ಷಣ-ಕ್ಷಣಕ್ಕೂ ವೃದ್ಧಿಹೊಂದುವಂತೆ–ಅಂತಹ ರಾಜನಿಗೆ ರಾಜ್ಯಲಕ್ಷ್ಮಿಯು ಒಲಿದು ಸರ್ವದಾ ಅವನನ್ನು ಅನುಸರಿಸಿಯೇ ಇರುತ್ತಾಳೆ. ಸಂಜಯ! ಅನೇಕವಿಧವಾದ ದೃಷ್ಟಾಂತಗಳನ್ನು ಕೊಟ್ಟಿದ್ದೇನೆ. ನಾನಾವಿಧವಾದ ಉಪಾಯಗಳನ್ನೂ ಸೂಚಿಸಿದ್ದೇನೆ. ಉತ್ಸಾಹವರ್ಧಕ ವಾದ ಮಾತುಗಳನ್ನೂ ಹೇಳಿದ್ದೇನೆ. ಲೋಕವೃತ್ತಾಂತಗಳನ್ನೂ ಬಾರಿ-ಬಾರಿಗೂ ಉಲ್ಲೇಖಿಸಿರುತ್ತೇನೆ. ಈಗ ನಿನ್ನ ಪೌರುಷವನ್ನು ನಾನು ನೋಡಬೇಕಾಗಿದೆ. ಅದನ್ನೀಗ ಪ್ರದರ್ಶಿಸು ; ನೋಡುತ್ತೇನೆ. ಅಪೇಕ್ಷಿಸಿರುವ ಪುರುಷಾರ್ಥವನ್ನು ನಾನು ಹೇಳಿದ ರೀತಿಯಲ್ಲಿ ಪಡೆದುಕೊಳ್ಳಲು ಈಗ ನೀನು ಸಮರ್ಥನಾಗಿರುವೆ. ಈಗ ನೀನೊಂದು ಕೆಲಸಮಾಡಬೇಕಾಗಿದೆ. ಸಿಂಧುರಾಜನ ವಿಷಯದಲ್ಲಿ ಕೋಪಗೊಂಡಿರುವವರು, ಸಿಂಧುರಾಜನ ದೆಸೆಯಿಂದಾಗಿ ಸರ್ವಸ್ವವನ್ನೂ ಕಳೆದುಕೊಂಡಿರುವವರು, ತಮ್ಮ ಶಕ್ತಿಯ ವಿಷಯದಲ್ಲಿ ಬಹುಗರ್ವಿಷ್ಠರಾಗಿರತಕ್ಕವರು, ಸಿಂಧುರಾಜನಿಂದ ಅವ ಮಾನಿತರಾಗಿರತಕ್ಕವರು, ಸಿಂಧುರಾಜನೊಡನೆ ಸ್ಪರ್ಧಿಸಬೇಕೆಂಬ ಇಚ್ಛೆಯುಳ್ಳವರು–ಇವರೆಲ್ಲರನ್ನೂ ನೀನು ಸಾಮ-ದಾನ-ಭೇದೋಪಾಯ ಗಳಿಂದ ನಿನ್ನ ಪಕ್ಷೀಯರನ್ನಾಗಿ ಮಾಡಿಕೋ. ಈ ಉಪಾಯಗಳಿಂದ ನೀನು ನಿನ್ನ ಪಕ್ಷವನ್ನು ಬಲಪಡಿಸಿಕೊಂಡಿದ್ದೇ ಆದರೆ–ಮಹಾವೇಗದಿಂದ ಉದ್ಭೂತವಾದ ಬಿರುಗಾಳಿಯು ಮೋಡಗಳನ್ನು ಚದುರಿಸಿಬಿಡುವಂತೆ–ಶತ್ರುಪಕ್ಷದ ಸೈನ್ಯವನ್ನು ಭೇದಿಸಲು ಸಮರ್ಥನಾಗುವೆ.

ಸಾಮ-ದಾನ-ಭೇದೋಪಾಯಗಳ ಮೂಲಕವಾಗಿ ಸ್ನೇಹಮಾಡಿ ಕೊಳ್ಳಲಿರುವ ರಾಜರ ವಿಷಯದಲ್ಲಿ ನೀನು ಹೀಗೆ ನಡೆದುಕೊಳ್ಳಬೇಕು.

**ತೇಷಾಮಗ್ರಪ್ರದಾಯೀ ಸ್ಯಾಃ ಕಲ್ಯೋತ್ಥಾಯೀ ಪ್ರಿಯಂವದಃ ।**
**ತೇ ತ್ವಾಂ ಪ್ರಿಯಂ ಕರಿಷ್ಯನ್ತಿ ಪುರೋ ಧಾಸ್ಯನ್ತಿ ಚ ಧ್ರುವಮ್ ॥**

ಮೊದಲು ಮೊದಲು ನೀನು ಅವರಿಗೆ ಪ್ರಥಮಸ್ಥಾನವನ್ನು ಕೊಟ್ಟು ಪುರಸ್ಕರಿಸು. ಪ್ರಾತಃಕಾಲದಲ್ಲೆದ್ದು ಸಂಧ್ಯಾದಿಗಳನ್ನು ಮುಗಿಸಿಕೊಂಡು ನಿನ್ನ ಪಕ್ಷಕ್ಕೆ ಸೇರಿರುವ ರಾಜರೊಡನೆ ಪ್ರಿಯವಾದ ಮಾತುಗಳನ್ನಾಡು. ಹೀಗೆ ಮಾಡುವುದರಿಂದ ಅವರು ನಿನಗೆ ಒಳ್ಳೆಯದನ್ನು ಮಾಡುವರಲ್ಲದೇ ನಿನ್ನನ್ನೇ ತಮ್ಮ ನಾಯಕನನ್ನಾಗಿಯೂ ಆರಿಸಿಕೊಳ್ಳುವುದು ನಿಶ್ಚಯ.

**ಯದೈವ ಶತ್ರುರ್ಜಾನೀಯಾತ್ಸಪತ್ನಂ ತ್ಯಕ್ತಜೀವಿತಮ್ ।**
**ತದೈವಾಸ್ಮಾದುದ್ವಿಜತೇ ಸರ್ಪಾದ್ವೇಶ್ಮಗತಾದಿವ ॥೩೬॥**

ಯಾವಾಗ ನಿನ್ನ ಶತ್ರುವು– 'ನನ್ನ ಶತ್ರುವು ಪ್ರಾಣದ ಹಂಗನ್ನೂ ತೊರೆದು ಯುದ್ಧಮಾಡಲು ಸಿದ್ಧತೆಯನ್ನು ಮಾಡಿಕೊಳ್ಳುತ್ತಿದ್ದಾನೆ' – ಎಂಬ ವಿಷಯವನ್ನು ಚಾರರ ಮುಖೇನ ತಿಳಿದುಕೊಳ್ಳುತ್ತಾನೆಯೋ ಆಗಲೇ ಅವನು–ಮನೆಯಲ್ಲಿ ಸೇರಿಕೊಂಡಿರುವ ಸರ್ಪಕ್ಕೆ ಹೆದರುವಂತೆ– ಉದ್ವಿಗ್ನನಾಗುತ್ತಾನೆ.

**ತಂ ವಿದಿತ್ವಾ ಪರಾಕ್ರಾನ್ತಂ ವಶೇ ನ ಕುರುತೇ ಯದಿ ।**
**ನಿರ್ವಾದೈರ್ನಿರ್ವದೇದೇನಮನ್ತತಸ್ತದ್ಭವಿಷ್ಯತಿ ॥೩೭॥**

'ತನ್ನ ಶತ್ರುವು ಈಗ ಬಹುಪರಾಕ್ರಮಶಾಲಿಯಾಗಿದ್ದಾನೆ' – ಎಂಬು ದನ್ನು ಮನಗಂಡು –'ಇವನನ್ನಿನ್ನು ನನ್ನ ವಶದಲ್ಲಿಟ್ಟುಕೊಳ್ಳಲಾರೆನು' – ಎಂದು ನಿನ್ನ ಶತ್ರುವು ಭಾವಿಸಿದನಾದರೆ, ಅದನ್ನು ತಿಳಿದ ನೀನು ವಿಶ್ವಸನೀಯರಾದ ದೂತರ ಮೂಲಕವಾಗಿ ಸಾಮ-ದಾನೋಪಾಯಗಳಿಂದ ಸಂಧಾನನಡೆಸಲು ಅವನಿಗೆ ಅವಕಾಶಮಾಡಿಕೊಡು. ಕಡೆಯಲ್ಲಿ ಅಂತಹ ಅಜೇಯನೆನಿಸಿದ ಶತ್ರುವೂ ನಿನ್ನ ವಶನಾಗುತ್ತಾನೆ.

**ನಿರ್ವಾದಾದಾಸ್ಪದಂ ಲಬ್ಧ್ವಾ ಧನವೃದ್ಧಿರ್ಭವಿಷ್ಯತಿ ।**
**ಧನವನ್ತಂ ಹಿ ಮಿತ್ರಾಣಿ ಭಜನ್ತೇ ಚಾಶ್ರಯನ್ತಿ ಚ ॥೩೮॥**

ಸಾಮ-ದಾನಗಳ ಮೂಲಕವಾಗಿ ಶತ್ರುವಿನೊಡನೆ ತಾತ್ಕಾಲಿಕವಾಗಿ ಶಾಂತಿಯನ್ನು ಮಾಡಿಕೊಂಡರೆ ಮುಂದಿನ ಕೆಲಸ-ಕಾರ್ಯಗಳಿಗೆ ಆಸ್ಪದವು ಸಿಕ್ಕಿದಂತಾಗುತ್ತದೆ. ಧನವೃದ್ಧಿಗೆ ಹೆಚ್ಚು ಅವಕಾಶವು ಸಿಕ್ಕಿದಂತಾಗುತ್ತದೆ. ಅವಕಾಶವು ಸಿಕ್ಕಿದಾಗ ಧನಾರ್ಜನೆಮಾಡಿ ಧನವಂತನಾಗಬೇಕು. ಧನವಂತನಾದ ರಾಜನನ್ನು ಅನೇಕಮಿತ್ರರು ಸೇವಿಸುತ್ತಾರೆ ಮತ್ತು ಅನೇಕರಾಜರು ಅವನನ್ನು ಆಶ್ರಯಿಸುತ್ತಾರೆ.

ಧನವೆಂಬುದು ಮನುಷ್ಯನ ಜೀವನದಲ್ಲಿ ಹೆಚ್ಚು ಪರಿಣಾಮವನ್ನುಂಟು ಮಾಡುತ್ತದೆ.

**ಸ್ಖಲಿತಾರ್ಥಂ ಪುನಸ್ತಾತ ಸಂತ್ಯಜನ್ತಿ ಚ ಬಾನ್ಧವಾಃ ।**
**ಅಪ್ಯಸ್ಮಿನ್ನಾಶ್ವಸನ್ತೇ ಚ ಜುಗುಪ್ಸನ್ತೇ ಚ ತಾದೃಶಮ್ ॥೩೯॥**

ಮಗು! ಅರ್ಥಹೀನನಾದವನನ್ನು ಬಾಂಧವರೆಲ್ಲರೂ ಪರಿತ್ಯಜಿಸುತ್ತಾರೆ. ಅರ್ಥಹೀನನಲ್ಲಿ ಯಾರೂ ವಿಶ್ವಾಸವನ್ನಿಡುವುದಿಲ್ಲ. ಅಂತಹವನನ್ನು ಕಂಡೊಡನೆಯೇ ಜನರು ಜುಗುಪ್ಸೆಯನ್ನೂ ತೋರಿಸುತ್ತಾರೆ.

**ಶತ್ರುಂ ಕೃತ್ವಾ ಯಃ ಸಹಾಯಂ ವಿಶ್ವಾಸಮುಪಗಚ್ಛತಿ ।**
**ಯತಃ ಸಮ್ಭಾವ್ಯಮೇವೈತದ್ಯದ್ರಾಜ್ಯಂ ಪ್ರಾಪ್ನುಯಾದಿತಿ ॥೪೦॥**

ಶತ್ರುವಿನ ಶತ್ರುವಿನೊಡನೆ ಸ್ನೇಹಬೆಳೆಸಿ ಅವನ ಸಹಾಯವನ್ನು ಪಡೆದು ಅವನ ವಿಶ್ವಾಸಕ್ಕೆ ಯಾವನು ಪಾತ್ರನಾಗುತ್ತಾನೆಯೋ – ಅಂತಹವನು ಕಳೆದುಕೊಂಡ ರಾಜ್ಯವನ್ನು ಪುನಃ ಪಡೆದುಕೊಳ್ಳುತ್ತಾನೆಂಬುದು ಸಂಭಾವ್ಯವೇ ಸರಿ. ಇದು ಅಸಂಭಾವ್ಯವೇನಲ್ಲ."

೧೩೫ನೆಯ ಅಧ್ಯಾಯವು ಮುಗಿಯಿತು.

೧೩೬ನೆಯಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ.)

## ವಿದುಲೆಯ ಉಪದೇಶದಿಂದ ಸಂಜಯನು ಯುದ್ಧಸನ್ನದ್ಧನಾದುದು

ವಿದುಲೆಯು ಮುಂದುವರಿದು ಹೇಳಿದಳು :

**ನೈವ ರಾಜ್ಞಾ ದರಃ ಕಾರ್ಯೋ ಜಾತು ಕಸ್ಯಾಂಚಿದಾಪದಿ ।**
**ಅಥ ಚೇದಪಿ ದೀರ್ಣಃ ಸ್ಯಾನ್ನೈವ ವರ್ತೇತ ದೀರ್ಣವತ್ ॥೧॥**

"ಪುತ್ರಕ! ರಾಜನಾದವನು ಎಂತಹುದೇ ಆಪತ್ತು ಬಂದರೂ ಯಾವಾಗಲೂ ಭಯಪಡಬಾರದು. ಒಂದು ವೇಳೆ ಭಯಪಟ್ಟರೂ ಭಯಪಟ್ಟವನಂತೆ ತೋರಿಸಿಕೊಳ್ಳಬಾರದು.

**ದೀರ್ಣಂ ಹಿ ದೃಷ್ಟ್ವಾ ರಾಜಾನಂ ಸರ್ವಮೇವಾನುದೀರ್ಯತೇ ।**
**ರಾಷ್ಟ್ರಂ ಬಲಮಮಾತ್ಯಾಶ್ಚ ಪೃಥಕ್ಕುರ್ವನ್ತಿ ತೇ ಮತೀಃ ॥೨॥**

ರಾಜನು ಭಯಪಟ್ಟಿರುವನೆಂಬ ವಿಷಯವು ಇತರರಿಗೆ ತಿಳಿಯಿತೆಂದರೆ ಅವರೆಲ್ಲರೂ ಭಯಪಡುತ್ತಾರೆ. ಜನ, ಸೈನ್ಯ, ಅಮಾತ್ಯರು – ಎಲ್ಲರೂ ತಮ್ಮ ಮುಂದಿನ ಆಗು-ಹೋಗುಗಳನ್ನು ಕುರಿತು ರಾಜನಿಗೆ ವಿರುದ್ಧವಾಗಿಯೇ ಯೋಚಿಸುತ್ತಾರೆ.

**ಶತ್ರೂನೇಕೇ ಪ್ರಪದ್ಯನ್ತೇ ಪ್ರಜಹತ್ಯಪರೇ ಪುನಃ ।**
**ಅನ್ಯೇ ತು ಪ್ರಜಿಹೀರ್ಷನ್ತಿ ಯೇ ಪುರಸ್ತಾದ್ವಿಮಾನಿತಾಃ ॥೩॥**

ಕೆಲವರು ತಮ್ಮ ರಾಜನ ಆಶ್ರಯವನ್ನು ಬಿಟ್ಟು ಅವನ ಶತ್ರುವನ್ನು ಆಶ್ರಯಿಸುತ್ತಾರೆ. ಕೆಲವರು ರಾಜನನ್ನೇ ತ್ಯಜಿಸಿ ಹೊರಟುಹೋಗುತ್ತಾರೆ. ಹಿಂದೆ ರಾಜನಿಂದ ಅವಮಾನಿತರಾದ ಕೆಲವು ಜನರೂ ಇದೇ ಸರಿಯಾದ ಸಮಯವೆಂದು ತಿಳಿದು ರಾಜನನ್ನು ಪ್ರಹರಿಸಲೂ ಇಚ್ಛಿಸುತ್ತಾರೆ.

**ಯ ಏವಾತ್ಯನ್ತಸುಹೃದಸ್ತ ಏನಂ ಪರ್ಯುಪಾಸತೇ ।**
**ಅಶಕ್ತಯಃ ಸ್ವಸ್ತಿಕಾಮಾ ಬದ್ಧವತ್ಸಾ ಇಡಾ ಇವ ॥೪॥**

ಆದರೆ ಅತ್ಯಂತಸುಹೃದರಾಗಿರತಕ್ಕವರು ಮಾತ್ರವೇ ಕಷ್ಟಸಮಯದಲ್ಲಿ ಅವನನ್ನು ಬಿಟ್ಟು ಹೋಗದೇ ಅವನ ಸೇವೆಮಾಡುತ್ತಿರುತ್ತಾರೆ. ಕಟ್ಟಿಹಾಕಿದ ಕರುಗಳೊಡನಿರುವ ಹಸುಗಳಂತೆ–ದುರ್ಬಲರಾದ ಆ ಸುಹೃದರೂ ಕೇವಲ ಸ್ವಸ್ತಿಕಾಮರಾಗಿ ತಮ್ಮ ರಾಜನಿಗೆ ಒಳ್ಳೆಯದಾಗಲೆಂದು ಅನುದಿನವೂ ಆಶಿಸುತ್ತಾ ಇರುತ್ತಾರೆ.

**ಶೋಚನ್ತಮನುಶೋಚನ್ತಿ ಪತಿತಾನಿವ ಬಾನ್ಧವಾನ್ ।**
**ಅಪಿ ತೇ ಪೂಜಿತಾಃ ಪೂರ್ವಮಪಿ ತೇ ಸುಹೃದೋ ಮತಾಃ ॥೫॥**

ತಮ್ಮ ಬಂಧು-ಬಾಂಧವರು ಆಪತ್ತಿಗೊಳಗಾದಾಗ ಶೋಕಿಸುವಂತೆ ರಾಜನ ಸುಹೃದರು ರಾಜನು ಆಪತ್ತಿಗೊಳಗಾಗಿ ಶೋಕಿಸುತ್ತಿರುವಾಗ ಅವ

ನೊಡನೆ ಸೇರಿಕೊಂಡು ತಾವೂ ಶೋಕಿಸುತ್ತಾರೆ. ಅಂತಹ ಸುಹೃದರು ನಿನಗೂ ಇದ್ದಾರೆಯೇ? ಅಂತಹವರನ್ನು ನೀನು ಈ ಹಿಂದೆ ಸಮ್ಮಾನಿಸಿರುವೆಯಾ?

**ಯೇ ರಾಷ್ಟ್ರಮಭಿಮನ್ಯನ್ತೇ ರಾಜ್ಞೋ ವ್ಯಸನಮೀಯುಷಃ ।**
**ಮಾ ದೀದರಸ್ತ್ವಂ ಸುಹೃದೋ ಮಾ ತ್ವಾಂ ದೀರ್ಣಂ ಪ್ರಹಾಸಿಷುಃ ॥**

ಯಾವ ಸುಹೃದರು ರಾಜನಿಗೆ ಆಪತ್ತು ಒದಗಿರುವ ಕಾಲದಲ್ಲಿ-'ರಾಜ್ಯವು ನಮ್ಮದು; ಇದನ್ನು ನಾವು ರಕ್ಷಿಸಬೇಕು; ವ್ಯಸನದಲ್ಲಿರುವ ರಾಜನನ್ನು ಉದ್ಧರಿಸಬೇಕು'– ಎಂಬ ಅಭಿಮಾನದಿಂದಿರುತ್ತಾರೆಯೋ–ಅಂತಹ ಸುಹೃದರಿಂದ ಬೇರೆಯಾಗಬೇಡ. ಅಂತಹ ಸುಹೃದರೂ ಆಪತ್ತಿಗೊಳಗಾಗಿರುವ ನಿನ್ನನ್ನು ಪರಿತ್ಯಾಗಮಾಡದಿರಲಿ. ನಿನ್ನ ಪ್ರಭಾವ, ಪೌರುಷ ಮತ್ತು ಬುದ್ಧಿಗಳನ್ನು ತಿಳಿದುಕೊಳ್ಳಲಿಚ್ಛಿಸಿದ್ದ ನಾನು, ಧೈರ್ಯತುಂಬುವ ಈ ಮಾತುಗಳನ್ನು ನಿನ್ನ ತೇಜಸ್ಸನ್ನು ವೃದ್ಧಿಪಡಿಸುವ ಸಲುವಾಗಿ ಹೇಳಿರುವೆನು. ನಾನು ಹೇಳಿದುದೆಲ್ಲವೂ ಉಚಿತವಾಗಿರುವುದಾದರೆ, ನಾನು ಹೇಳಿರುವುದೆಲ್ಲವನ್ನೂ ನೀನು ಚೆನ್ನಾಗಿ ಅರ್ಥಮಾಡಿಕೊಂಡಿರುವೆಯಾದರೆ–ನಿನ್ನ ಶಾಂತಸ್ವಭಾವವನ್ನು ಬದಲಾಯಿಸಿ ಉಗ್ರರೂಪವನ್ನು ತಾಳಿ ಜಯಗಳಿಸಲು ಎದ್ದುನಿಲ್ಲು. ಸಂಜಯ! ನಮ್ಮ ಬಳಿಯಲ್ಲಿ ಇನ್ನೂ ಅಪಾರವಾದ ಐಶ್ವರ್ಯವಿದೆ. ಆ ವಿಷಯವು ನಿನಗೆ ತಿಳಿಯದು. ನಿನಗೆ ಮಾತ್ರವಲ್ಲ.; ನನಗೊಬ್ಬಳಿಗಲ್ಲದೇ ನಮ್ಮಲ್ಲಿರುವ ಹಣದ ರಾಶಿಯು ಮತ್ತಾರಿಗೂ ತಿಳಿಯದು. ಅದನ್ನು ನಾನು ನಿನಗೆ ವಹಿಸಿಕೊಡುತ್ತೇನೆ. ಈಗಲೂ ನಿನಗೆ ಸುಹೃದರಿದ್ದಾರೆ. ಒಬ್ಬಿಬ್ಬರಲ್ಲ– ನೂರಾರು ಮಂದಿ ಸುಹೃದರಿದ್ದಾರೆ. ಅವರೆಲ್ಲರೂ ಸುಖ-ದುಃಖಗಳನ್ನು ನಿನ್ನೊಡನೆ ಹಂಚಿಕೊಳ್ಳುವವರಾಗಿದ್ದಾರೆ. ಯುದ್ಧಕ್ಕೆ ಹೋದರೆ ಹಿಂದಿರುಗದೇ ಕಡೆಯವರೆಗೂ ಕಾದಾಡುತ್ತಾರೆ. ಅಂತಹ ಯೋಗ್ಯರಾದ ಸುಹೃದರು ಅನೇಕರಿದ್ದಾರೆ. ಸಂಜಯ! ಶತ್ರುನಿಷೂದನನೇ! ಯಾರು ನಿನ್ನ ಔನ್ನತ್ಯವನ್ನೇ ಸರ್ವದಾ ಅಭಿಲಾಷಿಸುತ್ತಾರೆಯೋ ಮತ್ತು ಶತ್ರುವಿನಿಂದ ನಿನಗೆ ಇಷ್ಟವಾದುದನ್ನು ಯುದ್ಧಮಾಡಿಯಾದರೂ ಕಿತ್ತುತರಲು ಸಮರ್ಥರೋ-ಅಂತಹ ಸುಹೃದರು ಅಥವಾ ಮಂತ್ರಿಗಳು ನಿನಗೆ ಸಹಾಯಕರಾಗಿರಬೇಕು.”

ಕುಂತಿಯು ಶ್ರೀಕೃಷ್ಣನನ್ನು ಕುರಿತು ಹೇಳುತ್ತಾಳೆ :

"ಕೃಷ್ಣ! ಸಂಜಯನ ಹೃದಯವು ಆ ಸಮಯದಲ್ಲಿ ಅತ್ಯಂತ ದುರ್ಬಲವಾಗಿದ್ದರೂ ವಿದುಲಾದೇವಿಯ ವಿಚಿತ್ರವಾದ ಅರ್ಥಪದಾಕ್ಷರಗಳಿಂದ ಕೂಡಿದ್ದ ಮಾತುಗಳನ್ನು ಕೇಳಿದನಂತರ, ಅಜ್ಞಾನದಿಂದ ಉಂಟಾಗಿದ್ದ ಅವನ ಭಯ ಮತ್ತು ವಿಷಾದಗಳು ದೂರವಾದುವು. ಮಲಗಿದ್ದವನು ಮೇಲೆದ್ದು ತಾಯಿಯನ್ನು ಕುರಿತು ಹೇಳಿದನು :

**ಉದಕೇ ಭೂರಿಯಂ ಧಾರ್ಯಾ ಮರ್ತವ್ಯಂ ಪ್ರವಣೇ ಮಯಾ ।**
**ಯಸ್ಯ ಮೇ ಭವತೀ ನೇತ್ರೀ ಭವಿಷ್ಯದ್ಭೂತಿದರ್ಶಿನೀ ॥೧೩॥**

"ಅಮ್ಮ! ಶತ್ರುವೆಂಬ ನೀರಿನಲ್ಲಿ ಮುಳುಗಿಹೋಗಿರುವ ನನ್ನ ರಾಜ್ಯವನ್ನೀಗ ಉದ್ಧರಿಸಬೇಕು ಅಥವಾ ಯುದ್ಧರೂಪವಾದ ಪ್ರಪಾತದಲ್ಲಿ ಬಿದ್ದು ಪ್ರಾಣವನ್ನಾದರೂ ಬಿಡಬೇಕು. ಈ ವಿಷಯದಲ್ಲಿ ನೀನೇ ನನಗೆ ನಿಜವಾದ ಶಿಕ್ಷಕಿಯಾಗಿರುವೆ. ಭವಿಷ್ಯದ ವೈಭವಸಂಪಾದನೆಗೆ ನೀನು ಮಾರ್ಗದರ್ಶಕಳಾಗಿರುವೆ.

ನೀನು ಹೇಳಿದ ಮೊದಲ ಮಾತುಗಳು ನನ್ನ ಮೇಲೆ ಪರಿಣಾಮವನ್ನು ಬೀರಲಿಲ್ಲವೆಂದು ನೀನು ಭಾವಿಸಿರಬಹುದು. ಆದರೆ ನಿನ್ನ ಮುಂದು-ಮುಂದಿನ ಎಲ್ಲ ಮಾತುಗಳನ್ನೂ ಕೇಳಬೇಕೆಂದು ನನಗೆ ಆಸೆಯಾಯಿತು. ಆದುದರಿಂದಲೇ ನೀನು ಹತ್ತು ಮಾತನಾಡಿದರೆ ನಾನು ಒಂದು ಮಾತನ್ನಾಡುತ್ತಾ–ಅದನ್ನೂ ನಿನ್ನ ಅಭಿಪ್ರಾಯಕ್ಕೆ ವಿರೋಧವಾಗಿಯೇ ಹೇಳುತ್ತಾ ಸುಮ್ಮನಿರುತ್ತಿದ್ದೆನು. ನಿನ್ನ ಮಾತು ಅಮೃತಕ್ಕೆ ಸಮಾನವಾಗಿತ್ತು. ಅಮೃತಕ್ಕೆ ಸಮಾನವಾದ ಇಂತಹ ಮಾತುಗಳನ್ನು ನೀನು ಸಾಧಾರಣದಿನಗಳಲ್ಲಿ ಹೇಳುತ್ತಲೂ ಇರಲಿಲ್ಲ; ನಾನು ಕೇಳುತ್ತಲೂ ಇರಲಿಲ್ಲ. ಬಹಳ ಕಷ್ಟದೆಸೆಯಲ್ಲಿದ್ದಾಗ ಬಹಳ ಕಷ್ಟಪಟ್ಟು ಅಮೃತಕ್ಕೆ ಸಮಾನವಾದ ನಿನ್ನ ಮಾತನ್ನು ಕೇಳಲು ಅವಕಾಶವಾಯಿತು. ನಿನ್ನ ಮಾತುಗಳನ್ನು ಕೇಳುತ್ತಿದ್ದಷ್ಟೂ ನನಗೆ ತೃಪ್ತಿಯೆಂಬುದೇ ಇರಲಿಲ್ಲ. ಇನ್ನೂ ಕೇಳಬೇಕೆನ್ನಿಸುತ್ತಿತ್ತು. ಈಗ ನಾನು ಶತ್ರುಗಳ ದಮನಕ್ಕೂ ಮತ್ತು ವಿಜಯಕ್ಕೂ ಬಾಂಧವರೊಡನೆ ಸೇರಿಕೊಂಡು ಕಾರ್ಯಮಾಡುತ್ತೇನೆ."

ಕುಂತಿಯು ಶ್ರೀಕೃಷ್ಣನಿಗೆ ಹೇಳುತ್ತಾಳೆ :

"ಕೃಷ್ಣ! ಸಂಜಯನು ತಾಯಿಯ ವಚನರೂಪವಾದ ಬಾಣಗಳಿಂದ ಚುಚ್ಚಲ್ಪಟ್ಟವನಾಗಿ–ಚಾವಟಿಯಿಂದ ಹೊಡೆಯಲ್ಪಟ್ಟ ಉತ್ತಮಜಾತಿಯ ಕುದುರೆಯಂತೆ–ಅತಿಶೀಘ್ರವಾಗಿ ಮೇಲೆದ್ದು ತಾಯಿಯು ಯಾವ ರೀತಿಯಲ್ಲಿ ಅನುಶಾಸನಮಾಡಿದ್ದಳೋ ಅದೇ ರೀತಿಯಲ್ಲಿ ಎಲ್ಲ ಕಾರ್ಯಗಳನ್ನೂ ಮಾಡಿ ಮುಗಿಸಿದನು. (ಶತ್ರುಗಳನ್ನು ಜಯಿಸಿ ರಾಜ್ಯವನ್ನೂ ಪಡೆದುಕೊಂಡನು.)

ಈ ಉತ್ತಮೋತ್ತಮವಾದ ವಿದುಲೋಪಾಖ್ಯಾನವು ವೀರರಿಗೆ ಅತ್ಯಂತ ಉತ್ಸಾಹವರ್ಧಕವಾಗಿರುತ್ತದೆ. ಹೇಡಿಗಳಿಗಿದು ಬಹುಭಯಂಕರವಾಗಿರುತ್ತದೆ. ಶತ್ರುಗಳಿಂದ ಪೀಡಿತನಾಗಿ ಹತಾಶನಾಗಿರುವ, ವಿನಾಶದ ಹಾದಿಯಲ್ಲಿರುವ ರಾಜನಿಗೆ ಅವನ ಮಂತ್ರಿಗಳು ಈ ಉಪಾಖ್ಯಾನವನ್ನು ಹೇಳಬೇಕು.

**ಜಯೋ ನಾಮೇತಿಹಾಸೋಽಯಂ ಶ್ರೋತವ್ಯೋ ವಿಜಿಗೀಷುಣಾ ।**
**ಮಹೀಂ ವಿಜಯತೇ ಕ್ಷಿಪ್ರಂ ಶ್ರುತ್ವಾ ಶತ್ರೂಂಶ್ಚ ಮರ್ದತಿ ॥೧೮॥**

ಮಾಧವ! ಈ ಇತಿಹಾಸಕ್ಕೆ 'ಜಯ' ಎಂದು ಹೆಸರು. ಶತ್ರುಗಳನ್ನು ಜಯಿಸಲಿಚ್ಛಿಸುವವನು ಈ ಇತಿಹಾಸವನ್ನು ಕೇಳಲೇಬೇಕು. ಇದನ್ನು ಕೇಳಿದವನು ವಿಶ್ವವನ್ನೇ ಜಯಿಸಲು ಸಮರ್ಥನಾಗುತ್ತಾನೆ ಮತ್ತು ಸರ್ವಶತ್ರುಗಳನ್ನೂ ನಿರ್ಮೂಲಮಾಡುತ್ತಾನೆ.

**ಇದಂ ಪುಂಸವನಂ ಚೈವ ವೀರಾಜನನಮೇವ ಚ ।**
**ಅಭೀಕ್ಷ್ಣಂ ಗರ್ಭಿಣೀ ಶ್ರುತ್ವಾ ಧ್ರುವಂ ವೀರಂ ಪ್ರಜಾಯತೇ ॥೧೯॥**

ಗರ್ಭಿಣಿಯರು ಈ ಉಪಾಖ್ಯಾನವನ್ನು ಕೇಳಿದರೆ ಗಂಡುಮಕ್ಕಳನ್ನು ಪಡೆಯುತ್ತಾರೆ. ಈ ಉಪಾಖ್ಯಾನವನ್ನು ಸಾಧಾರಣಮನುಷ್ಯರು ಕೇಳಿದರೂ ವೀರಭಾವವನ್ನು ಹೊಂದುತ್ತಾರೆ. ಈ ಉಪಾಖ್ಯಾನವನ್ನು ಗರ್ಭಿಣೀಸ್ತ್ರೀಯು ಬಾರಿ-ಬಾರಿಗೂ ಕೇಳುತ್ತಿದ್ದರೆ ವೀರಪುತ್ರನನ್ನೇ ಪಡೆಯುತ್ತಾಳೆ. ಇದು ನಿಶ್ಚಯ.

**ವಿದ್ಯಾಶೂರಂ ತಪಃಶೂರಂ ದಾನಶೂರಂ ತಪಸ್ವಿನಮ್ ।**
**ಬ್ರಾಹ್ಮ್ಯಾಶ್ರಿಯಾ ದೀಪ್ಯಮಾನಂ ಸಾಧುವಾದೇ ಚ ಸಮ್ಮತಮ್ ॥೨೦॥**

**ಅರ್ಚಿಷ್ಮನ್ತಂ ಬಲೋಪೇತಂ ಮಹಾಭಾಗಂ ಮಹಾರಥಮ್ ।**
**ಧೃತಿಮನ್ತಮನಾಧೃಷ್ಯಂ ಜೇತಾರಮಪರಾಜಿತಮ್ ॥೨೦॥**

**ನಿಯನ್ತಾರಮಸಾಧೂನಾಂ ಗೋಪ್ತಾರಂ ಧರ್ಮಚಾರಿಣಾಮ್ ।**
**ಈದೃಶಂ ಕ್ಷತ್ರಿಯಾ ಸೂತೇ ವೀರಂ ಸತ್ಯಪರಾಕ್ರಮಮ್ ॥೨೨॥**

ಗರ್ಭಿಣಿಯಾಗಿರುವ ಕ್ಷತ್ರಿಯಾಣಿಯು ಈ ಉಪಾಖ್ಯಾನವನ್ನು ಆಗಾಗ ಕೇಳುತ್ತಿದ್ದರೆ–ವಿದ್ಯಾಶೂರನೂ, ತಪಃಶೂರನೂ, ದಾನಶೂರನೂ, ತಪಸ್ವಿಯೂ, ಬ್ರಹ್ಮತೇಜಸ್ಸಿನಿಂದ ಸಂಪನ್ನನಾಗಿರುವವನೂ, ಸಾಧುಸಮ್ಮತನಾದವನೂ, ತೇಜಸ್ವಿಯೂ, ಬಲಿಷ್ಠನೂ, ಮಹಾಭಾಗನೂ, ಮಹಾರಥನೂ, ಧೈರ್ಯಶಾಲಿಯೂ, ಶತ್ರುಗಳಿಂದ ಎದುರಿಸಲು ಅಸಾಧ್ಯನಾದವನೂ, ಜಯಶೀಲನೂ, ಅಪರಾಜಿತನೂ, ದುಷ್ಟಶಿಕ್ಷಕನೂ, ಶಿಷ್ಟಪರಿಪಾಲಕನೂ, ವೀರನೂ, ಸತ್ಯವೇ ಪರಾಕ್ರಮವಾಗಿ ಉಳ್ಳವನೂ ಅಥವಾ ಸತ್ಯವಾದ ಪರಾಕ್ರಮವುಳ್ಳವನೂ (ಸತ್ಯನಿಷ್ಠನೂ) ಆದ ಪುತ್ರನನ್ನು ಪ್ರಸವಿಸುತ್ತಾಳೆ."

೧೩೬ನೆಯ ಅಧ್ಯಾಯವು ಮುಗಿಯಿತು.

೧೩೭ನೆಯ ಅಧ್ಯಾಯ — ಭಗವದ್ಯಾನಪರ್ವ (ಮುಂದುವರಿದಿದೆ)

## ಕುಂತಿಯು ಶ್ರೀಕೃಷ್ಣನ ಮೂಲಕ ಪಾಂಡವರಿಗೆ ಸಂದೇಶಗಳನ್ನು ಕಳುಹಿಸಿದುದು : ಉಪಪ್ಲಾವ್ಯಕ್ಕೆ ಶ್ರೀಕೃಷ್ಣನ ಪ್ರಯಾಣ

ಕುಂತಿಯು ಶ್ರೀಕೃಷ್ಣನನ್ನು ಕುರಿತು ಹೇಳುತ್ತಾಳೆ :

"ಕೃಷ್ಣ! ಅರ್ಜುನನಿಗೆ ನನ್ನ ಪರವಾಗಿ ನೀನು ಈ ಮಾತುಗಳನ್ನು ಹೇಳಬೇಕು :

'ಅರ್ಜುನ! ನೀನು ಹುಟ್ಟಿ ಒಂದೆರಡು ದಿವಸಗಳು ಮಾತ್ರವೇ ಕಳೆದಿದ್ದುವು. ಜಾತಾಶೌಚವಿನ್ನೂ ಕಳೆದಿರಲಿಲ್ಲ. ಆಶ್ರಮವಾಸಿನಿಯರಾದ ಸ್ತ್ರೀಯರಿಂದ ಪರಿವೃತಳಾಗಿ ಆಶ್ರಮದಲ್ಲಿ ನಾನು ಕುಳಿತಿದ್ದೆನು. ಆ ಸಮಯದಲ್ಲಿ ಅಂತರಿಕ್ಷದ ಕಡೆಯಿಂದ ದಿವ್ಯವಾದ, ಮನೋಹರವಾದ ಮಾತು ಕೇಳಿಸಿತು.

ಸಹಸ್ರಾಕ್ಷಸಮಃ ಕುನ್ತಿ ಭವಿಷ್ಯತ್ಯೇಷ ತೇ ಸುತಃ ।
ಏಷ ಜೇಷ್ಯತಿ ಸಂಗ್ರಾಮೇ ಕುರೂನ್ಸರ್ವಾನ್ಸಮಾಗತಾನ್ ।
ಭೀಮಸೇನದ್ವಿತೀಯಶ್ಚ ಲೋಕಮುದ್ವರ್ತಯಿಷ್ಯತಿ ॥೩॥

ಪುತ್ರಸ್ತೇ ಪೃಥಿವೀಂ ಜೇತಾ ಯಶಶ್ಚಾಸ್ಯ ದಿವಂ ಸ್ಪೃಶೇತ್ ।
ಹತ್ವಾ ಕುರೂಂಶ್ಚ ಸಂಗ್ರಾಮೇ ವಾಸುದೇವಸಹಾಯವಾನ್ ॥೪॥
ಪಿತ್ರ್ಯಮಂಶಂ ಪ್ರಣಷ್ಟಂ ಚ ಪುನರಪ್ಯುದ್ಧರಿಷ್ಯತಿ ।
ಭ್ರಾತೃಭಿಃ ಸಹಿತಃ ಶ್ರೀಮಾಂಸ್ತ್ರೀನ್ಮೇಧಾನಾಹರಿಷ್ಯತಿ ॥೫॥

'ಕುಂತಿ! ಈ ನಿನ್ನ ಮಗನು ಇಂದ್ರನಿಗೆ ಸಮಾನನಾದ ಪರಾಕ್ರಮಿಯಾಗುತ್ತಾನೆ. ಇವನು ಭೀಮಸೇನನೊಡನೆ ಸೇರಿಕೊಂಡು ಸರ್ವಕುರುಗಳನ್ನೂ ಯುದ್ಧದಲ್ಲಿ ಜಯಿಸುತ್ತಾನೆ. ಶತ್ರುಸಮುದಾಯಕ್ಕೆ ವ್ಯಾಕುಲವನ್ನುಂಟುಮಾಡುತ್ತಾನೆ. ನಿನ್ನ ಈ ಮಗನು ಈ ಪೃಥ್ವಿಯೆಲ್ಲವನ್ನೂ ಜಯಿಸುತ್ತಾನೆ. ಇವನ ಯಶಸ್ಸು ಸ್ವರ್ಗಕ್ಕೂ ವ್ಯಾಪಿಸುತ್ತದೆ. ವಾಸುದೇವನನ್ನು ಸಹಾಯಕನನ್ನಾಗಿ ಮಾಡಿಕೊಂಡು ಯುದ್ಧದಲ್ಲಿ ಎಲ್ಲ ಕುರುಸೈನಿಕರನ್ನೂ ಸಂಹರಿಸಿ, ಕಳೆದುಹೋಗಿದ್ದ ಪಿತ್ರಾರ್ಜಿತವಾದ ರಾಜ್ಯವನ್ನು ಪುನಃ ಪಡೆದುಕೊಳ್ಳುತ್ತಾನೆ. ಸಹೋದರರೊಡನೆ ಇವನು ಮೂರು ಅಶ್ವಮೇಧಯಾಗಗಳನ್ನು ಮಾಡುತ್ತಾನೆ.'

'ಅರ್ಜುನ! ಅಶರೀರವಾಣಿಯು ಹೇಳಿದ ಆ ಮಾತುಗಳನ್ನು ಸತ್ಯ ವಾಕ್ಕುಗಳನ್ನಾಗಿ ಮಾಡುವ ಕಾಲವು ಸನ್ನಿಹಿತವಾಗಿದೆ' ಹೀಗೆಂಬುದಾಗಿ ನಿಮ್ಮ ತಾಯಿಯು ಹೇಳಿದಳೆಂದು ನೀನು ಅರ್ಜುನನೊಡನೆ ಹೇಳಬೇಕು, ಕೃಷ್ಣ!

ಮಾಧವ! ಅರ್ಜುನನ ವಿಷಯವಾಗಿ ನಾನು ನಿನಗೆ ಹೇಳುವ ಕಾರಣವಿಲ್ಲ. ಅವನು ಸತ್ಯಸಂಧ. ಎರಡು ಕೈಗಳಿಂದಲೂ ಬಾಣಬಿಡಬಲ್ಲವನು (ಸವ್ಯಸಾಚೀ). ಅವನೆಷ್ಟು ಬಲಿಷ್ಠನೆಂಬುದನ್ನೂ, ದುರಾಸದನೆಂಬುದನ್ನೂ ನೀನೇ ತಿಳಿದಿರುವೆ. ದಾಶಾರ್ಹಕುಲನಂದನನೇ! ಅವನು ಹುಟ್ಟಿದ ಸಮಯದಲ್ಲಿ ಅಶರೀರವಾಣಿಯು ನುಡಿದಂತೆಯೇ ನಡೆಯಲಿ. ವಾರ್ಷ್ಣೇಯ! ಪ್ರಪಂಚದಲ್ಲಿ ಧರ್ಮವೇ ಇರುವುದಾದರೆ–ಅಶರೀರವಾಣಿಯು ಅಂದು ಹೇಳಿದ ಮಾತು ಇಂದು ಸತ್ಯವಾಗಿ ಪರಿಣಮಿಸುತ್ತದೆ. ಅಶರೀರವಾಣಿಯನ್ನು

ಪರೀಕ್ಷಿಸಬೇಕಾದುದೂ ಇಲ್ಲ. ಮೇಲಾಗಿ ಅಶರೀರವಾಣಿಯು ಹೇಳಿದು ದೆಲ್ಲವನ್ನೂ ನೀನೇ ಸಾಧಿಸಿಕೊಡುವೆಯೆಂಬ ಪೂರ್ಣವಿಶ್ವಾಸವು ನನಗಿದೆ. ಆದುದರಿಂದ ಅಶರೀರವಾಣಿಯು ಅಂದು ಹೇಳಿರುವ ವಿಷಯವಾಗಿ ನಾನು ದೋಷವೆಣಿಸಹೋಗುವುದಿಲ್ಲ. ಆ ಮಾತುಗಳು ಕಾರ್ಯರೂಪಕ್ಕೆ ಬರುವುವೋ–ಇಲ್ಲವೋ ಎಂದು ಸಂದೇಹಪಡುವುದೂ ಇಲ್ಲ.

**ನಮೋ ಧರ್ಮಾಯ ಮಹತೇ ಧರ್ಮೋ ಧಾರಯತೇ ಪ್ರಜಾಃ ॥**

ನಾನು ಆ ಮಹತ್ತಾದ ಧರ್ಮಕ್ಕೆ ನಮಸ್ಕರಿಸುತ್ತೇನೆ. ಪ್ರಜೆಗಳನ್ನು ಧರ್ಮವೇ ಧಾರಣೆಮಾಡುತ್ತದೆ. ಕೃಷ್ಣ! ನೀನು ಧನಂಜಯನನ್ನೂ ಮತ್ತು ರಣೋತ್ಸಾಹಿಯಾದ ವೃಕೋದರನನ್ನೂ ಕುರಿತು ಈ ಮಾತುಗಳನ್ನು ಹೇಳಬೇಕು :

**ಯದರ್ಥಂ ಕ್ಷತ್ರಿಯಾ ಸೂತೇ ತಸ್ಯ ಕಾಲೋಽಯಮಾಗತಃ ।**
**ನ ಹಿ ವೈರಂ ಸಮಾಸಾದ್ಯ ಸೀದನ್ತಿ ಪುರುಷರ್ಷಭಾಃ ॥೧೦॥**

'ಕ್ಷತ್ರಿಯಾಣಿಯು ಯಾವುದರ ಸಾಧನೆಗಾಗಿ ಮಕ್ಕಳನ್ನು ಪಡೆಯುವಳೋ–ಅದನ್ನು ಸಾಧಿಸಬೇಕಾದ ಕಾಲವೀಗ ಸನ್ನಿಹಿತವಾಗಿದೆ. ಒಬ್ಬನೊಡನೆ ದ್ವೇಷವನ್ನು ಕಟ್ಟಿಕೊಂಡನಂತರ ಪುರುಷಶ್ರೇಷ್ಠರಾದವರು ಉತ್ಸಾಹಶೂನ್ಯರಾಗುವುದಿಲ್ಲ. (ವೈರಿಯನ್ನು ಜಯಿಸಲು ಯತ್ನಿಸುತ್ತಾರೆ.)

ಶತ್ರುಕರ್ಶನನೇ! ಭೀಮಸೇನನ ಬುದ್ಧಿಯೂ ನಿನಗೆ ಚೆನ್ನಾಗಿ ತಿಳಿದಿರುವುದು. ಶತ್ರುವಿನ ಅಂತ್ಯವನ್ನು ಎಂದಿನವರೆಗೆ ಮಾಡುವುದಿಲ್ಲವೋ ಅಂದಿನವರೆಗೂ ಅವನು ಶಾಂತನಾಗುವುದಿಲ್ಲ.

ಮಾಧವ! ಕೃಷ್ಣ! ಸರ್ವಧರ್ಮಗಳಲ್ಲಿಯೂ ಇರುವ ವಿಶೇಷಾರ್ಥ ಗಳನ್ನೂ ಅಥವಾ ರಹಸ್ಯಾರ್ಥಗಳನ್ನೂ ತಿಳಿದುಕೊಂಡಿರುವ, ಮಹಾತ್ಮರಾದ ಪಾಂಡುಮಹಾರಾಜನ ಸೊಸೆಯಾದ, ಕಲ್ಯಾಣಿಯಾದ, ಯಶಸ್ವಿನಿಯಾದ ದ್ರೌಪದಿಯನ್ನು ಕುರಿತು ನನ್ನ ಪರವಾಗಿ ಹೀಗೆಂದು ಹೇಳು :

**ಯುಕ್ತಮೇತನ್ಮಹಾಭಾಗೇ ಕುಲೇ ಜಾತೇ ಯಶಸ್ವಿನೀ ।**
**ಯನ್ಮೇ ಪುತ್ರೇಷು ಸರ್ವೇಷು ಯಥಾವತ್ತ್ವಮವರ್ತಥಾಃ ॥೧೩॥**

'ಮಹಾಭಾಗೇ! ನೀನು ನನ್ನ ಎಲ್ಲ ಪುತ್ರರ ವಿಷಯದಲ್ಲಿಯೂ ಧರ್ಮಾನುಸಾರವಾಗಿ ಯಥೋಚಿತವಾಗಿ ನಡೆದುಕೊಂಡಿರುವೆ. ಸತ್ಕುಲ ಪ್ರಸೂತೆಯಾದ ಯಶಸ್ವಿನಿಯಾದ ನಿನಗಿದು ಯುಕ್ತವಾಗಿಯೇ ಇದೆ.'

ಮಾಧವ! ಯಶಸ್ವಿನಿಯಾದ ದ್ರೌಪದಿಗೆ ಇಷ್ಟು ಹೇಳಿದನಂತರ ಮಾದ್ರಿಯ ಮಕ್ಕಳಾದ, ಕ್ಷತ್ರಧರ್ಮನಿರತರಾದ ನಕುಲ-ಸಹದೇವರನ್ನು ಕುರಿತು ಹೀಗೆ ಹೇಳಬೇಕು :

**ವಿಕ್ರಮೇಣಾರ್ಜಿತಾನ್ಭೋಗಾನ್ವೃಣೀತಂ ಜೀವಿತಾದಪಿ ॥೧೪॥**

**ವಿಕ್ರಮಾಧಿಗತಾ ಹ್ಯರ್ಥಾಃ ಕ್ಷತ್ರಧರ್ಮೇಣ ಜೀವತಃ ।**
**ಮನೋ ಮನುಷ್ಯಸ್ಯ ಸದಾ ಪ್ರೀಣನ್ತಿ ಪುರುಷೋತ್ತಮೌ ॥೧೫॥**

'ಪುರುಷೋತ್ತಮರೇ! ನೀವು ಜೀವಿತವನ್ನೇ ಒತ್ತೆಯಾಗಿಟ್ಟು ಪರಾಕ್ರಮದಿಂದ ಸಂಪಾದಿಸಲ್ಪಟ್ಟ ಭೋಗಗಳನ್ನೇ ಅನುಭವಿಸಿರಿ. ಕ್ಷತ್ರಧರ್ಮದಿಂದ ಜೀವಿಸತಕ್ಕ ಮನುಷ್ಯನ ಮನಸ್ಸನ್ನು ಪರಾಕ್ರಮದಿಂದ ಪ್ರಾಪ್ತವಾಗುವ ಅರ್ಥಗಳೇ ತುಷ್ಟಿಗೊಳಿಸುತ್ತವೆ.'

ಮಾಧವ! ನಕುಲ-ಸಹದೇವರಿಗೆ ಹೀಗೆ ಹೇಳಿದನಂತರ ನನ್ನ ಮಕ್ಕಳೆಲ್ಲರೂ ಕುಳಿತಿರುವಾಗ ನಿಮ್ಮ ತಾಯಿಯು ಹೇಳಿದಳೆಂದು ಈ ಮಾತನ್ನು ಹೇಳು :

**ಯಚ್ಚ ವಃ ಪ್ರೇಕ್ಷಮಾಣಾನಾಂ ಸರ್ವಧರ್ಮೋಪಚಾಯಿನಾಮ್ ।**
**ಪಾಞ್ಚಾಲೀ ಪರುಷಾಣ್ಯುಕ್ತಾ ಕೋ ನು ತತ್ ಕ್ಷನ್ತುಮರ್ಹತಿ ॥೧೬॥**

'ಸರ್ವಧರ್ಮಗಳ ವೃದ್ಧಿಶೀಲರಾದ ನಿಮ್ಮ ಸಮಕ್ಷದಲ್ಲಿಯೇ ಪಾಂಚಾಲಿಯು ಅನೇಕವಿಧವಾದ ನಿಷ್ಠುರದ ಮಾತುಗಳನ್ನು ಕೇಳಬೇಕಾಯಿತು. ತುಂಬಿದ ಸಭೆಯಲ್ಲಿ ಅಂತಹ ಕಠಿನೋಕ್ತಿಗಳನ್ನಾಡಿರುವವರನ್ನು ಯಾರು ತಾನೇ ಕ್ಷಮಿಸುವರು? ( ನೀವಂತೂ ಕ್ಷಮಿಸಲೇಬಾರದು.)'

ದ್ರೌಪದಿಯ ವಿಷಯವಾಗಿ ನನ್ನ ದುಃಖವು ಅಪಾರವಾಗಿದೆ, ಕೃಷ್ಣ!

**ನ ರಾಜ್ಯಹರಣಂ ದುಃಖಂ ದ್ಯೂತೇ ಚಾಪಿ ಪರಾಜಯಃ ।**
**ಪ್ರವ್ರಾಜನಂ ಸುತಾನಾಂ ವಾ ನ ಮೇ ತದ್ದುಃಖಕಾರಣಮ್ ॥೧೭॥**

**ಯತ್ರ ಸಾ ಬೃಹತೀ ಶ್ಯಾಮಾ ಸಭಾಯಾಂ ರುದತೀ ತದಾ ।**
**ಅಶ್ರೌಷೀತ್ಪರುಷಾ ವಾಚಸ್ತನ್ಮೇ ದುಃಖತರಂ ಮಹತ್ ॥೧೮॥**

ಮಕ್ಕಳ ರಾಜ್ಯಾಪಹಾರವಾದುದಕ್ಕಾಗಿ ನನಗೆ ಅಷ್ಟು ದುಃಖವಾಗಲಿಲ್ಲ. ದ್ಯೂತದಲ್ಲಿ ನನ್ನ ಮಕ್ಕಳು ಸೋತುದಕ್ಕಾಗಿಯೂ ನನಗೆ ಅಷ್ಟು ದುಃಖವಾಗಲಿಲ್ಲ. ನನ್ನ ಮಕ್ಕಳನ್ನು ಅರಣ್ಯಕ್ಕಟ್ಟಿದ್ದೂ ನನ್ನ ದುಃಖಕ್ಕೆ ಕಾರಣವಲ್ಲ. ತುಂಬಿದ ಸಭೆಯಲ್ಲಿ ಪುತ್ರವತಿಯಾದ ಶ್ಯಾಮಲ ವರ್ಣದವಳಾದ ದ್ರೌಪದಿಯು ರೋದನಮಾಡುತ್ತಿದ್ದಾಗ ಗಾಯದ ಮೇಲೆ ಬರೆಯೆಳೆದಂತೆ ಕರ್ಣಕಠೋರವಾದ ಮಾತುಗಳನ್ನು ಕೇಳಿದುದೇ ನನ್ನ ದುಃಖಕ್ಕೆ ಕಾರಣವಾಯಿತು. ಅದನ್ನು ನೆನೆದೊಡನೆಯೇ ನನ್ನ ಹೃದಯವೇ ಸೀಳಿಹೋಗುತ್ತದೆ, ಕೃಷ್ಣ!

**ಸ್ತ್ರೀಧರ್ಮಿಣೀ ವರಾರೋಹಾ ಕ್ಷತ್ರಧರ್ಮರತಾ ಸದಾ ।**
**ನಾಧ್ಯಗಚ್ಛತ್ತದಾ ನಾಥಂ ಕೃಷ್ಣಾ ನಾಥವತೀ ಸತೀ ॥೧೯॥**

ಕ್ಷತ್ರಧರ್ಮದಲ್ಲಿಯೇ ಸದಾ ನಿರತಳಾಗಿದ್ದ, ಸರ್ವಾಂಗಸುಂದರಿಯಾದ ಕೃಷ್ಣೆಯು ಆ ಸಮಯದಲ್ಲಿ ರಜಸ್ವಲೆಯಾಗಿದ್ದಳು. ಪತಿವ್ರತೆಯಾದ ದ್ರೌಪದಿಯು, ಐವರು ನಾಥರನ್ನು ಪಡೆದಿದ್ದರೂ ದುರುಳನು ಕೈಹಿಡಿದು ಎಳೆಯುತ್ತಿದ್ದಾಗ ತನ್ನ ಮಾನವನ್ನು ರಕ್ಷಿಸಿಕೊಳ್ಳಲು ಒಬ್ಬ ನಾಥನನ್ನೂ ಸಹಾಯಕ್ಕೆ ಪಡೆದುಕೊಳ್ಳಲಿಲ್ಲ. ಆ ಸಮಯದಲ್ಲವಳು ಅನಾಥಳಾಗಿ ಬಿಟ್ಟಳು.

ಮಹಾಬಾಹುವೇ! ಸರ್ವಶಸ್ತ್ರವಿದರಲ್ಲಿ ಶ್ರೇಷ್ಠನೆನಿಸಿದ ಪುರುಷ ವ್ಯಾಘ್ರನಾದ ಅರ್ಜುನನನ್ನು ಕುರಿತು ಹೀಗೆಂದು ಹೇಳು :

'ದ್ರೌಪದ್ಯಾಃ ಪದವೀಂ ಚರ'–'ದ್ರೌಪದಿಗೆ ಅಭಿಮತವಾದ ಹಾದಿಯಲ್ಲಿ ನಡೆ.'

ಕೃಷ್ಣ! ಭೀಮಾರ್ಜುನರೇನಾದರೂ ಕೋಪಗೊಂಡರೆ ಯಮರಾಜ ಮತ್ತು ಅಂತಕರಂತೆ ಬಹುಭಯಂಕರವಾಗಿ ಕಾಣುತ್ತಾರೆ. ಅವರು ಕುಪಿತರಾದ ಸಮಯದಲ್ಲಿ ದೇವತೆಗಳೇ ಎದುರಾಗಿ ಯುದ್ಧಕ್ಕೆ ಬಂದರೂ ಅವರಿಗೆ ಕೊನೆಯ ಗತಿಯನ್ನು ಕಾಣಿಸುತ್ತಾರೆ. ಈ ವಿಷಯವು ನಿನಗೆ ಬಹುಸ್ಪಷ್ಟವಾಗಿಯೇ ತಿಳಿದಿರುವುದು.

ರಜಸ್ವಲೆಯಾಗಿದ್ದ, ಏಕವಸ್ತ್ರಧರಳಾಗಿದ್ದ ಕೃಷ್ಣೆಯು ತುಂಬಿದ ಮಹಾಸಭೆಗೆ ಬಂದಿದ್ದರಿಂದಲೇ ಭೀಮಾರ್ಜುನರ ಅವಹೇಳನ ವಾದಂತಾಯಿತು. ಅದರ ಜೊತೆಗೆ ಕುರುರಾಜಕುಮಾರರ ಸಮಕ್ಷದಲ್ಲಿಯೇ ದುಃಶಾಸನನು ಭೀಮನನ್ನು ಕುರಿತು ಅನೇಕ ಕಟುವಾಕ್ಯಗಳನ್ನಾಡಿದನು. ಅದನ್ನೂ ನೀನು ಭೀಮಸೇನನ ಸ್ಮರಣೆಗೆ ತರಬೇಕು.

ಜನಾರ್ದನ! ಪುತ್ರಸಹಿತರಾದ ಮತ್ತು ದ್ರೌಪದೀಸಹಿತರಾದ ಪಾಂಡ ವರ ಕುಶಲವನ್ನು ನನ್ನ ಪರವಾಗಿ ಕೇಳು. ನಾನೂ ಕುಶಲಿನಿಯಾಗಿರುವೆನೆಂದು ಅವರೊಡನೆ ಹೇಳು. ನಿನ್ನ ಪ್ರಯಾಣದಲ್ಲಿ ಯಾವ ವಿಧವಾದ ತೊಂದರೆಯೂ ಉಂಟಾಗದಿರಲಿ. ನನ್ನ ಮಕ್ಕಳನ್ನು ರಕ್ಷಿಸು.”

ಜನಮೇಜಯ! ಕುಂತಿಯು, ಶ್ರೀಕೃಷ್ಣನಿಗೆ ಹೀಗೆ ಹೇಳಿದನಂತರದಲ್ಲಿ, ಕ್ರೀಡಿಸುತ್ತಿರುವ ಸಿಂಹದ ಗಮನಕ್ಕೆ ಸದೃಶವಾದ ಗಮನವುಳ್ಳ ಮಹಾಬಾಹುವಾದ ಶ್ರೀಕೃಷ್ಣನು, ಸೋದರತ್ತೆಗೆ ಅಭಿವಾದನಮಾಡಿ ಪ್ರದಕ್ಷಿಣೆ ಮಾಡಿ ಕುಂತಿಯ ಮನೆಯಿಂದ ಹೊರಟನು.

ಕುಂತಿಯ ಮನೆಗೂ ಜೊತೆಯಲ್ಲಿಯೇ ಬಂದಿದ್ದ ಭೀಷ್ಮನೇ ಮೊದಲಾದ ಕುರುಪುಂಗವರನ್ನು ಹಿಂದಕ್ಕೆ ಕಳುಹಿಸಿಕೊಟ್ಟು, ಕರ್ಣನನ್ನು ಮಾತ್ರ ರಥದಲ್ಲಿ ಕುಳ್ಳಿರಿಸಿಕೊಂಡು ಸಾತ್ಯಕಿಯೊಡನೆ ದಾಶಾರ್ಹಕುಲತಿಲಕ ನಾದ ಶ್ರೀಕೃಷ್ಣನು ಹೊರಟುಹೋದನಂತರ–ಕುರುಗಳೆಲ್ಲರೂ ಗುಂಪು-ಗುಂಪಾಗಿ ಅಲ್ಲಲ್ಲಿ ಕಲೆತು ಕೇಶವನಲ್ಲಿ ಕಂಡ ಪರಮಾದ್ಭುತವನ್ನೂ ಪರಮಾಶ್ಚರ್ಯಕರವಾದ ವಿಶ್ವರೂಪದರ್ಶನವನ್ನೂ ಕುರಿತು ಪರಸ್ಪರವಾಗಿ ಮಾತನಾಡಿಕೊಂಡರು.

‘ಅಖಂಡಭೂಮಂಡಲವೇ ಮೃತ್ಯುವಶವಾಗಲಿದೆ. ಮೋಹದಿಂದ ಆವೃತವಾಗಿಬಿಟ್ಟಿದೆ. ದುರ್ಯೋಧನನ ಮೂರ್ಖತೆಯಿಂದಾಗಿ ಈ ಪ್ರಪಂಚವಿನ್ನು ಉಳಿಯಲಾರದು’-

ಎಂಬುದಾಗಿಯೂ ಆ ರಾಜಕುಮಾರರು ಮಾತನಾಡಿಕೊಂಡರು. ಇತ್ತಲಾಗಿ ಕರ್ಣನನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಹಸ್ತಿನಾಪಟ್ಟಣದಿಂದ ಹೊರಟ ಪುರುಷೋತ್ತಮನು ಬಹಳ ಹೊತ್ತಿನವರೆಗೆ ಕರ್ಣನೊಡನೆ ನಾನಾವಿಷಯ ಗಳನ್ನು ಚರ್ಚಿಸುತ್ತಿದ್ದು ಅನಂತರ, ಸರ್ವಯಾದವರಿಗೂ ಆನಂದವನ್ನುಂಟು

ಮಾಡತಕ್ಕ ಶ್ರೀಕೃಷ್ಣನು ರಾಧೇಯನನ್ನೂ ಕಳುಹಿಸಿಕೊಟ್ಟು ಬಹಳ ಶೀಘ್ರವಾಗಿ ಪ್ರಯಾಣಮಾಡುವಂತೆ ಕುದುರೆಗಳನ್ನು ಪ್ರಚೋದಿಸಿದನು (ಕುದುರೆಗಳನ್ನು ಬಹುಶೀಘ್ರವಾಗಿ ಓಡಿಸುವಂತೆ ಸಾರಥಿಗೆ ಹೇಳಿದನು). ಸಾರಥಿಯಾದ ದಾರುಕನಿಂದ ಪ್ರಚೋದಿತವಾದ, ಮನೋವೇಗ-ಮಾರುತವೇಗಗಳಿಗೆ ಸಮಾನವಾದ ವೇಗದಿಂದ ಕೂಡಿದ್ದ ಆ ಕುದುರೆಗಳು ಆಕಾಶವನ್ನೇ ಕುಡಿಯುತ್ತಿವೆಯೋ ಎಂಬ ರೀತಿಯಲ್ಲಿ ಬಹುವೇಗದಿಂದ ಹೋಗುತ್ತಿದ್ದುವು. ವೇಗವಾಗಿ ಹೋಗುವ ಗಿಡಗಹಕ್ಕಿಗಳೋಪಾದಿಯಲ್ಲಿ ಆ ಕುದುರೆಗಳು ಬಹುದೂರದ ದಾರಿಯನ್ನು ಬಹಳ ಬೇಗ ದಾಟಿ ಶಾರ್ಙ್ಗಧನುರ್ಧರನಾದ ಶ್ರೀಕೃಷ್ಣನನ್ನು ಉಪಪ್ಲಾವ್ಯಕ್ಕೆ ಕೊಂಡೊಯ್ದುವು."

೧೩೭ನೆಯ ಅಧ್ಯಾಯವು ಮುಗಿಯಿತು.

೧೩೮ನೆಯ ಅಧ್ಯಾಯ — ಭಗವದ್ಯಾನಪರ್ವ (ಮುಂದುವರಿದಿದೆ.)

## ಭೀಷ್ಮ-ದ್ರೋಣರು ಪುನಃ ದುರ್ಯೋಧನನನ್ನು ಸಮಾಧಾನಪಡಿಸಲು ಯತ್ನಿಸಿದುದು

ವೈಶಂಪಾಯನರು ಹೇಳುತ್ತಾರೆ :

**ಕುನ್ತ್ಯಾಸ್ತು ವಚನಂ ಶ್ರುತ್ವಾ ಭೀಷ್ಮದ್ರೋಣೌ ಮಹಾರಥೌ ।**
**ದುರ್ಯೋಧನಮಿದಂ ವಾಕ್ಯಮೂಚತುಃ ಶಾಸನಾತಿಗಮ್ ॥೧॥**

ಜನಮೇಜಯ! ಕುಂತಿಯು ಶ್ರೀಕೃಷ್ಣನೊಡನೆ ಹೇಳಿದ ಮಾತುಗಳನ್ನು ಕೇಳಿದ ಮಹಾರಥರಾದ ಭೀಷ್ಮ-ದ್ರೋಣರು, ಹಿರಿಯರ ಮಾತನ್ನು ಮೀರಿ ನಡೆಯುವ ದುರ್ಯೋಧನನನ್ನು ಕುರಿತು ಈ ಮಾತುಗಳನ್ನು ಹೇಳಿದರು :

"ಪುರುಷಸಿಂಹನೇ! ಕುಂತಿಯು ಶ್ರೀಕೃಷ್ಣನೊಡನೆ ಆಡಿದ ಅರ್ಥಯುಕ್ತವಾದ, ಧರ್ಮಸಮ್ಮತವಾದ, ಉತ್ತಮೋತ್ತಮವಾದ ಮತ್ತು ಪರಿಣಾಮದಲ್ಲಿ ಅತಿಭಯಂಕರವಾದ ಮಾತುಗಳನ್ನು ನೀನೂ ಕೇಳಿರುವೆ. ವಾಸುದೇವನಿಗೂ ಸಮ್ಮತವಾಗಿರುವ ಕುಂತಿಯ ಮಾತುಗಳನ್ನು ಕುಂತಿಯ ಮಕ್ಕಳು

ನಡೆಸಿಯೇ ತೀರುತ್ತಾರೆ. ಅವರಿಗೆ ಸಲ್ಲಬೇಕಾಗಿರುವ ಅರ್ಧರಾಜ್ಯವನ್ನು ಕೊಟ್ಟಹೊರತಾಗಿ ಅವರೆಂದಿಗೂ ಶಾಂತರಾಗತಕ್ಕವರಲ್ಲ. ಜೂಜಾಟದ ಸಮಯದಲ್ಲಿ ಧರ್ಮಪಾಶದಿಂದ ಬದ್ಧರಾಗಿದ್ದ ಅವರಿಗೆ ನೀನು ಬಹುವಾಗಿ ಕ್ಲೇಶಕೊಟ್ಟೆ. ಆಡಬಾರದುದನ್ನಾಡಿದೆ. ಪಾಂಡವರು ಮಾತ್ರವೇ ನಿನ್ನಿಂದ ಕ್ಲೇಶಿತರಾಗಲಿಲ್ಲ ; ಅವರ ಧರ್ಮಪತ್ನಿಯಾದ ದ್ರೌಪದಿಯೂ ನಿನ್ನಿಂದ ಬಹುವಾಗಿ ಕ್ಲೇಶಿತಳಾದಳು (ಅವಮಾನಿತಳಾದಳು). ಆ ಸಮಯದಲ್ಲಿ ಧರ್ಮಪಾಶದಿಂದ ನಿಬದ್ಧರಾಗಿದ್ದ ಅವರು ಆ ಎಲ್ಲ ಕ್ಲೇಶಗಳನ್ನೂ ಸಹಿಸಿಕೊಂಡು ಸುಮ್ಮನಿದ್ದುಬಿಟ್ಟರು. ತಾಳ್ಮೆಯನ್ನು ತಾಳಿದರು.

ಅಸ್ತ್ರವಿದ್ಯೆಯಲ್ಲಿ ಪಾರಂಗತನಾದ ಅರ್ಜುನನನ್ನೂ, ಯುದ್ಧವನ್ನೇ ಮಾಡಬೇಕೆಂಬ ದೃಢನಿಶ್ಚಯವುಳ್ಳ ಭೀಮಸೇನನನ್ನೂ, ಲೋಕಪ್ರಸಿದ್ಧವಾದ ಗಾಂಡೀವಧನುಸ್ಸನ್ನೂ, ಅಕ್ಷಯತೂಣೀರಗಳನ್ನೂ, ದಿವ್ಯವಾದ ರಥವನ್ನೂ, ದಿವ್ಯವಾದ ಧ್ವಜವನ್ನೂ, ಬಲ-ವೀರ್ಯಸಮನ್ವಿತರಾದ ನಕುಲ-ಸಹದೇವ ರನ್ನೂ, ಸಹಾಯಕನಾದ ಶ್ರೀಕೃಷ್ಣನನ್ನೂ ಹೊಂದಿರುವ ಯುಧಿಷ್ಠಿರನು ಈಗ ನೀನು ರಾಜ್ಯವನ್ನು ಕೊಡದಿದ್ದರೆ ಖಂಡಿತವಾಗಿಯೂ ಕ್ಷಮಿಸುವುದಿಲ್ಲ. ಮಹಾಬಾಹುವೇ! ಈ ಹಿಂದೆ ನಿನ್ನ ಸಮಕ್ಷದಲ್ಲಿಯೇ ಧೀಮಂತನಾದ ಪಾರ್ಥನು ವಿರಾಟನಗರದಲ್ಲಿ ನಮ್ಮೆಲ್ಲರನ್ನೂ ಯುದ್ಧದಲ್ಲಿ ಸೋಲಿಸಿದನು. ಅವನೊಬ್ಬನನ್ನು ಎದುರಿಸಿ ಯುದ್ಧಮಾಡಲಾಗದೇ ನಾವೆಲ್ಲರೂ ಸೋತು ಹೋದೆವು. ವಾನರಕೇತುವಾದ ಅರ್ಜುನನು ನಮ್ಮನ್ನು ಮಾತ್ರವೇ ಸೋಲಿಸಿದ ನೆಂದಲ್ಲ. ಹಿಂದೊಮ್ಮೆ ಇವನು ದೇವತೆಗಳಿಂದಲೂ ಪರಾಜಿತರಾಗದ, ಘೋರಕರ್ಮರಾದ, ನಿವಾತಕವಚರೆಂಬ ದಾನವರನ್ನೂ ರೌದ್ರಾಸ್ತ್ರಪ್ರಯೋಗ ದಿಂದ ಸುಟ್ಟುಹಾಕಿದನು. ಘೋಷಯಾತ್ರೆಯ ಸಮಯದಲ್ಲಿ ಕರ್ಣಪ್ರಭೃತಿ ಗಳಾದ ಅತಿರಥ-ಮಹಾರಥರೆಲ್ಲರೂ ನಿನ್ನೊಡನಿದ್ದರು. ನೀನೂ ಕವಚವನ್ನು ಧರಿಸಿ ಉತ್ತಮೋತ್ತಮವಾದ ರಥದಲ್ಲಿ ಸಜ್ಜಾಗಿ ಕುಳಿತಿದ್ದೆ. ಹೀಗಿದ್ದರೂ ಕೂಡ ನಿನ್ನನ್ನೂ ಗಂಧರ್ವರು ಸೆರೆಹಿಡಿದುಕೊಂಡುಹೋದರು. ಆ ಸಮಯದಲ್ಲಿ ಅರ್ಜುನಪ್ರಮುಖರಾದ ಪಾಂಡವರಿಂದಲೇ ನೀನು ಬಿಡುಗಡೆಹೊಂದಬೇಕಾ ಯಿತು. ಅವರೆಷ್ಟು ಬಲಿಷ್ಠರೆಂಬುದಕ್ಕೆ ಇದೊಂದೇ ನಿದರ್ಶನವು ಸಾಕಲ್ಲವೇ?

ದುರ್ಯೋಧನ! ಪಾಂಡವರೊಡನೆ ಯುದ್ಧಮಾಡಲು ನಿಶ್ಚಯಿಸಿದರೆ ಸರ್ವ ನಾಶವು ನಿಶ್ಚಯ. ಆದುದರಿಂದ ನಿನ್ನ ಅಣ್ಣ-ತಮ್ಮಂದಿರೇ ಆದ ಪಾಂಡವರೊಡನೆ ಸಂಧಾನಕ್ಕೆ ಸಮ್ಮತಿಸು. ಈ ಅಖಂಡಪೃಥ್ವಿಯೇ ನಿನ್ನ ಸಲುವಾಗಿ ಮೃತ್ಯುವಿನ ಕೋರೆದಾಡೆಯೊಳಗೆ ಹೋಗುವುದರಲ್ಲಿದೆ. ಅದನ್ನು ಸಂರಕ್ಷಿಸು. ನಿನ್ನ ಹಿರಿಯಣ್ಣನಾದ ಧರ್ಮರಾಜನು ಧರ್ಮಶೀಲನು ; ದಯಾಳುವು ; ಮಧುರ ಭಾಷಿಯು ಮತ್ತು ವಿದ್ವಾಂಸನು. ಮನಸ್ಸಿನ ಕಲ್ಮಷವನ್ನು ತೊಡೆದುಹಾಕಿ ಅಂತಹ ಧರ್ಮಾತ್ಮನ ಬಳಿಗೆ ಹೋಗಿ ಅವನೊಡನೆ ಶಾಂತಿ ಮಾಡಿಕೋ. ಇದರಿಂದ ಉಭಯಪಕ್ಷದವರಿಗೂ ಶ್ರೇಯಸ್ಸುಂಟಾಗುವುದು. ನೀನು ಧನುಸ್ಸನ್ನು ಬದಿಗಿಟ್ಟು, ಹುಬ್ಬನ್ನು ಗಂಟಿಕ್ಕಿಕೊಳ್ಳದೇ, ಪ್ರಶಾಂತಚಿತ್ತನಾಗಿ, ಕಾಂತಿಯುಕ್ತನಾಗಿ, ಧರ್ಮಾತ್ಮನಾದ ಯುಧಿಷ್ಠಿರನನ್ನು ಸಂಧಿಸಿದ್ದೇ ಆದರೆ–ನಮ್ಮ ಭರತವಂಶದಲ್ಲಿ ನೀನು ಶಾಂತಿಯನ್ನು ಸ್ಥಾಪಿಸಿದಂತಾಗುತ್ತದೆ. ದುರ್ಯೋಧನ! ನೀನು ನಿನ್ನ ಅಮಾತ್ಯರೊಡನೆ ಯುಧಿಷ್ಠಿರನ ಸಮೀಪಕ್ಕೆ ಹೋಗಿ ಹಿಂದಿನಂತೆಯೇ ಯುಧಿಷ್ಠಿರನನ್ನು ಆಲಿಂಗಿಸಿ ಅವನಿಗೆ ಅಭಿವಾದನಮಾಡು. ಭೀಮಪೂರ್ವಜನಾದ ಕುಂತೀಪುತ್ರನಾದ ಯುಧಿಷ್ಠಿರನು–ಅಭಿವಾದನ ಮಾಡುತ್ತಿರುವ ನಿನ್ನನ್ನು (ಕಾಲು ಮುಟ್ಟಿ ನಮಸ್ಕರಿಸುತ್ತಿರುವ ನಿನ್ನನ್ನು) ಸೌಹಾರ್ದದಿಂದ ತನ್ನೆರಡು ಕೈಗಳಿಂದಲೂ ಹಿಡಿದೆತ್ತಿ ಆಲಿಂಗಿಸಿಕೊಳ್ಳಲಿ. ಅನಂತರ ಸಿಂಹಸ್ಕಂಧನಾದ, ದಪ್ಪವಾಗಿಯೂ, ದುಂಡಾಗಿಯೂ ಮತ್ತು ನೀಳವಾಗಿಯೂ ಇರುವ ಮಹಾಭುಜಗಳಿಂದ ಕೂಡಿರುವ, ಯೋಧಶ್ರೇಷ್ಠನಾದ ಭೀಮಸೇನನು ತನ್ನ ಎರಡು ಬಾಹುಗಳಿಂದಲೂ ನಿನ್ನನ್ನು ತಬ್ಬಿಕೊಳ್ಳಲಿ. ಬಳಿಕ ಶಂಖಕ್ಕೆ ಸಮಾನವಾದ ಕುತ್ತಿಗೆಯುಳ್ಳ, ಕಮಲಾಕ್ಷನಾದ, ನಿದ್ರೆಯನ್ನು ಜಯಿಸಿರುವ (ಗುಡಾಕೇಶನಾದ) ಕುಂತೀಪುತ್ರನಾದ ಪಾರ್ಥನು ನಿನಗೆ ಅಭಿವಾದನಮಾಡಲಿ. ಪ್ರಪಂಚದಲ್ಲಿಯೇ ಅನುಪಮವಾದ ರೂಪವಂತರೆಂದೆನಿಸಿಕೊಂಡಿರುವ, ಅಶ್ವಿನೀದೇವತೆಗಳ ಅನುಗ್ರಹದಿಂದ ಜನಿಸಿರುವ, ನರವ್ಯಾಘ್ರರಾದ ಆ ನಕುಲ-ಸಹದೇವರಿಬ್ಬರೂ ನಿನ್ನನ್ನು ಗುರುವೆಂದೇ ಭಾವಿಸಿ ಆದರಪೂರ್ವಕವಾಗಿ ಸತ್ಕರಿಸಿ ನಿನ್ನನ್ನು ಸೇವಿಸಲಿ. ಅನುಪಮವಾದ, ಅಮೋಘವಾದ, ಅನಿರ್ವಾಚ್ಯವಾದ ಆ ದೃಶ್ಯವನ್ನು ನೋಡಿ ದಾಶಾರ್ಹ ಪ್ರಮುಖರಾದ ರಾಜರು ಆನಂದಾಶ್ರುಗಳನ್ನು ಸುರಿಸಲಿ. ನೀನು ನಿನ್ನ

ಆತ್ಮಾಭಿಮಾನವನ್ನು ಬದಿಗೊತ್ತಿ ತಮ್ಮಂದಿರೊಡನೆ ಈಗಲೇ ಅವರ ಸಮೀಪಕ್ಕೆ ಹೋಗು. ಅನಂತರದಲ್ಲಿ ನೀನು ನಿನ್ನ ಅಣ್ಣ-ತಮ್ಮಂದಿರೊಡನೆ ಸೇರಿಕೊಂಡು (ಕೌರವ-ಪಾಂಡವರಿಂದ ಸಮೇತನಾಗಿ) ಈ ಅಖಂಡ ಭೂಮಂಡಲವನ್ನೂ ಶಾಸನಮಾಡು. ನಿನ್ನ ಪರವಾಗಿ ಯುದ್ಧಮಾಡಲು ಬಂದಿರುವ ಈ ರಾಜರೆಲ್ಲರೂ ಕೌರವ-ಪಾಂಡವರ ನಡುವೆ ಉಂಟಾದ ಸಂಧಾನದಿಂದ ಸಂತೋಷಭರಿತರಾಗಿ ಪರಸ್ಪರವಾಗಿ ಆಲಿಂಗನೆಮಾಡಿಕೊಂಡು ತಮ್ಮ-ತಮ್ಮ ದೇಶಗಳಿಗೆ ಪ್ರಯಾಣ ಮಾಡಲಿ. ರಾಜೇಂದ್ರ! ಯುದ್ಧವನ್ನು ನಿಲ್ಲಿಸು. ಸುಹೃದರಾದವರು ಮಾತ್ರವೇ ನಿನ್ನನ್ನು ಯುದ್ಧದಿಂದ ತಡೆಯುತ್ತಿದ್ದಾರೆ. ಅವರ ಮಾತನ್ನು ಕೇಳು. ಯುದ್ಧವೇನಾದರೂ ನಡೆದಿದ್ದೇ ಆದರೆ ಆ ಯುದ್ಧದಿಂದ ಸರ್ವಕ್ಷತ್ರಿಯರ ನಾಶವೇ ಆಗುವುದೆಂದು ಕಂಡುಬರುತ್ತಿದೆ. ವಾತಾವರಣದಲ್ಲಿಯೂ ಕ್ಷತ್ರಿಯ ನಾಶಕವಾದ ಅನೇಕಸೂಚನೆಗಳು ಕಂಡುಬರುತ್ತಿವೆ. ನಕ್ಷತ್ರಗಳು ಪ್ರತಿಕೂಲ ವಾಗಿವೆ. ಮೃಗ-ಪಕ್ಷಿಗಳು ದಾರುಣವಾಗಿ ಧ್ವನಿಮಾಡುತ್ತಿವೆ. ಅನೇಕವಿಧವಾದ ಅಪಶಕುನಗಳು ಕಾಣಿಸಿಕೊಳ್ಳುತ್ತಿವೆ.

ವಿಶೇಷವಾಗಿ ನಮ್ಮ ಮನೆಗಳಲ್ಲಿಯೂ ಅನೇಕವಿಧವಾದ ದುರ್ನಿಮಿತ್ತ ಗಳು ಕಂಡುಬರುತ್ತಿವೆ. ನಿನ್ನ ಸೇನೆಯು ಜಾಜ್ವಲ್ಯಮಾನವಾದ ಉಲ್ಕೆಗಳಿಂದ (ಬಾಲಚುಕ್ಕಿ) ಬಾಧಿಸಲ್ಪಡುತ್ತಿರುವಂತೆ ನಮಗೆ ಕಾಣಿಸುತ್ತಿದೆ. ರಾಜೇಂದ್ರ! ಗಜಾಶ್ವಗಳೇ ಮೊದಲಾದ ನಮ್ಮ ಎಲ್ಲ ವಾಹನಗಳೂ ಅಪ್ರಸನ್ನವಾಗಿರು ವಂತೆಯೂ ಮತ್ತು ಅಳುತ್ತಿರುವಂತೆಯೂ ಕಾಣಿಸಿಕೊಳ್ಳುತ್ತಿವೆ. ನಿನ್ನ ಸೈನ್ಯವನ್ನು ರಣಹದ್ದುಗಳು ಆವರಿಸಿ ಕುಳಿತಿರುವ ದೃಶ್ಯವು ಕಾಣುತ್ತಿದೆ. ಈ ನಗರವೂ ಮತ್ತು ರಾಜಭವನಗಳೂ ಹಿಂದಿನಂತೆ ಶೋಭಿಸುತ್ತಿಲ್ಲ. ದಿಗ್ದಾಹವೆಂಬ ಬಾಲಚುಕ್ಕಿಯು ಎಲ್ಲ ದಿಕ್ಕುಗಳಲ್ಲಿಯೂ ಕಾಣಿಸಿಕೊಳ್ಳುತ್ತಿದೆ. ಆಗ್ನೇಯ ದಿಕ್ಕಿನಲ್ಲಿ ಗುಳ್ಳೇನರಿಗಳು ಅಮಂಗಳಸೂಚಕವಾಗಿ ಧ್ವನಿಮಾಡುತ್ತಾ ಸುತ್ತುತ್ತಿರುವ ದೃಶ್ಯಗಳು ಕಾಣುತ್ತಿವೆ. ಇವುಗಳೆಲ್ಲವೂ ಕ್ಷತ್ರಿಯವಿನಾಶದ ಸೂಚನೆಗಳಾಗಿವೆ. ಆದುದರಿಂದ ನಾವು ಹೇಳಿದಂತೆ ಕೇಳು. ನಿನ್ನ ತಾಯಿ-ತಂದೆಗಳು ಮತ್ತು ಹಿತೈಷಿಗಳಾದ ನಾವು ಹೇಗೆ ಹೇಳುತ್ತೇವೆಯೋ ಹಾಗೆ ನಡೆದುಕೋ. ಇದರಿಂದ ಪ್ರಪಂಚವೇ ಮೃತ್ಯುವಿನ ದವಡೆಯಿಂದ ಪಾರಾ ದೀತು. ಈ ಸಮಯದಲ್ಲಿ ಶಾಂತಿಮಾಡಿಕೊಳ್ಳುವುದು ಅಥವಾ ಯುದ್ಧ

ಮಾಡುವುದು ನಿನ್ನ ನಿರ್ಧಾರಕ್ಕೆ ಸೇರಿದುದಾಗಿದೆ. ಶತ್ರುಕರ್ಶನನೇ! ಒಂದು ವೇಳೆ ನೀನು ಸುಹೃದರ ಮಾತನ್ನು ಕೇಳದೇ ಪಾಂಡವರೊಡನೆ ಯುದ್ಧವನ್ನೇ ಮಾಡಲು ನಿಶ್ಚಯಿಸಿದರೆ–ಮುಂದೆ ಪಾರ್ಥನ ಬಾಣಗಳಿಂದ ಪೀಡಿತವಾದ ಸೈನ್ಯವನ್ನು ನೋಡಿ ಪರಿತಾಪಪಡುವೆ. ಇದು ನಿಶ್ಚಯ. ನೀನು ನನ್ನ ಮಾತಿಗೆ ವಿಪರೀತವಾಗಿ (ವಿರೋಧವಾಗಿ) ನಡೆದುಕೊಂಡಿದ್ದೇ ಆದರೆ ಯುದ್ಧದಲ್ಲಿ ಬಲಿಷ್ಠನಾದ ಭೀಮಸೇನನ ಸಿಂಹನಾದಗಳನ್ನೂ, ಅರ್ಜುನನ ಗಾಂಡೀವದ ಟೇಂಕಾರಧ್ವನಿಗಳನ್ನೂ ಕೇಳಿದ ಮೇಲಾದರೂ ನನ್ನ ಈ ಮಾತುಗಳನ್ನು ಸ್ಮರಣೆಗೆ ತಂದುಕೊಳ್ಳುವೆ."

೧೩೮ನೆಯ ಅಧ್ಯಾಯವು ಮುಗಿಯಿತು.

೧೩೯ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ.)

## ಭೀಷ್ಮನು ದುರ್ಯೋಧನನಿಗೆ ಸಮಾಧಾನವನ್ನು ಹೇಳುತ್ತಿದ್ದಂತೆಯೇ ದ್ರೋಣರೂ ಪಾಂಡವರೊಡನೆ ಸಂಧಾನ ಮಾಡಿಕೊಳ್ಳುವಂತೆ ಹೇಳಿದುದು

ಜನಮೇಜಯ! ಭೀಷ್ಮ-ದ್ರೋಣರ ಮಾತನ್ನು ಕೇಳುತ್ತಿರುವಾಗಲೇ ದುರ್ಯೋಧನನು ಅವರ ಮಾತಿಗೆ ಉಪೇಕ್ಷೆಯನ್ನೇ ತೋರುತ್ತಾ ಬಂದನು. ದೃಷ್ಟಿಯು ಓರೆಯಾಯಿತು. ಮುಖವು ನೆಲದ ಕಡೆಗೆ ಬಾಗಿತು. ದುರ್ಯೋಧನನ ಎರಡು ಹುಬ್ಬುಗಳೂ ಒಂದಾಗಿಬಿಟ್ಟುವು. ಭೀಷ್ಮ-ದ್ರೋಣರ ಮಾತಿಗೆ ಉತ್ತರವನ್ನೇ ಕೊಡಲಿಲ್ಲ. ದುರ್ಯೋಧನನು ಉದಾಸೀನಭಾವದಿಂದಿದ್ದುದನ್ನು ನೋಡಿ ಮನುಷ್ಯಶ್ರೇಷ್ಠರಾದ ಭೀಷ್ಮ-ದ್ರೋಣರು ಪರಸ್ಪರವಾಗಿ ನೋಡುತ್ತಾ ಕೇವಲ ವೀಕ್ಷಣೆಯಿಂದಲೇ ಅಭಿಪ್ರಾಯದ ವಿನಿಮಯಮಾಡಿಕೊಂಡು ಅವನ ಸಮೀಪದಲ್ಲೇ ನಿಂತು ಈ ಮಾತುಗಳನ್ನು ಹೇಳಿದರು :

ಮೊದಲು ಭೀಷ್ಮನೇ ನಿಟ್ಟುಸಿರುಬಿಡುತ್ತಾ ಈ ಮಾತುಗಳನ್ನು ಹೇಳಿದನು :

**ಶುಶ್ರೂಷುಮನಸೂಯಂ ಚ ಬ್ರಹ್ಮಣ್ಯಂ ಸತ್ಯವಾದಿನಮ್ ।**
**ಪ್ರತಿಯೋತ್ಸ್ಯಾಮಹೇ ಪಾರ್ಥಮತೋ ದುಃಖತರಂ ನು ಕಿಮ್ ॥**

"ಗುರುಜನರ ಶುಶ್ರೂಷೆಯಲ್ಲಿಯೇ ಆಸಕ್ತನಾದ, ಅಸೂಯಾರಹಿತನಾದ, ಯಾರಲ್ಲಿಯೂ ದೋಷವನ್ನೆಣಿಸದ, ಬ್ರಾಹ್ಮಣಪ್ರಿಯನಾದ, ಸತ್ಯವಾದಿಯಾದ ಯುಧಿಷ್ಠಿರನನ್ನು ಎದುರಿಸಿ ನಿಂತು ನಾವು ಯುದ್ಧ ಮಾಡಬೇಕಾಗಿದೆ. ಇದಕ್ಕಿಂತಲೂ ದುಃಖತರವಾದುದು ಮತ್ತೇನಿದೆ?"

ದ್ರೋಣರೂ ಭೀಷ್ಮರಂತೆಯೇ ನಿಟ್ಟುಸಿರುಬಿಡುತ್ತಾ ಹೇಳಿದರು :

**ಅಶ್ವತ್ಥಾಮ್ನಿ ಯಥಾ ಪುತ್ರೇ ಭೂಯೋ ಮಮ ಧನಂಜಯೇ ।**
**ಬಹುಮಾನಃ ಪರೋ ರಾಜನ್ಸಂನತಿಶ್ಚ ಕಪಿಧ್ವಜೇ ॥೪॥**

"ಮಹಾರಾಜ! ನನ್ನ ಪುತ್ರನಾದ ಅಶ್ವತ್ಥಾಮನ ಮೇಲೆ ನನಗೆ ಎಷ್ಟು ಪ್ರೀತಿಯಿರುವುದೋ ಅದಕ್ಕಿಂತಲೂ ಹೆಚ್ಚಿನ ಪ್ರೀತಿಯು ಧನಂಜಯನ ಮೇಲಿದೆ. ಕಪಿಧ್ವಜನಾದ ಅರ್ಜುನನಿಗೂ ನನ್ನ ವಿಷಯದಲ್ಲಿ ವಿಶೇಷವಾದ ಮರ್ಯಾದೆಯಿದೆ. ವಿನಯಭಾವವಿದೆ.

**ತಂ ಚ ಪುತ್ರಾತ್ಪ್ರಿಯತಮಂ ಪ್ರತಿಯೋತ್ಸ್ಯೇ ಧನಂಜಯಮ್ ।**
**ಕ್ಷಾತ್ರಂ ಧರ್ಮಮನುಷ್ಠಾಯ ಧಿಗಸ್ತು ಕ್ಷತ್ರಜೀವಿಕಾಮ್ ॥೫॥**

ಪುತ್ರನಿಗಿಂತಲೂ ಪ್ರೀತಿಪಾತ್ರನಾದ ಧನಂಜಯನನ್ನು ಎದುರಿಸಿ ಕ್ಷತ್ರಧರ್ಮಾನುಸಾರವಾಗಿ ಯುದ್ಧಮಾಡಬೇಕಾಗಿದೆ. ಕ್ಷತ್ರಿಯವೃತ್ತಿಯ ಮೂಲಕ ನಡೆಸುತ್ತಿರುವ ನನ್ನ ಜೀವಿಕೆಗೇ ಧಿಕ್ಕಾರವಿರಲಿ!

ಯಾವನಿಗೆ ಸಮಾನರಾದ ಧನುರ್ಧಾರಿಗಳು ಲೋಕದಲ್ಲಿಯೇ ಮತ್ತೊಬ್ಬರಿಲ್ಲವೋ–ಅಂತಹ ಅರ್ಜುನನು ನನ್ನ ಅನುಗ್ರಹದಿಂದಾಗಿ ಇತರ ಧನುರ್ಧಾರಿಗಳಿಗಿಂತಲೂ ಹೆಚ್ಚಿನ ಶ್ರೇಯೋವಂತನಾಗಿದ್ದಾನೆ. (ನನ್ನ ಅನುಗ್ರಹದಿಂದಲೇ ಉಳಿದ ಬಿಲ್ಗಾರರಿಗಿಂತಲೂ ಶ್ರೇಷ್ಠನಾಗಿದ್ದಾನೆ.)

**ಮಿತ್ರಧ್ರುಗ್ದುಷ್ಟಭಾವಶ್ಚ ನಾಸ್ತಿಕೋಽಥಾನೃಜುಃ ಶಠಃ ।**
**ನ ಸತ್ಸು ಲಭತೇ ಪೂಜಾಂ ಯಜ್ಞೇ ಮೂರ್ಖ ಇವಾಗತಃ ॥೬॥**

ಯಾವ ರೀತಿಯಲ್ಲಿ ಯಜ್ಞಕ್ಕೆ ಮೂರ್ಖಬ್ರಾಹ್ಮಣನೊಬ್ಬನು ಆಗಮಿ

ಸಿದರೆ ಮಾನ್ಯನಾಗುವುದಿಲ್ಲವೋ–ಅದೇ ರೀತಿಯಲ್ಲಿ ಮಿತ್ರದ್ರೋಹಿಯಾದವನು, ದುಷ್ಟಭಾವವುಳ್ಳವನು, ನಾಸ್ತಿಕನು, ವಕ್ರಬುದ್ಧಿಯವನು, ಶಠನು (ಕುತ್ಸಿತನು) ಸತ್ಪುರುಷರಲ್ಲಿ ಮಾನ್ಯನಾಗುವುದಿಲ್ಲ.

**ವಾರ್ಯಮಾಣೋಽಪಿ ಪಾಪೇಭ್ಯಃ ಪಾಪಾತ್ಮಾ ಪಾಪಮಿಚ್ಛತಿ ।**
**ಚೋದ್ಯಮಾನೋಽಪಿ ಪಾಪೇನ ಶುಭಾತ್ಮಾ ಶುಭಮಿಚ್ಛತಿ ॥೮॥**

ದುರ್ಯೋಧನ! ಪಾಪಾತ್ಮರ ಮತ್ತು ಶುಭಾತ್ಮರ ಗುಣ-ಕರ್ಮಗಳು ಈ ರೀತಿಯಾಗಿರುತ್ತವೆ : ಸುಹೃದರು ಪಾಪಕರ್ಮಗಳನ್ನು ಮಾಡಬೇಡವೆಂದು ಪಾಪಾತ್ಮನನ್ನು ಪದೇಪದೇ ತಡೆಯುತ್ತಿದ್ದರೂ ಅವನು ಪಾಪಕರ್ಮಗಳನ್ನೇ ಮಾಡಲು ಇಚ್ಛಿಸುತ್ತಾನೆ. ಶುಭಾತ್ಮನು ಪಾಪಾತ್ಮನೊಬ್ಬನಿಂದ ಪಾಪಕರ್ಮಗಳನ್ನು ಮಾಡಲು ಪ್ರಚೋದಿತನಾದರೂ ಶುಭಕರ್ಮಗಳನ್ನೇ ಮಾಡಲು ಇಚ್ಛಿಪಡುತ್ತಾನೆ. ಇದಕ್ಕೆ ನಿದರ್ಶನವಾಗಿ ನೀನು ಪಾಂಡವರ ವಿಷಯದಲ್ಲಿ ಅವರು ಹುಟ್ಟಿದಾಗಿನಿಂದಲೂ ಮೋಸ-ವಂಚನೆಗಳಿಂದಲೇ ನಡೆದುಕೊಳ್ಳುತ್ತಿರುವೆ.

ಆದರೆ ಅವರು ಮಾತ್ರ ನಿನ್ನ ವಿಷಯದಲ್ಲಿ ಸೌಜನ್ಯದಿಂದಲೇ ವರ್ತಿಸುತ್ತಿದ್ದಾರೆ. ನಿನಗೂ ಪ್ರಿಯವುಂಟಾಗಬೇಕೆಂಬ ಅಭಿಪ್ರಾಯವೇ ಅವರಿಗಿದೆ. ನೀನವರನ್ನು ಶತ್ರುಗಳೆಂದು ಪರಿಗಣಿಸಿದ್ದರೂ ನಿನ್ನನ್ನವರು ಮಿತ್ರನೆಂದೇ ತಿಳಿದಿದ್ದಾರೆ. ನಿನ್ನ ನಿಜವಾದ ಶತ್ರುಗಳು ಯಾರೆಂಬುದನ್ನು ತಿಳಿಯದೇ ಸತ್ಕುಲಪ್ರಸೂತರನ್ನೂ, ಸದ್ವ್ಯವಹಾರವುಳ್ಳವರನ್ನೂ ಶತ್ರುಗಳೆಂದು ನೀನು ಪರಿಗಣಿಸಿರುವೆ. ನಿನ್ನ ದೋಷಗಳೇ ನಿನಗೆ ನಿಜವಾದ ಶತ್ರುಗಳು. ಭರತಸತ್ತಮನೇ! ಇವುಗಳೇ ನಿನಗೆ ಅಹಿತವನ್ನುಂಟುಮಾಡತಕ್ಕವುಗಳು. ಕುರುವಂಶದಲ್ಲಿರುವ ವೃದ್ಧರೆಲ್ಲರೂ ನಿನಗೆ ಸಮಾಧಾನವನ್ನು ಹೇಳಿರುವರು. ಧೃತರಾಷ್ಟ್ರ, ಗಾಂಧಾರೀ, ಭೀಷ್ಮ, ನಾನು, ವಿದುರ ಮತ್ತು ಶ್ರೀಕೃಷ್ಣ–ಎಲ್ಲರೂ ನಿನಗೆ ಶ್ರೇಯಸ್ಸಿನ ಮಾತುಗಳನ್ನೇ ಹೇಳಿದ್ದೇವೆ. ಆದರೂ ನೀನದನ್ನು– 'ಇವರು ಹೇಳುವುದು ಶ್ರೇಯಸ್ಸಿಗೆ ಸಾಧನವಾದ ಮಾತು'–ಎಂದು ಭಾವಿಸುತ್ತಿಲ್ಲ. ನೀನು ಬಹಳ ಉದ್ಧತನಾಗಿರುವೆ. ಈ ನಿನ್ನ ಔದ್ಧತ್ಯಕ್ಕೆ ಕಾರಣ ನಿನ್ನಲ್ಲಿರುವ ಬಲ. 'ನನ್ನಲ್ಲಿ ಅಪಾರಬಲವಿದೆ. ನಾನೀ ಯುದ್ಧಸಾಗರದಿಂದ ಪಾರಾಗಿಬಿಡುತ್ತೇನೆ' – ಎಂದು ನೀನು ಭಾವಿಸಿರುವೆ.

ವರ್ಷರ್ತುವಿನಲ್ಲಿ ಮೊಸಳೆ ಮತ್ತು ಮೀನುಗಳಿಂದ ತುಂಬಿರುವ ಅಗಾಧವಾದ ಗಂಗಾಪ್ರವಾಹವನ್ನು ಬಾಹುಬಲದಿಂದ ಈಜಿಕೊಂಡು ದಾಟಲಿಚ್ಛಿಸುವವನಂತೆ–ನೀನು ಪಾಂಡವರ ಬಲವನ್ನು ಅದು ನಿನ್ನ ಬಲಕ್ಕಿಂತಲೂ ಅಲ್ಪಸಂಖ್ಯೆಯಲ್ಲಿದೆಯೆಂಬ ಒಂದೇ ಒಂದು ಕಾರಣದಿಂದ–ಪರಾಜಯಗೊಳಿಸಲಿಚ್ಛಿಸಿರುವೆ. ಒಬ್ಬನು ವಿಸರ್ಜಿಸಿರುವ ಬಟ್ಟೆಯನ್ನು ನೀನುಟ್ಟುಕೊಂಡು ಅದು ನಿನ್ನದೆಂದೇ ಹೇಳಿಕೊಳ್ಳುತ್ತಿರುವೆ. ಪರಿತ್ಯಜಿಸಲ್ಪಟ್ಟ ಮಾಲೆಯ ರೂಪವಾಗಿರುವ ಯುಧಿಷ್ಠಿರನ ರಾಜ್ಯಶ್ರೀಯನ್ನಿಂದು ಲೋಭದಿಂದ ನಿನ್ನದೆಂದೇ ಭಾವಿಸಿಬಿಟ್ಟಿರುವೆ.

(ಈ ರಾಜ್ಯವು ಕಳಚಿಟ್ಟು ಹೋಗಿರುವ ಬಟ್ಟೆ. ಯುಧಿಷ್ಠಿರನಿದನ್ನು ತಾತ್ಕಾಲಿಕವಾಗಿ ನಿನ್ನಲ್ಲಿ ನ್ಯಾಸರೂಪವಾಗಿಟ್ಟಿದ್ದನು. ಬಟ್ಟೆಯ ರೂಪದ ಈ ರಾಜ್ಯವನ್ನು ನೀನು ಕಾಪಾಡಿಕೊಂಡಿರಬೇಕಾಗಿತ್ತೇ ಹೊರತು ನೀನಿದನ್ನು ಉಟ್ಟುಕೊಳ್ಳಬಾರದಾಗಿತ್ತು. ಬೇರೆಯವರ ವಸ್ತ್ರವನ್ನು ಉಟ್ಟುಕೊಳ್ಳುವುದು ಒಳ್ಳೆಯ ಸಂಪ್ರದಾಯವಲ್ಲ. ಈಗ ನೀನು ಉಟ್ಟುಕೊಂಡಿರುವ ಅವನ ಬಟ್ಟೆಯನ್ನು ನಿನ್ನದೆಂದೇ ಹೇಳಿಕೊಳ್ಳುತ್ತಿರುವೆ. ಇದು ಅನ್ಯಾಯದ ಪರಮಾವಧಿಯಾಗಿದೆ.)

ಈಗವನು ಏಳು ಅಕ್ಷೌಹಿಣೀಸೈನ್ಯವನ್ನು ಮಾತ್ರವೇ ಕೂಡಿಸಿಟ್ಟು ಕೊಂಡಿರುವನೆಂದೂ–ನಿನ್ನಲ್ಲಿ ಹನ್ನೊಂದು ಅಕ್ಷೌಹಿಣೀಸೈನ್ಯವಿದೆಯೆಂದೂ ನೀನು ಮದಿಸಿರಬಹುದು. ನಾನು ಹೇಳಿದಂತೆ ನಿನ್ನ ಸೈನ್ಯಸಂಖ್ಯಾಬಲವು ಪಾರ್ಥನ ಮುಂದೆ ಕೆಲಸಕ್ಕೆ ಬಾರದುದಾಗುತ್ತದೆ. ಪಾಂಡವರಿಗೆ ಯಾರ ಸಹಾಯವೂ ಇಲ್ಲದಿದ್ದರೂ ಅವರು ವಿಜಯಿಗಳಾಗುವ ಸಾಮರ್ಥ್ಯವನ್ನು ಪಡೆದಿರುತ್ತಾರೆ.

**ದ್ರೌಪದೀಸಹಿತಂ ಪಾರ್ಥಂ ಸಾಯುಧೈರ್ಭ್ರಾತೃಭಿರ್ವೃತಮ್ ।**
**ವನಸ್ಥಮಪಿ ರಾಜ್ಯಸ್ಥಃ ಪಾಣ್ಡವಂ ಕೋ ವಿಜೇಷ್ಯತಿ ॥೧೩॥**

ದ್ರೌಪದೀಸಹಿತನಾದ, ಆಯುಧಪಾಣಿಗಳಾದ ಅನುಜರಿಂದ ಪರಿವೃತ ನಾದ ಯುಧಿಷ್ಠಿರನು ಕಾಡಿನಲ್ಲೇ ಇದ್ದರೂ ರಾಜ್ಯಸ್ಥನಾದ ಯಾವನು ತಾನೇ ಧರ್ಮರಾಜನನ್ನು ಜಯಿಸಲು ಸಮರ್ಥನಾಗಿದ್ದಾನೆ? ಯಾವನ

ಆಜ್ಞಾಪಾಲಕರಾಗಿ ಸರ್ವಯಕ್ಷರೂ ಸೇವಕರಂತೆ ನಿಂತಿರುವರೋ–ಅಂತಹ ಕುಬೇರನನ್ನು ಸಂಧಿಸಿ ಯುಧಿಷ್ಠಿರನು ಅವನಿಗಿಂತಲೂ ಹೆಚ್ಚು ವಿರಾಜಮಾನನಾದನು. (ಕುಬೇರನಿಗೂ-ಭೀಮನಿಗೂ ಸೌಗಂಧಿಕಪುಷ್ಪಕ್ಕಾಗಿ ನಡೆದ ಯುದ್ಧದಲ್ಲಿ ಭೀಮನೇ ಜಯಶಾಲಿಯಾದನು. ಕುಬೇರನನ್ನು ಸೋಲಿಸಿದ ಕೀರ್ತಿಯು ಯುಧಿಷ್ಠಿರನಿಗೆ ತಾನೇ ಸಲ್ಲಬೇಕು!)

ಅನಂತರ ಯುಧಿಷ್ಠಿರನು ಕುಬೇರನ ಭವನಕ್ಕೆ ಹೋಗಿ ಹೇರಳವಾದ ರತ್ನಗಳನ್ನೂ ತಂದನು. ಕುಬೇರನನ್ನೇ ಸೋಲಿಸಿರುವ ಪಾಂಡವರು ಸಮೃದ್ಧವಾದ ಈ ರಾಷ್ಟ್ರವನ್ನು ಆಕ್ರಮಿಸಿ ತಮ್ಮ ಪಿತ್ರ್ಯಂಶದ ರಾಜ್ಯವನ್ನು ಪಡೆದುಕೊಳ್ಳಲಿಚ್ಛಿಸಿದ್ದಾರೆ.

ನಮ್ಮಿಬ್ಬರ (ಭೀಷ್ಮ-ದ್ರೋಣರ) ವಿಷಯದಲ್ಲಿ ಹೇಳುವುದಾದರೆ ನಾವು ದಾನಮಾಡಿದ್ದೇವೆ. ಅನೇಕ ಯಜ್ಞ-ಯಾಗಾದಿಗಳನ್ನೂ ಮಾಡಿರುತ್ತೇವೆ. ಅಧ್ಯಯನಮಾಡಿದ್ದೇವೆ. ಬ್ರಾಹ್ಮಣರಿಗೆ ಯಥೇಚ್ಛವಾಗಿ ದಕ್ಷಿಣೆಯನ್ನು ಕೊಟ್ಟು ತೃಪ್ತಿಪಡಿಸಿದ್ದೇವೆ. ನಮ್ಮ ಆಯುಷ್ಯವೂ ಮುಗಿಯುತ್ತಾ ಬಂದಿದೆ. ನಾವಿಬ್ಬರೂ ಕೃತಕೃತ್ಯರಾಗಿದ್ದೇವೆ. ನಾವಿನ್ನು ಯಾವ ವಿಧವಾದ ಸುಖವನ್ನೂ ಈ ಭೂಮಿಯಲ್ಲಿ ಅನುಭವಿಸಬೇಕಾಗಿಲ್ಲ. ಮಾಡಬೇಕಾದ ಕರ್ತವ್ಯಗಳನ್ನು ಮಾಡಿಯಾಗಿದೆ. ಮುಂಬರುವ ಯುದ್ಧದಲ್ಲಿ ಮೃತ್ಯುವನ್ನಪ್ಪಲು ಸಿದ್ಧರಾಗಿದ್ದೇವೆ. ಆದರೆ ನಿನ್ನ ವಿಷಯವು ಹಾಗಲ್ಲ, ದುರ್ಯೋಧನ!

**ತ್ವಂ ತು ಹಿತ್ವಾ ಸುಖಂ ರಾಜ್ಯಂ ಮಿತ್ರಾಣಿ ಚ ಧನಾನಿ ಚ ।**
**ವಿಗ್ರಹಂ ಪಾಣ್ಡವೈಃ ಕೃತ್ವಾ ಮಹದ್ವ್ಯಸನಮಾಪ್ಸ್ಯಸಿ ॥೧೭॥**

ಪಾಂಡವರೊಡನೆ ಯುದ್ಧಮಾಡಲು ಹೋಗಿ ಸುಖ, ರಾಜ್ಯ, ಮಿತ್ರರು, ಐಶ್ವರ್ಯ–ಎಲ್ಲವನ್ನೂ ಕಳೆದುಕೊಂಡು ಮಹಾಸಂಕಟದಲ್ಲಿ ಬೀಳುವೆ. ಪಾಂಡವರನ್ನು ಗೆಲ್ಲುವೆನೆಂದು ಯಾವ ಕಾರಣದಿಂದ ಭಾವಿಸುವೆ? ದುರ್ಯೋಧನ!

**ದ್ರೌಪದೀ ಯಸ್ಯ ಚಾಶಾಸ್ತೇ ವಿಜಯಂ ಸತ್ಯವಾದಿನೀ ।**
**ತಪೋಘೋರವ್ರತಾ ದೇವೀ ಕಥಂ ಜೇಷ್ಯಸಿ ಪಾಣ್ಡವಮ್ ॥೧೮॥**

ಘೋರವಾದ ವ್ರತಗಳನ್ನೂ ಮತ್ತು ತಪಸ್ಸನ್ನೂ ಮಾಡಿರುವ ಸತ್ಯವಾದಿನಿಯಾದ ದ್ರೌಪದೀದೇವಿಯು ಯಾರ ವಿಜಯಕ್ಕಾಗಿ ಶುಭಾಶಂಸನೆಗಳನ್ನು ಕೋರುತ್ತಿರುವಳೋ-ಅಂತಹವರಿಗೆ ವಿಜಯವೆಂಬುದು ಸ್ವತಃ ಸಿದ್ಧವಾದುದು. ಹೀಗಿರುವಾಗ ನೀನು ಧರ್ಮರಾಜನನ್ನು ಹೇಗೆ ತಾನೇ ಗೆಲ್ಲುವೆ?

**ಮನ್ತ್ರೀ ಜನಾರ್ದನೋ ಯಸ್ಯ ಭ್ರಾತಾ ಯಸ್ಯ ಧನಂಜಯಃ ।**
**ಸರ್ವಶಸ್ತ್ರಭೃತಾಂ ಶ್ರೇಷ್ಠಃ ಕಥಂ ಜೇಷ್ಯಸಿ ಪಾಣ್ಡವಮ್ ॥೧೯॥**

ಯಾವನಿಗೆ ಸಾಕ್ಷಾತ್ ಜನಾರ್ದನನೇ ಮಂತ್ರಿಯಾಗಿರುವನೋ, ಯಾವನ ತಮ್ಮನು ಎಲ್ಲ ಸರ್ವಶಸ್ತ್ರಧಾರಿಗಳಲ್ಲೂ ಶ್ರೇಷ್ಠನಾದ ಧನಂಜಯನಾಗಿರುವನೋ-ಅಂತಹ ಯುಧಿಷ್ಠಿರನನ್ನು ನೀನು ಹೇಗೆ ತಾನೇ ಜಯಿಸಬಲ್ಲೆ?

**ಸಹಾಯಾ ಬ್ರಾಹ್ಮಣಾ ಯಸ್ಯ ಧೃತಿಮನ್ತೋ ಜಿತೇನ್ದ್ರಿಯಾಃ ।**
**ತಮುಗ್ರತಪಸಂ ವೀರಂ ಕಥಂ ಜೇಷ್ಯಸಿ ಪಾಣ್ಡವಮ್ ॥೨೦॥**

ಜಿತೇಂದ್ರಿಯರಾದ ಮತ್ತು ಬುದ್ಧಿವಂತರಾದ ಬ್ರಾಹ್ಮಣರು ಯಾವನಿಗೆ ಸಹಾಯಕರಾಗಿದ್ದಾರೆಯೋ, ಯಾವನು ಉಗ್ರತಪಸ್ವಿಯೂ ಮಹಾವೀರನೂ ಆಗಿರುವನೋ-ಅಂತಹ ಯುಧಿಷ್ಠಿರನನ್ನು ನೀನು ಹೇಗೆತಾನೇ ಜಯಿಸುವೆ?

ತಮ್ಮ ಸುಹೃದರು ದುಃಖಸಾಗರದಲ್ಲಿ ಮುಳುಗಿಹೋಗುತ್ತಿರುವಾಗ ಕಲ್ಯಾಣವನ್ನಿಚ್ಛಿಸುವ ಸುಹೃದರಿಂದ ಯಾವ ಕಾರ್ಯವು ಮಾಡಲ್ಪಡಬೇಕೋ ಆ ಕಾರ್ಯವನ್ನು ನಾನಿಂದು ಮಾಡುತ್ತಿದ್ದೇನೆ. ನನ್ನ ಬಂಧು-ಮಿತ್ರರೆಲ್ಲರೂ ಮೃತ್ಯುವಿನ ದವಡೆಯಲ್ಲಿ ಬೀಳುತ್ತಿರುವಾಗ ಅದನ್ನು ತಪ್ಪಿಸಲು ಪ್ರಯತ್ನಿಸುವುದು ನನ್ನ ಮುಖ್ಯಕರ್ತವ್ಯವಾಗಿರುತ್ತದೆ. ಆದುದರಿಂದ ಹೇಳಿದುದನ್ನೇ ಪುನಃಪುನಃ ಹೇಳುತ್ತೇನೆ.

**ಅಲಂ ಯುದ್ಧೇನ ತೈರ್ವೀರೈಃ ಶಾಮ್ಯ ತ್ವಂ ಕುರುವೃದ್ಧಯೇ ।**
**ಮಾ ಗಮಃ ಸಸುತಾಮಾತ್ಯಃ ಸಬಲಶ್ಚ ಯಮಕ್ಷಯಮ್ ॥೨೧॥**

ವೀರರಾದ ಪಾಂಡವರೊಡನೆ ಯುದ್ಧವನ್ನು ಸಾಕುಮಾಡು. ಕುರು

ರಾಜಕುಮಾರರ ವೃದ್ಧಿಗಾಗಿ, ಅಭ್ಯುದಯಕ್ಕಾಗಿ ಪಾಂಡವರೊಡನೆ ಸಂಧಿಗೆ ಸಮ್ಮತಿಸು. ನಮ್ಮ ಹಿತೋಕ್ತಿಗಳನ್ನು ಕೇಳದೇ ಅವರೊಡನೆ ಯುದ್ಧ ಮಾಡಲು ಹೋಗಿ ಸುತಾಮಾತ್ಯಬಲಸಹಿತನಾಗಿ ಯಮಾಲಯಕ್ಕೆ ಹೋಗಿಬಿಡಬೇಡ."

೧೩೯ನೆಯ ಅಧ್ಯಾಯವು ಮುಗಿಯಿತು.

೧೪೦ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ)

## ಶ್ರೀಕೃಷ್ಣನು ಕರ್ಣನನ್ನು ಪಾಂಡವರ ಪಕ್ಷಕ್ಕೆ ಸೇರುವಂತೆ ಪ್ರೋತ್ಸಾಹಿಸಿದುದು

ವೈಶಂಪಾಯನರು ಹೇಳುತ್ತಾರೆ :

ಜನಮೇಜಯ! ಶ್ರೀಕೃಷ್ಣನು ಕರ್ಣನನ್ನು ರಥದ ಮೇಲೆ ಕುಳ್ಳಿರಿಸಿಕೊಂಡು ಸ್ವಲ್ಪ ದೂರದವರೆಗೆ ಹೋಗಿ ಅವನೊಡನೆ ಮಾತನಾಡುತ್ತಿದ್ದು ಅನಂತರ ಅವನನ್ನು ಕಳುಹಿಸಿಕೊಟ್ಟ ವಿಷಯವು ಧೃತರಾಷ್ಟ್ರನಿಗೂ ತಿಳಿದಿತ್ತಾದ್ದರಿಂದ ಅವನಿಗೆ ಶ್ರೀಕೃಷ್ಣ-ಕರ್ಣರ ನಡುವೆ ನಡೆದ ಸಂವಾದವನ್ನು ಕೇಳುವ ಕುತೂಹಲವುಂಟಾಯಿತು. ಅಂತೆಯೇ ಧೃತರಾಷ್ಟ್ರನು ವಾರ್ತಾಸಂಗ್ರಾಹಕನಾದ ಸಂಜಯನನ್ನು ಪ್ರಶ್ನಿಸಿದನು :

"ಸಂಜಯ! ರಾಜಪುತ್ರರಿಂದಲೂ ಸೇವಕರಿಂದಲೂ ಪರಿವೃತನಾಗಿದ್ದ ಮಧುಸೂದನನು ಇದ್ದಕ್ಕಿದ್ದಂತೆಯೇ ಅನಿರೀಕ್ಷಿತವಾಗಿ ಕರ್ಣನೊಬ್ಬನನ್ನೇ ರಥದಲ್ಲಿ ಕುಳ್ಳಿರಿಸಿಕೊಂಡು ಹೋದನಲ್ಲವೇ! ಶತ್ರುಪಕ್ಷದ ವೀರರನ್ನು ಸಂಹರಿಸುವ ಸಾಮರ್ಥ್ಯವುಳ್ಳ, ಅಮೇಯಾತ್ಮನಾದ, ಅಪ್ರಮೇಯನಾದ ಗೋವಿಂದನು ರಾಧೇಯನೊಡನೆ ಏನು ಹೇಳಿದನು? (ಕರ್ಣನ ಮನಸ್ಸನ್ನು ಆಕರ್ಷಿಸಲು ಯಾವ ಸಾಂತ್ವವಚನಗಳನ್ನು ಕರ್ಣನ ಮೇಲೆ ಪ್ರಯೋಗಿಸಿದನು?) ಮೇಘಕ್ಕೆ ಸಮಾನವಾದ ಗಂಭೀರಸ್ವರದಿಂದ ಮಾತನಾಡುವ ಶ್ರೀಕೃಷ್ಣನು ಆ ಸಮಯದಲ್ಲಿ ಕರ್ಣನೊಡನಾಡಿದ ಮೃದುವಾದ ಅಥವಾ ಕಠಿನವಾದ ಮಾತುಗಳು ಯಾವುವುಂಟೋ–ಆ ಎಲ್ಲ ಮಾತುಗಳನ್ನೂ ನಾನು ನಿನ್ನಿಂದ ಕೇಳಬೇಕೆಂದಿರುತ್ತೇನೆ."

ಸಂಜಯನು ಹೇಳುತ್ತಾನೆ :

“ಮಹಾರಾಜ! ಮಧುಸೂದನನು ಕರ್ಣನೊಡನಾಡಿದ ತೀಕ್ಷ್ಣವಾದ, ಮೃದುವಾದ, ಪ್ರಿಯವಾದ, ಧರ್ಮಯುಕ್ತವಾದ, ಸತ್ಯವಾದ, ಹೃದಯಗ್ರಹಣಸಾಮರ್ಥ್ಯವುಳ್ಳ ಮಾತುಗಳನ್ನು ನಿನಗೆ ಆಮೂಲಾಗ್ರವಾಗಿ ಹೇಳುತ್ತೇನೆ. ಅಪ್ರಮೇಯನಾದ ಶ್ರೀಕೃಷ್ಣನು ರಾಧೇಯನೊಡನೆ ಯಾವ ಮಾತುಗಳನ್ನಾಡಿದನೋ ಆ ಎಲ್ಲ ಮಾತುಗಳನ್ನೂ ಕೇಳು.



ಶ್ರೀಕೃಷ್ಣನು ರಾಧೇಯನನ್ನು ರಥದ ಮೇಲೆ ಕುಳ್ಳಿರಿಸಿಕೊಂಡು ಮುನ್ನಡೆಯುತ್ತಾ ಅವನೊಡನೆ ಮಾತನಾಡಲು ಉಪಕ್ರಮಿಸಿದನು :

“ರಾಧೇಯ! ವೇದಪಾರಂಗತರಾದ ಬ್ರಾಹ್ಮಣರನ್ನು ನೀನು ಅನೇಕ

ಪ್ರಕಾರವಾಗಿ ಉಪಚರಿಸಿರುವೆ. ನಿಯಮವ್ರತಾನುಷ್ಠಾನದಲ್ಲಿದ್ದುಕೊಂಡು ಅಸೂಯೆಯನ್ನು ಪರಿತ್ಯಜಿಸಿ ತತ್ತ್ವಾರ್ಥಗಳನ್ನೂ ನೀನು ಅವರಿಂದ ಕೇಳಿ ತಿಳಿದುಕೊಂಡಿರುವೆ. ಈ ಕಾರಣದಿಂದ ನೀನು ಸನಾತನವಾದ ವೈದಿಕ ಧರ್ಮವನ್ನು ಸಂಪೂರ್ಣವಾಗಿ ತಿಳಿದಿರುವೆ. ಧರ್ಮಶಾಸ್ತ್ರಗಳಲ್ಲಿರುವ ಸೂಕ್ಷ್ಮಾತಿಸೂಕ್ಷ್ಮವಿಷಯಗಳಲ್ಲಿಯೂ ನಿನಗೆ ಪೂರ್ಣಪರಿಜ್ಞಾನವಿದೆ.

ಕನ್ಯೆಗೆ ವಿವಾಹವಾಗುವ ಮೊದಲು ಮಗುವು ಹುಟ್ಟಿದರೆ ಆ ಶಿಶುವಿಗೆ 'ಕಾನೀನ' ಎಂದು ಹೆಸರು. ಕನ್ಯೆಯು ವಿವಾಹವಾಗುವ ಮೊದಲೇ ಗರ್ಭವತಿಯಾಗಿ ವಿವಾಹವಾದನಂತರ ಮಗುವು ಹುಟ್ಟಿದರೆ ಹಾಗೆ ಹುಟ್ಟಿದ ಮಗುವಿಗೆ 'ಸಹೋಢ' ಎಂದು ಹೆಸರು. ಕಾನೀನ ಮತ್ತು ಸಹೋಢರ ಜನ್ಮಕ್ಕೆ ಕಾರಣರು ಯಾರಾದರೂ ಆಗಿರಬಹುದು. ಆದರೆ ಈ ಕನ್ಯೆ (ಕಾನೀನ ಮತ್ತು ಸಹೋಢರ ತಾಯಿ)ಯನ್ನು ಯಾವನು ವಿಧಿಪೂರ್ವಕವಾಗಿ ಮದುವೆಯಾಗುತ್ತಾನೆಯೋ–ಅವನೇ ಕಾನೀನ ಮತ್ತು ಸಹೋಢರ ತಂದೆಯಾಗುವನೆಂದು ಶಾಸ್ತ್ರವಿದರು ಹೇಳುತ್ತಾರೆ. (ಧರ್ಮಶಾಸ್ತ್ರದಲ್ಲಿನ ಈ ಸೂಕ್ಷ್ಮವಿಷಯವು ನಿನಗೂ ತಿಳಿದೇ ಇದೆ.)

ಕರ್ಣ! ನೀನೂ ಕಾನೀನ. ಕನ್ಯೆಯೊಬ್ಬಳಲ್ಲಿ ಜನ್ಮತಾಳಿದವನು. ಕನ್ಯೆಯು ಅರ್ಥಾತ್ ಕುಂತಿಯು ನಿನ್ನನ್ನು ಪ್ರಸವಿಸಿದನಂತರ ಪಾಂಡುರಾಜನನ್ನು ವಿಧಿವತ್ತಾಗಿ ಮದುವೆಯಾದಳು. ಆದುದರಿಂದ ನೀನು ಧರ್ಮಶಾಸ್ತ್ರಾನುಸಾರವಾಗಿ ಪಾಂಡುವಿನ ಪುತ್ರನೇ ಆಗಿರುವೆ. ಧರ್ಮಶಾಸ್ತ್ರ ಗಳ ನಿಯಮಾನುಸಾರವಾಗಿ ನೀನೇ ರಾಜನಾಗುವೆ. ನನ್ನೊಡನೆ ಬಾ. ನಿನಗೆ ರಾಜತ್ವದ ಪಟ್ಟಗಟ್ಟುತ್ತೇನೆ.

ನಿನ್ನ ಪಿತೃಪಕ್ಷ (ತಂದೆಯ ಸಂಬಂಧ)ದಲ್ಲಿ ವೀರರಾದ ಪಾಂಡವ ರಿದ್ದಾರೆ. ಮಾತೃಪಕ್ಷ (ತಾಯಿಯ ಸಂಬಂಧ)ದಲ್ಲಿ ವೃಷ್ಣಿಗಳಿದ್ದಾರೆ. (ನಾವಿದ್ದೇವೆ.) ಪುರುಷರ್ಷಭನೇ! ಈ ಎರಡು ಪಕ್ಷಗಳೂ ನಿನ್ನವೆಂದೇ ತಿಳಿಯುವವನಾಗು. ಈ ಎರಡು ಪಕ್ಷಗಳೂ ನಿನಗೆ ಸೇರಿದ್ದಾಗಿವೆ. ಎರಡು ಪಕ್ಷದವರೂ ನಿನ್ನನ್ನೇ ಅನುಸರಿಸಿ ನಡೆಯುತ್ತಾರೆ. ನನ್ನೊಡನೆ ಉಪಪ್ಲಾವ್ಯಕ್ಕೆ ಬರಲಿರುವ ನಿನ್ನನ್ನು ಪಾಂಡವರು ಕೌಂತೇಯನೆಂದೂ (ಕುಂತಿಯ

ಪುತ್ರನೆಂದೂ) ಯುಧಿಷ್ಠಿರನಿಗಿಂತಲೂ ಮೊದಲು ಹುಟ್ಟಿದವನೆಂದೂ ತಿಳಿಯಲಿ. ನೀನು ಕೌಂತೇಯನೆಂದೂ ಪಂಚಪಾಂಡವರಿಗೂ ಹಿರಿಯವನೆಂದೂ ತಿಳಿದೊಡನೆಯೇ ಧರ್ಮಾತ್ಮರಾದ ಪಾಂಡವರು ನಿನ್ನ ಪಾದಗಳನ್ನು ಹಿಡಿದುಕೊಳ್ಳುತ್ತಾರೆ. (ಪಾದಗಳನ್ನು ಮುಟ್ಟಿ ನಮಸ್ಕಾರಮಾಡುತ್ತಾರೆ.) ಅವರನ್ನನುಸರಿಸಿ ದ್ರೌಪದಿಯ ಐವರು ಮಕ್ಕಳೂ, ಸುಭದ್ರೆಯ ಮಗನಾದ ಅಪರಾಜಿತನಾದ ಅಭಿಮನ್ಯುವೂ ನಿನ್ನ ಕಾಲುಮುಟ್ಟಿ ನಮಸ್ಕರಿಸುತ್ತಾರೆ. ಇಷ್ಟು ಮಾತ್ರವಲ್ಲ.; ಪಾಂಡವರ ಸಲುವಾಗಿ ಯುದ್ಧಮಾಡಲು ಅವರ ಕಡೆಗೆ ಆಗಮಿಸಿರುವ ಎಲ್ಲ ರಾಜರೂ, ರಾಜಪುತ್ರರೂ, ಅಂಧಕ-ವೃಷ್ಣಿಗಳೂ ನಿನ್ನ ಪಾದಗ್ರಹಣಮಾಡುತ್ತಾರೆ (ನಿನಗೆ ನಮಸ್ಕರಿಸುತ್ತಾರೆ). ಅನಂತರ ರಾಜಪುತ್ರರೂ ಮತ್ತು ರಾಜಕನ್ಯೆಯರೂ ನಿನ್ನ ಸಲುವಾಗಿ ಸ್ವರ್ಣಕುಂಭ ಗಳನ್ನೂ, ರಜತಕುಂಭಗಳನ್ನೂ, ಮೃಣ್ಮಯಕುಂಭಗಳನ್ನೂ, ಮೂಲಿಕೆ ಗಳನ್ನೂ, ಸಕಲವಾದ ಬೀಜಗಳನ್ನೂ, ಸರ್ವರತ್ನಗಳನ್ನೂ, ಅಭಿಷೇಕ ಯೋಗ್ಯವಾದ ಓಷಧಿಲತೆಗಳನ್ನೂ ಇನ್ನೂ ಅನೇಕ ಅಭಿಷೇಕಸಾಮಗ್ರಿಗಳನ್ನೂ ತರುತ್ತಾರೆ.

ಕಠೋರವ್ರತನಿಷ್ಠರಾದ, ಶುದ್ಧಾತ್ಮರಾದ, ದ್ವಿಜಶ್ರೇಷ್ಠರಾದ ಧೌಮ್ಯರು ನಿನ್ನ ಪಟ್ಟಾಭಿಷೇಕಕ್ಕಾಗಿ ಅಗ್ನಿಯಲ್ಲಿ ಹೋಮಮಾಡಲಿ. ನಾಲ್ಕು ವೇದಗಳನ್ನೂ ಅಧ್ಯಯನಮಾಡಿರುವ ಬ್ರಾಹ್ಮಣರೂ ಮತ್ತು ಬ್ರಾಹ್ಮಣೋಚಿತ ಕರ್ಮಗಳಲ್ಲಿಯೇ ಸದಾ ನಿಷ್ಠರಾದ ಪಾಂಡವರ ಪುರೋಹಿತರಾದ ಧೌಮ್ಯರೂ ವಿಧಿಪೂರ್ವಕವಾಗಿ ನಿನಗೆ ಪಟ್ಟಾಭಿಷೇಕಮಾಡಲಿ. ಧೌಮ್ಯಪ್ರಮುಖರಾದ ಬ್ರಾಹ್ಮಣರು ನಿನ್ನನ್ನು ಅಭಿಷೇಚಿಸಿದಬಳಿಕ ನಿನ್ನ ತಮ್ಮಂದಿರಾದ ಪುರುಷರ್ಷಭರಾದ ಐವರು ಪಾಂಡವರು, ದ್ರೌಪದಿಯ ಐವರು ಮಕ್ಕಳು, ಪಾಂಚಾಲರು, ಚೇದಿದೇಶದರಸರು ಮತ್ತು ನಾನು–ಈ ಎಲ್ಲರೂ ಸೇರಿ ನಿನ್ನನ್ನು ರಾಜಾಧಿರಾಜನ ಸ್ಥಾನದಲ್ಲಿ ಪೃಥಿವೀಪತಿಯನ್ನಾಗಿ ಅಭಿಷೇಚಿಸುತ್ತೇವೆ. (ನಿನಗೆ ಪಟ್ಟಾಭಿಷೇಕಮಾಡುತ್ತೇವೆ.) ಧರ್ಮಪುತ್ರನಾದ ಯುಧಿಷ್ಠಿರನು ನಿನಗೆ ಯುವರಾಜನಾಗಲಿ. ಕಠೋರವ್ರತನಿಷ್ಠನಾದ, ಧರ್ಮಾತ್ಮನಾದ, ಕುಂತೀಪುತ್ರನಾದ ಯುಧಿಷ್ಠಿರನು ಬಿಳಿಯದಾದ ಬೀಸಣಿಗೆಯನ್ನು (ಚಾಮರವನ್ನು) ಹಿಡಿದು ನಿನ್ನನ್ನನುಸರಿಸಿ ರಥವನ್ನು ಹತ್ತಿ ಕುಳಿತುಕೊಳ್ಳಲಿ.

ಪಟ್ಟಾಭಿಷಿಕ್ತನಾದ ನಿನ್ನ ತಲೆಯ ಮೇಲೆ ಕುಂತಿಯ ಮಗನಾದ, ಮಹಾಬಲನಾದ ಭೀಮಸೇನನು ದೊಡ್ಡದಾದ ಶ್ವೇತಚ್ಛತ್ರಿಯನ್ನು ಹಿಡಿಯುತ್ತಾನೆ. ನೂರಾರು ಗಂಟೆಗಳ ಶಬ್ದಾಯಮಾನವಾದ, ವ್ಯಾಘ್ರಚರ್ಮದಿಂದ ಹೊದಿಸಲ್ಪಟ್ಟಿರುವ, ಬಿಳಿಯ ಕುದುರೆಗಳಿಂದ ಯುಕ್ತವಾದ ರಥವನ್ನು ಅರ್ಜುನನೇ ನಡೆಸುತ್ತಾನೆ. ಅರ್ಜುನನ ಮಗನಾದ ಅಭಿಮನ್ಯುವೂ ಯಾವಾಗಲೂ ನಿನ್ನ ಸಮೀಪದಲ್ಲಿಯೇ ಇದ್ದು ನಿನ್ನ ಸೇವೆಯಲ್ಲಿಯೇ ನಿರತನಾಗಿರುತ್ತಾನೆ.

ನಕುಲ-ಸಹದೇವರು, ದ್ರೌಪದಿಯ ಐವರು ಮಕ್ಕಳು, ಪಾಂಚಾಲರು, ಮಹಾರಥನಾದ ಶಿಖಂಡಿ–ಈ ಎಲ್ಲರೂ ನಿನ್ನ ಹಿಂದೆ ನಿನ್ನ ಆಜ್ಞಾಧಾರಕರಾಗಿ ನಿಂತಿರುತ್ತಾರೆ. ನಾನೂ ನಿನ್ನನ್ನು ಹಿಂಬಾಲಿಸುತ್ತೇನೆ. ಅಂಧಕ-ವೃಷ್ಣಿಗಳು, ದಾಶಾರ್ಹರು, ದಶಾರ್ಣರು ಮತ್ತು ಇತರ ಪರಿವಾರದವರು ನಿನ್ನ ಪರಿವಾರದವರಾಗಿರುತ್ತಾರೆ.

ಮಹಾಬಾಹುವೇ! ಕರ್ಣ! ನಿನ್ನ ಅನುಜರಾದ ಪಾಂಡವರೊಡನೆ ರಾಜ್ಯವನ್ನು ಉಪಭೋಗಿಸು. ಜಪ-ಹೋಮಗಳಲ್ಲಿ ಮತ್ತು ನಾನಾವಿಧವಾದ ಮಂಗಳಕರ್ಮಗಳಲ್ಲಿ ಯಾವಾಗಲೂ ನಿರತನಾಗಿರು. ಕುಂತಲರೊಡನೆ ಸೇರಿದ ದ್ರಾವಿಡರು, ಆಂಧ್ರರು, ತಾಲಚರರು, ಚೂಚುಪರು ಮತ್ತು ವೇಣಪರು ನಿನ್ನ ಮುಂಭಾಗದಲ್ಲಿ ಹೋಗುತ್ತಿರಲಿ. ಸೂತ-ಮಾಗಧರು ನಿನ್ನನ್ನು ಅನೇಕ ಪ್ರಕಾರವಾದ ಸ್ತೋತ್ರಗಳಿಂದ ಸ್ತುತಿಮಾಡಲಿ. 'ವಸುಷೇಣನಿಗೆ ವಿಜಯವಾಗಲಿ!'–'ಕರ್ಣನಿಗೆ ವಿಜಯವಾಗಲಿ!'–ಎಂಬುದಾಗಿ ಪಾಂಡವ ರೆಲ್ಲರೂ ಏಕಕಂಠದಿಂದ ಘೋಷಿಸಲಿ. ನಕ್ಷತ್ರಗಳಿಂದ ಪರಿವೃತನಾದ ಚಂದ್ರನಂತೆ–ನೀನು ಪಾಂಡವರಿಂದ ಪರಿವೃತನಾಗಿ ಈ ರಾಜ್ಯವನ್ನಾಳು. ಕುಂತಿಯನ್ನೂ ಆನಂದಿತಳನ್ನಾಗಿ ಮಾಡು. (ನೀನು ಹೀಗೆ ಮಾಡುವುದರಿಂದ ಕುಂತಿಗೂ ಮಹಾನಂದವಾಗುವುದು.) ನೀನು ಈ ರಾಜ್ಯಕ್ಕೆ ಅಭಿಷಿಕ್ತ ನಾಗುವುದರಿಂದ ಮಿತ್ರರೆಲ್ಲರೂ ಆನಂದಪಡಲಿ. ಶತ್ರುಗಳಾಗಿರತಕ್ಕವರು ವ್ಯಥೆಪಡಲಿ. ನಿನ್ನ ಅನುಜರಾದ ಪಾಂಡವರೊಡನೆ ನಿನಗೆ ಸೌಭ್ರಾತ್ರವುಂಟಾಗಲಿ.'

೧೪೦ನೆಯ ಅಧ್ಯಾಯವು ಮುಗಿಯಿತು.

## ಕರ್ಣನು ದುರ್ಯೋಧನನ ಪಕ್ಷದಲ್ಲಿಯೇ ಇರಲು ನಿಶ್ಚಯಿಸಿದುದು : ಮುಂಬರುವ ಯುದ್ಧದ ವರ್ಣನೆ

ಶ್ರೀಕೇಶವನು ಹೇಳಿದ ಮಾತಿಗೆ ಉತ್ತರವಾಗಿ ಕರ್ಣನು ಹೇಳುತ್ತಾನೆ :

**ಅಸಂಶಯಂ ಸೌಹೃದಾನ್ಮೇ ಪ್ರಣಯಾಚ್ಚಾತ್ಥ ಕೇಶವ ।**
**ಸಖ್ಯೇನ ಚೈವ ವಾರ್ಷ್ಣೇಯ ಶ್ರೇಯಸ್ಕಾಮತಯೈವ ಚ ॥೧॥**

"ಕೇಶವ! ನೀನು ನನ್ನ ಮೇಲಿನ ಸೌಹಾರ್ದದಿಂದಲೂ, ಪ್ರೀತಿಯಿಂದಲೂ, ಮಿತ್ರತ್ವದಿಂದಲೂ ಮತ್ತು ನನಗೆ ಶ್ರೇಯಸ್ಸನ್ನುಂಟು ಮಾಡಬೇಕೆಂಬ ಅಭಿಲಾಷೆಯಿಂದಲೂ–ಈ ಮಾತುಗಳನ್ನು ಹೇಳಿರುವೆ. ಈ ವಿಷಯದಲ್ಲಿ ಸ್ವಲ್ಪವಾದರೂ ಸಂಶಯವಿಲ್ಲ.

ಕೃಷ್ಣ! ನನಗೆ ಈ ಎಲ್ಲ ವಿಷಯಗಳೂ ತಿಳಿದಿವೆ. ಧರ್ಮಶಾಸ್ತ್ರಗಳ ನಿರ್ಣಯಾನುಸಾರವಾಗಿ ನೀನು ಅಭಿಪ್ರಾಯಪಟ್ಟಿರುವಂತೆ ನಾನು ಧರ್ಮತಃ ಪಾಂಡುವಿನ ಮಗನಾಗಿರುತ್ತೇನೆ. ಜನಾರ್ದನ! ಕುಂತಿಯು ಕನ್ಯೆಯಾಗಿದ್ದಾಗ ಭಾಸ್ಕರನ ಸಮಾಗಮದಿಂದ ಗರ್ಭವನ್ನು ಧರಿಸಿದಳು. ಸೂರ್ಯದೇವನ ಮಾತಿನಂತೆ ಹುಟ್ಟಿದೊಡನೆಯೇ ನನ್ನನ್ನು ಕುಂತಿಯು ನೀರಿನಲ್ಲಿ ವಿಸರ್ಜಿಸಿಬಿಟ್ಟಳು. ಹಾಗೆ ಜನ್ಮತಾಳಿದ ನಾನು ಧರ್ಮತಃ ಪಾಂಡುವಿನ ಪುತ್ರನಾಗಿರುತ್ತೇನೆ. ಆದರೆ ಕುಂತಿಯು ನನ್ನನ್ನು ಪಾಂಡುಪುತ್ರನಾಗಿಯೇ ಇರಲು ಆಸ್ಪದವನ್ನು ಕೊಡಲಿಲ್ಲ. ನನಗೆ ಮಂಗಳವಾಗದ ರೀತಿಯಲ್ಲಿ, ಕಲ್ಯಾಣವಾಗದ ರೀತಿಯಲ್ಲಿ–ಕುಂತಿಯು ನನ್ನನ್ನು ವಿಸರ್ಜಿಸಿಬಿಟ್ಟಳು. ಮಧುಸೂದನ! ಅಧಿರಥನೆಂಬ ಸೂತನು ನದಿಯಲ್ಲಿ ತೇಲಿಕೊಂಡು ಹೋದ ನನ್ನನ್ನು ನೋಡಿದೊಡನೆಯೇ ಮನೆಗೆ ಕೊಂಡೊಯ್ದನು. ಸೌಹಾರ್ದದಿಂದ ಅವನ ಪತ್ನಿಯಾದ ರಾಧೆಗೆ ನನ್ನನ್ನು ಸಾಕಿಕೊಳ್ಳಲು ಕೊಟ್ಟನು. ನನ್ನನ್ನು ನೋಡಿದೊಡನೆಯೇ ರಾಧೆಗೆ ಅನಿರ್ವಚನೀಯವಾದ ಪುತ್ರವಾತ್ಸಲ್ಯವುಂಟಾಯಿತು. ಒಡನೆಯೇ ಅವಳ ಸ್ತನಗಳಲ್ಲಿ ಹಾಲು ಪ್ರಸ್ರವಿಸಿತು. ಚಿಕ್ಕಮಗುವಾಗಿದ್ದಾಗ ಅವಳ

ಮೇಲೆ ಮೂತ್ರೋತ್ಸರ್ಜನೆ ಮಾಡುತ್ತಿದ್ದೆನು. ಮಲವಿಸರ್ಜನೆಯೂ ಅವಳ ತೊಡೆಯ ಮೇಲೆಯೇ ಆಗುತ್ತಿತ್ತು. ಅಸಹ್ಯಪಟ್ಟುಕೊಳ್ಳದೇ ಅವಳದನ್ನು ಸಂತೋಷದಿಂದ ತೆಗೆದುಹಾಕಿ ನನ್ನ ಮೈಯನ್ನೆಲ್ಲಾ ಶುಚಿಗೊಳಿಸಿ ಮುದ್ದಿಡುತ್ತಿದ್ದಳು. ಅಂತಹವಳಿಗೆ ನನ್ನಂತಹವನು ಪಿಂಡೋದಕಗಳನ್ನು ಅರ್ಪಿಸದಿರಲು ಹೇಗೆತಾನೇ ಸಾಧ್ಯವಾಗುವುದು? ನಾನು ಧರ್ಮವನ್ನು ತಿಳಿದವನಾಗಿದ್ದೇನೆ ಮತ್ತು ಧರ್ಮಶಾಸ್ತ್ರಗಳ ಶ್ರವಣದಲ್ಲಿ ಸದಾ ನಿರತನಾಗಿರುತ್ತೇನೆ.*

ರಾಧೆಯು ನನ್ನನ್ನು ತನ್ನ ನಿಜಸುತನೆಂದು ತಿಳಿದಿರುವಂತೆಯೇ ಅಧಿರಥನೂ ನನ್ನನ್ನು ಮಗನೆಂದೇ ತಿಳಿದಿರುತ್ತಾನೆ. ನಾನೂ ಅವನನ್ನು ಸೌಹಾರ್ದದ ಕಾರಣದಿಂದ ಸದಾಕಾಲದಲ್ಲಿಯೂ ನನ್ನ ತಂದೆಯೆಂದೇ ಭಾವಿಸುತ್ತೇನೆ. ಮಾಧವ! ಅಧಿರಥನೇ ನನಗೆ ಜಾತಕರ್ಮಾದಿಗಳನ್ನು ಮಾಡಿಸಿದನು. ಪುತ್ರನು ಲಭಿಸಿದನೆಂಬ ಪ್ರೀತಿಯಿಂದ ಶಾಸ್ತ್ರೋಕ್ತ ವಿಧ್ಯನುಸಾರವಾಗಿ 'ವಸುಷೇಣ' ಎಂಬುದಾಗಿ ಬ್ರಾಹ್ಮಣರಿಂದ ನಾಮಕರಣ ವನ್ನೂ ಮಾಡಿಸಿದನು. ನನಗೆ ಯೌವನವು ಪ್ರಾಪ್ತವಾಗಲಾಗಿ ಅಧಿರಥನು ಸೂತಜಾತಿಯ ಕನ್ಯೆಯರನ್ನೇ ತಂದು ಮದುವೆಯನ್ನೂ ಮಾಡಿದನು.

ಸೂತಕನ್ಯೆಯರನ್ನು ಪರಿಗ್ರಹಿಸಿ ನಾನು ಅವರಲ್ಲಿ ಪುತ್ರರನ್ನೂ, ಪೌತ್ರ ರನ್ನೂ ಪಡೆದಿರುವೆನು, ಮಾಧವ! ಆ ಸೂತಸ್ತ್ರೀಯರಲ್ಲಿಯೇ ನನಗೆ ಪ್ರೇಮ ರೂಪವಾದ ಅನುರಕ್ತಿಯಿದೆ. ಅವರಲ್ಲಿ ನನ್ನ ಹೃದಯವು ಕಾಮದಿಂದ ಬಂಧಿತವಾಗಿದೆ. ಅವರೆಲ್ಲವನ್ನೂ ಬಿಟ್ಟುಬರಲು ಸಾಧ್ಯವಾಗುವುದೇ?

---

* ಕುಂತಿಯೇ ನನಗೆ ತಾಯಿಯೆಂಬುದೂ–ಪಾಂಡುವೇ ಧರ್ಮತಃ ತಂದೆಯೆಂಬುದೂ ತಿಳಿದಿದ್ದರೂ ನಾನಿಂದು ಅವರನ್ನು ನನ್ನ ತಾಯಿ-ತಂದೆಗಳೆಂದು ಅಂಗೀಕರಿಸಿ ನಡೆದುಕೊಳ್ಳಲಾರೆನು. ಹಾಗೇನಾದರೂ ನಾನು ಅಂಗೀಕರಿಸಿದರೆ ಇದುವರೆಗೂ ನನ್ನನ್ನು ಸಾಕಿ-ಸಲಹಿದ ತಾಯಿ-ತಂದೆಗಳಿಗೆ ಪಿಂಡೋದಕವನ್ನು ಅರ್ಪಿಸುವ ಅಧಿಕಾರವನ್ನು ನಾನು ಕಳೆದುಕೊಳ್ಳುತ್ತೇನೆ. ಇದುವರೆಗೂ ಅವರ ಮಗನಾಗಿದ್ದು ಅವರು ಅವಸಾನಹೊಂದುವ ಕಾಲದಲ್ಲಿ ಬೇರೆಯವರ ಮಗನಾಗಿ ಅವರಿಗೆ ಪಿಂಡೋದಕಗಳನ್ನು ಸಲ್ಲಿಸದಿರುವುದು ನನ್ನಂತಹವನಿಗೆ ಸರಿಯೆನಿಸುವುದಿಲ್ಲ. ಧರ್ಮದೃಷ್ಟಿಯಿಂದ ನೋಡಿದರೂ ಹಾಗೆ ಮಾಡುವುದು ಸೂಕ್ತವಾಗಿ ಕಾಣುವುದಿಲ್ಲ ಎಂಬುದು ಕರ್ಣನ ಅಭಿಪ್ರಾಯವಾಗಿದೆ.

ಗೋವಿಂದ! ಸಕಲವಾದ ಈ ಪೃಥ್ವಿಯೇ ಲಭಿಸುವುದಾದರೂ, ಸುವರ್ಣದ ರಾಶಿಗಳೇ ಸಿಕ್ಕುವುದಾದರೂ–ಹರ್ಷದಿಂದಲೇ ಆಗಲೀ, ಭಯದಿಂದಲೇ ಆಗಲೀ–ಈ ನನ್ನ ಸಂಸಾರವನ್ನು (ಇದುವರೆಗೆ ನಡೆದಿರುವುದನ್ನು) ಸುಳ್ಳನ್ನಾಗಿ ಮಾಡಲು ನಾನು ಶಕ್ತನಲ್ಲ.

ಕೃಷ್ಣ! ಎರಡನೆಯದಾಗಿ ದುರ್ಯೋಧನನ ಆಶ್ರಯವನ್ನು ಪಡೆದು ಧೃತರಾಷ್ಟ್ರನ ಅರಮನೆಯಲ್ಲಿ ನಾನು ಹದಿಮೂರು ವರ್ಷಗಳ ಕಾಲ ನಿಷ್ಕಂಟಕವಾಗಿ ರಾಜ್ಯಸುಖವನ್ನು ಉಪಭೋಗಿಸಿದೆನು. ಸೂತರೊಡನೆ ಸೇರಿಕೊಂಡು ನಾನು ಅನೇಕ ಯಜ್ಞ-ಯಾಗಾದಿಗಳನ್ನೂ ಮಾಡಿರುತ್ತೇನೆ. ಸೂತರೊಡನೆ ಸೇರಿ ನಾನು ಅನೇಕಾನೇಕ ಕುಲಕರ್ಮಗಳನ್ನೂ ವಿವಾಹಾದಿಗಳನ್ನೂ ಮಾಡಿರುತ್ತೇನೆ. ಕೃಷ್ಣ! ನಿನಗೆ ತಿಳಿದಿರುವಂತೆಯೇ ದುರ್ಯೋಧನನು ನನ್ನ ಮೇಲಿನ ಭರವಸೆಯಿಂದಲೇ ಶಸ್ತ್ರವನ್ನೆತ್ತಿ ನಿಂತಿದ್ದಾನೆ ಮತ್ತು ಪಾಂಡವರೊಡನೆ ಯುದ್ಧಮಾಡಲೂ ಧೈರ್ಯಮಾಡಿದ್ದಾನೆ.

ದ್ವೈರಥಯುದ್ಧದಲ್ಲಿ (ಇಬ್ಬರೇ ರಥಿಗಳು ಎದುರು-ಬದುರಾಗಿ ನಿಂತು ಮಾಡುವ ದ್ವಂದ್ವಯುದ್ಧ) ಅರ್ಜುನನಿಗೆ ಎದುರಾಗಿ ನಿಲ್ಲಲು ಅಥವಾ ಅವನಿಗೆ ಸಮನಾಗಿ ನಿಂತು ಯುದ್ಧಮಾಡಲು ದುರ್ಯೋಧನನು ನನ್ನನ್ನೇ ಆರಿಸಿಕೊಂಡಿರುತ್ತಾನೆ.

ಜನಾರ್ದನ! ಈ ಸಮಯದಲ್ಲಿ ನಾನು ನನ್ನ ವಧೆಯಾಗುವುದೆಂಬ ಕಾರಣದಿಂದಾಗಲೀ, ನಾನು ಸೆರೆಸಿಕ್ಕುವೆನೆಂಬ ಕಾರಣದಿಂದಾಗಲೀ, ಭಯದಿಂದಾಗಲೀ, ರಾಜ್ಯಲೋಭದಿಂದಾಗಲೀ–ಧೀಮಂತನಾದ ದುರ್ಯೋಧನನೊಡನೆ ಮಿಥ್ಯಾವ್ಯವಹಾರವನ್ನು ನಡೆಸಲು ಖಂಡಿತವಾಗಿಯೂ ಉತ್ಸುಕನಾಗಿಲ್ಲ. (ದುರ್ಯೋಧನನಿಗೆ ನಾನು ಅರ್ಜುನನೊಡನೆ ಯುದ್ಧಮಾಡಲು ಒಪ್ಪಿಗೆ ಕೊಟ್ಟನಂತರ ಈಗ ಪುನಃ ಅವನೊಡನೆ 'ಪಾರ್ಥನೊಡನೆ' ಯುದ್ಧ ಮಾಡಲು ಸಾಧ್ಯವಿಲ್ಲ ಎಂದು ಖಂಡಿತವಾಗಿಯೂ ಹೇಳಲಾರೆನು.) ಹೃಷೀಕೇಶ! ಒಂದು ವೇಳೆ ನಾನೇನಾದರೂ ಸವ್ಯಸಾಚಿಯೊಡನೆ ದ್ವೈರಥಕ್ಕೆ

(ದ್ವಂದ್ವಯುದ್ಧಕ್ಕೆ) ಹೋಗದೆಯೇ ಇದ್ದರೆ–ನನಗೂ ಅಕೀರ್ತಿ ಯುಂಟಾಗುತ್ತದೆ. ಅಂತೆಯೇ ಅರ್ಜುನನಿಗೂ ಅಕೀರ್ತಿಯು ತಪ್ಪಿದ್ದಲ್ಲ.

ನೀನು ನನ್ನ ಹಿತಕ್ಕಾಗಿಯೇ ಪಾಂಡವರೊಡನೆ ಸೇರಿಬಿಡುವಂತೆ ಹೇಳು ತ್ತಿರುವುದು ನಿಶ್ಚಯ. ಈ ವಿಷಯದಲ್ಲಿ ನಾನು ಸ್ವಲ್ಪವಾದರೂ ಸಂಶಯಪಡು ತ್ತಿಲ್ಲ. ಪಾಂಡವರೆಲ್ಲರೂ ನಿನ್ನ ವಶವರ್ತಿಗಳಾಗಿರುವುದರಿಂದಲೂ, ನಿನಗೆ ಅತ್ಯಂತವಿಧೇಯರಾಗಿರುವುದರಿಂದಲೂ–ನೀನು ಹೇಳಿದಂತೆಯೇ ಅವರು ಮಾಡುತ್ತಾರೆ. ಇದರಲ್ಲಿ ಸಂಶಯಲೇಶವೂ ಇರುವುದಿಲ್ಲ. ಆದರೆ ಈ ಸಮಯದಲ್ಲಿ ಈ ಹಿಂದೆ ಹೇಳಿದ ಕಾರಣಗಳಿಂದ ನೀನು ಹೇಳಿದಂತೆ ನಡೆಯಲು ಸಾಧ್ಯವಾಗುವುದಿಲ್ಲ. ಜನಾರ್ದನ! ಈ ವಿಷಯವಾಗಿ ನನ್ನ ಇನ್ನೊಂದು ಪ್ರಾರ್ಥನೆಯೂ ಇದೆ. 'ಕರ್ಣನು ಕುಂತೀಪುತ್ರನು' ಎಂಬ ಈ ರಹಸ್ಯವಿಷಯದ ಸ್ಫೋಟನವು ಈಗಲೇ ಆಗಿಬಿಡಬಾರದು. ಈ ವಿಷಯದಲ್ಲಿ ನೀನೇ ಒಂದು ನಿಯಮಮಾಡಬೇಕು. ಈ ವಿಷಯವು ಇನ್ನೂ ಕೆಲವು ದಿನಗಳವರೆಗೆ ರಹಸ್ಯವಾಗಿಯೇ ಉಳಿಯುವುದು ಎಲ್ಲ ಪ್ರಕಾರದಿಂದಲೂ ಎಲ್ಲರಿಗೂ ಹಿತವಾಗುವುದೆಂದು ನಾನು ಭಾವಿಸುತ್ತೇನೆ.

**ಯದಿ ಜಾನಾತಿ ಮಾಂ ರಾಜಾ ಧರ್ಮಾತ್ಮಾ ಸಂಯತೇನ್ದ್ರಿಯಃ ।**
**ಕುನ್ತ್ಯಾಃ ಪ್ರಥಮಜಂ ಪುತ್ರಂ ನ ಸ ರಾಜ್ಯಂ ಗ್ರಹೀಷ್ಯತಿ ॥೨೧॥**

ಧರ್ಮಾತ್ಮನಾದ, ಜಿತೇಂದ್ರಿಯನಾದ ಯುಧಿಷ್ಠಿರಮಹಾರಾಜನೇನಾದರೂ ನಾನು ಕುಂತಿಯ ಹಿರಿಯಮಗನೆಂಬುದನ್ನು ತಿಳಿದರೆ–ಅವನು ಖಂಡಿತವಾಗಿಯೂ ರಾಜ್ಯಗ್ರಹಣಮಾಡುವುದಿಲ್ಲ (ರಾಜನಾಗುವುದಿಲ್ಲ).

**ಪ್ರಾಪ್ಯ ಚಾಪಿ ಮಹದ್ರಾಜ್ಯಂ ತದಹಂ ಮಧುಸೂದನ ।**
**ಸ್ಫೀತಂ ದುರ್ಯೋಧನಾಯೈವ ಸಮ್ಪ್ರದದ್ಯಾಮರಿಂದಮ ॥೨೨॥**

ಅರಿಂದಮನೇ! ಒಂದು ವೇಳೆ ನಾನು ನಿನ್ನ ಮಾತಿಗೆ ಒಪ್ಪಿ, ನಿನ್ನ ನಿರ್ದೇಶನದಂತೆ ಪಾಂಡವರೆಲ್ಲರೂ ಸೇರಿ ನನಗೇ ಮಹಾರಾಜ್ಯದ ಪಟ್ಟಾಭಿಷೇಕಮಾಡಿ ನಾನು ರಾಜನಾದರೂ, ಸಕಲಸಂಪತ್ಸಮೃದ್ಧವಾದ ಆ ಮಹಾರಾಜ್ಯವನ್ನು ದುರ್ಯೋಧನನಿಗೇ ಕೊಟ್ಟುಬಿಡುವೆನು. (ಹಾಗಾಗುವುದು ನನಗೂ ಮತ್ತು ನಿನಗೂ ಸಮ್ಮತವಲ್ಲ.)

**ಸ ಏವ ರಾಜಾ ಧರ್ಮಾತ್ಮಾ ಶಾಶ್ವತೋಽಸ್ತು ಯುಧಿಷ್ಠಿರಃ ।**
**ನೇತಾ ಯಸ್ಯ ಹೃಷೀಕೇಶೋ ಯೋದ್ಧಾ ಯಸ್ಯ ಧನಂಜಯಃ ॥೨೩॥**

ಯಾವನ ನೇತಾರನು ಸಾಕ್ಷಾತ್ ಶ್ರೀಕೃಷ್ಣನೋ ಮತ್ತು ಯಾವನ ಯೋದ್ಧಾರನು ಸಾಕ್ಷಾತ್ ಧನಂಜಯನೋ–ಅಂತಹ ಧರ್ಮಾತ್ಮನಾದ ಯುಧಿಷ್ಠಿರನೇ ಸರ್ವದಾ ರಾಜನಾಗಿರಲಿ.

ಮಾಧವ! ಯಾವನಿಗೆ ಸಹಾಯಕರಾಗಿ ಮಹಾರಥನಾದ ಭೀಮಸೇನ, ನಕುಲ, ಸಹದೇವ, ದ್ರೌಪದೇಯರು, ಪಾಂಚಾಲರಾಜಕುಮಾರನಾದ ಧೃಷ್ಟದ್ಯುಮ್ನ, ಮಹಾರಥನಾದ ಸಾತ್ಯಕಿ, ಉತ್ತಮೌಜಸ, ಯುಧಾಮನ್ಯು, ಸೋಮಕವಂಶೀಯನಾದ ಸತ್ಯಧರ್ಮಾ, ಚೇದಿರಾಜನಾದ ಧೃಷ್ಟಕೇತು, ಚೇಕಿತಾನ, ಅಪರಾಜಿತನಾದ ಮತ್ತು ವೀರನಾದ ಶಿಖಂಡೀ, ಇಂದ್ರಗೋಪಮಣಿಗೆ ಸಮಾನವಾದ ಕಾಂತಿಯಿಂದ ಕೂಡಿರುವ ಐವರು ಕೇಕಯರಾಜ ಸಹೋದರರು, ವಜ್ರಾಯುಧಕ್ಕೆ (ಕಾಮನಬಿಲ್ಲಿಗೆ) ಸಮಾನವಾದ ಕಾಂತಿಯಿಂದ ಕೂಡಿರುವ ಮಹಾತ್ಮನಾದ ಕುಂತಿಭೋಜ, ಭೀಮಸೇನನ ಸೋದರಮಾವನಾದ ಮಹಾರಥನಾದ ಶ್ಯೇನಜಿತ, ವಿರಾಟನ ಮಗನಾದ ಶಂಖ ಮತ್ತು ಅಕ್ಷಯನಿಧಿಗೆ ಸಮಾನನಾಗಿರುವ ನೀನು–ಇವರೆಲ್ಲರೂ ಇರುತ್ತಾರೆಯೋ–ಅಂತಹವನಿಗೆ ಈ ಪೃಥ್ವಿಯೂ ಮತ್ತು ರಾಷ್ಟ್ರವೂ ಸೇರುತ್ತದೆ.

ಕೃಷ್ಣ! ದುರ್ಯೋಧನನಿಲ್ಲಿ ಸುವಿಖ್ಯಾತರಾದ ರಾಜರ ದೊಡ್ಡ ಸಮುದಾಯವನ್ನೇ ಸೇರಿಸಿಬಿಟ್ಟಿದ್ದಾನೆ. ವಿಖ್ಯಾತವಾಗಿರುವ ಮತ್ತು ಉಜ್ಜ್ವಲವಾಗಿರುವ ಈ ಕುರುರಾಜ್ಯವನ್ನೂ ಅವನು ಪಡೆದುಕೊಂಡಿರುತ್ತಾನೆ. ವಾರ್ಷ್ಣೇಯ! ದುರ್ಯೋಧನನ ಸಂಬಂಧವಾಗಿ ದೊಡ್ಡದಾದ ಶಸ್ತ್ರಯಜ್ಞವೊಂದು ಇಲ್ಲಿ ನಡೆದುಹೋಗುತ್ತದೆ. ಆ ಯಜ್ಞಕ್ಕೆ ನೀನೇ ಸಾಕ್ಷೀಭೂತನಾಗಿರುವೆ.

ಆ ಶಸ್ತ್ರಯಜ್ಞದಲ್ಲಿ ಅಧ್ವರ್ಯುವಿನ ಕಾರ್ಯವನ್ನು ನೀನೇ ಮಾಡ ಬೇಕಾಗುತ್ತದೆ. ಕವಚ, ಗಾಂಡೀವಧನುಸ್ಸು, ಅಕ್ಷಯತೂಣೀರಗಳು–ಇವುಗಳಿಂದ ಸನ್ನದ್ಧನಾದ ಕಪಿಧ್ವಜನಾದ ಬೀಭತ್ಸುವೇ ಆ ಯಜ್ಞಕ್ಕೆ ಹೋತೃ

ವಾಗುತ್ತಾನೆ. ಆ ಮಹಾಯಜ್ಞದಲ್ಲಿ ಅರ್ಜುನನ ಗಾಂಡೀವಧನುಸ್ಸೇ ಸ್ರುಗ್ರೂಪವಾಗಿರುತ್ತದೆ. ವೀರಪುರುಷರ ವೀರ್ಯ-ಪರಾಕ್ರಮಗಳೇ ಆಜ್ಯರೂಪವಾಗಿರುತ್ತದೆ. ಸವ್ಯಸಾಚಿಯಿಂದ ಪ್ರಯುಕ್ತವಾಗಲಿರುವ ಐಂದ್ರ, ಪಾಶುಪತ, ಬ್ರಾಹ್ಮ, ಸ್ಥೂಣಾಕರ್ಣ–ಇತ್ಯಾದಿ ಮಂತ್ರಾಸ್ತ್ರಗಳೇ (ಅಸ್ತ್ರಮಂತ್ರಗಳೇ) ಶಸ್ತ್ರಯಜ್ಞದಲ್ಲಿ ವೇದಮಂತ್ರಗಳಾಗುತ್ತವೆ. ಸುಭದ್ರೆಯ ಮಗನಾದ ಅಭಿಮನ್ಯುವು ನನಗೆ ತಿಳಿದಿರುವಂತೆ ಪರಾಕ್ರಮದಲ್ಲಿ ತನ್ನ ತಂದೆಯಾದ ಅರ್ಜುನನಿಗೆ ಸಮಾನನಾಗಿದ್ದಾನೆ ; ಅಥವಾ ಅರ್ಜುನನನ್ನೂ ಮೀರಿಸಿದ್ದಾನೆಂದೂ ಹೇಳಬಹುದು. ಅಂತಹ ಸೌಭದ್ರನು ಮುಂಬರುವ ಶಸ್ತ್ರಯಜ್ಞದಲ್ಲಿ ಗೀತಗಾನವನ್ನೂ–ಸ್ತೋತ್ರಗಾನವನ್ನೂ ಮಾಡುತ್ತಾನೆ. ಅರ್ಥಾತ್ ಅಭಿಮನ್ಯುವು ಆ ಯಜ್ಞಕ್ಕೆ ಉದ್ಗಾತೃವಾಗುತ್ತಾನೆ.

ಮಾಧವ! ಯಾವನು ಯುದ್ಧದಲ್ಲಿ ಗರ್ಜನೆಮಾಡುತ್ತಾ ಗಜಸೈನ್ಯಕ್ಕೆ ಅಂತಕಪ್ರಾಯನಾಗುವನೋ–ಅಂತಹ ಮಹಾಬಲಿಷ್ಠನಾದ ಭೀಮಸೇನನು ಶಸ್ತ್ರಯಜ್ಞಕ್ಕೆ ಪ್ರಸ್ತೋತೃವಾಗುತ್ತಾನೆ. ಜಪ-ಹೋಮಾದಿಗಳಲ್ಲಿಯೇ ಯಾವಾಗಲೂ ನಿರತನಾಗಿರತಕ್ಕ, ಧರ್ಮಾತ್ಮನಾದ ಯುಧಿಷ್ಠಿರರಾಜನೇ ಶಸ್ತ್ರಯಜ್ಞದ ಬ್ರಹ್ಮತ್ವವನ್ನು ವಹಿಸುತ್ತಾನೆ. ಮಧುಸೂದನ! ಮುರಜಶಬ್ದದೊಡನೆ ಸೇರಿದ ಶಂಖನಾದಗಳು, ಭೇರೀನಿನಾದಗಳು ಮತ್ತು ಗಟ್ಟಿಯಾಗಿ ಮಾಡುವ ಸಿಂಹನಾದ–ಇವೆಲ್ಲವೂ ಶಸ್ತ್ರಯಜ್ಞದಲ್ಲಿ ದೇವತೆಗಳನ್ನೂ–ಕಾಲನನ್ನೂ ಆಹ್ವಾನಿಸುವ ಸುಬ್ರಹ್ಮಣ್ಯನ ಧ್ವನಿಗಳಾಗಿರುತ್ತವೆ. ಯಶೋವಂತರಾದ, ಮಾದ್ರಿಯ ಮಕ್ಕಳಾದ, ಮಹಾವೀರ್ಯಸಂಪನ್ನರಾದ ನಕುಲ-ಸಹದೇವರು ಆ ಶಸ್ತ್ರಯಜ್ಞದಲ್ಲಿ ವಿಶಸನಕ್ರಿಯೆಯನ್ನು ಮಾಡುವವರಾಗುತ್ತಾರೆ. (ಯಜ್ಞದಲ್ಲಿ ಪಶುಗಳನ್ನು ಹನನಮಾಡುವವನಿಗೆ ಶಮಿತಾರನೆಂದು ಹೆಸರು.) ಆ ಶಸ್ತ್ರಯಜ್ಞದಲ್ಲಿ ವಿಚಿತ್ರವಾದ ಧ್ವಜದಂಡಗಳಿಂದ ಸುಶೋಭಿತವಾದ ನಿರ್ಮಲವಾದ ರಥದ ಸಾಲುಗಳೇ ಯಜ್ಞದ ಯೂಪಸ್ತಂಭಗಳಾಗಿರುತ್ತವೆ. ಕರ್ಣೀ, ನಾಲೀಕ, ನಾರಾಚ ಮತ್ತು ವತ್ಸದಂತ–ಇವೇ ಮೊದಲಾದ ಬಾಣಗಳೂ, ತೋಮರಗಳೂ ಸೋಮಕಲಶಗಳಾಗುತ್ತವೆ. ಧನುಸ್ಸುಗಳು ಆ ಶಸ್ತ್ರಯಜ್ಞದಲ್ಲಿ ಪವಿತ್ರಗಳಾಗುತ್ತವೆ. ಖಡ್ಗಗಳು ಶಸ್ತ್ರಯಜ್ಞದ ಕಪಾಲರೂಪ

ವಾಗಿರುತ್ತವೆ. ಶತ್ರುಗಳ ಶಿರಸ್ಸುಗಳು ಪುರೋಡಾಶರೂಪವಾಗಿರುತ್ತವೆ. ಶತ್ರುಗಳ ದೇಹದಿಂದ ಸುರಿಯುವ ರಕ್ತವೇ ಆ ಶಸ್ತ್ರಯಜ್ಞದ ಹವಿಸ್ಸಾಗಿರುತ್ತದೆ. ಶಕ್ತ್ಯಾಯುಧಗಳೂ ಮತ್ತು ಒಂದು ಕಚ್ಚೂ ಬೀಳದಿರುವ ಗದೆಗಳೂ–ಶಸ್ತ್ರಯಜ್ಞದ ಇಧ್ಮಗಳೂ–ಪರಿಧಿಗಳೂ ಆಗುತ್ತವೆ. ದ್ರೋಣ-ಕೃಪರ ಶಿಷ್ಯರು ಆ ಮಹಾಯಜ್ಞದ ಸದಸ್ಯರಾಗಿರುತ್ತಾರೆ. ಗಾಂಡೀವಧನ್ವನಾದ ಅರ್ಜುನನಿಂದ, ದ್ರೋಣರಿಂದ ಮತ್ತು ದ್ರೌಣಿಯಿಂದ ಮತ್ತಿತರ ಮಹಾರಥರಿಂದ ಪ್ರಯೋಗಿಸಲ್ಪಡುವ ಬಾಣಗಳೇ ಆ ಮಹಾಯಜ್ಞದ ಪರಿಸ್ತೋಮಗಳಾಗಿರುತ್ತವೆ. (ಯಜ್ಞಕುಂಡದ ನಾಲ್ಕು ದಿಕ್ಕುಗಳಲ್ಲಿಯೂ ಇಡುವ ದರ್ಭೆಯ ಪರಿಸ್ತರಣ.)

ಸಾತ್ಯಕಿಯು ಪ್ರತಿಪ್ರಾಸ್ಥಾನಿಕಕರ್ಮವನ್ನು ಮಾಡುತ್ತಾನೆ. (ಅಧ್ವರ್ಯುವಿಗೆ ಮತ್ತೊಬ್ಬ ಸಹಯೋಗಿ.) ಆ ಶಸ್ತ್ರಯಜ್ಞಕ್ಕೆ ಧಾರ್ತರಾಷ್ಟ್ರನೇ ದೀಕ್ಷಿತನು. ಅವನಲ್ಲಿರುವ ವಿಶಾಲವಾದ ಸೇನಾಸಮುದಾಯವೇ ಯಜಮಾನನ ಪತ್ನೀಸ್ಥಾನದಲ್ಲಿರುತ್ತದೆ. ಮಹಾಬಾಹೋ! ಆ ಶಸ್ತ್ರಮಹಾಯಜ್ಞವು ಆರಂಭವಾದನಂತರ ಮಹಾಬಲನಾದ ಘಟೋತ್ಕಚನು ಅತಿರಾತ್ರಯಾಗದಲ್ಲಿ ಅಥವಾ ಅರ್ಧರಾತ್ರಿಯ ಸಮಯದಲ್ಲಿ ಶಾಮಿತ್ರಕ್ರಿಯೆಯನ್ನು (ಪಶುವಿಶಸನವನ್ನು) ಮಾಡುತ್ತಾನೆ. ಶ್ರೌತಯಜ್ಞದ ಆರಂಭದಲ್ಲಿ ಯಜ್ಞೇಶ್ವರನಿಂದಲೇ ಯಾವನು ಹುಟ್ಟಿರುವನೋ–ಅಂತಹ ಪ್ರತಾಪಶಾಲಿಯಾದ ಧೃಷ್ಟದ್ಯುಮ್ನನೇ ಆ ಶಸ್ತ್ರಯಜ್ಞಕ್ಕೆ ದಕ್ಷಿಣಾರೂಪದಲ್ಲಿರುತ್ತಾನೆ.

ಕೃಷ್ಣ! ನಾನು ಮಾಡಿರುವ ಒಂದು ಅಕಾರ್ಯಕ್ಕಾಗಿ ಪರಿತಾಪಪಡುತ್ತಿದ್ದೇನೆ.

**ಯದಬ್ರುವಮಹಂ ಕೃಷ್ಣ ಕಟುಕಾನಿ ಸ್ಮ ಪಾಣ್ಡವಾನ್ ।**
**ಪ್ರಿಯಾರ್ಥಂ ಧಾರ್ತರಾಷ್ಟ್ರಸ್ಯ ತೇನ ತಪ್ಯೇ ಹ್ಯಕರ್ಮಣಾ ॥೪೫॥**

ದುರ್ಯೋಧನನಿಗೆ ಪ್ರಿಯವನ್ನುಂಟುಮಾಡುವ ಸಲುವಾಗಿ ನಾನು ಪಾಂಡವರ ವಿಷಯದಲ್ಲಿ ಆಡಿರುವ ಕಠಿನವಾದ ಮಾತುಗಳಿಗೆ ಈಗ ಪರಿತಪಿಸುತ್ತಿದ್ದೇನೆ.

ಕೃಷ್ಣ! ಯಾವಾಗ ನೀನು ಸವ್ಯಸಾಚಿಯಿಂದ ಹತನಾದ ನನ್ನನ್ನು ಕಾಣುವೆಯೋ–ಆ ಸಮಯದಿಂದ ಶಸ್ತ್ರಯಜ್ಞದ ಪುನಶ್ಚಿತಿಯು ಪ್ರಾರಂಭವಾಗುತ್ತದೆ. (ಯಜ್ಞದಲ್ಲಿ ಮಾಡಬೇಕಾದ ಪುನಶ್ಚಯನವು ಪ್ರಾರಂಭವಾಗುತ್ತದೆ.) ಯಾವಾಗ ಪಾಂಡುನಂದನನಾದ ಭೀಮಸೇನನು ಸಿಂಹನಾದಮಾಡುತ್ತಾ ದುಃಶಾಸನನ ರಕ್ತವನ್ನು ಕುಡಿಯುತ್ತಾನೆಯೋ–ಆಗ ಸುತ್ಯವು (ಸೋಮಾಭಿಷವಕರ್ಮವು) ಪೂರ್ತಿಯಾಗುತ್ತದೆ. ಯಾವಾಗ ಭೀಷ್ಮ-ದ್ರೋಣರನ್ನು ಪಾಂಚಾಲರಾಜಕುಮಾರರಾದ ಶಿಖಂಡಿ-ಧೃಷ್ಟದ್ಯುಮ್ನರು ಸಂಹಾರಮಾಡುತ್ತಾರೆಯೋ–ಆಗ ಯಜ್ಞದ ಅವಸಾನ ವಾಗುತ್ತದೆ. (ಯಜ್ಞದ ನಡುವಿನ ವಿರಾಮಸಮಯವಾಗುತ್ತದೆ.) ಮಾಧವ! ಮಹಾಬಲನಾದ ಭೀಮಸೇನನು ಯಾವಾಗ ದುರ್ಯೋಧನನನ್ನು ಸಂಹಾರಮಾಡುವನೋ–ಆಗ ಧಾರ್ತರಾಷ್ಟ್ರನ ಶಸ್ತ್ರಮಹಾಯಜ್ಞವು ಪೂರ್ಣಗೊಳ್ಳುತ್ತದೆ. ಆ ಶಸ್ತ್ರಯಜ್ಞದಲ್ಲಿ ಪತಿಯನ್ನು ಬಲಿಯಾಗಿಕೊಟ್ಟ ಸ್ತ್ರೀಯರಿರುತ್ತಾರೆ. ಧೃತರಾಷ್ಟ್ರನ ಸಂಬಂಧಿಗಳಾದ ಎಲ್ಲ ಸೊಸೆಯರೂ, ಸೊಸೆಯರ ಸೊಸೆಯರೂ ಪತಿವಿಹೀನರಾಗಿ, ಪುತ್ರವಿಹೀನರಾಗಿ, ಸ್ವಾಮಿಯಿಂದ ವಿಹೀನರಾಗಿ ಹಣೆಯನ್ನೂ ಎದೆಯನ್ನೂ ಬಡಿದುಕೊಂಡು ಗೋಳಾಡುತ್ತಾ, ನಾಯಿಗಳಿಂದಲೂ ರಣಹದ್ದುಗಳಿಂದಲೂ ಕುರರಪಕ್ಷಿಗಳಿಂದಲೂ ಆವೃತವಾದ ರಣರಂಗಕ್ಕೆ ಗಾಂಧಾರಿಯೊಡನೆ ಯಾವಾಗ ಬರುತ್ತಾರೆಯೋ–ಆಗ ಶಸ್ತ್ರಯಜ್ಞದ ಅವಭೃಥವಾಗುತ್ತದೆ. ಕ್ಷತ್ರಿಯರ್ಷಭನಾದ ಕೇಶವನೇ! ನಿನ್ನಿಂದಾಗಿ ವಯೋವೃದ್ಧರಾದ ಮತ್ತು ಜ್ಞಾನವೃದ್ಧರಾದ ಈ ಕ್ಷತ್ರಿಯರು ನಿಷ್ಪ್ರಯೋಜಕವಾದ ಮರಣವನ್ನು ಹೊಂದದಂತಾಗಲಿ. (ನಿನ್ನ ಸಂಧಾನದಿಂದ ಶಾಂತಿಸ್ಥಾಪನೆಯಾಗಿಬಿಟ್ಟಿದ್ದರೆ ಈ ಕ್ಷತ್ರಿಯರೆಲ್ಲರಿಗೂ ಶಸ್ತ್ರಾಘಾತದಿಂದ ಸಾವೆಂಬುದೇ ಇರುತ್ತಿರಲಿಲ್ಲ. ಇವರ ಸಾವು ವ್ಯರ್ಥವಾಗಿ ಹೋಗುತ್ತಿತ್ತು. ಈಗ ಇವರೆಲ್ಲರೂ ಯುದ್ಧಮಾಡಿ ಶಸ್ತ್ರಾಘಾತದಿಂದ ಸಾವನ್ನಪ್ಪುವುದರಿಂದ ಇವರ ಮರಣವು ವ್ಯರ್ಥವಾಗುವುದಿಲ್ಲ. ಇವರೆಲ್ಲರೂ ವೀರಸ್ವರ್ಗವನ್ನು ಪಡೆಯುತ್ತಾರೆ.)

**ಶಸ್ತ್ರೇಣ ನಿಧನಂ ಗಚ್ಛೇತ್ಸಮೃದ್ಧಂ ಕ್ಷತ್ರಮಣ್ಡಲಮ್ ।**
**ಕುರುಕ್ಷೇತ್ರೇ ಪುಣ್ಯತಮೇ ತ್ರೈಲೋಕ್ಯಸ್ಯಾಪಿ ಕೇಶವ ॥೫೩॥**

ಮೂರು ಲೋಕಗಳಲ್ಲಿಯೂ ಪುಣ್ಯತಮವಾಗಿರುವ ಕುರುಕ್ಷೇತ್ರದಲ್ಲಿ ಸಮೃದ್ಧವಾದ (ಬಹುಸಂಖ್ಯಾತವಾದ) ಈ ಕ್ಷತ್ರಸಮೂಹವು ಶಸ್ತ್ರಾಘಾತ ಗಳಿಂದ ನಿಧನಹೊಂದುವುದು.

ಪುಂಡರೀಕಾಕ್ಷ! ನೀನೂ ಈ ಇಷ್ಟಸಿದ್ಧಿಗಾಗಿಯೇ ಪ್ರಯತ್ನಿಸು. ವಾರ್ಷ್ಣೇಯ! ಸಾಮೂಹಿಕವಾಗಿಯೇ ಕ್ಷತ್ರಮಂಡಲವು ಸ್ವರ್ಗಕ್ಕೆ ಹೊರಟುಹೋಗಲಿ.

**ಯಾವತ್ಸ್ಥಾಸ್ಯನ್ತಿ ಗಿರಯಃ ಸರಿತಶ್ಚ ಜನಾರ್ದನ ।**
**ತಾವತ್ಕೀರ್ತಿಭವಃ ಶಬ್ದಃ ಶಾಶ್ವತೋಽಯಂ ಭವಿಷ್ಯತಿ ॥೫೫॥**

ಎಲ್ಲಿಯವರೆಗೆ ಪರ್ವತಗಳಿರುತ್ತವೆಯೋ, ಎಲ್ಲಿಯವರೆಗೆ ನದಿ ಗಳಿರುತ್ತವೆಯೋ–ಅಲ್ಲಿಯವರೆಗೂ ಕುರುಕ್ಷೇತ್ರದ ಯುದ್ಧದಲ್ಲಿ ಮಡಿದವರ ಕೀರ್ತಿಯು ಶಾಶ್ವತವಾಗಿ ಉಳಿಯುತ್ತದೆ.

**ಬ್ರಾಹ್ಮಣಾಃ ಕಥಯಿಷ್ಯನ್ತಿ ಮಹಾಭಾರತಮಾಹವಮ್ ।**
**ಸಮಾಗಮೇಷು ವಾರ್ಷ್ಣೇಯ ಕ್ಷತ್ರಿಯಾಣಾಂ ಯಶೋಧನಮ್ ॥೫೬॥**

ಕ್ಷತ್ರಿಯರಿಗೆ ಯಶೋಧನರೂಪವಾದ ಈ ಮಹಾಭಾರತದ ಯುದ್ಧದ ಕಥೆಯನ್ನು ಬ್ರಾಹ್ಮಣರು ದೊಡ್ಡ ದೊಡ್ಡ ಸಭೆಗಳಲ್ಲಿ ಹೇಳುತ್ತಾರೆ.

ಕೇಶವ! ನಾನು ಕುಂತಿಯ ಮಗನೆಂಬ ಗುಪ್ತವಿಷಯವನ್ನು ಮಾತ್ರ ಎಲ್ಲಿಯೂ ಯಾವಾಗಲೂ ಹೊರಗೆಡಹದೇ ನನ್ನೊಡನೆ ಯುದ್ಧಮಾಡಲು ಸವ್ಯಸಾಚಿಯನ್ನು ಕರೆದುಕೊಂಡು ಬಾ.”

ವಳರನೆಯ ಅಧ್ಯಾಯವು ಮುಗಿಯಿತು.

೧೪೨ನೆಯಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ)

## ಶ್ರೀಕೃಷ್ಣನು ಪಾಂಡವರಿಗೆ ವಿಜಯವಾಗುವುದೆಂಬ ವಿಷಯವನ್ನು ಸಮರ್ಥಿಸಿದುದು

ಸಂಜಯನು ಮುಂದುವರಿದು ಹೇಳುತ್ತಾನೆ :

**ಕರ್ಣಸ್ಯ ವಚನಂ ಶ್ರುತ್ವಾ ಕೇಶವಃ ಪರವೀರಹಾ ।**
**ಉವಾಚ ಪ್ರಹಸನ್ವಾಕ್ಯಂ ಸ್ಮಿತಪೂರ್ವಮಿದಂ ಯಥಾ ॥೧॥**

“ಮಹಾರಾಜ! ಕರ್ಣನು ಹೇಳಿದ ಮಾತುಗಳನ್ನು ಕೇಳಿ ಶತ್ರುಪಕ್ಷದ ವೀರರನ್ನು ಸಂಹರಿಸುವ ಸಾಮರ್ಥ್ಯದಿಂದ ಕೂಡಿರುವ ಶ್ರೀಕೃಷ್ಣನು ಒಮ್ಮೆ ನಸುನಕ್ಕು ಮಂದಹಾಸಪೂರ್ವಕವಾಗಿ ಈ ಮಾತುಗಳನ್ನು ಹೇಳಿದನು :

“ಕರ್ಣ! ನಾನು ನಿನಗೆ ರಾಜ್ಯಪ್ರಾಪ್ತಿಯ ಉಪಾಯವನ್ನು ಹೇಳಿದೆನು. ಆದರೆ ನೀನದನ್ನು ಪಡೆದುಕೊಳ್ಳಲು ಇಷ್ಟಪಡುತ್ತಿಲ್ಲ.

ನನ್ನಿಂದ ಕೊಡಲ್ಪಡುವ ರಾಜ್ಯವನ್ನು ಶಾಸನಮಾಡಲು ನಿನಗೆ ಇಚ್ಛೆಯಿಲ್ಲವೆಂದು ತೋರುತ್ತದೆ. ಕರ್ಣ! ಪಾಂಡವರಿಗೆ ಜಯವು ಲಭಿಸಿಯೇ ಲಭಿಸುತ್ತದೆ. ಈ ವಿಷಯದಲ್ಲಿ ಯಾವ ವಿಧವಾದ ಸಂಶಯವೂ ಯಾವಾಗಲೂ ಇರುವುದಿಲ್ಲ. ಉಗ್ರನಾದ ಕಪಿರಾಜನಿಂದ ಕೂಡಿದ ಅರ್ಜುನನ ವಿಜಯಧ್ವಜವು ಈಗಾಗಲೇ ಮೇಲೆದ್ದು ನಿಂತಿರುವುದು ಕಾಣುತ್ತಿದೆ. ವಿಶ್ವಕರ್ಮನು ಆ ಧ್ವಜದಲ್ಲಿ ದಿವ್ಯಮಾಯೆಯನ್ನೇ ಸ್ಥಾಪಿಸಿದ್ದಾನೆ. ಇಂದ್ರಧ್ವಜಕ್ಕೆ ಸಮಾನವಾದ ಕಾಂತಿಯಿಂದ ಆ ಧ್ವಜವು ಎತ್ತರದಲ್ಲಿ ಹಾರಾಡುತ್ತಾ ಪ್ರಕಾಶಿಸುತ್ತಿದೆ. ವಿಜಯವನ್ನು ಸಾಧಿಸಿಕೊಡತಕ್ಕ, ಶತ್ರುಪಕ್ಷದವರಿಗೆ ಮಹಾಭಯವನ್ನುಂಟುಮಾಡತಕ್ಕ ಅನೇಕಭೂತಗಳು ಆ ಧ್ವಜದ ಮೇಲೆ ಕಾಣಿಸುತ್ತವೆ. ಕರ್ಣ! ವಿಶ್ವಕರ್ಮನು ಆ ಧ್ವಜದಲ್ಲಿ ಸ್ಥಾಪಿಸಿರುವ ದಿವ್ಯವಾದ ಮಾಯೆಯ ಪ್ರಭಾವದಿಂದಾಗಿ ಅಗಲದಲ್ಲಿಯೂ– ಉದ್ದದಲ್ಲಿಯೂ ಒಂದು ಯೋಜನದಷ್ಟು ವಿಸ್ತಾರವುಳ್ಳ ಆ ಧ್ವಜವು ಪರ್ವತಗಳ ಮತ್ತು ವೃಕ್ಷಗಳ ಮಧ್ಯದಲ್ಲಿ ಹಾದುಹೋಗುತ್ತಿದ್ದರೂ ಅಡೆ-ತಡೆಗಳೇ ಇಲ್ಲದೇ ಹೋಗುತ್ತಿರುತ್ತದೆ. ಧ್ವಜವು ಅಷ್ಟು ವಿಶಾಲ ವಾಗಿದ್ದರೂ ಪರ್ವತಕ್ಕಾಗಲೀ ವೃಕ್ಷಗಳಿಗಾಗಲೀ ಸಿಕ್ಕಿಹಾಕಿಕೊಳ್ಳುವುದಿಲ್ಲ.

ಯಜ್ಞೇಶ್ವರನಿಗೆ ಸಮಾನವಾದ ರೂಪವನ್ನು ಹೊಂದಿ ಕಾಂತಿಯುಕ್ತ ವಾಗಿರುವ ಧನಂಜಯನ ಧ್ವಜವು ಈಗಾಗಲೇ ಮೇಲೆದ್ದುನಿಂತಿದೆ.

ಕರ್ಣ! ಯಾವಾಗ ನೀನು ಯುದ್ಧದಲ್ಲಿ–ಶ್ವೇತಾಶ್ವಯುಕ್ತವಾದ ರಥದಲ್ಲಿ ಕುಳಿತು ಕೃಷ್ಣನನ್ನು ಸಾರಥಿಯನ್ನಾಗಿ ಹೊಂದಿದ ಅರ್ಜುನನನ್ನು ನೋಡುವೆಯೋ ಮತ್ತು ಅರ್ಜುನನು ಐಂದ್ರ-ಆಗ್ನೇಯ-ವಾಯವ್ಯಗಳೇ

ಮೊದಲಾದ ಮಂತ್ರಾಸ್ತ್ರಗಳನ್ನು ಪ್ರಯೋಗಿಸುವುದನ್ನು ನೋಡುವೆಯೋ ಮತ್ತು ವಜ್ರಾಯುಧಕ್ಕೆ ಸಮಾನವಾದ ಗಾಂಡೀವಧನುಸ್ಸಿನ ಭಯಂಕರವಾದ ಟೇಂಕಾರಶಬ್ದವನ್ನು ಯಾವಾಗ ಕೇಳುವೆಯೋ–ಆಗ ತ್ರೇತಾಯುಗವಾಗಲೀ, ಕೃತಯುಗವಾಗಲೀ, ದ್ವಾಪರಯುಗವಾಗಲೀ ಇರುವುದಿಲ್ಲ. ಕೇವಲ ಕಲಹ ಸ್ವರೂಪವಾದ ಕಲಿಯುಗದ ಪ್ರಭಾವವೊಂದು ಮಾತ್ರವೇ ಇರುತ್ತದೆ. (ಟೇಂಕಾರಶಬ್ದವನ್ನು ಕೇಳಿದಾಗ ಅದು ಯುದ್ಧವಾಗುತ್ತದೆ. ಕೃತ-ದ್ವಾಪರಗಳೆಂಬ ದಾಳಗಳನ್ನೊಳಗೊಂಡ ಪಗಡೆಯಾಟವಾಗುವುದಿಲ್ಲ.)

ಯಾವಾಗಲೂ ಜಪ-ಹೋಮಾದಿಗಳಲ್ಲಿಯೇ ಆಸಕ್ತನಾದ, ತನ್ನ ಅಗಾಧವಾದ ಸೈನ್ಯವನ್ನು ಸಂರಕ್ಷಿಸುತ್ತಿರುವ, ಸೂರ್ಯನಂತೆಯೇ ಎದುರಿಸಿ ನಿಲ್ಲಲು ಅಸಾಧ್ಯನಾದ, ಶತ್ರುಗಳ ಸೈನ್ಯವನ್ನು ಪರಿತಾಪಗೊಳಿಸುವ ಕುಂತೀಪುತ್ರನಾದ ಯುಧಿಷ್ಠಿರನನ್ನು ಯುದ್ಧಭೂಮಿಯಲ್ಲಿ ಯಾವಾಗ ನೋಡುವೆಯೋ–ಆಗ ಕೃತ-ತ್ರೇತಾ-ದ್ವಾಪರಗಳ ಧರ್ಮವಿರುವುದಿಲ್ಲ. ಕೇವಲ ಕಲಿಯುಗದ ಧರ್ಮವು ಮಾತ್ರವೇ ಇರುತ್ತದೆ. ಮಹಾಬಲಿಷ್ಠನಾದ ದುಃಶಾಸನನ ರಕ್ತವನ್ನು ಕುಡಿದು ಸಮರಾಂಗಣದಲ್ಲಿ ನೃತ್ಯಮಾಡುವ, ಮದೋದಕವನ್ನು ಸುರಿಸುತ್ತಿರುವ ಆನೆಯಂತೆ ಶತ್ರುಪಕ್ಷದ ಗಜಸೈನ್ಯವನ್ನು ಸದೆಬಡಿಯುವ ಭೀಮಸೇನನನ್ನು ರಣರಂಗದಲ್ಲಿ ಯಾವಾಗ ಕಾಣುವೆಯೋ–ಆಗ ಕೃತ-ತ್ರೇತಾ-ದ್ವಾಪರಗಳ ಧರ್ಮಗಳೊಂದೂ ಇರುವುದಿಲ್ಲ. ಕೇವಲ ಕಲಿಯುಗದ ಧರ್ಮಮಾತ್ರವಿರುತ್ತದೆ. ಸಂಗ್ರಾಮಭೂಮಿಯಲ್ಲಿ ರಭಸದಿಂದ ಯುದ್ಧಕ್ಕೆ ಮುನ್ನುಗ್ಗಿ ಬರುವ ದ್ರೋಣರನ್ನೂ, ಭೀಷ್ಮರನ್ನೂ, ಕೃಪರನ್ನೂ, ದುರ್ಯೋಧನನನ್ನೂ ಮತ್ತು ಸೈಂಧವರಾಜನಾದ ಜಯದ್ರಥನನ್ನೂ ಏಕಾಕಿಯಾದ ಅರ್ಜುನನೊಬ್ಬನೇ ತಡೆದು ನಿಲ್ಲಿಸುವುದನ್ನು ನೀನು ಯಾವಾಗ ನೋಡುವೆಯೋ– ಆಗ ಕೃತ-ತ್ರೇತಾ-ದ್ವಾಪರಯುಗಗಳ ಧರ್ಮವೊಂದೂ ಇರುವುದಿಲ್ಲ. 'ಕಡಿ-ಹೊಡಿ-ಬಡಿ'-ಎಂದು ಹೇಳುವ ಕೋಪಪ್ರಧಾನವಾದ ಕಲಿಯುಗದ ಧರ್ಮವು ಮಾತ್ರವೇ ಇರುತ್ತದೆ.

ಮಹಾಬಲಿಷ್ಠವಾದ ಎರಡು ಮದಿಸಿದ ಆನೆಗಳಂತೆ–ಧೃತರಾಷ್ಟ್ರನ ಮಕ್ಕಳ ಸೈನ್ಯವನ್ನು ಕ್ಷೋಭೆಗೊಳಿಸುವ, ಪ್ರಗಾಢವಾದ ಶಸ್ತ್ರಾಸ್ತ್ರಗಳ

ಪರಸ್ಪರ ಪ್ರಹರಣಕಾಲದಲ್ಲಿ ಶತ್ರುಪಕ್ಷದೊಳಗೆ ನುಗ್ಗಿ ಅವರ ರಥಗಳನ್ನು ಧ್ವಂಸಮಾಡುವ, ಮಾದ್ರಿಯ ಮಕ್ಕಳಾದ ನಕುಲ-ಸಹದೇವರನ್ನು ನೀನು ಸಮರಾಂಗಣದಲ್ಲಿ ಯಾವಾಗ ನೋಡುವೆಯೋ–ಆಗ ಕೃತ-ತ್ರೇತಾ-ದ್ವಾಪರಯುಗಗಳ ಧರ್ಮವೊಂದೂ ಇರುವುದಿಲ್ಲ. ಕ್ರೋಧಾಸೂಯೆಗಳಿಗೆ ತವರಾದ ಕಲಿಯುಗದ ಧರ್ಮವಿರುತ್ತದೆ. ಕರ್ಣ! ನೀನು ಈಗಲೇ ಹೋಗಿ ದ್ರೋಣರಿಗೂ, ಭೀಷ್ಮನಿಗೂ ಮತ್ತು ಕೃಪರಿಗೂ ಹೀಗೆ ಹೇಳು :

"ಇದು ಸೌಮ್ಯಮಾಸವಾಗಿದೆ. (ಸುಖದಾಯಕವಾದ ಮಾಸವಾಗಿದೆ.) ಈ ಮಾಸದಲ್ಲಿ ಪ್ರಾಣಿಗಳಿಗೆ ಹುಲ್ಲನ್ನೂ, ಆಹಾರಪದಾರ್ಥಗಳನ್ನೂ, ಒಲೆಗೆ ಸೌದೆಯನ್ನೂ ಸುಖವಾಗಿ ಶೇಖರಿಸಿಟ್ಟುಕೊಳ್ಳಬಹುದು. ಎಲ್ಲ ವನಸ್ಪತಿಗಳೂ ಫಲಭರಿತವಾಗಿವೆ ಮತ್ತು ಸಮೃದ್ಧವಾಗಿವೆ. ನೊಣಗಳ (ಕ್ರಿಮಿ-ಕೀಟಾದಿಗಳ) ಬಾಧೆಯಿರುವುದಿಲ್ಲ. ನೆಲವು ಕೆಸರಿನಿಂದ ರಹಿತವಾಗಿದೆ. ನೀರು ರುಚಿಕರವಾಗಿದೆ. ಈಗ ಶಿಶಿರರ್ತುವಾಗಿದ್ದು ಹೆಚ್ಚು ಬಿಸಿಲಿರುವುದಿಲ್ಲ. ಶೀತವೂ ಅತಿಯಾಗಿಲ್ಲ. ವಾತಾವರಣವು ಸುಖದಾಯಕವಾಗಿದೆ.

ಇಂದಿಗೆ ಎಂಟನೆಯ ದಿವಸಕ್ಕೆ ಸರಿಯಾಗಿ ಅಮಾವಾಸ್ಯೆಯು ಬರುತ್ತದೆ. ಅಮಾವಾಸ್ಯೆಯು ಶಕ್ರದೇವಾತ್ಮಕವೆಂದು ಹೇಳುತ್ತಾರೆ. ಆ ಅಮಾವಾಸ್ಯೆಯ ದಿನದಲ್ಲೇ ಉಭಯಪಕ್ಷಗಳಿಗೂ ಯುದ್ಧವು ಪ್ರಾರಂಭವಾಗಲಿ."

ಕರ್ಣ! ಧೃತರಾಷ್ಟ್ರನ ಮಗನಾದ ದುರ್ಯೋಧನನ ಸಲುವಾಗಿ ಯುದ್ಧಮಾಡಲು ಯಾವ ರಾಜರು ಬಂದಿರುತ್ತಾರೆಯೋ- ಅವರೆಲ್ಲ ರಿಗೂ ಈ ವಿಷಯವನ್ನು ನೀನು ಹೇಳಿ-**'ಯದ್ವೋ ಮನೀಷಿತಂ ತದ್ವೈ ಸರ್ವಂ ಸಮ್ಪಾದಯಾಮ್ಯಹಮ್'** 'ನಿಮ್ಮ ಮನಸ್ಸಿನಲ್ಲಿ ಯಾವ ಯಾವ ಅಭಿಲಾಷೆಗಳಿವೆಯೋ ಅವುಗಳೆಲ್ಲವನ್ನೂ ನಾನು ಪೂರೈಸಿಕೊಡುತ್ತೇನೆ' – ಎಂಬುದಾಗಿ ಕೃಷ್ಣನು ಹೇಳಿರುವನೆಂದೂ– ನೀನು ಅವರೊಡನೆ ಹೇಳಬೇಕು. ಕರ್ಣ! ನಿನ್ನ ಇಚ್ಛೆಗೆ ಅನುಗುಣವಾಗಿಯೇ ದುರ್ಯೋಧನನ ವಶಾನುವರ್ತಿ

ಗಳಾದ ರಾಜರೂ, ರಾಜಪುತ್ರರೂ ಶಸ್ತ್ರಾಘಾತಗಳಿಂದ ಮರಣಹೊಂದಿ ಉತ್ತಮವಾದ ಗತಿಯನ್ನು (ವೀರಸ್ವರ್ಗವನ್ನು) ಪಡೆದುಕೊಳ್ಳುತ್ತಾರೆ."

ಗ೪೨ನೆಯ ಅಧ್ಯಾಯವು ಮುಗಿಯಿತು.

ಗ೪೩ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ)

## ಕರ್ಣನು ಪಾಂಡವರಿಗೆ ಸಂಭವಿಸುತ್ತಿರುವ ವಿಜಯಸೂಚಕವಾದ ಶಕುನಗಳನ್ನೂ-ಕೌರವರಿಗಾಗುತ್ತಿರುವ ದುರ್ನಿಮಿತ್ತಗಳನ್ನೂ ಮತ್ತು ತನಗಾದ ಕನಸನ್ನೂ ವಾಸುದೇವನಿಗೆ ವಿವರಿಸಿ ಹೇಳಿದುದು

ಸಂಜಯನು ಧೃತರಾಷ್ಟ್ರನನ್ನು ಕುರಿತು ಹೇಳುತ್ತಾನೆ :

**ಕೇಶವಸ್ಯ ತು ತದ್ವಾಕ್ಯಂ ಕರ್ಣಃ ಶ್ರುತ್ವಾ ಹಿತಂ ಶುಭಮ್ ।**
**ಅಬ್ರವೀದಭಿಸಮ್ಪೂಜ್ಯ ಕೃಷ್ಣಂ ತಂ ಮಧುಸೂದನಮ್ ॥೧॥**

ಮಹಾರಾಜ! ಹಿತಕರವೂ ಶುಭಕರವೂ ಆದ ಶ್ರೀಕೃಷ್ಣನ ಮಾತನ್ನು ಕೇಳಿ ಅವನನ್ನು ಅಭಿನಂದಿಸುತ್ತಾ ಕರ್ಣನು ಹೇಳಿದನು :

"ಕೃಷ್ಣ! ನೀನು ಈ ವಿಷಯಗಳೆಲ್ಲವನ್ನೂ ತಿಳಿದವನಾಗಿದ್ದರೂ ಅಥವಾ ಹೀಗೆಯೇ ಮಾಡಬೇಕೆಂದು ಮೊದಲೇ ನಿಶ್ಚಯಿಸಿದ್ದರೂ ನನ್ನನ್ನೇಕೆ ವಿಮೋಹಗೊಳಿಸುತ್ತಿರುವೆ? ನನ್ನನ್ನೇಕೆ ಭ್ರಾಂತನನ್ನಾಗಿ ಮಾಡುತ್ತಿರುವೆ? ಸಮಸ್ತಭೂಮಂಡಲದ ವಿನಾಶವೇ ಸನ್ನಿಹಿತವಾಗಿಬಿಟ್ಟಿದೆ. ಧೃತರಾಷ್ಟ್ರನ ಮಗನಾದ ದುರ್ಯೋಧನ, ದುಃಶಾಸನ, ಶಕುನಿ ಮತ್ತು ನಾನು– ಈ ವಿನಾಶಕ್ಕೆ ನಿಮಿತ್ತಮಾತ್ರದ ಕಾರಣರಾಗಿದ್ದೇವೆ. ಪಾಂಡವರಿಗೂ- ಕೌರವರಿಗೂ ಘೋರವಾದ ಯುದ್ಧವು ಅನಿವಾರ್ಯ. ಯುದ್ಧವು ನಡೆಯುವುದೆಂಬುದರಲ್ಲಿ ಸಂಶಯವೇ ಇಲ್ಲ. ಆದರೆ ಇದು ಸಾಧಾರಣಯುದ್ಧವಲ್ಲ ; ಘೋರವಾದ ಯುದ್ಧ. ವೀರಯೋಧರ ರಕ್ತವು ಭೂಮಿಯ ಮೇಲೆ ಪ್ರವಾಹರೂಪವಾಗಿ ಹರಿದು ರಣಾಂಗಣವೆಲ್ಲ ಕೆಸರಾಗತಕ್ಕ ಘೋರಯುದ್ಧವು ನಡೆಯುತ್ತದೆ. ದುರ್ಯೋಧನನ ವಶಾನುಗರಾದ ರಾಜರೂ, ರಾಜಪುತ್ರರೂ ಯುದ್ಧದಲ್ಲಿ

ಶಸ್ತ್ರವೆಂಬ ಅಗ್ನಿಯಿಂದ ದಗ್ಧರಾಗಿ ಯಮಾಲಯಕ್ಕೆ ಹೋಗುತ್ತಾರೆ. ಮಧುಸೂದನ! ನನಗೆ ಅನೇಕಭಯಂಕರಸ್ವಪ್ನಗಳಾಗುತ್ತಿವೆ. ಅನೇಕ ರೀತಿಯ ಅಪಶಕುನಗಳೂ ಮತ್ತು ಉತ್ಪಾತಗಳೂ ಅನುದಿನವೂ ದೃಷ್ಟಿಗೆ ಗೋಚರಿಸುತ್ತಿವೆ. ದುರ್ಯೋಧನನ ಪರಾಜಯವನ್ನೂ ಯುಧಿಷ್ಠಿರನ ವಿಜಯವನ್ನೂ ಘೋಷಿಸುತ್ತಿವೆಯೋ ಎಂಬಂತೆ– ರೋಮಾಂಚಕಾರಕ ವಾದ ಅನೇಕವಿಧವಾದ ಉತ್ಪಾತಗಳೂ ಶಕುನಗಳೂ ಕಾಣಿಸಿಕೊಳ್ಳುತ್ತಿವೆ. ತೀಕ್ಷ್ಣಗ್ರಹವಾದ, ಮಹಾದ್ಯುತಿಮಂತನಾದ ಶನೈಶ್ಚರನು ಪ್ರಜಾಪತಿ ಸಂಬಂಧವಾದ ರೋಹಿಣೀನಕ್ಷತ್ರವನ್ನು ಅಥವಾ ಪ್ರಜಾಪತಿಯಾದ ದುರ್ಯೋಧನನ ನಾಮನಕ್ಷತ್ರವಾದ ಉತ್ತರಾಭಾದ್ರಪದಾನಕ್ಷತ್ರವನ್ನು ಪೀಡಿಸುತ್ತಿದ್ದಾನೆ. ಪ್ರಜಾಪತಿಯಾದ ದುರ್ಯೋಧನನ ನಕ್ಷತ್ರವನ್ನು ಅರ್ಥಾತ್ ದುರ್ಯೋಧನನನ್ನು ಪೀಡಿಸುವುದರ ಮೂಲಕವಾಗಿ ಅವನ ಪ್ರಜಾಕೋಟಿಯನ್ನೂ ಅತ್ಯಧಿಕವಾಗಿ ಪೀಡಿಸುತ್ತಿದ್ದಾನೆ. ಅಂಗಾರಕನು ಜ್ಯೇಷ್ಠಾನಕ್ಷತ್ರಕ್ಕೆ ಹೋಗದೆಯೇ ವಕ್ರನಾಗಿ ಅನೂರಾಧೆಯಲ್ಲೇ ಉಳಿದಿದ್ದಾನೆ. ಇದರಿಂದಾಗಿ ರಾಜ್ಯಕ್ಕೆ ಜ್ಯೇಷ್ಠಭೂತನಾದ ರಾಜನ ಎಲ್ಲ ಮಿತ್ರರನ್ನೂ ಯಮನೊಡನೆ ಸಂಯೋಗಹೊಂದಿಸುವಂತೆ (ವಿನಾಶಗೊಳಿಸುವಂತೆ) ಕಾಣುತ್ತಿದೆ. ವಾರ್ಷ್ಣೇಯ! ನಿಶ್ಚಯವಾಗಿಯೂ ಕುರುಗಳಿಗೆ ಮಹಾಸಂಕಟವು ಒದಗಿಬಂದಿದೆ. ಮಹಾಪಾತವೆಂಬ ಜ್ಯೋತಿಯು (ಗ್ರಹವು) ಚಿತ್ತಾನಕ್ಷತ್ರವನ್ನು ಪೀಡಿಸುತ್ತಿರುವುದೂ ಈ ಸಮಯದಲ್ಲಿ ಒಂದು ವಿಶೇಷವಾಗಿದೆ. (ಇದು ರಾಜರೆಲ್ಲರ ವಿನಾಶವನ್ನು ಸೂಚಿಸುತ್ತದೆ.) ಚಂದ್ರನ ಸುತ್ತಲೂ ಪರಿವೇಷವು ಕಾಣುತ್ತಿದೆ. ರಾಹುವು ಸೂರ್ಯನ ಕಡೆಗೆ ಧಾವಿಸುತ್ತಿದ್ದಾನೆ. ಉಲ್ಕೆಗಳು ವಜ್ರಪಾತಕ್ಕೆ ಸದೃಶವಾಗಿ ಶಬ್ದಮಾಡುತ್ತಾ, ಕಂಪಿಸುತ್ತಾ ಆಕಾಶದಿಂದ ಬೀಳುತ್ತಿವೆ. ಆನೆಗಳು ವಿಕಾರವಾಗಿ ಶಬ್ದ ಮಾಡುತ್ತಿವೆ. ಕುದುರೆಗಳು ಕಣ್ಣೀರು ಸುರಿಸುತ್ತಿವೆ. ಹುಲ್ಲನ್ನು ಆಸಕ್ತಿಯಿಂದ ತಿನ್ನುತ್ತಿಲ್ಲ. ನೀರನ್ನು ಕುಡಿಯುತ್ತಿಲ್ಲ. ಹುಲ್ಲೂ-ನೀರೂ ಅವುಗಳಿಗೆ ಬೇಡವಾಗಿದೆ. ಮಹಾಬಾಹೋ! ಈ ವಿಧವಾದ ಉತ್ಪಾತಲಕ್ಷಣಗಳು (ದುರ್ನಿಮಿತ್ತಗಳು) ಕಂಡುಬಂದಲ್ಲಿ ದಾರುಣವಾದ ಪ್ರಾಣಿ ನಾಶಕವಾದ ಮಹಾಭಯವು ಸನ್ನಿಹಿತವಾಗುವುದೆಂದು ಬಲ್ಲವರು ಹೇಳುತ್ತಾರೆ.

ಕುದುರೆಗಳೂ ಮತ್ತು ಆನೆಗಳೂ ಸ್ವಲ್ಪವೇ ಆಹಾರವನ್ನು ತಿನ್ನುತ್ತಿವೆ. ಮನುಷ್ಯರೂ ಸ್ವಲ್ಪವೇ ಆಹಾರವನ್ನು ಸೇವಿಸುತ್ತಿದ್ದಾರೆ. ಆದರೆ ಆನೆ-ಕುದುರೆಗಳೂ ಮತ್ತು ಮನುಷ್ಯರೂ ವಿಸರ್ಜಿಸುವ ಮಲವು ಹೆಚ್ಚು ಪ್ರಮಾಣದಲ್ಲಿರುತ್ತದೆ. ದುರ್ಯೋಧನನ ಎಲ್ಲ ಸೈನಿಕರಲ್ಲಿಯೂ ಹೀಗೆಯೇ ಆಗುತ್ತಿದೆ. ಇದೂ ಪರಾಭವಸೂಚಕವೆಂದು ಶಕುನಶಾಸ್ತ್ರಜ್ಞರು ಹೇಳುತ್ತಾರೆ. ಆದರೆ ಪಾಂಡವರ ಕಡೆಯ ವಾಹನಗಳೆಲ್ಲವೂ ಪ್ರಹೃಷ್ಟವಾಗಿರುವುವೆಂಬ ವರ್ತಮಾನವು ಬಂದಿರುತ್ತದೆ. ಮೃಗ-ಪಕ್ಷಿಗಳೆಲ್ಲವೂ ಅವರ ಬಲಗಡೆಯಿಂದ ಹಾದುಹೋಗುತ್ತಿವೆಯಂತೆ. ಇದು ಅವರಿಗೆ ವಿಜಯಸೂಚಕವಾಗಿರುತ್ತದೆ. ಇಲ್ಲಿ ನಾವು ನೋಡುತ್ತಿರುವಂತೆಯೇ ಮೃಗ-ಪಕ್ಷಿಗಳೆಲ್ಲವೂ ದುರ್ಯೋಧನನಿಗೆ ಅಪಸವ್ಯವಾಗಿ (ಎಡಗಡೆಯಿಂದ) ಹೋಗುತ್ತಿರುತ್ತವೆ. ಶರೀರಗಳೇ ಇಲ್ಲದೇ ಶಬ್ದಗಳು ಮಾತ್ರ ಕೇಳುತ್ತಿರುತ್ತವೆ. ಇದೂ ಪರಾಭವಲಕ್ಷಣವೆಂದು ಶಕುನಶಾಸ್ತ್ರಜ್ಞರು ಹೇಳುತ್ತಾರೆ.

ಶುಭಶಕುನಸೂಚಕಗಳಾದ ನವಿಲುಗಳು, ಹಂಸ, ಸಾರಸ, ಚಾತಕ ಪಕ್ಷಿಗಳು, 'ಜೀವ-ಜೀವ' ಎಂಬ ಪದೇ-ಪದೇ ಶಬ್ದಮಾಡುವ ಚಕೋರಾದಿ ಪಕ್ಷಿಗಳ ಸಮೂಹಗಳು-ಪಾಂಡವರನ್ನು ಅನುಸರಿಸಿ ಹೋಗುತ್ತಿವೆ. ರಣಹದ್ದುಗಳು, ಕಂಕಜಾತಿಯ ಹದ್ದುಗಳು, ಬಕಪಕ್ಷಿಗಳು, ಗಿಡಗಗಳು, ರಾಕ್ಷಸರು, ತೋಳಗಳು, ನೊಣಗಳ ಸಮೂಹಗಳು–ಕೌರವರನ್ನು ಅನುಸರಿಸಿ ಹೋಗುತ್ತಿವೆ. ದುರ್ಯೋಧನನ ಸೈನ್ಯದಲ್ಲಿ ಭೇರಿಗಳನ್ನು ತಾಡನಮಾಡಿದರೂ ಸರಿಯಾಗಿ ಶಬ್ದವೇ ಬರುವುದಿಲ್ಲ. ಆದರೆ ಪಾಂಡವರ ಸೈನ್ಯದಲ್ಲಿ ತಾಡನಮಾಡದಿದ್ದರೂ ತಾನೇತಾನಾಗಿ ಪಟಹಗಳು ಶಬ್ದಮಾಡುತ್ತಿರುತ್ತವೆ. ದುರ್ಯೋಧನನ ಸೈನ್ಯದ ಪ್ರದೇಶಗಳಲ್ಲಿರುವ ಬಾವಿಗಳಿಂದ ನೀರು ತುಂಬಿಕೊಳ್ಳುವಾಗ ಗೋವುಗಳೂ ಮತ್ತು ಎತ್ತುಗಳೂ ಶಬ್ದಮಾಡುವಂತೆ ಶಬ್ದವಾಗುತ್ತಿದೆ. ಇದು ಪರಾಭವಲಕ್ಷಣವೆಂದು ಲಕ್ಷಣಶಾಸ್ತ್ರಜ್ಞರು ಹೇಳುತ್ತಾರೆ. ದುರ್ಯೋಧನನ ಸೈನಿಕರ ಮೇಲೆ ದೇವೇಂದ್ರನು ಮಾಂಸ-ರಕ್ತಗಳ ಮಳೆಯನ್ನು ಸುರಿಸುತ್ತಿದ್ದಾನೆ. ಇದ್ದಕ್ಕಿದ್ದಂತೆಯೇ ಆಕಾಶದಲ್ಲಿ ತೇಜೋವಿಶಿಷ್ಟವಾದ ಪ್ರಾಕಾರಗಳಿಂದಲೂ, ಕಂದರಗಳಿಂದಲೂ, ಕ್ರೀಡಾಪರ್ವತ

ಗಳಿಂದಲೂ ಮತ್ತು ತಳಿರು-ತೋರಣಗಳಿಂದಲೂ ಕೂಡಿರುವ ಗಂಧರ್ವರ ಪಟ್ಟಣವು ಕಾಣಿಸಿಕೊಳ್ಳುತ್ತಿದೆ. ಸೂರ್ಯನನ್ನು ಆವರಿಸಿ ಕಪ್ಪಾದ ಪರಿವೇಷವು ಕಾಣಿಸಿಕೊಳ್ಳುತ್ತಿದೆ. ಸೂರ್ಯೋದಯ-ಸೂರ್ಯಾಸ್ತಗಳ ಎರಡು ಸಂಧ್ಯೆಗಳಲ್ಲಿಯೂ ಗುಳ್ಳೇನರಿಗಳು ಮಹಾಭಯವನ್ನು ಸೂಚಿಸುತ್ತಾ ವಿಕಾರಸ್ವರದಿಂದ ಅರಚುತ್ತಿವೆ. ಇವೆಲ್ಲವೂ ಪರಾಭವಲಕ್ಷಣಗಳೇ ಆಗಿವೆ. ಮಾಧವ! ಒಂದೇ ರೆಕ್ಕೆಯುಳ್ಳ, ಒಂದೇ ಕಣ್ಣುಳ್ಳ ಮತ್ತು ಒಂದೇ ಕಾಲುಳ್ಳ ಪಕ್ಷಿಗಳು ಬಹುಭಯಂಕರವಾಗಿ ಮತ್ತು ಘೋರವಾಗಿ ಶಬ್ದಮಾಡುತ್ತಿವೆ. ಇದೂ ಪರಾಭವದ ಲಕ್ಷಣವೇ ಆಗಿದೆ. ಕುತ್ತಿಗೆಯಲ್ಲಿ ಕಪ್ಪುಬಣ್ಣವಿರುವ, ಕೆಂಪುಬಣ್ಣದ ಕಾಲುಗಳಿಂದ ಕೂಡಿರುವ, ಭಯೋತ್ಪಾದಕಗಳಾದ ಪಕ್ಷಿಗಳು ಸಂಧ್ಯಾಕಾಲದಲ್ಲಿ ಎದುರಾಗಿ ಹೋಗುತ್ತಿವೆ. ಇದೂ ಪರಾಭವದ ಲಕ್ಷಣವೇ ಆಗಿದೆ. ದುರ್ಯೋಧನನು ಇತ್ತೀಚೆಗೆ ಬ್ರಾಹ್ಮಣರನ್ನು ದ್ವೇಷಿಸುತ್ತಿದ್ದಾನೆ. ಗುರುಜನರನ್ನೂ ದ್ವೇಷಿಸುತ್ತಿದ್ದಾನೆ. ಇಷ್ಟುಮಾತ್ರವಲ್ಲ. ತನ್ನಲ್ಲಿಯೇ ಅನುರಕ್ತರಾದ ಭಕ್ತಿಭಾವದಿಂದ ಕೂಡಿರುವ ಸೇವಕರನ್ನೂ ದ್ವೇಷಿಸುತ್ತಿದ್ದಾನೆ. ಅದೂ ಪರಾಭವದ ಲಕ್ಷಣವೇ ಆಗಿದೆ. ಈ ಸಮಯದಲ್ಲಿ ಪೂರ್ವದಿಕ್ಕು ಕೆಂಪುಬಣ್ಣದಿಂದ ಕೂಡಿದೆ. ದಕ್ಷಿಣದಿಕ್ಕು ಆಯುಧ (ಕಪ್ಪು) ವರ್ಣವುಳ್ಳದ್ದಾಗಿದೆ. ಪಶ್ಚಿಮದಿಕ್ಕು ಮಣ್ಣಿನ ಪಾತ್ರೆಯ (ಹಸಿಮಡಿಕೆಯ) ಬಣ್ಣವನ್ನು ಹೊಂದಿದೆ. ಉತ್ತರದಿಕ್ಕು ಶಂಖದಂತೆ ಪ್ರಕಾಶಮಾನವಾಗಿದೆ. ದುರ್ಯೋಧನನ ಸೈನಿಕರಿರುವೆಡೆಯಲ್ಲಿ ಎಲ್ಲ ದಿಕ್ಕುಗಳೂ ಈ ವಿಧವಾದ ಬಣ್ಣಗಳಿಂದ ಪ್ರದೀಪ್ತವಾಗಿವೆ. ಈ ವಿಧವಾದ ದುರ್ಘಟನೆಗಳುಂಟಾದರೆ ಮುಂದೆ ಮಹಾಭಯಂಕರವಾದ ದಾರುಣವಾದ ಪರಿಣಾಮವುಂಟಾಗುವು ದೆಂದು ಶಕುನಶಾಸ್ತ್ರವಿದರು ತಿಳಿಯುತ್ತಾರೆ.

ಮಾಧವ! ನನಗಾದ ಸ್ವಪ್ನದ ಕಡೆಯಲ್ಲಿ ನಾನೊಂದು ದೃಶ್ಯವನ್ನು ಕಂಡೆನು. ಯುಧಿಷ್ಠಿರನು ತನ್ನ ಅನುಜರಿಂದೊಡಗೂಡಿ ಸಾವಿರ ಮೆಟ್ಟಿಲು ಗಳಿದ್ದ ಪ್ರಾಸಾದವನ್ನು ಹತ್ತುತ್ತಿದ್ದನು. ಅವರೆಲ್ಲರೂ ಧರಿಸಿದ್ದ ಶಿರಸ್ತ್ರಾಣಗಳು ಬಿಳುಪಾಗಿದ್ದುವು. ಅವರೆಲ್ಲರೂ ಬಿಳಿಯದಾದ ವಸ್ತ್ರಗಳನ್ನುಟ್ಟಿದ್ದರು. ಅವರೆಲ್ಲರ ಆಸನಾದಿಗಳೂ ಶುಭ್ರವಾಗಿದ್ದುವು. ಆ ಎಲ್ಲವನ್ನೂ ನಾನು ಅಂದಿನ ನನ್ನ ಕನಸಿನ ಕಡೆಯ ಭಾಗದಲ್ಲಿ ಕಂಡೆನು. ನಿನ್ನ ಆಸನವೂ

ಶುಭ್ರವಾಗಿದ್ದುದನ್ನು ನಾನಲ್ಲಿ ಕಂಡೆನು. ನನ್ನ ಆ ಸ್ವಪ್ನದ ಕಡೆಯಲ್ಲಿ ರಕ್ತದಿಂದ ಮಲಿನವಾದ ಮತ್ತು ಕರುಳುಗಳಿಂದ ಪರಿಕ್ಷಿಪ್ತವಾದ ಭೂಮಿಯನ್ನು ನಾನು ಕಂಡೆನು.

ಅಲ್ಲೊಂದು ದೊಡ್ಡದಾದ ಮೂಳೆಗಳ ರಾಶಿಯೇ ಬಿದ್ದಿದ್ದಿತು. ಅಮಿತೌಜಸ್ಕನಾದ ಯುಧಿಷ್ಠಿರನು ಆ ಮೂಳೆಗಳ ರಾಶಿಯ ಮೇಲೆ ಹತ್ತಿ ಸಂಹೃಷ್ಟನಾಗಿ ಸುವರ್ಣಪಾತ್ರೆಯಲ್ಲಿ ಪಾಯಸವನ್ನು ಕುಡಿಯುತ್ತಿದ್ದುದನ್ನು ನಾನು ಆ ಕನಸಿನಲ್ಲಿ ಕಂಡೆನು. ಕೃಷ್ಣ! ನಾನು ಆ ಕನಸಿನಲ್ಲಿ ಯುಧಿಷ್ಠಿರನು ಈ ವಸುಂಧರೆಯನ್ನೇ ಗಬ-ಗಬನೆ ನುಂಗುತ್ತಿರುವಂತೆ ಕಂಡೆನು. ನಿನ್ನಿಂದ ಕೊಡಲ್ಪಡುವ ಈ ವಸುಂಧರೆಯನ್ನು ಯುಧಿಷ್ಠಿರನು ಆಳುತ್ತಾನೆಂಬುದು ಇದರಿಂದಲೇ ವ್ಯಕ್ತವಾದಂತಾಯಿತಲ್ಲವೇ? ಧರ್ಮಾತ್ಮನಾದ ಯುಧಿಷ್ಠಿರನು ಈ ವಸುಂಧರೆಯನ್ನು ಪಡೆದುಕೊಳ್ಳುವನೆಂಬುದರಲ್ಲಿ ಸಂಶಯವೇ ಇಲ್ಲ. ಅದೇ ಕನಸಿನ ಕಡೆಯಲ್ಲಿ ನಾನು ಮತ್ತೊಂದು ದೃಶ್ಯವನ್ನೂ ಕಂಡೆನು. ಮಾಧವ! ಭೀಮಕರ್ಮನಾದ ನರವ್ಯಾಘ್ರನಾದ ವೃಕೋದರನು ಗದಾಪಾಣಿಯಾಗಿ ದೊಡ್ಡದಾದ ಪರ್ವತವೊಂದನ್ನು ಹತ್ತಿ ಈ ಪೃಥ್ವಿಯನ್ನೇ ನುಂಗುತ್ತಿರುವಂತೆ ಸ್ವಪ್ನವನ್ನು ಕಂಡೆನು. ಮುಂದೆ ನಡೆಯಲಿರುವ ಮಹಾಯುದ್ಧದಲ್ಲಿ ನಮ್ಮೆಲ್ಲರನ್ನೂ ಭೀಮನು ಸಂಹರಿಸುವನೆಂಬುದು ಇದರಿಂದ ಸುಸ್ಪಷ್ಟವಾಗಿಯೇ ಇದೆ. ಈ ವಿಷಯವನ್ನು ನಾನು ಚೆನ್ನಾಗಿ ತಿಳಿದುಕೊಂಡಿರುತ್ತೇನೆ. 'ಯತೋ ಧರ್ಮಸ್ತತೋ ಜಯಃ' - 'ಎಲ್ಲಿ ಧರ್ಮವಿದೆಯೋ ಆ ಪಕ್ಷಕ್ಕೇ ಜಯವು ನಿಶ್ಚಿತವಾಗಿಯೇ ಇದೆ.' ಆ ಸ್ವಪ್ನದ ಕಡೆಯಲ್ಲಿ ಮತ್ತೊಂದು ದೃಶ್ಯವನ್ನೂ ಕಂಡೆನು. ಮಾಧವ! ಗಾಂಡೀವಧನ್ವನಾದ ಧನಂಜಯನು ನಿನ್ನೊಡನೆ ಬಿಳಿಯದಾದ ಆನೆಯೊಂದರ ಮೇಲೆ ಕುಳಿತು ಅತ್ಯಂತಕಾಂತಿಯಿಂದ ಪ್ರಜ್ವಲಿಸುತ್ತಿದ್ದುದನ್ನೂ ಕಂಡೆನು. ಆದುದರಿಂದ ದುರ್ಯೋಧನನೇ ಮೊದಲಾದ ರಾಜರೆಲ್ಲರನ್ನೂ ಯುದ್ಧದಲ್ಲಿ ನೀವು ಸಂಹರಿಸುವಿರಿ. ಈ ವಿಷಯದಲ್ಲಿ ಸಂಶಯಲೇಶವೂ ಇಲ್ಲ. ನಕುಲ, ಸಹದೇವ ಮತ್ತು ಸಾತ್ಯಕಿ–ಇವರನ್ನೂ ನಾನು ಕನಸಿನಲ್ಲಿ ಕಂಡೆನು. ಅವರು ಬಿಳಿಯದಾದ ಕನಕಾಂಗದ-ಕೇಯೂರಗಳನ್ನು ಧರಿಸಿದ್ದರು. ಬಿಳಿಯ ಮಾಲೆಗಳಿಂದಲೂ, ಬಿಳಿಯ ವಸ್ತ್ರಗಳಿಂದಲೂ ಅಲಂಕೃತ

ರಾಗಿದ್ದರು. ಆ ನರವ್ಯಾಘ್ರರು ಉತ್ತಮವಾದ ನರವಾಹನಾರೂಢರಾಗಿ ಕುಳಿತಿದ್ದರು. (ಮನುಷ್ಯರು ಹೊತ್ತ ಶ್ರೇಷ್ಠವಾದ ಪಲ್ಲಕ್ಕಿಗಳಲ್ಲಿ ಕುಳಿತಿದ್ದರು.) ತಲೆಯ ಮೇಲೆ ಶ್ವೇತಚ್ಛತ್ರಗಳಿದ್ದುವು. ಶ್ವೇತವಸ್ತ್ರಗಳನ್ನು ಧರಿಸಿದ್ದ ಆ ಮೂವರನ್ನೂ ನಾನು ಕನಸಿನಲ್ಲಿ ಕಂಡೆನು. ನಕುಲ, ಸಹದೇವ, ಸಾತ್ಯಕಿ–ಆ ಮೂವರಿಗೂ ಬಿಳಿಯದಾದ ಶಿರಸ್ತ್ರಾಣಗಳೂ ಇದ್ದುವು. ಕನಸಿನಲ್ಲಿ ನಾನು ಪಾಂಡವರನ್ನು ಮಾತ್ರವೇ ಕಾಣಲಿಲ್ಲ ; ದುರ್ಯೋಧನನ ಸೈನಿಕರನ್ನೂ ಕಂಡೆನು.

ಕೇಶವ! ದುರ್ಯೋಧನನ ಕಡೆಯವರಲ್ಲಿ ಯಾರು-ಯಾರನ್ನು ಕಂಡೆನೆಂಬುದನ್ನು ಹೇಳುವೆನು, ಕೇಳು ; ಅಶ್ವತ್ಥಾಮಾ, ಕೃಪ ಮತ್ತು ಕೃತವರ್ಮಾ ಇವರನ್ನು ನಾನು ಕನಸಿನಲ್ಲಿ ಕಂಡೆನು. ಅವರೆಲ್ಲರೂ ಬಿಳಿಯದಾದ ಶಿರಸ್ತ್ರಾಣಗಳನ್ನು ಧರಿಸಿದ್ದರು. ದುರ್ಯೋಧನನ ಕಡೆಯ ಇತರ ರಾಜರೆಲ್ಲರೂ ಕೆಂಪಾದ ಶಿರಸ್ತ್ರಾಣಗಳನ್ನೇ ಧರಿಸಿದ್ದರು. ಮಹಾರಥರಾದ ಭೀಷ್ಮ-ದ್ರೋಣರನ್ನೂ ನಾನು ಕಂಡೆನು. ಆ ಮಹಾರಥರು ಒಂಟೆಯಿಂದ ಎಳೆಯಲ್ಪಡುತ್ತಿದ್ದ ರಥದಲ್ಲಿ ಕುಳಿತು ಅಗಸ್ತ್ಯರ ದಿಕ್ಕಾದ ದಕ್ಷಿಣದಿಕ್ಕಿನ ಕಡೆಗೆ ಹೋಗುತ್ತಿದ್ದರು. ನಾನೂ ದುರ್ಯೋಧನನೊಡನೆ ಅದೇ ದಿಕ್ಕಿಗೆ ಹೋಗುತ್ತಿದ್ದೆನು. ಅರ್ಥಾತ್ ಭೀಷ್ಮ-ದ್ರೋಣರು, ದುರ್ಯೋಧನ ಮತ್ತು ನಾನು–ಈ ನಾಲ್ವರೂ ದಕ್ಷಿಣದಿಕ್ಕಿಗೆ ಹೋದಂತೆ ನನಗೆ ಕನಸಾಯಿತು. ಅತ್ಯಲ್ಪಕಾಲದಲ್ಲಿ ನಾವು ಯಮನ ಮನೆಗೆ ಹೋಗುತ್ತೇವೆಂಬುದು ಇದರಿಂದಲೇ ಸ್ಪಷ್ಟವಾಗಿದೆ. ಕೃಷ್ಣ! ನಾನೂ ಮತ್ತು ಕ್ಷತ್ರಮಂಡಲದಲ್ಲಿರುವ ಇತರ ಅಸಂಖ್ಯಾತರಾದ ರಾಜರೆಲ್ಲರೂ ಗಾಂಡೀವಾಗ್ನಿಯನ್ನು ಪ್ರವೇಶಿಸುತ್ತೇವೆಂಬುದರಲ್ಲಿ ನನಗೆ ಎಳ್ಳಷ್ಟೂ ಸಂಶಯವಿಲ್ಲ."

ಶ್ರೀಕೃಷ್ಣನು ಹೇಳುತ್ತಾನೆ :

"ನಿಜ, ಕರ್ಣ! ಭೂದೇವಿಯು ಉಪಸ್ಥಿತವಿನಾಶಳಾಗಿಬಿಟ್ಟಿದ್ದಾಳೆ. ಭೂಮಿಯ ವಿನಾಶಕಾಲವು ಸನ್ನಿಹಿತವಾಗಿಬಿಟ್ಟಿದೆ. ಏಕೆಂದರೆ : ನಾನು ಹೇಳಿದ ಮಾತು ನಿನ್ನ ಮನಸ್ಸಿನಲ್ಲಿ ನಾಟಲೇ ಇಲ್ಲ. (ಈ ಒಂದು ಕಾರಣದಿಂದಲೇ ಭೂಮಿಯು ವಿನಾಶದತ್ತ ಭರದಿಂದ ಸಾಗುತ್ತಿದೆಯೆಂದು ನಿಸ್ಸಂಶಯ

ವಾಗಿ ಹೇಳಬಹುದು. ನಾನು ಹೇಳಿದಂತೆ ನೀನು ಪಾಂಡವರ ಪಕ್ಷಕ್ಕೆ ಬಂದು ಸೇರಿದ್ದರೆ ಭೂಮಿಯ ವಿನಾಶಕ್ಕೆ ಅವಕಾಶವಿರುತ್ತಿರಲಿಲ್ಲ. ನನ್ನ ಸದ್ವಚನಗಳು ನಿನ್ನ ಮನಸ್ಸಿಗೆ ಹಿಡಿಸದೇ ಇರುವುದರಿಂದಲೇ ಭೂಮಿಯ ವಿನಾಶವು ಸನ್ನಿಹಿತವಾಗಿದೆಯೆಂದು ನಿಶ್ಚಯಿಸಬಹುದಾಗಿದೆ.) ಪ್ರಕೃತಿಯ ವೈಚಿತ್ರ್ಯವೇ ಹಾಗಿದೆ, ರಾಧೇಯ!

**ಸರ್ವೇಷಾಂ ತಾತ ಭೂತಾನಾಂ ವಿನಾಶೇ ಪ್ರತ್ಯುಪಸ್ಥಿತೇ ।**
**ಅನಯೋ ನಯಸಂಕಾಶೋ ಹೃದಯಾನ್ನಾಪಸರ್ಪತಿ ॥೪೭॥**

ಪ್ರಪಂಚದ ವಿನಾಶವೇ ಸನ್ನಿಹಿತವಾದಾಗ ಸಕಲಪ್ರಾಣಿಗಳಿಗೂ ಅನೀತಿಯೇ ನೀತಿಯಂತೆ ತೋರುತ್ತದೆ. ಆ ಭಾವನೆಯು ಏನು ಮಾಡಿದರೂ ಅವರ ಮನಸ್ಸಿನಿಂದ ಹೊರಹೋಗುವುದೇ ಇಲ್ಲ."

"ಮಹಾಬಾಹೋ! ಮಾಧವ! ವೀರಕ್ಷತ್ರಿಯರ ವಿನಾಶಕ್ಕಾಗಿಯೇ ಸಂಭವಿಸಲಿರುವ ಆ ಮಹಾಸಮರಾರ್ಣವದಿಂದ ಪಾರಾಗಿ ಜೀವಸಹಿತವಾಗಿ ಉಳಿದುಕೊಂಡು ನಿನ್ನನ್ನು ನೋಡುತ್ತೇವೆಯೇ? ಒಂದು ವೇಳೆ ಅದು ಸಾಧ್ಯವಾಗದಿದ್ದರೆ ನಮ್ಮ ಸಮಾಗಮವು (ಕಾಲಾಂತರದಲ್ಲಿ) ಸ್ವರ್ಗದಲ್ಲಾದರೂ ಆಗುವುದು ನಿಶ್ಚಯ. ಪಾಪರಹಿತನೇ! ಇಲ್ಲಿ ಸಂಧಿಸಿದಂತೆಯೇ ಸ್ವರ್ಗದಲ್ಲಿಯೂ ನಿನ್ನೊಡನೆ ನಾವು ಸಮಾಗಮವನ್ನು ಪಡೆದುಕೊಳ್ಳುತ್ತೇವೆ."

ಸಂಜಯನು ಧೃತರಾಷ್ಟ್ರನನ್ನು ಕುರಿತು ಹೇಳುತ್ತಾನೆ :

"ಮಹಾರಾಜ! ಕರ್ಣನು ಶ್ರೀಕೃಷ್ಣನೊಡನೆ ಹೀಗೆಂಬುದಾಗಿ ಹೇಳಿ ಮಾಧವನನ್ನೊಮ್ಮೆ ಗಾಢವಾಗಿ ಆಲಿಂಗಿಸಿಕೊಂಡು ಶ್ರೀಕೃಷ್ಣನಿಂದ ಬೀಳ್ಕೊಡಲ್ಪಟ್ಟವನಾಗಿ ರಥದಿಂದ ಕೆಳಗಿಳಿದನು. ಅನಂತರದಲ್ಲಿ ಶ್ರೀಕೃಷ್ಣನ ಅಗಲುವಿಕೆಯಿಂದ ದೀನಮನಸ್ಕನಾಗಿದ್ದ ಕರ್ಣನು ಸುವರ್ಣಭೂಷಿತವಾಗಿದ್ದ ತನ್ನ ರಥದಲ್ಲಿ ಕುಳಿತುಕೊಂಡು ನಮ್ಮೊಡನೆ ಪಟ್ಟಣಕ್ಕೆ ಹಿಂದಿರುಗಿದನು.

ಬಳಿಕ ಶ್ರೀಕೇಶವನು ಸಾತ್ಯಕಿಯೊಡನೆ ರಥದಲ್ಲಿ ಕುಳಿತು ದಾರುಕನೊಡನೆ ಬಾರಿ-ಬಾರಿಗೂ 'ಹೋಗು! ಬೇಗ ಹೋಗು!' – ಎಂದು ಹೇಳುತ್ತಾ ಶೀಘ್ರವಾಗಿ ಉಪಪ್ಲಾವ್ಯಕ್ಕೆ ಪ್ರಯಾಣಮಾಡಿದನು."

(೧೩೭ನೆಯ ಅಧ್ಯಾಯದ ೨೬ನೆಯ ಶ್ಲೋಕದಲ್ಲಿ **ಆರೋಪ್ಯಾಥ ರಥೇ ಕರ್ಣಂ ಪ್ರಾಯಾತ್ಸಾತ್ಯಕಿನಾ ಸಹ**–ಕರ್ಣನನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಸಾತ್ಯಕಿಯೊಡನೆ ಶ್ರೀಕೃಷ್ಣನು ಹೊರಟುಹೋದನು – ಎಂದಿದೆ. ಕರ್ಣನ ಜೊತೆಯಲ್ಲಿ ಸಂಜಯನೂ ಹೋಗಿದ್ದನೆಂಬುದಕ್ಕೆ ಇಲ್ಲಿ ವಚನವಿಲ್ಲ. ಆದರೆ ಕೃಷ್ಣ-ಕರ್ಣರ ನಡುವೆ ನಡೆದ ಎಲ್ಲ ವಿಷಯಗಳನ್ನೂ ಧೃತರಾಷ್ಟ್ರನು ಸಂಜಯನಿಂದ ತಿಳಿದುಕೊಳ್ಳುತ್ತಾನೆ. ಸಂಜಯನೂ ಕರ್ಣನೊಡನೆ ಇದ್ದನೆಂಬುದಕ್ಕೆ ಸಂಜಯನೇ ಹೇಳುವ ೧೪೩ನೆಯ ಅಧ್ಯಾಯದ ೫೦ನೆಯ ಶ್ಲೋಕವು ಆಧಾರವಾಗಿದೆ. ಅಲ್ಲಿ ಸಂಜಯನು 'ಸಹಾಸ್ಮಾಭಿಃ' 'ನಮ್ಮೊಡನೆ' ಎಂದೂ ಹೇಳುತ್ತಾನೆ. ನನ್ನೊಡನೆ ಎಂದು ಹೇಳುವುದಿಲ್ಲ. ಕೃಷ್ಣನು ಕರ್ಣನೊಡನೆ ಮಾತನಾಡುವಾಗ ಸಂಜಯನೊಬ್ಬನೇ ಇದ್ದನೇ ? ಬೇರೆಯವರೂ ಇದ್ದರೆ ? ಎಂಬ ಸಂಶಯಕ್ಕೂ ಇದು ಕಾರಣವಾಗಿದೆ. ಆದರೆ ಕೆಲವು ಸಮಯಗಳಲ್ಲಿ ಒಬ್ಬರೇ ಇದ್ದರೂ ಬಹುವಚನಪ್ರಯೋಗವನ್ನು ಮಾಡಿಕೊಳ್ಳುವುದುಂಟು. **ಗುರುವಾತ್ಮನಿ ಬಹುವಚನಂ**-ಎಂಬ ಸ್ಮೃತಿವಾಕ್ಯ ವಿದೆ. ಈ ಸಮಾಧಾನ ಹೇಳಿ ಸಂಜಯನು ಮಾತ್ರ ಕರ್ಣನ ಸಮೀಪದಲ್ಲಿದ್ದನೆಂದು ಹೇಳಬಹುದಾಗಿದೆ. ಪಾಠಾಂತರದಲ್ಲಿ 'ಜನಮೇಜಯ ಉವಾಚ', 'ವೈಶಂಪಾಯನ ಉವಾಚ' ಎಂದಿದೆ. ಧೃತರಾಷ್ಟ್ರನ ಮಾತುಗಳಿರುವ ಕಡೆಗಳಲ್ಲಿ 'ಜನಮೇಜಯ ಉವಾಚ' ಎಂದೂ, ಸಂಜಯನ ಮಾತುಗಳಿರುವ ಕಡೆಗಳಲ್ಲಿ 'ವೈಶಂಪಾಯನ ಉವಾಚ' - ಎಂದೂ ಹೇಳಿದ್ದಾರೆ. **ಸಹಾಸ್ಮಾಭಿಃ** ಎಂಬುದಕ್ಕೆ ಬದಲಾಗಿ **ಮಹಾತ್ಮಾಭಿನಿವ ವೃತೇ** ಎಂಬ ಪಾಠವೂ ಇದೆ. ಇದೇ ಸರಿಯಾದ ಪಾಠವೆಂದು ತೋರುತ್ತದೆ.

ಕರ್ಣನು ಅನೇಕಬಾರಿ ಶ್ರೀಕೃಷ್ಣನೊಡನೆ – 'ಈ ವಿಷಯವು ನಿನ್ನಲ್ಲಿಯೇ ಇರಲಿ ; ಗುಪ್ತವಾಗಿರಲಿ ; ಯಾರಿಗೂ ತಿಳಿಯುವುದು ಬೇಡ' – ಎಂದು ಹೇಳುತ್ತಾನೆ. ಸಂಜಯನೇ ಮೊದಲಾದವರಿಗೆ ತಿಳಿಯಬಹುದಾಗಿದ್ದರೆ ಇದೆಂದಿಗೂ ರಹಸ್ಯವೆನಿಸಿಕೊಳ್ಳುತ್ತಿರಲಿಲ್ಲ.

ಜನಮೇಜಯನು ಕುತೂಹಲಾವಿಷ್ಟನಾಗಿ ಶ್ರೀಕೃಷ್ಣ-ಕರ್ಣರ ಸಂವಾದ ವನ್ನು ಕೇಳುವುದು ಸ್ವಾಭಾವಿಕವೆನಿಸುತ್ತದೆ. ಆದುದರಿಂದ ಬಹುಮತ

ಪಾಠದಲ್ಲಿ ಧೃತರಾಷ್ಟ್ರ-ಸಂಜಯರೆಂದು ಉಲ್ಲೇಖಿತವಾಗಿದ್ದರೂ ಜನಮೇಜಯ-ವೈಶಂಪಾಯನರ ಉಲ್ಲೇಖವೇ ಸಮೀಚೀನವಾಗಿಯೂ, ಸಮಂಜಸವಾಗಿಯೂ ಕಾಣುತ್ತದೆ.)

ಗ೪೩ನೆಯ ಅಧ್ಯಾಯವು ಮುಗಿಯಿತು.

ಗ೪೪ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ)

## ವಿದುರನ ಮಾತನ್ನು ಕೇಳಿದ ಕುಂತಿಯು ಯುದ್ಧದ ದುಷ್ಪರಿಣಾಮಗಳನ್ನು ನೆನೆದು ವಿಹ್ವಲಳಾಗಿ ಬಹುವಾಗಿ ಯೋಚಿಸಿ ಅನಂತರದಲ್ಲಿ ಕರ್ಣನ ಸಮೀಪಕ್ಕೆ ಹೋದುದು

ವೈಶಂಪಾಯನರು ಜನಮೇಜಯನನ್ನು ಕುರಿತು ಹೇಳುತ್ತಾರೆ :

**ಅಸಿದ್ಧಾನುನಯೇ ಕೃಷ್ಣೇ ಕುರುಭ್ಯಃ ಪಾಣ್ಡವಾನ್ಗತೇ ।**
**ಅಭಿಗಮ್ಯ ಪೃಥಾಂ ಕ್ಷತ್ತಾ ಶನೈಃ ಶೋಚನ್ನಿವಾಬ್ರವೀತ್ ॥೧॥**

ಜನಮೇಜಯ! ಸಂಧಾನವು ಸಫಲವಾಗದೆ, ಶ್ರೀಕೃಷ್ಣನು ಕುರುಗಳ ಸಮೀಪದಿಂದ ಪಾಂಡವರ ಸಮೀಪಕ್ಕೆ ಹೊರಟುಹೋಗಲಾಗಿ, ವಿದುರನು ಕುಂತಿಯ ಬಳಿಗೆ ಹೋಗಿ ತನ್ನ ದುಃಖವನ್ನು ವ್ಯಕ್ತಪಡಿಸುತ್ತಾ ಮೆಲ್ಲ-ಮೆಲ್ಲನೆ ಕುಂತಿಯೊಡನೆ ಈ ಮಾತುಗಳನ್ನು ಹೇಳಿದನು :

"ಚಿರಂಜೀವಿಗಳಾದ ಪುತ್ರರನ್ನು ಪಡೆದುಕೊಂಡಿರುವ ಕುಂತೀದೇವಿಯೇ! ಕೌರವ-ಪಾಂಡವರ ಮಧ್ಯೆ ಯುದ್ಧವಾಗಕೂಡದೆಂಬುದು ನನ್ನ ಇಚ್ಛೆಯಾಗಿತ್ತು. ಯುದ್ಧವಾಗದಂತೆ ನಾನು ಮಾಡಿರುವ ಮತ್ತು ಮಾಡುತ್ತಿರುವ ಪ್ರಯತ್ನಗಳು ನಿನಗೂ ತಿಳಿದೇ ಇದೆ. ಆದರೆ ಸಂಧಿಮಾಡಿಕೊಳ್ಳುವಂತೆ ನಾನು ನೂರಾರು ಬಾರಿ ಒತ್ತಾಯಮಾಡಿದರೂ ನನ್ನ ಮಾತನ್ನು ದುರ್ಯೋಧನನು ಪುರಸ್ಕರಿಸುವವನಾಗಿಲ್ಲ. ಧರ್ಮಾತ್ಮನಾದ ಯುಧಿಷ್ಠಿರರಾಜನು ಚೇದಿ-ಪಾಂಚಾಲ-ಕೇಕಯರಾಜರಿಂದಲೂ, ಕೃಷ್ಣನಿಂದಲೂ, ಭೀಮಾರ್ಜುನ-ಯುಯುಧಾನ- ನಕುಲ-ಸಹದೇವರಿಂದಲೂ ಕೂಡಿಕೊಂಡು ಯುದ್ಧದ ಸರ್ವಸಿದ್ಧತೆಗಳನ್ನೂ ಮಾಡಿಕೊಂಡು ಉಪಪ್ಲಾವ್ಯನಗರದಲ್ಲಿದ್ದಾನೆ. ಇಂದವನು ಮಹಾಬಲಿಷ್ಠನಾಗಿದ್ದಾನೆ. ಆದರೂ ಜ್ಞಾತಿ-ಬಾಂಧವರ

ಮೇಲಿನ ಸೌಹಾರ್ದದಿಂದ ಧರ್ಮವನ್ನೇ ಅವಲಂಬಿಸಿರುವ ಯುಧಿಷ್ಠಿರನು–ದುರ್ಬಲನಾದವನೊಬ್ಬನು ಸಂಧಾನಕ್ಕಾಗಿ ಕಾತರಪಡುವಂತೆ – ಕಾತರ ಪಡುತ್ತಿದ್ದಾನೆ. ಇತ್ತಕಡೆ ಯದ್ಯಪಿ ಧೃತರಾಷ್ಟ್ರನು ವಯೋವೃದ್ಧನಾಗಿದ್ದರೂ ಸಂಧಾನಕ್ಕೆ ಸಿದ್ಧನಾಗಿಲ್ಲ. ಪುತ್ರವ್ಯಾಮೋಹದಿಂದ ಪ್ರಮತ್ತನಾಗಿರುವ ಇವನು ಅಧರ್ಮಮಾರ್ಗವನ್ನೇ ಅನುಸರಣೆಮಾಡುತ್ತಿದ್ದಾನೆ. ಜಯದ್ರಥ, ಕರ್ಣ, ದುಃಶಾಸನ ಮತ್ತು ಶಕುನಿ–ಇವರ ದುರ್ಬುದ್ಧಿಯಿಂದಾಗಿ ಪಾಂಡವ-ಕೌರವ ರಲ್ಲಿ ಭೇದಭಾವವುಂಟಾಗಿದೆ. ಕುಂತಿ! ಮೊದಲನೆಯದಾಗಿ : ಪಾಂಡವರನ್ನು ಕಪಟದ್ಯೂತಕ್ಕೆ ಆಹ್ವಾನಿಸಿ ಮೋಸದಿಂದ ರಾಜ್ಯಾಪಹಾರಮಾಡಿದುದೇ ಅಧರ್ಮ. ಎರಡನೆಯದಾಗಿ : 'ಪ್ರತಿಜ್ಞಾತವಾದ ವನವಾಸಾಜ್ಞಾತವಾಸಗಳನ್ನು ಮುಗಿಸಿದನಂತರ ಹದಿನಾಲ್ಕನೆಯ ವರ್ಷ ಅವರು ತಮ್ಮ ರಾಜ್ಯವನ್ನು ಪಡೆದುಕೊಳ್ಳಬಹುದು' – ಎಂಬ ನಿಬಂಧನೆಗೆ ಒಪ್ಪಿ ಇಂದು ಪಾಂಡವರು ವನವಾಸಾಜ್ಞಾತವಾಸಗಳನ್ನು ಮುಗಿಸಿ ಬಂದಿರುವಾಗ ಅವರಿಗೆ ರಾಜ್ಯವನ್ನು ಕೊಡದೇ ಇರುವುದು ಇನ್ನೂ ಹೆಚ್ಚಿನ ಅಧರ್ಮವಾಗಿದೆ. ಇಂತಹ ವೈರಜನಕ ವಾದ ಅಧರ್ಮಕಾರ್ಯವನ್ನು ಮಾಡಿಯೂ ಧೃತರಾಷ್ಟ್ರಾದಿಗಳು ಧರ್ಮಯುಕ್ತವಾದ ಕಾರ್ಯವನ್ನೇ ಮಾಡುತ್ತಿದ್ದೇವೆಂದು ಭಾವಿಸಿಕೊಂಡು ಬಿಟ್ಟಿದ್ದಾರೆ. ಅವರ ಈ ಧರ್ಮವೂ ಖಂಡಿತವಾಗಿಯೂ ಫಲನೀಡುತ್ತದೆ. ಆದರೆ ಈ 'ಧರ್ಮ'ದ ಫಲವು ಮಾತ್ರ ಸರ್ವನಾಶ ಮತ್ತು ದುಃಖ.

(ನ್ಯಾಯವೋ, ಅನ್ಯಾಯವೋ–ಯುದ್ಧಮಾಡುವುದು ಕ್ಷತ್ರಿಯಧರ್ಮ, ಕ್ಷತ್ರಿಯನು ಯಾವನಿಗೂ ತಲೆಬಗ್ಗಿಸಬಾರದು. ಇದೂ ಒಂದು ಧರ್ಮವೇ ಸರಿ. ಆದರೆ ಕೊಡಬೇಕಾದುದನ್ನು ಕೊಡುವುದು ತಲೆತಗ್ಗಿಸಿದಂತೆ ಆಗುತ್ತದೆಯೇ? ಬೇರೆಯವರು ತಮ್ಮ ಮೇಲೆ ಬಿದ್ದಾಗ ಯುದ್ಧಮಾಡುವುದು ಕ್ಷತ್ರಿಯಧರ್ಮವಾಗಬಹುದು. ಧರ್ಮರಾಜನು ಸಂಧಾನಕ್ಕೆ ಯತ್ನಿಸುತ್ತಿರು ವಾಗ ಯುದ್ಧವೇ ಬೇಕೆನ್ನುವುದು ಕ್ಷತ್ರಿಯಧರ್ಮವೇ? ತಾವು ಮಾಡಿದ ಅನ್ಯಾಯವನ್ನು ಮನಗಾಣದೇ ತಾವು ಮಾಡಿಕೊಂಡಿದ್ದ ನಿಬಂಧನೆಯನ್ನು ಸ್ಮರಣೆಗೆ ತಂದುಕೊಳ್ಳದೇ ಇಂತಹ ಅಸಂಗತವಾದ 'ಧರ್ಮ'ಕ್ಕೆ ಕುರುಗಳು ಅಂಟಿಕೊಂಡಿದ್ದಾರೆ.)

ಇಂತಹ 'ಧರ್ಮ'ವನ್ನು ದುರ್ಯೋಧನನು ಅವಲಂಬಿಸಿರುವುದರಿಂದ ಕುರುಗಳೇ ಆದಿಯಾಗಿ ಸಕಲರಾಜರೂ ಇಷ್ಟವಿಲ್ಲದಿದ್ದರೂ ಬಲಾತ್ಕಾರದಿಂದ ಈ ಯುದ್ಧಧರ್ಮವನ್ನು ಅನುಸರಿಸಬೇಕಾಗಿದೆ. ಇಂತಹ ಧರ್ಮದಲ್ಲಿ ಕುರುಗಳು ಆಸಕ್ತರಾಗಿರುವುದನ್ನು ನೋಡಿದರೆ ನಿಜವಾದ ಧರ್ಮವನ್ನು ತಿಳಿದಿರುವ ಯಾವನು ತಾನೇ ನಿಶ್ಚಿಂತನಾಗಿದ್ದಾನು? ಸಂಧಿಯ ಕಾರ್ಯವು ಕೈಗೂಡದೇ ಶ್ರೀಕೇಶವನು ಹೊರಟುಹೋದಮೇಲೆ ಪಾಂಡವರು ವಿಧಿಯಿಲ್ಲದೇ ಯುದ್ಧಸನ್ನದ್ಧರಾಗುತ್ತಾರೆ. ಅನಂತರದ ಪರಿಣಾಮವು ಬಹುಭಯಂಕರವಾದುದು. ಕೌರವರ ಅನ್ಯಾಯವು ಸರ್ವವೀರರ ವಿನಾಶಕ್ಕೆ ಕಾರಣವಾಗುತ್ತದೆ. ಇದನ್ನೇ ಸದಾ ಚಿಂತಿಸುತ್ತಿರುವ ನಾನು ಹಗಲಿನಲ್ಲೇ ಆಗಲೀ, ರಾತ್ರಿಯಲ್ಲೇ ಆಗಲೀ ನಿದ್ರೆಯನ್ನೇ ಮಾಡುತ್ತಿಲ್ಲ. (ಈ ಚಿಂತೆಯಿಂದಾಗಿ ನನಗೆ ನಿದ್ರೆಯೇ ಬರುತ್ತಿಲ್ಲ.)"

ಪಾಂಡವ-ಕೌರವರ ಹಿತಕಾಮನಾದ ವಿದುರನು ಹೇಳಿದ ಮಾತುಗಳನ್ನು ಕೇಳಿ ದುಃಖಾರ್ತಳಾದ ಕುಂತಿಯು ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಾ ತನ್ನಲ್ಲಿಯೇ ತಾನು ಹೀಗೆಂದು ವಿಚಾರಮಾಡಿದಳು :

**ಧಿಗಸ್ತ್ವರ್ಥಂ ಯತ್ಕೃತೇಽಯಂ ಮಹಾನ್ಜ್ಞಾತಿವಧಃ ಕೃತಃ ।**
**ವರ್ತ್ಸ್ಯತೇ ಸುಹೃದಾಂ ಚೈವ ಯುದ್ಧೇಽಸ್ಮಿನ್ವೈಪರಾಭವಃ ॥೧೧॥**

"ಯಾವುದರ ಕಾರಣದಿಂದ ಯುದ್ಧದ ಮೂಲಕವಾಗಿ ಈ ಮಹಾವಧೆಯಾಗುವುದಿದೆಯೋ–ಅಂತಹ ಅರ್ಥಕ್ಕೆ ಧಿಕ್ಕಾರವಿರಲಿ. ರಾಜ್ಯದ ಕಾರಣದಿಂದಾಗಿ ಇಂದು ಅಣ್ಣ-ತಮ್ಮಂದಿರ ನಡುವೆ ಸರ್ವವಿನಾಶಕವಾದ ಯುದ್ಧವು ನಡೆಯಲಿದೆ. ಅಂತಹ ಅರ್ಥಕ್ಕೆ ಅರ್ಥಾತ್ ರಾಜ್ಯಕ್ಕೆ ಧಿಕ್ಕಾರವಿರಲಿ. ಈ ಯುದ್ಧದಿಂದ ಶತ್ರುಗಳ ಸಂಹಾರವು ಮಾತ್ರವೇ ಆಗುವುದಿಲ್ಲ. ನಮ್ಮ ಜ್ಞಾತಿ-ಬಾಂಧವರೂ, ರಕ್ತಸಂಬಂಧಿಗಳೂ ಈ ಮಹಾಯುದ್ಧದಲ್ಲಿ ಪರಾಭವಹೊಂದುತ್ತಾರೆ. (ಅಸುವನ್ನು ನೀಗುತ್ತಾರೆ.) ಪಾಂಡವರು, ಚೇದಿ-ಪಾಂಚಾಲರು, ಯಾದವರು–ಎಲ್ಲರೂ ಈ ಯುದ್ಧದ ಸಲುವಾಗಿ ಒಟ್ಟಿಗೆ ಸೇರಿದ್ದಾರೆ. ಅವರೆಲ್ಲರೂ ತಮ್ಮ ಜ್ಞಾತಿಗಳಾದ ಭಾರತರೊಡ

ನೆಯೇ ಯುದ್ಧಮಾಡುತ್ತಾರೆ. ಉಭಯಪಕ್ಷಗಳ ಹಿತಾಕಾಂಕ್ಷಿಗಳಾದ ನಮಗೆ ಇದಕ್ಕಿಂತಲೂ ಹೆಚ್ಚಿನ ದುಃಖವು ಯಾವುದಿದೆ?

**ಪಶ್ಯೇ ದೋಷಂ ಧ್ರುವಂ ಯುದ್ಧೇ ತಥಾ ಯುದ್ಧೇ ಪರಾಭವಮ್ ।**
**ಅಧನಸ್ಯ ಮೃತಂ ಶ್ರೇಯೋ ನ ಹಿ ಜ್ಞಾತಿಕ್ಷಯೋ ಜಯಃ ॥೧೩॥**

ಯುದ್ಧದಲ್ಲಿ ಮಹಾದೋಷವನ್ನು ನಾನೀಗ ಕಾಣುತ್ತಿದ್ದೇನೆ. ಒಂದು ವೇಳೆ ಯುದ್ಧವು ನಡೆಯದೇ ಇದ್ದರೂ ನನ್ನ ಮಕ್ಕಳಿಗೆ ಪರಾಭವವು ತಪ್ಪಿದ್ದಲ್ಲ. (ಅವರು ಇದುವರೆಗೂ ಕಷ್ಟಪಟ್ಟಂತೆ ಮುಂದೆಯೂ ಕಷ್ಟಪಟ್ಟು ಕೊಂಡೇ ಇರಬೇಕಾಗುವುದು.) ರಾಜ್ಯದ ಪ್ರಾಪ್ತಿಗಾಗಿ ಜ್ಞಾತಿವಿನಾಶಕರವಾದ ಯುದ್ಧಮಾಡುವುದು ಉಚಿತವೇ? ಯುದ್ಧಮಾಡದೆಯೇ ನನ್ನ ಮಕ್ಕಳು ಜೀವನಪರ್ಯಂತವಾಗಿ ದೀನರಾಗಿರುವುದು ಸಾಧುವೇ? – ಎಂಬುದನ್ನು ನಾನೀಗ ನಿರ್ಧರಿಸಬೇಕಾಗಿದೆ. ಈಗ ನನಗೆ ಭಾಸವಾಗುತ್ತಿರುವಂತೆ ಜ್ಞಾತಿ ಕ್ಷಯಕರವಾದ ಯುದ್ಧಮಾಡಿ ಜಯಗಳಿಸುವುದಕ್ಕಿಂತಲೂ ದಟ್ಟದರಿದ್ರರಾಗಿ ಸಾಯುವುದೇ ಶ್ರೇಯಸ್ಕರವಾದುದು. ಹೀಗೆಲ್ಲಾ ಚಿಂತಿಸುವ ನನಗೆ ಹೃದಯದಲ್ಲಿ ದುಃಖವು ತಾನೇ ತಾನಾಗಿ ಉಕ್ಕಿಬರುತ್ತಿದೆ. ದುರ್ಯೋಧನನ ಸಲುವಾಗಿ ಯುದ್ಧಮಾಡುವ ಶಾಂತನುವಿನ ಮಗನಾದ ಭೀಷ್ಮ, ಯೋಧರಲ್ಲಿ ಶ್ರೇಷ್ಠರಾದ ಆಚಾರ್ಯದ್ರೋಣರು, ಕರ್ಣ–ಇವರೆಲ್ಲರೂ ನನ್ನ ಭಯವನ್ನು ವೃದ್ಧಿಗೊಳಿಸುತ್ತಾರೆ. ಆಚಾರ್ಯದ್ರೋಣರು ಯಾವಾಗಲೂ ನಮ್ಮ ಹಿತದಲ್ಲಿಯೇ ಹೆಚ್ಚಿನ ಆಸಕ್ತಿಯುಳ್ಳವರಾಗಿದ್ದಾರೆ. ಆದುದರಿಂದ ಅವರು ತಮ್ಮ ಶಿಷ್ಯರ ಸಂಗಡ ಖಂಡಿತವಾಗಿಯೂ ಮನಸ್ಸಿಟ್ಟು ಯುದ್ಧಮಾಡಲಾರರು. ಅದೇ ರೀತಿಯಲ್ಲಿ ಪಿತಾಮಹನಾದ ಭೀಷ್ಮನೂ ಪಾಂಡವರ ವಿಷಯದಲ್ಲಿ ಸ್ನೇಹಭಾವದಿಂದ ಪ್ರೀತಿಯನ್ನು ತೋರಿಸದಿರಲಾರನು. ನಿಷ್ಪ್ರಯೋಜಕವಾದ ವಿವೇಕವುಳ್ಳ ಕರ್ಣನೊಬ್ಬನು ಮಾತ್ರವೇ ಮೋಹಪರವಶನಾಗಿ ದುರ್ಬುದ್ಧಿ ಯಾದ ದುರ್ಯೋಧನನನ್ನು ಅನುಸರಣೆಮಾಡುತ್ತಿದ್ದಾನೆ. ಅವನ ಬೆಂಬಲಿಗ ನಾಗಿ ನಿಂತಿದ್ದಾನೆ. ಮಿಗಿಲಾಗಿ ಪಾಪಿಯಾದ ಕರ್ಣನು ಪಾಂಡವರನ್ನು ಬಹುವಾಗಿ ದ್ವೇಷಿಸುತ್ತಾನೆ. ಪಾಂಡವರಿಗೆ ಅನರ್ಥವನ್ನುಂಟುಮಾಡಲು ಅವನು ಯಾವಾಗಲೂ ಬದ್ಧಕಂಕಣನಾಗಿದ್ದಾನೆ. ಅದೂ ಅಲ್ಲದೇ ವಿಶೇಷ

ವಾಗಿ ಅವನು ಮಹಾಬಲಿಷ್ಠನು. ಈ ವಿಷಯವನ್ನು ಜ್ಞಾಪಿಸಿಕೊಂಡೊಡನೆಯೇ ನನ್ನ ಹೃದಯವೇ ಬೆಂದುಹೋಗುತ್ತದೆ."

ಕ್ಷಣಕಾಲ ಯೋಚಿಸಿ ಯಾವುದೋ ಒಂದು ಮಹತ್ತರವಾದ ನಿರ್ಧಾರವನ್ನು ಕೈಗೊಂಡವಳಂತೆ ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಾ ತನ್ನಲ್ಲಿಯೇ ಹೇಳಿಕೊಂಡಳು :

"ಈಗೊಂದು ಕೆಲಸಮಾಡುತ್ತೇನೆ. ಪಾಂಡವರ ವಿಷಯದಲ್ಲಿ ದ್ವೇಷಭಾವದಿಂದಿರುವ ಕರ್ಣನ ಮನಸ್ಸನ್ನು ಬದಲಾಯಿಸಲು ಮತ್ತು ಅವರ ವಿಷಯದಲ್ಲಿ ಪ್ರಸನ್ನತೆಯನ್ನುಂಟುಮಾಡಲು ನಾನೇ ಕರ್ಣನ ಬಳಿಗೆ ಹೋಗುತ್ತೇನೆ. ಅವನಿಗೆ ಎಲ್ಲವನ್ನೂ ಹೇಳಿಬಿಡುತ್ತೇನೆ. ಯಾವುದು ಹೇಗೆ ನಡೆಯಿತೋ ಎಲ್ಲವನ್ನೂ ನಿದರ್ಶನಪೂರ್ವಕವಾಗಿ ಹೇಳುತ್ತೇನೆ" ಹೀಗೆಂಬುದಾಗಿ ಮನಸ್ಸಿನಲ್ಲಿ ನಿರ್ಧರಿಸಿಕೊಂಡವಳಾಗಿ ಹಿಂದೆ ನಡೆದುದೆಲ್ಲವನ್ನೂ ಕುಂತಿಯು ಪುನಃ ಜ್ಞಾಪಿಸಿಕೊಂಡಳು.

"ನಾನು ನನ್ನ ತಂದೆಯ ಮನೆಯಲ್ಲಿದ್ದಾಗ ದುರ್ವಾಸರೊಮ್ಮೆ ಅರಮನೆಗೆ ಬಂದರು. ಅವರನ್ನು ಉಪಚರಿಸಲು ನಮ್ಮ ತಂದೆಯು ನನ್ನನ್ನು ನಿಯಮಿಸಿದನು. ನಾನವರನ್ನು ಭಕ್ತಿ-ಶ್ರದ್ಧೆಗಳಿಂದ ಉಪಚರಿಸಿದೆನು. ನನ್ನ ಸತ್ಕಾರದಿಂದ ಸುಪ್ರೀತರಾದ ದುರ್ವಾಸರು ನನಗೆ ವರವನ್ನು ದಯಪಾಲಿಸಿದರು. ಮಂತ್ರದ ಮೂಲಕವಾಗಿ ಯಾವ ದೇವತೆಯನ್ನಾದರೂ ನಾನು ಆಹ್ವಾನಿಸಬಹುದಾಗಿತ್ತು. ಅಂತಹ ಮಹಾಮಂತ್ರಗ್ರಾಮವನ್ನು ದುರ್ವಾಸರು ವರರೂಪವಾಗಿ ದಯಪಾಲಿಸಿದರು. ತಂದೆಯಾದ ಮತ್ತು ರಾಜನಾದ ಕುಂತೀಭೋಜನಿಂದ ಪಾಲಿತಳಾದ ನಾನು ಅಂತಃಪುರದಲ್ಲಿ ಸುಖವಾಗಿದ್ದೆನು. ದುರ್ವಾಸರಿಂದ ಮಂತ್ರಗ್ರಾಮವನ್ನು ಪಡೆದನಂತರ ಸ್ತ್ರೀಸ್ವಭಾವದ ಚಾಪಲ್ಯವು ನನ್ನ ಮನಸ್ಸನ್ನು ಕಲಕಿತು. ನನ್ನ ಮನಸ್ಸಿಗೆ ನೆಮ್ಮದಿಯೇ ಇರಲಿಲ್ಲ. ಅನೇಕಪ್ರಕಾರವಾಗಿ ಸದಾಕಾಲದಲ್ಲಿಯೂ ಯೋಚಿಸುತ್ತಲೇ ಇರುತ್ತಿದ್ದೆನು. ಮಂತ್ರಗಳ ಬಲಾಬಲಗಳನ್ನೂ ಮತ್ತು ಬ್ರಾಹ್ಮಣನ ವಾಗ್ಬಲವನ್ನೂ ಪರೀಕ್ಷಿಸಿಬಿಡಬೇಕೆಂದು ನನ್ನ ಮನಸ್ಸು ತವಕಿಸುತ್ತಿದ್ದಿತು. 'ಒಂದು ವೇಳೆ ಬ್ರಾಹ್ಮಣನ ಮಾತು ನಿಜವಾಗಿ ದೇವತೆಯು

ಬಂದೇಬಿಟ್ಟರೆ?' – ಎಂಬುದನ್ನು ಯೋಚಿಸಿಕೊಂಡೊಡನೆಯೇ ಭಯವೂ ಆಗುತ್ತಿತ್ತು. ಮನಸ್ಸೂ ಡೋಲಾಯಮಾನವಾಗುತ್ತಿತ್ತು. ಸ್ತ್ರೀಸ್ವಭಾವ ದಿಂದಲೂ–ಬಾಲಭಾವದಿಂದಲೂ ಪುನಃ ಪುನಃ ಅದನ್ನೇ ಚಿಂತಿಸುತ್ತಿದ್ದೆನು. ನಾನು ವಿಶ್ವಸ್ತಳಾದ ಧಾತ್ರಿಯೊಬ್ಬಳಿಂದ ರಕ್ಷಿತಳಾಗಿದ್ದೆನು. ಆ ಸಮಯದಲ್ಲಿ ನನ್ನ ಸಖಿಯರು ಯಾವಾಗಲೂ ನನ್ನ ಸುತ್ತಲೂ ಇದ್ದುಬಿಡುತ್ತಿದ್ದರು. ಅಂದು ನನ್ನ ಸಮಸ್ಯೆಯು ಜಟಿಲವಾಗಿದ್ದಿತು. 'ನನ್ನ ಮೇಲೆ ಬರಬಹುದಾದ ದೋಷಾರೋಪಣೆಗಳನ್ನು ನಿವಾರಿಸಿಕೊಳ್ಳಬೇಕು. ನಮ್ಮ ತಂದೆಯ ದೃಷ್ಟಿಯಿಂದಲೂ ನಾನು ಶುದ್ಧಚಾರಿತ್ರ್ಯಳಾಗಿರಬೇಕು' – ಇದನ್ನು ಹೇಗೆ ಸಾಧಿಸುವುದು? 'ನಾನು ದೇವತೆಯ ಸಂಪರ್ಕದಿಂದ ಮಕ್ಕಳನ್ನು ಪಡೆದು ಪುಣ್ಯಶಾಲಿನಿಯೂ ಆಗಬೇಕು. ಇತರರೊಡನೆ ಸಮಾಗಮಹೊಂದಿದುದ ಕ್ಕಾಗಿ ಕಳಂಕಿನಿಯೂ ಆಗಬಾರದು.' ಇದು ಹೇಗೆ ಸಾಧ್ಯ? ನನ್ನ ಬಾಲ್ಯಚಾಪಲ್ಯ ಮತ್ತು ಸ್ತ್ರೀಚಾಪಲ್ಯಗಳು ಎಲ್ಲ ಭಯವನ್ನೂ ಮೆಟ್ಟಿನಿಂತವು. ಬ್ರಾಹ್ಮಣನನ್ನು ಮನಸ್ಸಿನಿಂದಲೇ ನಮಸ್ಕರಿಸಿದೆನು. ಕೌತೂಹಲದಿಂದಲೂ ಬಾಲಿಶದಿಂದಲೂ (ಅವಿವೇಕದಿಂದಲೂ) ನಾನು ಮಹಾಮಂತ್ರದ ಪುನಶ್ಚರಣೆಯನ್ನಾರಂಭಿಸಿಬಿಟ್ಟೆನು. ನಾನು ಕನ್ಯೆಯೇ ಆಗಿದ್ದರೂ ಮಂತ್ರ ಪ್ರಭಾವದಿಂದ ಸೂರ್ಯದೇವನೊಡನೆ ಸಮಾಗಮವಾಯಿತು. ನನ್ನ ಕನ್ಯಾವಸ್ಥೆಯಲ್ಲಿ ಹುಟ್ಟಿದವನೇ ಕರ್ಣ. ಅವನನ್ನು ನಾನು ಮಗನಂತೆಯೇ ರಕ್ಷಣೆಮಾಡಿದ್ದೇನೆ. ಭ್ರಾತೃಗಳಿಗೆ ಹಿತವುಂಟಾಗತಕ್ಕ, ಪಥ್ಯವಾದ ಕಾರ್ಯವನ್ನು ಯಾವ ಕಾರಣದಿಂದ ಮಾಡುವುದಿಲ್ಲವೆಂದು ಕರ್ಣನನ್ನೇ ಕೇಳುತ್ತೇನೆ. ನಾನು ಎಲ್ಲವನ್ನೂ ಯಥಾವತ್ತಾಗಿ ಹೇಳಿದೆನೆಂದರೆ ಅವನು ನನ್ನ ಮಾತನ್ನು ನಡೆಸಿಕೊಡದೇ ಇರಲಾರನು."

ಈ ರೀತಿಯಲ್ಲಿ ಕುಂತಿಯು ಉತ್ತಮೋತ್ತಮವಾದ ಕಾರ್ಯಮಾಡಲು ನಿಶ್ಚಯಿಸಿದವಳಾಗಿ, ಕಾರ್ಯವನ್ನು ಇದೇ ರೀತಿಯಲ್ಲಿ ಸಾಧಿಸಿಕೊಳ್ಳಬೇಕೆಂಬು ದನ್ನೂ ನಿಶ್ಚಯಿಸಿ, ವಿದುರನನ್ನು ವ್ಯಾಜಾಂತರದಿಂದ ಕಳುಹಿಸಿಕೊಟ್ಟು ಕಾರ್ಯಾರ್ಥವಾಗಿ ಭಾಗೀರಥೀನದಿಯ ತೀರಕ್ಕೆ ಹೊರಟುಹೋದಳು. ಗಂಗಾ ತೀರಕ್ಕೆ ಹೋದನಂತರ ದಯಾಳುವಾದ, ಸತ್ಯನಿಷ್ಠನಾದ ತನ್ನ ಮಗನ ವೇದಾ

ಧ್ಯಯನದ ಸುಮಧುರಧ್ವನಿಯನ್ನು ಕುಂತಿಯು ಕೇಳಿದಳು. ಕರ್ಣನು ಆ ಸಮಯದಲ್ಲಿ ಪೂರ್ವಾಭಿಮುಖವಾಗಿ ನಿಂತು ತನ್ನೆರಡು ಬಾಹುಗಳನ್ನೂ ಮೇಲೆತ್ತಿ ಜಪಮಾಡುತ್ತಿದ್ದನು. ತಪಸ್ವಿನಿಯಾದ ಕುಂತಿಯು ಅವನು ಮಾಡುತ್ತಿದ್ದ ಜಪದ ಸಮಾಪ್ತಿಯನ್ನು ನಿರೀಕ್ಷಿಸುತ್ತಾ ಕಾರ್ಯಾರ್ಥವಾಗಿ



ಅವನ ಹಿಂಬದಿಯಲ್ಲಿಯೇ ನಿಂತಿದ್ದಳು. ವೃಷ್ಣಿಕುಲಸಂಭೂತಳಾದ, ಕುಲ ಶ್ರೇಷ್ಠನಾದ ಪಾಂಡುವಿನ ಧರ್ಮಪತ್ನಿಯಾದ ಕುಂತಿಯು ಬಾಡಿಹೋದ ಕಮಲದ ಮಾಲೆಯಂತೆ ಸೂರ್ಯನ ತಾಪದಿಂದ ಪರಿತಪ್ತಳಾಗಿ ಕರ್ಣನ ಉತ್ತರೀಯದ ನೆಳಲಿನಲ್ಲಿ ನಿಂತಿದ್ದಳು. ಎಷ್ಟು ಹೊತ್ತಿನವರೆಗೆ ಸೂರ್ಯ ದೇವನು ಪೂರ್ವಾಭಿಮುಖವಾಗಿ ನಿಂತಿರುವವನ ಪೃಷ್ಠಭಾಗಕ್ಕೆ ತಾಪವನ್ನುಂಟು

ಮಾಡುವುದಿಲ್ಲವೋ–ಅಲ್ಲಿಯವರೆಗೂ ಅದೇ ದಿಕ್ಕಿಗೆ ಮುಖಮಾಡಿ ನಿಂತು ಜಪಮಾಡುವ ಪದ್ಧತಿಯನ್ನಿಟ್ಟುಕೊಂಡಿದ್ದ ಕರ್ಣನು ಮಧ್ಯಾಹ್ನವು ಮೀರಿದೊಡನೆಯೇ ಪಶ್ಚಿಮದಿಕ್ಕಿಗೆ ತಿರುಗಿದಾಗ ಅಲ್ಲಿಯೇ ನಿಂತಿದ್ದ ಕುಂತಿಯನ್ನು ನೋಡಿ ಒಡನೆಯೇ ಅವಳಿಗೆ ಅಭಿವಾದನಪೂರ್ವಕವಾಗಿ ನಮಸ್ಕಾರಮಾಡಿ ಬದ್ಧಾಂಜಲಿಪುಟನಾಗಿ ಅವಳ ಸಮೀಪದಲ್ಲಿ ನಿಂತುಕೊಂಡನು.

ಮಹಾತೇಜಸ್ವಿಯಾದ, ಮಾನಿಯಾದ, ಧರ್ಮಭೃತರಲ್ಲಿ ಶ್ರೇಷ್ಠನಾದ, ವೈಕರ್ತನನಾದ, ವೃಷನೆಂಬ ಮತ್ತೊಂದು ಹೆಸರನ್ನೂ ಪಡೆದಿದ್ದ ಕರ್ಣನು ಯಥೋಚಿತವಾಗಿ ಪ್ರಣಾಮಮಾಡಿ ಮುಗುಳ್ನಗೆಯೊಡನೆ ಕುಂತಿಯನ್ನು ಪ್ರಶ್ನಿಸಿದನು.

೧೪೪ನೆಯ ಅಧ್ಯಾಯವು ಮುಗಿಯಿತು.

೧೪೫ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ)

### ಕುಂತಿಯು ಕರ್ಣನ ಜನ್ಮರಹಸ್ಯವನ್ನು ತಿಳಿಸಿ ಪಾಂಡವರ ಕಡೆಗೆ ಸೇರಿಕೊಳ್ಳುವಂತೆ ಅವನನ್ನು ಬಲಾತ್ಕರಿಸಿದುದು

ಕರ್ಣನು ತನ್ನ ಕುಲ-ನಾಮಧೇಯಗಳನ್ನು ತಿಳಿಸುತ್ತಾ ಕುಂತಿಯನ್ನು ವಿನಯದಿಂದ ಕೇಳಿದನು :

**ರಾಧೇಯೋಽಹಮಾಧಿರಥಿಃ ಕರ್ಣಸ್ತ್ವಾಮಭಿವಾದಯೇ ।**
**ಪ್ರಾಪ್ತಾ ಕಿಮರ್ಥಂ ಭವತೀ ಬ್ರೂಹಿ ಕಿಂ ಕರವಾಣಿ ತೇ ॥೧॥**

“ದೇವಿ! ಅಧಿರಥನ ಮತ್ತು ರಾಧೆಯ ಮಗನಾದ ಕರ್ಣನೆಂಬ ಹೆಸರಿನ ನಾನು ನಿನಗೆ ಅಭಿವಾದನಮಾಡುತ್ತೇನೆ. ನೀನು ಇಲ್ಲಿಗೇಕೆ ಬಂದೆ? ನಿನಗಾಗಿ ನಾನು ಏನು ಮಾಡಿಕೊಡಲಿ? ಹೇಳು ದೇವಿ!”

**ಕೌನ್ತೇಯಸ್ತ್ವಂ ನ ರಾಧೇಯೋ ನ ತವಾಧಿರಥಃ ಪಿತಾ ।**
**ನಾಸಿ ಸೂತಕುಲೇ ಜಾತಃ ಕರ್ಣ ತದ್ವಿದ್ಧಿ ಮೇ ವಚಃ ॥೨॥**

“ಕರ್ಣ! ನೀನು ರಾಧೆಯ ಮಗನಲ್ಲ. ಕುಂತಿಯ ಮಗನು. ನಿನ್ನ ತಂದೆಯು ಅಧಿರಥನಲ್ಲ. ನೀನು ಸೂತಕುಲದಲ್ಲಿ ಹುಟ್ಟಿದವನೂ ಅಲ್ಲ. ನನ್ನ ಮಾತಿನಿಂದಲೇ ಈ ಸತ್ಯವಿಷಯವನ್ನು ನೀನು ತಿಳಿಯುವವನಾಗು.

ನಾನು ಕುಂತಿಭೋಜನ ಅರಮನೆಯಲ್ಲಿ ಕನ್ಯೆಯಾಗಿದ್ದಾಗ ನೀನು ನನ್ನಲ್ಲಿ ಜನ್ಮವನ್ನು ಪಡೆದೆ. ನೀನು ಎಲ್ಲರಿಗಿಂತಲೂ ಮೊದಲು ಹುಟ್ಟಿದವನು. ಎಲ್ಲರಿಗಿಂತಲೂ ಮೊದಲು ನಾನು ನನ್ನ ಗರ್ಭಾಂಬುಧಿಯಲ್ಲಿ ನಿನ್ನನ್ನು ಧರಿಸಿದ್ದೆನು. ಮಗು! ಆದುದರಿಂದ ನೀನು ಪಾರ್ಥನೇ ಹೊರತು ರಾಧೇಯನಲ್ಲ. ಯಾವನು ಪ್ರಪಂಚವನ್ನೆಲ್ಲಾ ಪ್ರಕಾಶಗೊಳಿಸುತ್ತಾನೆಯೋ, ಯಾವನು ಪ್ರಪಂಚವನ್ನೇ ಪರಿತಪಿಸುವಂತೆ ಮಾಡುವನೋ–ಅಂತಹ ದೇವದೇವನಾದ ವಿರೋಚನನೇ (ಸೂರ್ಯದೇವನೇ) ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ನಿನ್ನನ್ನು ನನ್ನಲ್ಲಿ ಪಡೆದುಕೊಂಡನು. ನೀನು ಹುಟ್ಟಿದಾಗ ದೇವಶಿಶುವಿಗೆ ಸಮಾನವಾದ ದಿವ್ಯತೇಜಸ್ಸಿನಿಂದ ಬೆಳಗುತ್ತಿದ್ದೆ. ಕರ್ಣಕುಂಡಲಗಳನ್ನೂ, ಕವಚವನ್ನೂ ಧರಿಸಿದ್ದೆ. ಇಂತಹ ದುರ್ಧರ್ಷನಾದ ನೀನು ನನ್ನ ತಂದೆಯ ಮನೆಯಲ್ಲಿ ನನ್ನ ಗರ್ಭಾಂಬುಧಿಯಲ್ಲಿ ಹುಟ್ಟಿದೆ. ಅಂತಹ ನೀನು ನಿನ್ನ ಒಡಹುಟ್ಟಿದ ಸಹೋದರರು ಯಾರೆಂಬುದನ್ನು ತಿಳಿಯದೇ ಮೋಹಪರವಶನಾಗಿ ಧೃತರಾಷ್ಟ್ರನ ಮಕ್ಕಳ ಸೇವೆಯಲ್ಲಿ ನಿರತನಾಗಿರುವೆ. ಇದು ನಿನ್ನಂತಹವನಿಗೆ ಖಂಡಿತವಾಗಿಯೂ ಯುಕ್ತವಲ್ಲ.

**ಏತದ್ಧರ್ಮಫಲಂ ಪುತ್ರ ನರಾಣಾಂ ಧರ್ಮನಿಶ್ಚಯೇ ।**
**ಯತ್ತುಷ್ಯನ್ತ್ಯಸ್ಯ ಪಿತರೋ ಮಾತಾ ಚಾಪ್ಯೇಕದರ್ಶಿನೀ ॥೭॥**

ಮನುಷ್ಯರು ಅನುಸರಿಸಬೇಕಾದ ಉತ್ತಮಧರ್ಮವಾವುದೆಂಬುದನ್ನು ನಿಶ್ಚಯಿಸುವಾಗ–ತನ್ನ ತಂದೆಯನ್ನೂ, ಗುರುಜನರನ್ನೂ ಮತ್ತು ಎಲ್ಲ ಮಕ್ಕಳನ್ನೂ ಏಕರೀತಿಯಲ್ಲಿ ಕಾಣುವ ತಾಯಿಯನ್ನೂ ಸಂತೋಷ ಪಡಿಸುವುದೇ ಮನುಷ್ಯರಿಗೆ ಉತ್ತಮಧರ್ಮವೆಂದು ಧರ್ಮಶಾಸ್ತ್ರಜ್ಞರು ನಿಶ್ಚಯಿಸಿರುತ್ತಾರೆ.

ಮೊದಲು ಅರ್ಜುನನಿಂದ ಜಯಿಸಲ್ಪಟ್ಟಿದ್ದು, ಅನಂತರದಲ್ಲಿ ಅಸತ್ಪು

ರುಷರಿಂದ ಲೋಭದ ಕಾರಣದಿಂದಾಗಿ ಅಪಹೃತವಾಗಿರುವ ಯುಧಿಷ್ಠಿರನ ಸಂಬಂಧವಾದ ರಾಜ್ಯಲಕ್ಷ್ಮಿಯನ್ನು ಧೃತರಾಷ್ಟ್ರನ ಮಕ್ಕಳಿಂದ ವಶಪಡಿಸಿಕೊಂಡು ಧರ್ಮಾದಿಗಳೊಡನೆ ಉಪಭೋಗಿಸು. ಉತ್ತಮಸಹೋದರೋಚಿತವಾದ ಸ್ನೇಹದೊಡನೆ ಕರ್ಣಾರ್ಜುನರ ಸಮ್ಮಿಲನವನ್ನು ಕೌರವರು ಈಗ ನೋಡುವಂತಾಗಲಿ. ಅದನ್ನು ನೋಡಿ ಅಸತ್ಪುರುಷರು ತಲೆತಗ್ಗಿಸುವಂತಾಗಲಿ. ರಾಮ-ಜನಾರ್ದನರು (ಬಲ ರಾಮ-ಕೃಷ್ಣರು) ಯಾವಾಗಲೂ ಕೂಡಿಯೇ ಇರುವಂತೆ–ಇನ್ನು ಮುಂದೆ ಕರ್ಣಾರ್ಜುನರು ಕೂಡಿಕೊಂಡಿರಲಿ. ನೀವಿಬ್ಬರೂ ಹೃತ್ಪೂರ್ವಕವಾಗಿ ಪರಸ್ಪರ ಮಿಳಿತರಾದಿರೆಂದರೆ–ಈ ಪ್ರಪಂಚದಲ್ಲಿ ನಿಮ್ಮಿಂದ ಸಾಧಿಸಲಸಾಧ್ಯವಾದುದು ಯಾವುದು ತಾನೇ ಇರುತ್ತದೆ? ಯುಧಿಷ್ಠಿರನೇ ಮೊದಲಾದ ಐವರು ಅನುಜರಿಂದ ಪರಿವೃತನಾದ ನೀನು – ಮಹಾಧ್ವರದ ವೇದಿಯಲ್ಲಿ ಕುಳಿತಿರುವ, ದೇವತೆಗಳಿಂದ ಪರಿವೃತನಾದ ಬ್ರಹ್ಮನಂತೆಯೇ ಶೋಭಿಸುವೆ. ಕರ್ಣ! ನೀನು ಸಕಲಗುಣಸಂಪನ್ನನಾಗಿರುವೆ ; ಶ್ರೇಷ್ಠರಾದ ಬಂಧುಗಳ ಮಧ್ಯದಲ್ಲಿ, ಪಂಚಪಾಂಡವರ ಮಧ್ಯದಲ್ಲಿ ನೀನು ಜ್ಯೇಷ್ಠನಾಗಿರುವೆ. ಇನ್ನು ಮೇಲೆ ನಿನಗೆ ಸೂತಪುತ್ರನೆಂಬ ಅಭಿಧಾನವು ಬೇಡ. ನೀನು ಮಹಾಪರಾಕ್ರಮಿಯಾದ ಪಾರ್ಥನಾಗಿರುವೆ."

ಗಿಳಿಜನೆಯ ಅಧ್ಯಾಯವು ಮುಗಿಯಿತು.

೧೪೬ನೆಯಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ)

**ಕರ್ಣನು ಕುಂತಿಗೆ ಯಥೋಚಿತವಾಗಿ ಉತ್ತರಿಸಿದುದು :**
**ಅರ್ಜುನನೊಬ್ಬನನ್ನು ಬಿಟ್ಟು ಉಳಿದ ಪಾಂಡವರನ್ನು ಕೊಲ್ಲುವುದಿಲ್ಲವೆಂದು ಕರ್ಣನು ಕುಂತಿಗೆ ಆಶ್ವಾಸನೆಯನ್ನಿತ್ತುದು**

ವೈಶಂಪಾಯನರು ಜನಮೇಜಯನನ್ನು ಕುರಿತು ಹೇಳುತ್ತಾರೆ :

**ತತಃ ಸೂರ್ಯಾನ್ನಿಶ್ಚರಿತಾಂ ಕರ್ಣಃ ಶುಶ್ರಾವ ಭಾರತೀಮ್ ।**
**ದುರತ್ಯಯಾಂ ಪ್ರಣಯಿನೀಂ ಪಿತೃವದ್ಭಾಸ್ಕರೇರಿತಾಮ್ ॥೧॥**

"ಜನಮೇಜಯ! ಆ ವೇಳೆಗೆ ಸರಿಯಾಗಿ ಸೂರ್ಯಮಂಡಲದಿಂದ ಒಂದು ವಾಣಿಯು ಹೊರಟಿತು. ಅದು ಸೂರ್ಯದೇವನ ವಾಣಿಯೇ ಆಗಿತ್ತು.

ಆ ಮಾತಿನಲ್ಲಿ ಪಿತೃವಾಕ್ಯದ ಮಾಧುರ್ಯವಿದ್ದಿತು. ಮಾತು ಸ್ನೇಹಮಯವಾಗಿದ್ದಿತು. ಆ ಮಾತನ್ನು ಕೇಳಿಸಿಕೊಳ್ಳದಿರಲು ಅಥವಾ ಮೀರಿ ನಡೆಯಲು ಸಾಧ್ಯವಾಗುತ್ತಿರಲಿಲ್ಲ. ತಂದೆಯ ರೀತಿಯಲ್ಲಿಯೇ ಮಾತನಾಡಿದ ಸೂರ್ಯನ ವಾಣಿಯನ್ನು ಕರ್ಣನು ಕೇಳಿದನು :

**ಸತ್ಯಮಾಹ ಪೃಥಾ ವಾಕ್ಯಂ ಕರ್ಣ ಮಾತೃವಚಃ ಕುರು ।**
**ಶ್ರೇಯಸ್ತೇ ಸ್ಯಾನ್ನರವ್ಯಾಘ್ರ ಸರ್ವಮಾಚರತಸ್ತಥಾ ॥೨॥**

"ಕರ್ಣ! ಪೃಥೆಯು ಸತ್ಯವನ್ನೇ ಹೇಳಿದ್ದಾಳೆ. ತಾಯಿಯು ಹೇಳಿದಂತೆ ಮಾಡು. ಇವಳು ಹೇಳಿದಂತೆ ನಡೆದರೆ ನಿನಗೆ ನಿಶ್ಚಯವಾಗಿಯೂ ಶ್ರೇಯಸ್ಸುಂಟಾಗುತ್ತದೆ."

**ಏವಮುಕ್ತಸ್ಯ ಮಾತ್ರಾ ಚ ಸ್ವಯಂ ಪಿತ್ರಾ ಚ ಭಾನುನಾ ।**
**ಚಚಾಲ ನೈವ ಕರ್ಣಸ್ಯ ಮತಿಃ ಸತ್ಯಧೃತೇಸ್ತದಾ ॥೩॥**

ಜನಮೇಜಯ! ತಾಯಿಯಾದ ಕುಂತಿಯು ಹೇಳಿದರೂ-ತಂದೆಯಾದ ಸೂರ್ಯದೇವನೇ ಸಾಕ್ಷಾತ್ತಾಗಿ ಹೇಳಿದರೂ ಸತ್ಯಧೃತಿಯಾದ ಕರ್ಣನ ಬುದ್ಧಿಯು ಚಂಚಲವಾಗಲಿಲ್ಲ. ಅಂತೆಯೇ ಕುಂತಿಯನ್ನು ಕುರಿತು ಹೇಳಿದನು :

"ಕ್ಷತ್ರಿಯಾಣಿ! ನೀನು ಹೇಳಿದ ಮಾತಿನ ಮೇಲೆ ನನಗೆ ಶ್ರದ್ಧೆಯಿಲ್ಲ. ಎರಡನೆಯದಾಗಿ : ನಿನ್ನ ಆಜ್ಞೆಯಂತೆ ನಡೆದುಕೊಂಡರೆ ಅದು ಧರ್ಮದ ಮೂಲಕ ನನ್ನ ಆತ್ಮೋನ್ನತಿಗೆ ಸಾಧಕವಾಗುವುದೆಂಬುದರಲ್ಲಿಯೂ ನನಗೆ ನಂಬಿಕೆಯಿಲ್ಲ.

ಅಮ್ಮ! ನನ್ನ ವಿಷಯದಲ್ಲಿ ನೀನು ಮಾಡಿರುವ ಪಾಪವು ನನ್ನ ಸ್ವರೂಪನಾಶಕ್ಕೇ ಕಾರಣವಾಯಿತು. ಹುಟ್ಟಿದೊಡನೆಯೇ ನೀನು ನನ್ನನ್ನು ಪರಿತ್ಯಜಿಸಿದುದು ನನ್ನ ಯಶಸ್ಸಿನ ಮತ್ತು ಕೀರ್ತಿಯ ವಿನಾಶಕ್ಕೆ ಕಾರಣ ವಾಯಿತು. ಯದ್ಯಪಿ ನಾನು ಕ್ಷತ್ರಿಯಕುಲದಲ್ಲಿಯೇ ಹುಟ್ಟಿದೆನಾದರೂ ನಿನ್ನ ಕಾರಣದಿಂದಾಗಿ ನನಗೆ ಕ್ಷತ್ರಿಯಸಂಸ್ಕಾರವಿಲ್ಲದೆಯೇ ಹೋಯಿತು. ಮಹಾಪಾಪಿಷ್ಠನಾದ ಶತ್ರುವೇ ಆಗಿದ್ದರೂ ನನಗೆ ಇಷ್ಟು ಅಹಿತವನ್ನು

ಮಾಡಿಯಾನೇ? ತಾಯೇ! ಶತ್ರುವಾದವನಿಗೂ ಇಷ್ಟು ಅಹಿತವನ್ನು ಮಾಡಲು ಸಾಧ್ಯವಾಗುತ್ತಿರಲಿಲ್ಲ. ಯಾವಾಗ ನೀನು ನನ್ನ ವಿಷಯದಲ್ಲಿ ದಯೆತೋರಬೇಕಾಗಿತ್ತೋ–ಆ ಸಮಯದಲ್ಲಿ ನನ್ನ ಮೇಲೆ ಕಿಂಚಿತ್ತಾದರೂ ದಯೆತೋರಲಿಲ್ಲ. ಕ್ಷತ್ರಿಯಸಂಸ್ಕಾರವಾಗಬೇಕಾದ ಕಾಲವೆಲ್ಲವೂ ಪೂರ್ಣ ವಾಗಿ ಕಳೆದುಹೋಗಿರುವಾಗ ಈಗ ನೀನು ಕ್ಷಾತ್ರಧರ್ಮಾನುಸಾರವಾಗಿ ವರ್ತಿಸುವಂತೆ ಪ್ರೇರಣೆಮಾಡುತ್ತಿರುವೆ. ನಾನು ಕ್ಷತ್ರಿಯನೆಂಬುದನ್ನು ನೀನು ಈಗ ಹೇಳುತ್ತಿರುವೆ.

ಈ ಹಿಂದೆ ನೀನು ನನಗೆ ತಾಯಿಯಂತೆ ಯಾವ ವಿಧವಾದ ಹಿತವನ್ನೂ ಮಾಡಲಿಲ್ಲ. ತಾಯಿಯು ಮಾಡಬೇಕಾದ ಕರ್ತವ್ಯವನ್ನೊಂದನ್ನೂ ಮಾಡಲಿಲ್ಲ. ತಾಯಿಯಂತೆ ನಡೆದುಕೊಳ್ಳಲೂ ಇಲ್ಲ. ಈಗ ಬಂದು 'ನೀನು ನನ್ನ ಮಗ' – 'ನಾನು ನಿನ್ನ ತಾಯಿ' – ಮುಂತಾಗಿ ಹೇಳಿಕೊಳ್ಳುತ್ತಿರುವೆ. ಆದರೆ ಈಗ ನೀನು ನನ್ನ ಬಳಿಗೆ ಬಂದಿರುವುದೂ ನಿಜವಾದ ವಾತ್ಸಲ್ಯದಿಂದಲ್ಲ. ನಿನ್ನ ಸ್ವಾರ್ಥಸಾಧನೆಗಾಗಿಯೇ ಬಂದಿರುವೆ. ಅದಕ್ಕಾಗಿಯೇ ಉಪದೇಶನೀಡುತ್ತಿರುವೆ. ಇಂದಿನ ದಿನ ಶ್ರೀಕೃಷ್ಣಸಹಿತನಾದ ಪಾರ್ಥನ ದೆಸೆಯಿಂದ ವ್ಯಥೆಪಡದವರು (ಭಯಪೀಡಿತರಾಗದವರು) ಯಾರು ತಾನೇ ಇದ್ದಾರೆ? ಈ ಸಮಯದಲ್ಲಿ ನಾನೇನಾದರೂ ಪಾರ್ಥನ ಕಡೆಗೇ ಹೋಗಿ ಸೇರಿಕೊಂಡರೆ– 'ಪಾರ್ಥನ ವಿಷಯದಲ್ಲಿ ಕರ್ಣನಿಗೆ ಭೀತಿಯೇನೂ ಇರಲಿಲ್ಲ' – ಎಂದು ಯಾರು ತಾನೇ ಭಾವಿಸುತ್ತಾರೆ? 'ಪಾರ್ಥನ ಭಯದಿಂದಲೇ ಕರ್ಣನೂ ಅವರ ಕಡೆಗೇ ಸೇರಿಕೊಂಡನು' – ಎಂದೇ ಹೇಳುತ್ತಾರೆ. ಕುಂತಿ! ನನಗೆ ಈ ಹಿಂದೆ ಪಾಂಡವರು ನನ್ನ ತಮ್ಮಂದಿರೆಂಬುದು ತಿಳಿದಿರಲಿಲ್ಲ. ಯುದ್ಧಕಾಲಕ್ಕೆ ಸರಿಯಾಗಿ ನೀನು ಬಂದು ಈ ರಹಸ್ಯವಿಷಯವನ್ನು ಪ್ರಕಾಶಗೊಳಿಸುತ್ತಿರುವೆ. ಒಂದು ವೇಳೆ ನಿನ್ನ ಮಾತಿನಂತೆ ನಾನೇನಾದರೂ ಪಾಂಡವರ ಪಕ್ಷಕ್ಕೆ ಹೋಗಿ ಸೇರಿಕೊಂಡು ಬಿಟ್ಟರೆ –ಕ್ಷತ್ರಸಮಾಜವು ನನ್ನ ವಿಷಯದಲ್ಲಿ ಏನೆಂದು ಹೇಳುತ್ತದೆ? (ನನ್ನನ್ನು ಶ್ರೇಷ್ಠಕ್ಷತ್ರಿಯನೆಂದು ಪರಿಗಣಿಸುವುದೇನು? 'ಇದುವರೆಗೂ ಕರ್ಣನು ಕ್ಷತ್ರಿಯವೃತ್ತಿಯಲ್ಲಾದರೂ ಇದ್ದನು ; ಈಗ ಪಾರ್ಥನಿಗೆದುರಾಗಿ ನಿಲ್ಲ ಲಾರದೇ ಅವನ ಕಡೆಗೆ ಸೇರಿಕೊಂಡು ಹೇಡಿಯಾಗಿಬಿಟ್ಟನು' – ಎಂದೆನ್ನು

ತ್ತದೆ.) ಧೃತರಾಷ್ಟ್ರನ ಮಕ್ಕಳನ್ನು ಇಂದು ಯಾವ ಕಾರಣದಿಂದ ಬಿಟ್ಟುಬರಲಿ? ನನಗೆ ಬೇಕುಬೇಕಾದ ಕಾಮನಾವಸ್ತುಗಳೆಲ್ಲವನ್ನೂ ಅವರು ಹಂಚಿಕೊಟ್ಟಿದ್ದಾರೆ. ರಾಜನಾಗಿರುವ ದುರ್ಯೋಧನನು ತಾನು ಅನುಭವಿಸುವ ಸುಖೋಪಭೋಗ ಗಳನ್ನೇ ನನಗೂ ಒದಗಿಸಿಕೊಟ್ಟಿದ್ದಾನೆ. ನನ್ನನ್ನು ಬಹುವಾಗಿ ಗೌರವಿಸಿದ್ದಾನೆ. ನಾನು ಸುಖ-ಸಂತೋಷಗಳಿಂದಿರಲು ಬೇಕಾದುದನ್ನೆಲ್ಲಾ ಕಲ್ಪಿಸಿಕೊಟ್ಟಿದ್ದಾನೆ. ದುರ್ಯೋಧನಾದಿಗಳು ನನಗೆ ಮಾಡಿರುವ ಉಪಕಾರವನ್ನು ನಿಷ್ಫಲಗೊಳಿಸಿ ಬಿಡಲೇ? ಹೇಗೆತಾನೇ ನಿಷ್ಫಲಗೊಳಿಸಲಿ? ಶತ್ರುಗಳೊಡನೆ ದ್ವೇಷಕಟ್ಟಿಕೊಂಡು ಯಾರು ನನ್ನನ್ನು ನಿತ್ಯವೂ ಉಪಾಸನೆಮಾಡುತ್ತಿರುವರೋ – ಅಷ್ಟವಸುಗಳು ವಾಸವನಿಗೆ (ಇಂದ್ರನಿಗೆ) ಅನುದಿನವೂ ನಮಸ್ಕರಿಸುವಂತೆ– ಯಾರು ನನಗೆ ಅನುದಿನವೂ ನಮಸ್ಕರಿಸುತ್ತಿರುವರೋ, ನನ್ನ ಬಲದ ಮೇಲಿನ ಭರವಸೆಯಿಂದಲೇ ಯಾರು ತಮ್ಮ ಅಜೇಯರಾದ ಶತ್ರುಗಳನ್ನೆದುರಿಸಿ ನಿಲ್ಲಲು ಸಾಹಸಮಾಡಿರುವರೋ ಮತ್ತು ಇದೇ ಆಸೆಯಿಂದಲೇ ಯಾರು ನನ್ನನ್ನು ಬಹುವಾಗಿ ಆದರಿಸುತ್ತಿರುವರೋ–ಅಂತಹವರ ಮನೋಭಿಲಷಿತ ಗಳನ್ನು ನಾನು ಹೇಗೆ ತಾನೇ ಛಿದ್ರ-ವಿಚ್ಛಿದ್ರಗೊಳಿಸಲಿ? ಹಾಗೆ ಮಾಡಿದರೆ ಅವರು ನನ್ನ ವಿಷಯದಲ್ಲಿ ಎಂತಹ ಭಾವನೆಯನ್ನು ಹೊಂದುವರು? ದುರ್ಲಂಘನೀಯವಾದ, ಪಾರವಿಲ್ಲದ ಮಹಾಸಂಗ್ರಾಮಸಾಗರವನ್ನು ನನ್ನನ್ನೇ ನಾವೆಯನ್ನಾಗಿ ಮಾಡಿಕೊಂಡು ದಾಟಲಿಚ್ಛಿಸಿರುವ ಧೃತರಾಷ್ಟ್ರನ ಮಕ್ಕಳನ್ನು ನಾನು ಹೇಗೆತಾನೇ ಪರಿತ್ಯಜಿಸಲಿ? ಅಮ್ಮ! ದುರ್ಯೋಧನನ ಆಶ್ರಯಪಡೆದು ಜೀವಿಸುತ್ತಿದ್ದವರೆಲ್ಲರಿಗೂ ಈಗೊಂದು ಸುಸಮಯವು ಒದಗಿಬಂದಿದೆ. (ಅವನು ಮಾಡಿದ ಉಪಕಾರಕ್ಕೆ ಪ್ರತ್ಯುಪಕಾರಮಾಡುವ ಸಮಯವು ಸನ್ನಿಹಿತವಾಗಿದೆ.) ನಾನೂ ಕೂಡ ಪ್ರಾಣಗಳನ್ನು ರಕ್ಷಿಸಿಕೊಳ್ಳಬೇಕೆಂಬ ಲೋಭವನ್ನು ತೊಡೆದುಹಾಕಿ ದುರ್ಯೋಧನನು ಇದುವರೆಗೂ ಮಾಡಿರುವ ಉಪಕಾರಋಣದಿಂದ ವಿಮುಕ್ತನಾಗಬೇಕಾಗಿದೆ.

**ಕೃತಾರ್ಥಾಃ ಸುಭೃತಾ ಯೇ ಹಿ ಕೃತ್ಯಕಾಲೇ ಹ್ಯುಪಸ್ಥಿತೇ ।**
**ಅನವೇಕ್ಷ್ಯ ಕೃತಂ ಪಾಪಾ ವಿಕುರ್ವನ್ತ್ಯನವಸ್ಥಿತಾಃ ॥೧೬॥**

**ರಾಜಕಿಲ್ಬಿಷಿಣಾಂ ತೇಷಾಂ ಭರ್ತೃಪಿಣ್ಡಾಪಹಾರಿಣಾಮ್ ।**
**ನೈವಾಯಂ ನ ಪರೋ ಲೋಕೋ ವಿದ್ಯತೇ ಪಾಪಕರ್ಮಣಾಮ್ ॥**

ಒಬ್ಬನು ಮತ್ತೊಬ್ಬನ ಪಾಲನೆ-ಪೋಷಣೆಗಳಿಂದಲೇ ಬೆಳೆದಿರುತ್ತಾನೆ. ತನಗೆ ಬೇಕು-ಬೇಕಾದುದೆಲ್ಲವನ್ನೂ ಅವನಿಂದ ಪಡೆದುಕೊಂಡಿರುತ್ತಾನೆ. ಪಾಲಿಸಿ-ಪೋಷಿಸಿದವನನ್ನೇ ಸಂರಕ್ಷಿಸಬೇಕಾದ ಕಾಲವು ಒದಗಿಬರುತ್ತದೆ. ಅಂತಹ ಸಮಯದಲ್ಲಿ ತಮಗೆ ಮಾಡಿದ ಉಪಕಾರವನ್ನು ಸ್ಮರಿಸಿಕೊಳ್ಳದೇ ಅಸ್ಥಿರಚಿತ್ತರಾದ ಪಾಪಿಷ್ಠರಾದವರು ಮಾತ್ರವೇ ಉಂಡಮನೆಗೆ ಎರಡು ಬಗೆಯುತ್ತಾರೆ. ರಾಜನ ವಿಷಯದಲ್ಲಿ ಹೀಗೆ ಮಾಡಿದರೆ ರಾಜದ್ರೋಹಿ ಗಳಾಗುತ್ತಾರೆ. ಸ್ವಾಮಿಯ ಅನ್ನವನ್ನು ತಿಂದು ಸಮಯದಲ್ಲಿ ಪ್ರತ್ಯುಪಕಾರ ಮಾಡದಿರುವ ಇಂತಹವರನ್ನು ಭರ್ತೃಪಿಂಡಾಪಹಾರಿಗಳೆಂದೂ ಕರೆಯು ತ್ತಾರೆ. ಇಂತಹ ರಾಜದ್ರೋಹಿಗಳಿಗೆ, ಭರ್ತೃಪಿಂಡಾಪಹಾರಿಗಳಿಗೆ, ಪಾಪ ಕರ್ಮಿಗಳಿಗೆ, ಕೃತಘ್ನರಿಗೆ–ಈ ಲೋಕವೂ ಇಲ್ಲ ; ಪರಲೋಕವೂ ಇಲ್ಲ.

ಅಮ್ಮ! ನಿನ್ನೊಡನೆ ನಾನು ಸುಳ್ಳುಹೇಳುವುದಿಲ್ಲ. ಧೃತರಾಷ್ಟ್ರನ ಮಕ್ಕಳ ಸಲುವಾಗಿ ನಾನು ನಿನ್ನ ಮಕ್ಕಳೊಡನೆ ನನ್ನ ಸಂಪೂರ್ಣವಾದ ಬಲ ಮತ್ತು ಶಕ್ತಿಗಳನ್ನು ಆಶ್ರಯಿಸಿ ಯುದ್ಧಮಾಡುತ್ತೇನೆ. ದಯಾಳುತ್ವವನ್ನೂ – ಸತ್ಪುರುಷೋಚಿತವಾದ ಸದ್ವೃತ್ತಿಯನ್ನೂ ರಕ್ಷಣೆಮಾಡುವ ಸಲುವಾಗಿ ನಾನೀ ಕಾರ್ಯಮಾಡುತ್ತೇನೆ. ನನ್ನನ್ನು ಇದುವರೆಗೂ ಗೌರವಿಸಿ, ಪಾಲಿಸಿ-ಪೋಷಿಸಿದ ದುರ್ಯೋಧನನ ವಿಷಯದಲ್ಲಿ ನಾನು ನಿರ್ಘೃಣನಾಗುವುದಿಲ್ಲ. ಮಾಡಿದ ಉಪಕಾರವನ್ನು ಸ್ಮರಿಸಿ ಸಮಯದಲ್ಲಿ ಪ್ರತ್ಯುಪಕಾರವನ್ನು ಮಾಡುವವರು ಸತ್ಪುರುಷರೆನಿಸಿಕೊಳ್ಳುತ್ತಾರೆ. ಆದುದರಿಂದ ನಾನು ಈ ಎರಡು ಧರ್ಮಗಳನ್ನೂ ಬಿಡುವುದಿಲ್ಲ. ಅವನ್ನು ರಕ್ಷಣೆಮಾಡುತ್ತೇನೆ. ಅಮ್ಮ! ನೀನು ಹೇಳಿದುದು ಯದ್ಯಪಿ ನನಗೆ ಲಾಭಕರವಾಗಿದ್ದರೂ ಈ ಎರಡು ಧರ್ಮಗಳನ್ನು ರಕ್ಷಿಸುವ ಸಲುವಾಗಿ, ನಿನ್ನ ಮಾತಿನಂತೆ ನಡೆದುಕೊಳ್ಳುವುದಿಲ್ಲ. ಆದರೆ :

**ನ ಚ ತೇಽಯಂ ಸಮಾರಮ್ಭೋ ಮಯಿ ಮೋಘೋ ಭವಿಷ್ಯತಿ ।**
**ವಧ್ಯಾನ್ವಿಷಹ್ಯಾನ್ಸಂಗ್ರಾಮೇ ಹನಿಷ್ಯಾಮಿ ತೇ ಸುತಾನ್ ॥೨೦॥**

**ಯುಧಿಷ್ಠಿರಂ ಚ ಭೀಮಂ ಚ ಯಮೌ ಚೈವಾರ್ಜುನಾದೃತೇ ।**
**ಅರ್ಜುನೇನ ಸಮಂ ಯುದ್ಧಮಪಿ ಯೌಧಿಷ್ಠಿರೇ ಬಲೇ ॥೨೧॥**

ನೀನು ನನ್ನ ಬಳಿಗೆ ಬಂದುದೂ ವ್ಯರ್ಥವಾಗಬಾರದು. ಜನನಿಯಾದ

ನೀನು ಬರಿಗೈಯಲ್ಲಿ ಹೋಗಬಾರದು. ಆದುದರಿಂದ ನಾನು ನಿನಗೆ ಈ ಒಂದು ಆಶ್ವಾಸನೆಯನ್ನು ಕೊಡುತ್ತೇನೆ. ನಿನ್ನ ಮಕ್ಕಳಲ್ಲಿ ಅರ್ಜುನನೊಬ್ಬನನ್ನು ಬಿಟ್ಟು ಉಳಿದ ಯುಧಿಷ್ಠಿರ, ಭೀಮ, ನಕುಲ, ಸಹದೇವ–ಈ ನಾಲ್ವರಲ್ಲಿ ಯಾರೇ ಆಗಲೀ ನನ್ನ ಮುಂದೆ ಬಂದು ಯುದ್ಧಮಾಡುವಾಗ ವಧಾರ್ಹರಾದ ಅವರನ್ನು ವಧಿಸುವ ಸಾಧ್ಯತೆಯಿದ್ದಾಗಲೂ ಸಹ ವಧೆಮಾಡುವುದಿಲ್ಲ. (ಯುಧಿಷ್ಠಿರ-ಭೀಮ-ನಕುಲ-ಸಹದೇವರನ್ನು ಯುದ್ಧದಲ್ಲಿ ನಾನು ಸಂಹಾರ ಮಾಡುವುದಿಲ್ಲ. ಅವರಿಗೆ ಜೀವದಾನಮಾಡುತ್ತೇನೆ.) ಯುಧಿಷ್ಠಿರನ ಸೈನ್ಯದಲ್ಲಿ ಅರ್ಜುನನಿಗೂ ನನಗೂ ಪ್ರಾಣಾಂತಕರವಾದ ಯುದ್ಧವಾಗುತ್ತದೆ.

**ಅರ್ಜುನಂ ಹಿ ನಿಹತ್ಯಾಜೌ ಸಮ್ಪ್ರಾಪ್ತಂ ಸ್ಯಾತ್ಫಲಂ ಮಯಾ ।**
**ಯಶಸಾ ಚಾಪಿ ಯುಜ್ಯೇಯಂ ನಿಹತಃ ಸವ್ಯಸಾಚಿನಾ ॥೨೨॥**

ಯುದ್ಧದಲ್ಲಿ ನಾನು ಅರ್ಜುನನನ್ನು ಸಂಹರಿಸಿದ್ದೇ ಆದರೆ ನನಗೆ ಯುದ್ಧದ ಫಲವು ಸಿಕ್ಕಿದಂತಾಗುತ್ತದೆ. ಒಂದು ವೇಳೆ ಅರ್ಜುನನಿಂದಲೇ ನಾನು ಸಂಹೃತನಾದರೆ ಯಶೋವಂತನಾಗುತ್ತೇನೆ.

**ನ ತೇ ಜಾತು ನ ಶಿಷ್ಯನ್ತಿ ಪುತ್ರಾಃ ಪಞ್ಚ ಯಶಸ್ವಿನಿ ।**
**ನಿರರ್ಜುನಾಃ ಸಕರ್ಣಾ ವಾ ಸಾರ್ಜುನಾ ವಾ ಹತೇ ಮಯಿ ॥೨೩॥**

ಯಶಸ್ವಿನಿಯೇ! ಯಾವುದೇ ಕಾರಣದಿಂದಲೂ ನಿನಗೆ ಐವರು ಮಕ್ಕಳು ಉಳಿದೇ ಉಳಿಯುತ್ತಾರೆ. ಆ ಐವರು ಮಕ್ಕಳು ಅರ್ಜುನನಿಲ್ಲದೇ ಕರ್ಣ-ಯುಧಿಷ್ಠಿರ-ಭೀಮ-ನಕುಲ-ಸಹದೇವರಾಗಬಹುದು ಅಥವಾ ನಾನು ಸತ್ತುಹೋಗಿ ಯುಧಿಷ್ಠಿರ-ಭೀಮಾರ್ಜುನ-ನಕುಲ-ಸಹದೇವರಾದರೂ ಆಗಬಹುದು. (ಪಂಚಪಾಂಡವರೆಂಬುದು ಶಾಶ್ವತವಾಗಿ ಉಳಿಯುವುದೇ ಹೊರತು ಷಟ್ಪಾಂಡವರೆಂದಿಗೂ ಆಗುವುದಿಲ್ಲ.)"

ಧೈರ್ಯದಿಂದ ಸ್ವಲ್ಪವಾದರೂ ವಿಚಲಿತನಾಗದಿದ್ದ ಕರ್ಣನ ಮಾತುಗಳನ್ನು ಕೇಳಿ ಅವನನ್ನು ಗಾಢಾಲಿಂಗನಮಾಡಿಕೊಂಡು ದುಃಖದಿಂದ ತರತರನೆ ನಡುಗುತ್ತಾ ಕುಂತಿಯು ಹೇಳಿದಳು :

**ಏವಂ ವೈ ಭಾವ್ಯಮೇತೇನ ಕ್ಷಯಂ ಯಾಸ್ಯನ್ತಿ ಕೌರವಾಃ ।**
**ಯಥಾ ತ್ವಂ ಭಾಷಸೇ ಕರ್ಣ ದೈವಂ ತು ಬಲವತ್ತರಮ್ ॥೨೪॥**

“ದೈವಚಿಂತನೆಯೇ ಬಲವತ್ತರವಾದುದು. ಕರ್ಣ! ಮನುಷ್ಯ ಪ್ರಯತ್ನದಿಂದ ಯಾವ ಪ್ರಯೋಜನವೂ ಆಗುವುದಿಲ್ಲ. (ನಾನು ಹೇಳಿದಂತೆ ನೀನು ಕೇಳಿದ್ದರೆ ಜನಕ್ಷಯಕರವಾದ ಯುದ್ಧವು ಸಂಭವಿಸುತ್ತಿರಲಿಲ್ಲ.) ನೀನು ಹೇಳಿದಂತೆಯೇ ‘ಯುದ್ಧವೇ ಆಗಬೇಕು. ಜನಕ್ಷಯವೇ ಆಗಬೇಕು’ – ಎಂಬುದೇ ದೈವಸಂಕಲ್ಪವಿರಬಹುದು. ಅದು ಹಾಗೆಯೇ ನಡೆಯುತ್ತದೆ. ಆದರೆ ಪ್ರಯೋಜನವಿಷ್ಟೇ ಕರ್ಣ! ಇದರಿಂದ ಕೌರವರೆಲ್ಲರೂ ಸಂಪೂರ್ಣವಾಗಿ ವಿನಾಶಹೊಂದುತ್ತಾರೆ.

**ತ್ವಯಾ ಚತುರ್ಣಾಂ ಭ್ರಾತೄಣಾಮಭಯಂ ಶತ್ರುಕರ್ಶನ ।**
**ದತ್ತಂ ತತ್ಪ್ರತಿಜಾನೀಹಿ ಸಂಗರಪ್ರತಿಮೋಚನಮ್ ॥೨೬॥**

ಶತ್ರುಸೂದನನೇ! ನೀನು ನಿನ್ನ ನಾಲ್ವರು ತಮ್ಮಂದಿರಿಗೆ ಅಭಯದಾನವನ್ನು ಮಾಡಿರುವೆ. ಯುದ್ಧಸಮಯದಲ್ಲಿ ಅವರನ್ನು ಕೊಲ್ಲುವ ಸಾಧ್ಯತೆಯಿದ್ದರೂ ಬಿಟ್ಟುಬಿಡುವೆನೆಂಬ ನಿನ್ನ ಪ್ರತಿಜ್ಞಾವಚನವನ್ನು ಸ್ಮರಿಸಿ ಅದರಂತೆ ನಡೆದುಕೋ. ನಿನಗೆ ಸನ್ಮಂಗಳವುಂಟಾಗಲಿ. **ಅನಾಮಯಂ ಸ್ವಸ್ತಿ ತೇಽಸ್ತು** – ನಿನಗೆ ಯಾವ ವಿಧವಾದ ರೋಗ-ರುಜಿನಾದಿಗಳೂ ಬಾರದಿರಲಿ. ಆರೋಗ್ಯವಂತನಾಗಿ ಬಾಳು.”

‘ಹಾಗೆಯೇ ಆಗಲಮ್ಮ’ ಎಂದು ಕರ್ಣನೂ ಪ್ರತ್ಯುತ್ತರವಿತ್ತನಂತರ ಇಬ್ಬರೂ ಪ್ರತ್ಯೇಕವಾಗಿ ತಮ್ಮ ತಮ್ಮ ನಿವಾಸಗಳ ಕಡೆಗೆ ಹೊರಟುಹೋದರು.”

ಗ೪೬ನೆಯ ಅಧ್ಯಾಯವು ಮುಗಿಯಿತು.

## ಯುಧಿಷ್ಠಿರನಿಗೆ ಶ್ರೀಕೃಷ್ಣನು ಕೌರವಸಭೆಯಲ್ಲಾದ ಸಂಗತಿಗಳನ್ನು ವಿವರಿಸಿ ಹೇಳಿದುದು

ವೈಶಂಪಾಯನರು ಜನಮೇಜಯನನ್ನು ಕುರಿತು ಹೇಳುತ್ತಾರೆ :

**ಆಗಮ್ಯ ಹಾಸ್ತಿನಪುರಾದುಪಪ್ಲಾವ್ಯಮರಿಂದಮಃ ।**
**ಪಾಣ್ಡವಾನಾಂ ಯಥಾವೃತ್ತಂ ಕೇಶವಃ ಸರ್ವಮುಕ್ತವಾನ್ ॥೧॥**

"ಜನಮೇಜಯ! ಕೇಶವನು ಹಸ್ತಿನಾಪುರದಿಂದ ಉಪಪ್ಲಾವ್ಯಕ್ಕೆ ಆಗಮಿಸಿ ಹಸ್ತಿನಾಪುರದ ರಾಜಭವನದಲ್ಲಿ ಹೇಗೆ ನಡೆಯಿತೋ ಹಾಗೆಯೇ ಎಲ್ಲ ವಿಷಯಗಳನ್ನೂ ಪಾಂಡವರಿಗೆ ವಿವರವಾಗಿ ತಿಳಿಸಿದನು. ಶ್ರೀಕೃಷ್ಣನು ಬಹಳ ಹೊತ್ತಿನವರೆಗೆ ಪಾಂಡವರೊಡನೆ ಮಾತನಾಡಿಕೊಂಡಿದ್ದು ಪುನಃ ಪುನಃ ಮುಂದೆ ಆಗಬೇಕಾದುದರ ವಿಷಯವಾಗಿ ಮಂತ್ರಾಲೋಚನೆಗಳನ್ನು ಮಾಡುತ್ತಲಿದ್ದು ಅನಂತರದಲ್ಲಿ ವಿಶ್ರಾಂತಿಗಾಗಿ ತನ್ನ ಅರಮನೆಗೆ ತೆರಳಿದನು. ಶ್ರೀಕೃಷ್ಣನು ವಿಶ್ರಾಂತಿಗಾಗಿ ಹೊರಟುಹೋದ ಬಳಿಕ ಯುಧಿಷ್ಠಿರನೂ ವಿರಾಟಪ್ರಮುಖರಾದ ಎಲ್ಲ ರಾಜರನ್ನೂ ಅವರವರ ಬಿಡಾರಗಳಿಗೆ ಕಳುಹಿಸಿಕೊಟ್ಟನು. ಆ ವೇಳೆಗೆ ಸೂರ್ಯನೂ ಅಸ್ತಮಿಸಿದನು. ಐವರು ಪಾಂಡವರೂ ಸಂಧ್ಯಾವಂದನೆಯನ್ನು ಮುಗಿಸಿದರು. ಆ ಸಮಯದಲ್ಲಿ ಅವರ ಮನಸ್ಸೆಲ್ಲವೂ ಶ್ರೀಕೃಷ್ಣನಲ್ಲಿಯೇ ಲೀನವಾಗಿಬಿಟ್ಟಿದ್ದಿತು. ಅವನನ್ನೇ ಐವರೂ ಧ್ಯಾನಿಸುತ್ತಿದ್ದರು. ಅನಂತರದಲ್ಲಿ ಶ್ರೀಕೃಷ್ಣನನ್ನು ಅರಮನೆಗೆ ಕರೆಸಿಕೊಂಡು ಪುನಃ ಮಂತ್ರಾಲೋಚನೆಯಲ್ಲಿ ಮಗ್ನರಾದರು. ಮಾತನ್ನು ಪ್ರಾರಂಭಿಸುತ್ತಾ ಯುಧಿಷ್ಠಿರನು ಶ್ರೀಕೃಷ್ಣನನ್ನು ಪ್ರಶ್ನಿಸಿದನು :

"ಪುಂಡರೀಕಾಕ್ಷ! ನೀನು ನಾಗಪುರಕ್ಕೆ ಹೋದುದು ಸರಿಯಷ್ಟೇ. ಕೌರವಸಭೆಯಲ್ಲಿ ಧೃತರಾಷ್ಟ್ರನ ಮಗನಾದ ದುರ್ಯೋಧನನಿಗೆ ನೀನೇನು ಹೇಳಿದೆಯೆಂಬುದನ್ನು ನಮ್ಮೊಡನೆ ಹೇಳುವ ಕೃಪೆಮಾಡು."

"ಯುಧಿಷ್ಠಿರ! ನಾನು ಹಸ್ತಿನಾಪಟ್ಟಣಕ್ಕೆ ಹೋಗಿ ಕೌರವರ ಸಭೆ

ಯಲ್ಲಿ ದುರ್ಯೋಧನನಿಗೆ ತಥ್ಯವಾದುದನ್ನೂ (ಯಥಾರ್ಥವಾದ ವಿಷಯವನ್ನೂ), ಪಥ್ಯವಾದುದನ್ನೂ (ಗ್ರಹಿಸಲು ಮತ್ತು ಅದರಂತೆ ನಡೆಯಲು ಯೋಗ್ಯವಾದುದನ್ನೂ) ಮತ್ತು ಹಿತವಾದುದನ್ನೂ ಹೇಳಿದೆನು. ಆದರೆ ದುರ್ಮತಿಯಾದ ಅವನು ನನ್ನ ಮಾತನ್ನು ಅಂಗೀಕರಿಸಲಿಲ್ಲ."



"ಹೃಷೀಕೇಶ! ದುರ್ಯೋಧನನು ಅಪಮಾರ್ಗವನ್ನು ಹಿಡಿದು ನಿನ್ನ ಮಾತನ್ನು ತಿರಸ್ಕರಿಸಿದನಂತರ ಕುರುವೃದ್ಧನಾದ, ಪಿತಾಮಹನಾದ ಭೀಷ್ಮನು ಅಸಹನಶೀಲನಾದ ದುರ್ಯೋಧನನಿಗೇನಾದರೂ ಬುದ್ಧಿಹೇಳಿದನೇ? ಏನೆಂಬು ದಾಗಿ ಹೇಳಿದನು? ಆ ಸಮಯದಲ್ಲಿ, ಆಚಾರ್ಯರಾದ ಮಹಾಭಾಗರಾದ ಭಾರದ್ವಾಜರೇನೆಂದು ಹೇಳಿದರು? ದುರ್ಯೋಧನನ ತಂದೆಯಾದ ಧೃತರಾಷ್ಟ್ರ

ನೇನೆಂದನು? ದುರ್ಯೋಧನನ ಹಠಮಾರಿತನವನ್ನು ಕಂಡು ತಾಯಿಯಾದ ಗಾಂಧಾರಿಯು ಏನಾದರೂ ಹೇಳಿದಳೇ? ಧರ್ಮವಿದರಲ್ಲಿ ಶ್ರೇಷ್ಠನಾದ ನಮ್ಮ ಚಿಕ್ಕತಂದೆಯಾದ ವಿದುರನು ಯಾವಾಗಲೂ ಪುತ್ರವಿನಾಶವನ್ನು ನೆನೆದು ಪರಿತಪಿಸುತ್ತಿರುತ್ತಾನೆ. ಧೃತರಾಷ್ಟ್ರನ ಮಗನನ್ನು ಕುರಿತು ಅವನಾದರೂ ಏನೆಂದು ಹೇಳಿದನು? ಆ ಸಭೆಯಲ್ಲಿ ಕುಳಿತಿದ್ದ ಇತರ ರಾಜರು ದುರ್ಯೋಧನನ ಔದ್ಧತ್ಯವನ್ನು ಕಂಡು ತಮ್ಮ ತಮ್ಮ ಅಭಿಪ್ರಾಯಗಳನ್ನು ಯಾವ ರೀತಿಯಲ್ಲಿ ವ್ಯಕ್ತಪಡಿಸಿದರು? – ಈ ಎಲ್ಲವನ್ನೂ ನೀನು ವಿವರವಾಗಿ ಹೇಳು. ಕೃಷ್ಣ! ನೀನು ಕುರುಮುಖ್ಯರಾದ ಧೃತರಾಷ್ಟ್ರ-ಭೀಷ್ಮಾದಿಗಳ ಸಮಕ್ಷದಲ್ಲಿ ಎಲ್ಲ ಮಾತುಗಳನ್ನೂ ಸುಸ್ಪಷ್ಟವಾಗಿಯೇ ಹೇಳಿರುವೆ. ನೀನು ನನ್ನ ಸಂಬಂಧವಾಗಿ ಹೇಳಿದ ಆ ಮಾತುಗಳು ಮತ್ತು ಕೌರವಸಭೆಯಲ್ಲಿದ್ದ ರಾಜರ ಮತ್ತು ಭೀಷ್ಮ- ದ್ರೋಣ-ವಿದುರರ ಮಾತುಗಳು ದುರ್ಯೋಧನನಿಗೆ ಅಪ್ರಿಯವೆನಿಸಿರಬಹುದು. ಕಾಮ-ಲೋಭಾಭಿಭೂತನಾದ, ಮೂರ್ಖನಾದ, ಪಂಡಿತಂಮನ್ಯನಾದ ಅವನ ಹೃದಯದಲ್ಲಿ ಆ ಮಾತುಗಳೊಂದೂ ನಿಲ್ಲಲಾರವು. ಆ ಮಾತುಗಳಿಗೆ ಅವನ ಹೃದಯದಲ್ಲಿ ಎಡೆಯಿಲ್ಲ. ಗೋವಿಂದ! ಅವರು ಹೇಳಿದ ಮಾತುಗಳೆಲ್ಲವನ್ನೂ ನಾನು ಕೇಳಲಿಚ್ಛಿಸಿದ್ದೇನೆ. ನಮ್ಮ ಕಾಲವೂ ವ್ಯರ್ಥವಾಗದ ರೀತಿಯಲ್ಲಿ ಅವರ ಮಾತುಗಳನ್ನು ಹೇಳಿ ಮುಗಿಸಿಬಿಡು.

**ಭವಾನ್ಹಿ ನೋ ಗತಿಃ ಕೃಷ್ಣ ಭವಾನ್ನಾಥೋ ಭವಾನ್ಗುರುಃ ॥೧೩॥**

ಕೃಷ್ಣ! ನೀನೇ ನಮಗೆ ಆಶ್ರಯನು. ನೀನೇ ನಮಗೆ ನಾಥನೂ ಮತ್ತು ಮಾರ್ಗದರ್ಶಕನಾದ ಗುರುವೂ ಆಗಿರುವೆ."

ಶ್ರೀಕೃಷ್ಣನು ಹೇಳುತ್ತಾನೆ :

"ರಾಜೇಂದ್ರ! ಕೌರವಸಭೆಯಲ್ಲಿ ಕುರುರಾಜಕುಮಾರರ ಮಧ್ಯದಲ್ಲಿ ನಾನು ದುರ್ಯೋಧನನನ್ನು ಕುರಿತು ಧರ್ಮವಿಹಿತವಾದ ಮಾತನಾಡಿದುದಕ್ಕೆ ಅವನ ಪ್ರತಿಕ್ರಿಯೆಯೇನೆಂಬುದನ್ನು ಹೇಳುವೆನು ; ಕೇಳು. ನಾನು ಹೇಳಿದ ಮಾತುಗಳನ್ನು ಕೇಳಿ ದುರ್ಯೋಧನನು ಗಹ-ಗಹಿಸಿನಕ್ಕನು. ನನ್ನ ಮಾತಿಗೆ ಅದೇ ಅವನ ಪ್ರತಿಕ್ರಿಯೆ. ದುರ್ಯೋಧನನು ತಿರಸ್ಕಾರಭಾವದಿಂದ

ಗಹಿ-ಗಹಿಸಿ ನಕ್ಕುದನ್ನು ನೋಡಿ ಬಹಳವಾಗಿ ಕೋಪಗೊಂಡ ಭೀಷ್ಮನು ಈ ಮಾತುಗಳನ್ನು ಹೇಳಿದನು :

**ದುರ್ಯೋಧನ ನಿಬೋಧೇದಂ ಕುಲಾರ್ಥೇ ಯದ್ಬ್ರವೀಮಿ ತೇ ।**
**ತಚ್ಛ್ರುತ್ವಾ ರಾಜಶಾರ್ದೂಲ ಸ್ವಕುಲಸ್ಯ ಹಿತಂ ಕುರು ॥೧೭॥**

"ದುರ್ಯೋಧನ! ಕುಲದ ಹಿತಾರ್ಥವಾಗಿ ನಾನು ಹೇಳಲಿರುವುದನ್ನು ಕೇಳು. ನನ್ನ ಮಾತನ್ನು ಕೇಳಿದನಂತರ ನಿನ್ನ ಕುಲಕ್ಕೆ ಹಿತವುಂಟಾಗುವ ರೀತಿಯಲ್ಲಿ ಕಾರ್ಯಮಾಡು.

ರಾಜಶಾರ್ದೂಲ! ನನ್ನ ತಂದೆಯಾದ ಶಾಂತನುವು ಲೋಕವಿಖ್ಯಾತನಾದ ರಾಜನಾಗಿದ್ದನು. ಅವನು ಪುತ್ರವಂತರಲ್ಲಿ ಶ್ರೇಷ್ಠನಾಗಿದ್ದನು. ನಾನವನಿಗೆ ಏಕಮಾತ್ರಪುತ್ರನಾಗಿದ್ದೆನು. ಅವನಿಗೆ ಮತ್ತೊಬ್ಬ ಪುತ್ರನನ್ನು ಪಡೆದುಕೊಳ್ಳುವುದು ಹೇಗೆಂಬ ಬಗ್ಗೆ ಚಿಂತೆಯುಂಟಾಯಿತು. ಅದಕ್ಕೆ ಕಾರಣವೇನೆಂದರೆ :

**ಏಕಪುತ್ರಮಪುತ್ರಂ ವೈ ಪ್ರವದನ್ತಿ ಮನೀಷಿಣಃ ॥೧೮॥**

ಒಬ್ಬನೇ ಪುತ್ರನಿರುವುದು ಪುತ್ರನಿಲ್ಲದಿರುವುದಕ್ಕೆ ಸಮಾನವೆಂದು ವಿದ್ವಾಂಸರು ಹೇಳುತ್ತಾರೆ.

'ಯಾವ ಕಾರಣದಿಂದಲೂ ಕುಲದ ವಿಚ್ಛೇದವಾಗಕೂಡದು ಮತ್ತು ಕುರುಕುಲದ ಯಶಸ್ಸು ಸರ್ವತ್ರ ವ್ಯಾಪಿಸುವಂತಾಗಬೇಕು.' – ಇದನ್ನು ಸಾಧಿಸುವುದು ಹೇಗೆಂಬುದು ನಮ್ಮ ತಂದೆಯ ಜಿಜ್ಞಾಸೆಯಾಗಿತ್ತು. ಶಾಂತನುರಾಜನ ಆ ಅಭಿಪ್ರಾಯವನ್ನು ತಿಳಿದ ನಾನು ನನ್ನ ತಂದೆಯ ಸಲುವಾಗಿಯೂ–ಕುಲವೃದ್ಧಿಯ ಸಲುವಾಗಿಯೂ ದುಷ್ಕರವಾದ ಪ್ರತಿಜ್ಞೆಯನ್ನು ಮಾಡಿ ಕಾಲಿಯನ್ನು (ಸತ್ಯವತಿಯನ್ನು) ನಮ್ಮ ತಾಯಿಯನ್ನಾಗಿ ಅಂಗೀಕರಿಸಿ ಅರಮನೆಗೆ ಕರೆತಂದೆನು. ಅನಂತರದಲ್ಲಿ ನಾನು ನನ್ನ ಪ್ರತಿಜ್ಞಾನುಸಾರವಾಗಿ ರಾಜ್ಯಕ್ಕೆ ರಾಜನಾಗಲಿಲ್ಲ. ಊರ್ಧ್ವರೇತಸ್ಕನಾಗಿಯೇ ಇದ್ದುಬಿಟ್ಟೆನು. (ವಿವಾಹವಾಗದೇ ನೈಷ್ಠಿಕಬ್ರಹ್ಮಚರ್ಯೆಯಲ್ಲಿಯೇ ಇದ್ದು ಬಿಟ್ಟೆನು.) ಈ ವಿಷಯಗಳೆಲ್ಲವೂ ನಿನಗೂ ತಿಳಿದೇ ಇವೆ. ಮುಂದೆ ನಾನು

ಪ್ರತಿಜ್ಞೆಯನ್ನು ಪರಿಪಾಲನೆಮಾಡುತ್ತಾ ಪ್ರಸನ್ನಾಂತಃಕರಣನಾಗಿ ಇಲ್ಲಿಯೇ ಇದ್ದುಬಿಟ್ಟಿದ್ದೇನೆ. ಸತ್ಯವತಿಯ ಗರ್ಭದಲ್ಲಿ ಕುರುಕುಲದ ಭಾರವನ್ನು ವಹಿಸಲು ಸಮರ್ಥನಾದ, ಮಹಾಬಾಹುವಾದ, ಶ್ರೀಮಂತನಾದ, ಧರ್ಮಾತ್ಮನಾದ ಮತ್ತು ನನ್ನ ತಮ್ಮನಾದ ವಿಚಿತ್ರವೀರ್ಯನು ಹುಟ್ಟಿದನು. ನಮ್ಮ ತಂದೆಯು ಇಹಲೋಕವನ್ನು ತ್ಯಜಿಸಿ ಸ್ವರ್ಗಕ್ಕೆ ಹೊರಟುಹೋಗಲಾಗಿ, ನನ್ನ ತಮ್ಮನಾದ ವಿಚಿತ್ರವೀರ್ಯನನ್ನೇ ರಾಜ್ಯದ ಸಿಂಹಾಸನದಲ್ಲಿ ಕುಳ್ಳಿರಿಸಿ ನಾನು ಅವನ ಸೇವಕನಂತೆ ಸಿಂಹಾಸನದ ಕೆಳಭಾಗದಲ್ಲಿ ನಿಂತುಕೊಳ್ಳುತ್ತಿದ್ದೆನು. ಸ್ವಯಂವರಕ್ಕಾಗಿ ಆಗಮಿಸಿದ್ದ ರಾಜರ ಸಮೂಹವನ್ನೇ ಗೆದ್ದು ನಾನು ನನ್ನ ತಮ್ಮನಿಗೆ ಅನುರೂಪರಾದ ಕನ್ಯೆಯರನ್ನು ತಂದು ವಿವಾಹಮಾಡಿದೆನು. ಈ ವೃತ್ತಾಂತವನ್ನೂ ನೀನು ಅನೇಕಬಾರಿ ಕೇಳಿ ತಿಳಿದಿರುವೆ. ಅನಂತರ ಒಂದಾನೊಂದು ಸಮಯದಲ್ಲಿ ನಾನು ಪರಶುರಾಮನೊಡನೆ ದ್ವಂದ್ವಯುದ್ಧವನ್ನು ಮಾಡಬೇಕಾಯಿತು. ಪರಶುರಾಮನ ಶೌರ್ಯ-ಸಾಮರ್ಥ್ಯಗಳೂ ನಿನಗೆ ತಿಳಿದೇ ಇವೆ. ಪರಶುರಾಮನ ಭಯದಿಂದಾಗಿ ಪಟ್ಟಣಿಗರು ವಿಚಿತ್ರವೀರ್ಯನನ್ನು ಪಟ್ಟಣದಿಂದ ಬಹುದೂರವಿರುವ ಪ್ರದೇಶವೊಂದಕ್ಕೆ ಕಳುಹಿಸಿಬಿಟ್ಟಿದ್ದರು. ಆ ಸಮಯದಲ್ಲಿ ನಾನು ಪರಶುರಾಮನೊಡನೆಯೂ ಯುದ್ಧಮಾಡಿ ವಿಚಿತ್ರವೀರ್ಯನನ್ನು ಪುನಃ ರಾಜಧಾನಿಗೆ ಕರೆತಂದೆನು. ಆದರೆ ವಿಚಿತ್ರವೀರ್ಯನು ತನ್ನ ಪತ್ನಿಯರಲ್ಲಿ ಸದಾ ಅತ್ಯಾಸಕ್ತನಾಗಿದ್ದುದರಿಂದ ಅವನಿಗೆ ರಾಜಯಕ್ಷ್ಮರೋಗವು ಬಂದಿತು. ಆ ರೋಗದಿಂದಲೇ ಅವನು ಮರಣಹೊಂದಿದನು. ರಾಜ್ಯವು ಅರಾಜಕವಾಯಿತು. ಅಧರ್ಮವು ಸರ್ವತ್ರವ್ಯಾಪ್ತವಾಯಿತು. ದೇವೇಂದ್ರನು ಮಳೆಗರೆಯಲಿಲ್ಲ. ಕ್ಷುತ್ಪಿಪಾಸಾಭಯಪೀಡಿತರಾದ ಪ್ರಜೆಗಳು ನನ್ನ ಬಳಿಗೆ ಧಾವಿಸಿಬಂದರು. ತಮ್ಮ ಕುಂದು-ಕೊರತೆಗಳನ್ನು ಈ ರೀತಿ ಹೇಳಿಕೊಂಡರು :

'ಶಾಂತನುಕುಲಸಂವರ್ಧಕನೇ! ನಿನಗೆ ಮಂಗಳವಾಗಲಿ. ಅರಾಜಕತೆಯಿಂದಾಗಿ ರಾಜ್ಯದ ಪ್ರಜೆಗಳೆಲ್ಲರೂ ಕ್ಷೀಣಿಸುತ್ತಿದ್ದಾರೆ. ನಮ್ಮ ಅಭ್ಯುದಯಕ್ಕಾಗಿ ನೀನೇ ನಮಗೆ ರಾಜನಾಗು. ಅರಾಜಕತ್ವದಿಂದಾಗಿ ರಾಜ್ಯಕ್ಕೊದಗಿ ಬಂದಿರುವ ಈತಿಬಾಧೆಗಳನ್ನು ತಪ್ಪಿಸು. ನಿನ್ನ ರಾಜ್ಯದ ಪ್ರಜೆಗಳೆಲ್ಲರೂ

ಭಯಂಕರವಾದ ರೋಗದಿಂದ ಪೀಡಿತರಾಗಿದ್ದಾರೆ. ಈ ಭಯಂಕರರೋಗ ದಿಂದಾಗಿ ಅನೇಕರು ಈಗಾಗಲೇ ಮೃತ್ಯುವನ್ನಪ್ಪಿರುವರು. ಸ್ವಲ್ಪ ಜನರು ಮಾತ್ರವೇ ಉಳಿದುಕೊಂಡಿದ್ದಾರೆ. ಗಾಂಗೇಯ! ಈ ಸಮಯದಲ್ಲಾದರೂ ನೀನು ನಮ್ಮ ರಾಜನಾಗಿ ಅಳಿದುಳಿದಿರುವ ಪ್ರಜೆಗಳನ್ನಾದರೂ ರಕ್ಷಿಸುವುದು ಯೋಗ್ಯವಾಗಿದೆ. ಈಗೊದಗಿಬಂದಿರುವ ಮಹಾರೋಗವನ್ನು ಹೋಗಲಾಡಿಸು. ಪ್ರಜೆಗಳನ್ನು ಧರ್ಮದಿಂದ ಪರಿಪಾಲಿಸು. ನೀನಿನ್ನೂ ಬದುಕಿರುವಾಗಲೇ ಈ ನಮ್ಮ ರಾಷ್ಟ್ರವು ವಿನಾಶಹೊಂದದಿರಲಿ.'

ದುರ್ಯೋಧನ! ಪ್ರಜೆಗಳ ಅಂತಹ ಕರುಣಾಕ್ರಂದನವನ್ನು ಕೇಳಿಯೂ ನನ್ನ ಮನಸ್ಸು ಕ್ಷೋಭೆಗೊಳ್ಳಲಿಲ್ಲ. ಮಾಡಿದ ಪ್ರತಿಜ್ಞೆಯನ್ನು ಉಳಿಸಿಕೊಳ್ಳುವುದರಲ್ಲಿ ಮತ್ತು ಸದ್ವೃತ್ತಿಯಲ್ಲಿ ನನ್ನ ಮನಸ್ಸು ಲೀನವಾಗಿದ್ದಿತು. (ಆದುದರಿಂದ ಅವರ ಮಾತಿಗೆ ಮನಸೋತು ನಾನು ರಾಜ್ಯಾಧಿಕಾರವನ್ನು ಅಂಗೀಕರಿಸಲಿಲ್ಲ.) ಅನಂತರದಲ್ಲಿ ಪಟ್ಟಣಿಗರು, ಶುಭಾಂಗಿಯಾದ ನಮ್ಮ ತಾಯಿಯಾದ ಸತ್ಯವತೀ, ಸೇವಕವರ್ಗದವರು, ಪುರೋಹಿತರು, ಆಚಾರ್ಯರು, ಬಹುಶ್ರುತರಾದ ಬ್ರಾಹ್ಮಣರು–ಇವರೆಲ್ಲರೂ ಬಹುಸಂತಪ್ತರಾಗಿ ನನ್ನ ಬಳಿಗೆ ಬಂದು ನೀನೇ ರಾಜನಾಗೆಂದು ಪರಿ-ಪರಿಯಾಗಿ ಕೇಳಿಕೊಂಡರು.

**ಪ್ರತೀಪರಕ್ಷಿತಂ ರಾಷ್ಟ್ರಂ ತ್ವಾಂ ಪ್ರಾಪ್ಯ ವಿನಶಿಷ್ಯತಿ ।**
**ಸ ತ್ವಮಸ್ಮದ್ಧಿತಾರ್ಥಂ ವೈ ರಾಜಾ ಭವ ಮಹಾಮತೇ ॥೩೧॥**

"ಮಹಾತ್ಮನಾದ ಪ್ರತೀಪನಿಂದ ಸುರಕ್ಷಿತವಾಗಿದ್ದ ರಾಷ್ಟ್ರವು ನಿನ್ನಂತಹ ರಾಜಕುಮಾರನನ್ನು ಈ ರಾಜವಂಶದಲ್ಲಿ ಪಡೆದಿದ್ದರೂ ವಿನಾಶ ಹೊಂದುತ್ತಿದೆ. ಮಹಾಮತೇ! ಆದುದರಿಂದ ನೀನು ನಮ್ಮ ಹಿತಾರ್ಥವಾಗಿಯಾದರೂ ಈ ರಾಷ್ಟ್ರಕ್ಕೆ ರಾಜನಾಗು."

ಅವರ ಮಾತಿನಿಂದ ನಾನು ನಿಶ್ಚಯವಾಗಿಯೂ ಬಹುಪೀಡಿತನೂ ಮತ್ತು ದುಃಖಿತನೂ ಆದೆನು. ತಂದೆಯ ಮೇಲಿನ ಗೌರವದಿಂದಾಗಿ ನಾನು ಮಾಡಿದ್ದ ಪ್ರತಿಜ್ಞೆಯನ್ನು ಬದ್ಧಾಂಜಲಿಯಾಗಿ ನಿಂತು ಅವರೊಡನೆ ಹೇಳಿದೆನು.

ಆದರೆ ನನ್ನ ತಾಯಿಯು ನನ್ನನ್ನು ಪುನಃ ಪುನಃ ಬಲಾತ್ಕರಿಸುತ್ತಿದ್ದಳು. ಅವಳಿಗೂ ನಾನು ಇದನ್ನೇ ಪುನಃ ಪುನಃ ಹೇಳಿದೆನು :

**ಊರ್ಧ್ವರೇತಾ ಹ್ಯರಾಜಾ ಚ ಕುಲಸ್ಯಾರ್ಥೇ ಪುನಃ ಪುನಃ ।**
**ವಿಶೇಷತಸ್ತ್ವದರ್ಥಂ ಚ ಧುರಿ ಮಾ ಮಾಂ ನಿಯೋಜಯ ॥೩೩॥**

"ಅಮ್ಮ! ನಮ್ಮ ತಂದೆಯ ಅಭಿಲಾಷೆಯಂತೆ ಈ ನಮ್ಮ ಕುಲದ ವೃದ್ಧಿಗಾಗಿ–ಅದರಲ್ಲಿಯೂ ವಿಶೇಷವಾಗಿ ನಿನ್ನ ಸಲುವಾಗಿ–ನಾನು ನೈಷ್ಠಿಕ ಬ್ರಹ್ಮಚರ್ಯದಿಂದಲೇ ನನ್ನ ಜೀವನವನ್ನು ಕಳೆಯುವೆನೆಂದೂ, ರಾಜನಾಗುವುದಿಲ್ಲವೆಂದೂ ಪುನಃ ಪುನಃ ಹೇಳಿ ಪ್ರತಿಜ್ಞೆಮಾಡಿರುತ್ತೇನೆ. ಆದುದರಿಂದ ದಯಮಾಡಿ ನನ್ನನ್ನು ಮಾತ್ರ ರಾಜ್ಯಭಾರವನ್ನು ವಹಿಸಿಕೊಳ್ಳಲು ಒತ್ತಾಯಮಾಡಬೇಡ." ಇಷ್ಟು ಹೇಳಿದರೂ ನಮ್ಮ ತಾಯಿಯು ಕೇಳಲೇ ಇಲ್ಲ. ತನ್ನ ಆಜ್ಞಾನುಸಾರವಾಗಿ ನಾನು ರಾಜ್ಯಭಾರವನ್ನು ವಹಿಸಿಕೊಳ್ಳಲೇಬೇಕೆಂದೂ ಮತ್ತೂ ಒತ್ತಾಯಪಡಿಸಿದಳು. ನಾನು ಮಾಡಿದ್ದ ಪ್ರತಿಜ್ಞೆಯು ಪುನಃ ಪುನಃ ನನ್ನ ಸ್ಮರಣೆಗೆ ಬರುತ್ತಿದ್ದು ಅವಳೆಷ್ಟೇ ಒತ್ತಾಯಮಾಡಿದರೂ ಅವಳು ಹೇಳಿದಂತೆ ನಡೆದುಕೊಳ್ಳಲು ನನ್ನ ಮನಸ್ಸು ಒಡಂಬಡಲಿಲ್ಲ. ಅನಂತರ ನಾನು ಪುನಃ ಕೈಜೋಡಿಸಿ ನಮ್ಮ ತಾಯಿಯ ಮುಂದೆ ನಿಂತು ಅವಳನ್ನು ಸಂತೈಸುತ್ತಾ ಹೀಗೆ ಹೇಳಿದೆನು :

"ಅಮ್ಮ! ನಾನು ಮಹಾತ್ಮನಾದ ಶಾಂತನುವಿನ ಪುತ್ರನಾಗಿರುತ್ತೇನೆ. ಸುಪ್ರಸಿದ್ಧವಾದ ಕುರುವಂಶದಲ್ಲಿ ಹುಟ್ಟಿರುತ್ತೇನೆ. ಇಂತಹ ನಾನು ಕುಲದ ಗೌರವವನ್ನುಳಿಸುವ ಸಲುವಾಗಿ ಮತ್ತು ತಂದೆಯನ್ನು ಗೌರವಿಸುವ ಸಲುವಾಗಿ ಮಾಡಿರುವ ಪ್ರತಿಜ್ಞೆಯನ್ನು ಮಾತ್ರ ಸುಳ್ಳುಮಾಡಲಾರೆನು. ಸತ್ಯವತಿ! ಮೇಲಾಗಿ, ನಿನ್ನ ಸಲುವಾಗಿಯೇ ನಾನೀ ಪ್ರತಿಜ್ಞೆಯನ್ನು ಮಾಡಿರುತ್ತೇನೆ. ಸುತವತ್ಸಲಳೇ! ನಾನೀಗ ನಿನ್ನ ದಾಸನೂ ಸೇವಕನೂ ಆಗಿರುತ್ತೇನೆ. (ದಾಸನಿಗೂ ಸೇವಕನಿಗೂ ಹೇಳಬಹುದಾದ ಯಾವ ಕಾರ್ಯವನ್ನು ಬೇಕಾದರೂ ಹೇಳು. ಮಾಡಲು ಸಿದ್ಧನಾಗಿರುವೆನು. ಆದರೆ ರಾಜನಾಗುವಂತೆ ಮಾತ್ರ ಬಲಾತ್ಕರಿಸಬೇಡ.)"

ದುರ್ಯೋಧನ! ನಮ್ಮ ತಾಯಿಯು ಬಲಾತ್ಕರಿಸುತ್ತಿದ್ದಂತೆಲ್ಲಾ

ನಾನು ಇದೇ ಮಾತನ್ನು ಪುನಃ ಪುನಃ ಹೇಳುತ್ತಿದ್ದೆನು. ಈ ರೀತಿಯಲ್ಲಿ ನಾನು ನಯವಾದ ಮಾತುಗಳಿಂದ ನಮ್ಮ ತಾಯಿಯನ್ನೂ ಮತ್ತು ಪ್ರಜೆಗಳನ್ನೂ ಸಮಾಧಾನಗೊಳಿಸಿ, ವಂಶೋದ್ಧಾರಕ್ಕಾಗಿ ತಾಯಿಯೊಡನೆ ಸಮಾಲೋಚಿಸಿ ಒಂದು ನಿರ್ಧಾರಕ್ಕೆ ಬಂದು, ನಮ್ಮ ತಾಯಿಯೊಡನೆ ಮಹರ್ಷಿಗಳಾದ ವ್ಯಾಸರ ಬಳಿಗೆ ಹೋಗಿ ನನ್ನ ತಮ್ಮನ ಪತ್ನಿಯರಲ್ಲಿ ವಂಶದ ಅಭಿವೃದ್ಧಿಗಾಗಿ ಮಕ್ಕಳನ್ನು ಅನುಗ್ರಹಿಸುವಂತೆ ಅವರನ್ನು ಕೇಳಿಕೊಂಡೆನು. ಅಪತ್ಯಾರ್ಥವಾಗಿ ನಾವು ಮಾಡಿದ ಪ್ರಾರ್ಥನೆಯನ್ನು ಮಹರ್ಷಿಗಳಾದ ವ್ಯಾಸರು ಅಂಗೀಕರಿಸಿ ಮೂವರು ಮಕ್ಕಳನ್ನು ಅನುಗ್ರಹಿಸಿಕೊಟ್ಟರು. ದುರ್ಯೋಧನ! ಆ ಮೂವರು ಮಕ್ಕಳಲ್ಲಿ ನಿಮ್ಮ ತಂದೆಯೇ ಜ್ಯೇಷ್ಠನು. ಆದರೆ ಅವನು ಅಂಧನಾಗಿದ್ದುದರಿಂದ– (ಒಂದು ಅವಯವದ ನ್ಯೂನತೆಯಿದ್ದುದರಿಂದ)–ರಾಜನಾಗಲಿಲ್ಲ. ಲೋಕ ವಿಖ್ಯಾತನಾದ, ಮಹಾತ್ಮನಾದ ಮತ್ತು ಎರಡನೆಯ ಮಗನಾದ ಪಾಂಡುವೇ ಈ ರಾಷ್ಟ್ರಕ್ಕೆ ರಾಜನಾದನು. ಅವನ ಮಕ್ಕಳಾದ ಪಾಂಡವರು ನ್ಯಾಯಬದ್ಧ ವಾದ ರೀತಿಯಲ್ಲಿ ಪಿತೃಸಂಬಂಧವಾದ ಈ ಸಮಗ್ರ ಸಾಮ್ರಾಜ್ಯಕ್ಕೂ ಉತ್ತರಾಧಿಕಾರಿಗಳಾಗಿದ್ದಾರೆ. ಆದುದರಿಂದ ಅವರೊಡನೆ ಕಲಹಮಾಡಬೇಡ. ಅವರು ಅಪೇಕ್ಷಿಸುತ್ತಿರುವಂತೆ ರಾಜ್ಯದ ಅರ್ಧಭಾಗವನ್ನು ಅವರಿಗೆ ಕೊಟ್ಟುಬಿಡು. ದುರ್ಯೋಧನ! ನಾನು ಜೀವಿಸಿರಲಾಗಿ ನನ್ನ ಇಚ್ಛೆಗೆ ಅಥವಾ ಆಜ್ಞೆಗೆ ವಿರುದ್ಧವಾಗಿ ನಡೆದು ಯಾವ ಪುರುಷನು ತಾನೇ ಈ ರಾಜ್ಯವನ್ನು ಅನುಶಾಸನಮಾಡಬಲ್ಲನು? ನನ್ನ ಮಾತುಗಳನ್ನು ಅನಾದರಣೆ ಮಾಡಬೇಡ. ನಿಮ್ಮಿಬ್ಬರಲ್ಲಿಯೂ ಶಾಂತಿಯು ಚಿರವಾಗಿ ಉಳಿಯಲೆಂದು ನಾನು ಸರ್ವದಾ ಇಚ್ಛಿಸುತ್ತೇನೆ. ಪುತ್ರ! ನಿಮ್ಮ ಮೇಲಾಗಲೀ–ಪಾಂಡವರ ಮೇಲಾಗಲೀ ನನಗೆ ವಿಶೇಷವಾದ ಪಕ್ಷಪಾತವೇನೂ ಇಲ್ಲ. ನನಗೆ ನೀವಿಬ್ಬರೂ ಸಮಾನರು. ನಿನ್ನ ತಂದೆಯಾದ ಧೃತರಾಷ್ಟ್ರನ, ತಾಯಿಯಾದ ಗಾಂಧಾರಿಯ ಮತ್ತು ವಿದುರನ ಅಭಿಪ್ರಾಯವೂ ಇದೇ ಆಗಿರುವುದು. ಮಗು, ದುರ್ಯೋಧನ! ಶ್ರೇಯಃಕಾಮಿಯಾದವನು ವಯೋವೃದ್ಧರ ಮತ್ತು ಜ್ಞಾನವೃದ್ಧರ ಹಿತವಚನ ಗಳನ್ನು ಕೇಳಲೇಬೇಕು. ಆದುದರಿಂದ ನನ್ನ ಮಾತಿನಲ್ಲಿ ನೀನು ಸಂಶಯ

ಪಡಬೇಡ. ನಾನು ಹೇಳುತ್ತಿರುವ ಮಾತುಗಳು ಪಾಂಡವರ ಹಿತಕ್ಕೆಂದಾಗಲೀ–ನಿನ್ನ ಅಹಿತಕ್ಕೆಂದಾಗಲೀ ಸಂದೇಹಪಡಬೇಡ. ನಿನ್ನ ಹಿತವನ್ನೇ ಮುಖ್ಯವನ್ನಾಗಿಟ್ಟುಕೊಂಡು ನಾನು ಈ ಮಾತುಗಳನ್ನಾಡುತ್ತಿರುವೆನು. ಸರ್ವನಾಶಮಾಡಬೇಡ. ಪೃಥಿವಿಯನ್ನೂ ನಾಶಗೊಳಿಸಬೇಡ. ನಿನ್ನನ್ನೇ ನೀನು ಹಾಳುಮಾಡಿಕೊಳ್ಳಬೇಡ."

೧೪೭ನೆಯ ಅಧ್ಯಾಯವು ಮುಗಿಯಿತು.

೧೪೮ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ)

## ದ್ರೋಣರೂ, ವಿದುರನೂ ಮತ್ತು ಗಾಂಧಾರಿಯೂ ದುರ್ಯೋಧನನಿಗೆ ಹೇಳಿದ ಯುಕ್ತಿಯುಕ್ತವಾದ ಮಾತುಗಳನ್ನು ಶ್ರೀಕೃಷ್ಣನು ಯುಧಿಷ್ಠಿರನಿಗೆ ತಿಳಿಸಿದುದು

ವಾಸುದೇವನು ಮುಂದುವರಿದು ಹೇಳುತ್ತಾನೆ :

**ಭೀಷ್ಮೇಣೋಕ್ತೇ ತತೋ ದ್ರೋಣೋ ದುರ್ಯೋಧನಮಭಾಷತ ।**
**ಮಧ್ಯೇ ನೃಪಾಣಾಂ ಭದ್ರಂ ತೇ ವಚನಂ ವಚನಕ್ಷಮಃ ॥೧॥**

"ಯುಧಿಷ್ಠಿರ! ನಿನಗೆ ಮಂಗಳವಾಗಲಿ. ಭೀಷ್ಮನು ದುರ್ಯೋಧನನನ್ನು ಉದ್ದೇಶಿಸಿ ಉಪದೇಶಮಾಡಿದನಂತರದಲ್ಲಿ ಮಾತನಾಡುವುದರಲ್ಲಿ ಬಹುಸಮರ್ಥರಾದ ದ್ರೋಣರು ಅಲ್ಲಿ ನೆರೆದಿದ್ದ ರಾಜರ ಮಧ್ಯದಲ್ಲಿ ದುರ್ಯೋಧನನಿಗೆ ಹೇಳಿದರು :

"ಮಗು, ದುರ್ಯೋಧನ! ಪ್ರತೀಪನ ಮಗನಾದ ಶಾಂತನುವು ಕುಲದ ಮರ್ಯಾದೆಯನ್ನು ಕಾಪಾಡುವ ಸಲುವಾಗಿ ಯಾವ ರೀತಿಯಲ್ಲಿ ನಡೆದುಕೊಂಡನೋ–ಅದೇ ರೀತಿಯಲ್ಲಿ ದೇವವ್ರತನಾದ ಭೀಷ್ಮನೂ ಕುಲದ ವೃದ್ಧಿಗಾಗಿ ಮತ್ತು ಶ್ರೇಯಸ್ಸಿಗಾಗಿ ಸದ್ವೃತ್ತಿ ಮತ್ತು ನೈಷ್ಠಿಕಬ್ರಹ್ಮಚರ್ಯೆಗಳಲ್ಲಿಯೇ ಸ್ಥಿರವಾಗಿ ಉಳಿದನು. ಅದೇ ರೀತಿಯಲ್ಲಿ ಸತ್ಯಸಂಧನಾದ, ಜಿತೇಂದ್ರಿಯನಾದ, ಧರ್ಮಾತ್ಮನಾದ, ಸುವ್ರತನಾದ, ಕುರುಗಳ ರಾಜನಾದ ಪಾಂಡುವೂ ಧರ್ಮದಿಂದ ಪ್ರಜೆಗಳನ್ನು ಸಂರಕ್ಷಿಸುವುದರಲ್ಲಿಯೇ ಏಕಾಗ್ರಚಿತ್ತನಾಗಿರುತ್ತಿದ್ದನು. ಕೆಲವು ಕಾರಣಗಳಿಂದಾಗಿ ಕುರುಗಳ ವಂಶವರ್ಧಕನಾದ

ಪಾಂಡುರಾಜನು ಹಿರಿಯನಾದ, ಧೀಮಂತನಾದ ಧೃತರಾಷ್ಟ್ರನಲ್ಲಿಯೂ ಮತ್ತು ಕನಿಷ್ಠನಾದ ವಿದುರನಲ್ಲಿಯೂ ಈ ರಾಜ್ಯವನ್ನು ನ್ಯಾಸರೂಪವಾಗಿಟ್ಟನು. ಅನಂತರದಲ್ಲಿ ಪಾಂಡುರಾಜನು ಮರ್ಯಾದೆಯಿಂದ ಯಾವಾಗಲೂ ಚ್ಯುತನಾಗದ ಧೃತರಾಷ್ಟ್ರರಾಜನನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ ತನ್ನ ಇಬ್ಬರು ಪತ್ನಿಯರೊಡನೆ ಅರಣ್ಯಕ್ಕೆ ಹೊರಟುಹೋದನು.

ಬಳಿಕ ಪುರುಷಸಿಂಹನಾದ ವಿದುರನು ಸಿಂಹಾಸನದ ಕೆಳಭಾಗದಲ್ಲಿ ನಿಂತು ಚಾಮರವನ್ನು ಬೀಸುತ್ತಾ ವಿನಯಭಾವದಿಂದ ಸೇವಕನಂತೆಯೇ ಧೃತರಾಷ್ಟ್ರನ ಸೇವೆಯನ್ನು ಮಾಡುತ್ತಿದ್ದನು. ಅಂತೆಯೇ ಎಲ್ಲ ಪ್ರಜೆಗಳೂ ಪಾಂಡುರಾಜನನ್ನು ಯಾವ ರೀತಿಯಲ್ಲಿ ರಾಜನೆಂದು ಗೌರವಿಸಿ ಅವನನ್ನು ಅನುಸರಿಸಿಕೊಂಡಿರುತ್ತಿದ್ದರೋ–ಅದೇ ರೀತಿಯಲ್ಲಿ ಧೃತರಾಷ್ಟ್ರನನ್ನೂ ವಿಧಿವತ್ತಾಗಿ ತಮ್ಮ ಸ್ವಾಮಿಯೆಂದೇ ಪರಿಗ್ರಹಿಸಿದರು. (ಪ್ರಜೆಗಳೆಲ್ಲರೂ ಧೃತರಾಷ್ಟ್ರನ ಅಧೀನರಾದರು.) ಪರಪುರಂಜಯನಾದ ಪಾಂಡುವು ರಾಜ್ಯವನ್ನು ಧೃತರಾಷ್ಟ್ರನ ಮತ್ತು ವಿದುರನ ವಶಕ್ಕೊಪ್ಪಿಸಿ ಪ್ರಪಂಚಪರ್ಯಟನ ಮಾಡಲುಪಕ್ರಮಿಸಿದನು. ಮಹಾಮೇಧಾವಿಯಾದ ಸತ್ಯಪ್ರತಿಜ್ಞನಾದ ವಿದುರನು–ಕೋಶವನ್ನು ತುಂಬುವುದರಲ್ಲಿಯೂ, ಸತ್ಪಾತ್ರರಿಗೆ ದಾನಕೊಡುವುದರಲ್ಲಿಯೂ, ಸೇವಕರ ಮೇಲ್ವಿಚಾರಣೆಯಲ್ಲಿಯೂ ಮತ್ತು ಸಮಸ್ತರ ಭರಣ-ಪೋಷಣಗಳಲ್ಲಿಯೂ ಸರ್ವದಾ ನಿರತನಾಗಿದ್ದನು. ಪರಪುರಂಜಯನಾದ, ಮಹಾತೇಜಸ್ವಿಯಾದ ಭೀಷ್ಮನು ರಾಜರೊಡನೆ ಸಂಧಿ-ವಿಗ್ರಹಾದಿ ಕಾರ್ಯಗಳಲ್ಲಿ ತತ್ಪರನಾಗಿರುತ್ತಿದ್ದು, ಅವರಿಂದ ಕಪ್ಪ-ಕಾಣಿಕೆಗಳನ್ನು ಪಡೆದುಕೊಳ್ಳುವ ಕಾರ್ಯಭಾರವನ್ನು ನೋಡಿಕೊಳ್ಳುತ್ತಿದ್ದನು. (ವಿದೇಶಾಂಗ ಸಚಿವನಾಗಿದ್ದನು.) ಮಹಾಬಲಿಷ್ಠನಾದ ಧೃತರಾಷ್ಟ್ರರಾಜನು ಸಿಂಹಾಸನದ ಮೇಲೆ ಕುಳಿತಿರುತ್ತಿದ್ದು ಸದಾಕಾಲದಲ್ಲಿಯೂ ಮಹಾತ್ಮನಾದ ವಿದುರನಿಂದ ಸಂಸೇವಿತನಾಗಿದ್ದನು. (ವಿದುರನು ಸದಾಕಾಲದಲ್ಲಿಯೂ ಸದ್ಬೋಧನೆಗಳಿಂದ ರಾಜಸೇವೆ ಮಾಡುತ್ತಿದ್ದನು.) ಅಂತಹವನ ಕುಲದಲ್ಲಿ ಹುಟ್ಟಿರುವ ನೀನು ಕುಲದ ಭೇದವನ್ನೇಕೆ ಮಾಡುತ್ತಿರುವೆ? (ನಿನ್ನ ಮೂವರು ತಂದೆಗಳೂ ಪರಸ್ಪರರಲ್ಲಿ ವ್ಯತ್ಯಾಸವನ್ನು ಕಾಣದೇ ಏಕೀಭಾವದಿಂದಲೇ ಇದ್ದರು. ಅಂತಹವರ ಪುತ್ರನಾಗಿ ಹುಟ್ಟಿರುವ ನೀನು ನಿನ್ನ ಜ್ಞಾತಿ-ಬಾಂಧವರಲ್ಲಿ ಭೇದಭಾವವನ್ನು

ತಾಳಿರುವುದೇಕೆ?) ದುರ್ಯೋಧನ! ನಿನ್ನ ಅಣ್ಣ-ತಮ್ಮಂದಿರೊಡನೆ ಸೇರಿಕೊಂಡು ಮನೋವಾಂಛಿತವಾದ ಸಕಲಭೋಗಗಳನ್ನೂ ಉಪ ಭುಂಜಿಸು. ನಾನು ಈ ಮಾತುಗಳನ್ನು ಕಾರ್ಪಣ್ಯದಿಂದಾಗಲೀ, ಧನದ ಆಸೆಯಿಂದಾಗಲೀ ಖಂಡಿತವಾಗಿಯೂ ಹೇಳುತ್ತಿಲ್ಲ. ಮೇಲಾಗಿ ನಿನ್ನಿಂದ ಯಾವುದೊಂದು ವಸ್ತುವನ್ನೂ ಪಡೆದುಕೊಳ್ಳುವ ಇಚ್ಛೆಯೂ ನನಗಿಲ್ಲ. ಭೀಷ್ಮನು ಕೊಟ್ಟುದನ್ನು ಮಾತ್ರವೇ ತೆಗೆದುಕೊಳ್ಳುವ ಇಚ್ಛೆಯು ನನಗಿದೆ. ಅವನು ನನಗೆ ಕೊಟ್ಟಿರುವ ಐಶ್ವರ್ಯವೇ ಸಾಕಷ್ಟಿದೆ. ನಿನ್ನಿಂದ ನನಗೆ ಯಾವ ಐಶ್ವರ್ಯವೂ ಬೇಕಾಗಿಲ್ಲ. ಜನಾಧಿಪನೇ! ನೀನು ನನಗೆ ಯಾವ ವಿಧವಾದ ಜೀವನೋಪಾಯವನ್ನೂ ಕಲ್ಪಿಸಿಕೊಡಬೇಕಾಗಿಲ್ಲ. ನಾನು ನಿನ್ನಿಂದ ಯಾವು ದೊಂದನ್ನೂ ಅಪೇಕ್ಷಿಸುವುದೂ ಇಲ್ಲ. ಆದರೆ ಭೀಷ್ಮನೆಲ್ಲಿರುವನೋ ಅಲ್ಲಿ ದ್ರೋಣನಿರುತ್ತಾನೆ. ಮಹಾತ್ಮನಾದ ಭೀಷ್ಮನು ಹೇಳಿದುದನ್ನು ಮಾಡುವುದು ನಿನ್ನ ಕರ್ತವ್ಯವಾಗಿದೆ. ಶತ್ರುಸೂದನನೇ! ಪಾಂಡುಪುತ್ರರಿಗೆ ಅವರ ಪಿತ್ರಾರ್ಜಿತವಾದ ಅರ್ಧರಾಜ್ಯವನ್ನು ಕೊಟ್ಟುಬಿಡು. ನನ್ನ ಆಚಾರ್ಯತ್ವವು ನಿಮಗೂ ಮತ್ತು ಪಾಂಡವರಿಗೂ ಸಮಾನವಾಗಿದೆ. (ನಾನು ನಿಮ್ಮಿಬ್ಬರಿಗೂ ಆಚಾರ್ಯನಾಗಿರುತ್ತೇನೆ. ಇಬ್ಬರ ಮೇಲೆಯೂ ನನಗೆ ಸಮಾನವಾದ ಪ್ರೀತಿ-ವಿಶ್ವಾಸಗಳಿವೆ.) ಆದರೆ ಪಾರ್ಥನನ್ನು ನಾನು ನನ್ನ ಮಗನಾದ ಅಶ್ವತ್ಥಾಮನಂತೆಯೇ ಕಾಣುತ್ತೇನೆ. ಅರ್ಜುನನು ನನ್ನ ಮಗನಿಗೆ ಸಮಾನನಾಗಿದ್ದಾನೆ. ಈ ವಿಷಯವಾಗಿ ಹೆಚ್ಚು ಮಾತನಾಡಿ ಪ್ರಯೋಜನ ವಿಲ್ಲ, ದುರ್ಯೋಧನ! 'ಯತೋ ಧರ್ಮಸ್ತತೋ ಜಯಃ'– ಧರ್ಮವು ಯಾವ ಪಕ್ಷದಲ್ಲಿರುವುದೋ ಆ ಪಕ್ಷಕ್ಕೇ ವಿಜಯವು ಕಟ್ಟಿಟ್ಟ ಬುತ್ತಿ."

ಯುಧಿಷ್ಠಿರ! ಅಮಿತತೇಜಸ್ವಿಗಳಾದ ದ್ರೋಣರು ದುರ್ಯೋಧನ ನೊಡನೆ ಹೀಗೆ ಹೇಳಿದನಂತರ, ಸತ್ಯಪ್ರತಿಜ್ಞನಾದ ಧರ್ಮವಿದನಾದ ವಿದುರನು–ತಂದೆಯಾದ ಭೀಷ್ಮನನ್ನೊಮ್ಮೆ ವೀಕ್ಷಿಸಿ, ಅನಂತರ ಅವನ ಕಡೆಗೆ ತಿರುಗಿಕೊಂಡು ಈ ಮಾತುಗಳನ್ನು ಹೇಳಿದನು :

"ದೇವವ್ರತ! ನಾನು ಹೇಳಲಿರುವ ಈ ಮಾತುಗಳನ್ನು ಕೇಳು. ಈ ಕುರುವಂಶವು ಹಿಂದೆಯೇ ನಷ್ಟವಾಗಿ ಹೋಗುವುದರಲ್ಲಿದ್ದಿತು. ಅದನ್ನು

ನೀನು ಪುನಃ ಉದ್ಧರಿಸಿದೆ. ಈಗ ನಾನು ಈ ವಂಶದ ರಕ್ಷಣೆಗಾಗಿ ವಿಲಪಿಸುತ್ತಿದ್ದೇನೆ. ಆದರೆ ನೀನೀಗ ನನ್ನ ಮಾತನ್ನು ಉಪೇಕ್ಷಿಸುತ್ತಿರುವೆ. ಈ ವಂಶದಲ್ಲಿ ಕುಲಪಾಂಸನನಾದ ದುರ್ಯೋಧನನೆಂಬುವನು ಯಾರು? ಎಷ್ಟು ಮಾತ್ರದವನು? ಲೋಭಾಭಿಭೂತನಾಗಿರುವ, ಅನಾರ್ಯನಾದ, ಕೃತಘ್ನನಾದ, ಲೋಭದಿಂದಲೇ ವಿವೇಕಶೂನ್ಯನಾಗಿರುವ ಈ ಮಂದಬುದ್ಧಿಯವನನ್ನೇ ಅನುಸರಿಸಿ ನೀನೂ ನಡೆಯುತ್ತಿರುವೆಯಲ್ಲವೇ?

**ಅತಿಕ್ರಾಮತಿ ಯಃ ಶಾಸ್ತ್ರಂ ಪಿತುರ್ಧರ್ಮಾರ್ಥದರ್ಶಿನಃ ।**
**ಏತೇ ನಶ್ಯನ್ತಿ ಕುರವೋ ದುರ್ಯೋಧನಕೃತೇನ ವೈ ॥೨೧॥**

ಯಾವನು ಶಾಸ್ತ್ರಮರ್ಯಾದೆಯನ್ನೂ ಮತ್ತು ಧರ್ಮಾರ್ಥದರ್ಶಿಯಾದ ತಂದೆಯ ಆಜ್ಞೆಯನ್ನೂ ಮೀರಿ ನಡೆಯುತ್ತಾನೆಯೋ–ಅಂತಹ ದುರ್ಯೋಧನನ ದುಷ್ಕರ್ಮದಿಂದಾಗಿ ಈ ಎಲ್ಲ ಕುರುಗಳೂ ವಿನಾಶಹೊಂದುತ್ತಾರೆ. ಭೀಷ್ಮ! ಈಗ ಇವರೆಲ್ಲರೂ ಒಬ್ಬ ಕುಲಪಾಂಸನನ ಕಾರಣದಿಂದಾಗಿ ವಿನಾಶಹೊಂದದ ರೀತಿಯಲ್ಲಿ ನೀನು ಕಾರ್ಯಮಾಡು. ಚಿತ್ರಕಾರನು ಚಿತ್ರವೊಂದನ್ನು ಬರೆದು ಒಂದೆಡೆಯಲ್ಲಿಡುವಂತೆ–ನೀನು ನನ್ನನ್ನೂ ಮತ್ತು ಧೃತರಾಷ್ಟ್ರನನ್ನೂ ಕೆಲಸಕ್ಕೆ ಬಾರದವರಂತೆ ಮಾಡಿ ಒಂದು ಕಡೆಯಲ್ಲಿ ಕುಳ್ಳಿರಿಸಿಬಿಟ್ಟಿರುವೆ. (ರಾಜ್ಯಾಡಳಿತದಲ್ಲಿ ನಮಗೆ ಯಾವ ವಿಧವಾದ ಅಧಿಕಾರವೂ ಇಲ್ಲ. ಎಲ್ಲ ಅಧಿಕಾರವನ್ನೂ ದುರ್ಯೋಧನನೇ ವಹಿಸಿಕೊಂಡುಬಿಟ್ಟಿದ್ದಾನೆ. ಅವನನ್ನು ನಿಯಂತ್ರಿಸಲು ಸಮರ್ಥನಾದ ನೀನು ನಿರ್ವೀರ್ಯನಂತೆ ಕುಳಿತುಕೊಳ್ಳುವುದು ಸಾಧುವಲ್ಲ.)

**ಪ್ರಜಾಪತಿಃ ಪ್ರಜಾಃ ಸೃಷ್ಟ್ವಾ ಯಥಾ ಸಂಹರತೇ ತಥಾ ।**
**ನೋಪೇಕ್ಷಸ್ವ ಮಹಾಬಾಹೋ ಪಶ್ಯಮಾನಃ ಕುಲಕ್ಷಯಮ್ ॥೨೩॥**

ಪ್ರಜಾಪತಿಯು ಪ್ರಜೆಗಳನ್ನು ಸೃಷ್ಟಿಸಿ ಯಾವ ರೀತಿಯಲ್ಲಿ ಪುನಃ ಸಂಹಾರಮಾಡಿಬಿಡುವನೋ ಹಾಗೆಯೇ ಕುಲವೃದ್ಧಿಗೆ ಕಾರಣನಾದ ನೀನು ಕುಲಕ್ಷಯಕ್ಕೂ ಕಾರಣನಾಗಬೇಡ. ನಮ್ಮ ಕುಲವು ಕ್ಷಯಿಸುತ್ತದೆಯೆಂಬುದನ್ನು ಕಾಣುತ್ತಿದ್ದೂ ಸಹ ಉಪೇಕ್ಷೆಮಾಡಬೇಡ. ವಿನಾಶವು ಸನ್ನಿಹಿತವಾಗಿರುವುದರಿಂದ ಅಥವಾ ಅನಿವಾರ್ಯವಾಗಿರುವುದರಿಂದ ನಿನ್ನ ಬುದ್ಧಿಯೇನಾದರೂ ನಷ್ಟವಾಗಿಹೋಗಿರುವುದೇ? ಕರ್ತವ್ಯದ ಕಡೆಗೆ ನಿನ್ನ

ಬುದ್ಧಿಯು ಪ್ರವೃತ್ತವಾಗುತ್ತಿಲ್ಲವೇ? ಹಾಗಾದರೆ ನನ್ನೊಡನೆ ಮತ್ತು ಧೃತರಾಷ್ಟ್ರನೊಡನೆ ಅರಣ್ಯಕ್ಕೆ ಬಂದುಬಿಡು. ಹೊರಟುಹೋಗೋಣ. (ಸರ್ವನಾಶವನ್ನು ಪ್ರತ್ಯಕ್ಷವಾಗಿ ನೋಡುವುದಕ್ಕಿಂತಲೂ ಅರಣ್ಯಕ್ಕೆ ಹೊರಟು ಹೋಗುವುದೇ ಸರ್ವೋತ್ಕೃಷ್ಟವಾದುದು.) ಒಂದು ವೇಳೆ ನಿನಗೆ ಕರ್ತವ್ಯಪ್ರಜ್ಞೆಯುಂಟಾದಲ್ಲಿ ಈ ಕ್ಷಣದಲ್ಲಿಯೇ ಮೋಸದ ಬುದ್ಧಿಯವನಾದ ದುರ್ಮತಿಯಾದ ದುರ್ಯೋಧನನನ್ನು ಬಂಧಿಸಿ ಪಾಂಡವರಿಂದ ಸಂರಕ್ಷಿತವಾದ ರಾಜ್ಯವನ್ನು ಈಗಲೇ ಶಾಸನಮಾಡು. (ಕಾಲಯಾಪನೆ ಮಾಡುವುದರಿಂದ ಪ್ರಯೋಜನವಿಲ್ಲ.) ಪುರುಷವ್ಯಾಘ್ರನೇ! ಹೀಗೆ ಹೇಳಿದೆನೆಂದು ಕೋಪಿಸಿಕೊಳ್ಳಬೇಡ. ಪ್ರಸನ್ನನಾಗು. ಪಾಂಡವರ, ಕೌರವರ ಮತ್ತು ಇಲ್ಲಿ ನೆರೆದಿರುವ ಸಮಸ್ತರಾಜರ ಮಹಾವಿನಾಶವು ದೃಷ್ಟಿಗೆ ಗೋಚರವಾಗುತ್ತಿದೆ. ಆ ಸಂಕಟದಿಂದಾಗಿ ನಾನು ಈ ಮಾತುಗಳನ್ನು ಹೇಳುತ್ತಿದ್ದೇನೆ.”

ಹೀಗೆ ಹೇಳಿ ವಿರಮಿಸಿದ ದೀನಚಿತ್ತನಾದ ವಿದುರನು ಮಹಾಚಿಂತೆಯಲ್ಲಿ ಮಗ್ನನಾಗಿ ಬಾರಿ-ಬಾರಿಗೂ ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಿದ್ದನು.

ಯುಧಿಷ್ಠಿರ! ಅನಂತರದಲ್ಲಿ, ಕುಲವು ನಾಶವಾಗಿಬಿಡುವುದೆಂದು ಭಯಪಟ್ಟ ಸುಬಲನ ಮಗಳಾದ ಗಾಂಧಾರಿಯು, ಕೋಪಾವಿಷ್ಟಳಾಗಿ ಪಾಪಮತಿಯಾದ, ಕ್ರೂರಿಯಾದ ದುರ್ಯೋಧನನನ್ನು ಕುರಿತು ಸಕಲ ರಾಜರ ಸಮಕ್ಷದಲ್ಲಿ ಧರ್ಮಾರ್ಥಯುಕ್ತವಾದ ಈ ಮಾತುಗಳನ್ನಾಡಿದಳು :

“ದುರ್ಯೋಧನ! ಯಾವ ರಾಜ-ಮಹಾರಾಜರು ಈ ಸಭೆಯನ್ನು ಪ್ರವೇಶಿಸಿ ಇಲ್ಲಿ ಉಪವಿಷ್ಟರಾಗಿರುತ್ತಾರೆಯೋ, ಶ್ರೀಕೃಷ್ಣನ ಸಂಧಾನವನ್ನು ನೋಡುವ ಸಲುವಾಗಿ ಯಾವ ಬ್ರಹ್ಮರ್ಷಿಗಳು ಆಗಮಿಸಿ ಈ ಸಭೆಯಲ್ಲಿ ಕುಳಿತಿದ್ದಾರೆಯೋ ಮತ್ತು ರಾಜರೂ ಮತ್ತು ಬ್ರಹ್ಮರ್ಷಿಗಳೇ ಅಲ್ಲದೇ ಇತರ ಯಾವ ಸಭಾಸದರು ಉಪವಿಷ್ಟರಾಗಿರುತ್ತಾರೆಯೋ–ಅವರೆಲ್ಲರೂ ದುರ್ಮಂತ್ರಿ-ಸೇವಕರಿಂದ ಕೂಡಿರುವ ಪಾಪಿಷ್ಠನಾದ ನಿನ್ನ ಅಪರಾಧವನ್ನು ಕೇಳಲಿ. ವಿವರಿಸಿ ಹೇಳುತ್ತೇನೆ. ಈ ಕುರುಗಳ ರಾಜ್ಯವು ಆನುಪೂರ್ವಿಯಿಂದ ಉಪಭುಂಜಿಸಲ್ಪಡತಕ್ಕದ್ದಾಗಿದೆ. ಇದು ನಮ್ಮ ಪರಂಪರಾಗತವಾದ ಕುಲಧರ್ಮ. ಪಾಪಬುದ್ಧಿಯೂ, ಮಹಾಕ್ರೂರಕರ್ಮಿಯೂ ಆಗಿರುವ

ನೀನು ಈ ಕುರುಗಳ ರಾಜ್ಯವನ್ನು ಅನ್ಯಾಯದಿಂದ ಹಿಂಸೆಗೆ ಗುರಿಪಡಿಸಿರುತ್ತೀಯೆ. ಇಂದು ರಾಜ್ಯದಲ್ಲಿ ಬುದ್ಧಿವಂತನಾದ ಧೃತರಾಷ್ಟ್ರನು ಸಿಂಹಾಸನಾಧಿರೂಢನಾಗಿದ್ದಾನೆ. ಅವನ ತಮ್ಮನಾದ ದೀರ್ಘದರ್ಶಿಯಾದ ವಿದುರನು ಅವನಿಗೆ ಸಲಹೆಗಾರನಾಗಿದ್ದಾನೆ. ಈ ಇಬ್ಬರ ಮಾತನ್ನೂ ಅತಿಕ್ರಮಿಸಿ ಮೋಹಪರವಶನಾಗಿರುವ ನೀನು ರಾಜತ್ವವನ್ನು ಹೇಗೆತಾನೇ ಆಶಿಸುವೆ? ನಿನಗೆ ಪ್ರಭುತ್ವವು ಹೇಗೆತಾನೇ ಲಭ್ಯವಾಗುತ್ತದೆ? ಭೀಷ್ಮನಿನ್ನೂ ಜೀವಿಸಿರಲಾಗಿ, ಮಹಾನುಭಾವರಾದ ಧೃತರಾಷ್ಟ್ರ-ವಿದುರರು 'ತಾವು ಭೀಷ್ಮನ ಅಧೀನರು' ಎಂಬ ಅಭಿಪ್ರಾಯದಿಂದಲೇ ಇರುತ್ತಾರೆ. (ಯದ್ಯಪಿ ಭೀಷ್ಮನು ರಾಜ್ಯವನ್ನು ಆಶಿಸದಿದ್ದರೂ ಸಹ ಅವನ ಮಾತನ್ನು ಅತಿಕ್ರಮಿಸಿ ನಡೆಯತಕ್ಕವರಾಗಿಲ್ಲ.) ನರಶ್ರೇಷ್ಠನಾದ, ಗಂಗಾತನಯನಾದ, ಮಹಾತ್ಮನಾದ ಈ ಭೀಷ್ಮನು ಧರ್ಮಜ್ಞನಾಗಿರುವುದರಿಂದ ರಾಜ್ಯಾಧಿಕಾರವನ್ನು ವಹಿಸಿಕೊಳ್ಳುವ ಇಚ್ಛೆಯಿಂದಿರುವುದಿಲ್ಲ. ನಿಶ್ಚಯವಾಗಿ ಹೇಳುವುದಾದರೆ, ದುರ್ಯೋಧನ! ಇತರರಿಂದ ಆಕ್ರಮಿಸಲು ಸಾಧ್ಯವಾಗದ ಈ ರಾಜ್ಯವು ಪಾಂಡುರಾಜನದೇ ಆಗಿದ್ದಿತು. ಆದುದರಿಂದ ಅವನ ಮಕ್ಕಳೇ ಈ ರಾಜ್ಯದ ಅಧಿಕಾರಸೂತ್ರವನ್ನು ವಹಿಸಿಕೊಳ್ಳಲು ಅರ್ಹರಾಗಿರುತ್ತಾರೆ. ಬೇರೊಬ್ಬರಿಗೆ ಈ ರಾಜ್ಯದ ಆಡಳಿತವನ್ನು ನಡೆಸಲು ಅಧಿಕಾರವಿಲ್ಲ. ಪಿತಾಮಹಸಂಬಂಧವಾದ ರಾಜ್ಯವು ಪುತ್ರನಿಗೂ, ಅನಂತರ ಪೌತ್ರನಿಗೂ ಸೇರುವುದಾಗಿರುವುದರಿಂದ ನ್ಯಾಯವಾಗಿ ಈ ನಿಖಿಲವಾದ ಸಾಮ್ರಾಜ್ಯವೂ ಪಾಂಡವರದೇ ಆಗಿದೆ. ರಾಜ್ಯವನ್ನೂ ಸ್ವಧರ್ಮವನ್ನೂ ಪರಿಪಾಲಿಸತಕ್ಕ ನಾವು ಸತ್ಯಸಂಧನಾದ, ಬುದ್ಧಿವಂತನಾದ, ಕುರುಮುಖ್ಯನಾದ, ಮಹಾತ್ಮನಾದ ದೇವವ್ರತನು ಈ ವಿಷಯದಲ್ಲಿ ಏನು ಹೇಳುತ್ತಾನೆಯೋ ಅದನ್ನು ಸ್ವಲ್ಪವಾದರೂ ನ್ಯೂನಾತಿರೇಕಗಳಿಲ್ಲದ ರೀತಿಯಲ್ಲಿ ಕಾರ್ಯತಃ ಮಾಡಬೇಕು. ಇದು ನಮ್ಮ ಕರ್ತವ್ಯವಾಗಿರುತ್ತದೆ. ಮಹಾವ್ರತನಾದ ಭೀಷ್ಮನ ಅನುಜ್ಞೆಯನ್ನು ಪಡೆದು ವಿದುರನಾಗಲೀ– ಧೃತರಾಷ್ಟ್ರನಾಗಲೀ ಇಂದು ಮಾಡಬೇಕಾಗಿರುವ ಕರ್ತವ್ಯದ ವಿಷಯವಾಗಿ ಮಾತನಾಡಲಿ. ಬಹಳ ಕಾಲದವರೆಗೂ ಚಿರಸ್ಥಾಯಿಯಾಗಿ ಉಳಿಯುವ ಧರ್ಮವನ್ನು ಪುರಸ್ಕರಿಸಿ, ಸುಹೃದರಾದ ಇವರು ನಿಯೋಜಿಸಲಿರುವ ಕಾರ್ಯವನ್ನು ಮಾಡಿಯೇ ತೀರಬೇಕು. ಕುರುಗಳಿಗೆ ನ್ಯಾಯಬದ್ಧವಾಗಿ ಅನುಕ್ರಮವಾಗಿ

ಪ್ರಾಪ್ತವಾಗಿರುವ ಈ ರಾಜ್ಯವನ್ನು ಧೃತರಾಷ್ಟ್ರನಿಂದ ಪ್ರೇರಿತನಾದ ಮತ್ತು ಶಾಂತನವನಿಂದ ಪುರಸ್ಕೃತನಾದ ಧರ್ಮಪುತ್ರನು ಅನುಶಾಸನಮಾಡಲಿ.”

೧೪೮ನೆಯ ಅಧ್ಯಾಯವು ಮುಗಿಯಿತು.

೧೪೯ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ)

## ಧೃತರಾಷ್ಟ್ರನು ಯುಕ್ತಿಯುಕ್ತವಾದ ಮಾತುಗಳನ್ನು ದುರ್ಯೋಧನನಿಗೆ ಹೇಳಿದುದು : ಪಾಂಡವರಿಗೆ ಅರ್ಧರಾಜ್ಯವನ್ನು ಕೊಡುವಂತೆ ಆದೇಶನೀಡಿದುದು

ಶ್ರೀಕೃಷ್ಣನು ಮುಂದುವರಿಸುತ್ತಾ ಹೇಳುತ್ತಾನೆ :

**ಏವಮುಕ್ತೇ ತು ಗಾನ್ಧಾರ್ಯಾ ಧೃತರಾಷ್ಟ್ರೋ ಜನೇಶ್ವರಃ ।**
**ದುರ್ಯೋಧನಮುವಾಚೇದಂ ರಾಜಮಧ್ಯೇ ಜನಾಧಿಪ ॥೧॥**

“ಮಹಾರಾಜ! ಗಾಂಧಾರಿಯು ದುರ್ಯೋಧನನನ್ನು ಕುರಿತು ಹೀಗೆ ಹೇಳಿದನಂತರ ಜನೇಶ್ವರನಾದ ಧೃತರಾಷ್ಟ್ರನು ಅಲ್ಲಿ ನೆರೆದಿದ್ದ ರಾಜರ ಮಧ್ಯದಲ್ಲಿ ದುರ್ಯೋಧನನನ್ನು ಸಂಬೋಧಿಸಿ ಹೇಳಿದನು :

“ಪುತ್ರಕ! ದುರ್ಯೋಧನ! ನಾನು ಹೇಳುವುದನ್ನು ಕೇಳು. ನಿನಗೆ ಮಂಗಳವಾಗಲಿ. ನಿನಗೆ ನಿನ್ನ ತಂದೆಯ ವಿಷಯದಲ್ಲಿ ಅಲ್ಪ-ಸ್ವಲ್ಪ ಗೌರವವಿದ್ದರೆ ನಾನು ಹೇಳಿದಂತೆ ಮಾಡು. ಎಲ್ಲರಿಗಿಂತಲೂ ಮೊದಲು ಪ್ರಜಾಪತಿಸೋಮನು ಕುರುವಂಶದ ಸಂವರ್ಧಕನಾಗಿದ್ದನು. ಅವನಿಂದ ಆರನೆಯವನೇ ನಹುಷನ ಮಗನಾದ ಯಯಾತಿಯು. ಯಯಾತಿಗೆ ಐವರು ಮಕ್ಕಳಿದ್ದರು. ಅವರೆಲ್ಲರೂ ರಾಜರ್ಷಿಗಳಲ್ಲಿ ಶ್ರೇಷ್ಠರೆನಿಸಿದ್ದರು. ಅವರಲ್ಲಿ ಮಹಾತೇಜಸ್ವಿಯಾದ, ಪ್ರಭುವಾದ ಯದುವು ಜ್ಯೇಷ್ಠಪುತ್ರನು. ನಮ್ಮ ವಂಶವರ್ಧಕನಾದ ಪೂರುವು ಆ ಐವರು ಮಕ್ಕಳಲ್ಲಿ ಕಿರಿಯವನಾಗಿದ್ದನು. ಪೂರುವು ವೃಷಪರ್ವನ ಮಗಳಾದ ಶರ್ಮಿಷ್ಠೆಯಲ್ಲಿ ಯಯಾತಿಯಿಂದ ಹುಟ್ಟಿದವನು. ಯದುವಾದರೋ ದೇವಯಾನಿಯ ಮಗನು. ಅಮಿತೌಜಸ್ಕನಾದ, ದೈತ್ಯಗುರುವಾದ ಶುಕ್ರನ ದೌಹಿತ್ರನು. ಯಾದವಕುಲಪ್ರವರ್ತಕನಾದ

ಯದುವು ಮಹಾಬಲಿಷ್ಠನಾಗಿಯೂ ವೀರ್ಯಸಮ್ಮತನಾಗಿಯೂ ಇದ್ದನು. ಆದರೆ ಅವನು ಬಹುಮೂರ್ಖನಾಗಿದ್ದು ದರ್ಪಪೂರ್ಣನಾಗಿದ್ದು ಅನೇಕ ವೀರಕ್ಷತ್ರಿಯರನ್ನು ಅಪಮಾನಗೊಳಿಸಿದನು.

ಬಲದರ್ಪವಿಮೋಹಿತನಾಗಿದ್ದ ಯದುವು ತಂದೆಯ ಶಾಸನದನುಸಾರವಾಗಿಯೂ ನಡೆದುಕೊಳ್ಳಲಿಲ್ಲ. ಅಪರಾಜಿತನಾದ ಯದುವು ಬಲದರ್ಪ ಸಮನ್ವಿತನಾಗಿ ತನ್ನ ತಂದೆಯಾದ ಯಯಾತಿಯನ್ನೂ ಮತ್ತು ತಮ್ಮಂದಿರನ್ನೂ ಅಪಮಾನಗೊಳಿಸಿದನು. ಚತುಃಸಾಗರಪರ್ಯಂತವಾದ ಈ ಭೂಮಂಡಲದಲ್ಲಿ ಯದುವೊಬ್ಬನೇ ಮಹಾಬಲಿಷ್ಠನಾಗಿ ಮೆರೆಯುತ್ತಿದ್ದನು. ಭೂಮಂಡಲದ ಸಕಲರಾಜರನ್ನೂ ಗೆದ್ದು ತನ್ನ ಆಶ್ರಿತರನ್ನಾಗಿ ಮಾಡಿಕೊಂಡು ಹಸ್ತಿನಾಪುರದಲ್ಲಿ ರಾಜ್ಯಭಾರಮಾಡುತ್ತಿದ್ದನು. ಯಾವುದೋ ಕಾರಣಕ್ಕಾಗಿ ಅಥವಾ ಆಜ್ಞೆಯನ್ನು ಉಲ್ಲಂಘಿಸಿದುದಕ್ಕಾಗಿ ನಹುಷನ ಮಗನಾದ, ಯದುವಿನ ತಂದೆಯಾದ ಯಯಾತಿಯು ಪರಮಕ್ರುದ್ಧನಾಗಿ ಪುತ್ರನನ್ನು ಶಪಿಸಿಬಿಟ್ಟನು. ರಾಜ್ಯದ ಸಿಂಹಾಸನದಿಂದಲೂ ಕೆಳಗಿಳಿಸಿಬಿಟ್ಟನು. ಬಲದರ್ಪಿತರಾಗಿದ್ದ ಯದುವಿನ ಅನುಜರೂ ಅಣ್ಣನ ಮಾರ್ಗವನ್ನೇ ಹಿಡಿದು ತಂದೆಯ ಆಜ್ಞೆಯನ್ನು ಉಲ್ಲಂಘಿಸಿದರು. ಕುಪಿತನಾದ ಯಯಾತಿಯು ಆ ಮಕ್ಕಳನ್ನೂ ಶಪಿಸಿದನು. ಆದರೆ ಕನಿಷ್ಠನಾದ ಪೂರುವು ಮಾತ್ರ ತಂದೆಯ ಆಜ್ಞೆಯನ್ನು ಉಲ್ಲಂಘಿಸಲಿಲ್ಲ. ಸ್ವವಶವರ್ತಿಯಾದ, ಕನಿಷ್ಠನಾದ, ವಿಧೇಯನಾದ ಪೂರುವನ್ನೇ ನೃಪಸತ್ತಮನಾದ ಯಯಾತಿಯು ರಾಜ್ಯಸಿಂಹಾಸನದಲ್ಲಿ ಕುಳ್ಳಿರಿಸಿದನು. ಈ ರೀತಿಯಾಗಿ ಯದ್ಯಪಿ ಮಗನು ಜ್ಯೇಷ್ಠನೇ ಆಗಿದ್ದರೂ ಅವನು ಅಹಂಕಾರಿಯಾಗಿದ್ದ ಪಕ್ಷದಲ್ಲಿ, ಅವಿಧೇಯನಾಗಿದ್ದ ಪಕ್ಷದಲ್ಲಿ ರಾಜ್ಯವನ್ನು ಪಡೆದುಕೊಳ್ಳದೇ ಇರುವ ನಿದರ್ಶನವು ನಮ್ಮ ಕುಲದಲ್ಲಿಯೇ ಇದೆ. ವೃದ್ಧರ ಸೇವೆಯಿಂದ, ವಿಧೇಯತೆಯಿಂದ ಕನಿಷ್ಠರಾದವರೂ ರಾಜ್ಯಾಡಳಿತವನ್ನು ವಹಿಸಿಕೊಳ್ಳಲು ಅರ್ಹರಾಗುತ್ತಾರೆ. ಇದಕ್ಕೆ ನಮ್ಮ ಪೂರ್ವಜನಾದ ಪೂರುವೇ ಪ್ರತ್ಯಕ್ಷಪ್ರಮಾಣನಾಗಿದ್ದಾನೆ. ಅದೇ ರೀತಿಯಲ್ಲಿ ನನ್ನ ತಂದೆಯ ಪಿತಾಮಹನಾದ ಪ್ರತೀಪನು ಸರ್ವಧರ್ಮಗಳನ್ನೂ ತಿಳಿದವನಾಗಿದ್ದನು ಮತ್ತು ಮೂರು ಲೋಕಗಳಲ್ಲಿಯೂ ವಿಖ್ಯಾತನಾಗಿದ್ದನು. ರಾಜ್ಯವನ್ನು ಧರ್ಮದಿಂದ ಶಾಸನಮಾಡುತ್ತಿದ್ದ ಆ ರಾಜಸಿಂಹನಿಗೆ ದೇವಕಲ್ಪ

ರಾದ ಯಶೋವಂತರಾದ ಮೂವರು ಮಕ್ಕಳು ಹುಟ್ಟಿದರು. ಅವರಲ್ಲಿ ದೇವಾಪಿಯು ಜ್ಯೇಷ್ಠನೂ ಶ್ರೇಷ್ಠನೂ ಆಗಿದ್ದನು. ಎರಡನೆಯವನು ಬಾಹ್ಲಿಕ. ಮೂರನೆಯವನೇ ಬುದ್ಧಿವಂತನೂ ನನ್ನ ಪಿತಾಮಹನೂ ಆದ ಶಾಂತನುವು.

ದೇವಾಪಿಯು ಮಹಾತೇಜಸ್ವಿಯಾಗಿದ್ದನು. ಆದರೆ ಅವನಿಗೆ ಚರ್ಮ ದೋಷವಿದ್ದಿತು. ಅವನು ಪರಮಧಾರ್ಮಿಕನಾಗಿದ್ದನು. ಅವನು ಸತ್ಯ ವಾದಿಯು. ತಂದೆಯ ಶುಶ್ರೂಷೆಯಲ್ಲಿಯೇ ಸರ್ವದಾ ನಿರತನಾಗಿದ್ದನು. ಪಟ್ಟಣಿಗರಿಗೂ ಮತ್ತು ದೇಶದ ಪ್ರಜೆಗಳಿಗೂ ಅವನು ಸಮ್ಮತನಾಗಿದ್ದನು. ಅವನನ್ನು ಕಂಡರೆ ಎಲ್ಲರಿಗೂ ಅಪಾರವಾದ ಪ್ರೀತಿಯಿದ್ದಿತು. ಸಾಧು ಸಮ್ಮತನಾಗಿದ್ದನು. ಬಾಲಕರೇ ಆದಿಯಾಗಿ ವೃದ್ಧಪರ್ಯಂತವಾಗಿ ಎಲ್ಲ ರಿಗೂ ದೇವಾಪಿಯು ಹೃದಯಂಗಮನಾಗಿದ್ದನು. ಎಲ್ಲರಿಗೂ ಅಚ್ಚುಮೆಚ್ಚಿ ನವನಾಗಿದ್ದನು. ಉದಾರನಾಗಿದ್ದನು. ಸತ್ಯಸಂಧನಾಗಿದ್ದನು. ಸರ್ವಪ್ರಾಣಿಗಳ ಹಿತದಲ್ಲಿಯೂ ನಿರತನಾಗಿದ್ದನು. ಸರ್ವಕಾಲಗಳಲ್ಲಿಯೂ ತಂದೆಯ ಮತ್ತು ಬ್ರಾಹ್ಮಣರ ಆಜ್ಞಾಪಾಲಕನಾಗಿದ್ದನು. ಅನುಜರಾದ ಬಾಹ್ಲಿಕ ಮತ್ತು ಮಹಾತ್ಮನಾದ ಶಾಂತನು ಇವರಿಗೆ ಬಹುನೆಚ್ಚಿನ ಅಣ್ಣನಾಗಿದ್ದನು. ಆ ಮೂವರಿಗೂ ಪರಸ್ಪರ ಸೌಭ್ರಾತ್ರವಿದ್ದಿತು. ಒಬ್ಬರು ಮತ್ತೊಬ್ಬರನ್ನು ಬಹುವಾಗಿ ಪ್ರೀತಿಸುತ್ತಿದ್ದರು. ಮಹಾತ್ಮರಾದ ಆ ಮೂವರಲ್ಲಿ ಪರಸ್ಪರವಾಗಿ ವೈಮನಸ್ಯವಿರಲಿಲ್ಲ. ಹೀಗೆಯೇ ಅನೇಕವರ್ಷಗಳು ಉರುಳಿದುವು. ನೃಪತಿ ಶ್ರೇಷ್ಠನಾದ ಪ್ರತೀಪನು ವೃದ್ಧನಾದನು. ಶಾಸ್ತ್ರವಿಧ್ಯನುಸಾರವಾಗಿ ಪ್ರತೀಪನು ಮಗನಿಗೆ ಪಟ್ಟಾಭಿಷೇಕಮಾಡಲು ವಸ್ತುಗಳನ್ನು ಸಂಗ್ರಹಿಸಿದನು. ದೇವಾಪಿಗೆ ಪಟ್ಟಾಭಿಷೇಕಮಾಡಲು ಪೂರ್ವಾಂಗವಾದ ಅನೇಕಮಂಗಳಕಾರ್ಯಗಳನ್ನೂ ಪ್ರತೀಪನು ಮಾಡಿಸಿದನು. ಆದರೆ ವೇದವಿದರಾದ, ಶಾಸ್ತ್ರಜ್ಞರಾದ ಬ್ರಾಹ್ಮ ಣರೂ ಮತ್ತು ವೃದ್ಧರೂ ಪುರಜನರಿಂದಲೂ ದೇಶದ ಪ್ರಜೆಗಳಿಂದಲೂ ಕೂಡಿಕೊಂಡವರಾಗಿ ರಾಜನ ಬಳಿಗೆ ಹೋಗಿ ದೇವಾಪಿಯ ಪಟ್ಟಾಭಿಷೇಕವನ್ನು ತಡೆದರು. ಪ್ರಜೆಗಳು ಮಗನ ಪಟ್ಟಾಭಿಷೇಕವನ್ನು ತಡೆಯಲು ಬಂದಿರುವರೆಂಬುದನ್ನು ಕೇಳಿ ಪ್ರತೀಪನು ಗಳ-ಗಳನೆ ಅತ್ತುಬಿಟ್ಟನು ಮತ್ತು ಮಗನ ವಿಷಯವಾಗಿಯೂ ಬಹುದುಃಖಿಸಿ

ದನು. ಪ್ರಜೆಗಳ ಮಾತನ್ನು ಉಲ್ಲಂಘಿಸಿ ರಾಜನು ಮಗನಿಗೆ ಪಟ್ಟಗಟ್ಟಲು ಯತ್ನಿಸಲಿಲ್ಲ. ಮೇಲಾಗಿ ಪ್ರಜೆಗಳ ಮಾತು ಶಾಸ್ತ್ರಸಮ್ಮತವಾಗಿದ್ದಿತು. ಈ ರೀತಿಯಲ್ಲಿ ಯದ್ಯಪಿ ದೇವಾಪಿಯು ಉದಾರನಾಗಿದ್ದರೂ, ಧರ್ಮಜ್ಞ ನಾಗಿದ್ದರೂ, ಸತ್ಯಸಂಧನಾಗಿದ್ದರೂ, ಪ್ರಜೆಗಳಿಗೆ ಅತ್ಯಂತಪ್ರಿಯನೇ ಆಗಿದ್ದರೂ–ಚರ್ಮದೋಷವಿದ್ದುದರಿಂದ ಅವನು ದೂಷಿತನಾಗಿದ್ದನು. ಪಟ್ಟಾಭಿಷೇಕಕ್ಕೆ ಅರ್ಹನಾಗಲಿಲ್ಲ.

**ಹೀನಾಙ್ಗಂ ಪೃಥಿವೀಪಾಲಂ ನಾಭಿನನ್ದನ್ತಿ ದೇವತಾಃ ॥೨೫॥**

ಅಂಗದ ನ್ಯೂನತೆಯಿರುವ ರಾಜನನ್ನು ದೇವತೆಗಳು ಅಭಿನಂದಿಸು ವುದಿಲ್ಲ. (ಅಂತಹ ರಾಜನ ವಿಷಯದಲ್ಲಿ ದೇವತೆಗಳು ಪ್ರಸನ್ನರಾಗುವುದಿಲ್ಲ.) ಹೀಗೆಂಬುದಾಗಿ ಬ್ರಾಹ್ಮಣರು ಹೇಳಿ ಪ್ರತೀಪನನ್ನು ದೇವಾಪಿಗೆ ಪಟ್ಟಗಟ್ಟದಂತೆ ತಡೆದರು. ಅದರಿಂದ ರಾಜನ ಮನಸ್ಸಿಗೆ ಬಹಳ ವ್ಯಥೆಯಾಯಿತು. ಪುತ್ರಶೋಕದಲ್ಲಿ ಮಗ್ನನಾಗಿಹೋದನು. ತನಗೆ ಪಟ್ಟಗಟ್ಟಲು ಹೊರಟಿದ್ದ ರಾಜನಿಗೆ ಪಟ್ಟಗಟ್ಟದಂತೆ ಪ್ರಜೆಗಳು ತಡೆಮಾಡಿದುದನ್ನು ನೋಡಿ ದೇವಾಪಿಯು ಅರಣ್ಯಕ್ಕೆ ಹೊರಟುಹೋದನು. ತನ್ನ ಅಣ್ಣನಿಗಾದ ದುರವಸ್ಥೆಯನ್ನು ಕಂಡು ಬಹುದುಃಖಿತನಾದ ಬಾಹ್ಲಿಕನು ಸಂಪತ್ಸಮೃದ್ಧವಾದ ರಾಜ್ಯವನ್ನೂ, ತಂದೆಯನ್ನೂ ಮತ್ತು ತಮ್ಮನನ್ನೂ ಪರಿತ್ಯಜಿಸಿ ಸೋದರಮಾವನ ಮನೆಗೆ ಹೊರಟುಹೋದನು. ಅನಂತರದಲ್ಲಿ ಯಾರೊಬ್ಬರಿಗೂ ಪಟ್ಟಗಟ್ಟದೆಯೇ ಪ್ರತೀಪನು ಕಾಲಪರವಶನಾಗಲಾಗಿ ಲೋಕಪ್ರಸಿದ್ಧನಾದ ಶಾಂತನುವು ಅಣ್ಣನಾದ ಬಾಹ್ಲಿಕನ ಅನುಮತಿಯನ್ನು ಪಡೆದು ರಾಜನಾಗಿ (ರಾಜ್ಯಸಿಂಹಾಸನದಲ್ಲಿ ಕುಳಿತು) ರಾಜ್ಯವಾಳಲು ಉಪಕ್ರಮಿಸಿದನು. ನಾನಾದರೋ ಅಂಧನಾಗಿ ಹುಟ್ಟಿದೆನು. ನನಗೂ ಒಂದು ಅಂಗದಲ್ಲಿ ನ್ಯೂನತೆಯಿದೆ. ಪಾಂಡುವು ಈ ವಿಷಯವನ್ನು ಮೊದಲೇ ಪ್ರಜೆಗಳೊಡನೆಯೂ ಹಿರಿಯರೊಡನೆಯೂ ಸಮಾಲೋಚಿಸಿ, ನಾನು ಜ್ಯೇಷ್ಠನಾಗಿಯೇ ಹುಟ್ಟಿದ್ದರೂ ಹೀನಾಂಗನೆಂಬ ಕಾರಣದಿಂದ ರಾಜನಾಗಲು ಅನರ್ಹನೆಂಬ ಪ್ರಜೆಗಳ ಒಮ್ಮತಾಭಿಪ್ರಾಯದಂತೆ ತಾನೇ ರಾಜನಾದನು. ನಾನೂ ನ್ಯೂನಾಂಗನಾಗಿ ಹುಟ್ಟಿದ ಕಾರಣದಿಂದಾಗಿ ಪಾಂಡುವು ಕನಿಷ್ಠನಾದರೂ ರಾಜ್ಯದ ಸಿಂಹಾಸನವನ್ನು ಪಡೆದುಕೊಂಡನು.

ಅವನ ಅವಸಾನಾನಂತರದಲ್ಲಿ ಈ ರಾಜ್ಯವು ಅವನ ಮಕ್ಕಳದೇ ಆಗುವುದು ಸಹಜವಲ್ಲವೇ?

**ಮಯ್ಯಭಾಗಿನಿ ರಾಜ್ಯಾಯ ಕಥಂ ತ್ವಂ ರಾಜ್ಯಮಿಚ್ಛಸಿ ।**
**ಅರಾಜಪುತ್ರೋ ಹ್ಯಸ್ವಾಮೀ ಪರಸ್ವಂ ಹರ್ತುಮಿಚ್ಛಸಿ ॥೩೧॥**

ನಾನು ರಾಜ್ಯಕ್ಕೆ ಪಾಲುದಾರನಲ್ಲ. ನಾನೇ ಪಾಲುದಾರನಲ್ಲದಿರುವಾಗ ನನ್ನ ಮಗನಾದ ನೀನು ಹೇಗೆತಾನೇ ರಾಜ್ಯವನ್ನಿಚ್ಛಿಸುವೆ? ಯಾವನು ರಾಜನ ಮಗನಲ್ಲವೋ ಅವನು ರಾಜ್ಯಕ್ಕೆ ಸ್ವಾಮಿಯೆಂದೂ ಆಗಲಾರನು. ಆದುದರಿಂದ ನಿನಗೆ ಈ ರಾಜ್ಯದ ಮೇಲೆ ಕಿಂಚಿತ್ತಾದರೂ ಅಧಿಕಾರವಿರುವುದಿಲ್ಲ. ಆದರೂ ನೀನೀಗ ಪರಸ್ವಾಪಹರಣಮಾಡಲು ಪ್ರಯತ್ನಿಸುತ್ತಿರುವೆ.

**ಯುಧಿಷ್ಠಿರೋ ರಾಜಪುತ್ರೋ ಮಹಾತ್ಮಾ**
**ನ್ಯಾಯಾಗತಂ ರಾಜ್ಯಮಿದಂ ಚ ತಸ್ಯ ।**
**ಸ ಕೌರವಸ್ಯಾಸ್ಯ ಕುಲಸ್ಯ ಭರ್ತಾ**
**ಪ್ರಶಾಸಿತಾ ಚೈವ ಮಹಾನುಭಾವಃ ॥೩೨॥**
**ಸ ಸತ್ಯಸನ್ಧಃ ಸ ತಥಾಪ್ರಮತ್ತಃ**
**ಶಾಸ್ತ್ರೇ ಸ್ಥಿತೋ ಬನ್ಧುಜನಸ್ಯ ಸಾಧುಃ ।**
**ಪ್ರಿಯಃ ಪ್ರಜಾನಾಂ ಸುಹೃದಾನುಕಮ್ಪೀ**
**ಜಿತೇನ್ದ್ರಿಯಃ ಸಾಧುಜನಸ್ಯ ಭರ್ತಾ ॥೩೩॥**
**ಕ್ಷಮಾ ತಿತಿಕ್ಷಾ ದಮ ಆರ್ಜವಂ ಚ**
**ಸತ್ಯವ್ರತತ್ವಂ ಶ್ರುತಮಪ್ರಮಾದಃ ।**
**ಭೂತಾನುಕಮ್ಪಾ ಹ್ಯನುಶಾಸನಂ ಚ**
**ಯುಧಿಷ್ಠಿರೇ ರಾಜಗುಣಾಃ ಸಮಸ್ತಾಃ ॥೩೪॥**

ಮಹಾತ್ಮನಾದ ಯುಧಿಷ್ಠಿರನು ರಾಜಪುತ್ರನಾಗಿರುತ್ತಾನೆ. ಆದುದರಿಂದ ನ್ಯಾಯಬದ್ಧವಾಗಿ ಈ ರಾಜ್ಯವು ಅವನಿಗೇ ಸೇರಬೇಕಾಗಿದೆ. ಅವನೇ ಈ ಕೌರವಕುಲದ ಭರಣ-ಪೋಷಣಗಳನ್ನೂ ಮಾಡಲು ಸಮರ್ಥನಾಗಿದ್ದಾನೆ ಮತ್ತು ಮಹಾನುಭಾವನಾದ ಅವನೇ ಈ ರಾಜ್ಯದ ಅನುಶಾಸನವನ್ನೂ

ಯೋಗ್ಯರೀತಿಯಲ್ಲಿ ಮಾಡುತ್ತಾನೆ. ಮೇಲಾಗಿ, ದುರ್ಯೋಧನ! ರಾಜನಲ್ಲಿರಬೇಕಾದ ಸಕಲಸದ್ಗುಣಗಳೂ ಅವನಲ್ಲಿವೆ. ಅವನು ಸತ್ಯಸಂಧನು. ಮತ್ತು ಪ್ರಮಾದರಹಿತನು. ಶಾಸ್ತ್ರದ ವಿಧಿಗೆ ಅನುಸಾರವಾಗಿ ನಡೆಯತಕ್ಕವನು. ಬಂಧುಜನರ ವಿಷಯದಲ್ಲಿ ಸದ್ಭಾವನೆಯಿಂದಿರತಕ್ಕವನು. ಪ್ರಜೆಗಳಿಗೆ ಪರಮಪ್ರಿಯನಾಗಿರತಕ್ಕವನು. ಸುಹೃದರ ವಿಷಯದಲ್ಲಿ ಯಾವಾಗಲೂ ದಯಾಪರನು ; ಜಿತೇಂದ್ರಿಯನು ; ಸಾಧು-ಸತ್ಪುರುಷರ ಭರಣ-ಪೋಷಣಗಳನ್ನು ಅಪ್ರಮತ್ತನಾಗಿ ಮಾಡತಕ್ಕವನು.

ಕ್ಷಮೆ, ಸಹನಶೀಲತೆ, ಇಂದ್ರಿಯಸಂಯಮ, ಸರಳತೆ, ಸತ್ಯನಿಷ್ಠೆ, ಶಾಸ್ತ್ರಜ್ಞಾನ, ಅಜಾಗರೂಕತೆಯಿಲ್ಲದಿರುವಿಕೆ, ಪ್ರಾಣಿಗಳ ವಿಷಯದಲ್ಲಿ ದಯಾಳುತ್ವ, ಗುರುಜನರ ಅನುಶಾಸನವನ್ನು ಅತಿಕ್ರಮಿಸದಿರುವುದು–ಈ ಸಮಸ್ತವಾದ ರಾಜಗುಣಗಳೂ ಯುಧಿಷ್ಠಿರನಲ್ಲಿ ಮೂರ್ತಿಮತ್ತಾಗಿವೆ.

ನಿನ್ನಲ್ಲಿರುವ ಗುಣಗಳನ್ನೂ ವರ್ಣಿಸುತ್ತೇನೆ ಕೇಳು, ದುರ್ಯೋಧನ! ಮೊದಲನೆಯದಾಗಿ : ನೀನು ರಾಜನ ಮಗನಲ್ಲ. ನಿನ್ನಲ್ಲಿ ಆರ್ಯರ ಸದ್ವೃತ್ತಿಯಿಲ್ಲ ; ಅನಾರ್ಯರ ನೀಚವೃತ್ತಿಯಿದೆ. ನೀನು ಪರಮಲೋಭಿ. ಬಂಧುಗಳ ವಿಷಯದಲ್ಲಿ ಯಾವಾಗಲೂ ಪಾಪಪೂರ್ಣವಾದ ವಿಚಾರವನ್ನೇ ಮಾಡುವೆ. ಮತ್ತೊಬ್ಬರನ್ನು ಹಾಳುಮಾಡುವುದರಲ್ಲಿಯೇ ನಿನಗೆ ಹೆಚ್ಚಿನ ಆಸಕ್ತಿ. ನೀನು ವಿಧೇಯನಲ್ಲ ; ಅವಿಧೇಯ. ದುರ್ವಿನೀತನಾದ ನಿನಗೆ ಪರಂಪರಾಗತವಾಗಿ ಪ್ರಾಪ್ತವಾಗತಕ್ಕ ಇತರರ ರಾಜ್ಯವನ್ನು ಅಪಹರಿಸಲು ಹೇಗೆತಾನೇ ಸಾಧ್ಯವಾಗುವುದು ?

ದುರ್ಯೋಧನ! ಆದುದರಿಂದ ನನ್ನ ಮಾತನ್ನು ಕೇಳು. ನಾನು ಹೇಳಿದಂತೆ ಮಾಡು. ನಿನ್ನಲ್ಲುಂಟಾಗಿರುವ ಭ್ರಾಂತಿಯನ್ನು ದೂರಮಾಡು. ಮೋಹಪರವಶನಾಗಬೇಡ. ವಾಹನಗಳಿಂದಲೂ, ಸಾಮಗ್ರಿಗಳಿಂದಲೂ ಸಹಿತವಾದ ಅರ್ಧರಾಜ್ಯವನ್ನು ಪಾಂಡವರಿಗೆ ಕೊಟ್ಟುಬಿಡು. ಉಳಿದ ಅರ್ಧರಾಜ್ಯವು ಅನುಜರಿಂದೊಡಗೂಡಿದ ನಿನ್ನ ಜೀವಿಕೆಗೆ ಪರ್ಯಾಪ್ತವಾಗುತ್ತದೆ.”

೧೪೯ನೆಯ ಅಧ್ಯಾಯವು ಮುಗಿಯಿತು.

## ಶ್ರೀಕೃಷ್ಣನು ಕೌರವರ ವಿಷಯದಲ್ಲಿ ಸಾಮ-ದಾನ-ಭೇದೋಪಾಯಗಳು ಸಲ್ಲವೆಂದೂ ದಂಡೋಪಾಯವೊಂದೇ ಉಚಿತವೆಂದೂ ಪಾಂಡವರಿಗೆ ಸಲಹೆನೀಡಿದುದು

ಶ್ರೀಕೃಷ್ಣನು ಮುಂದುವರಿದು ಹೇಳುತ್ತಾನೆ :

**ಏವಮುಕ್ತೇ ತು ಭೀಷ್ಮೇಣ ದ್ರೋಣೇನ ವಿದುರೇಣ ಚ ।**
**ಗಾನ್ಧಾರ್ಯಾ ಧೃತರಾಷ್ಟ್ರೇಣ ನ ವೈ ಮನ್ದೋಽನ್ವಬುಧ್ಯತ ॥೧॥**

"ಯುಧಿಷ್ಠಿರ! ಭೀಷ್ಮ-ದ್ರೋಣ-ವಿದುರ-ಗಾಂಧಾರೀ-ಧೃತರಾಷ್ಟ್ರರು ಹೀಗೆಲ್ಲ ಹೇಳಿದರೂ ಮಂದಬುದ್ಧಿಯವನಾದ ದುರ್ಯೋಧನನು ಆ ಹಿತವಚನಗಳನ್ನು ಮನಸ್ಸಿಗೆ ತೆಗೆದುಕೊಳ್ಳಲೇ ಇಲ್ಲ. ಹಿತೈಷಿಗಳ ಹಿತವಚನಗಳನ್ನು ಕೇಳುತ್ತಿದ್ದಂತೆಲ್ಲಾ ಅವನ ಮನಸ್ಸಿಗೆ ಸಮಾಧಾನವಾಗುತ್ತಿರಲಿಲ್ಲ. ಮನಸ್ಸು ಉದ್ರಿಕ್ತವಾಗುತ್ತಿದ್ದಿತು. ಅವರ ಮಾತುಗಳನ್ನು ಕೇಳಿ ಮಂದಬುದ್ಧಿಯಾದ ದುರ್ಯೋಧನನು ಕ್ರೋಧಮೂರ್ಛಿತನಾದನು. ಅವನ ಕಣ್ಣುಗಳು ಕೆಂಡದಂತೆ ಕೆಂಪಾದುವು. ಅವರೆಲ್ಲರ ಮಾತನ್ನೂ ತಿರಸ್ಕರಿಸಿ, ಅವರನ್ನೂ ತಿರಸ್ಕರಿಸಿ, ಸಭೆಯ ಮರ್ಯಾದೆಯನ್ನೂ ಉಲ್ಲಂಘಿಸಿ, ಅವರು ಹೇಳಿದುದಕ್ಕೆ ಪ್ರತ್ಯುತ್ತರವನ್ನೂ ಕೊಡದೆಯೇ ಸಭಾಭವನವನ್ನು ಬಿಟ್ಟು ಹೊರಟುಹೋದನು. ಜೀವದ ಹಂಗನ್ನೇ ತೊರೆದು ನಿಂತಿದ್ದ ರಾಜರೂ ದುರ್ಯೋಧನನನ್ನೇ ಅನುಸರಿಸಿ ಕೌರವಸಭೆಯನ್ನು ಬಿಟ್ಟು ಹೊರಟುಹೋದರು. ಸಭಾಭವನವನ್ನು ಬಿಟ್ಟು ತನ್ನನ್ನೇ ಅನುಸರಿಸಿಬಂದ ವಿವೇಕಶೂನ್ಯರಾದ ಆ ರಾಜರನ್ನು ಕುರಿತು ದುರ್ಯೋಧನನು–'ಕುರುಕ್ಷೇತ್ರಕ್ಕೆ ಈಗಲೇ ಹೊರಡಿರಿ. ಇಂದು ಪುಷ್ಯ ನಕ್ಷತ್ರವಿದ್ದು ವಿಜಯಯಾತ್ರೆಗೆ ಬಹುಪ್ರಶಸ್ತವಾದ ದಿನವಾಗಿದೆ'–ಎಂದು ಬಾರಿ-ಬಾರಿಗೂ ಆಜ್ಞಾಪಿಸಿದನು. ಅನಂತರ ಕಾಲಚೋದಿತರಾದ ಆ ರಾಜರೆಲ್ಲರೂ ತಮ್ಮ ತಮ್ಮ ಸೈನ್ಯಗಳನ್ನು ತೆಗೆದುಕೊಂಡು ಭೀಷ್ಮನನ್ನು ಸೇನಾಪತಿಯನ್ನಾಗಿ ಮಾಡಿಕೊಂಡು ಬಹಳ ಸಂತೋಷದಿಂದಲೇ ಕುರುಕ್ಷೇತ್ರಕ್ಕೆ ಧಾವಿಸಿದರು. ಕೌರವರ ಹನ್ನೊಂದು ಅಕ್ಷೌಹಿಣೀಸೈನ್ಯವು ಕುರುಕ್ಷೇತ್ರಕ್ಕೆ

ಆಗಮಿಸಿದೆ. ಸೈನ್ಯದ ಮುಂಭಾಗದಲ್ಲಿ ಮುಖ್ಯಸೇನಾನಾಯಕನಾದ (ದಂಡನಾಯಕನಾದ) ತಾಲಧ್ವಜನಾದ ಭೀಷ್ಮನು ವಿರಾಜಿಸುತ್ತಿದ್ದಾನೆ.

ಯುಧಿಷ್ಠಿರ! ಈಗ ನೀನು– ಯಾವುದು ಯುಕ್ತವಾಗಿದೆ? ಯಾವುದೀಗ ಸನ್ನಿಹಿತವಾಗಿದೆ?–ಎಂಬುದೆಲ್ಲವನ್ನೂ ಕೂಲಂಕಷವಾಗಿ ಪರಿಶೀಲಿಸಿ ಯಾವುದು ಯುಕ್ತವಾಗಿ ನಿನಗೆ ತೋರುತ್ತದೆಯೋ ಅದನ್ನು ಮಾಡು. ನಿನ್ನ ಆಶಯದಂತೆ ಕೌರವಸಭೆಯಲ್ಲಿ ಭೀಷ್ಮ-ದ್ರೋಣ-ವಿದುರ-ಗಾಂಧಾರೀ-ಧೃತರಾಷ್ಟ್ರ–ಮುಂತಾದವರೆಲ್ಲರೂ ನನ್ನ ಸಮಕ್ಷದಲ್ಲಿ ದುರ್ಯೋಧನನಿಗೆ ಬುದ್ಧಿವಾದ ಹೇಳಿದುದನ್ನೂ ಮತ್ತು ಕೌರವಸಭೆಯಲ್ಲಿ ಅವರ ಮಾತಿನಿಂದುಂಟಾದ ದುರ್ಯೋಧನನ ಮತ್ತು ಇತರ ರಾಜರ ಪ್ರತಿಕ್ರಿಯೆಯನ್ನೂ ಹೇಳಿರುತ್ತೇನೆ. ಯುಧಿಷ್ಠಿರಮಹಾರಾಜ! ನಿಮ್ಮ ಅಣ್ಣ-ತಮ್ಮಂದಿರಲ್ಲಿ ಸೌಭ್ರಾತ್ರವುಂಟಾಗಬೇಕೆಂಬ ಅಭಿಲಾಷೆಯಿಂದಿದ್ದ ನಾನು–ಕುರುವಂಶವು ಒಡೆದುಹೋಗಕೂಡದೆಂದೂ ಪ್ರಜೆಗಳು ಅಭಿವೃದ್ಧಿಹೊಂದಲೆಂದೂ ಆಶಿಸಿ, ಮೊದಲು-ಮೊದಲು ಸಾಮೋಪಾಯವನ್ನೇ ಪ್ರಯೋಗಿಸಿದೆನು. ಯಾವಾಗ ಸಾಮೋಪಾಯವು ಪ್ರಯೋಜನಕಾರಿಯಾಗಲಿಲ್ಲವೋ ಆಗ ನಾನು ಭೇದೋಪಾಯವನ್ನು ಪ್ರಯೋಗಿಸಿದೆನು. (ಅವರವರಲ್ಲಿಯೇ ವೈಮನಸ್ಯ ಹುಟ್ಟುವ ಮಾತುಗಳನ್ನಾಡಿದೆನು.) ಅನಂತರ ದೇವತೆಗಳಿಗೂ ಮತ್ತು ಮನುಷ್ಯರಿಗೂ ಸಂಬಂಧಿಸಿದಂತೆ ನೀವು ಮಾಡಿರುವ ಕರ್ಮಗಳನ್ನೂ ಪರಿ-ಪರಿಯಾಗಿ ವರ್ಣಿಸಿದೆನು.

ಯಾವಾಗ ದುರ್ಯೋಧನನು ನನ್ನ ಸಾಂತ್ವನಪೂರ್ಣವಾದ ಮಾತುಗಳನ್ನು ಪುರಸ್ಕರಿಸಲಿಲ್ಲವೋ–ಆಗ ನಾನು ಎಲ್ಲ ರಾಜರನ್ನೂ ಪ್ರತ್ಯೇಕ-ಪ್ರತ್ಯೇಕವಾಗಿ ಸಂಧಿಸಿ ಅವರಿಗೆ ದುರ್ಯೋಧನನ ವಿಷಯದಲ್ಲಿ ಅವಿಶ್ವಾಸಹುಟ್ಟುವಂತೆ ಅವರೊಡನೆ ಮಾತನಾಡಿದೆನು.

ಅದ್ಭುತವಾದ, ಘೋರವಾದ, ದಾರುಣವಾದ, ಅಮಾನುಷವಾದ ಕರ್ಮಗಳನ್ನೂ ಸಹ ನಾನು ಆ ಸಮಯದಲ್ಲಿ ಅವರಿಗೆ ಮಾಡಿತೋರಿಸಿದೆನು. ಸುಯೋಧನನನ್ನು ಹುಲ್ಲುಕಡ್ಡಿಗಿಂತಲೂ ಕಡೆಯಾಗಿ ಭಾವಿಸಿ ಅಲ್ಲಿದ್ದ ರಾಜರೆಲ್ಲರನ್ನೂ ಹೆದರಿಸಿ, ರಾಧೇಯನನ್ನೂ, ಶಕುನಿಯನ್ನೂ ಪುನಃ ಪುನಃ ಭಯಪಡಿಸುತ್ತಾ ನಿಮ್ಮೊಡನೆ ವಂಚನೆಯ ದ್ಯೂತವಾಡಿದುದಕ್ಕಾಗಿ ಧೃತರಾಷ್ಟ್ರನ

ಮಕ್ಕಳನ್ನು ಬಾರಿ-ಬಾರಿಗೂ ನಿಂದಿಸುತ್ತಾ ಅವನ ಪಕ್ಷದಲ್ಲಿದ್ದ ರಾಜರೊಡನೆ ಗುಪ್ತಾಲೋಚನೆಗಳನ್ನು ಮಾಡಿ, ಅವರಿಗೂ–ದುರ್ಯೋಧನನಿಗೂ ಭಿನ್ನಾಭಿಪ್ರಾಯವುಂಟಾಗುವಂತೆ ಮಾಡಿ, ಪುನಃ ನಾನು ಸಾಮೋಪಾಯ ವನ್ನೇ ಅವಲಂಬಿಸಿ ದಾನೋಪಾಯವನ್ನು ಪ್ರಯೋಗಿಸಿದೆನು.

ಕುರುವಂಶವು ಅಭೇದ್ಯವಾಗಿರಬೇಕೆಂಬುದೂ ಮತ್ತು ಕಾರ್ಯವನ್ನು ಸಾಧಿಸಿಕೊಂಡು ಬರಬೇಕೆಂಬುದೂ ನನ್ನ ಮುಖ್ಯವಾದ ಆಶಯವಾಗಿದ್ದಿತು. ಈ ಕಾರಣದಿಂದಲೇ ಪುನಃ ಸಾಮ-ದಾನೋಪಾಯಗಳನ್ನೇ ಅವಲಂಬಿಸಿದೆನು.

ದಾನೋಪಾಯವನ್ನು ಪ್ರಯೋಗಮಾಡುತ್ತಾ ನಾನು ದುರ್ಯೋಧನ ನನ್ನು ಕುರಿತು ಹೀಗೆಂದು ಹೇಳಿದೆನು :

**ತೇ ಶೂರಾ ಧೃತರಾಷ್ಟ್ರಸ್ಯ ಭೀಷ್ಮಸ್ಯ ವಿದುರಸ್ಯ ಚ ।**
**ತಿಷ್ಠೇಯುಃ ಪಾಣ್ಡವಾಃ ಸರ್ವೇ ಹಿತ್ವಾ ಮಾನಮಧಶ್ಚರಾಃ ॥೧೫॥**

**ಪ್ರಯಚ್ಛನ್ತು ಚ ತೇ ರಾಜ್ಯಮನೀಶಾಸ್ತೇ ಭವನ್ತು ಚ ।**
**ಯಥಾಹ ರಾಜಾ ಗಾಙ್ಗೇಯೋ ವಿದುರಶ್ಚ ಹಿತಂ ತವ ॥೧೬॥**

**ಸರ್ವಂ ಭವತು ತೇ ರಾಜ್ಯಂ ಪಞ್ಚ ಗ್ರಾಮಾನ್ವಿಸರ್ಜಯ ।**
**ಅವಶ್ಯಂ ಭರಣೀಯಾ ಹಿ ಪಿತುಸ್ತೇ ರಾಜಸತ್ತಮ ॥೧೭॥**

"ರಾಜಶ್ರೇಷ್ಠನೇ! ಪಂಚಪಾಂಡವರು ಯದ್ಯಪಿ ಮಹಾಶೂರರೇ ಆಗಿದ್ದರೂ ಅಭಿಮಾನವನ್ನು ತೊರೆದು ಧೃತರಾಷ್ಟ್ರನ, ಭೀಷ್ಮನ ಮತ್ತು ವಿದುರನ ಅಡಿಯಾಳುಗಳಾಗಿ ನಡೆದುಕೊಳ್ಳುತ್ತಾರೆ. ಅವರೇ ನಿನಗೆ ರಾಜ್ಯವನ್ನು ಒಪ್ಪಿಸಿಬಿಡುತ್ತಾರೆ. ಅವರಿಗೆ ಈಶತ್ವವೇ ಬೇಕಾಗಿಲ್ಲ. (ನಿನ್ನ ಅಧೀನರಾಗಿಯೇ ಇದ್ದುಬಿಡುತ್ತಾರೆ). ಧೃತರಾಷ್ಟ್ರರಾಜನೂ, ಗಾಂಗೇಯನೂ ಮತ್ತು ವಿದುರನೂ ನಿನಗೆ ಹಿತಕರವಾದ ಯಾವ ಮಾತುಗಳನ್ನಾಡಿರು ವರೋ– ಅದರಂತೆ ನಡೆದುಕೋ. ಅಖಂಡಕುರುಸಾಮ್ರಾಜ್ಯವೂ ನಿನ್ನದೇ ಆಗಲಿ. ಆದರೆ ಪಾಂಡವರ ಜೀವಿಕೆಗಾಗಿ ಐದು ಗ್ರಾಮಗಳನ್ನು ಮಾತ್ರವೇ ಬಿಟ್ಟುಕೊಡು. ನಿಮ್ಮ ತಂದೆ ಧೃತರಾಷ್ಟ್ರನ ಸಲುವಾಗಿ ಬಿಟ್ಟುಕೊಡು. ಏಕೆಂದರೆ : ನಿನ್ನ ತಂದೆಗೆ ಸುತಪ್ರಾಯರಾದ ಅವರನ್ನು ಪಾಲಿಸಿ-ಪೋಷಿಸುವುದೂ ನಿನ್ನ

ಕರ್ತವ್ಯವಲ್ಲವೇ? (ಪಾಂಡವರನ್ನು ನಿಮ್ಮ ತಂದೆಯು ಅವಶ್ಯವಾಗಿ ರಕ್ಷಿಸಲೇಬೇಕಲ್ಲವೇ?)"

ಯುಧಿಷ್ಠಿರ! ನಾನು ನಿಮಗಾಗಿ ಕೇವಲ ಐದೇ ಗ್ರಾಮಗಳನ್ನು ಬೇಡಿದರೂ ದುಷ್ಟಾತ್ಮನಾದ ದುರ್ಯೋಧನನು ಐದು ಗ್ರಾಮಗಳ ಭಾಗವನ್ನು ಬಿಟ್ಟುಕೊಡಲೂ ಸಮ್ಮತಿಸಲಿಲ್ಲ. ಮಹಾರಾಜ! ಆದುದರಿಂದ, ಆ ಪಾಪಿಷ್ಠರ ವಿಷಯದಲ್ಲಿ ನಾಲ್ಕನೆಯದಾದ ದಂಡೋಪಾಯವೇ ಅನಿವಾರ್ಯವೆಂದು ನಾನು ಭಾವಿಸಿದ್ದೇನೆ. ಬೇರೆ ಯಾವುದೇ ಉಪಾಯದಿಂದಲೂ ಅವರನ್ನು ದಾರಿಗೆ ತರಲು ಸಾಧ್ಯವೇ ಇಲ್ಲ. ದುರ್ಯೋಧನನ ಪಕ್ಷದ ರಾಜರೆಲ್ಲರೂ ಆತ್ಮವಿನಾಶಕ್ಕಾಗಿ ಕುರುಕ್ಷೇತ್ರಕ್ಕೆ ಈಗಾಗಲೇ ಹೊರಟೇಬಿಟ್ಟಿದ್ದಾರೆ. ಕುರುಸಭೆಯಲ್ಲಿ ಏನು ನಡೆಯಿತೋ–ಆ ಎಲ್ಲ ವಿಷಯಗಳನ್ನೂ ನಾನು ನಿನಗೆ ಸ್ಪಷ್ಟವಾಗಿ ಹೇಳಿಬಿಟ್ಟಿದ್ದೇನೆ.

**ನ ತೇ ರಾಜ್ಯಂ ಪ್ರಯಚ್ಛನ್ತಿ ವಿನಾ ಯುದ್ಧೇನ ಪಾಣ್ಡವ ।**
**ವಿನಾಶಹೇತವಃ ಸರ್ವೇ ಪ್ರತ್ಯುಪಸ್ಥಿತಮೃತ್ಯವಃ ॥೨೧॥**

ಪಾಂಡವನೇ! ಯುದ್ಧದ ಹೊರತಾಗಿ ಅವರು ನಿನಗೆ ಖಂಡಿತವಾಗಿಯೂ ರಾಜ್ಯವನ್ನು ಕೊಡುವುದಿಲ್ಲ. ಅವರೆಲ್ಲರೂ ಲೋಕದ ವಿನಾಶಕ್ಕೆ ಕಾರಣರಾಗಿದ್ದಾರೆ. ಮೇಲಾಗಿ ಅವರೆಲ್ಲರಿಗೂ ಅವಸಾನಕಾಲವೂ ಸನ್ನಿಹಿತವಾಗಿಬಿಟ್ಟಿದೆ."

ಗ೫೦ನೆಯ ಅಧ್ಯಾಯವು ಮುಗಿಯಿತು.

೧೫೧ನೆಯಅಧ್ಯಾಯ ಸೈನ್ಯನಿರ್ಯಾಣಪರ್ವ

## ಪಾಂಡವರು ತಮ್ಮ ಕಡೆಯ ಅಕ್ಷೌಹಿಣೀಪತಿಗಳನ್ನೂ ಪ್ರಧಾನಸೇನಾಪತಿಯನ್ನೂ ಚುನಾಯಿಸಿದುದು : ಪಾಂಡವರ ಸೇನೆಯು ಕುರುಕ್ಷೇತ್ರವನ್ನು ಪ್ರವೇಶಿಸಿದುದು

ವೈಶಂಪಾಯನರು ಜನಮೇಜಯನನ್ನು ಕುರಿತು ಹೇಳುತ್ತಾರೆ :

**ಜನಾರ್ದನವಚಃ ಶ್ರುತ್ವಾ ಧರ್ಮರಾಜೋ ಯುಧಿಷ್ಠಿರಃ ।**
**ಭ್ರಾತೄನುವಾಚ ಧರ್ಮಾತ್ಮಾ ಸಮಕ್ಷಂ ಕೇಶವಸ್ಯ ಹ ॥೧॥**

ಮಹಾರಾಜ! ಜನಾರ್ದನನು ಹೇಳಿದ ಮಾತುಗಳನ್ನು ಕೇಳಿ ಧರ್ಮಾತ್ಮನಾದ ಯುಧಿಷ್ಠಿರನು ಶ್ರೀಕೇಶವನ ಸಮಕ್ಷದಲ್ಲಿಯೇ ತನ್ನ ತಮ್ಮಂದಿರೊಡನೆ ಹೇಳಿದನು :

"ಕೌರವಸಭೆಯಲ್ಲಿ ಏನು ನಡೆಯಿತೆಂಬುದನ್ನು ನೀವೂ ಕೇಳಿರುತ್ತೀರಿ. ಶ್ರೀಕೇಶವನ ನಿರ್ಧಾರಿತವಾದ ಮಾತು ಯಾವುದುಂಟೋ–ಆ ಮಾತನ್ನೂ ಕೇಳಿರುವಿರಿ. ಶ್ರೀಕೇಶವನು ಹೇಳಿದಂತೆ ಈಗ ಯುದ್ಧಮಾಡುವುದೊಂದು ಹೊರತಾಗಿ ಬೇರೆಯ ಮಾರ್ಗವೇ ನಮಗೆ ಇಲ್ಲವಾಗಿದೆ. ನರಸತ್ತಮರೇ! ಆದುದರಿಂದ, ನೀವೂ ನಮ್ಮ ಸೇನೆಯ ವಿಭಾಗವನ್ನು ಯಥೋಚಿತವಾದ ರೀತಿಯಲ್ಲಿ ಮಾಡಿರಿ. ನಮ್ಮಲ್ಲಿ ಏಳು ಅಕ್ಷೌಹಿಣೀಸೈನ್ಯಗಳು ನಮ್ಮ ವಿಜಯಕ್ಕಾಗಿ ಸಂಗ್ರಹವಾಗಿವೆ. ಈ ಏಳು ಅಕ್ಷೌಹಿಣೀಸೈನ್ಯಗಳಿಗೂ ಒಂದೊಂದು ಅಕ್ಷೌಹಿಣಿಗೆ ಒಬ್ಬೊಬ್ಬ ಸೇನಾಪತಿಯಂತೆ ಏಳು ಮಂದಿ ವಿಖ್ಯಾತರಾದ ಶೂರರನ್ನು ಹೆಸರಿಸುತ್ತೇನೆ, ಕೇಳಿರಿ. ದ್ರುಪದ, ವಿರಾಟ, ಧೃಷ್ಟದ್ಯುಮ್ನ, ಶಿಖಂಡಿ, ಸಾತ್ಯಕಿ, ಚೇಕಿತಾನ ಮತ್ತು ವೀರ್ಯವಂತನಾದ ಭೀಮಸೇನ–ಈ ಏಳು ಮಂದಿ ನಮ್ಮ ಅಕ್ಷೌಹಿಣೀಸೇನೆಯ ಪ್ರಮುಖರಾಗಿ ರುತ್ತಾರೆ. ಇವರೆಲ್ಲರೂ ಮಹಾವೀರರು ; ನಮಗಾಗಿ ಪ್ರಾಣಬಿಡಲೂ ಸಿದ್ಧರಾಗಿರತಕ್ಕವರು. ಎಲ್ಲರೂ ವೇದ-ವೇದಾಂಗಪಾರಂಗತರಾಗಿರುತ್ತಾರೆ. ಇವರೆಲ್ಲರೂ ಮಹಾಶೂರರು ; ಉತ್ತಮವಾದ ವ್ರತಗಳನ್ನು ಪರಿಪಾಲಿಸ ತಕ್ಕವರು. ಲಜ್ಜಾಶೀಲರು, ನೀತಿವಂತರು ಮತ್ತು ಎಲ್ಲರೂ ಯುದ್ಧ ವಿಶಾರದರು. ಬಾಣಪ್ರಯೋಗದಲ್ಲಿಯೂ, ಅಸ್ತ್ರಪ್ರಯೋಗದಲ್ಲಿಯೂ ಕುಶಲರು. ಸರ್ವಾಸ್ತ್ರಗಳನ್ನೂ ತಿಳಿದಿರತಕ್ಕವರು ಮತ್ತು ಅಸ್ತ್ರಯುದ್ಧ ಮಾಡತಕ್ಕವರು.

ಈ ಏಳು ಮಂದಿಯಲ್ಲಿ ಮುಖ್ಯಸೇನಾಪತಿಯು ಯಾರಾಗಬೇಕೆಂಬು ದನ್ನು ನಾನು ಯೋಚಿಸುತ್ತಿದ್ದೇನೆ. ಮುಖ್ಯಸೇನಾಪತಿಯಾಗತಕ್ಕವನು ಸೈನ್ಯವನ್ನು ಯಾವ ರೀತಿಯಲ್ಲಿ ವಿಭಾಗಿಸಿ ನಿಲ್ಲಿಸಬೇಕೆಂಬುದನ್ನು ಚೆನ್ನಾಗಿ ತಿಳಿದಿರಬೇಕು. ಬಾಣಸ್ವರೂಪವಾದ ಜ್ವಾಲೆಯಿಂದ ಕೂಡಿರುವ ಯಜ್ಞೇಶ್ವರ ನಿಗೆ ಸಮಾನನಾದ ಭೀಷ್ಮನನ್ನು ಎದುರಿಸಿ ನಿಲ್ಲುವವನಾಗಬೇಕು. ಇಂತಹ

ವರು ಈ ಏಳು ಮಂದಿಯಲ್ಲಿ ಯಾರಿದ್ದಾರೆ? ಕುರುನಂದನ! ಸಹದೇವ! ಈ ವಿಷಯದಲ್ಲಿ ನೀನು ನಿನ್ನ ಅಭಿಪ್ರಾಯವನ್ನು ತಿಳಿಸು. ನಮ್ಮ ಏಳು ಅಕ್ಷೌಹಿಣೀಸೈನ್ಯಕ್ಕೂ ದಂಡನಾಯಕನಾಗಲು (ಪ್ರಧಾನಸೇನಾಪತಿಯಾಗಲು) ಸಮರ್ಥರಾದವರು ಯಾರೆಂಬುದನ್ನು ತಿಳಿಸು."

"ಯಾವ ರಾಜನನ್ನು ಆಶ್ರಯಿಸಿ ನಮ್ಮ ರಾಜ್ಯಭಾಗವನ್ನು ಕೇಳುತ್ತಿದ್ದೇವೆಯೋ ಅಂತಹ–ಬಂಧುಸಂಬಂಧವನ್ನು ಹೊಂದಿರುವ, ಸುಖ-ದುಃಖಗಳಲ್ಲಿ ಭಾಗಿಯಾದ, ವೀರ್ಯವಂತನಾದ, ಬಲಿಷ್ಠನಾದ, ಅಸ್ತ್ರನಿಪುಣನಾದ, ಯುದ್ಧದಲ್ಲಿ ಎದುರಿಸಲು ಅಸಾಧ್ಯನಾದ, ಮತ್ಸ್ಯರಾಜನಾದ ವಿರಾಟನೇ ಮುಖ್ಯಸೇನಾಪತಿಯಾಗಲಿ. ಸಂಗ್ರಾಮದಲ್ಲಿವನು ಭೀಷ್ಮನನ್ನೂ ಮತ್ತು ಇತರ ಮಹಾರಥರನ್ನೂ ಎದುರಿಸಿ ನಿಲ್ಲುವ ಸಾಮರ್ಥ್ಯವನ್ನು ಪಡೆದಿರುತ್ತಾನೆ. ಅವರ ದಾಳಿಯನ್ನು ಇವನು ಸಹಿಸಿಕೊಳ್ಳಬಲ್ಲನು. ಆದುದರಿಂದ ನನ್ನ ಅಭಿಪ್ರಾಯದಲ್ಲಿ ವಿರಾಟನೇ ನಮ್ಮ ಮುಖ್ಯಸೇನಾಪತಿಯಾಗಲು ಯೋಗ್ಯನಾಗಿರುತ್ತಾನೆ."

ಜನಮೇಜಯ! ಸಹದೇವನು ಹೀಗೆ ಹೇಳಿದನಂತರ ವಾಕ್ಯವಿಶಾರದನಾದ ನಕುಲನು ಈ ಮಾತನ್ನು ಹೇಳಿದನು :

"ಅಣ್ಣ! ಯಾವನು ವಯಸ್ಸಿನಲ್ಲಿ ದೊಡ್ಡವನೂ, ಶಾಸ್ತ್ರದಲ್ಲಿ ಪರಿಣತನೂ, ಅಮಿತವಾದ ಧೈರ್ಯವುಳ್ಳವನೂ, ಕುಲದಲ್ಲಿ ಸದ್ವಂಶಜನೂ, ಕೀರ್ತಿಮಂತರಾದ ತಾತ-ಮುತ್ತಾತರಿಂದ ಮತ್ತು ಬಂಧು-ಬಾಂಧವರಿಂದ ಕೂಡಿರುವವನೂ, ಹ್ರೀಮಂತನೂ, ಬಲಿಷ್ಠನೂ, ಶ್ರೀಮಂತನೂ, ಸರ್ವಶಾಸ್ತ್ರ ವಿಶಾರದನೂ ಆಗಿರುವನೋ–ಯಾವನು ಅಸ್ತ್ರವಿದ್ಯೆಯನ್ನು ಭರದ್ವಾಜ ಮಹರ್ಷಿಗಳಿಂದ ಕಲಿತುಕೊಂಡಿರುವನೋ, ಯಾವನು ದುರ್ಧರ್ಷನೋ (ಎದುರಿಸಲು ಅಸಾಧ್ಯನೋ), ಸತ್ಯಪ್ರತಿಜ್ಞನೋ, ಯಾವನು ನಿತ್ಯವೂ ದ್ರೋಣರನ್ನೂ ಮಹಾಬಲನಾದ ಭೀಷ್ಮನನ್ನೂ ಸ್ಪರ್ಧಿಸುವನೋ (ಅವರಿಗೆ ಸಮಾನವಾದ ಪರಾಕ್ರಮವುಳ್ಳವನಾಗಿರುವನೋ), ರಾಜಸಮೂಹದ ಪ್ರಶಂಸೆಗೆ ಪಾತ್ರನಾಗಿರುವನೋ, ಯಾವನು ಮುಂದಾಳಾಗಿ ನಿಂತು ಸೇನಾಪತಿಯಾಗಿ ಸೈನ್ಯವನ್ನು ರಕ್ಷಣೆಮಾಡಬಲ್ಲನೋ, ನೂರಾರು ಶಾಖೆಗಳುಳ್ಳ

ವೃಕ್ಷದಂತೆ ಯಾವನು ಪುತ್ರ-ಪೌತ್ರರಿಂದ ಪರಿವೃತನಾಗಿರುವನೋ, ಯಾವನು ಕೋಪಾವಿಷ್ಟನಾಗಿ ದ್ರೋಣರನ್ನು ವಿನಾಶಮಾಡುವ ಸಲುವಾಗಿಯೇ ತನ್ನ ಪತ್ನಿಯರೊಡನೆ ಸುಘೋರವಾದ ತಪಸ್ಸನ್ನು ಮಾಡಿರುವನೋ, ಯಾವನು ಸಭೆಗೆ ಶೋಭನನೋ, ಯಾವ ಪಾರ್ಥಿವರ್ಷಭನು ನಮ್ಮನ್ನು ತಂದೆಯೋಪಾದಿಯಲ್ಲಿ ಯಾವಾಗಲೂ ಪ್ರೀತ್ಯಾದರಗಳಿಂದ ಕಾಣುತ್ತಾನೆಯೋ–ಅಂತಹ ನಮ್ಮ ಮಾವನಾದ ದ್ರುಪದನು ನಮ್ಮ ಪಕ್ಷದ ಸೇನಾಪತಿತ್ವವನ್ನು ವಹಿಸಿಕೊಳ್ಳಲಿ. (ಸೇನೆಯ ಸಂಚಾಲಕನಾಗಲಿ.) ನನ್ನ ಅಭಿಪ್ರಾಯದಲ್ಲಿ ; ಯುದ್ಧಮಾಡಲು ಬರುವ ಭೀಷ್ಮ-ದ್ರೋಣರನ್ನು ದ್ರುಪದನು ಎದುರಿಸಿ ನಿಲ್ಲಬಲ್ಲನು. ದ್ರುಪದರಾಜನು ದಿವ್ಯಾಸ್ತ್ರಗಳನ್ನು ತಿಳಿದಿರುವನಲ್ಲದೇ ಮಹರ್ಷಿಯಾದ ಅಂಗಿರಸನ ಸಖನೂ ಆಗಿರುತ್ತಾನೆ. ಆದುದರಿಂದ ದ್ರುಪದನೇ ನಮ್ಮ ಸೇನಾಪತಿಯಾಗಲೆಂಬುದು ನನ್ನ ಅಭಿಪ್ರಾಯವಾಗಿದೆ.”

ಜನಮೇಜಯ! ಮಾದ್ರೀಪುತ್ರರು ತಮ್ಮ ಅಭಿಪ್ರಾಯಗಳನ್ನು ಹೇಳಿದನಂತರ ಇಂದ್ರನ ಮಗನಾದ, ಇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ ಸವ್ಯಸಾಚಿಯು ಈ ಮಾತುಗಳನ್ನು ಹೇಳಿದನು :

“ಅಣ್ಣ! ಯಾವನು ಅಗ್ನಿಯ ಜ್ವಾಲೆಗೆ ಸಮಾನವಾದ ಕಾಂತಿಯಿಂದ ಬೆಳಗುತ್ತಾ ತಂದೆಯು ಮಾಡಿದ ತಪಃಪ್ರಭಾವದಿಂದಲೂ ಮತ್ತು ಋಷಿಗಳ ಕೃಪಾವಿಶೇಷದಿಂದಲೂ ಹುಟ್ಟಿರುವನೋ, ಯಾವನು ಮಹಾಭುಜಗಳುಳ್ಳವನೋ–ಯಾವನು ಧನುಷ್ಮಂತನಾಗಿ, ಕವಚಧಾರಿಯಾಗಿ, ಖಡ್ಗಪಾಣಿಯಾಗಿ, ದಿವ್ಯವಾದ ಕುದುರೆಗಳಿಂದ ಯುಕ್ತವಾದ ರಥದಲ್ಲಿ ಕುಳಿತು ಅಗ್ನಿಕುಂಡದಿಂದ ಪ್ರಾದುರ್ಭೂತನಾಗಿರುವನೋ, ಯಾವನು ಮಹಾಮೇಘದ ಗರ್ಜನೆಯಂತೆ ಘೋರನಿನಾದವನ್ನು ಮಾಡುವ ರಥದಿಂದ ಸುಶೋಭಿತನಾಗಿರುವನೋ, ಯಾವನು ಮಹಾವೀರ್ಯವಂತನೋ, ಸಿಂಹದಂತೆ ಶರೀರಸಂಘಟನೆಯುಳ್ಳವನೋ, ಸಿಂಹಪರಾಕ್ರಮನೋ, ಸಿಂಹಸ್ಕಂಧನೋ, ಮಹಾದ್ಯುತಿಮಂತನೋ, ಸಿಂಹದಂತೆ ವಿಶಾಲವಾದ ಎದೆಯುಳ್ಳವನೋ, ಸಿಂಹಭುಜನೋ, ಮಹಾಬಲಿಷ್ಠನೋ, ಸಿಂಹದಂತೆ ಗರ್ಜನೆಮಾಡತಕ್ಕವನೋ, ವೀರನೋ, ಯಾವನು ಸುಮನೋಹರವಾದ ಹುಬ್ಬುಗಳಿಂದ

ಕೂಡಿರುವನೋ, ಥಳ-ಥಳಿಸುವ ದಂತಪಂಕ್ತಿಗಳಿಂದ ಕೂಡಿರುವನೋ, ಮನೋಹರವಾದ ಕೆನ್ನೆಯ ಮೇಲ್ಭಾಗದಿಂದ ಕೂಡಿರುವನೋ, ದೀರ್ಘ ಬಾಹುವೋ, ಸುಲಕ್ಷಣವಾದ ಮುಖವುಳ್ಳವನೋ, ಸುಪುಷ್ಟನಾಗಿರುವನೋ, ಯಾವನ ಜತ್ರುವು (ತೋಳೂ ಕುತ್ತಿಗೆಯೂ ಸೇರುವ ಸ್ಥಳವು) ಬಹುಸುಂದರವಾಗಿ ಕಾಣುವುದೋ, ಯಾವನು ಸುಂದರವಾಗಿಯೂ ಮತ್ತು ವಿಶಾಲವಾಗಿಯೂ ಇರುವ ಕಣ್ಣುಗಳುಳ್ಳವನೋ, ಸುಮನೋಹರವಾದ ಪಾದಗಳುಳ್ಳವನೋ, ಯಾವನು ಸುಪ್ರತಿಷ್ಠನೋ (ಯುದ್ಧದಲ್ಲಿ ಅಚಲನಾಗಿರುವನೋ), ಎಂತಹುದೇ ಶಸ್ತ್ರಾಸ್ತ್ರಗಳಿಂದಲೂ ಅಭೇದ್ಯನೋ, ಯಾವನು ಮದೋದಕವನ್ನು ಸುರಿಸುತ್ತಿರುವ ಗಜರಾಜನೋಪಾದಿಯಲ್ಲಿದ್ದಾನೆಯೋ, ದ್ರೋಣರನ್ನು ಸಂಹರಿಸಲೆಂದೇ ಯಾವನು ಅವತರಿಸಿರುವನೋ, ಯಾವನು ಸತ್ಯವಾದಿಯೋ, ಜಿತೇಂದ್ರಿಯನೋ– ಅಂತಹ ಧೃಷ್ಟದ್ಯುಮ್ನನೇ ನಮ್ಮ ಸೈನ್ಯಕ್ಕೆ ಸೇನಾಪತಿಯಾಗಲು ಸಮರ್ಥನೆಂದು ನಾನು ಭಾವಿಸುತ್ತೇನೆ. ಈ ಮಹಾವೀರನು ಉರಿಯುತ್ತಿರುವ ಮುಖವುಳ್ಳ ಸರ್ಪಗಳಂತಿರುವ ಮತ್ತು ವಜ್ರಾಯುಧ-ಅಶನಿಗಳಿಗೆ ಸಮಾನವಾದ ಸ್ಪರ್ಶವಿರುವ ಭೀಷ್ಮನ ಬಾಣಗಳನ್ನು ತಡೆದುಕೊಳ್ಳಬಲ್ಲನೆಂದು ನಾನು ಭಾವಿಸುತ್ತೇನೆ. ಭೀಷ್ಮನ ಬಾಣಗಳು ವೇಗದಲ್ಲಿ ಯಮದೂತರಿಗೆ ಸಮಾನವಾಗಿರುತ್ತವೆ. ಅವುಗಳು ಮೇಲೆ ಬಿದ್ದುವೆಂದರೆ ಸಾಕ್ಷಾತ್ ಯಜ್ಞೇಶ್ವರನೇ ಮೇಲೆ ಬಿದ್ದ ಅನುಭವವಾಗುತ್ತದೆ. ವಜ್ರಾಯುಧದ ಪ್ರಹಾರದಂತೆ ಅತಿದಾರುಣವಾದ ಯಾತನೆಯನ್ನುಂಟುಮಾಡುವ ಭೀಷ್ಮನ ಬಾಣಗಳನ್ನು ಹಿಂದೆ ಪರಶುರಾಮನೊಬ್ಬನು ಮಾತ್ರ ಎದುರಿಸಿದ್ದನು. ಮಹಾವ್ರತನಾದ ಭೀಷ್ಮನನ್ನು ಎದುರಿಸಿ ನಿಲ್ಲುವ ಪುರುಷಸಿಂಹನನ್ನೇ ನಾನು ಕಾಣೆನು. ಆದರೆ ಮಹಾಪರಾಕ್ರಮಿಯಾದ ಧೃಷ್ಟದ್ಯುಮ್ನನೊಬ್ಬನು ಮಾತ್ರ ಅವನನ್ನು ಎದುರಿಸಿ ನಿಲ್ಲಬಲ್ಲನೆಂಬುದು ನನ್ನ ಅಭಿಮತವಾಗಿದೆ. ಧೃಷ್ಟದ್ಯುಮ್ನನು ಕ್ಷಿಪ್ರಹಸ್ತನು. ಬಹುಶೀಘ್ರವಾಗಿ ಬಾಣ ಬಿಡುವ ಕೈಚಳಕವುಳ್ಳವನು. ವಿಚಿತ್ರಗತಿಯಲ್ಲಿ ಯುದ್ಧಮಾಡತಕ್ಕವನು. ಭೇದಿಸಲು ಅಸಾಧ್ಯವಾದ ಕವಚವನ್ನು ಹೊಂದಿರತಕ್ಕವನು. ಯೂಥಪತಿಯಾದ ಗಜರಾಜನಂತೆಯೇ ಪ್ರಕಾಶಿಸತಕ್ಕವನು. ಇವನೇ ನಮ್ಮ ಮುಖ್ಯಸೇನಾಪತಿಯಾಗಲು ಅರ್ಹನೆಂಬುದು ನನ್ನ ಅಭಿಮತವಾಗಿದೆ.”

ಅರ್ಜುನನು ತನ್ನ ಅಭಿಪ್ರಾಯವನ್ನು ಸ್ಪಷ್ಟಪಡಿಸಿದನಂತರದಲ್ಲಿ ಭೀಮನು ತನ್ನ ಅಭಿಪ್ರಾಯವನ್ನು ಯುಧಿಷ್ಠಿರನ ಮುಂದೆ ಮಂಡಿಸಿದನು :

"ಅಣ್ಣ! ದ್ರುಪದಕುಮಾರನಾದ ಶಿಖಂಡಿಯು ಪಿತಾಮಹನಾದ ಭೀಷ್ಮನ ವಧೆಗಾಗಿಯೇ ಜನ್ಮತಾಳಿದ್ದಾನೆಂದು ಇಲ್ಲಿಗೆ ಬಂದಿರುವ ಸಿದ್ಧರೂ ಮತ್ತು ಮಹರ್ಷಿಗಳೂ ಹೇಳುತ್ತಿದ್ದಾರೆ. ಸಂಗ್ರಾಮಮಧ್ಯದಲ್ಲಿ ದಿವ್ಯಾಸ್ತ್ರಗಳನ್ನು ಪ್ರಯೋಗಿಸುತ್ತಿರುವ ಶಿಖಂಡಿಯ ರೂಪವನ್ನು ಯಾರು ನೋಡುತ್ತಾರೆಯೋ ಅವರು–ಈ ರೂಪವು ಸಾಕ್ಷಾತ್ ಪರಶುರಾಮನದೇ ಇರಬಹುದೆಂದು ಭ್ರಮಿಸುತ್ತಾರೆ. ಯುದ್ಧಸನ್ನದ್ಧನಾಗಿ ರಥದಲ್ಲಿ ಕುಳಿತಿರುವ ಶಿಖಂಡಿಯನ್ನು ಶಸ್ತ್ರದಿಂದ ಸಂಹರಿಸಲು ಸಾಮರ್ಥ್ಯವಿರುವವನನ್ನು ನಾನು ಇದುವರೆಗೂ ಕಂಡಿರುವುದಿಲ್ಲ. ರಥಯುದ್ಧದಲ್ಲಿ ಮಹಾವ್ರತನಾದ ಭೀಷ್ಮನನ್ನು ಸಂಹರಿಸಲು ಶಿಖಂಡಿಯೊಬ್ಬನ ಹೊರತಾಗಿ ಬೇರಾರಿಗೂ ಸಾಧ್ಯವಿಲ್ಲ. ಆದುದರಿಂದ ಶಿಖಂಡಿಯೇ ನಮ್ಮ ಸೈನ್ಯದ ಸೇನಾಪತಿಯಾಗಬೇಕೆಂಬುದು ನನ್ನ ಅಭಿಮತವಾಗಿದೆ."

ನಾಲ್ವರ ಅಭಿಪ್ರಾಯಗಳನ್ನೂ ತೆಗೆದುಕೊಂಡ ಯುಧಿಷ್ಠಿರನು ಯಾವುದೊಂದು ನಿರ್ಧಾರವನ್ನೂ ಕೈಗೊಳ್ಳಲು ಹೋಗಲಿಲ್ಲ. ಎಲ್ಲವನ್ನೂ ಮಹಾಮಹಿಮನಾದ ಶ್ರೀಕೇಶವನಿಗೇ ಒಪ್ಪಿಸಿಬಿಟ್ಟನು.

**ಸರ್ವಸ್ಯ ಜಗತಸ್ತಾತ ಸಾರಾಸಾರಂ ಬಲಾಬಲಮ್ ।**
**ಸರ್ವಂ ಜಾನಾತಿ ಧರ್ಮಾತ್ಮಾ ಮತಮೇಷಾಂ ಚ ಕೇಶವಃ ॥೩೩॥**

"ನಮ್ಮ ಶ್ರೀಕೇಶವನು ಸಕಲಜಗತ್ತಿನ (ಜಗತ್ತಿನ ಸಕಲಜನರ) ಸಾರಾಸಾರಗಳನ್ನೂ ಬಲಾಬಲಗಳನ್ನೂ ತಿಳಿದವನಾಗಿರುತ್ತಾನೆ. ನನ್ನ ತಮ್ಮಂದಿರ ಅಭಿಪ್ರಾಯಗಳನ್ನೂ ಪ್ರತ್ಯಕ್ಷವಾಗಿಯೇ ಕೇಳಿರುತ್ತಾನೆ ಮತ್ತು ಇಲ್ಲಿ ನೆರೆದಿರುವ ರಾಜರ ಅಭಿಪ್ರಾಯಗಳನ್ನೂ ತಿಳಿದವನಾಗಿರುತ್ತಾನೆ.

**ಯಮಾಹ ಕೃಷ್ಣೋ ದಾಶಾರ್ಹಃ ಸೋಽಸ್ತು ಸೇನಾಪತಿರ್ಮಮ ।**
**ಕೃತಾಸ್ತ್ರೋಽಪ್ಯಕೃತಾಸ್ತ್ರೋ ವಾ ವೃದ್ಧೋ ವಾ ಯದಿ ವಾ ಯುವಾ ॥**

**ಏಷ ನೋ ವಿಜಯೇ ಮೂಲಮೇಷ ತಾತ ವಿಪರ್ಯಯೇ ।**
**ಅತ್ರ ಪ್ರಾಣಾಶ್ಚ ರಾಜ್ಯಂ ಚ ಭಾವಾಭಾವೌ ಸುಖಾಸುಖೇ ॥೩೫॥**

**ಏಷ ಧಾತಾ ವಿಧಾತಾ ಚ ಸಿದ್ಧಿರತ್ರ ಪ್ರತಿಷ್ಠಿತಾ ।**
**ಯಮಾಹ ಕೃಷ್ಣೋ ದಾಶಾರ್ಹಃ ಸೋಽಸ್ತು ನೋ ವಾಹಿನೀಪತಿಃ ॥**

**ಬ್ರವೀತು ವದತಾಂ ಶ್ರೇಷ್ಠೋ ನಿಶಾ ಸಮಭಿವರ್ತತೇ ।**
**ತತಃ ಸೇನಾಪತಿಂ ಕೃತ್ವಾ ಕೃಷ್ಣಸ್ಯ ವಶವರ್ತಿನಃ ॥೩೭॥**

**ರಾತ್ರೇಃ ಶೇಷೇ ವ್ಯತಿಕ್ರಾನ್ತೇ ಪ್ರಯಾಸ್ಯಾಮೋ ರಣಾಜಿರಮ್ ।**
**ಅಧಿವಾಸಿತಶಸ್ತ್ರಾಶ್ಚ ಕೃತಕೌತುಕಮಙ್ಗಲಾಃ ॥೩೮॥**

ಶ್ರೀಕೃಷ್ಣನು ಯಾರಿಗೆ ಸೇನಾಪತಿಯ ಪಟ್ಟಗಟ್ಟಲು ಹೇಳುತ್ತಾನೆಯೋ–ಅವನೇ ನಮ್ಮ ಸೇನಾಪತಿಯಾಗುತ್ತಾನೆ. ಶ್ರೀಕೃಷ್ಣನಿಂದ ಆರಿಸಲ್ಪಡುವ ಆ ವೀರನು ಕೃತಾಸ್ತ್ರನಾಗಿರಲಿ; ಅಕೃತಾಸ್ತ್ರನಾಗಿರಲಿ (ಅಸ್ತ್ರ ವಿದ್ಯೆಯನ್ನು ತಿಳಿದಿರಲಿ.; ತಿಳಿಯದೆಯೇ ಇರಲಿ); ವೃದ್ಧನಾಗಿರಲಿ; ಯುವಕನಾಗಿರಲಿ–ಅವನೇ ನಮ್ಮ ಸೇನಾಪತಿಯಾಗುತ್ತಾನೆ. ಇಲ್ಲಿ ನಮಗೆ ಸೇನಾಪತಿಯಾರೆಂಬುದು ಮುಖ್ಯವಲ್ಲ. ನಮ್ಮ ವಿಜಯಕ್ಕೆ ಮೂಲಕಾರಣನು ಶ್ರೀಕೃಷ್ಣನೇ ಆಗಿರುತ್ತಾನೆ. ಒಂದು ವೇಳೆ ನಮಗೆ ಪರಾಜಯವೇ ಆಗಬೇಕಾದರೂ ಈ ಶ್ರೀಕೃಷ್ಣನೇ ಕಾರಣನಾಗುತ್ತಾನೆ. ಇವನ ಇಚ್ಛೆಯಂತೆಯೇ ಎಲ್ಲವೂ ನಡೆಯುತ್ತದೆ. ನಮ್ಮ ಪ್ರಾಣಗಳು, ರಾಜ್ಯ, ಭಾವ, ಅಭಾವ, ಸುಖ, ಅಸುಖ– ಈ ಎಲ್ಲವೂ ಮಹಾನುಭಾವನಾದ ಶ್ರೀಕೃಷ್ಣನನ್ನೇ ಅವಲಂಬಿಸಿವೆ. ಧಾತೃವೂ ಮತ್ತು ವಿಧಾತೃವೂ ಇವನೇ ಆಗಿರುತ್ತಾನೆ. ನಮ್ಮ ಸಕಲಕಾರ್ಯಸಿದ್ಧಿಗಳೂ ಇವನಲ್ಲಿಯೇ ಪ್ರತಿಷ್ಠಿತವಾಗಿವೆ (ಇವನನ್ನೇ ಅವಲಂಬಿಸಿವೆ.) ಆದುದರಿಂದ ಶ್ರೀಕೃಷ್ಣನು ಯಾರನ್ನು ಸೇನಾಪತಿಯನ್ನಾಗಿ ಸೂಚಿಸುತ್ತಾನೆಯೋ ಅವನೇ ನಮ್ಮ ಸೇನಾಪತಿಯಾಗಲಿ. ವಾಗ್ಮಿಗಳಲ್ಲಿ ಶ್ರೇಷ್ಠನಾದ ಶ್ರೀಕೃಷ್ಣನು ದಯಮಾಡಿ ಸೇನಾಪತಿಯು ಯಾರಾಗಬೇಕೆಂಬುದನ್ನು ಹೇಳಿಬಿಡಲಿ. ಈಗಿನ್ನೂ ರಾತ್ರಿಯು ಕಳೆದಿರುವುದಿಲ್ಲ. ಶ್ರೀಕೃಷ್ಣನು ಸೇನಾಪತಿಯ ಸ್ಥಾನಕ್ಕೆ ಒಬ್ಬನನ್ನು ನಾಮಕರಣ ಮಾಡಿದೊಡನೆಯೇ ಶ್ರಿಕೃಷ್ಣನ ವಶವರ್ತಿಗಳಾದ ನಾವು ಆತನಿಗೇ ಪಟ್ಟಗಟ್ಟಿ,

ರಾತ್ರಿಯು ಕಳೆದು ಬೆಳಗಾದೊಡನೆಯೇ ಶಸ್ತ್ರಾಸ್ತ್ರಗಳನ್ನು ಗಂಧ-ಪುಷ್ಪಾದಿಗಳಿಂದ ಸಂಪೂಜಿಸಿ, ರಕ್ಷಾಬಂಧನವನ್ನು ಮಾಡಿಕೊಂಡು ಸ್ವಸ್ತಿವಾಚನದೊಡನೆ ರಣರಂಗಕ್ಕೆ ಪ್ರಯಾಣಮಾಡೋಣ."*

ವೈಶಂಪಾಯನರು ಜನಮೇಜಯನನ್ನು ಕುರಿತು ಹೇಳುತ್ತಾರೆ :

ಜನಮೇಜಯ! ಧೀಮಂತನಾದ ಧರ್ಮರಾಜನ ಮಾತನ್ನು ಕೇಳಿ ಪುಂಡರೀಕಾಕ್ಷನು ಧನಂಜಯನ ಕಡೆಗೊಮ್ಮೆ ನೋಡಿ ಈ ಮಾತುಗಳನ್ನು ಹೇಳಿದನು :

"ಮಹಾರಾಜ! ನೀವು (ನಿನ್ನ ಅನುಜರು) ಸೇನಾಪತ್ಯಕ್ಕೆ ಯಾರು–ಯಾರನ್ನು ಸೂಚಿಸಿರುವರೋ–ವಿಕ್ರಾಂತಯೋಧರುಗಳಾದ (ಮಹಾಪರಾಕ್ರಮದಿಂದ ಯುದ್ಧಮಾಡುವ) ಅವರೆಲ್ಲರೂ ನನ್ನ ಅಭಿಪ್ರಾಯದಲ್ಲಿ ನಿನ್ನ ಸೇನೆಯ ನಾಯಕತ್ವವನ್ನು ವಹಿಸಲು ಅರ್ಹರಾಗಿಯೇ ಇರುತ್ತಾರೆ. ಶತ್ರುಗಳನ್ನು ಪರಾಭವಗೊಳಿಸಲು ಅವರೆಲ್ಲರೂ ಸಮರ್ಥರೇ ಆಗಿರುತ್ತಾರೆ. ಭೀಕರಯುದ್ಧದಲ್ಲಿ ಇಂದ್ರನಿಗಾದರೂ ಭಯವನ್ನುಂಟುಮಾಡತಕ್ಕ ಮಹಾವೀರರಿವರು. ಹೀಗಿರುವಾಗ ಲುಬ್ಧರಾದ ಪಾಪಚೇತಸ್ಕರಾದ ಧೃತರಾಷ್ಟ್ರನ ಮಕ್ಕಳ ವಿಷಯವಾಗಿ ಹೇಳತಕ್ಕದ್ದೇನಿದೆ? (ಈ ಮಹಾಪರಾಕ್ರಮಿಗಳ ಮುಂದೆ ಧೃತರಾಷ್ಟ್ರನ ಮಕ್ಕಳು ಖಂಡಿತವಾಗಿಯೂ ನಿಂತು ಯುದ್ಧಮಾಡಲಾರರು. ಯುದ್ಧಮಾಡಿದರೂ ಅವರು ಪರಾಜಯಹೊಂದುವುದು ನಿಶ್ಚಯ.) ಯುದ್ಧವು ಸಂಭವಿಸಬಹುದೆಂಬುದನ್ನು ಊಹಿಸಿ ಅದನ್ನು ತಪ್ಪಿಸುವ ಸಲು

---

* ಈ ಸಂದರ್ಭದಲ್ಲಿ ಯುಧಿಷ್ಠಿರನು ಹೇಳಿರುವ ಮಾತುಗಳು ಮತ್ತು ತೆಗೆದುಕೊಂಡ ನಿರ್ಧಾರವು ಶ್ರೀಕೃಷ್ಣನ ಮೇಲೆ ಅವನಿಗಿದ್ದ ಮಹಾವಿಶ್ವಾಸವನ್ನು ತೋರಿಸುತ್ತದೆ. ರಾಜಕೀಯವಾಗಿಯೂ ಅವನು ಕೈಗೊಂಡ ನಿರ್ಧಾರವು ಸಮಯೋಚಿತವಾಗಿದೆ. ಭೀಮಾರ್ಜುನ-ನಕುಲ-ಸಹದೇವರು ನಾಲ್ವರನ್ನು ಸೇನಾಪತಿಯ ಪಟ್ಟಕ್ಕೆ ಸೂಚಿಸಿದರು. ಅವರೆಲ್ಲರೂ ಮಹಾರಥರಾಗಿಯೂ, ಮಹಾವೀರ್ಯರಾಗಿಯೂ ಇದ್ದವರೇ. ಒಬ್ಬರಿಗಿಂತಲೂ ಮತ್ತೊಬ್ಬರು ಯಾವುದರಲ್ಲಿಯೂ ಕಡಿಮೆಯಿರಲಿಲ್ಲ. ಪ್ರಕೃತ ಸಂದರ್ಭದಲ್ಲಿ ಒಬ್ಬರನ್ನು ಸೇನಾಪತಿಯನ್ನಾಗಿ ಆರಿಸಿಕೊಂಡರೆ ಉಳಿದ ಮೂವರಿಗೂ ಅಸಮಾಧಾನವಾಗಬಹುದು. ಅಥವಾ ಮೂವರಲ್ಲಿ ಒಬ್ಬರಿಗಾದರೂ

ವಾಗಿ ಮತ್ತು ನಿನ್ನ ಪ್ರೀತ್ಯರ್ಥವಾಗಿ ಉಭಯಪಕ್ಷಗಳ ನಡುವೆ ಶಾಂತಿಯಾಗಲೆಂದು ನಾನು ಮಹಾಪ್ರಯತ್ನವನ್ನೇ ಮಾಡಿದೆನು. ಆದರದು ವ್ಯರ್ಥವಾಯಿತು. ನಾವು ಸಂಧಾನಕ್ಕಾಗಿ ಪ್ರಯತ್ನಮಾಡಿದುದರಿಂದ ಧರ್ಮದ ಋಣದಿಂದಲೂ ಮುಕ್ತರಾಗಿರುತ್ತೇವೆ. ವಿಚಾರವಾದಿಗಳ ದೋಷಾರೋಪಣೆಗಳಿಗೂ ನಾವೀಗ ಭಯಪಡಬೇಕಾಗಿಲ್ಲ.

(ಯುದ್ಧಕ್ಕೆ ಮೊದಲು ಶಾಂತಿಗಾಗಿ ಸಂಪೂರ್ಣವಾಗಿ ಪ್ರಯತ್ನಿಸುವುದು ಧರ್ಮ. ಶಾಂತಿಸಂಧಾನಕ್ಕೆ ಪ್ರಯತ್ನಿಸದೇ ಯುದ್ಧಮಾಡಲು ಹೋಗುವುದು ಅಥವಾ ಆಕಸ್ಮಿಕವಾಗಿ ಶತ್ರುವಿನ ಮೇಲೆ ಬೀಳುವುದು ಅಧರ್ಮವೆನಿಸುತ್ತದೆ. ಇದೇ ರೀತಿಯಲ್ಲಿ ನಾವು ಧರ್ಮಮಾರ್ಗದಲ್ಲಿ ನಡೆದು ಧರ್ಮದ ಋಣವನ್ನು ತೀರಿಸಿಬಿಟ್ಟಿದ್ದೇವೆ. ನಾವು ಶಾಂತಿಸಂಧಾನಕ್ಕೆ ಪ್ರಯತ್ನಿಸದೇ ಇದ್ದಿದ್ದರೆ ವಿಚಾರವಂತರಾದವರು ನಮ್ಮನ್ನು ದೋಷಿಗಳೆಂದು ಹೇಳುತ್ತಿದ್ದರು. 'ಧರ್ಮಾತ್ಮರೆನಿಸಿಕೊಂಡವರು ಧರ್ಮಮಾರ್ಗದಲ್ಲಿ ನಡೆಯಲಿಲ್ಲ. ಮೊದಲು ಶಾಂತಿಗಾಗಿ ಪ್ರಯತ್ನಿಸಬೇಕಾಗಿತ್ತು'–ಎಂದು ನಮ್ಮ ಮೇಲೆ ದೋಷಾರೋಪಣೆಯನ್ನು ಮಾಡುತ್ತಿದ್ದರು. ಶಾಂತಿಸಂಧಾನದ ಪ್ರಯತ್ನ ವನ್ನು ಮಾಡಿದುದರಿಂದ ನಾವು ವಿಚಾರವಂತರ ಅಂತಹ ನಿಂದನೆಗೂ ಪಾತ್ರರಾಗುವುದಿಲ್ಲ. ಎರಡು ಕಾರ್ಯಗಳನ್ನೂ ನಾವು ಈ ಶಾಂತಿಪ್ರಯತ್ನದಿಂದ ಸಾಧಿಸಿದಂತಾಗಿದೆ.)

ಧೃತರಾಷ್ಟ್ರನ ಮಗನಾದ ದುರ್ಯೋಧನನು ಯುದ್ಧದ ವಿಷಯದಲ್ಲಿ ಬಹಳ ಆತುರನಾಗಿದ್ದಾನೆ. ಆ ಮೂರ್ಖನು ಯದ್ಯಪಿ ಅಸ್ತ್ರವಿದ್ಯೆಯಲ್ಲಿ

---

ಅಸಮಾಧಾನವಾಗಬಹುದು. ಆದುದರಿಂದ ಸೇನಾಪತಿಯ ನಾಮಕರಣದ ವಿಷಯವನ್ನು ಶ್ರೀಕೃಷ್ಣನಿಗೆ ಬಿಟ್ಟುದರಿಂದ ಯಾರೊಬ್ಬರಿಗೂ ಅಸಮಾಧಾನವುಂಟಾಗಲಾರದು. ಏಕೆಂದರೆ : ಶ್ರೀಕೃಷ್ಣನು ಮಾನವಾತೀತನೆಂಬುದು ಎಲ್ಲರಿಗೂ ತಿಳಿದಿತ್ತು. ಅವನು ಮುಂದೇನಾಗು ವುದೆಂಬುದನ್ನು ನಿರ್ಧರಿಸಿಯೇ ಕಾರ್ಯಮಾಡುವನೆಂಬ ಭರವಸೆಯೂ ಎಲ್ಲ ರಾಜರಿಗೂ ಇದ್ದಿತು. ಶ್ರೀಕೃಷ್ಣನು ಹೇಳಿದಂತೆ ಎಲ್ಲರೂ ನಡೆಯಲು ಸಿದ್ಧರಾಗಿದ್ದರು. ಆದುದರಿಂದ ಸೇನಾಪತಿಯ ನಾಮಕರಣಮಾಡುವುದನ್ನು ಶ್ರೀಕೃಷ್ಣನಿಗೇ ಒಪ್ಪಿಸಿದುದು ರಾಜಕೀಯ ದೃಷ್ಟಿಯಿಂದಲೂ ಅತಿಮಹತ್ವದ್ದಾಗಿದೆ.

ವಿಚಕ್ಷಣನಲ್ಲದಿದ್ದರೂ ತಾನು ಅಸ್ತ್ರವಿದ್ಯಾಪಾರಂಗತನೆಂದೇ ಭಾವಿಸಿ ಕೊಂಡುಬಿಟ್ಟಿದ್ದಾನೆ. ವಸ್ತುತಃ ಅವನು ದುರ್ಬಲನಾಗಿದ್ದರೂ ತಾನು ಮಹಾಬಲಿಷ್ಠನಾಗಿರುವೆನೆಂದು ಗರ್ವಿತನಾಗಿದ್ದಾನೆ. ಆದುದರಿಂದ ಕೇವಲ ದಂಡೋಪಾಯದಿಂದ ಮಾತ್ರವೇ ಅವನನ್ನು ಬಗ್ಗಿಸಲು ಸಾಧ್ಯವಾಗುವುದು. ಅವರನ್ನು ಸಂಹಾರಮಾಡಲು ನಮಗೆ ಸಾಧ್ಯವಿದೆ. ಯುಧಿಷ್ಠಿರ! ಆದುದರಿಂದ ಸೈನ್ಯವನ್ನು ವ್ಯವಸ್ಥಿತವಾಗಿ ಯುದ್ಧಕ್ಕೆ ಸಜ್ಜುಗೊಳಿಸು. ಧೃತರಾಷ್ಟ್ರನ ಮಕ್ಕಳು ಧನಂಜಯನನ್ನು ಎದುರಿಸಿ ನಿಲ್ಲಲು ಸಮರ್ಥರಲ್ಲ. ಕ್ರುದ್ಧನಾದ ಭೀಮಸೇನನನ್ನೂ, ಯಮಳರಾದ ನಕುಲ-ಸಹದೇವರನ್ನೂ, ಸಾತ್ಯಕಿಸಹಿತ ನಾದ ಅಮರ್ಷಣನಾದ ಧೃಷ್ಟದ್ಯುಮ್ನನನ್ನೂ, ಅಭಿಮನ್ಯುವನ್ನೂ, ದ್ರೌಪದಿಯ ಐವರು ಮಕ್ಕಳನ್ನೂ, ವಿರಾಟ-ದ್ರುಪದರನ್ನೂ, ಭೀಮ ವಿಕ್ರಮರಾದ ಅಕ್ಷೌಹಿಣೀಪತಿಗಳಾದ ರಾಜರನ್ನೂ–ಧೃತರಾಷ್ಟ್ರನ ಮಕ್ಕಳು ಎದುರಿಸಿ ನಿಂತು ಯುದ್ಧಮಾಡಲಾರರು. ಅತ್ಯಂತಸಾರಯುಕ್ತವಾದ (ಶಕ್ತಿಯುಕ್ತವಾದ), ದುರ್ಗಮವಾದ ಮತ್ತು ದುರ್ಧರ್ಷವಾದ ನಮ್ಮ ಸೇನೆಯು ಯುದ್ಧದಲ್ಲಿ ದುರ್ಯೋಧನನ ಸೇನೆಯನ್ನು ಸಂಹರಿಸುತ್ತದೆ. ಇದರಲ್ಲಾವ ಸಂಶಯವೂ ಇಲ್ಲ, ಧರ್ಮಜ! ಸೇನಾಪತಿಯ ವಿಷಯವಾಗಿ ಹೇಳುವುದಾದರೆ ಈ ಸಮಯದಲ್ಲಿ :

**ಧೃಷ್ಟದ್ಯುಮ್ನಮಹಂ ಮನ್ಯೇ ಸೇನಾಪತಿಮರಿಂದಮ ॥೪೯॥**

ಅರಿಂದಮನೇ! ಧೃಷ್ಟದ್ಯುಮ್ನನನ್ನು ಸೇನಾಪತಿಯನ್ನಾಗಿ ಮಾಡಿಕೊಳ್ಳುವುದು ಉಚಿತವೆಂಬುದು ನನ್ನ ಅಭಿಪ್ರಾಯವಾಗಿದೆ."

ಜನಮೇಜಯ! ಶ್ರೀಕೃಷ್ಣನು ಹೀಗೆ ಹೇಳಲಾಗಿ ನರಶ್ರೇಷ್ಠರಾದ ಪಾಂಡವರೂ ಮತ್ತು ಅಲ್ಲಿ ನೆರೆದಿದ್ದ ರಾಜರೂ ಸಂಪ್ರಹೃಷ್ಟರಾದರು. ಸಂಪ್ರಹೃಷ್ಟಮನಸ್ಕರಾದ ಆ ರಾಜರ ಮಧ್ಯದಿಂದ ಮಹಾಕಲ-ಕಲನಿನಾದವು ಉದ್ಭೂತವಾಯಿತು (ಎಲ್ಲರೂ ಜಯಘೋಷಮಾಡತೊಡಗಿದರು). ರಣರಂಗಕ್ಕೆ ಹೋಗಲು ಅವಸರಪಡುತ್ತಿದ್ದ ಮತ್ತು ಉತ್ಸಾಹದಿಂದ ಮುಂದೆ ಮುಂದೆ ನಡೆದುಹೋಗುತ್ತಿದ್ದ ಸೈನಿಕರಿಗೆ 'ಯುದ್ಧಕ್ಕೆ ಸಿದ್ಧರಾಗಿ ನಿಲ್ಲಿರಿ' ಎಂಬ ಆಜ್ಞೆಯು ಕೊಡಲ್ಪಟ್ಟಿತು. ಎಲ್ಲ ಕಡೆಗಳಲ್ಲಿಯೂ ಕುದುರೆಗಳ, ಆನೆ

ಗಳ ಮತ್ತು ರಥಗಳ ಸಂಚಲನಶಬ್ದವು ಕೇಳಿಬರುತ್ತಿದ್ದಿತು. ಎಲ್ಲ ಕಡೆಗಳಲ್ಲಿಯೂ ಶಂಖ-ದುಂದುಭಿಗಳ ಘೋರವಾದ ನಿನಾದವು ಕೇಳಿಬರುತ್ತಿದ್ದಿತು. ರಥ-ಪತ್ತಿ (ಕಾಲಾಳು)– ಗಜಸೈನ್ಯಗಳಿಂದ ತುಂಬಿಹೋಗಿದ್ದ ಭಯಂಕರವಾಗಿ ಕಾಣುತ್ತಿದ್ದ ಸೈನ್ಯಸಮಾಗಮವು ದೊಡ್ಡ-ದೊಡ್ಡದಾದ ಅಲೆಗಳಿಂದ ಕೂಡಿದ ಅಲ್ಲೋಲ-ಕಲ್ಲೋಲವಾದ ಸಾಗರದಂತೆಯೇ ಕಾಣುತ್ತಿದ್ದಿತು. ಪಾಂಡವರು ಸಸೈನ್ಯರಾಗಿ ರಣರಂಗಕ್ಕೆ ಹೊರಟಿದ್ದ ಆ ಸಮಯದಲ್ಲಿ ಕೆಲವರು ಯುದ್ಧರಂಗದ ಕಡೆಗೆ ವೇಗವಾಗಿ ಧಾವಿಸುತ್ತಿದ್ದರು ; ಮತ್ತೆ ಕೆಲವರು ಹಿಂದುಳಿದವರನ್ನು ಮುಂದೆ ಬರುವಂತೆ ಗಟ್ಟಿಯಾಗಿ ಆಹ್ವಾನಿಸುತ್ತಿದ್ದರು. ಮತ್ತೆ ಕೆಲವರು ಕವಚಗಳನ್ನು ತೊಟ್ಟುಕೊಳ್ಳುತ್ತಿದ್ದರು. ಆ ಸಮಯದಲ್ಲಿ ಎದುರಿಸಲು ಅಸಾಧ್ಯವಾದ ಪಾಂಡವವಾಹಿನಿಯು ಪೂರ್ಣಪ್ರವಾಹದಿಂದ ಕೂಡಿದ ಗಂಗಾನದಿಯಂತೆಯೇ ಕಾಣುತ್ತಿದ್ದಿತು. ಸೇನೆಯ ಅಗ್ರಭಾಗದಲ್ಲಿ ಭೀಮಸೇನ, ಕವಚಧಾರಿಗಳಾಗಿದ್ದ ನಕುಲ-ಸಹದೇವರು, ಸುಭದ್ರೆಯ ಮಗನಾದ ಅಭಿಮನ್ಯು, ದ್ರೌಪದಿಯ ಐವರು ಮಕ್ಕಳು, ದ್ರುಪದನ ಮಗನಾದ ಧೃಷ್ಟದ್ಯುಮ್ನ, ಪ್ರಭದ್ರಕರು, ಪಾಂಚಾಲದೇಶದ ಕ್ಷತ್ರಿಯವೀರರು–ಇವರುಗಳಿದ್ದರು. ಅವರೆಲ್ಲರೂ ಭೀಮಸೇನನನ್ನು ಮುಂದಾಳನ್ನಾಗಿ ಮಾಡಿಕೊಂಡು ರಣರಂಗಕ್ಕೆ ಪ್ರಯಾಣಮಾಡುತ್ತಿದ್ದರು. ಹೃಷ್ಟರಾದ ಸೈನಿಕರು ರಣಾಂಗಣದೆಡೆಗೆ ಹೋಗುತ್ತಿದ್ದಾಗ ಪೂರ್ಣಿಮೆಯ ದಿವಸದಲ್ಲಿ ಸಮುದ್ರವು ಉಕ್ಕಿದಾಗ ಮಹಾಶಬ್ದವಾಗುವಂತೆ ಮಹಾನಿನಾದವುಂಟಾಯಿತು. ಭೀಕರವಾದ ಆ ರಣಘೋಷವು ಸ್ವರ್ಗಕ್ಕೂ ಕೇಳುತ್ತಿರುವುದೋ ಎಂಬಂತಿದ್ದಿತು. ಪ್ರಹೃಷ್ಟರಾದ, ಕವಚಿಗಳಾದ, ಶತ್ರುಪಕ್ಷದ ಸೈನ್ಯವನ್ನು ಸೀಳಿಹಾಕುವ ಸಾಮರ್ಥ್ಯವಿದ್ದ ಸೈನಿಕರು ರಣರಂಗಕ್ಕೆ ಅಭಿಮುಖವಾಗಿ ಹೋಗುತ್ತಿದ್ದರು. ಅವರ ಮಧ್ಯಭಾಗದಲ್ಲಿ ಕುಂತೀಪುತ್ರನಾದ ಯುಧಿಷ್ಠಿರನೂ ರಥದಲ್ಲಿ ಕುಳಿತು ರಣಾಂಗಣಕ್ಕೆ ಹೋಗುತ್ತಿದ್ದನು. ಯುದ್ಧಸಾಮಗ್ರಿಗಳನ್ನು ಹೊತ್ತ ಬಂಡಿಗಳು, ಚಿಲ್ಲರೇ ಅಂಗಡಿಯ ಸಾಮಾನುಗಳನ್ನು ತುಂಬಿದ ಬಂಡಿಗಳು, ( ವೇಶ್ಯಾಸ್ತ್ರೀಯರಿಗೆ ವಾಸಕ್ಕೆ ಯೋಗ್ಯವಾದ ) ಗುಡಾರಗಳ ಸಾಮಗ್ರಿಗಳನ್ನು ತುಂಬಿದ ಗಾಡಿಗಳು, ವಾಹನಗಳನ್ನು ಸಾಗಿಸಲು ಯೋಗ್ಯವಾದ ಹೆಚ್ಚು ಭಾರವನ್ನು ಹೊರುವ

ಗಾಡಿಗಳು, ಖಜಾನೆ, ಯಂತ್ರದ ಮೂಲಕವಾಗಿ ಬಿಡುವ ಶತಘ್ನಿಯೇ ಮೊದಲಾದ ಆಯುಧಗಳು, ಶಸ್ತ್ರಚಿಕಿತ್ಸಾಕುಶಲರಾದ ವೈದ್ಯರು–ಇವರೆಲ್ಲರೂ ಸೈನ್ಯದ ಹಿಂದೆ ಸಾಲುಗಟ್ಟಿ ಹೊರಟರು. ಸಾರವಿಲ್ಲದ ಅಲ್ಪಬಲರನ್ನೂ, ಕೃಶರಾಗಿಯೂ – ದುರ್ಬಲರಾಗಿಯೂ ಇರುವವರನ್ನೂ ಮತ್ತು ಪರಿಚಾರಕರನ್ನೂ ಯುಧಿಷ್ಠಿರರಾಜನು ಕಲೆಹಾಕಿಕೊಂಡು ಉಪಪ್ಲಾವ್ಯದಿಂದ ರಣಾಂಗಣಕ್ಕೆ ಪ್ರಯಾಣಮಾಡಿದನು. ಪಾಂಚಾಲರಾಜಪುತ್ರಿಯಾದ, ಸತ್ಯವಾದಿನಿಯಾದ ದ್ರೌಪದಿಯು–ಸೇವಕರಿಂದಲೂ ಸೇವಕಿಯರಿಂದಲೂ ಪರಿವೃತಳಾಗಿ, ಸ್ತ್ರೀಯರೊಡನೆ (ಸಖೀಜನರೊಡನೆ) ಉಪಪ್ಲಾವ್ಯನಗರದಲ್ಲಿಯೇ ಉಳಿದುಕೊಂಡಳು. ಸುತ್ತಲೂ ಪಹರೆ ತಿರುಗುತ್ತಿರುವ ಮತ್ತು ನಿಂತ ಸ್ಥಳದಲ್ಲೇ ನಿಂತಿರುವ ಸೈನ್ಯದ ತುಕ್ಕಡಿಗಳಿಗೆ ಬೊಕ್ಕಸದ ಮತ್ತು ಅಂತಃಪುರದ ರಕ್ಷಣಾಭಾರವನ್ನೊಪ್ಪಿಸಿ, ಪಾಂಡುನಂದನರು ದೊಡ್ಡದಾದ ಸೈನ್ಯದೊಡನೆ ರಣರಂಗಕ್ಕೆ ಪ್ರಯಾಣಮಾಡಿದರು. ಯುದ್ಧಕ್ಕಾಗಿ ಪ್ರಯಾಣ ಮಾಡುತ್ತಿದ್ದಾಗ ಪಾಂಡವರು ಬ್ರಾಹ್ಮಣರಿಗೆ ಹಸುಗಳನ್ನೂ ಹಿರಣ್ಯವನ್ನೂ ದಾನವಾಗಿ ಕೊಟ್ಟರು. ಬ್ರಾಹ್ಮಣರೆಲ್ಲರೂ ಪಾಂಡವರನ್ನು ಸುತ್ತುವರಿದು ನಿಂತು ಅವರನ್ನು ನಾನಾಪ್ರಕಾರವಾಗಿ ಸ್ತೋತ್ರಮಾಡಿ ಆಶೀರ್ವದಿಸಿದರು. ಪಾಂಡವರು ನಾನಾವಿಧವಾದ ಮಣಿಗಳಿಂದ ಅಲಂಕೃತವಾದ ರಥಗಳಲ್ಲಿ ಕುಳಿತು ಪ್ರಯಾಣಮಾಡಿದರು. ಅನಂತರ ಐವರು ಕೇಕಯರಾಜಕುಮಾರರು, ಧೃಷ್ಟಕೇತು, ಕಾಶಿರಾಜನ ಮಗನಾದ ಅಭಿಭೂ ಎಂಬುವನು, ಶ್ರೇಣಿಮಂತ, ವಸುದಾನ, ಅಪರಾಜಿತನಾದ ಶಿಖಂಡೀ–ಇವರೆಲ್ಲರೂ ಹೃಷ್ಟರಾಗಿ, ತುಷ್ಟರಾಗಿ, ಕವಚಧಾರಿಗಳಾಗಿ, ಸಶಸ್ತ್ರರಾಗಿ, ಕನಕಾಂಗದ-ಕೇಯೂರಾದಿಗಳಿಂದ ಸಮಲಂಕೃತರಾಗಿ ಯುಧಿಷ್ಠಿರನನ್ನಾವರಿಸಿ ಅವನನ್ನನುಸರಿಸಿ ರಣರಂಗಕ್ಕೆ ಪ್ರಯಾಣಮಾಡಿದರು. ಸೇನೆಯ ಹಿಂದಿನ ಅರ್ಧಭಾಗದಲ್ಲಿ ವಿರಾಟರಾಜ, ಸೋಮಕವಂಶೀಯನಾದ ದ್ರುಪದನ ಮಗನಾದ ಸೌಮಕಿ, ಸುಧರ್ಮಾ, ಕುಂತಿಭೋಜ ಮತ್ತು ಧೃಷ್ಟದ್ಯುಮ್ನನ ಮಕ್ಕಳು–ಇವರೆಲ್ಲರೂ ರಥಗಳಲ್ಲಿ ಕುಳಿತು ಪ್ರಯಾಣಮಾಡಿದರು. ಅವರನ್ನನುಸರಿಸಿ ನಲವತ್ತು ಸಾವಿರ ರಥಗಳೂ, ರಥಗಳಿಗೆ ಐದುಪಟ್ಟು ಹೆಚ್ಚಾಗಿ ಎಂದರೆ ಎರಡು ಲಕ್ಷ

ಕುದುರೆಗಳೂ, ಹತ್ತುಪಟ್ಟು ಹೆಚ್ಚಾಗಿ (ನಾಲ್ಕು ಲಕ್ಷ) ಕಾಲಾಳುಗಳೂ, ಅರುವತ್ತುಸಾವಿರ ಆನೆಗಳೂ ಹೋಗುತ್ತಿದ್ದುವು. ಅನಾಧೃಷ್ಟಿ, ಚೇಕಿತಾನ, ಧೃಷ್ಟಕೇತು, ಸಾತ್ಯಕಿ–ಇವರು ವಾಸುದೇವ-ಧನಂಜಯರನ್ನು ಸುತ್ತುಗಟ್ಟಿ ಪ್ರಯಾಣಮಾಡಿದರು. ಸುವ್ಯವಸ್ಥಿತವಾದ ಸೇನೆಯೊಡನೆ ಕುರುಕ್ಷೇತ್ರವನ್ನು ಸೇರಿದ, ಶತ್ರುಗಳನ್ನು ಪ್ರಹರಿಸುವ ಸಾಮರ್ಥ್ಯವುಳ್ಳ ಪಾಂಡವರು-ಗುಟುರು ಹಾಕುವ ಗೂಳಿಗಳಂತೆ ಕಾಣುತ್ತಿದ್ದರು. ಅರಿಂದಮರಾದ ಆ ವೀರರು ಕುರುಕ್ಷೇತ್ರವನ್ನು ಪ್ರವೇಶಿಸಿದೊಡನೆಯೇ ತಮ್ಮ-ತಮ್ಮ ಶಂಖಗಳನ್ನು ಗಟ್ಟಿಯಾಗಿ ಊದಿದರು. ಅಂತೆಯೇ ವಾಸುದೇವ-ಧನಂಜಯರೂ ಶಂಖಧ್ವನಿಗಳನ್ನು ಮಾಡಿದರು. ಸಿಡಿಲಿನ ಶಬ್ದದಂತೆಯೇ ಇದ್ದ ಶ್ರೀಕೃಷ್ಣನ ಪಾಂಚಜನ್ಯದ ನಿರ್ಘೋಷವನ್ನು ಕೇಳಿ ಕುರುಕ್ಷೇತ್ರವನ್ನಾವರಿಸಿದ್ದ ಪಾಂಡವರ ಸರ್ವಸೈನ್ಯಗಳೂ ಹರ್ಷದಿಂದ ರೋಮಾಂಚಿತವಾದುವು. ಶಂಖ ಮತ್ತು ದುಂದುಭಿಗಳ ನಿನಾದದೊಡನೆ ಸಮ್ಮಿಶ್ರಿತವಾದ ವೀರರ ಸಿಂಹನಾದಗಳು ಪೃಥ್ವಿಯನ್ನೂ, ಅಂತರಿಕ್ಷವನ್ನೂ ಮತ್ತು ಚತುಸ್ಸಾಗರಗಳನ್ನೂ ವ್ಯಾಪಿಸಿ ಪ್ರತಿಧ್ವನಿತವಾದುವು.

ಂ೫೧ನೆಯ ಅಧ್ಯಾಯವು ಮುಗಿಯಿತು.

೧೫೨ನೆಯ ಅಧ್ಯಾಯ ಸೈನ್ಯನಿರ್ಯಾಣಪರ್ವ (ಮುಂದುವರಿದಿದೆ)

## ಕುರುಕ್ಷೇತ್ರದಲ್ಲಿ ಪಾಂಡವರ ಶಿಬಿರಗಳ ನಿರ್ಮಾಣ

ವೈಶಂಪಾಯನರು ಜನಮೇಜಯನನ್ನು ಕುರಿತು ಹೇಳುತ್ತಾರೆ :

**ತತೋ ದೇಶೇ ಸಮೇ ಸ್ನಿಗ್ಧೇ ಪ್ರಭೂತಯವಸೇನ್ಧನೇ ।**
**ನಿವೇಶಯಾಮಾಸ ತದಾ ಸೇನಾಂ ರಾಜಾ ಯುಧಿಷ್ಠಿರಃ ॥೧॥**

ಜನಮೇಜಯ! ಅನಂತರದಲ್ಲಿ ಯುಧಿಷ್ಠಿರನು ಸಮವಾಗಿರತಕ್ಕ, ನುಣುಪಾಗಿರತಕ್ಕ, ತೃಣ-ಕಾಷ್ಠ-ಜಲಸಮೃದ್ಧವಾದ ಪ್ರದೇಶದಲ್ಲಿ ತನ್ನ ಸೇನೆಯನ್ನು ನಿಲ್ಲಿಸಿದನು. ಶ್ಮಶಾನಗಳನ್ನೂ, ದೇವಸ್ಥಾನಗಳನ್ನೂ, ಮಹರ್ಷಿಗಳ ಆಶ್ರಮಪ್ರದೇಶಗಳನ್ನೂ, ತೀರ್ಥಗಳನ್ನೂ ಮತ್ತು ಸಿದ್ಧಕ್ಷೇತ್ರಗಳನ್ನೂ

ಬಿಟ್ಟು (ಅವುಗಳಿಗೆ ಬಹುದೂರದಲ್ಲಿ) ಜೌಗುಭೂಮಿಯಿಲ್ಲದ, ಸುಮನೋಹರವಾದ, ಪರಿಶುದ್ಧವಾದ, ಪುಣ್ಯತಮವಾದ ಪ್ರದೇಶದಲ್ಲಿ ಮಹಾಮತಿಯಾದ ಯುಧಿಷ್ಠಿರನು ತನ್ನ ಸೈನ್ಯಗಳನ್ನು ನಿಲ್ಲಿಸಿದನು. ಸಮಸ್ತವಾಹನಗಳೂ ಸ್ವಲ್ಪಕಾಲ ವಿಶ್ರಾಂತಿಸುಖವನ್ನು ಅನುಭವಿಸಿದುವು. ಧರ್ಮರಾಜನೂ ಸ್ವಲ್ಪಕಾಲ ವಿಶ್ರಾಂತಿಯನ್ನು ಪಡೆದನು. ಅನಂತರದಲ್ಲಿ ಸುಖಿಯಾದ ಯುಧಿಷ್ಠಿರನು ಮೇಲೆದ್ದು, ಲಕ್ಷೋಪಲಕ್ಷ ಪೃಥಿವೀಪಾಲರಿಂದ ಪರಿವೃತನಾಗಿ ಕುರುಕ್ಷೇತ್ರದ ಸುತ್ತಲೂ ಪರ್ಯಟನಮಾಡಿದನು. ಶ್ರೀಕೇಶವನು ಪಾರ್ಥನೊಡನೆ ದುರ್ಯೋಧನನ ಸೈನ್ಯದ ನೂರಾರು ತುಕ್ಕಡಿಗಳನ್ನು ಅಲ್ಲಿಂದ ಓಡಿಸಿ ಕುರುಕ್ಷೇತ್ರದ ಸುತ್ತಲೂ ಪರ್ಯಟನಮಾಡಲು ಉಪಕ್ರಮಿಸಿದನು. ದ್ರುಪದನ ಮಗನಾದ ಧೃಷ್ಟದ್ಯುಮ್ನ ಮತ್ತು ಉದಾರನಾದ, ಮಹಾರಥಿಯಾದ, ಸತ್ಯಕನ ಮಗನಾದ, ಪ್ರತಾಪಶಾಲಿಯಾದ ಯುಯುಧಾನ–ಇವರು ಶಿಬಿರ ನಿರ್ಮಾಣಕ್ಕಾಗಿ ಭೂಮಿಯನ್ನು ಅಳೆದರು. ಕೇಶವನು ಕುರುಕ್ಷೇತ್ರದಲ್ಲಿದ್ದ ಪವಿತ್ರವಾದ, ಅನೇಕತೀರ್ಥಗಳಿಂದ ಕೂಡಿದ್ದ, ಪರಿಶುದ್ಧವಾದ ನೀರಿನಿಂದ ಕೂಡಿದ್ದ, ಕಲ್ಲಿನಿಂದಲೂ ಕೆಸರಿನಿಂದಲೂ ವರ್ಜಿತವಾಗಿದ್ದ ಹಿರಣ್ವತೀ ಎಂಬ ನದಿಯ ಬಳಿಗೆ ಹೋಗಿ ಅದರ ಸಮೀಪದಲ್ಲಿ ಕಂದಕವೊಂದನ್ನು ತೋಡಿಸಿದನು. ಆ ಕಂದಕದ ರಕ್ಷಣಾರ್ಥವಾಗಿ ಪಹರೆಯವರನ್ನಿಟ್ಟುದುದಲ್ಲದೇ ಸೈನ್ಯದ ಒಂದು ತುಕ್ಕಡಿಯನ್ನೂ ಅಲ್ಲಿಡಿಸಿದನು. ಮಹಾತ್ಮರಾದ ಪಾಂಡವರು ಉಳಿದುಕೊಳ್ಳಲು ಸಕಲಸಂಭಾರಗಳಿಂದಲೂ ಸುಸಜ್ಜಿತವಾದ ಶಿಬಿರಗಳು ಹೇಗೆ ನಿರ್ಮಿತವಾದುವೋ ಅದೇ ರೀತಿಯಲ್ಲಿ ಕೇಶವನು ಇತರ ರಾಜರ ಬಿಡಾರಗಳನ್ನೂ ಸೇವಕರ ಮುಖೇನ ಸಿದ್ಧಪಡಿಸಿದನು. (ಪಾಂಡವರ ಶಿಬಿರಗಳಿಗೂ ಇತರ ರಾಜರ ಶಿಬಿರಗಳಿಗೂ ಯಾವ ವಿಧವಾದ ತಾರತಮ್ಯವೂ ಇರಲಿಲ್ಲ.) ಜನಮೇಜಯ! ಆ ಸಮಯದಲ್ಲಿ ಪಾಂಡವರಿಗಾಗಿ ಯುದ್ಧಮಾಡಲು ಆಗಮಿಸಿದ್ದ ರಾಜರು ಇಳಿದುಕೊಳ್ಳುವುದಕ್ಕಾಗಿ ಬಹುಮೂಲ್ಯವಾದ, ಇತರರಿಂದ ಆಕ್ರಮಿಸಲು ಅಸಾಧ್ಯವಾದ ನೂರಾರು-ಸಾವಿರಾರು ಶಿಬಿರಗಳು ಪ್ರತ್ಯೇಕ-ಪ್ರತ್ಯೇಕವಾಗಿ ನಿರ್ಮಿತವಾದುವು. ಪ್ರತಿಯೊಂದು ಶಿಬಿರದಲ್ಲಿಯೂ ಜಲ-ಕಾಷ್ಠ ಸಮೃದ್ಧಿಯಿದ್ದಿತಲ್ಲದೇ ಪ್ರತಿಯೊಂದು ಶಿಬಿರವೂ ಅನ್ನ-ಪಾನ-ಲೇಹ್ಯ-

ಚೋಷ್ಯ-ಭಕ್ಷ್ಯ-ಭೋಜ್ಯಾದಿಗಳಿಂದ ಸಮೃದ್ಧವಾಗಿದ್ದಿತು. ಆ ಶಿಬಿರಗಳು ನಿಶ್ಚಯವಾಗಿಯೂ ಭೂಮಿಯ ಮೇಲೆ ಬಂದು ಕುಳಿತಿರುವ ದೇವವಿಮಾನಗಳಂತೆಯೇ ಶೋಭಾಯಮಾನವಾಗಿ ಕಾಣುತ್ತಿದ್ದುವು. ಯುಧಿಷ್ಠಿರನ ಪರಿವಾರದಲ್ಲಿ ವೇತನವನ್ನು ಪಡೆಯುತ್ತಿದ್ದ ಪ್ರಾಜ್ಞರಾದ ನೂರಾರು ಶಿಲ್ಪಿಗಳಿದ್ದರು. ಸರ್ವೋಪಕರಣಗಳನ್ನೂ ಹೊಂದಿದ್ದ ವೈದ್ಯಶಾಸ್ತ್ರವಿಶಾರದರಾದ ನೂರಾರು ಚಿಕಿತ್ಸಕರೂ ಇದ್ದರು. ಹಲವಾರು ಶಿಬಿರಗಳಲ್ಲಿ ಮೌರ್ವೀ, ಧನುಸ್ಸು, ಕವಚಗಳು, ಶಸ್ತ್ರಗಳು, ಜೇನು, ತುಪ್ಪ, ರಾಳದ ಧೂಳು (ಸುಗಂಧದ್ರವ್ಯ) ಇವುಗಳು ಪರ್ವತೋಪಮವಾಗಿ ಇಡಲ್ಪಟ್ಟಿದ್ದುವು. ಪ್ರತಿಯೊಂದು ಶಿಬಿರದಲ್ಲಿಯೂ ಯುಧಿಷ್ಠಿರನು ಸಮೃದ್ಧ ವಾದ ಜಲ, ಒಳ್ಳೆಯ ಹುಲ್ಲು, ಭತ್ತದ ಹೊಟ್ಟು, ಬೆಂಕಿ–ಇವುಗಳನ್ನು ಇಡಿಸಿದ್ದನು. ಹಲವಾರು ಶಿಬಿರಗಳಲ್ಲಿ ದೊಡ್ಡ-ದೊಡ್ಡ ಯಂತ್ರಗಳು, ನಾರಾಚಗಳು (ಆರ್ಭಟಿಸುವ ಬಾಣಗಳು), ತೋಮರಗಳು, ಈಟಿಗಳು, ಪರಶ್ವಧಗಳು (ಗಂಡುಗೊಡಲಿಗಳು), ಧನುಸ್ಸುಗಳು, ಕವಚಗಳು, ಒರೆಯೊಡನಿದ್ದ ಬಾಗುಕತ್ತಿಗಳು ತುಂಬಿದ್ದುವು. ಯುಧಿಷ್ಠಿರನ ಸೈನ್ಯದಲ್ಲಿ ಶತಸಹಸ್ರಗಜಗಳನ್ನು ಅಥವಾ ಗಜಸೈನ್ಯಗಳನ್ನು ಎದುರಿಸಿ ಯುದ್ಧಮಾಡಲು ಸಮರ್ಥವಾದ ಆನೆಗಳಿದ್ದುವು. ಅವುಗಳಿಗೆ ಮೊನಚಾದ ಲೋಹದ ಮುಳ್ಳುಗಳಿಂದ ಕೂಡಿದ ಕವಚಗಳನ್ನು ಹೊದ್ದಿಸಲಾಗಿತ್ತು. ಆದುದರಿಂದ ಅವುಗಳ ಸ್ಪರ್ಶಮಾತ್ರದಿಂದಲೇ ಎದುರಾಳಿಗೆ ವೇದನೆಯಾಗುತ್ತಿದ್ದಿತು. ಅಂತಹ ಆನೆಗಳು ಅಲ್ಲಿ ಪರ್ವತೋಪಮವಾಗಿ ಕಾಣುತ್ತಿದ್ದುವು. ಪಾಂಡವರು ಕೌರವರೊಡನೆ ಯುದ್ಧಮಾಡುವ ಸಲುವಾಗಿ ಕುರುಕ್ಷೇತ್ರದಲ್ಲಿ ಬಿಡಾರಮಾಡಿದ್ದಾರೆಂಬ ವಾರ್ತೆಯನ್ನು ಕೇಳುತ್ತಲೇ ಮಿತ್ರರಾಜರು ಸಸೈನ್ಯರಾಗಿ ಸವಾಹನರಾಗಿ ಪಾಂಡವರಿದ್ದೆಡೆಗೆ ಧಾವಿಸಿ ಬಂದರು. ಪಾಂಡವರ ಸಾಹಾಯ್ಯಕ್ಕೆಂದು ಆಗಮಿಸಿದ್ದ ರಾಜರೆಲ್ಲರೂ ಬ್ರಹ್ಮಚರ್ಯವ್ರತವನ್ನು ಪಾಲನೆ ಮಾಡುತ್ತಿದ್ದರು. ಅನೇಕ ಯಜ್ಞ-ಯಾಗಾದಿಗಳನ್ನು ಮಾಡಿ ಸೋಮಪಾನ ಮಾಡಿದವರಾಗಿದ್ದರು. ಯಜ್ಞಗಳಲ್ಲಿ ಹೇರಳವಾದ ದಾನ-ದಕ್ಷಿಣೆಗಳನ್ನು ದಾನಮಾಡಿದವರಾಗಿದ್ದರು. ಅಂತಹ ಸಕಲಗುಣ ಪರಿಪೂರ್ಣರಾದ ರಾಜರು ಪಾಂಡುಪುತ್ರರ ವಿಜಯಕ್ಕಾಗಿ ಕುರುಕ್ಷೇತ್ರಕ್ಕೆ

ಆಗಮಿಸಿದರು.”

೧೫೨ನೆಯ ಅಧ್ಯಾಯವು ಮುಗಿಯಿತು.

೧೫೩ನೆಯ ಅಧ್ಯಾಯ ಸೈನ್ಯನಿರ್ಯಾಣಪರ್ವ (ಮುಂದುವರಿದಿದೆ)

## ದುರ್ಯೋಧನನು ಸೇನೆಯನ್ನು ಸಜ್ಜುಗೊಳಿಸಿದುದು : ಶಿಬಿರನಿರ್ಮಾಣಕ್ಕೆ ಆಜ್ಞೆನೀಡಿದುದು : ರಣಯಾತ್ರೆಗಾಗಿ ಸೈನಿಕರ ಸಿದ್ಧತೆ

ಜನಮೇಜಯನು ವೈಶಂಪಾಯನರನ್ನು ಪ್ರಶ್ನಿಸುತ್ತಾನೆ :

**ಯುಧಿಷ್ಠಿರಂ ಸಹಾನೀಕಮುಪಾಯಾನ್ತಂ ಯುಯುತ್ಸಯಾ ।**
**ಸಂನಿವಿಷ್ಟಂ ಕುರುಕ್ಷೇತ್ರೇ ವಾಸುದೇವೇನ ಪಾಲಿತಮ್ ॥೧॥**

“ಬ್ರಾಹ್ಮಣೋತ್ತಮರೇ! ‘ಯುಧಿಷ್ಠಿರನು ಸೈನ್ಯಸಮೇತನಾಗಿ ಕೌರವ ರೊಡನೆ ಯುದ್ಧಮಾಡಲು ಕುರುಕ್ಷೇತ್ರಕ್ಕೆ ಆಗಮಿಸಿದ್ದಾನೆ. ಅವನು ವಾಸುದೇವನಿಂದ ರಕ್ಷಿತನಾಗಿದ್ದಾನೆ. ಪಾಂಡವರ ರಕ್ಷಣಾಭಾರವನ್ನು ಶ್ರೀಕೃಷ್ಣನೇ ಹೊತ್ತಿದ್ದಾನೆ. ಪುತ್ರಸಹಿತರಾದ ವಿರಾಟ-ದ್ರುಪದರೂ ಯುಧಿಷ್ಠಿರನ ಜೊತೆಯಲ್ಲೇ ಇದ್ದಾರೆ. ಕೇಕಯರಾಜಕುಮಾರರಿಂದಲೂ, ವೃಷ್ಣಿಕುಲದ ರಾಜಕುಮಾರರಿಂದಲೂ, ಪೃಥ್ವಿಯ ಇನ್ನೂ ನೂರಾರು ರಾಜರಿಂದಲೂ ಯುಧಿಷ್ಠಿರನು ಪರಿವೃತನಾಗಿರುತ್ತಾನೆ. ದೇವತೆಗಳಿಂದ ಪರಿವೃತನಾದ ಮಹೇಂದ್ರನಂತೆಯೇ ಯುಧಿಷ್ಠಿರನು ಮಹಾರಥರಿಂದ ರಕ್ಷಿತನಾಗಿರುತ್ತಾನೆ’–ಈ ವಾರ್ತೆಯನ್ನು ಚಾರರ ಮೂಲಕ ಕೇಳಿದನಂತರ ದುರ್ಯೋಧನನೇನು ಮಾಡಿದನು? ಈ ವಿಷಯವನ್ನು ನನಗೆ ವಿಸ್ತಾರ ವಾಗಿಯೇ ಹೇಳಿರಿ. ಮಹಾಮತಿಗಳೇ! ಭಯಂಕರವಾದ ಈ ಯುದ್ಧ ಸಮಾ ವೇಶದಲ್ಲಿ ಕುರುಜಾಂಗಲದಲ್ಲಿ (ಕುರುಕ್ಷೇತ್ರದಲ್ಲಿ) ಏನೇನು ನಡೆಯಿತೆಂಬುದನ್ನು ಸವಿಸ್ತರವಾಗಿಯೇ ತಮ್ಮಿಂದ ಕೇಳಬೇಕೆಂದಿರುತ್ತೇನೆ. ಪಾಂಡವರು, ವಾಸುದೇವ, ವಿರಾಟ-ದ್ರುಪದರು, ಪಾಂಚಾಲರಾಜಕುಮಾರನಾದ ಧೃಷ್ಟದ್ಯುಮ್ನ,

ಮಹಾರಥನಾದ ಶಿಖಂಡೀ, ದೇವತೆಗಳಿಂದಲೂ ದುರ್ಜಯನಾದ ಯುಧಾಮನ್ಯು– ಈ ಎಲ್ಲರೂ ಯುದ್ಧದಲ್ಲಿ ಇಂದ್ರಪ್ರಮುಖರಾದ ದೇವತೆಗಳನ್ನೂ ತಮ್ಮ ದಿವ್ಯಾಯುಧಪ್ರಹಾರಗಳಿಂದ ವ್ಯಥಿತರನ್ನಾಗಿ ಮಾಡುವ ಸಾಮರ್ಥ್ಯವುಳ್ಳವರಾಗಿದ್ದರು. ಅಂತಹವರನ್ನು ಕುರುಗಳು ಹೇಗೆ ಎದುರಿಸಿದರು? ಕುರುಕ್ಷೇತ್ರದಲ್ಲಿ ಕೌರವ-ಪಾಂಡವರು ತಮ್ಮ ವಿಜಯಸಾಧನೆಗಾಗಿ ಯಾವ ಕಾರ್ಯಗಳನ್ನು ಮಾಡಿದರು? ಈ ಎಲ್ಲ ವಿಷಯಗಳನ್ನೂ ನಾನು ನಿಮ್ಮಿಂದ ವಿಶದವಾಗಿಯೇ ಕೇಳಲಿಚ್ಛಿಸಿದ್ದೇನೆ."

"ಜನಮೇಜಯ! ಸಂಧಾನವು ವಿಫಲವಾದನಂತರ ಶ್ರೀಕೃಷ್ಣನು ಹಸ್ತಿನೆಯನ್ನು ಬಿಟ್ಟು ಉಪಪ್ಲಾವ್ಯಕ್ಕೆ ಹೊರಟುಹೋಗಲಾಗಿ ದುರ್ಯೋಧನರಾಜನು ಕರ್ಣ, ದುಃಶಾಸನ ಮತ್ತು ಶಕುನಿಗಳನ್ನು ಕುರಿತು ಈ ಮಾತುಗಳನ್ನು ಹೇಳಿದನು :

"ಅಧೋಕ್ಷಜನು ಕೃತಕೃತ್ಯನಾಗದೇ ಹಸ್ತಿನೆಯಿಂದ ಹೊರಟು ಹೋದನು. ನಮ್ಮ ವಿಷಯದಲ್ಲಿ ಕೋಪಾವಿಷ್ಟನಾಗಿರುವ ಕೃಷ್ಣನು ಪಾಂಡವರನ್ನೂ ಕೋಪದಿಂದ ಉರಿದುಬೀಳುವಂತೆ ಮಾಡುತ್ತಾನೆ. ಈ ವಿಷಯದಲ್ಲಿ ನನಗಾವ ಸಂಶಯವೂ ಇಲ್ಲ. ನಿಶ್ಚಯವಾಗಿ ಹೇಳುವುದಾದರೆ ಪಾಂಡವರೊಡನೆ ನಾನು ಯುದ್ಧಮಾಡುವುದು ಕೃಷ್ಣನಿಗೂ ಸಮ್ಮತವೇ ಆಗಿದೆ.

ಭೀಮಸೇನಾರ್ಜುನರು ಕೂಡ ಯಾವಾಗಲೂ ದಾಶಾರ್ಹಕುಲತಿಲಕನಾದ ಕೃಷ್ಣನ ಅಭಿಪ್ರಾಯವನ್ನೇ ಅನುಮೋದಿಸುವವರಾಗಿದ್ದಾರೆ. ಅವನ ಇಚ್ಛೆಯಂತೆಯೇ ನಡೆದುಕೊಳ್ಳುತ್ತಾರೆ. ಯುಧಿಷ್ಠಿರನು ವಿಶೇಷವಾಗಿ ಭೀಮಸೇನನ ಇಚ್ಛೆಯಂತೆಯೇ ನಡೆಯುತ್ತಾನೆ. ಮೇಲಾಗಿ ನಾನು ಸರ್ವಸಹೋದರಸಹಿತನಾದ ಯುಧಿಷ್ಠಿರನನ್ನು ತಿರಸ್ಕರಿಸಿದ್ದೇನೆ ; ಅನೇಕ ಬಾರಿ ವಂಚಿಸಿದ್ದೇನೆ.

ವಿರಾಟ-ದ್ರುಪದರೂ ಮೊದಲಿನಿಂದಲೂ ನನಗೆ ಬದ್ಧವೈರಿಗಳೇ ಆಗಿರುತ್ತಾರೆ. ವಾಸುದೇವನ ಆಜ್ಞಾಧಾರಕರಾಗಿರುವ ಅವರಿಬ್ಬರೂ ಪಾಂಡವರ

ಸೇನೆಯ ಸಂಚಾಲಕರಾಗುತ್ತಾರೆ. ಆದುದರಿಂದ ಈಗ ನಮಗೂ ಮತ್ತು ಪಾಂಡವರಿಗೂ ನಡೆಯುವ ಯುದ್ಧವು ಭಯಂಕರವೂ, ರೋಮಾಂಚಕಾರಕವೂ ಆಗುವುದೆಂಬುದರಲ್ಲಿ ಸಂಶಯವೇ ಇಲ್ಲ. ಆದುದರಿಂದ ಅಲಸರಾಗಿ ಕುಳಿತುಕೊಳ್ಳದೇ ಯುದ್ಧಕ್ಕೆ ಸಂಬಂಧಿಸಿದಂತೆ ಸಕಲ ಸಿದ್ಧತೆಗಳನ್ನೂ ಮಾಡಿಸಿರಿ."

ಅನಂತರ ದುರ್ಯೋಧನನು ತನ್ನೊಡನಿದ್ದ ರಾಜರನ್ನುದ್ದೇಶಿಸಿ ಹೇಳಿದನು :

"ಭೂಮಿಪಾಲರೇ! ನೀವೀಗಲೇ ನೂರಾರು ಸಾವಿರಾರು ಸಂಖ್ಯೆಯಲ್ಲಿ ಶಿಬಿರಗಳನ್ನು ನಿರ್ಮಾಣಮಾಡಿರಿ (ಮಾಡಿಸಿರಿ.) ಅವಶ್ಯಕತೆಗೆ ತಕ್ಕಂತೆ ಬಿಡಾರಗಳು ಸಾಕಷ್ಟು ವಿಶಾಲವಾಗಿರಬೇಕು. ಶತ್ರುಗಳು ನಮ್ಮ ಶಿಬಿರಗಳ ಮೇಲೆ ಅಧಿಕಾರವನ್ನು ಚಲಾಯಿಸುವಂತಿರಬಾರದು. ನಮ್ಮ ಶಿಬಿರಗಳು ಯಾವುದೇ ಕಾರಣದಿಂದಲೂ ಶತ್ರುಗಳ ಹಿಡಿತಕ್ಕೆ ಸಿಕ್ಕಬಾರದು. ಅಂತಹ ಸ್ಥಳದಲ್ಲಿ ಅಷ್ಟು ಸುಭದ್ರವಾಗಿರಬೇಕು. ಶಿಬಿರಗಳ ಸಮೀಪದಲ್ಲಿಯೇ ಜಲ-ಕಾಷ್ಠಗಳ ಸಮೃದ್ಧಿಯಿರಬೇಕು. ನಾವು ನಮ್ಮ ಶಿಬಿರಗಳಿಗೆ ಆಹಾರವನ್ನು ಒದಗಿಸುವ ಮಾರ್ಗಗಳು ಸುರಕ್ಷಿತವಾಗಿರಬೇಕು. ಶತ್ರುಗಳು ಅವುಗಳನ್ನು ನಾಶಮಾಡದಂತಿರಬೇಕು. ನಮ್ಮ ಶಿಬಿರದ ಸುತ್ತಲೂ ಅಭೇದ್ಯವಾದ ಕೋಟೆ-ಕೊತ್ತಲುಗಳನ್ನು ಈ ಕೂಡಲೇ ನಿರ್ಮಾಣಮಾಡಬೇಕು. ಆ ನಮ್ಮ ಶಿಬಿರಗಳು ನಾನಾವಿಧವಾದ ಆಯುಧಗಳಿಂದಲೂ ಪೂರ್ಣವಾಗಿರಬೇಕು. ಪತಾಕೆ ಮತ್ತು ಧ್ವಜಗಳಿಂದ ಸುಶೋಭಿತವಾಗಿರಬೇಕು.

ನಗರದ ಹೊರಭಾಗದಿಂದ ಶಿಬಿರಗಳಿಗೆ ಹೋಗುವ ಮಾರ್ಗಗಳು ಸಮವಾಗಿರಬೇಕು. ಈ ಕಾರ್ಯಗಳೆಲ್ಲವನ್ನೂ ಕೂಡಲೇ ಮಾಡಿರಿ. (ಮಾಡಿಸಿರಿ.) ನಾಳೆ ಬೆಳಗ್ಗೆ ಕುರುಕ್ಷೇತ್ರಕ್ಕೆ ಪ್ರಯಾಣಮಾಡಬೇಕೆಂದು ಇಂದೇ ಸರ್ವತ್ರ ಘೋಷಿಸಿರಿ. ವಿಳಂಬಕ್ಕೆ ಅವಕಾಶವಿಲ್ಲ."

ದುರ್ಯೋಧನನ ಮಾತನ್ನು ಕೇಳಿ ಅಲ್ಲಿ ನೆರೆದಿದ್ದ ರಾಜರೆಲ್ಲರೂ 'ಹಾಗೆಯೇ ಆಗಲಿ' ಎಂದು ಪ್ರತಿವಚನವನ್ನಿತ್ತರು. ಪರಮಹೃಷ್ಟರಾದ,

ಮಹಾತ್ಮರಾದ ಅವರೆಲ್ಲರೂ ಬೆಳಗಾಗುತ್ತಲೇ ರಾಜರು ಉಳಿದುಕೊಳ್ಳುವು ದಕ್ಕಾಗಿ ಕುರುಕ್ಷೇತ್ರದಲ್ಲಿ ಶಿಬಿರಗಳನ್ನು ನಿರ್ಮಿಸುವ ಕಾರ್ಯದಲ್ಲಿ ಉದ್ಯುಕ್ತ ರಾದರು. ದುರ್ಯೋಧನನಿಗೆ "ಹಾಗೆಯೇ ಆಗಲಿ" ಎಂದು ಹೇಳಿದ ಸಮಯದಲ್ಲಿ ಅವರ ಚೇಷ್ಟೆಗಳೂ ವೀರೋಚಿತವಾಗಿಯೇ ಇದ್ದುವು.

ರಾಜಶಾಸನವನ್ನು ಕೇಳಿದೊಡನೆಯೇ ಆ ಎಲ್ಲ ರಾಜರೂ ಕೋಪಾವಿಷ್ಟರಾಗಿ ಸ್ವರ್ಣಮಯವಾದ ಅಂಗದಾಭರಣದಿಂದ ದೇದೀಪ್ಯಮಾನವಾಗಿ ಕಾಣುತ್ತಿದ್ದ, ಚಂದನಾಗುರುಗಳಿಂದ ಲೇಪಿತವಾಗಿದ್ದ, ಪರಿಘಾಯುಧಸದೃಶವಾಗಿದ್ದ ತಮ್ಮ ತೋಳುಗಳನ್ನು ಬಾರಿಬಾರಿಗೂ ತಟ್ಟಿಕೊಳ್ಳುತ್ತಾ ಬಹುಮೂಲ್ಯವಾದ ಪೀಠಗಳಿಂದ ಮೇಲೆದ್ದು ನಿಂತರು. ಕಮಲಸದೃಶವಾದ ತಮ್ಮ ಕೈಗಳಿಂದ ಶಿರಸ್ತ್ರಾಣಗಳನ್ನು ತಮ್ಮ ತಲೆಯಮೇಲಿಟ್ಟುಕೊಂಡರು. ಅದೇ ಕಮಲಸದೃಶವಾದ ಕೈಗಳಿಂದ ಅಂತರೀಯವನ್ನುಟ್ಟು (ಧೋತ್ರವನ್ನುಟ್ಟು), ಉತ್ತರೀಯವನ್ನು ಹೊದೆದುಕೊಂಡು ಕಂಠಹಾರ, ಅಂಗುಲೀಯಕವೇ ಮೊದಲಾದ ಭೂಷಣಗಳಿಂದ ಭೂಷಿತರಾದರು.

ಶ್ರೇಷ್ಠರಥಿಗಳು ತಮ್ಮ ತಮ್ಮ ರಥಗಳನ್ನೂ, ಅಶ್ವಸಂಚಾಲನಕಲಾ ಕುಶಲರಾದವರು ಕುದುರೆಗಳನ್ನೂ, ಗಜಶಿಕ್ಷೆಯಲ್ಲಿ ನಿಪುಣರಾದವರು ಆನೆ ಗಳನ್ನೂ ಯುದ್ಧಕ್ಕೆ ಸಜ್ಜುಗೊಳಿಸುತ್ತಿದ್ದರು. ಚಿತ್ರ-ವಿಚಿತ್ರವಾದ, ಸರ್ವ ಪ್ರಕಾರದಿಂದಲೂ ಶ್ರೇಷ್ಠವಾದ, ಸಕಲವಿಧವಾದ ಶಸ್ತ್ರಗಳನ್ನೂ ಯುದ್ಧಕ್ಕಾಗಿ ಸಜ್ಜುಗೊಳಿಸಿದರು. ಪದಾತಿಸೈನಿಕರೆಲ್ಲರೂ ತಮ್ಮ ಶರೀರಗಳಲ್ಲಿ ಸುವರ್ಣಮಯವಾದ ಮತ್ತು ಚಿತ್ರ-ವಿಚಿತ್ರವಾದ ಕವಚಗಳನ್ನು ಧರಿಸಿ ಅನೇಕವಿಧವಾದ ಆಯುಧಗಳನ್ನು ಹಿಡಿದು ಯುದ್ಧಸನ್ನದ್ಧರಾದರು.

ಜನಮೇಜಯ! ಸಂಪ್ರಹೃಷ್ಟರಾದ ಮನುಷ್ಯರಿಂದ ತುಂಬಿಹೋಗಿದ್ದ, ಸಡಗರದಿಂದ ಕೂಡಿದ್ದ, ಸುಪ್ರಸಿದ್ಧವಾದ ದುರ್ಯೋಧನನ ಪಟ್ಟಣವು ಆ ಸಮಯದಲ್ಲಿ ಉತ್ಸವದಿಂದ ಕೂಡಿರುವಂತೆಯೇ ಕಾಣುತ್ತಿದ್ದಿತು. ಯಾವುದೋ ಉತ್ಸವಸಮಾರಂಭವು ಹಸ್ತಿನಾಪಟ್ಟಣದಲ್ಲಿ ನಡೆಯುತ್ತಿರ ಬಹುದೆಂಬ ಭ್ರಾಂತಿಯನ್ನುಂಟುಮಾಡುತ್ತಿದ್ದಿತು.

ಜನೌಘಸಲಿಲಾವರ್ತೋ ರಥನಾಗಾಶ್ವಮೀನವಾನ್ ।
ಶಙ್ಖದುನ್ದುಭಿನಿರ್ಘೋಷಃ ಕೋಶಸಂಚಯರತ್ನವಾನ್ ॥೨೫॥

ಚಿತ್ರಾಭರಣವರ್ಮೋರ್ಮಿಃ ಶಸ್ತ್ರನಿರ್ಮಲಫೇನವಾನ್ ।
ಪ್ರಾಸಾದಮಾಲಾದ್ರಿವೃತೋ ರಥ್ಯಾಪಣಮಹಾಹ್ರದಃ ॥೨೬॥

ಯೋಧಚನ್ದ್ರೋದಯೋದ್ಭೂತಃ ಕುರುರಾಜಮಹಾರ್ಣವಃ ।
ವ್ಯದೃಶ್ಯತ ತದಾ ರಾಜಂಶ್ಚನ್ದ್ರೋದಯ ಇವೋದಧಿಃ ॥೨೭॥

ಮಹಾರಾಜ! ಚಂದ್ರೋದಯಸಮಯದಲ್ಲಿ ಸಮುದ್ರವು ತರಂಗಗಳಿಂದ ಕೂಡಿ ಯಾವ ರೀತಿಯಲ್ಲಿ ಉಕ್ಕಿಬರುತ್ತದೆಯೋ–ಅದೇ ರೀತಿಯಲ್ಲಿ ಕುರುರಾಜನಾದ ದುರ್ಯೋಧನಸೈನ್ಯರೂಪಿಯಾದ ಮಹಾಸಾಗರವು ಸೈನಿಕ ಸಮುದಾಯರೂಪವಾದ ಚಂದ್ರನ ಉದಯದಿಂದ (ಯುದ್ಧೋತ್ಸಾಹ ಪೂರ್ಣರಾದ ಸೈನಿಕರಿಂದ) ಅತ್ಯಂತ ಉಲ್ಲಸಿತವಾಗಿರುವಂತೆ ಕಾಣುತ್ತಿದ್ದಿತು. ಅಲ್ಲಿನ ಜನಸಮೂಹವು ಸಮುದ್ರದ ನೀರಿನ ಸುಳಿಯ ರೂಪವಾಗಿದ್ದಿತು. ರಥ, ಆನೆ, ಕುದುರೆಗಳೇ ಕುರುಸೇನಾಮಹಾರ್ಣವದ ಮೀನುಗಳಾಗಿದ್ದುವು. ಶಂಖ-ದುಂದುಭಿಗಳ ನಿರ್ಘೋಷವು ಕುರುಸೇನಾಸಮುದ್ರದ ಗರ್ಜನೆಯಾಗಿದ್ದಿತು. ಕೋಶ (ಖಜಾನೆ) ಸಂಗ್ರಹವು ಕುರುಬಲಸಮುದ್ರತಲದಲ್ಲಿರುವ ರತ್ನಪ್ರಾಯಗಳಾಗಿದ್ದುವು. ಯೋಧರು ಧರಿಸಿದ್ದ ಕವಚಗಳೂ ಮತ್ತು ಆಭರಣಗಳೂ ಆ ಸಮುದ್ರದ ಅಲೆಗಳಂತಿದ್ದುವು. ಸೈನಿಕರು ಧರಿಸಿದ್ದ ಶುಭ್ರವಾದ ಆಯುಧಗಳು ಕುರುಸೈನ್ಯಸಮುದ್ರದ ನೊರೆಗಳಂತಿದ್ದುವು. ಹಸ್ತಿನಾಪುರದಲ್ಲಿದ್ದ ಪ್ರಾಸಾದಪಂಕ್ತಿಗಳು ಕುರುಸೈನ್ಯಸಮುದ್ರದ ತೀರಪ್ರದೇಶದ ಬೆಟ್ಟದ ಸಾಲುಗಳಂತಿದ್ದುವು. ಹಸ್ತಿನಾಪಟ್ಟಣದ ರಾಜಮಾರ್ಗದುದ್ದಕ್ಕೂ ಇದ್ದ ಅಂಗಡಿಗಳು ಕುರುಬಲಸಮುದ್ರದ ಆಳವಾದ ಮಡುವಿನ ರೂಪದಲ್ಲಿದ್ದುವು. (ಸಮುದ್ರಪ್ರಾಯವಾಗಿದ್ದ ಕುರುರಾಜನಾದ ದುರ್ಯೋಧನನ ಸೇನೆಯು ಯುದ್ಧಕ್ಕೆ ಸಜ್ಜಾಗಿ ನಿಂತಿತು.)”

ಗ೫೫ನೆಯ ಅಧ್ಯಾಯವು ಮುಗಿಯಿತು.

೧೫೪ನೆಯ ಅಧ್ಯಾಯ ಸೈನ್ಯನಿರ್ಯಾಣಪರ್ವ (ಮುಂದುವರಿದಿದೆ)

## ಸಮಯೋಚಿತವಾದ ಕರ್ತವ್ಯದ ವಿಷಯವಾಗಿ ಪ್ರಶ್ನಿಸಿದ ಯುಧಿಷ್ಠಿರನಿಗೆ ಶ್ರೀಕೃಷ್ಣನು ಯುದ್ಧಮಾಡುವುದೇ ಪ್ರಕೃತ ಮುಖ್ಯಕರ್ತವ್ಯವೆಂದು ಹೇಳಿದುದು : ಯುದ್ಧದ ವಿಷಯದಲ್ಲಿ ಯುಧಿಷ್ಠಿರನ ಸಂತಾಪ : ಅರ್ಜುನನು ಶ್ರೀಕೃಷ್ಣನ ಮಾತನ್ನು ಸಮರ್ಥಿಸಿದುದು

ವೈಶಂಪಾಯನರು ಹೇಳುತ್ತಾರೆ :

**ವಾಸುದೇವಸ್ಯ ತದ್ವಾಕ್ಯಮನುಸ್ಮೃತ್ಯ ಯುಧಿಷ್ಠಿರಃ ।**
**ಪುನಃ ಪಪ್ರಚ್ಛ ವಾರ್ಷ್ಣೇಯಂ ಕಥಂ ಮನ್ದೋಽಬ್ರವೀದಿದಮ್ ॥**

ಜನಮೇಜಯ! ಶ್ರೀಕೃಷ್ಣನು ಹಸ್ತಿನಾಪುರದಲ್ಲಿ ನಡೆದುದೆಲ್ಲವನ್ನೂ ಯುಧಿಷ್ಠಿರನಿಗೆ ವಿವರಿಸುವಾಗ ಹೇಳಿದ 'ಏವಮುಕ್ತೋಽಪಿ ದುಷ್ಟಾತ್ಮಾ ನೈವ ಭಾಗಂ ವ್ಯಮುಞ್ಚತ-ನಾನು ನಿಮ್ಮ ಜೀವಿಕೆಗೆ ಐದೇ ಗ್ರಾಮಗಳನ್ನು ಕೇಳಿದರೂ ತನ್ನ ರಾಜ್ಯದಲ್ಲಿ ಆ ಐದು ಗ್ರಾಮಗಳನ್ನು ಬಿಟ್ಟುಕೊಡಲೂ ದುಷ್ಟಾತ್ಮನಾದ ದುರ್ಯೋಧನನು ಒಪ್ಪಲಿಲ್ಲ'–ಎಂಬ ಕೃಷ್ಣನ ಮಾತನ್ನೂ :

**ಧ್ರಿಯಮಾಣೇ ಮಹಾಬಾಹೌ ಮಯಿ ಸಮ್ಪ್ರತಿ ಕೇಶವ ।**
**ಯಾವದ್ಧಿ ತೀಕ್ಷ್ಣಯಾ ಸೂಚ್ಯಾ ವಿಧ್ಯೇದಗ್ರೇಣ ಕೇಶವ ।**
**ತಾವದಪ್ಯಪರಿತ್ಯಾಜ್ಯಂ ಭೂಮೇರ್ನಃ ಪಾಣ್ಡವಾನ್ಪ್ರತಿ ॥೨॥**

'ಈ ಸಮಯದಲ್ಲಿ ಮಹಾಬಾಹುವಾದ ಈ ದುರ್ಯೋಧನನು ಜೀವಿಸಿರಲಾಗಿ ಒಂದು ತೀಕ್ಷ್ಣವಾದ ಸೂಜೀಮೊನೆಗೆ ಅಂಟಿಕೊಳ್ಳುವಷ್ಟು ಭೂಮಿಯ ಭಾಗವೂ ಪಾಂಡವರ ಸಲುವಾಗಿ ನಮ್ಮಿಂದ ತ್ಯಜಿಸಲ್ಪಡುವುದಿಲ್ಲ'–

ಇವೇ ಮುಂತಾದ ದುರ್ಯೋಧನನ ಮಾತುಗಳನ್ನೂ ಸ್ಮರಿಸಿಕೊಂಡು ಶಿಬಿರದಲ್ಲಿ ಕುಳಿತಿದ್ದ ಯುಧಿಷ್ಠಿರನು ವಾರ್ಷ್ಣೇಯನನ್ನು ಪುನಃ ಪ್ರಶ್ನಿಸಿದನು.

"ಕೃಷ್ಣ! ಮೂರ್ಖನಾದ ದುರ್ಯೋಧನನು ಇಂತಹ ಮಾತನ್ನು

ಹೇಗೆತಾನೇ ಹೇಳಿದನು? ಈ ವರ್ತಮಾನಸಮಯದಲ್ಲಿ ನಾವು ಯಾವ ಕಾರ್ಯಮಾಡುವುದು ಉಚಿತವೆನಿಸುತ್ತದೆ? ನಾವು ಯಾವ ರೀತಿಯಲ್ಲಿ ವರ್ತಿಸುವುದರಿಂದ ಮತ್ತು ಯಾವ ಕಾರ್ಯಮಾಡುವುದರಿಂದ ಸ್ವಧರ್ಮದಿಂದ ಚ್ಯುತರಾಗುವುದಿಲ್ಲ? ವಾಸುದೇವ! ದುರ್ಯೋಧನ-ಕರ್ಣ-ಶಕುನಿಗಳ ಅಭಿಪ್ರಾಯಗಳೇನೆಂಬುದು ನಿನಗೆ ಈಗಾಗಲೇ ತಿಳಿದಿದೆ. ಅಂತೆಯೇ ಸಹಾನುಜನಾದ ನನ್ನ ಅಭಿಪ್ರಾಯವೂ ತಿಳಿದಿದೆ. (ನಾವೈವರೂ ನಮ್ಮ-ನಮ್ಮ ಅಭಿಪ್ರಾಯಗಳನ್ನು ನಿನಗೆ ನಿವೇದಿಸಿದ್ದೇವೆ.) ವಿದುರ-ಭೀಷ್ಮರು ಆಡಿದ ಮಾತುಗಳನ್ನೂ ನೀನು ಕೇಳಿ ಬಂದಿರುವೆ. ವಿಶಾಲಬುದ್ಧೇ! ಈ ವಿಷಯದಲ್ಲಿ ಕುಂತಿಯ ಬುದ್ಧಿಯು (ಅಭಿಪ್ರಾಯವು) ಯಾವ ರೀತಿ ಇರುವುದೆಂಬುದನ್ನೂ ನೀನು ಸಂಪೂರ್ಣವಾಗಿ ತಿಳಿದುಕೊಂಡು ಬಂದಿರುವೆ. ಕೃಷ್ಣ! ನಿನ್ನಲ್ಲಿ ನನ್ನ ಈಗಿನ ಪ್ರಾರ್ಥನೆಯೇನೆಂದರೆ : 'ಅವರೇನು ಹೇಳಿದರು–ಇವರೇನು ಹೇಳಿದರು?' ಎಂಬುದೆಲ್ಲವನ್ನೂ ನೀನು ಮರೆತೇಬಿಡು. ಅದನ್ನು ಮನಸ್ಸಿನಲ್ಲಿಟ್ಟುಕೊಳ್ಳಬೇಡ. ಪೂರ್ವಗ್ರಹಪೀಡಿತವಾಗದ, ಪರಿಶುದ್ಧವಾದ, ಸ್ವಚ್ಛವಾದ ಬುದ್ಧಿಯಿಂದ ಪ್ರಸಕ್ತಸಂದರ್ಭದಲ್ಲಿ ನಮ್ಮ ಕರ್ತವ್ಯವೇನೆಂಬುದನ್ನು ಕುರಿತು ನೀನೇ ಪುನಃ ವಿಚಾರಮಾಡು. ಅನಂತರ ನಾವು ಈ ಸಮಯದಲ್ಲಿ ಯಾವ ಕಾರ್ಯಮಾಡುವುದು ಉಚಿತವೆಂಬುದನ್ನು ನಿಸ್ಸಂಕೋಚವಾಗಿ ಹೇಳು."

ಜನಮೇಜಯ! ಧರ್ಮಾರ್ಥಸಹಿತವಾದ ಧರ್ಮರಾಜನ ಮಾತನ್ನು ಕೇಳಿ ಭಗವಾನ್ ಶ್ರೀಕೃಷ್ಣನು ಮೇಘಕ್ಕೆ ಮತ್ತು ದುಂದುಭಿಗೆ ಸಮಾನವಾದ ಗಂಭೀರಧ್ವನಿಯಿಂದ ಈ ಮಾತುಗಳನ್ನು ಹೇಳಿದನು :

"ಯುಧಿಷ್ಠಿರ! ನಾನು ಕೌರವಸಭೆಯಲ್ಲಿ ಧರ್ಮಾರ್ಥಸಹಿತವಾದ ಮತ್ತು ಸರ್ವಹಿತವಾದ ಯಾವ ಮಾತುಗಳನ್ನಾಡಿದೆನೋ–ಆ ಮಾತುಗಳು ವಂಚನೆಯ ಬುದ್ಧಿಯುಳ್ಳ ಕೌರವನಲ್ಲಿ ಯಾವ ವಿಧವಾದ ಒಳ್ಳೆಯ ಪ್ರತಿಕ್ರಿಯೆಯನ್ನೂ ಉಂಟುಮಾಡಲಿಲ್ಲ. ಅವನ ಮನಸ್ಸಿನಲ್ಲಿ ನನ್ನ ಹಿತಕರವಾದ ಮಾತು ಪ್ರವೇಶಿಸಲೇ ಇಲ್ಲ. ದುರ್ಮತಿಯಾದ ದುರ್ಯೋಧನನು ಭೀಷ್ಮನ ಮಾತನ್ನಾಗಲೀ, ವಿದುರನ ಮಾತನ್ನಾಗಲೀ, ನಾನು ಹೇಳಿದುದನ್ನಾಗಲೀ–

ಕಿಂಚಿತ್ತಾದರೂ ಕೇಳುವವನಾಗಿರಲಿಲ್ಲ. ನಾವು ಹೇಳಿದ ಎಲ್ಲ ಮಾತುಗಳನ್ನೂ ಅವನು ಮೀರಿ ನಡೆಯಲು ಉದ್ಯುಕ್ತನಾಗಿದ್ದಾನೆ.

**ನೈಷ ಕಾಮಯತೇ ಧರ್ಮಂ ನೈಷ ಕಾಮಯತೇ ಯಶಃ ।**
**ಜಿತಂ ಸ ಮನ್ಯತೇ ಸರ್ವಂ ದುರಾತ್ಮಾ ಕರ್ಣಮಾಶ್ರಿತಃ ॥೯॥**

ದುರಾತ್ಮನಾದ ದುರ್ಯೋಧನನು ಧರ್ಮಮಾರ್ಗದಲ್ಲಿ ನಡೆಯುವ ಇಚ್ಛೆಯುಳ್ಳವನಾಗಿಲ್ಲ. ಯಶಸ್ಸನ್ನು ಪಡೆಯಬೇಕೆಂಬ ಅಭಿಲಾಷೆಯೂ ಅವನಿಗಿಲ್ಲ. ಕರ್ಣನನ್ನು ಆಶ್ರಯಿಸಿ ಯುದ್ಧಸನ್ನದ್ಧನಾಗುತ್ತಿರುವ ಅವನು ಸರ್ವವನ್ನೂ ಜಯಿಸಿಬಿಟ್ಟಿರುವೆನೆಂದೇ ಭಾವಿಸಿಬಿಟ್ಟಿದ್ದಾನೆ. ನನ್ನನ್ನೂ ಬಂಧಿಸಿ ಬಿಡುವಂತೆ ದುರ್ಯೋಧನನು ಆಜ್ಞಾಪಿಸಿದನು. ಆದರೆ ಪಾಪನಿಶ್ಚಯನಾದ, ದುರಾತ್ಮನಾದ ಅವನು ತನ್ನ ಆಶಯವನ್ನು ಪೂರ್ಣಮಾಡಿಕೊಳ್ಳಲು ಸಮರ್ಥನಾಗಲಿಲ್ಲ. (ನನ್ನನ್ನು ಬಂಧಿಸಬೇಕೆಂದಿದ್ದ ಅವನ ಆಶೆಯು ಕೈಗೂಡಲಿಲ್ಲ.) ಭೀಷ್ಮನೇ ಆಗಲೀ, ದ್ರೋಣರೇ ಆಗಲೀ–ಆ ಮಹಾಸಭೆಯಲ್ಲಿ ವಿವೇಕಯುಕ್ತವಾದ ಮಾತನ್ನೇನೂ ಹೇಳಲಿಲ್ಲ. ವಿದುರನೊಬ್ಬನನ್ನು ಬಿಟ್ಟು ಉಳಿದವರೆಲ್ಲರೂ ಅವನನ್ನೇ ಅನುಸರಿಸಿ ನಡೆಯುತ್ತಿದ್ದಾರೆ. ಸುಬಲಪುತ್ರನಾದ ಶಕುನಿ, ಕರ್ಣ ಮತ್ತು ದುಃಶಾಸನ–ಈ ಮೂವರು ಮೂರ್ಖರು ಕೋಪಿಷ್ಠನಾದ, ಮೂಢನಾದ ದುರ್ಯೋಧನನನ್ನು ಕುರಿತು ನಿನ್ನ ವಿಷಯದಲ್ಲಿ ಅನುಚಿತವಾದ ಮಾತುಗಳನ್ನೇ ಹೇಳಿದರು. ಕೌರವನು ನಿನ್ನ ವಿಷಯದಲ್ಲಿ ಯಾವ ಯಾವ ಅನುಚಿತವಾದ ಮಾತುಗಳನ್ನಾಡಿದನೋ ಅವುಗಳೆಲ್ಲವನ್ನೂ ಪುನಃ ನಾನು ನಿನ್ನ ಮುಂದೆ ಹೇಳುವುದರಿಂದ ಪ್ರಯೋಜನವೇನಿದೆ? ಅವನು ಹೇಳಿದುದೆಲ್ಲವನ್ನೂ ಗಮನಿಸಿ ಸಮಗ್ರವಾಗಿ ಒಂದೇ ಮಾತಿನಲ್ಲಿ ಸಂಕ್ಷೇಪಿಸಿ ಹೇಳುವುದಾದರೆ–

**ದುರಾತ್ಮಾಸೌ ನ ಯುಕ್ತಂ ತ್ವಯಿ ವರ್ತತೇ ।**

ದುರಾತ್ಮನಾದ ದುರ್ಯೋಧನನು ನಿನ್ನ ವಿಷಯದಲ್ಲಿ ಯುಕ್ತರೀತಿಯಿಂದ ನಡೆದುಕೊಳ್ಳುತ್ತಿಲ್ಲ. ನಿನ್ನ ಪಕ್ಷಕ್ಕೆ ಸೇರಿರುವ ರಾಜರ ವಿಷಯದಲ್ಲಿಯೂ ಯುಕ್ತರೀತಿಯಿಂದ ನಡೆದುಕೊಳ್ಳುತ್ತಿಲ್ಲ.

ಪಾಪವೆಂಬುದು ಯಾವುದಿದೆಯೋ, ಅಮಂಗಲವೆಂಬುದು ಯಾವುದಿದೆಯೋ–ಅವೆಲ್ಲವೂ ದುರ್ಯೋಧನನಲ್ಲಿಯೇ ನೆಲೆಸಿವೆ. ನಾವಾದರೂ ಸರ್ವಸ್ವ

ವನ್ನೂ ಕಳೆದುಕೊಂಡು ಯಾವ ಕಾಲಕ್ಕೂ ಕೌರವರೊಡನೆ ಸಂಧಾನವನ್ನಿಚ್ಛಿಸತಕ್ಕವರೂ ಆಗಿರಲಿಲ್ಲ. ಆದುದರಿಂದ ಸಂಧಾನಕಾರ್ಯವು ನಿಷ್ಫಲವಾದ ನಂತರ ನಮಗೆ ಯುದ್ಧಮಾಡುವುದೇ ಉಚಿತವಾಗಿದೆ."

ಜನಮೇಜಯ! ಅಲ್ಲಿ ನೆರೆದಿದ್ದ ಎಲ್ಲ ರಾಜರೂ ವಾಸುದೇವನು ಹೇಳಿದ ಮಾತನ್ನು ಕೇಳಿ ಏನೊಂದನ್ನೂ ಹೇಳದೇ ಯುಧಿಷ್ಠಿರರಾಜನ ಮುಖವನ್ನೇ ನೋಡುತ್ತಿದ್ದರು. ತನ್ನನ್ನೇ ನೋಡುತ್ತಿದ್ದ ರಾಜರ ಅಭಿಪ್ರಾಯ ವೇನೆಂಬುದನ್ನು ಯುಧಿಷ್ಠಿರನು ಮನಗಂಡವನಾಗಿ, ಭೀಮಾರ್ಜುನ-ನಕುಲ-ಸಹದೇವರೊಡನೆ ಸಮಾಲೋಚಿಸಿ, ಕೌರವರೊಡನೆ ಯುದ್ಧವು ಅನಿವಾರ್ಯವೆಂದೇ ನಿಶ್ಚಯಿಸಿ, ಸರ್ವರೂ ಯುದ್ಧಸನ್ನದ್ಧರಾಗುವಂತೆ ಆಜ್ಞೆಯನ್ನಿತ್ತನು. ಯುಧಿಷ್ಠಿರನು ಯುದ್ಧದ ಸಿದ್ಧತೆಗೆ ಆಜ್ಞೆಯನ್ನಿತ್ತೊಡನೆಯೇ ಯುಧಿಷ್ಠಿರನ ಪಕ್ಷದ ಸೈನಿಕರು ಪರಮಹೃಷ್ಟರಾದರು. ಪಾಂಡವರ ಸೈನ್ಯವು ಹರ್ಷಧ್ವನಿಮಾಡಿತು. ಸಿಂಹನಾದ ಮಾಡಿತು. ಸೈನಿಕರಿಗೆ ಯುದ್ಧಸನ್ನದ್ಧ ರಾಗುವಂತೆ ಆಜ್ಞೆಮಾಡಿದರೂ ಧರ್ಮಭೀರುವಾದ ಯುಧಿಷ್ಠಿರನ ಮನಸ್ಸು ಡೋಲಾಯಮಾನವಾಗಿಯೇ ಇದ್ದಿತು.

ಧರ್ಮಜ್ಞನಾದ ಯುಧಿಷ್ಠಿರನು ಯುದ್ಧದಲ್ಲಿ ಅವಧ್ಯರ (ವಧಾರ್ಹರಲ್ಲದವರ) ವಧೆಯೂ ಆಗುವುದೆಂಬುದನ್ನು ಸ್ಮರಿಸಿ ದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಭೀಮಸೇನನನ್ನೂ ಮತ್ತು ಅರ್ಜುನನನ್ನೂ ಕುರಿತು ಈ ಮಾತುಗಳನ್ನು ಹೇಳಿದನು.:

"ಸಹೋದರರರೇ! ಯಾವ ಅನರ್ಥವನ್ನು ತಪ್ಪಿಸಬೇಕೆಂಬ ಕಾರಣದಿಂದ ನಾನು ವನವಾಸವನ್ನೂ ಅನುಭವಿಸಿದೆನೋ ಮತ್ತು ಅನೇಕವಿಧವಾದ ದುಃಖವನ್ನೂ ಅನುಭವಿಸಿದೆನೋ–ಆ ಅನರ್ಥವನ್ನು ತಪ್ಪಿಸಲು ಸರ್ವಪ್ರಯತ್ನದಿಂದಲೂ ನನ್ನಿಂದ ಸಾಧ್ಯವಾಗಲೇ ಇಲ್ಲ. ಆ ಅನರ್ಥವು ಈಗ ನಮ್ಮ ಸಮೀಪಕ್ಕೆ ಬಂದೇ ಬಿಟ್ಟಿದೆ. ವಂಶವಿನಾಶದ ಅನರ್ಥವನ್ನು ತಪ್ಪಿಸಲು ನಾವು ಬಹುವಾಗಿಯೇ ಪ್ರಯತ್ನಿಸಿದೆವು. ನಮ್ಮ ಪ್ರಯತ್ನದಿಂದ ಅನರ್ಥದ ನಿವಾರಣೆಯಾಗಲಿಲ್ಲ. ನಮ್ಮ ಸಂಧಾನಪ್ರಯತ್ನವು ವ್ಯರ್ಥವಾಗಿ ಹೋಯಿತು. ನಾವು ಯುದ್ಧಪ್ರಯತ್ನವನ್ನೇ ಮಾಡದಿದ್ದರೂ ದಾರುಣ

ವಾದ ಕಲಹವು ನಮ್ಮನ್ನಟ್ಟಿಸಿಕೊಂಡೇ ಬರುತ್ತಿದೆ. ನಾವು ಸಂಧಾನಕ್ಕೆ ಯತ್ನಿಸಿದೆವು. ಆದರೆ ಅದು ವಿಫಲವಾಯಿತು. ಹಾಗೆ ನಾವು ಮಾಡದಿದ್ದರೆ ಮಹಾದೋಷಕ್ಕೆ ಗುರಿಯಾಗುತ್ತಿದ್ದೆವು.

**ಕಥಂ ಹ್ಯವಧ್ಯೈಃ ಸಂಗ್ರಾಮಃ ಕಾರ್ಯಃ ಸಹ ಭವಿಷ್ಯತಿ ।**
**ಕಥಂ ಹತ್ವಾ ಗುರೂನ್ವೃದ್ಧಾನ್ವಿಜಯೋ ನೋ ಭವಿಷ್ಯತಿ ॥೨೨॥**

ಅರ್ಜುನ! ವಧಾರ್ಹರಲ್ಲದವರೊಡನೆ ಯುದ್ಧಮಾಡುವುದು ಹೇಗೆ? ಗುರುಗಳನ್ನೂ–ವೃದ್ಧರನ್ನೂ ಸಂಹರಿಸಿ ನಾವು ವಿಜಯವನ್ನು ಹೇಗೆ ತಾನೇ ಪಡೆದುಕೊಂಡೇವು?"

ಜನಮೇಜಯ! ಯುಧಿಷ್ಠಿರನು ಹೇಳಿದ ಮಾತನ್ನು ಕೇಳಿ ಸವ್ಯಸಾಚಿಯಾದ ಧನಂಜಯನು ವಾಸುದೇವನ ಅಭಿಪ್ರಾಯವನ್ನೇ ಅನುಮೋದಿಸುತ್ತಾ ಹೇಳಿದನು : "ಅಣ್ಣ! ಕುಂತಿಯು ಹೇಳಿದುದು ಮತ್ತು ವಿದುರನು ಹೇಳಿದುದು-ಈ ಎಲ್ಲವನ್ನೂ ನಿನಗೆ ದೇವಕೀಪುತ್ರನಾದ ಶ್ರೀಕೃಷ್ಣನು ವಿವರಿಸಿ ಹೇಳಿದ್ದಾನೆ. ಅವನ ಮಾತುಗಳೆಲ್ಲವನ್ನೂ ನೀನು ಕೇಳಿ ಮನನಮಾಡಿ ಸಂಪೂರ್ಣವಾಗಿ ವಿಚಾರಮಾಡಿ ಈಗ ಮಾಡಬೇಕಾಗಿರುವ ಕಾರ್ಯವನ್ನು ನಿರ್ಧರಿಸಿರುವೆ. ವಿದುರ-ಕುಂತಿಯರು ಅಧರ್ಮಯುಕ್ತವಾದ ಮಾತುಗಳನ್ನಾಡ ಲಾರರೆಂಬುದೂ, ಅಧರ್ಮಯುಕ್ತವಾದ ಸಲಹೆಗಳನ್ನು ಕೊಡಲಾರ ರೆಂಬುದೂ ನನ್ನ ನಿಶ್ಚಿತಾಭಿಪ್ರಾಯವಾಗಿದೆ. ಸಕಲಸಂಭಾರಗಳೊಡನೆ ರಣರಂಗಕ್ಕೆ ಆಗಮಿಸಿದನಂತರ ಯುದ್ಧಮಾಡದೇ ಹಿಂದಿರುಗುವುದು ಖಂಡಿತವಾಗಿಯೂ ಉಚಿತವಾಗಿ ಕಾಣುವುದಿಲ್ಲ."

ಜನಮೇಜಯ! ಸವ್ಯಸಾಚಿಯು ಯುಧಿಷ್ಠಿರನೊಡನಾಡಿದ ಮಾತನ್ನು ಕೇಳಿ ವಾಸುದೇವನೂ ನಸುನಗುತ್ತಾ–"ಹೌದು ; ಹೌದು, ಅರ್ಜುನ! ನೀನು ಹೇಳಿದ್ದು ಸರಿಯಾಗಿದೆ"–ಎಂದು ಅರ್ಜುನನ ಮಾತನ್ನು ಪುಷ್ಟೀಕರಿಸಿದನು. ಅನಂತರದಲ್ಲಿ ಸೈನ್ಯಸಮೇತರಾದ ಪಾಂಡವರು ಯುದ್ಧವನ್ನು ಮಾಡಿಯೇ ತೀರಬೇಕೆನ್ನುವ ದೃಢಸಂಕಲ್ಪದಿಂದ ಆ ರಾತ್ರಿಯನ್ನು ಅಲ್ಲಿಯೇ ಸುಖವಾಗಿ ಕಳೆದರು.

ಂ೫೪ನೆಯ ಅಧ್ಯಾಯವು ಮುಗಿಯಿತು.

## ದುರ್ಯೋಧನನು ತನ್ನ ಸೈನ್ಯದ ವಿಭಜನೆಮಾಡಿದುದು : ಒಂದೊಂದು ಅಕ್ಷೌಹಿಣಿಗೂ ಸೇನಾಮುಖ್ಯರನ್ನು ಆರಿಸಿ ಅವರಿಗೆ ಪಟ್ಟಗಟ್ಟಿದುದು

ಜನಮೇಜಯ! ರಾತ್ರಿಯು ಕಳೆದು ಬೆಳಗಾಗುತ್ತಲೇ ದುರ್ಯೋಧನ ರಾಜನು ತನ್ನ ಪಕ್ಷದಲ್ಲಿ ಸಂಗ್ರಹವಾಗಿದ್ದ ಹನ್ನೊಂದು ಅಕ್ಷೌಹಿಣೀಸೈನ್ಯವನ್ನು ಹಲವಾರು ವಿಭಾಗಗಳಾಗಿ ವಿಂಗಡಿಸಿದನು. ಪದಾತಿ, ಗಜ, ರಥ ಮತ್ತು ಅಶ್ವಸೈನ್ಯಗಳಲ್ಲಿ ಅಗ್ರಭಾಗದಲ್ಲಿರಬೇಕಾದುವು, ಮಧ್ಯಭಾಗದಲ್ಲಿರಬೇಕಾದುವು ಮತ್ತು ಕಡೆಯಲ್ಲಿರಬೇಕಾದುವು–ಎಂದು ಮೂರು ವಿಭಾಗಗಳನ್ನಾಗಿ ಮಾಡಿ ಅವುಗಳನ್ನು ಆಯಾ ಸ್ಥಾನಗಳಲ್ಲಿ ನಿಲ್ಲುವಂತೆ ನಿರ್ದೇಶಿಸಿದನು. ದುರ್ಯೋಧನನ ಸೇನೆಯು ಸಕಲ ಸಂಭಾರಗಳಿಂದಲೂ ಸುಸಜ್ಜಿತವಾಗಿದ್ದಿತು. 'ಅನುಕರ್ಷ'ದಿಂದ ಕೂಡಿದ್ದಿತು.

(ಅನುಕರ್ಷವೆಂದರೆ ರಥದ ಕೆಳಭಾಗದಲ್ಲಿಟ್ಟಿರುವ ಬಿಡಿಭಾಗಗಳು. ಯುದ್ಧಸಮಯದಲ್ಲಿ ರಥವು ಅತ್ತಲಿತ್ತ ಸಂಚರಿಸುವಾಗ ಯಾವುದಾದರೂ ಭಾಗವು ಮುರಿದುಹೋದಲ್ಲಿ ಒಡನೆಯೇ ಸರಿಪಡಿಸಲು ಸಾಧ್ಯವಾಗುವಂತೆ ರಥದ ಕೆಳಭಾಗದಲ್ಲಿಯೇ ಕೆಲವು ಬಿಡಿಭಾಗಗಳನ್ನಿಟ್ಟಿರುತ್ತಾರೆ. ಇದಕ್ಕೆ ಅನುಕರ್ಷವೆಂದು ಹೆಸರು.)

ದುರ್ಯೋಧನನ ರಥಗಳು ಸಾನುಕರ್ಷವಾಗಿದ್ದುವು. ಬತ್ತಳಿಕೆಗಳಿಂದ ಕೂಡಿದ್ದುವು. 'ವರೂಥ'ಗಳಿಂದ ಕೂಡಿದ್ದುವು. (ವರೂಥವೆಂದರೆ ರಥದಲ್ಲಿ ಕುಳಿತಿರುವವರಿಗೆ ಪೆಟ್ಟುತಾಗದಂತೆ ಸುತ್ತಲೂ ಹಾಕಿರುವ ಕಟಕಟೆ.) ತೋಮರಗಳಿಂದ (ಈಟಿಗಳಿಂದ) ಕೂಡಿದ್ದುವು. 'ಉಪಾಸಂಗ'ಗಳಿಂದ ಕೂಡಿದ್ದುವು.

(ಉಪಾಸಂಗ ಎಂದರೂ ಬತ್ತಳಿಕೆ ಎಂದೇ ಆಗುತ್ತದೆ. ಹಿಂದೆ **ಸತೂಣೀರಾಃ** ಎಂಬ ಶಬ್ದವು ಬಂದಿರುತ್ತದೆ. ಆದುದರಿಂದ ಇಲ್ಲಿನ ಉಪಾಸಂಗ ಶಬ್ದಕ್ಕೆ **ಹಯಗಜವಾಹ್ಯಾಸ್ತೂಣಾಃ**–ಕುದುರೆಗಳೂ ಮತ್ತು

ಆನೆಗಳೂ ಒಯ್ಯುವ ಬತ್ತಳಿಕೆಗಳು–ಎಂದು ವ್ಯಾಖ್ಯಾನಕಾರರು ಅರ್ಥ ಮಾಡಿರುತ್ತಾರೆ.)

ಪದಾತಿಸೈನ್ಯವು ಲೋಹದಂಡಗಳಿಂದಲೂ, ಬತ್ತಳಿಕೆಗಳಿಂದಲೂ, ದೊಡ್ಡದಾದ ಕಾಷ್ಠಗಳಿಂದಲೂ ಕೂಡಿದ್ದಿತು. ರಥಗಳು 'ಧ್ವಜ'ಗಳಿಂದಲೂ 'ಪತಾಕೆ'ಗಳಿಂದಲೂ ಕೂಡಿದ್ದುವು.

(ಧ್ವಜ ಮತ್ತು ಪತಾಕೆ ಎರಡೂ ಪರ್ಯಾಯಪದಗಳು. ಇಲ್ಲಿ ಎರಡು ಪದಗಳನ್ನೂ ಪ್ರತ್ಯೇಕವಾಗಿ ಹೇಳಿರುವುದರಿಂದ ಪತಾಕಾ-ಎಂಬುದಕ್ಕೆ ರಾಷ್ಟ್ರದ ಚಿಹ್ನೆಯಿರುವ ಪಟವೆಂದೂ, ಧ್ವಜ-ಎಂಬುದಕ್ಕೆ ವ್ಯಕ್ತಿಯೊಬ್ಬನ ರಥದ ಚಿಹ್ನೆಯೆಂದೂ ಹೇಳಬಹುದಾಗಿದೆ. ಕಪಿಧ್ವಜ-ತಾಲಧ್ವಜ ಇತ್ಯಾದಿ.)

ರಥಗಳಲ್ಲಿ ಧನುಸ್ಸುಗಳೂ ದೊಡ್ಡ-ದೊಡ್ಡ ಬಾಣಗಳೂ ಇದ್ದುವು. ರಥಗಳು ಚಿತ್ರ-ವಿಚಿತ್ರವಾದ ಹಗ್ಗಗಳಿಂದ ಕೂಡಿದ್ದುವು. ಹತ್ತಿರದಲ್ಲಿ ಸಿಕ್ಕಿದವರನ್ನು ಸೆಳೆಯುವ ಸಾಮರ್ಥ್ಯವುಳ್ಳ ಪಾಶಗಳಿಂದ ಕೂಡಿದ್ದುವು. 'ಕಚಗ್ರಹ' ವಿಕ್ಷೇಪಯಂತ್ರಗಳಿಂದ ಕೂಡಿದ್ದುವು.

(ಕಚಗ್ರಹವೆಂದರೆ ಕೂದಲನ್ನು ಎಳೆದು ಹಿಡಿದುಕೊಳ್ಳುವುದು. ಕೂದಲು ಬಹಳ ನುಣುಪಾಗಿರುವುದರಿಂದ ಜಾರಿಹೋಗದಂತೆ ಶತ್ರುವಿನ ಕೂದಲನ್ನು ಸೆಳೆದೆಳೆದು ಬಹುದೂರದವರೆಗೆ ಎಸೆಯಬಹುದಾದ ಯಂತ್ರ. **'ಕಲವಿಙ್ಕಗೃಹತುಲ್ಯಃ ಚಿಕ್ಕಣದ್ರವ್ಯಾಂಚಿತಾಗ್ರಃ ದಣ್ಡವಿಶೇಷಃ'** ಗುಬ್ಬಚ್ಚಿಯ ಗೂಡಿಗೆ ಸದೃಶವಾದ ನುಣುಪಾದ ಅಗ್ರಭಾಗವುಳ್ಳ ದಂಡವಿಶೇಷ–ಎಂದು ವ್ಯಾಖ್ಯಾನಕಾರರು ಅರ್ಥಮಾಡಿರುತ್ತಾರೆ.)

ಎಣ್ಣೆಯ ಭಾಂಡಗಳಿದ್ದುವು. ಆನೆಯ ಯುದ್ಧಕವಚಗಳಿದ್ದುವು. ಮರಳನ್ನೂ ಸಂಗ್ರಹಿಸಿಡಲಾಗಿತ್ತು. ಹಾವುಗಳಿಂದ ತುಂಬಿದ ಭಾಂಡಗಳಿದ್ದುವು. ಅಗ್ನ್ಯುತ್ಪಾದಕವಾದ ರಾಳದ ರಸ ಮತ್ತು ರಾಳದ ಪುಡಿಯಿದ್ದಿತು. ಚಿಕ್ಕ-ಚಿಕ್ಕ ಗಂಟೆಗಳಿಂದ ಕೂಡಿದ ಗುರಾಣಿಗಳಿದ್ದುವು. ಅಯೋಮಯಗಳಾದ ಕತ್ತಿ, ಚೂರಿ ಮೊದಲಾದುವುಗಳಿದ್ದುವು. ಕುದಿಯುತ್ತಿದ್ದ ಬೆಲ್ಲದ ಪಾಕವಿದ್ದಿತು. ಯಂತ್ರದಿಂದ ಪ್ರಹರಿಸಬಹುದಾದ ಗೋಳಾಕಾರದ ಕಲ್ಲು

ಗಳಿದ್ದುವು. ಗಟ್ಟಿಯಾಗಿ ಶಬ್ದಮಾಡುವ ಚಿಕ್ಕದಾದ ಬಾಣಗಳಿದ್ದುವು. ಜೇನುಮೇಣವನ್ನು ಯಥೇಚ್ಛವಾಗಿ ಸಂಗ್ರಹಿಸಿದ್ದರು.

(**ತದಪಿ ದ್ರವೀಕೃತ್ಯ ಗುಡಜಲವತ್ಪ್ರೋಕ್ಷ್ಯಂ** ಮೇಣವೂ ಕಾಯಿಸಿ ನೀರಾಗಿಮಾಡಿ ಬೆಲ್ಲದ ಪಾಕವನ್ನು ಶತ್ರುಗಳ ಮೇಲೆ ಸುರಿಸುವಂತೆ ಸುರಿಸ ಲೋಸುಗ ಸಂಗ್ರಹಿಸತಕ್ಕ ವಸ್ತು-ಎಂದು ವ್ಯಾಖ್ಯಾನಕಾರರು ಹೇಳಿರುತ್ತಾರೆ.)

ಒನಕೆಯಂತಹ ಕಬ್ಬಿಣದ ಸರಳುಗಳಿದ್ದುವು. ರಥಗಳು ಬಾಣಗಳಿಂದಲೂ ದೊಣ್ಣೆಗಳಿಂದಲೂ ಕೂಡಿದ್ದುವು.

(ಕಾಂಡ ಎಂದರೆ ಬಾಣ ; ದಂಡಕ ಎಂದರೆ ದೊಣ್ಣೆ : ವ್ಯಾಖ್ಯಾನಕಾರರು ಕಾಂಡ ಎಂಬುದಕ್ಕೆ **ತದ್ಯುಕ್ತೋ ದಣ್ಡಃ** ಬಾಣಫಲಕ ಬಾಣಕ್ಕೆದುರಾಗಿ ಹಿಡಿಯುವ ಗುರಾಣಿಗೆ ಸಿಕ್ಕಿಸಿರುವ ದಂಡ-ಕೋಲು ಎಂದು ಅರ್ಥಮಾಡಿರುತ್ತಾರೆ.)

ನೇಗಿಲುಗಳಿದ್ದುವು. ವಿಷಲಿಪ್ತವಾದ ಈಟಿಗಳಿದ್ದುವು. ಧಾನ್ಯವನ್ನು ಹಸನುಮಾಡಲು ಬಳಸುವ ಮೊರಗಳೂ ಪೆಟ್ಟಿಗೆಗಳೂ ಇದ್ದುವು.

(**ಶೂರ್ಪಾಣಿ ತಪ್ತಗುಡಾದಿ ಪ್ರಕ್ಷೇಪಾರ್ಥಾನಿ** ಕಾದಬೆಲ್ಲದ ಪಾಕವನ್ನು ಪ್ರಕ್ಷೇಪಿಸುವ ಸಲುವಾಗಿ ಉಪಯೋಗಿಸುವ ಸಾಧನ. **ಪಿಟಕಾಃ ತದಾಶ್ರಯಾ ಮಂಜೂಷಾಃ**–ಈ ಸಾಧನಗಳನ್ನಿಟ್ಟಿರುವ ಪೆಟ್ಟಿಗೆ–**ಸಶೂರ್ಪಪಿಟಕಾಃ** ಎಂದು ವ್ಯಾಖ್ಯಾನಕಾರರು ಅರ್ಥಮಾಡಿರುತ್ತಾರೆ.)

ರಥಗಳು ಕುಡುಗೋಲುಗಳಿಂದಲೂ, ಅಂಕುಶಗಳಿಂದಲೂ, ಈಟಿ ಗಳಿಂದಲೂ ಕೂಡಿದ್ದುವು.

(ವ್ಯಾಖ್ಯಾನಕಾರರು **ಅಙ್ಕುಶತೋಮರಾಃ**-ಎಂದು ಒಂದೇ ಪದ ಮಾಡಿ **ಬದರೀಕಣ್ಟಕತುಲ್ಯಲೋಹಕಣ್ಟಕೋಪೇತಾಃ ತೋಮರಾಃ**– ಎಗಚೀಮುಳ್ಳಿನಂತಿರುವ ಲೋಹದ ಮುಳ್ಳುಗಳಿಂದ ಕೂಡಿದ ಈಟಿಗಳು ಎಂದು ಅರ್ಥಮಾಡಿರುತ್ತಾರೆ. ಇವುಗಳ ಪ್ರಯೋಗದಿಂದಾಗಿ ಶತ್ರುವಿನ ಕರುಳುಗಳು ಈ ಆಯುಧಗಳೊಡನೆ ಹೊರಬರುತ್ತದೆಂದು ವಿವರಣೆ ಕೊಟ್ಟಿದ್ದಾರೆ.)

ಎಲ್ಲ ಪದಾತಿಸೈನಿಕರೂ ಭಲ್ಲೆಗಳನ್ನೂ, ಈಟಿಗಳನ್ನೂ, ಕವಚಗಳನ್ನೂ ಹೊಂದಿದ್ದರು. ಕೊಡಲಿ, ಬಾಚಿ-ಇವೇ ಮೊದಲಾದ ಮರಗಳನ್ನು ಕತ್ತರಿಸುವ ಆಯುಧಗಳೂ ಇದ್ದುವು. ರಥಗಳು ಹುಲಿಗಳ ಚರ್ಮಗಳಿಂದಲೂ, ಪಟ್ಟೆಹುಲಿಗಳ ಚರ್ಮಗಳಿಂದಲೂ ಆಚ್ಛಾದಿತವಾಗಿದ್ದುವು. ಕೈಯಿಂದ ಪ್ರಹರಿಸಬಹುದಾದ ವಕ್ರವಾದ ಕಾಷ್ಠಫಲಕಗಳಿಂದ ಕೂಡಿದ್ದುವು. ಕೊಂಬುಗಳಿಂದ ಕೂಡಿದ್ದುವು. ಪ್ರಾಸವೇ ಮೊದಲಾದ ವಿಧವಿಧವಾದ ಆಯುಧಗಳಿಂದ ಕೂಡಿದ್ದುವು. ಕೊಡಲಿಗಳಿಂದಲೂ ಕೂಡಿದ್ದುವು.

ರಥಗಳು ಎಣ್ಣೆಯಿಂದಲೂ, ರೇಷ್ಮೆಯ ವಸ್ತ್ರಗಳಿಂದಲೂ, ತುಪ್ಪದ ಭಾಂಡಗಳಿಂದಲೂ ತುಂಬಿದ್ದುವು. ಎಲ್ಲ ಸೈನಿಕರೂ ಸುವರ್ಣದ ಬಲೆಗಳಿಂದ ಆಚ್ಛಾದಿತವಾಗಿದ್ದ ಕವಚಗಳನ್ನು ಧರಿಸಿದ್ದರು. ನಾನಾವಿಧವಾದ ಮಣಿಮಯವಾದ ಆಭರಣಗಳಿಂದ ಭೂಷಿತರಾಗಿದ್ದರು. ವಿಚಿತ್ರಶೋಭೆಯಿಂದ ಸಂಪನ್ನರಾಗಿದ್ದ ಸೈನಿಕರು ತಮ್ಮ ಕಾಂತಿಯಿಂದ ಪ್ರಜ್ವಲಿಸುತ್ತಿರುವ ಯಜ್ಞೇಶ್ವರನಿಗೆ ಸಮಾನರಾಗಿ ವಿರಾಜಿಸುತ್ತಿದ್ದರು. ಅದೇ ರೀತಿಯಲ್ಲಿ ಕವಚಗಳನ್ನು ಧರಿಸಿದ್ದ, ಶಸ್ತ್ರವಿದ್ಯೆಯಲ್ಲಿ ನಿಶ್ಚಯಜ್ಞಾನವಿದ್ದ, ಕುಲೀನರಾದ, ಕುದುರೆಯ ವಂಶಾವಳಿಯನ್ನು ಸಂಪೂರ್ಣವಾಗಿ ತಿಳಿದಿದ್ದ ವೀರಯೋಧರು ರಥಗಳ ಸಾರಥ್ಯದಲ್ಲಿ ನಿಯೋಜಿತರಾದರು. ಆ ರಥಗಳಲ್ಲಿ ಅನಿಷ್ಟನಿವಾರಣಾರ್ಥವಾಗಿ ಯಂತ್ರೌಷಧಿಗಳನ್ನು ಕಟ್ಟಲಾಗಿತ್ತು. ಕುದುರೆಗಳನ್ನು ಗಂಟೆ, ಮಾಲೆ, ಮುತ್ತಿನಗುಚ್ಛ ಇವುಗಳಿಂದ ಅಲಂಕರಿಸಲಾಗಿತ್ತು. ರಥದ ಭಾಗಗಳನ್ನು ಹಗ್ಗದಿಂದ ಬಲವಾಗಿ ಬಿಗಿದಿದ್ದರು. ರಥಗಳಿಗೆ ಧ್ವಜ-ಪತಾಕೆಗಳನ್ನು ಕಟ್ಟಿದ್ದರು. ರಥಗಳ ಸುತ್ತಲೂ ಆಭರಣಸದೃಶವಾದ ಸಣ್ಣ-ಸಣ್ಣ ಗಂಟೆಗಳನ್ನು ಕಟ್ಟಿದ್ದರು. ರಥಗಳ ತುದಿಯಲ್ಲಿ ಶಿಖರಗಳನ್ನಿಟ್ಟಿದ್ದರು (ಕಳಸವಿಟ್ಟಿದ್ದರು). ರಕ್ಷಣಾರ್ಥವಾಗಿ ರಥಗಳಿಗೆ ವ್ಯಾಘ್ರಚರ್ಮವನ್ನು ಹೊದ್ದಿಸಿದ್ದರು. ಕತ್ತಿಗಳನ್ನೂ ಪಟ್ಟಿಶವೆಂಬ ಆಯುಧಗಳನ್ನೂ ರಥಗಳಲ್ಲಿಟ್ಟಿದ್ದರು. ಆ ರಥಗಳೆಲ್ಲಕ್ಕೂ ನಾಲ್ಕು-ನಾಲ್ಕು ಕುದುರೆಗಳನ್ನು ಕಟ್ಟಿದ್ದರು. ಆ ಕುದುರೆಗಳೆಲ್ಲವೂ ಉತ್ತಮೋತ್ತಮವಾಗಿದ್ದುವು. ಎಲ್ಲರ ರಥಗಳಲ್ಲಿಯೂ ಪ್ರಾಸ, ಋಷ್ಟಿ (ಆಯುಧವಿಶೇಷಗಳು) ಮತ್ತು ನೂರು ನೂರು ಧನುಸ್ಸುಗಳನ್ನು ಇಟ್ಟಿದ್ದರು. ರಥದ ಎರಡೆರಡು ಕುದುರೆಗಳ

ನಿಯಂತ್ರಕನಾಗಿ ಒಬ್ಬೊಬ್ಬ ಸಾರಥಿಯು ಕುಳಿತಿದ್ದನು. (ಒಂದು ರಥಕ್ಕೆ ಇಬ್ಬರು ಸಾರಥಿಗಳಿದ್ದರು.) ರಥದ ಹಿಂಭಾಗದಲ್ಲಿ ರಥಚಕ್ರಗಳನ್ನು ರಕ್ಷಿಸುವ ಸಲುವಾಗಿ ಇಬ್ಬರು ರಥಿಕರಿದ್ದರು. ಆ ಇಬ್ಬರು ಸಾರಥಿಗಳೂ ರಥಿಗಳಲ್ಲಿ ಶ್ರೇಷ್ಠರಾಗಿದ್ದರು. ರಥದಲ್ಲಿ ಕುಳಿತು ಯುದ್ಧಮಾಡುವ ಯೋಧನಿಗೂ ಅಶ್ವಸಂಚಾಲನಕಲೆಯು ತಿಳಿದಿದ್ದಿತು. ಸುವರ್ಣಮಾಲೆಗಳಿಂದ ಅಲಂಕೃತ ವಾಗಿದ್ದ ಅಂತಹ ರಥಗಳು ಸಾವಿರಾರು ಸಂಖ್ಯೆಯಲ್ಲಿ ಸಜ್ಜಾಗಿ ನಿಂತಿದ್ದುವು. ಆ ರಥಸೇನೆಗಳು ಶತ್ರುಗಳಿಂದ ಅಭೇದ್ಯವಾಗಿ, ಪಟ್ಟಣಗಳಂತೆಯೇ ಸುರಕ್ಷಿತವಾಗಿದ್ದವು. ರಥಗಳಂತೆಯೇ ಆನೆಗಳೂ ಸುವರ್ಣಮಾಲೆಗಳಿಂದ ಭೂಷಿತವಾಗಿದ್ದವು. ಅವುಗಳನ್ನು ಹಗ್ಗಗಳಿಂದ ಬಂಧಿಸಿದ್ದರು. ಒಂದೊಂದು ಆನೆಯ ಮೇಲೂ ಏಳು ಮಂದಿ ಯೋಧರು ಕುಳಿತಿದ್ದರು. ಆ ಆನೆಗಳು ರತ್ನಸಾನುಗಳಿಂದ ಕೂಡಿದ್ದ ಪರ್ವತಗಳಂತೆಯೇ ಕಾಣುತ್ತಿದ್ದುವು. ಆನೆಯ ಮೇಲೆ ಕುಳಿತಿದ್ದ ಏಳು ಮಂದಿಯಲ್ಲಿ ಮುಂದಿನವರಿಬ್ಬರು ಅಂಕುಶಗಳನ್ನು ಹಿಡಿದು ಆನೆಯನ್ನು ನಿಯಂತ್ರಿಸುವವರಾಗಿದ್ದರು. ದೂರದಲ್ಲಿರುವವರನ್ನು ಸಂಹರಿಸಲು ಇಬ್ಬರು ಉತ್ತಮಧನುರ್ಧಾರಿಗಳಿದ್ದರು. ಸ್ವಲ್ಪ ದೂರದಲ್ಲಿದ್ದವ ರನ್ನು ಸಂಹರಿಸಲು ಇಬ್ಬರು ಶ್ರೇಷ್ಠವಾದ ಕತ್ತಿಗಳನ್ನು ಧರಿಸಿ ಕುಳಿತಿದ್ದರು. ಹತ್ತಿರಕ್ಕೆ ಬಂದು ಆಕ್ರಮಿಸಿದವರನ್ನು ಸಂಹರಿಸಲು ಶಕ್ತ್ಯಾಯುಧವನ್ನೂ ಮತ್ತು ತ್ರಿಶೂಲವನ್ನೂ ಹಿಡಿದು ಮತ್ತೊಬ್ಬನು ಕುಳಿತಿದ್ದನು. ಜನಮೇಜಯ! ಮಹಾತ್ಮನಾದ ದುರ್ಯೋಧನನ ಸೈನ್ಯವು ಮದಿಸಿದ ಆನೆಗಳಿಂದ ವ್ಯಾಪ್ತವಾಗಿಯೂ, ಸರ್ವಾಯುಧಗಳ ಸಮೃದ್ಧಿಯಿಂದ ಪರಿಪೂರ್ಣ ವಾಗಿಯೂ ಇದ್ದಿತು. ದುರ್ಯೋಧನನ ಸೈನ್ಯದಲ್ಲಿ ಕವಚಧಾರಿಗಳಾಗಿದ್ದ, ಯುದ್ಧಸನ್ನದ್ಧರಾಗಿದ್ದ, ಪತಾಕೆಗಳನ್ನು ಹೊಂದಿದ್ದ, ಆಭರಣಗಳಿಂದ ವಿಭೂಷಿತರಾಗಿದ್ದ ಸವಾರರನ್ನು ಹೊಂದಿದ್ದ ಹತ್ತಾರು ಸಾವಿರ ಅಶ್ವಸೈನ್ಯ ಗಳಿದ್ದುವು. ಮೇಲಕ್ಕೆ ಹತ್ತಿದೊಡನೆಯೇ ಕುಣಿದಾಟವಾಗಲೀ ಎಲ್ಲೆತಪ್ಪಿ ಹೋಗುವ ಸ್ವಭಾವವಾಗಲೀ ಇಲ್ಲದ, ಸುಶಿಕ್ಷಿತವಾದ, ಅಶ್ವಾಭರಣಗಳಿಂದ ಅಲಂಕೃತವಾದ, ಸರ್ವದಾ ರಾವುತನ ವಶವರ್ತಿಗಳಾದ ಅನೇಕಶತ ಸಹಸ್ರಸಂಖ್ಯಾತವಾದ ಕುದುರೆಗಳು ದುರ್ಯೋಧನನ ಸೈನ್ಯದಲ್ಲಿದ್ದುವು.

(ಈ ಶ್ಲೋಕದಲ್ಲಿ ಮೊದಲನೆಯ ಪದವಾಗಿ **ಅಸಂಗ್ರಾಹಾಃ** ಎಂಬ

ಪದವಿದೆ. ಸಂಗ್ರಾಹಶಬ್ದಕ್ಕೆ ಹಿಡಿತ ಎಂದರ್ಥ : **ಅಸಂಗ್ರಾಹಾಃ** ಎಂದರೆ 'ಹಿಡಿತಕ್ಕೆ ಸಿಕ್ಕದ' ಎಂದೇ ಅರ್ಥಹೇಳಬೇಕಾಗುತ್ತದೆ. ಆದರೆ ವ್ಯಾಖ್ಯಾನಕಾರರು ಹೀಗೆ ಅರ್ಥಮಾಡಿರುತ್ತಾರೆ : **ಸಂಗ್ರಾಹಃ ಬೃಂಹದುದ್ರಙ್ಗಃ-ಹೇಷಣಪೂರ್ವಕಮಗ್ರಪಾದಾಭ್ಯಾಂ ಉತ್ಪ್ಲವನಮಿತಿ ಯಾವತ್**= ಗಟ್ಟಿಯಾಗಿ ಕೆನೆಯುತ್ತಾ ಮುಂದಿನ ಎರಡು ಕಾಲುಗಳನ್ನೂ ಮೇಲೆತ್ತಿ ಹಾರುವುದಕ್ಕೆ ಸಂಗ್ರಾಹ ಅಥವಾ ಬೃಂಹದುದ್ರಂಗವೆಂದು ಹೆಸರು. **ತದ್ರಹಿತಾಃ ಅಸಂಗ್ರಾಹಾಃ** ಕುಣಿಯುವುದು ಕೆನೆಯುವುದು ಮೊದಲಾದುವುಗಳಿಲ್ಲದೇ ಇರುವ ಕುದುರೆಗಳು ; ಸುಶಿಕ್ಷಿತವಾದ ಕುದುರೆಗಳು. **ಸಂಗ್ರಾಹೋ ಬೃಂಹದುದ್ರಙ್ಗಃ-ವಿಶ್ವಕೋಶಃ**)

ದುರ್ಯೋಧನನ ಸೈನ್ಯದಲ್ಲಿದ್ದ ಪದಾತಿಗಣದ ಮನುಷ್ಯರಲ್ಲಿ ಕಪ್ಪು ವರ್ಣದವರೂ, ಬಿಳಿಯವರ್ಣದವರೂ, ಕೆಂಪುವರ್ಣದವರೂ ಇದ್ದರು. ಎಲ್ಲರೂ ನಾನಾವಿಧವಾದ ಕವಚಗಳನ್ನು ಧರಿಸಿದ್ದರು. ನಾನಾವಿಧವಾದ ಅಸ್ತ್ರಗಳನ್ನು ಹಿಡಿದಿದ್ದರು. ಸುವರ್ಣಮಯವಾದ ಮಾಲೆಗಳನ್ನು ಧರಿಸಿದ್ದರು.

**ರಥಸ್ಯಾಸನ್ದಶ ಗಜಾ ಗಜಸ್ಯ ದಶ ವಾಜಿನಃ ।**
**ನರಾ ದಶ ಹಯಸ್ಯಾಸನ್ಪಾದರಕ್ಷಾಃ ಸಮನ್ತತಃ ॥೨೨॥**

ಒಂದೊಂದು ರಥದ ಹಿಂದೆಯೂ ಹತ್ತು ಆನೆಗಳಿದ್ದುವು. ಒಂದೊಂದು ಆನೆಯ ಹಿಂಬದಿಯಲ್ಲಿಯೂ ಹತ್ತು ಅಶ್ವಗಳಿದ್ದುವು. ಒಂದೊಂದು ಅಶ್ವದ ಹಿಂದೆಯೂ ಹತ್ತು ಕಾಲಾಳುಗಳಿದ್ದರು. ಅವರನ್ನು ರಕ್ಷಿಸಲು ಸುತ್ತಲೂ ಪಾದರಕ್ಷಕರಿದ್ದರು. (ಒಂದು ರಥಕ್ಕೆ ಬೆಂಗಾವಲಾಗಿ ಹತ್ತು ಆನೆಗಳೂ ನೂರು ಕುದುರೆಗಳೂ, ಒಂದು ಸಾವಿರ ಕಾಲಾಳುಗಳೂ ಮತ್ತು ಸುತ್ತಲೂ ರಕ್ಷಕರೂ ಇದ್ದರು.)

**ರಥಸ್ಯ ನಾಗಾಃ ಪಞ್ಚಾಶನ್ನಾಗಸ್ಯಾಸಞ್ಛತಂ ಹಯಾಃ ।**
**ಹಯಸ್ಯ ಪುರುಷಾಃ ಸಪ್ತ ಭಿನ್ನಸಂಧಾನಕಾರಿಣಃ ॥೨೩॥**

ಮತ್ತೊಂದು ಕಡೆಯಲ್ಲಿ ಈ ಕ್ರಮದಿಂದಲೂ ಸೈನ್ಯವನ್ನು ನಿಲ್ಲಿಸಲಾಗಿತ್ತು. ಒಂದು ರಥದ ಹಿಂದೆ ಐವತ್ತು ಆನೆಗಳಿದ್ದುವು. ಒಂದೊಂದು

ಆನೆಯ ಹಿಂದೆಯೂ ನೂರು-ನೂರು ಕುದುರೆಗಳಿದ್ದುವು. ಒಂದೊಂದು ಕುದುರೆಯ ಹಿಂಬದಿಯಲ್ಲಿ ಏಳೇಳು ಮಂದಿ ಪದಾತಿಸೈನಿಕರಿದ್ದರು. (ಒಂದು ರಥಕ್ಕೆ ಬೆಂಗಾವಲಾಗಿ ಐವತ್ತು ಆನೆಗಳೂ, ಐದುಸಾವಿರ ಕುದುರೆಗಳೂ, ಮೂವತ್ತೈದುಸಾವಿರ ಕಾಲಾಳುಗಳೂ ಇದ್ದರು.) ಯುದ್ಧಸಮಯದಲ್ಲಿ ಒಡೆದುಹೋದ ಸೈನ್ಯದ ಎರಡು ತುಕ್ಕಡಿಗಳನ್ನು ಸೇರಿಸಿ, ಅವರೊಡನೆ ಸೇರಿ ಯುದ್ಧಮಾಡುವ ಕಾರ್ಯವು ಈ ಸೈನಿಕರಿಗೆ ಸೇರಿದ್ದಿತು.

**ಸೇನಾ ಪಞ್ಚಶತಂ ನಾಗಾ ರಥಾಸ್ತಾವನ್ತ ಏವ ಚ ।**
**ದಶ ಸೇನಾ ಚ ಪೃತನಾ ಪೃತನಾ ದಶವಾಹಿನೀ ॥೨೪॥**

ಐದುನೂರು ಆನೆಗಳೂ ಐದುನೂರು ರಥಗಳೂ ಇರುವುದಕ್ಕೆ ಒಂದು ಸೇನೆಯೆಂದು ಹೆಸರು. ಇಂತಹ ಹತ್ತು ಸೇನೆಗಳಿಗೆ ಪೃತನಾ ಎಂದು ಹೆಸರು. ಹತ್ತು ಪೃತನೆಗಳು ಸೇರಿದರೆ ಒಂದು ವಾಹಿನಿಯಾಗುತ್ತದೆ. (ಆದರೆ ಇದೇ ಪದಗಳನ್ನು ಸೇನೆಯ ಪರ್ಯಾಯಪದಗಳನ್ನಾಗಿಯೂ ಉಪಯೋಗಿಸುತ್ತಾರೆ. ಸೇನಾ, ವಾಹಿನೀ, ಪೃತನಾ, ಧ್ವಜಿನೀ, ಚಮೂ, ಅಕ್ಷೌಹಿಣೀ, ವರೂಥಿನೀ–ಇವುಗಳೆಲ್ಲವೂ ಸೇನೆಯ ಪರ್ಯಾಯಪದಗಳು. ಸೇನೆಯ ಒಂದೊಂದು ಭಾಗವನ್ನು ಒಂದೊಂದು ಹೆಸರಿನಿಂದ ಕರೆಯುತ್ತಿದ್ದರು.)

ಜನಮೇಜಯ! ಈ ರೀತಿಯಲ್ಲಿ ಧೀಮಂತನಾದ ದುರ್ಯೋಧನನು ತನ್ನ ಸೈನ್ಯವನ್ನು ಸಜ್ಜುಗೊಳಿಸಿದನು.

(ಈ ಶ್ಲೋಕದಲ್ಲಿ ಐದುನೂರು ರಥಗಳೂ ಐದುನೂರು ಆನೆಗಳೂ ಇರುವುದಕ್ಕೆ ಒಂದು ಸೇನೆ ಎಂದು ಹೇಳಿದ್ದಾರೆ. ಕೋಷ್ಟಕದ ಪ್ರಕಾರ ಸೇನಾಮುಖ ಎಂದಿರುವುದೇ ಹೊರತು ಸೇನಾ ಎಂಬ ಹೆಸರಿಲ್ಲ. ಮುಂದೆಯೂ ಹತ್ತು ಸೇನೆಗಳು ಒಂದು ಪೃತನಾ. ಹತ್ತು ಪೃತನೆಗಳು ಒಂದು ವಾಹಿನೀ ಎಂದು ಈ ಶ್ಲೋಕದಲ್ಲಿದೆ. ಆದರೆ ಕೋಷ್ಟಕದ ಪ್ರಕಾರ ವಾಹಿನಿಗಿಂತಲೂ ಪೃತನೆಯೇ ದೊಡ್ಡದು. ಮೂರು ವಾಹಿನಿಗಳಿಗೆ ಒಂದು ಪೃತನಾ ಆಗುತ್ತದೆ. ಅನುಕೂಲ್ಯಕ್ಕೆ ತಕ್ಕಂತೆ ವಿಂಗಡಿಸಿಕೊಂಡಿದ್ದಾರೆಂದು ಹೇಳಬಹುದು.)

ಕುರುಕ್ಷೇತ್ರದಲ್ಲಿ ಹನ್ನೊಂದು ಅಕ್ಷೌಹಿಣೀಸೈನ್ಯಗಳೂ ಮತ್ತು ಏಳು

ಅಕ್ಷೌಹಿಣೀಸೈನ್ಯಗಳೂ ಒಟ್ಟು ಹದಿನೆಂಟು ಅಕ್ಷೌಹಿಣೀಸೈನ್ಯಗಳು ಮಿಳಿತವಾದುವು. ಅದರಲ್ಲಿ ಪಾಂಡವರ ಸೈನ್ಯವು ಕೇವಲ ಏಳು ಅಕ್ಷೌಹಿಣಿಯಾಗಿದ್ದಿತು. ಕೌರವರದು ಹನ್ನೊಂದು ಅಕ್ಷೌಹಿಣಿಯಾಗಿದ್ದಿತು.

**ನರಾಣಾಂ ಪಞ್ಚಪಞ್ಚಾಶದೇಷಾ ಪತ್ತಿರ್ವಿಧೀಯತೇ ।**
**ಸೇನಾಮುಖಂ ಚ ತಿಸ್ರಸ್ತಾ ಗುಲ್ಮ ಇತ್ಯಭಿಶಬ್ದಿತಮ್ ॥೨೮॥**

ಐವತ್ತೈದು ಕಾಲಾಳುಗಳ ಒಂದು ತುಕ್ಕಡಿಗೆ ಪತ್ತಿ ಎಂದು ಕರೆಯುತ್ತಾರೆ. ಇಂತಹ ಮೂರು ಪತ್ತಿಗಳು ಸೇರಿದರೆ ಒಂದು ಸೇನಾಮುಖವಾಗುತ್ತದೆ. ಮೂರು ಸೇನಾಮುಖಗಳು ಸೇರಿದರೆ ಒಂದು ಗುಲ್ಮವಾಗುತ್ತದೆ.

**ತ್ರಯೋ ಗುಲ್ಮಾ ಗಣಸ್ತ್ವಾಸೀದ್ಗಣಾಸ್ತ್ವಯುತಶೋಽಭವನ್ ।**
**ದುರ್ಯೋಧನಸ್ಯ ಸೇನಾಸು ಯೋತ್ಸ್ಯಮಾನಾಃ ಪ್ರಹಾರಿಣಃ ॥೨೯॥**

ಮೂರು ಗುಲ್ಮಗಳು ಸೇರಿದರೆ ಒಂದು ಗಣವಾಗುತ್ತದೆ. ದುರ್ಯೋಧನನ ಸೇನೆಯಲ್ಲಿ ಶತ್ರುಗಳನ್ನು ಪ್ರಹರಿಸಲು ಸಿದ್ಧರಾಗಿದ್ದ ಇಂತಹ ಪದಾತಿಗಣಗಳು ಹತ್ತುಸಾವಿರಕ್ಕೂ ಮೀರಿದ್ದುವು (ಅಸಂಖ್ಯಾತವಾಗಿದ್ದುವು). (ಮೇಲಿನ ಶ್ಲೋಕದಲ್ಲಿ ಪಞ್ಚಪಞ್ಚಾಶತ್-ಐವತ್ತೈದು, ನರಾಣಾಂ-ಮನುಷ್ಯರಿಂದ, ಏಷಾ ಪತ್ತಿಃ– ಪತ್ತಿ ಎಂಬುದು ವಿಧೀಯತೇ–ರಚಿಸಲ್ಪಡುತ್ತದೆ ಎಂಬುದಾಗಿರುತ್ತದೆ. ಆದರೆ ಕೋಷ್ಟಕದ ಪ್ರಕಾರ ಒಂದು ಪತ್ತಿಯಲ್ಲಿ ಐವರು ಮಾತ್ರವೇ ಕಾಲಾಳುಗಳಿರುತ್ತಾರೆ. ಇದಕ್ಕೆ ಪಾಠಾಂತರವೂ ಇರುವುದಿಲ್ಲ. ಮುಂದೆ ಸೇನಾಮುಖ, ಗುಲ್ಮ ಈ ಎಲ್ಲವನ್ನೂ ಕೋಷ್ಟಕದಂತೆಯೇ ಹೇಳಲಾಗಿದೆ. ಐವತ್ತೈದರ ಸಂಖ್ಯೆಯನ್ನು ನಿರ್ಧರಿಸಿಕೊಂಡು ಅದಕ್ಕೆ ಪತ್ತಿ ಎಂದು ಕರೆದಿರಬಹುದು. ಮಹಾಭಾರತದ ಆದಿಪರ್ವದಲ್ಲಿ ಬರುವ ಅಕ್ಷೌಹಿಣೀಕೋಷ್ಟಕವು ಈ ರೀತಿಯಾಗಿದೆ :

**ಏಕೋ ರಥೋ ಗಜಶ್ಚೈಕೋ ನರಾಃ ಪಞ್ಚ ಪದಾತಯಃ ।**
**ತ್ರಯಶ್ಚ ತುರಗಾಸ್ತಜ್ಜ್ಞೈಃ ಪತ್ತಿರಿತ್ಯಭಿಧೀಯತೇ ॥೧೯॥**
**ಪತ್ತಿಂ ತು ತ್ರಿಗುಣಾಮೇತಾಮಾಹುಃ ಸೇನಾಮುಖಂ ಬುಧಾಃ ।**
**ತ್ರೀಣೀ ಸೇನಾಮುಖಾನ್ಯೇಕೋ ಗುಲ್ಮ ಇತ್ಯಭಿಧೀಯತೇ ॥೨೦॥**

**ತ್ರಯೋ ಗುಲ್ಮಾ ಗಣೋ ನಾಮ ವಾಹಿನೀ ತು ಗಣಾಸ್ತ್ರಯಃ ।**
**ಗಣಾಸ್ತಿಸ್ರಸ್ತು ವಾಹಿನ್ಯಃ ಪೃತನೇತಿ ವಿಚಕ್ಷಣೈಃ ॥೨೧॥**
**ಚಮೂಸ್ತು ಪೃತನಾಸ್ತಿಸ್ರಶ್ಚಮ್ವಸ್ತಿಸ್ರಸ್ತ್ವನೀಕಿನೀ ।**
**ಅನೀಕಿನೀಂ ದಶಗುಣಾಂ ಪ್ರಾಹುರಕ್ಷೌಹಿಣೀಂ ಬುಧಾಃ ॥೨೨॥**

ಆದಿಪರ್ವ ಅಧ್ಯಾಯ-೨

ಅಮರಕಾರನೂ ಹೀಗೆಯೇ ಹೇಳಿದ್ದಾನೆ :
**ಏಕೇಭೈಕರಥ ತ್ರ್ಯಶ್ವಾ ಪತ್ತಿಃ ಪಞ್ಚಪದಾತಿಕಾ ।**
**ಪತ್ತ್ಯಙ್ಗೈಸ್ತ್ರಿಗುಣೈಃ ಸರ್ವೈಃ ಕ್ರಮಾದಾಖ್ಯಾ ಯಥೋತ್ತರಮ್ ॥**
**ಸೇನಾಮುಖಂ ಗುಲ್ಮಗಣೌ ವಾಹಿನೀ ಪೃತನಾ ಚಮೂಃ ।**
**ಅನೀಕಿನೀ ದಶಾನೀಕಿನ್ಯೋಽಕ್ಷೌಹಿಣೀ...**

ಆದರೆ ಕಡೆಯಲ್ಲಿ ಯುಧಿಷ್ಠಿರನು ಸತ್ತವರ ಸಂಖ್ಯೆಯನ್ನು ೧೬೬ ಕೋಟಿ ಎನ್ನುತ್ತಾನೆ. ಇಲ್ಲಿ ಬರೆದಿರುವ ಕೋಷ್ಟಕವನ್ನಿಟ್ಟುಕೊಂಡರೆ ಆ ಸಂಖ್ಯೆಗೆ ಮುಟ್ಟುತ್ತದೆ.)

* * * *

ಆ ಸಮಯದಲ್ಲಿ ಮಹಾಬಾಹುವಾದ ದುರ್ಯೋಧನರಾಜನು–ಶೂರರಾದವರನ್ನೂ ಬುದ್ಧಿವಂತರಾದವರನ್ನೂ ಹುಡುಕಿ ಅವರನ್ನು ತನ್ನ ಸೇನೆಯ ಅಧಿಪತಿಗಳನ್ನಾಗಿ ಮಾಡಿಕೊಂಡನು. ಒಂದೊಂದು ಅಕ್ಷೌಹಿಣೀಸೈನ್ಯಕ್ಕೂ ಪ್ರತ್ಯೇಕ-ಪ್ರತ್ಯೇಕವಾಗಿ ಯಾರು ಯಾರು ನಾಯಕರಾಗಬೇಕೆಂಬುದನ್ನು ಮನಸ್ಸಿನಲ್ಲಿ ನಿರ್ಧರಿಸಿದವನಾಗಿ, ನರಶ್ರೇಷ್ಠರಾದ ಕೃಪಾಚಾರ್ಯರು, ದ್ರೋಣರು, ಶಲ್ಯ, ಸಿಂಧುರಾಜನಾದ ಜಯದ್ರಥ, ಕಾಂಭೋಜರಾಜನಾದ ಸುದಕ್ಷಿಣ, ಕೃತವರ್ಮಾ, ದ್ರೋಣಪುತ್ರನಾದ ಅಶ್ವತ್ಥಾಮಾ, ಕರ್ಣ, ಭೂರಿಶ್ರವಸ, ಸುಬಲಪುತ್ರನಾದ ಶಕುನಿ, ಮಹಾಬಲನಾದ ಬಾಹ್ಲಿಕ–ಇವರನ್ನು ಮೊದಲೇ ತನ್ನ ಬಳಿಗೆ ಕರೆಸಿಕೊಂಡು ಅವರೆಲ್ಲರಿಗೂ ವಿಧಿಪೂರ್ವಕವಾಗಿ ಸೇನಾಪತ್ಯದ ಪಟ್ಟಗಟ್ಟಿದನು. ಜನಮೇಜಯ! ಸೇನಾಪ್ರಮುಖರನ್ನು ಸುಪ್ರೀತರನ್ನಾಗಿ ಮಾಡಲು ದುರ್ಯೋಧನನು ಅನುದಿನವೂ, ಗಂಟೆ-ಗಂಟೆಗೂ ಅವರಿಗೆ ನಾನಾವಿಧವಾದ ಸತ್ಕಾರಗಳನ್ನು ತಾನೇ ಸ್ವತಃ ನಿಂತು ಮಾಡುತ್ತಿದ್ದನು.

ಅಡಿಗಡಿಗೂ ಮಾಡುವನು. ಒಮ್ಮೆ ಮಾಡಿದುದರಿಂದ ಅವನಿಗೆ ತೃಪ್ತಿಯುಂಟಾಗುತ್ತಿರಲಿಲ್ಲ. ಅಭಿಷಿಕ್ತರಾದ ಸೇನಾಪತಿಗಳ ಅನುಯಾಯಿಗಳನ್ನೂ ಉಪಸೇನಾಪತಿ, ದಳಪತಿ-ಮುಂತಾದ ಸ್ಥಾನಗಳಲ್ಲಿ ದುರ್ಯೋಧನನು ನಿಯಮಿಸಿದನು. ಸೇನಾಪತ್ಯವನ್ನು ವಹಿಸಿದ್ದ ರಾಜರ ಸೈನಿಕರೆಲ್ಲರೂ ರಾಜನಾದ ದುರ್ಯೋಧನನಿಗೆ ಪ್ರಿಯವನ್ನುಂಟುಮಾಡುವ ಅಭಿಲಾಷೆಯುಳ್ಳವರಾಗಿದ್ದರು.

೧೫೫ನೆಯ ಅಧ್ಯಾಯವು ಮುಗಿಯಿತು.

೧೫೬ನೆಯಅಧ್ಯಾಯ ಸೈನ್ಯನಿರ್ಯಾಣಪರ್ವ (ಮುಂದುವರಿದಿದೆ)

## ದುರ್ಯೋಧನನು ಭೀಷ್ಮನನ್ನು ಅಖಿಲಸೇನೆಯ ದಂಡನಾಯಕನನ್ನಾಗಿ ಮಾಡಿಕೊಂಡುದು : ಅನಂತರ ಕುರುಕ್ಷೇತ್ರಕ್ಕೆ ಹೋಗಿ ಶಿಬಿರಗಳನ್ನು ನಿರ್ಮಾಣಮಾಡಿದುದು

ವೈಶಂಪಾಯನರು ಹೇಳುತ್ತಾರೆ :

ಜನಮೇಜಯ! ದುರ್ಯೋಧನನು ತನ್ನ ಹನ್ನೊಂದು ಅಕ್ಷೌಹಿಣೀ ಸೈನ್ಯದಲ್ಲಿ ಪ್ರತ್ಯೇಕ-ಪ್ರತ್ಯೇಕವಾಗಿ ಒಂದೊಂದು ಅಕ್ಷೌಹಿಣಿಗೆ ಒಬ್ಬೊಬ್ಬ ಸೇನಾನಾಯಕನಂತೆ ಕೃಪ-ದ್ರೋಣರೇ ಮೊದಲಾಗಿ ಹನ್ನೊಂದು ಮಂದಿ ಮಹಾವೀರರಿಗೆ ಪಟ್ಟಾಭಿಷೇಕಮಾಡಿದನಂತರ ತನ್ನ ಪರವಾಗಿ ಯುದ್ಧಮಾಡಲು ಬಂದಿದ್ದ ಎಲ್ಲ ರಾಜರೊಡನೆ ಶಾಂತನುವಿನ ಮಗನಾದ ಭೀಷ್ಮನ ಬಳಿಗೆ ಹೋಗಿ ಬದ್ಧಾಂಜಲಿಯಾಗಿ ಈ ಮಾತನ್ನು ಹೇಳಿದನು :

**ಋತೇ ಸೇನಾಪ್ರಣೇತಾರಂ ಪೃತನಾ ಸುಮಹತ್ಯಪಿ ।**
**ದೀರ್ಯತೇ ಯುದ್ಧಮಾಸಾದ್ಯ ಪಿಪೀಲಿಕಪುಟಂ ಯಥಾ ॥೨॥**

“ಪಿತಾಮಹ! ಸೈನ್ಯವು ಎಷ್ಟೇ ದೊಡ್ಡದಾಗಿದ್ದರೂ ಸೇನೆಗೆ ಸರಿಯಾದ ನೇತಾರನಿಲ್ಲದೇ ಅದು ಯುದ್ಧಕ್ಕೆ ಹೋಯಿತೆಂದರೆ ಇರುವೆಯ ಗೂಡಿನಂತೆ–ಇರುವೆಯ ಸಾಲು ಸ್ವಲ್ಪ ಅಡಚಣೆಯಾದರೂ ಭಿನ್ನವಾಗಿ ಹೋಗುವಂತೆ ಭಗ್ನವಾಗಿ ಹೋಗುತ್ತದೆ.

**ನ ಹಿ ಜಾತು ದ್ವಯೋರ್ಬುದ್ಧಿಃ ಸಮಾ ಭವತಿ ಕರ್ಹಿಚಿತ್ ।**
**ಶೌರ್ಯಂ ಚ ಬಲನೇತೄಣಾಂ ಸ್ಪರ್ಧತೇ ಚ ಪರಸ್ಪರಮ್ ॥೩॥**

ಇಬ್ಬರ ಬುದ್ಧಿಯು ಯಾವಾಗಲೂ ಒಂದೇ ಸಮನಾಗಿರುವುದಿಲ್ಲ. ಸೈನ್ಯಗಳ ನೇತಾರರಾದ ಸೇನಾಪತಿಗಳಲ್ಲಿ ಪರಸ್ಪರವಾಗಿ ಶೌರ್ಯದ ಸ್ಪರ್ಧೆಯಿದ್ದೇ ಇರುತ್ತದೆ. ಮತ್ತೊಬ್ಬನಿಗಿಂತಲೂ ತನ್ನ ಪರಾಕ್ರಮವು ಹೆಚ್ಚಿನದೆಂದು ಪ್ರತಿಯೊಬ್ಬ ಸೇನಾನಿಯೂ ಭಾವಿಸುತ್ತಾನೆ. ಇದು ಸ್ವಾಭಾವಿಕ. ಈ ವಿಷಯದಲ್ಲಿ ಒಂದು ಇತಿಹಾಸವೂ ಇದೆ, ಪಿತಾಮಹ! ಒಮ್ಮೆ ಬ್ರಾಹ್ಮಣರು ತಮ್ಮ ಕುಶಮಯವಾದ ಧ್ವಜವನ್ನು ಹಾರಿಸುತ್ತಾ ಅಮಿತೌಜಸ್ಕರಾದ ಹೈಹಯರನ್ನು ಎದುರಿಸಿದರು. ಬ್ರಾಹ್ಮಣರನ್ನನುಸರಿಸಿ ವೈಶ್ಯರೂ ಮತ್ತು ಶೂದ್ರರೂ ಧಾವಿಸಿದರು. ಒಂದು ಪಕ್ಷದಲ್ಲಿ ಬ್ರಾಹ್ಮಣ-ವೈಶ್ಯ-ಶೂದ್ರರೂ, ಮತ್ತೊಂದು ಪಕ್ಷದಲ್ಲಿ ಕ್ಷತ್ರಿಯರೂ ನಿಂತು ಯುದ್ಧಮಾಡತೊಡಗಿದರು. ಆ ಯುದ್ಧದಲ್ಲಿ ಬಹುಸಂಖ್ಯಾತರಾದ ಬ್ರಾಹ್ಮಣ-ವೈಶ್ಯ-ಶೂದ್ರರು ಅಲ್ಪಸಂಖ್ಯಾತರಾದ ಕ್ಷತ್ರಿಯರಿಂದ ಪುನಃ ಪುನಃ ಪರಾಜಿತರಾಗುತ್ತಿದ್ದರು. ಇದಕ್ಕೆ ಕಾರಣವೇನೆಂದರೆ-ಕ್ಷತ್ರಿಯರು ಯದ್ಯಪಿ ಅಲ್ಪಸಂಖ್ಯಾತರಾಗಿದ್ದರೂ ಐಕಮತ್ಯದಿಂದ ಯುದ್ಧಮಾಡುತ್ತಿದ್ದರು. ಆದುದರಿಂದ ಅವರೇ ಬಾರಿ-ಬಾರಿಗೂ ಜಯಗಳಿಸುತ್ತಿದ್ದರು. ಕಟ್ಟಕಡೆಗೆ ಬ್ರಾಹ್ಮಣಸತ್ತಮರು ಅದಕ್ಕೆ ಕಾರಣವನ್ನು ಕ್ಷತ್ರಿಯರನ್ನೇ ಕೇಳಿದರು. (ನಾವು ಬಹುಸಂಖ್ಯಾತರಾಗಿರುತ್ತೇವೆ. ನೀವು ಅಲ್ಪಸಂಖ್ಯಾತರಾಗಿರುವಿರಿ. ಹೀಗಿದ್ದರೂ ನೀವು ನಮ್ಮನ್ನು ಪುನಃ ಪುನಃ ಸೋಲಿಸುತ್ತಲೇ ಇದ್ದೀರಿ. ಇದರ ಕಾರಣವಾದರೂ ಏನು?) ಧರ್ಮಜ್ಞರಾದ ಕ್ಷತ್ರಿಯರು ಅವರ ಪ್ರಶ್ನೆಗೆ ಯಥಾವತ್ತಾಗಿಯೇ ಉತ್ತರಿಸಿದರು :

**ವಯಮೇಕಸ್ಯ ಶೃಣ್ವಾನಾ ಮಹಾಬುದ್ಧಿಮತೋ ರಣೇ ।**
**ಭವನ್ತಸ್ತು ಪೃಥಕ್ಸರ್ವೇ ಸ್ವಬುದ್ಧಿವಶವರ್ತಿನಃ ॥೮॥**

"ನಾವು ಪರಮಬುದ್ಧಿಶಾಲಿಯಾದವನೊಬ್ಬನನ್ನು ಸೇನಾಪತಿಯನ್ನಾಗಿ ಮಾಡಿಕೊಂಡು ಯುದ್ಧದಲ್ಲಿ ಅವನ ನಿರ್ದೇಶಾನುಸಾರವಾಗಿ ನಡೆದುಕೊಳ್ಳುತ್ತೇವೆ. ಇದೇ ನಮ್ಮ ಜಯಕ್ಕೆ ಕಾರಣ. ನೀವಾದರೋ ಒಬ್ಬ ನಾಯಕನ ನಿರ್ದೇಶನಕ್ಕೆ ಒಳಪಟ್ಟವರಾಗಿಲ್ಲ. ಒಬ್ಬೊಬ್ಬರೂ ಒಂದೊಂದು ರೀತಿಯಲ್ಲಿ ನಿಮ್ಮ ನಿಮ್ಮ ಬುದ್ಧಿಗೆ ತೋಚಿದಂತೆ ವರ್ತಿಸುತ್ತೀರಿ.

(ಒಬ್ಬನ ಬುದ್ಧಿಯು ಮತ್ತೊಬ್ಬನ ಬುದ್ಧಿಗೆ ಅನುಗುಣವಾಗಿ

ಎಂದಿಗೂ ಇರುವುದಿಲ್ಲ. 'ಎತ್ತು ಏರಿಗೆ ಎಳೆಯಿತು–ಕೋಣ ನೀರಿಗೆ ಎಳೆಯಿತು'–ಎಂಬ ನಾಣ್ಣುಡಿಯಂತೆ ಪರಸ್ಪರವಿರೋಧವಾದ ಬುದ್ಧಿಯಿಂದ ಕಾರ್ಯಮಾಡುವುದರಿಂದ ವಿಜಯವು ಎಂದಿಗೂ ಲಭಿಸುವುದಿಲ್ಲ.)

ಅನಂತರದಲ್ಲಿ ಬ್ರಾಹ್ಮಣರು–ಶೂರನೂ ಕುಶಲನೂ ಆಗಿದ್ದ ಒಬ್ಬ ಬ್ರಾಹ್ಮಣನನ್ನು ಸೇನಾಪತಿಯನ್ನಾಗಿ ಮಾಡಿಕೊಂಡು ಪುನಃ ಕ್ಷತ್ರಿಯರ ಮೇಲೆ ಯುದ್ಧಮಾಡಿ ಅವರನ್ನು ಪರಾಜಯಗೊಳಿಸಿದರು. ಅದರಂತೆ ಯಾರು ಕುಶಲನನ್ನೂ, ಶೂರನನ್ನೂ, ಹಿತೇಪ್ಸುವನ್ನೂ, ಕಲ್ಮಷರಹಿತನಾದವನನ್ನೂ ಸೇನಾಪತಿಯನ್ನಾಗಿ ಮಾಡಿಕೊಳ್ಳುತ್ತಾರೆಯೋ–ಅವರು ಯುದ್ಧದಲ್ಲಿ ಶತ್ರುಗಳನ್ನು ಜಯಿಸುತ್ತಾರೆ.

ಪಿತಾಮಹ! ನೀನು ನೀತಿಯಲ್ಲಿ ಶುಕ್ರಾಚಾರ್ಯನಿಗೆ ಸಮಾನನಾಗಿರುವೆ. ಯಾವಾಗಲೂ ನನ್ನ ಹಿತೈಷಿಯಾಗಿರುವೆ. ನೀನು ಬೇರೊಬ್ಬರಿಂದ ಸಂಹರಿಸಲ್ಪಡತಕ್ಕವನಲ್ಲ (ಇಚ್ಛಾಮರಣಿ). ಯಾವಾಗಲೂ ಧರ್ಮದಲ್ಲಿಯೇ ಪ್ರತಿಷ್ಠಿತನಾಗಿರುವೆ. ಅಂತಹ ಸಕಲಸದ್ಗುಣಸಂಪನ್ನನಾದ ನೀನು ನಮ್ಮ ಸೇನಾನಾಯಕನಾಗು.

ರಶ್ಮಿವಂತರಾದ ತೇಜಸ್ವಿಗಳಲ್ಲಿ ಸೂರ್ಯನು ಶ್ರೇಷ್ಠನಾಗಿರುವಂತೆ, ಓಷಧಿಗಳೆಲ್ಲಕ್ಕೂ ಚಂದ್ರನು ರಾಜನಾಗಿರುವಂತೆ, ಯಕ್ಷರೆಲ್ಲರಿಗೂ ಕುಬೇರನು ರಾಜನಾಗಿರುವಂತೆ, ದೇವತೆಗಳೆಲ್ಲರಿಗೂ ಇಂದ್ರನು ರಾಜನಾಗಿರುವಂತೆ, ಪರ್ವತಗಳೆಲ್ಲಕ್ಕೂ ಮೇರುಪರ್ವತವು ಶ್ರೇಷ್ಠವೆನಿಸಿರುವಂತೆ, ಪಕ್ಷಿಗಳೆಲ್ಲಕ್ಕೂ ಗರುಡನು ರಾಜನಾಗಿರುವಂತೆ, ದೇವತೆಗಳೆಲ್ಲರಿಗೂ ಕುಮಾರನು ರಕ್ಷಕ ನಾಗಿರುವಂತೆ, ಅಷ್ಟವಸುಗಳಿಗೆ ಅಗ್ನಿದೇವನು ಅಧಿಪತಿಯಾಗಿರುವಂತೆ–ನೀನು ನಮ್ಮ ಸೇನಾನಾಯಕನಾಗು ಮತ್ತು ನಮ್ಮನ್ನು ಸಂರಕ್ಷಿಸು. ದೇವತೆಗಳು ಇಂದ್ರನಿಂದ ರಕ್ಷಿತರಾಗಿರುವಂತೆ–ನಾವು ನಿನ್ನಿಂದ ರಕ್ಷಿತರಾಗಿ, ದೇವತೆಗಳೇ ನಮಗೆದುರಾಗಿ ಯುದ್ಧಕ್ಕೆ ಬಂದರೂ ಅವರಿಂದಲೂ ಜಯಿಸಲಾಗದವರಾಗು ತ್ತೇವೆ. ದೇವತೆಗಳ ಸೇನಾಪತಿಯಾದ ಕಾರ್ತಿಕೇಯನು ದೇವತೆಗಳ ಅಗ್ರಭಾಗ ದಲ್ಲಿ ಹೋಗುವಂತೆ–ನೀನು ನಮ್ಮ ಮುಂದೆ ಹೋಗು ; ಹೋರಿಗಳು ಗೂಳಿ ಯನ್ನು ಅನುಸರಿಸಿಹೋಗುವಂತೆ–ನಾವು ನಿನ್ನನ್ನನುಸರಿಸಿ ಬರುತ್ತೇವೆ."

ಭೀಷ್ಮನು ಹೇಳುತ್ತಾನೆ :

“ಭಾರತ! ನೀನು ಹೇಳಿದಂತೆಯೇ ಆಗಲಿ. ನಾನು ನಿನ್ನ ಪ್ರಾರ್ಥನೆಯಂತೆ ಸೇನೆಯ ದಂಡನಾಯಕನಾಗುತ್ತೇನೆ. ಆದರೆ ನನಗೆ ನೀವು ಹೇಗೋ ಪಾಂಡವರೂ ಹಾಗೆಯೇ. ನಿಮ್ಮಿಬ್ಬರಲ್ಲಿ ನನಗೆ ಯಾವ ವಿಧವಾದ ತಾರತಮ್ಯವೂ ಇಲ್ಲ. ಪಾಂಡವರೂ ನನ್ನನ್ನು ಯುದ್ಧದಲ್ಲಿ ವಿಜಯಿಗಳಾಗು ವಂತೆ ಆಶೀರ್ವದಿಸೆಂದು ಪ್ರಾರ್ಥಿಸುತ್ತಾರೆ. ಅವರೊಡನೆಯೂ ಅವರಿಗೆ ಶ್ರೇಯಸ್ಕರವಾದ ಮಾತುಗಳನ್ನಾಡುವುದು ನನ್ನ ಕರ್ತವ್ಯವಾಗಿದೆ. ನಾನು ನಿನ್ನ ಸೈನ್ಯದ ದಂಡನಾಯಕನಾಗಲು ಒಪ್ಪಿರುವ ಕಾರಣದಿಂದಾಗಿ ನಿನ್ನ ಪಕ್ಷದಲ್ಲಿಯೇ ಇದ್ದು ನಿನಗಾಗಿ ಯುದ್ಧಮಾಡುವುದೇ ನನ್ನ ಕರ್ತವ್ಯವಾಗಿದೆ. ದುರ್ಯೋಧನ! ನೀನು ಹೇಳಿದುದು ನಿಜ. ನರವ್ಯಾಘ್ರನಾದ, ಕುಂತೀಪುತ್ರನಾದ ಆ ಧನಂಜಯನೊಬ್ಬನನ್ನು ಬಿಟ್ಟು ನನಗೆ ಸಮಾನನಾದ ಬೇರೆ ಯಾವ ಯೋಧನನ್ನೂ ನಾನು ಕಂಡಿಲ್ಲ. ಮಹಾಬುದ್ಧಿಶಾಲಿಯಾದ ಅರ್ಜುನನೇನೋ ಅನೇಕವಿಧವಾದ ದಿವ್ಯಾಸ್ತ್ರಗಳನ್ನೂ ಪಡೆದುಕೊಂಡಿರು ತ್ತಾನೆ. ಆದರೆ ಅವನೂ ನನ್ನೆದುರಾಗಿ ನಿಂತು ದ್ವೈರಥಯುದ್ಧವನ್ನು ಯಾವಾಗಲೂ ಮಾಡುವುದಿಲ್ಲ. ನಾನು ಕೂಡ ಅರ್ಜುನನಂತೆಯೇ ಕ್ಷಣಮಾತ್ರದಲ್ಲಿ ಸುರಾಸುರ-ರಾಕ್ಷಸ- ಮನುಷ್ಯರಿಂದ ಪರಿವೃತವಾದ ಈ ಜಗತ್ತನ್ನು ನಿರ್ಮಾನುಷವನ್ನಾಗಿ, ಸುರಾಸುರ- ರಾಕ್ಷಸವರ್ಜಿತವನ್ನಾಗಿ (ತಪೋಬಲವನ್ನು ಉಪಯೋಗಿಸದೆ) ಕೇವಲ ಶಸ್ತ್ರಬಲದಿಂದಲೇ ಮಾಡಿಬಿಡಬಲ್ಲೆನು.

ಆದರೆ, ಜನೇಶ್ವರ! ಪಾಂಡುಪುತ್ರರನ್ನು ಮಾತ್ರ ನಾನು ಯಾವ ಕಾರಣದಿಂದಲೂ ಸಂಹಾರಮಾಡುವುದಿಲ್ಲ. ಅಥವಾ ಪಾಂಡುಪುತ್ರರು ನನ್ನಿಂದ ಸಂಹೃತರಾಗತಕ್ಕವರೂ ಅಲ್ಲ. (ನನ್ನಿಂದ ರಕ್ಷಿಸಲ್ಪಡತಕ್ಕವರೇ ಆಗಿದ್ದಾರೆ.) ಈ ಯುದ್ಧದಲ್ಲಿ ದಂಡನಾಯಕನಾಗಿ ಹೋಗುವ ನನ್ನನ್ನು ಪಾಂಡವರು ಮೊದಲೇ (ಮೊದಲದಿನವೇ) ಸಂಹರಿಸದಿದ್ದರೆ, ನಾನು ನನ್ನ ಶಸ್ತ್ರಗಳ ಪ್ರಯೋಗದಿಂದ ಪ್ರತಿನಿತ್ಯವೂ ಪಾಂಡವರ ಪಕ್ಷದಲ್ಲಿರುವ ಹತ್ತು ಸಾವಿರ ಯೋಧರನ್ನು ಸಂಹಾರಮಾಡುತ್ತೇನೆ.

ದುರ್ಯೋಧನ! ದಂಡನಾಯಕನಾಗಿ ಅಧಿಕಾರವನ್ನು ಸ್ವೀಕಾರ

ಮಾಡುವ ಮೊದಲು ಹೇಳುವ ಒಂದು ಮಾತಿದೆ. ನಾನು ನನ್ನ ಸ್ವೇಚ್ಛೆಯಿಂದಲೇ ನಿನ್ನ ಸೇನೆಗೆ ಮತ್ತೊಂದು ನಿಬಂಧನೆಯೊಡನೆ ದಂಡ ನಾಯಕನಾಗುತ್ತೇನೆ. ಆ ನನ್ನ ನಿಬಂಧನೆ ಯಾವುದೆಂಬುದನ್ನು ಕೇಳು :

**ಕರ್ಣೋ ವಾ ಯುಧ್ಯತಾಂ ಪೂರ್ವಮಹಂ ವಾ ಪೃಥಿವೀಪತೇ ।**
**ಸ್ಪರ್ಧತೇ ಹಿ ಸದಾತ್ಯರ್ಥಂ ಸೂತಪುತ್ರೋ ಮಯಾ ರಣೇ ॥೨೪॥**

ದುರ್ಯೋಧನ! ಕರ್ಣನಾದರೂ ಮೊದಲು ಸೇನಾಪತಿಯಾಗಿ ಯುದ್ಧಮಾಡಲಿ ; ನಾನಾದರೂ ಮೊದಲು ಸೇನಾಪತಿಯಾಗಿ ಯುದ್ಧಮಾಡುತ್ತೇನೆ. ಕಾರಣವೇನೆಂದರೆ : ಈ ಸೂತಪುತ್ರನು ಯಾವಾಗಲೂ ಯುದ್ಧದಲ್ಲಿ ನನ್ನೊಡನೆ ಸ್ಪರ್ಧಿಸುತ್ತಾನೆ. ತಾನೇ ಮಹಾವೀರನೆಂದು ಹೇಳಿಕೊಳ್ಳುತ್ತಾನೆ. (ನನ್ನನ್ನು ಅನಾದರಣೆಮಾಡುವ ಬುದ್ಧಿಯು ಇವನಲ್ಲಿರುವುದರಿಂದ ಇವನು ನನ್ನ ದಂಡನಾಯಕತ್ವವನ್ನು ಒಪ್ಪಿಕೊಳ್ಳದೆಯೂ ಇರಬಹುದಾದ ಕಾರಣ ಇವನೊಡನೆ ಸೇರಿ ನಾನು ಯುದ್ಧಮಾಡಲಾರೆನು.)"

ಭೀಷ್ಮನ ಮಾತನ್ನು ಕೇಳಿದೊಡನೆಯೇ ಕರ್ಣನು ಹೇಳುತ್ತಾನೆ :

**ನಾಹಂ ಜೀವತಿ ಗಾಙ್ಗೇಯೇ ರಾಜನ್ಯೋತ್ಸ್ಯೇ ಕಥಂಚನ ।**
**ಹತೇ ಭೀಷ್ಮೇ ತು ಯೋತ್ಸ್ಯಾಮಿ ಸಹ ಗಾಣ್ಡೀವಧನ್ವನಾ ॥೨೫॥**

"ಮಹಾರಾಜ! ಭೀಷ್ಮನು ಜೀವಿಸಿರುವ ಪರ್ಯಂತವೂ ನಾನು ಯಾವ ಕಾರಣದಿಂದಲೂ ಯುದ್ಧಮಾಡುವುದಿಲ್ಲ. ಇವನು ಪಾಂಡವರಿಂದ ಸಂಹೃತನಾದನಂತರದಲ್ಲಿ ಗಾಂಡೀವಧನ್ವನಾದ ಅರ್ಜುನನೊಡನೆ ಯುದ್ಧಮಾಡುತ್ತೇನೆ."

ಭೀಷ್ಮನ ನಿಬಂಧನೆಯನ್ನು ಕರ್ಣನೇ ಪರಿಹರಿಸಿದನಂತರ, ಬ್ರಾಹ್ಮಣರಿಗೆ ಭೂರಿದಕ್ಷಿಣೆಯನ್ನು ಕೊಡುವ ಸ್ವಭಾವವುಳ್ಳ ಭೀಷ್ಮನನ್ನು, ದುರ್ಯೋಧನನು ವಿಧಿವತ್ತಾಗಿ ಸೈನ್ಯದ ದಂಡನಾಯಕನನ್ನಾಗಿ ಮಾಡಿಕೊಂಡನು. ಸೇನಾಪತಿಯಾಗಿ ಅಭಿಷಿಕ್ತನಾದ ಭೀಷ್ಮನು ಬಹುವಾಗಿ ಪ್ರಕಾಶಿಸಿದನು. ಆ ಸಮಯದಲ್ಲಿ ರಾಜನ ಆಜ್ಞಾನುಸಾರವಾಗಿ ಸ್ಥಿರಚಿತ್ತ

ರಾದ ವಾದ್ಯಗಾರರು ಸಾವಿರಾರು ಭೇರಿಗಳನ್ನು ಬಾರಿಸಿದರು. ಶಂಖನಾದಗಳನ್ನೂ ಮಾಡಿದರು. ವೀರರು ಏಕಪ್ರಕಾರವಾಗಿ ಸಿಂಹನಾದಗಳನ್ನು ಮಾಡಿದರು. ಆನೆ, ಕುದುರೆ ಮುಂತಾದ ವಾಹನಗಳು ಬಗೆ-ಬಗೆಯಾಗಿ ಧ್ವನಿಮಾಡಿದುವು. ಮೋಡವೇ ಇಲ್ಲದಿದ್ದ ಆ ಸಮಯದಲ್ಲಿ ರಕ್ತದ ಮಳೆಗರೆದು ಭೂಮಿಯೆಲ್ಲವೂ ಕೆಸರಾಯಿತು. ಸಿಡಿಲಿನ ಶಬ್ದವಾಗತೊಡಗಿತು. ಆನೆಗಳು ಘೀಳಿಡಲು ತೊಡಗಿದುವು. ಭೂಮಿಯೇ ಕಂಪಿಸತೊಡಗಿತು. ಆ ಎಲ್ಲ ಉತ್ಪಾತಗಳಿಂದ



ದುರ್ಯೋಧನನ ಕಡೆಯ ಯೋಧರ ಮನಸ್ಸು ವ್ಯಾಕುಲವಾಯಿತು. (ಆ ಶಬ್ದಗಳನ್ನು ಕೇಳಿ ಯೋಧರು ಕುಸಿದರು. ಅವರ ಉತ್ಸಾಹವು ಕುಗ್ಗಿತು.) ಅಶುಭಸೂಚಕವಾದ ಅಶರೀರವಾಣಿಯು ಕೇಳಿಸುತ್ತಿದ್ದಿತು. ಆಕಾಶದಲ್ಲಿ ಬಾಲಚುಕ್ಕಿಗಳು ಕಾಣಿಸಿಕೊಂಡುವು. ಮುಂಬರುವ ಭಯವನ್ನು

ತಿಳಿಸುವ ಮತ್ತು ಸೂಚಿಸುವ ಸಾಮರ್ಥ್ಯವುಳ್ಳ ಹೆಣ್ಣುನರಿಗಳು ಬಹಳ ಗಟ್ಟಿಯಾಗಿ ಮತ್ತು ಬಾರಿ-ಬಾರಿಗೂ ಅಮಂಗಳಸೂಚಕವಾಗಿ ಅರಚಿಕೊಳ್ಳುತ್ತಿದ್ದುವು.

ಯಾವಾಗ ದುರ್ಯೋಧನನು ಗಂಗಾತನಯನಾದ ಭೀಷ್ಮನಿಗೆ ಸೇನಾಪತಿಯ ಪಟ್ಟಗಟ್ಟಿದನೋ– ಆಗ ಮೇಲೆ ಹೇಳಿದಂತಹ ಭಯಂಕರವಾದ ಉತ್ಪಾತಗಳು ನೂರುಪಟ್ಟು ಹೆಚ್ಚಾಗಿ ಕಾಣತೊಡಗಿದುವು.

ಶತ್ರುಗಳ ಬಲವನ್ನು ಮರ್ದನಮಾಡುವ ಸಾಮರ್ಥ್ಯವುಳ್ಳ ಭೀಷ್ಮನನ್ನು ದುರ್ಯೋಧನನು ಸೇನಾಪತಿಯನ್ನಾಗಿ ಮಾಡಿ, ಆ ಸಮಯದಲ್ಲಿ ಬ್ರಾಹ್ಮಣರನ್ನು ಗೋವುಗಳಿಂದಲೂ– ಯಥೇಚ್ಛವಾದ ಸುವರ್ಣನಾಣ್ಯ ಗಳಿಂದಲೂ ತೃಪ್ತಿಗೊಳಿಸಿ, ಅವರಿಂದ ಸ್ವಸ್ತಿವಾಚನವನ್ನು ಮಾಡಿಸಿದನು. ಬ್ರಾಹ್ಮಣರು ಮಾಡಿದ–'ವಿಜಯೀಭವ' 'ಸ್ವಸ್ತ್ಯಸ್ತು'–ಇವೇ ಮುಂತಾದ ಆಶೀರ್ವಾದಗಳಿಂದ ದುರ್ಯೋಧನನು ಉತ್ಸಾಹವನ್ನು ಪಡೆದು ಸೈನಿಕರಿಂದ ಪರಿವೃತನಾಗಿ ಅರಮನೆಯಿಂದ ಹೊರಟನು.

ಅನಂತರದಲ್ಲಿ ದುರ್ಯೋಧನನು ತಮ್ಮಂದಿರಿಂದೊಡಗೂಡಿ ದಂಡನಾಯಕನಾದ ಭೀಷ್ಮನನ್ನು ಮುಂದೆಮಾಡಿಕೊಂಡು ದೊಡ್ಡದಾದ ಸೈನ್ಯದೊಡನೆ ಕುರುಕ್ಷೇತ್ರಕ್ಕೆ ಪ್ರಯಾಣಮಾಡಿದನು.

ಜನಮೇಜಯ! ಕುರುಕ್ಷೇತ್ರಕ್ಕೆ ಸೈನ್ಯಸಮೇತನಾಗಿ ಪ್ರಯಾಣ ಮಾಡಿದನಂತರ ದುರ್ಯೋಧನನು ಕರ್ಣನೊಡನೆ ಕುರುಕ್ಷೇತ್ರವನ್ನು ಪ್ರದಕ್ಷಿಣೆಮಾಡಿದನಂತರ ಸಮನೆಲವಿರುವ ಪ್ರದೇಶದಲ್ಲಿ ಶಿಬಿರನಿರ್ಮಾಣ ಕ್ಕಾಗಿ ಭೂಮಿಯನ್ನು ಅಳೆಸಿದನು. ಜೌಗಿನಿಂದ ರಹಿತವಾಗಿದ್ದ ಮನೋ ಹರವಾದ ಪ್ರದೇಶದಲ್ಲಿ– ಹುಲ್ಲು ಮತ್ತು ಕಟ್ಟಿಗೆಗಳು ಸಮೃದ್ಧವಾಗಿ ಸಿಕ್ಕುವ ಪ್ರದೇಶದಲ್ಲಿ ಸೇನಾಶಿಬಿರವನ್ನು ನಿರ್ಮಿಸಿದನು. ಆ ಶಿಬಿರವು ಹಸ್ತಿನಾಪುರದಂತೆಯೇ ಶೋಭಿಸುತ್ತಿದ್ದಿತು."

೧೫೬ನೆಯ ಅಧ್ಯಾಯವು ಮುಗಿಯಿತು.

## ಯುಧಿಷ್ಠಿರನೂ ಏಳು ಅಕ್ಷೌಹಿಣೀಸೈನ್ಯಗಳಿಗೆ ಪ್ರತ್ಯೇಕ-ಪ್ರತ್ಯೇಕವಾಗಿ ದಳಪತಿಗಳನ್ನು ನಿಯಮಿಸಿ ಅವರಿಗೆ ಪಟ್ಟಾಭಿಷೇಕಮಾಡಿದುದು : ಬಲರಾಮನ ಆಗಮನ : ಬಲರಾಮನು ಪಾಂಡವರನ್ನು ಹರಸಿ ತೀರ್ಥಯಾತ್ರೆಗೆ ಪ್ರಯಾಣಮಾಡಿದುದು

ಜನಮೇಜಯನು ವೈಶಂಪಾಯನರನ್ನು ಪ್ರಶ್ನಿಸುತ್ತಾನೆ :

"ಬ್ರಾಹ್ಮಣೋತ್ತಮರೇ! ಮಹಾತ್ಮನಾದ, ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ, ಭಾರತರ ಪಿತಾಮಹನಾದ, ಸರ್ವರಾಜರಿಗೂ ಧ್ವಜಪ್ರಾಯನಾದ, ಬುದ್ಧಿಯಲ್ಲಿ ಬೃಹಸ್ಪತಿಗೆ ಸಮಾನನಾದ, ಕ್ಷಮಾಗುಣದಲ್ಲಿ ಭೂದೇವಿಗೆ ಸಮಾನನಾದ, ಗಾಂಭೀರ್ಯದಲ್ಲಿ ಸಮುದ್ರಸದೃಶನಾದ, ಸ್ಥಿರತೆಯಲ್ಲಿ ಹಿಮಾಚಲೋಪಮನಾದ, ಔದಾರ್ಯದಲ್ಲಿ ಪ್ರಜಾಪತಿಗೆ ಸಮಾನನಾದ, ತೇಜಸ್ಸಿನಲ್ಲಿ ಭಾಸ್ಕರೋಪಮನಾದ, ಮಹೇಂದ್ರನಂತೆಯೇ ಬಾಣಗಳ ಮಳೆಯಿಂದ ಶತ್ರುಗಳನ್ನು ಧ್ವಂಸಮಾಡುವ, ಗಂಗಾಪುತ್ರನಾದ ಭೀಷ್ಮನನ್ನು ಆರಂಭವಾಗಲಿದ್ದ ಭಯಂಕರವಾದ ಮತ್ತು ರೋಮಾಂಚಕಾರಕವಾದ ರಣಯಜ್ಞಕ್ಕೆ ದೀರ್ಘಕಾಲದವರೆಗೆ ದೀಕ್ಷಿತನನ್ನಾಗಿ ದುರ್ಯೋಧನನು ವರಣಮಾಡಿದುದನ್ನು ಕೇಳಿ –ಪಾಂಡವಶಿಬಿರದಲ್ಲಿದ್ದ ಮಹಾಬಾಹುವಾದ, ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಯುಧಿಷ್ಠಿರನು ಏನೆಂದು ಹೇಳಿದನು? ಯುಧಿಷ್ಠಿರನು ಹೇಳಿದುದಕ್ಕೆ ಪ್ರತಿಯಾಗಿ ಭೀಮಾರ್ಜುನರೇನೆಂದು ಹೇಳಿದರು? ಆ ಸಮಯದಲ್ಲಿ ಶ್ರೀಕೃಷ್ಣನ ಪ್ರತಿಕ್ರಿಯೆಯು ಹೇಗಿದ್ದಿತು? ಅವನು ವ್ಯಕ್ತಪಡಿಸಿದ ಅಭಿಪ್ರಾಯವೇನು?–ಈ ಎಲ್ಲವನ್ನೂ ನನಗೆ ವಿಶದವಾಗಿ ಹೇಳಿರಿ."

"ಜನಮೇಜಯ! ಆಪದ್ಧರ್ಮಾರ್ಥಗಳ ವಿಷಯದಲ್ಲಿ ಬಹುಕುಶಲ ನಾದ, ವಾಗ್ಮಿಗಳಲ್ಲಿ ಶ್ರೇಷ್ಠನಾದ, ಮಹಾಬುದ್ಧಿವಂತನಾದ ಯುಧಿಷ್ಠಿರನು– ಗಾಂಗೇಯನು ದುರ್ಯೋಧನನ ಸೇನೆಗೆ ದಂಡನಾಯಕನಾದನೆಂಬ ವಿಷಯ ವನ್ನು ಕೇಳುತ್ತಲೇ–ತನ್ನೆಲ್ಲ ತಮ್ಮಂದಿರನ್ನೂ ಮತ್ತು ಶಾಶ್ವತನಾದ, ಸನಾ

ತನನಾದ ವಾಸುದೇವನನ್ನೂ ತನ್ನ ಬಿಡಾರಕ್ಕೆ ಕರೆಸಿಕೊಂಡು–ಸಾಂತ್ವನ ಪೂರ್ವಕವಾಗಿ ಈ ಮಾತನ್ನು ಹೇಳಿದನು :

"ನೀವೆಲ್ಲರೂ ರಣರಂಗದ ಸುತ್ತಲೂ ಸುತ್ತಾಡಿ ನಮ್ಮ ಸೈನ್ಯಗಳನ್ನು ನಿರೀಕ್ಷಿಸಿರಿ. ಸೈನ್ಯಗಳು ಸಜ್ಜಾಗಿವೆಯೇ ಎಂಬುದನ್ನು ಪರಿಶೀಲಿಸಿರಿ. ಕವಚಗಳನ್ನು ಧರಿಸಿ ಯುದ್ಧಕ್ಕೆ ಸಜ್ಜಾಗಿ ನಿಲ್ಲಿರಿ. ನೀವು ಪ್ರಾರಂಭದಲ್ಲಿಯೇ ಪಿತಾಮಹನೊಡನೆ ಯುದ್ಧಮಾಡಬೇಕಾಗುತ್ತದೆ. ಆದುದರಿಂದ ನಮ್ಮ ಏಳು ಅಕ್ಷೌಹಿಣೀಸೈನ್ಯಗಳಲ್ಲಿ ಒಂದೊಂದಕ್ಕೆ ಒಬ್ಬೊಬ್ಬ ಸೇನಾಪತಿಯನ್ನು ನಿಯಮಿಸಬೇಕಾಗಿದೆ. ಅವರುಗಳಾರಾರೆಂಬುದನ್ನು ಕೂಡಲೇ ನಿಶ್ಚಯಿಸಿರಿ."

ಯುಧಿಷ್ಠಿರನ ಆ ಮಾತನ್ನು ಕೇಳಿ ಶ್ರೀಕೃಷ್ಣನು ಹೇಳಿದನು :

"ಭರತರ್ಷಭನೇ! ಇಂತಹ ಆಪತ್ಕಾಲವು ಸನ್ನಿಹಿತವಾಗಿರುವಾಗ ನಿನ್ನಂತಹ ವಿವೇಕಿಯು ಎಂತಹ ಮಾತನ್ನಾಡುವುದು ಯೋಗ್ಯವೆನಿಸು ವುದೋ– ಅಂತಹ ಅರ್ಥಪೂರ್ಣವಾದ ಮಾತನ್ನೇ ನೀನು ಆಡಿರುವೆ. ನೀನು ಹೇಳಿದುದು ನನಗೂ ಸಮ್ಮತವಾಗಿದೆ. ಆದುದರಿಂದ ಈ ಸಮಯದಲ್ಲಿ ಯಾವುದು ಅವಶ್ಯಕರ್ತವ್ಯವಾಗಿರುವುದೋ ಅದನ್ನೇ ಮಾಡುವವನಾಗು. ನಿನ್ನ ಏಳು ಅಕ್ಷೌಹಿಣೀಸೈನ್ಯಕ್ಕೆ ಏಳು ಮಂದಿ ನಾಯಕರನ್ನು ಈಗಲೇ ನಾಮಕರಣ ಮಾಡು."

ಜನಮೇಜಯ! ಶ್ರೀಕೃಷ್ಣನು ಹೀಗೆಂದು ಹೇಳಿದೊಡನೆಯೇ ಯುಧಿಷ್ಠಿರನು–ದ್ರುಪದನನ್ನೂ, ವಿರಾಟನನ್ನೂ, ಸಾತ್ಯಕಿಯನ್ನೂ, ಪಾಂಚಾಲ ರಾಜಕುಮಾರನಾದ ಧೃಷ್ಟದ್ಯುಮ್ನನನ್ನೂ, ಧೃಷ್ಟಕೇತುವನ್ನೂ, ಪಾಂಚಾಲವೀರ ನಾದ ಶಿಖಂಡಿಯನ್ನೂ ಮತ್ತು ಮಗಧರಾಜನಾದ ಸಹದೇವನನ್ನೂ ಕರೆಯಿಸಿ–ಮಹಾಭಾಗರಾದ, ವೀರರಾದ, ಯುದ್ಧಾಭಿಕಾಂಕ್ಷಿಗಳಾದ ಅವರನ್ನು ಏಳು ಅಕ್ಷೌಹಿಣೀಸೈನ್ಯಗಳಿಗೆ ಸೇನಾಪತಿಗಳನ್ನಾಗಿ ನಿಯಮಿಸಿ, ಅವರಿಗೆ ಯಥಾವಿಧಿಯಾಗಿ ಪಟ್ಟಗಟ್ಟಿದನು. ಹಿಂದೆಯೇ ಹೇಳಿದಂತೆ ಯುಧಿಷ್ಠಿರನು ಧೃಷ್ಟದ್ಯುಮ್ನನನ್ನು ಸರ್ವಸೇನಾಪತಿಯನ್ನಾಗಿ ಅಥವಾ ದಂಡನಾಯಕನನ್ನಾಗಿ ಮಾಡಿಕೊಂಡನು. ಧೃಷ್ಟದ್ಯುಮ್ನನು ದ್ರೋಣರನ್ನು ಅಂತಗೊಳಿಸಲೆಂದೇ ಪ್ರಜ್ವಲಿತನಾದ ಯಜ್ಞೇಶ್ವರನಿಂದ ಹುಟ್ಟಿದ್ದನು. ಅನಂತರ ಯುಧಿಷ್ಠಿ

ರನು ನಿದ್ರೆಯನ್ನು ಜಯಿಸಿದ್ದ ಧನಂಜಯನನ್ನು ಮಾಹಾತ್ಮರಾದ, ವೀರರಾದ ಸಮಸ್ತಸೇನಾಪತಿಗಳಿಗೂ ಅಧಿಪತಿಯನ್ನಾಗಿ ಮಾಡಿದನು.



ಬಲರಾಮನ ಅನುಜನಾದ, ಶ್ರೀಮಂತನಾದ, ಮಹಾಬುದ್ಧಿವಂತನಾದ ಜನಾರ್ದನನು– ಅರ್ಜುನನಿಗೆ ಸಹನೇತಾರನೂ (ನಾಯಕನೂ) ಮತ್ತು ಅರ್ಜುನನ ಕುದುರೆಗಳ ನಿಯಂತ್ರಕನೂ ಆದನು. ಸರ್ವವಿನಾಶಕವಾದ ಯುದ್ಧವು ಸನ್ನಿಹಿತವಾಗಿರುವುದನ್ನು ಅಥವಾ ಕೂಡಲೇ ಆರಂಭವಾಗಲಿರುವುದನ್ನು ನೋಡಿ ಹಲಾಯುಧನಾದ, ನೀಲಿಯ ಬಣ್ಣದ ರೇಷ್ಮೆಯವಸ್ತ್ರವನ್ನು ಧರಿಸಿದ್ದ, ಕೈಲಾಸಶಿಖರೋಪಮನಾಗಿದ್ದ, ವಿಹರಿಸುವ ಸಮಯದಲ್ಲಿ ಗಂಭೀರವಾಗಿ ಹೆಜ್ಜೆಗಳನ್ನಿಡುವ ಸಿಂಹದಂತೆ ಗಂಭೀರವಾದ

ನಡಿಗೆಯಿಂದ ಕೂಡಿದ್ದ, ಶ್ರೀಮಂತನಾದ, ಮದದಿಂದ ಕೆಂಪಾಗಿದ್ದ ಕಡೆಗಣ್ಣನ್ನು ಹೊಂದಿದ್ದ, ಮಹಾಬಾಹುವಾದ ಬಲರಾಮನು–ಇಂದ್ರನು ದೇವತೆಗಳಿಂದ ಪರಿವೃತನಾಗಿರುವಂತೆ– ಅಕ್ರೂರನೇ ಮೊದಲಾದ ಯಾದವರಿಂದಲೂ ಗದ, ಸಾಂಬ, ಉದ್ಧವ, ಪ್ರದ್ಯುಮ್ನ, ಚಾರುದೇಷ್ಣ, ಆಹುಕಪುತ್ರರು–ಇವರೇ ಮೊದಲಾದ ಸಿಂಹ-ವ್ಯಾಘ್ರಗಳಂತೆ ಅತ್ಯಂತಬಲಿಷ್ಠರಾದ ವೃಷ್ಣಿ ಪ್ರಮುಖರಿಂದಲೂ ಪರಿವೃತನಾಗಿ, ಪಾಂಡವರ ಭವನವನ್ನು (ಶಿಬಿರವನ್ನು) ಪ್ರವೇಶಿಸಿದನು. ಬಲರಾಮನನ್ನು ಕಂಡೊಡನೆಯೇ ಧರ್ಮರಾಜ, ಮಹಾ ದ್ಯುತಿಮಂತನಾದ ಶ್ರೀಕೇಶವ, ಗಾಂಡೀವಧನ್ವನಾದ ಅರ್ಜುನ, ಭೀಮಕರ್ಮ ನಾದ ವೃಕೋದರ ಮತ್ತು ಅಲ್ಲಿದ್ದ ಇತರರಾಜರೆಲ್ಲರೂ ಎದ್ದುನಿಂತರು. ಶಿಬಿರಕ್ಕೆ ಆಗಮಿಸಿದ ಹಲಾಯುಧನನ್ನು ಎಲ್ಲರೂ ಯಥೋಚಿತವಾಗಿ ಸತ್ಕರಿಸಿದರು. ಅನಂತರ ಯುಧಿಷ್ಠಿರನು ತನ್ನ ಕೈಯಿಂದ ಬಲರಾಮನ ಕೈಗಳನ್ನು ಸ್ಪರ್ಶಮಾಡಿದನು. ವಾಸುದೇವನೇ ಆದಿಯಾಗಿ ಎಲ್ಲರೂ ಬಲರಾಮನಿಗೆ ಅಭಿವಾದನಪೂರ್ವಕವಾಗಿ ನಮಸ್ಕರಿಸಿದರು. ವೃದ್ಧರಾದ ವಿರಾಟ-ದ್ರುಪದರಿಗೆ ಬಲರಾಮನೇ ಅಭಿವಾದನಮಾಡಿದನು. ಅನಂತರ ಶತ್ರುದಮನನಾದ ಬಲರಾಮನು ಯುಧಿಷ್ಠಿರನೊಡನೆ ಕುಳಿತುಕೊಂಡನು. ಬಳಿಕ ವಾಸುದೇವನ ಕಡೆಗೆ ನೋಡುತ್ತಾ ಬಲರಾಮನು ಹೇಳಿದನು :

"ಮಹಾಭಯಂಕರವಾದ, ದಾರುಣವಾದ ನರಸಂಹಾರವು ನಡೆಯುವುದರಲ್ಲಿದೆ. ಇದು ದೈವಸಂಕಲ್ಪಿತವಾದುದು. ಆದುದರಿಂದ ನಡೆದೇ ನಡೆಯುತ್ತದೆಂದು ನಾನು ಭಾವಿಸಿದ್ದೇನೆ. ಎಷ್ಟೇ ಪ್ರಯತ್ನಿಸಿದರೂ ಇದನ್ನು ತಪ್ಪಿಸಲು ಶಕ್ಯವಾಗಲಾರದು. ಇಂತಹ ಭಯಂಕರಯುದ್ಧದಿಂದ ಪಾರಾಗಿ ಸುಹೃತ್ಸಮೇತರಾದ, ಗಾಯಗಳಿಲ್ಲದ ಶರೀರಗಳಿಂದ ಕೂಡಿದ, ರೋಗರಹಿತರಾದ ನಿಮ್ಮನ್ನು ಪುನಃ ಕಾಣುವೆನೆಂಬ ವಿಶ್ವಾಸವು ನನಗಿದೆ.

ಕ್ಷತ್ರಿಯರಾಜರೆಲ್ಲರೂ ಒಂದೆಡೆ ಸೇರಿದ್ದಾರೆ. ಜನಸಂಹಾರಕ್ರಿಯೆಗೆ ಕಾಲವು ಪಕ್ವವಾಗಿದೆಯೆಂಬುದರಲ್ಲಿಯೂ ಸಂಶಯವಿಲ್ಲ. ರಕ್ತ-ಮಾಂಸ ಗಳಿಂದ ಕೆಸರನ್ನುಂಟುಮಾಡುವ ಮಹಾಸಂಹಾರಕ್ರಿಯೆಯು ಇಷ್ಟರಲ್ಲಿಯೇ ನಡೆಯಲಿದೆ. ನಾನು ವಾಸುದೇವನಿಗೆ ಏಕಾಂತದಲ್ಲಿ– 'ಮಧುಸೂದನ! ಸಂಬಂಧಿಗಳಲ್ಲಿ ಸಮಾನದೃಷ್ಟಿಯಿಂದ ವರ್ತಿಸು. ಪಾಂಡವರು ನಮಗೆ

ಬಂಧುಗಳಾಗಿರುವಂತೆಯೇ ದುರ್ಯೋಧನನೂ ನಮಗೆ ಬಂಧುವಾಗಿರುತ್ತಾನೆ. ಅವನಿಗೂ ನೀನು ಸಹಾಯಮಾಡು'– ಎಂದು ಅನೇಕಬಾರಿ ಹೇಳಿದೆನು. ದುರ್ಯೋಧನನೂ ಇದಕ್ಕಾಗಿಯೇ ನಮ್ಮ ಮನೆಗೆ ಆಗಾಗ ಬರುತ್ತಲೇ ಇದ್ದನು. ಆದರೆ, ಧರ್ಮಜ! ನಿನ್ನ ಸಲುವಾಗಿ ಈ ಮಧುಸೂದನನು ನನ್ನ ಮಾತನ್ನು ಕೇಳಲಿಲ್ಲ. ಧನಂಜಯನನ್ನು ನೋಡಿ ಸರ್ವಭಾವದಿಂದಲೂ ಅವನೊಡನೆಯೇ ಇವನು ಸೇರಿಕೊಂಡುಬಿಟ್ಟಿದ್ದಾನೆ. (ಇವರಿಬ್ಬರ ಸ್ನೇಹವು



ಕಿತ್ತರೂ ಕೀಳದಂತಿದೆ.) ಪಾಂಡವರಿಗೆ ವಿಜಯವು ಸಿದ್ಧವಾಗಿದೆಯೆಂಬುದರಲ್ಲಿ ನನಗೆ ಸಂಪೂರ್ಣವಿಶ್ವಾಸವಿದೆ. ನಾನಿದನ್ನು ನಿಶ್ಚಯಿಸಿಬಿಟ್ಟಿದ್ದೇನೆ. ಪಾಂಡವರಿಗೆ ವಿಜಯವನ್ನು ದೊರಕಿಸಿಕೊಡಬೇಕೆಂಬುದೇ ವಾಸುದೇವನ ದೃಢ

ನಿಶ್ಚಯವೂ ಆಗಿದೆ. ಯದ್ಯಪಿ ನನಗೆ ದುರ್ಯೋಧನನಿಗೂ ಸಹಾಯಮಾಡಬೇಕೆಂಬ ಅಭಿಲಾಷೆಯಿದ್ದರೂ ಕೃಷ್ಣನಿಗೆದುರಾಗಿ ನಾನು ದುರ್ಯೋಧನನ ಪಕ್ಷವನ್ನು ಸೇರಲಾರೆನು. ಶ್ರೀಕೃಷ್ಣನಿಲ್ಲದ ಲೋಕವನ್ನೇ ನಾನು ನೋಡಲು ಉತ್ಸುಕನಾಗಿಲ್ಲ. ಆದುದರಿಂದ ನನಗೆ ಮನಸ್ಸಿರಲಿ.; ಇಲ್ಲದಿರಲಿ– ಕೇಶವನೇನು ಮಾಡುವನೋ ಅದನ್ನನುಸರಿಸಿಯೇ ನಾನು ನಡೆಯುತ್ತೇನೆ. ಅವನಿಗೆ ವಿರುದ್ಧವೆನಿಸುವ ಕಾರ್ಯಮಾಡಲು ಹೋಗುವುದಿಲ್ಲ.

ನನಗೆ ಗದಾಯುದ್ಧವಿಶಾರದರಾದ ಇಬ್ಬರು ವೀರಶಿಷ್ಯರಿದ್ದಾರೆ. ಅವರೇ ಭೀಮ-ದುರ್ಯೋಧನರು. ಈ ಇಬ್ಬರ ವಿಷಯದಲ್ಲಿಯೂ ನಾನು ಒಂದೇ ವಿಧವಾದ ಪ್ರೀತಿ-ವಿಶ್ವಾಸಗಳನ್ನಿಟ್ಟುಕೊಂಡಿರುತ್ತೇನೆ. ಆದುದರಿಂದ ನಾನು ಯಾವ ಪಕ್ಷಕ್ಕೂ ಸೇರುವ ಇಚ್ಛೆಯುಳ್ಳವನಾಗಿಲ್ಲ. ಯುದ್ಧದ ವೀಕ್ಷಕನಾಗಿಯೂ ಇರುವುದಿಲ್ಲ. ಏಕೆಂದರೆ : ನಾನು ಇಲ್ಲಿಯೇ ಇದ್ದುಬಿಟ್ಟರೆ ಯುದ್ಧವು ಸಾಗಿದಂತೆ ದಿನ-ದಿನಕ್ಕೂ ನಶಿಸಿಹೋಗುವ ಕೌರವರನ್ನು ನೋಡುತ್ತಾ ಕುಳಿತುಕೊಳ್ಳಲು ನನ್ನಿಂದ ಸಾಧ್ಯವಾಗುವುದಿಲ್ಲ. ಅಂತಹ ದುರವಸ್ಥೆಯಲ್ಲಿ ಅವರನ್ನು ಉಪೇಕ್ಷಿಸಲು ನನ್ನಿಂದ ಸಾಧ್ಯವಾಗುವುದಿಲ್ಲ. ಆದುದರಿಂದ ನಾನು ಸರಸ್ವತೀನದಿಯ ತೀರಪ್ರದೇಶದಲ್ಲಿರುವ ತೀರ್ಥಗಳನ್ನು ಸಂದರ್ಶಿಸಲು ಮತ್ತು ಪುಣ್ಯತೀರ್ಥಗಳ ಸೇವೆಮಾಡಲು ಹೊರಟುಹೋಗುತ್ತೇನೆ."

ಜನಮೇಜಯ! ಮಹಾಬಾಹುವಾದ ಬಲರಾಮನು ಹೀಗೆಂಬುದಾಗಿ ಹೇಳಿ ಪಾಂಡವರ ಅನುಮತಿಯನ್ನು ಪಡೆದು, ತನ್ನೊಡನೆ ಸ್ವಲ್ಪದೂರ ಬಂದ ಶ್ರೀಕೃಷ್ಣನನ್ನೂ ಹಿಂದಕ್ಕೆ ಕಳುಹಿಸಿಕೊಟ್ಟು ತೀರ್ಥಯಾತ್ರೆಗಾಗಿ ಹೊರಟುಹೋದನು.

೧೫೭ನೆಯ ಅಧ್ಯಾಯವು ಮುಗಿಯಿತು.

## ರುಕ್ಮಿಯು ಪಾಂಡವರಿಗೆ ಸಹಾಯಮಾಡುವ ಆಶಯದಿಂದ ಸೈನ್ಯಸಮೇತನಾಗಿ ಬಂದುದು : ಪಾಂಡವ-ಕೌರವರಿಬ್ಬರಿಂದಲೂ ಪುರಸ್ಕಾರವು ಸಿಕ್ಕದೇ ಹಿಂದಿರುಗಿದುದು

ವೈಶಂಪಾಯನರು ಹೇಳುತ್ತಾರೆ :

ಜನಮೇಜಯ! ಅದೇ ಸಮಯಕ್ಕೆ ಸರಿಯಾಗಿ ಮಹಾತ್ಮನಾದ, ಸತ್ಯಸಂಕಲ್ಪನಾದ, ಭೀಷ್ಮಕನ ಮಗನಾದ, ರುಕ್ಮಿಯೆಂದು ಪ್ರಸಿದ್ಧನಾಗಿದ್ದ ರಾಜನು ಪಾಂಡವರ ಬಳಿಗೆ ಬಂದನು. ಹಿರಣ್ಯರೋಮನೆಂಬ ಹೆಸರಿನಿಂದಲೂ ಪ್ರಸಿದ್ಧನಾಗಿದ್ದ, ಭೋಜವಂಶೀಯನಾಗಿದ್ದ, ಅತಿಶಯ ವಾದ ಯಶಸ್ಸನ್ನು ಗಳಿಸಿದ್ದ ಈತನ ತಂದೆಯಾದ ಭೀಷ್ಮಕನು ಇಂದ್ರಸಖನೂ ಆಗಿದ್ದನು. ಅವನು ದಕ್ಷಿಣದೇಶಗಳಿಗೆ ಅಧಿಪತಿಯಾಗಿದ್ದನು. ಭೀಷ್ಮಕನ ಮಗನಾದ ರುಕ್ಮಿಯು ಗಂಧಮಾದನಪರ್ವತದಲ್ಲಿ ವಾಸಮಾಡುತ್ತಿದ್ದ ಕಿಂಪುರುಷಶ್ರೇಷ್ಠನಾದ ದ್ರುಮನೆಂಬುವನಿಗೆ ಶಿಷ್ಯನಾಗಿ, ನಾಲ್ಕುಪಾದಸಹಿತ ವಾದ ಸಮಗ್ರವಾದ ಧನುರ್ವೇದದಲ್ಲಿಯೂ ಪಾರಂಗತನಾಗಿದ್ದನು. ಮಹಾಬಾಹುವಾದ ರುಕ್ಮಿಯು ಗಾಂಡೀವ ಧನುಸ್ಸಿನ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ವಿಜಯವೆಂಬ ಮಹೇಂದ್ರನ ಸಂಬಂಧವಾದ ಧನುಸ್ಸನ್ನೂ ಪಡೆದುಕೊಂಡಿದ್ದನು. ಆ ಧನುಸ್ಸು ದಿವ್ಯಲಕ್ಷಣಗಳಿಂದ ಕೂಡಿತ್ತಲ್ಲದೇ ಶ್ರೀಕೃಷ್ಣನ ಶಾರ್ಙ್ಗಧನುಸ್ಸಿಗೂ ಸಮಾನವಾಗಿದ್ದಿತು.

ತ್ರೀಣ್ಯೇವೈತಾನಿ ದಿವ್ಯಾನಿ ಧನೂಂಷಿ ದಿವಿಚಾರಿಣಾಮ್ ।
ವಾರುಣಂ ಗಾಣ್ಡಿವಂ ತತ್ರ ಮಾಹೇನ್ದ್ರಂ ವಿಜಯಂ ಧನುಃ ।
ಶಾರ್ಙ್ಗಂ ತು ವೈಷ್ಣವಂ ಪ್ರಾಹುರ್ದಿವ್ಯಂ ತೇಜೋಮಯಂ ಧನುಃ ॥

ದ್ಯುಲೋಕದಲ್ಲಿ ಸಂಚರಿಸುವ ದೇವತೆಗಳಿಂದ ಈ ಮೂರು ಧನುಸ್ಸು ಗಳು ಮಾತ್ರವೇ ದಿವ್ಯಧನುಸ್ಸುಗಳೆಂದು ಪರಿಗಣಿತವಾಗಿವೆ. ವರುಣನ ಸಂಬಂಧವಾದ ಗಾಂಡೀವ, ಮಹೇಂದ್ರನ ಸಂಬಂಧವಾದ ವಿಜಯ, ವಿಷ್ಣು ಸಂಬಂಧವಾದ ತೇಜೋಮಯವಾದ ಶಾರ್ಙ್ಗ-ಈ ಮೂರನ್ನು ಮಾತ್ರವೇ

ದಿವ್ಯಧನುಸ್ಸುಗಳೆಂದು ಹೇಳುತ್ತಾರೆ. ಶತ್ರುಗಳ ಸೈನ್ಯಕ್ಕೆ ಭಯವನ್ನುಂಟು ಮಾಡತಕ್ಕ ವಿಷ್ಣುವಿನ ಸಂಬಂಧವಾದ ಶಾರ್ಙ್ಗಧನುಸ್ಸನ್ನು ಶ್ರೀಕೃಷ್ಣನು ಧಾರಣೆಮಾಡಿದನು. ಖಾಂಡವದಾಹಸಮಯದಲ್ಲಿ ಇಂದ್ರನ ಮಗನಾದ ಅರ್ಜುನನು ಗಾಂಡೀವಧನುಸ್ಸನ್ನು ಯಜ್ಞೇಶ್ವರನಿಂದ ಪಡೆದುಕೊಂಡನು. ತೇಜಸ್ವಿಯಾದ ರುಕ್ಮಿಯು ಕಿಂಪುರುಷಶ್ರೇಷ್ಠನಾದ ದ್ರುಮನಿಂದ ವಿಜಯ ವೆಂಬ ಧನುಸ್ಸನ್ನು ಪಡೆದುಕೊಂಡನು. ಭಗವಾನ್ ಶ್ರೀಕೃಷ್ಣನು ತನ್ನ ತೇಜಸ್ಸಿನಿಂದಲೂ ಮತ್ತು ಬಲದಿಂದಲೂ ಮುರನೆಂಬ ದೈತ್ಯನ ಪಾಶಗಳನ್ನು ಕತ್ತರಿಸಿ, ಭೂಮಿಪುತ್ರನಾದ ನರಕಾಸುರನನ್ನು ಸಂಹರಿಸಿ, ಅದಿತಿಯ ಮಣಿಕುಂಡಲಗಳನ್ನೂ, ಹದಿನಾರು ಸಾವಿರ ಸ್ತ್ರೀಯರನ್ನೂ ಮತ್ತು ನಾನಾವಿಧವಾದ ರತ್ನಗಳನ್ನೂ ತನ್ನ ವಶಕ್ಕೆ ತೆಗೆದುಕೊಂಡನು. ಅದೇ ಸಮಯದಲ್ಲಿ ಹೃಷೀಕೇಶನು ಉತ್ತಮೋತ್ತಮವಾದ ಶಾರ್ಙ್ಗಧನುಸ್ಸನ್ನೂ ಪಡೆದುಕೊಂಡನು.

ರುಕ್ಮಿಯು ಮೇಘದ ಶಬ್ದಕ್ಕೆ ಸಮಾನವಾಗಿ ಟೇಂಕಾರಮಾಡುವ ಭಯಂಕರವಾದ ವಿಜಯವೆಂಬ ಧನುಸ್ಸನ್ನು ಹಿಡಿದುಕೊಂಡು ಸಂಪೂರ್ಣ ಜಗತ್ತನ್ನೇ ಭಯಪಡಿಸುತ್ತಿರುವನೋ ಎಂಬಂತೆ ಪಾಂಡವರ ಸಮೀಪಕ್ಕೆ ಧಾವಿಸಿಬಂದನು. ಹಿಂದೆ ಇದೇ ರುಕ್ಮಿಯು ಸ್ವಬಾಹುಬಲದಿಂದ ಗರ್ವಿತ ನಾಗಿ, ಶ್ರೀಕೃಷ್ಣನು ಸಮಯೋಚಿತವಾಗಿ ಮಾಡಿದ ರುಕ್ಮಿಣೀಹರಣವನ್ನು ಸಹಿಸಿಕೊಳ್ಳಲಿಲ್ಲ. ಶ್ರೀಕೃಷ್ಣನು ರುಕ್ಮಿಣಿಯನ್ನು ಅಪಹರಿಸಿಕೊಂಡು ಹೊರಟುಹೋದೊಡನೆಯೇ ಆ ವಿಷಯವನ್ನು ತಿಳಿದ ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ರುಕ್ಮಿಯು – 'ಜನಾರ್ದನನನ್ನು ಸಂಹರಿಸದೇ ರಾಜ್ಯಕ್ಕೆ ಹಿಂದಿರುಗುವುದಿಲ್ಲ'– ಎಂಬ ಘೋರಪ್ರತಿಜ್ಞೆಮಾಡಿ, ವೃಷ್ಣಿಕುಲತಿಲಕನಾದ ಶ್ರೀಕೃಷ್ಣನನ್ನು ಬೆನ್ನಟ್ಟಿದನು. ದೂರದ ಲಕ್ಷ್ಯವನ್ನೂ ಭೇದಿಸುವ ಸಾಮರ್ಥ್ಯ ವಿದ್ದ, ನಾನಾವಿಧವಾದ ಆಯುಧಗಳನ್ನೂ ಮತ್ತು ಕವಚಗಳನ್ನೂ ಧರಿಸಿದ್ದ, ಗಂಗಾಪ್ರವಾಹದಂತೆಯೇ ಕಾಣುತ್ತಿದ್ದ, ಅತಿದೊಡ್ಡವಾದ ಚತುರಂಗಬಲವೂ ರುಕ್ಮಿಯೊಡನೆ ಹೊರಟಿತು. ಚತುರಂಗಬಲಸಮೇತನಾದ ರುಕ್ಮಿಯು

ಯೋಗೇಶ್ವರನಾದ, ಪ್ರಭುವಾದ ಶ್ರೀಕೃಷ್ಣನ ಬಳಿಗೆ ಹೋಗಿ, ಅವನನ್ನಾ ಕ್ರಮಿಸಿ ಯುದ್ಧಮಾಡಿ ತಾನೇ ಪರಾಜಿತನಾಗಿ-ಅದೇ ಕಾರಣದಿಂದ ನಾಚಿಕೆ ಗೊಂಡವನಾಗಿ–ಮಾಡಿದ್ದ ಪ್ರತಿಜ್ಞಾನುಸಾರವಾಗಿ ಪುನಃ ಕುಂಡಿನಪುರಕ್ಕೆ ಹೋಗಲೇ ಇಲ್ಲ. ಶತ್ರುಪಕ್ಷದ ವೀರರನ್ನು ಹನನಮಾಡುವ ಸಾಮರ್ಥ್ಯವಿದ್ದ ರುಕ್ಮಿಯು, ಶ್ರೀಕೃಷ್ಣನಿಂದ ಯಾವ ಸ್ಥಳದಲ್ಲಿ ಪರಾಜಿತನಾದನೋ ಅದೇ ಸ್ಥಳದಲ್ಲಿಯೇ ಭೋಜಕಟ ಎಂಬ ಹೆಸರಿನ ಉತ್ತಮೋತ್ತಮವಾದ ನಗರ ವನ್ನೇ ನಿರ್ಮಿಸಿದನು. ಸಮೃದ್ಧವಾದ ಆನೆ-ಕುದುರೆಗಳುಳ್ಳ ಮಹಾಸೈನ್ಯದಿಂದ ಕೂಡಿರುವ ಭೋಜಕಟವೆಂಬ ಆ ನಗರವಿಂದು ವಿಶ್ವವಿಖ್ಯಾತವಾಗಿದೆ.

ಭೋಜರಾಜನಾದ, ಮಹಾವೀರ್ಯನಾದ ರುಕ್ಮಿಯು ಒಂದು ಅಕ್ಷೌಹಿಣೀಸಂಖ್ಯಾಕವಾದ ಮಹಾಸೈನ್ಯದಿಂದ ಪರಿವೃತನಾಗಿ ಪಾಂಡವರ ಬಳಿಗೆ ಬಹುಶೀಘ್ರವಾಗಿ ಆಗಮಿಸಿದನು. ಅನಂತರದಲ್ಲಿ ರುಕ್ಮಿಯು ಕವಚವನ್ನೂ, ಧನುಸ್ಸನ್ನೂ, ಬತ್ತಳಿಕೆಯನ್ನೂ, ಖಡ್ಗವನ್ನೂ ಧರಿಸಿದವನಾಗಿ ಸೂರ್ಯನಿಗೆ ಸಮಾನವಾದ ತೇಜಸ್ಸಿನಿಂದ ಪ್ರಕಾಶಿಸುತ್ತಿದ್ದ ಧ್ವಜದೊಡನೆ ಪಾಂಡವರ ವಿಶಾಲವಾದ ಸೈನ್ಯವನ್ನು ಪ್ರವೇಶಿಸಿದನು. ವಾಸುದೇವನಿಗೆ ಪ್ರಿಯವನ್ನುಂಟುಮಾಡುವ ಸಲುವಾಗಿ ರುಕ್ಮಿಯು ತಮ್ಮ ಕಡೆಗೆ ಸೈನ್ಯ ಸಮೇತನಾಗಿ ಬಂದಿರುವನೆಂಬ ವಿಷಯವು ಪಾಂಡುಪುತ್ರರಿಗೆ ತಿಳಿಯಿತು. ಶಿಬಿರಕ್ಕಾಗಮಿಸಿದ ರುಕ್ಮಿಯನ್ನು ಯುಧಿಷ್ಠಿರನು ಮುಂದೆ ಹೋಗಿ ಸ್ವಾಗತಿಸಿ ಯಥೋಚಿತವಾಗಿ ಸತ್ಕರಿಸಿದನು. ಪಾಂಡುಪುತ್ರರಿಂದ ಯಥಾಯೋಗ್ಯವಾದ ಸತ್ಕಾರವನ್ನು ಪಡೆದು ಪ್ರಶಂಸಿತನಾದನಂತರ ರುಕ್ಮಿಯು ಕೂಡ ಪ್ರೇಮ ಪೂರ್ವಕವಾಗಿ ಅವರೆಲ್ಲರ ಯೋಗ-ಕ್ಷೇಮಗಳನ್ನು ವಿಚಾರಿಸಿ ಸೈನಿಕರೊಡನೆ ಸ್ವಲ್ಪಕಾಲ ವಿಶ್ರಾಂತಿಯನ್ನು ಪಡೆದನು. ಬಳಿಕ ಶಿಬಿರದಲ್ಲಿ ಉಪಸ್ಥಿತರಾಗಿದ್ದ ವೀರರ ಮಧ್ಯದಲ್ಲಿ ಕುಳಿತು ಕುಂತೀಪುತ್ರನಾದ ಧನಂಜಯನನ್ನು ಕುರಿತು ಈ ಮಾತುಗಳನ್ನು ಹೇಳಿದನು :

“ಪಾಂಡವ! ಯುದ್ಧದ ವಿಷಯವಾಗಿ ನೀನೇನಾದರೂ ಭಯಗೊಂಡಿ ರುವೆಯಾದರೆ ನಾನು ನಿನ್ನ ಸಹಾಯಕನಾಗಿ ನಿಲ್ಲುತ್ತೇನೆ. ನಾನು ನಿಮಗೆ ಸಹಾಯಕನಾಗಿ ಬಂದಿರುವುದು ಶತ್ರುಗಳಿಗೆ ಸಹಿಸಲಸಾಧ್ಯವಾಗುತ್ತದೆ.

ನನ್ನ ಪರಾಕ್ರಮವನ್ನು ಅವರೆಂದಿಗೂ ಸಹಿಸಿಕೊಳ್ಳಲಾರರು. ನನ್ನ ಪರಾಕ್ರಮಕ್ಕೆ ಸದೃಶವಾದ ಪರಾಕ್ರಮವುಳ್ಳ ಯಾವೊಬ್ಬ ಮನುಷ್ಯನೂ ಇಲ್ಲಿರುವುದಿಲ್ಲ. ನನಗೇನಾದರೂ ನೀನು ಶತ್ರುಪಕ್ಷದ ಒಂದು ಭಾಗವನ್ನೇ ಬಿಟ್ಟು ಕೊಟ್ಟೆಯಾದರೆ ಆ ಭಾಗವನ್ನೇ ನಾನು ಸಂಪೂರ್ಣವಾಗಿ ನಾಶಮಾಡಿಬಿಡು



ತ್ತೇನೆ. ನನ್ನೆದುರಾಗಿ ಮಹಾವೀರರಾದ ದ್ರೋಣ-ಕೃಪರು ಬಂದರೂ ಸರಿಯೇ ; ಭೀಷ್ಮ-ಕರ್ಣರು ಬಂದರೂ ಸರಿಯೇ ; ಅಥವಾ ದುರ್ಯೋಧನನ ಪಕ್ಷದ ರಾಜರೆಲ್ಲರೂ ಯುದ್ಧಕ್ಕೆ ಬಂದು ನಿಂತರೂ ಸರಿಯೇ– ಯುದ್ಧದಲ್ಲಿ ಆ ಶತ್ರುಸೈನಿಕರೆಲ್ಲರನ್ನೂ ಸಂಪೂರ್ಣವಾಗಿ ಸದೆಬಡಿದು ನಿನಗೆ ಈ ಭೂಮಿಯನ್ನು ಅರ್ಪಿಸಿಬಿಡುತ್ತೇನೆ.”

ಪಾರ್ಥಿವೇಂದ್ರರೂ ಮತ್ತು ಇತರ ಸೇನಾಪ್ರಮುಖರೂ ಕೇಳುತ್ತಿರುವಂತೆಯೇ ಧರ್ಮರಾಜನ ಮತ್ತು ಶ್ರೀಕೃಷ್ಣನ ಸನ್ನಿಧಿಯಲ್ಲಿ ರುಕ್ಮಿಯು ಹೀಗೆಂದು ಹೇಳಿದನಂತರ ಧೀಮಂತನಾದ ಅರ್ಜುನನು ಸ್ನೇಹಪೂರ್ವಕವಾಗಿ ನಸುನಕ್ಕು ವಾಸುದೇವನನ್ನೂ ಮತ್ತು ಪಾಂಡುಪುತ್ರನಾದ ಧರ್ಮರಾಜನನ್ನೂ ಒಮ್ಮೆ ನೋಡಿ ರುಕ್ಮಿಯನ್ನು 'ಪ್ರಿಯಸಖನೇ!' ಎಂದು ಸಂಬೋಧಿಸಿ ಹೇಳಿದನು :

**ಕೌರವಾಣಾಂ ಕುಲೇ ಜಾತಃ ಪಾಣ್ಡೋಃ ಪುತ್ರೋ ವಿಶೇಷತಃ ।**
**ದ್ರೋಣಂ ವ್ಯಪದಿಶಞ್ಶಿಷ್ಯೋ ವಾಸುದೇವಸಹಾಯವಾನ್ ।**
**ಭೀತೋಽಸ್ಮೀತಿ ಕಥಂ ಬ್ರೂಯಾಂ ದಧಾನೋ ಗಾಣ್ಡಿವಂ ಧನುಃ ॥**

"ಸುವಿಖ್ಯಾತವಾದ ಕೌರವರ ಕುಲದಲ್ಲಿ ಜನ್ಮತಾಳಿ, ಅದರಲ್ಲಿಯೂ ವಿಶೇಷವಾಗಿ ಮಹಾತ್ಮನಾದ ಪಾಂಡುವಿನ ಪುತ್ರನಾಗಿ, ದ್ರೋಣರ ಪ್ರೀತಿಪಾತ್ರನಾದ ಶಿಷ್ಯನೆಂದು ಹೇಳಿಕೊಂಡು, ಎಲ್ಲಕ್ಕಿಂತಲೂ ಮಿಗಿಲಾಗಿ ವಸುದೇವನ ಮಗನಾದ ಸಾಕ್ಷಾತ್ ಶ್ರೀಕೃಷ್ಣನನ್ನೇ ಸಹಾಯಕನನ್ನಾಗಿ ಪಡೆದು ಕೊಂಡಿರುವ ಮತ್ತು ತ್ರೈಲೋಕ್ಯವಿಖ್ಯಾತವಾದ ಗಾಂಡೀವಧನುಸ್ಸನ್ನು ಧರಿಸಿರುವ ನಾನು 'ಭೀತೋಽಸ್ಮಿ' 'ಯುದ್ಧದಿಂದ ಭಯಪಟ್ಟಿದ್ದೇನೆ' ಎಂದು ಹೇಗೆತಾನೇ ಹೇಳಲಿ?

**ಯುಧ್ಯಮಾನಸ್ಯ ಮೇ ವೀರ ಗನ್ಧರ್ವೈಃ ಸುಮಹಾಬಲೈಃ ।**
**ಸಹಾಯೋ ಘೋಷಯಾತ್ರಾಯಾಂ ಕಸ್ತದಾಸೀತ್ಸಖಾ ಮಮ ॥೨೮॥**

ವೀರವರ! ಕೌರವರು ಘೋಷಯಾತ್ರೆಗೆಂದು ಅರಣ್ಯಕ್ಕೆ ಬಂದಿದ್ದರು. ಆ ಸಮಯದಲ್ಲಿ ಗಂಧರ್ವರು ದುರ್ಯೋಧನನನ್ನು ಸೆರೆಹಿಡಿದುಕೊಂಡು ಹೊರಟುಹೋದರು. ನಮ್ಮಣ್ಣನ ಆಜ್ಞೆಯಂತೆ ನಾನು ದುರ್ಯೋಧನನನ್ನು ಬಿಡಿಸಿಕೊಳ್ಳುವ ಸಲುವಾಗಿ ಮಹಾಬಲಿಷ್ಠರಾದ ಗಂಧರ್ವರೊಡನೆ ಯುದ್ಧ ಮಾಡಿದಾಗ ನನಗೆ ಮಿತ್ರರಾರಿದ್ದರು? ಸಹಾಯಕರಾರಿದ್ದರು?

**ತಥಾ ಪ್ರತಿಭಯೇ ತಸ್ಮಿನ್ದೇವದಾನವಸಂಕುಲೇ ।**
**ಖಾಣ್ಡವೇ ಯುಧ್ಯಮಾನಸ್ಯ ಕಃ ಸಹಾಯಸ್ತದಾಭವತ್ ॥೨೯॥**

ದೇವತೆಗಳಿಂದಲೂ-ದಾನವರಿಂದಲೂ ಸಮ್ಮಿಳಿತವಾಗಿದ್ದ ಖಾಂಡವ ವನದಲ್ಲಿ ಭಯಂಕರವಾದ ಪ್ರತಿಪಕ್ಷದೊಡನೆ ಇಂದ್ರಪ್ರಮುಖರಾದ ದೇವತೆಗಳೊಡನೆ ಯುದ್ಧಮಾಡುತ್ತಿರುವ ನನಗೆ ಯಾರು ಸಹಾಯಕರಾಗಿದ್ದರು?

**ನಿವಾತಕವಚೈರ್ಯುದ್ಧೇ ಕಾಲಕೇಯೈಶ್ಚ ದಾನವೈಃ ।**
**ತತ್ರ ಮೇ ಯುಧ್ಯಮಾನಸ್ಯ ಕಃ ಸಹಾಯಸ್ತದಾಭವತ್ ॥೩೦॥**

ನಿವಾತಕವಚರೊಡನೆ ಮಾಡಿದ ಯುದ್ಧದಲ್ಲಿ ಮತ್ತು ಕಾಲಕೇಯರೆಂಬ ದಾನವರೊಡನೆ ಮಾಡಿದ ಯುದ್ಧದಲ್ಲಿ ನನಗೆ ಸಹಾಯಕರಾರಿದ್ದರು?

**ತಥಾ ವಿರಾಟನಗರೇ ಕುರುಭಿಃ ಸಹ ಸಂಗರೇ ।**
**ಯುಧ್ಯತೋ ಬಹುಭಿಸ್ತತ್ರ ಕಃ ಸಹಾಯೋಽಭವನ್ಮಮ ॥೩೧॥**

ಅದೇ ರೀತಿಯಲ್ಲಿ ವಿರಾಟನಗರದಲ್ಲಿ ಕುರುಗಳೊಡನೆ ಮಾಡಿದ ಯುದ್ಧದಲ್ಲಿ ನನಗೆ ಸಹಾಯಕರಾರಿದ್ದರು? ಆ ಸಮಯದಲ್ಲಿ ಅನೇಕಾನೇಕ ವೀರರನ್ನೆದುರಿಸಿ ನಾನೊಬ್ಬನೇ ಯುದ್ಧಮಾಡಿದೆನು. ಆ ಸಮಯದಲ್ಲಿ ನಾನು ಅನ್ಯರ ಸಹಾಯವಿಲ್ಲದೆಯೇ ಯುದ್ಧಮಾಡಿ ಶತ್ರುಗಳನ್ನು ಪರಾಜಯಗೊಳಿಸಿದೆನು.

**ಉಪಜೀವ್ಯ ರಣೇ ರುದ್ರಂ ಶಕ್ರಂ ವೈಶ್ರವಣಂ ಯಮಮ್ ।**
**ವರುಣಂ ಪಾವಕಂ ಚೈವ ಕೃಪಂ ದ್ರೋಣಂ ಚ ಮಾಧವಮ್ ॥೩೨॥**

**ಧಾರಯನ್ಗಾಣ್ಡಿವಂ ದಿವ್ಯಂ ಧನುಸ್ತೇಜೋಮಯಂ ದೃಢಮ್ ।**
**ಅಕ್ಷಯ್ಯಶರಸಂಯುಕ್ತೋ ದಿವ್ಯಾಸ್ತ್ರಪರಿಬೃಂಹಿತಃ ॥೩೩॥**

**ಕಥಮಸ್ಮದ್ವಿಧೋ ಬ್ರೂಯಾದ್ಭೀತೋಽಸ್ಮೀತಿ ಯಶೋಹರಮ್ ।**
**ವಚನಂ ನರಶಾರ್ದೂಲ ವಜ್ರಾಯುಧಮಪಿ ಸ್ವಯಮ್ ॥೩೪॥**

ಮಹಾರಾಜ! ಯುದ್ಧದಲ್ಲಿ ಜಯಗಳಿಸುವ ಸಲುವಾಗಿಯೇ ನಾನು ರುದ್ರನನ್ನೂ, ಇಂದ್ರನನ್ನೂ, ಕುಬೇರನನ್ನೂ, ಯಮನನ್ನೂ, ವರುಣನನ್ನೂ, ಯಜ್ಞೇಶ್ವರನನ್ನೂ, ಕೃಪರನ್ನೂ, ದ್ರೋಣರನ್ನೂ ಮತ್ತು ಮಾಧವನನ್ನೂ ಆರಾಧಿಸಿ– ಅವರಿಂದ ಅನೇಕವಿಧವಾದ ದಿವ್ಯಾಯುಧಗಳನ್ನು ಪಡೆದು ಕೊಂಡಿರುತ್ತೇನೆ. ದೃಢವಾಗಿಯೂ, ತೇಜೋಮಯವಾಗಿಯೂ ಇರುವ ದಿವ್ಯವಾದ ಗಾಂಡೀವಧನುಸ್ಸನ್ನು ಧಾರಣೆಮಾಡಿದ್ದೇನೆ. ಕ್ಷಯಿಸಿಯೇ

ಹೋಗದ ಬಾಣಗಳಿಂದ ಕೂಡಿರುವ ಅಕ್ಷಯತೂಣೀರಗಳು ನನ್ನಲ್ಲಿವೆ. ಅನೇಕಾನೇಕ ದಿವ್ಯಾಸ್ತ್ರಗಳಿಂದ ನನ್ನ ಶಕ್ತಿಯನ್ನು ವೃದ್ಧಿಪಡಿಸಿಕೊಂಡಿದ್ದೇನೆ. ಹೀಗಿರುವಾಗ ನನ್ನಂತಹವನು ಯಶೋಹರವಾದ 'ಭೀತೋಽಸ್ಮಿ' 'ಭೀತನಾಗಿದ್ದೇನೆ' ಎಂಬ ವಚನವನ್ನು ಹೇಗೆತಾನೇ ಹೇಳಿಯಾನು? ನರಶಾರ್ದೂಲ! ಸ್ವಯಂ ವಜ್ರಪಾಣಿಯೇ ಯುದ್ಧಕ್ಕೆ ಬಂದರೂ ಅವನೆದುರಿ ನಲ್ಲಾದರೂ 'ಭೀತೋಽಸ್ಮಿ' ಎಂದು ಹೇಳುವ ಕಾರಣವಿರುವುದೇ? ನನಗೆ ಹಾಗೆಂದು ಹೇಳಲು ಸಾಧ್ಯವಾಗುವುದೇ?

**ನಾಸ್ಮಿ ಭೀತೋ ಮಹಾಬಾಹೋ ಸಹಾಯಾರ್ಥಶ್ಚ ನಾಸ್ತಿ ಮೇ ।**
**ಯಥಾಕಾಮಂ ಯಥಾಯೋಗಂ ಗಚ್ಛ ವಾನ್ಯತ್ರ ತಿಷ್ಠ ವಾ ॥೩೫॥**

ಮಹಾಬಾಹುವೇ! ನಾನು ಖಂಡಿತವಾಗಿಯೂ ಈ ಯುದ್ಧದ ವಿಷಯವಾಗಿ ಸ್ವಲ್ಪವೂ ಭಯಪಟ್ಟಿರುವುದಿಲ್ಲ. ನನಗೆ ಯಾರೊಬ್ಬರ ಸಹಾಯದ ಅಗತ್ಯವೂ ಇಲ್ಲ. ಆದುದರಿಂದ ನಿನ್ನ ಇಚ್ಛಾನುಸಾರವಾಗಿ ನಿನ್ನ ಸಂಬಂಧಾನುಗುಣವಾಗಿ ಬೇರೆ ಎಲ್ಲಾದರೂ ಹೋಗು ಅಥವಾ ಇಲ್ಲಿಯೇ ಬೇಕಾದರೂ ಇರು."

ಜನಮೇಜಯ! ಧೀಮಂತನಾದ ಅರ್ಜುನನ ಮಾತನ್ನು ಕೇಳಿ ಮಾನಧನನಾದ ರುಕ್ಮಿಯು ಸಮುದ್ರಸದೃಶವಾದ ತನ್ನ ಸೇನೆಯನ್ನು ಹಿಂದಿರುಗಿಸಿಕೊಂಡು ದುರ್ಯೋಧನನ ಶಿಬಿರಕ್ಕೆ ಅಕ್ಷೌಹಿಣೀಸೇನೆ ಯೊಡನೆಯೇ ಹೋದನು. ದುರ್ಯೋಧನನನ್ನು ಸಂಧಿಸಿ ಅರ್ಜುನನೊಡನೆ ಹೇಳಿದಂತೆಯೇ ಅಲ್ಲಿಯೂ ಹೇಳಿದನು :

**ಸಹಾಯೋಽಸ್ಮಿ ಸ್ಥಿತೋ ಯುದ್ಧೇ ಯದಿ ಭೀತೋಽಸಿ ಕೌರವ ।**

"ಕೌರವ! ಯುದ್ಧದ ವಿಷಯದಲ್ಲಿ ನೀನೇನಾದರೂ ಭಯಪಟ್ಟಿದ್ದರೆ ಹೇಳು. ನಾನು ನಿನಗೆ ಸಹಾಯಕನಾಗಿ ನಿಲ್ಲುತ್ತೇನೆ."

ತಾನೇ ಮಹಾಶೂರನೆಂದು ಭಾವಿಸಿದ್ದ ಮಹಾಮಾನಿಷ್ಠನಾದ ದುರ್ಯೋಧನನೂ :

**ನಾಸ್ಮಿ ಭೀತೋ ಮಹಾಬಾಹೋ ಸಹಾಯಾರ್ಥಶ್ಚ ನಾಸ್ತಿ ಮೇ ॥**

"ನಾನು ಭೀತನಾಗಿಯೂ ಇಲ್ಲ; ನಾನು ಯಾರೊಬ್ಬರ ಸಹಾಯವನ್ನೂ ಅಪೇಕ್ಷಿಸುವವನಾಗಿಯೂ ಇಲ್ಲ" – ಎಂದು ಹೇಳಿ ತಿರಸ್ಕರಿಸಿದನು.

ದುರ್ಯೋಧನನಿಂದಲೂ ತಿರಸ್ಕೃತನಾದ ರುಕ್ಮಿಯು ತನ್ನ ಅಕ್ಷೌಹಿಣೀ ಸೈನ್ಯದೊಡನೆ ಸ್ವದೇಶಕ್ಕೆ ಹಿಂದಿರುಗಿದನು.

**ದ್ವಾವೇವ ತು ಮಹಾರಾಜ ತಸ್ಮಾದ್ಯುದ್ಧಾದಪೇಯತುಃ ।**
**ರೌಹಿಣೇಯಶ್ಚ ವಾರ್ಷ್ಣೇಯೋ ರುಕ್ಮೀ ಚ ವಸುಧಾಧಿಪಃ ॥೩೮॥**

ಜನಮೇಜಯ! ಪಾಂಡವ-ಕೌರವರ ಆ ಮಹಾಯುದ್ಧದಿಂದ ಇಬ್ಬರು ಮಾತ್ರವೇ ಹೊರಟುಹೋದರು. ವೃಷ್ಣಿಕುಲಾವತಂಸನಾದ ಬಲರಾಮ ಮತ್ತು ವಸುಧಾಧಿಪನಾದ ರುಕ್ಮಿ– ಈ ಇಬ್ಬರ ಹೊರತಾಗಿ ಉಳಿದ ವಸುಧಾಧಿಪರೆಲ್ಲರೂ ಆ ಮಹಾಯುದ್ಧದಲ್ಲಿ ಭಾಗವಹಿಸಿದ್ದರು.

ಬಲರಾಮನು ತೀರ್ಥಯಾತ್ರೆಗೂ, ಭೀಷ್ಮಕನ ಮಗನಾದ ರುಕ್ಮಿಯು ತನ್ನ ದೇಶಕ್ಕೂ ಹೊರಟುಹೋದನಂತರ ಪಾಂಡವರು ಪುನಃ ಮಂತ್ರಾಲೋಚನೆಗಾಗಿ ಕುಳಿತುಕೊಂಡರು.

ಅನೇಕರಾಜರಿಂದ ಸಮಾಕುಲವಾಗಿದ್ದ ಧರ್ಮರಾಜನ ಆ ಮಂತ್ರಾಲೋಚನಾಸಭೆಯು–ನಕ್ಷತ್ರಗಳಿಂದಲೂ ಮತ್ತು ಚಂದ್ರನಿಂದಲೂ ಕೂಡಿ ಚಿತ್ರಿತವಾಗಿ ಕಾಣುವ ಆಕಾಶದಂತೆಯೇ–ಪ್ರಕಾಶಿಸುತ್ತಿದ್ದಿತು."

೧೫೮ನೆಯ ಅಧ್ಯಾಯವು ಮುಗಿಯಿತು.

೧೫೯ನೆಯ ಅಧ್ಯಾಯ ಸೈನ್ಯನಿರ್ಯಾಣಪರ್ವ (ಮುಂದುವರಿದಿದೆ)

## ಧೃತರಾಷ್ಟ್ರ-ಸಂಜಯರ ಸಂವಾದ

ಜನಮೇಜಯರಾಜನು ವೈಶಂಪಾಯನರನ್ನು ಪ್ರಶ್ನಿಸುತ್ತಾನೆ :

"ಪೂಜ್ಯರಾದ ವೈಶಂಪಾಯನರೇ! ತಾವು ವಿವರಿಸಿದ ರೀತಿಯಲ್ಲಿ ಕುರುಕ್ಷೇತ್ರದಲ್ಲಿ ಪಾಂಡವ-ಕೌರವರ ಎರಡು ಸೇನೆಗಳೂ ಯುದ್ಧಸನ್ನದ್ಧವಾಗಿರುವಾಗ ಕಾಲಪ್ರಚೋದಿತರಾದ ಕೌರವರು ಮುಂದೇನು ಮಾಡಿದರೆಂಬುದನ್ನು ದಯಮಾಡಿ ತಿಳಿಸಿರಿ."

"ಮಹಾರಾಜ! ನಾನು ಹೇಳಿದ ರೀತಿಯಲ್ಲಿ ವ್ಯೂಹರಚನಾ ಪೂರ್ವಕವಾಗಿ ಉಭಯಪಕ್ಷಗಳ ಸೈನಿಕರೂ ಸಜ್ಜಾಗಿ ನಿಂತಿದ್ದಾಗ ಧೃತರಾಷ್ಟ್ರಮಹಾರಾಜನು ಸಂಜಯನನ್ನು ಕುರಿತು ಹೀಗೆಂದು ಹೇಳಿದನು :

"ಇತ್ತ ಬಾ! ಸಂಜಯ! ಕುರು-ಪಾಂಡವರ ಸೈನ್ಯಗಳ ಶಿಬಿರಗಳು ಕುರುಕ್ಷೇತ್ರದಲ್ಲಿ ನಿರ್ಮಾಣವಾದನಂತರ ಅಲ್ಲಿ ಏನೇನು ನಡೆಯಿತೆಂಬುದನ್ನು ಸ್ವಲ್ಪವೂ ಬಿಡದೆ ವಿವರಿಸಿ ಹೇಳು.

**ದಿಷ್ಟಮೇವ ಪರಂ ಮನ್ಯೇ ಪೌರುಷಂ ಚಾಪ್ಯನರ್ಥಕಮ್ ।**
**ಯದಹಂ ಬುಧ್ಯಮಾನೋಽಪಿ ಯುದ್ಧದೋಷಾನ್ ಕ್ಷಯೋದಯಾನ್ ॥೪॥**

**ತಥಾಪಿ ನಿಕೃತಿಪ್ರಜ್ಞಂ ಪುತ್ರಂ ದುರ್ದ್ಯೂತದೇವಿನಮ್ ।**
**ನ ಶಕ್ನೋಮಿ ನಿಯನ್ತುಂ ವಾ ಕರ್ತುಂ ವಾ ಹಿತಮಾತ್ಮನಃ ॥೫॥**

ಸಂಜಯ! ದೈವಸಂಕಲ್ಪವೇ ಪ್ರಬಲವಾದುದು. ಅದರ ಮುಂದೆ ಮನುಷ್ಯಪ್ರಯತ್ನವು ವ್ಯರ್ಥವೆಂದೇ ಭಾವಿಸುತ್ತೇನೆ. ಏಕೆಂದರೆ: ನಾನು ಯುದ್ಧದಲ್ಲಿನ ದೋಷಗಳನ್ನು ತಿಳಿದುಕೊಂಡಿದ್ದೇನೆ. ಆ ದೋಷಗಳು ಜನ ಕ್ಷಯಕ್ಕೆ ಕಾರಣವಾಗುವುದೆಂಬುದನ್ನೂ ನಾನು ತಿಳಿದಿರುತ್ತೇನೆ. ಹಾಗಿದ್ದರೂ ವಂಚನೆಯಲ್ಲಿಯೇ ವಿಶೇಷಪಾಂಡಿತ್ಯವಿರುವ, ಮೋಸದ ಪಗಡೆಯಾಟವಾಡತಕ್ಕ ನನ್ನ ಮಗನನ್ನು ನಿಯಂತ್ರಿಸಲು ನಾನು ಅಸಮರ್ಥನಾಗಿದ್ದೇನೆ ಮತ್ತು ನನ್ನ ಹಿತವನ್ನು ಕಾಪಾಡಿಕೊಳ್ಳುವುದಕ್ಕೂ ಸಹ ನಾನು ಅಸಮರ್ಥನಾಗಿದ್ದೇನೆ. (ನನ್ನ ಬುದ್ಧಿಯು ಯುದ್ಧದ ದೋಷಗಳನ್ನು ಗ್ರಹಿಸುತ್ತದೆ. ಆದರೆ ದುರ್ಯೋಧನನನ್ನು ಎದುರಿಸಲಾಗದೇ ಹಿಂದಿರುಗುತ್ತದೆ.)

**ಏವಂ ಗತೇ ವೈ ಯದ್ಭಾವಿ ತದ್ಭವಿಷ್ಯತಿ ಸಂಜಯ ।**
**ಕ್ಷತ್ರಧರ್ಮಃ ಕಿಲ ರಣೇ ತನುತ್ಯಾಗೋ ಹಿ ಪೂಜಿತಃ ॥೬॥**

ಸಂಜಯ! ಹೀಗಿರುವಾಗ–ಯಾವುದು ಹೇಗಾಗಬೇಕೋ ಅದು ಹಾಗೆಯೇ ಆಗುತ್ತದೆ. ಯುದ್ಧದಲ್ಲಿ ಶರೀರತ್ಯಾಗಮಾಡುವುದೇ ಪರಮಶ್ರೇಷ್ಠವಾದ ಸಮ್ಮಾನಿತವಾದ ಕ್ಷತ್ರಧರ್ಮವಲ್ಲವೇ?"

ಸಂಜಯನು ಹೇಳುತ್ತಾನೆ :

"ಮಹಾರಾಜ! ನೀನು ಕೇಳಿರುವ ಪ್ರಶ್ನೆಯು ಸಮೀಚೀನವಾಗಿದೆ. (ಸೈನ್ಯಶಿಬಿರದ ನಿರ್ಮಾಣಾನಂತರದಲ್ಲಿ ಏನು ನಡೆಯಿತೆಂಬುದನ್ನು ಕೇಳಿ ದುದು ಸಾಧುವಾಗಿದೆ.) 'ಕ್ಷತ್ರಿಯಧರ್ಮಾನುಸಾರವಾಗಿ ಯುದ್ಧಮಾಡಲಿ ; ವೀರಸ್ವರ್ಗವನ್ನು ಸೇರಲಿ' ಎಂಬ ನಿನ್ನ ಇಚ್ಛೆಯೂ ಸಾಧುವಾಗಿಯೂ ಇದೆ. ಆದರೆ : ದುರ್ಯೋಧನನ ಮೇಲೆಯೇ ಎಲ್ಲ ತಪ್ಪುಗಳನ್ನೂ ಹಾಕಿರುವುದು ಮಾತ್ರ ಸರಿಯಲ್ಲ. ದುರ್ಯೋಧನನೊಬ್ಬನೇ ಇದಕ್ಕೆ ಕಾರಣನೆಂದು ಹೇಳುವುದು ನಿನಗೆ ಯುಕ್ತವೆನಿಸುವುದಿಲ್ಲ. ಇದಕ್ಕೆ ನೀನೂ ಕಾರಣನೇ ಆಗಿರುವೆ. ನಾನು ಆಮೂಲಾಗ್ರವಾಗಿ ಎಲ್ಲ ವಿಷಯಗಳನ್ನೂ ಹೇಳುವೆನು ; ಕೇಳು.

**ಯ ಆತ್ಮನೋ ದುಶ್ಚರಿತಾದಶುಭಂ ಪ್ರಾಪ್ನುಯಾನ್ನರಃ ।**
**ನ ಸ ಕಾಲಂ ನ ವಾ ದೇವಾನೇನಸಾ ಗನ್ತುಮರ್ಹತಿ ॥೯॥**

ಯಾವನು ತಾನು ಮಾಡಿದ ದುಷ್ಕಾರ್ಯದಿಂದಲೇ ಅಶುಭಫಲವನ್ನು ಪಡೆಯುತ್ತಾನೆಯೋ–ಅವನು ತಾನು ಅನುಭವಿಸುವ ಅಶುಭಫಲಕ್ಕೆ ಕಾಲವನ್ನಾಗಲೀ, ದೇವತೆಗಳನ್ನಾಗಲೀ ಕಾರಣರನ್ನಾಗಿ ಅಪರಾಧಿಗಳನ್ನಾಗಿ ತಿಳಿಯಬಾರದು.

**ಮಹಾರಾಜ ಮನುಷ್ಯೇಷು ನಿನ್ದ್ಯಂ ಯಃ ಸರ್ವಮಾಚರೇತ್ ।**
**ಸ ವಧ್ಯಃ ಸರ್ವಲೋಕಸ್ಯ ನಿನ್ದಿತಾನಿ ಸಮಾಚರನ್ ॥೧೦॥**

ಯಾವನು ಮನುಷ್ಯರ ವಿಷಯದಲ್ಲಿ ಸರ್ವಕಾಲದಲ್ಲಿಯೂ ನಿಂದಿತ ವಾದ ಕಾರ್ಯಗಳನ್ನೇ ಮಾಡುವನೋ–ಆ ಪಾಪಾತ್ಮನು ಸರ್ವಲೋಕದ ಹಿತಕ್ಕೋಸ್ಕರ ವಧ್ಯನಾಗುತ್ತಾನೆ.

ಮನುಜಶ್ರೇಷ್ಠನೇ! ಪಗಡೆಯಾಟದ ಸಮಯದಲ್ಲಿ ವಂಚಕರಾದ ಅಮಾತ್ಯಸಹಿತರಾದ ನಿನ್ನ ಮಕ್ಕಳಿಂದ ಪಾಂಡವರು ತಿರಸ್ಕೃತ (ವಂಚಿತ) ರಾದರು. ಅಪಮಾನಿತರಾದರು. ಆದರೆ ನಿನ್ನ ಮುಖವನ್ನು ನೋಡಿ ಕೊಂಡು, ನಿನ್ನ ಸಲುವಾಗಿ ಅವರಂದು ತಮಗಾದ ಅಪಮಾನವನ್ನು ಸಹಿಸಿ

ಕೊಂಡರು (ಪ್ರತೀಕಾರಮಾಡಲು ಹೋಗಲಿಲ್ಲ). ಪ್ರಕೃತದಲ್ಲಿ ಯುದ್ಧದ ಕಾರಣದಿಂದಾಗಿ ಕುದುರೆಗಳ, ಆನೆಗಳ, ಅಮಿತತೇಜಸ್ವಿಗಳಾದ ರಾಜರ ಸಂಹಾರವಾಗಲಿದೆ. ಈ ಎಲ್ಲ ವಿಷಯಗಳನ್ನೂ ನಿನಗೆ ವಿಶದವಾಗಿ ಹೇಳು ತ್ತೇನೆ, ಲಾಲಿಸು. ಈ ಮಹಾಯುದ್ಧಸಮಯದಲ್ಲಿ ಸರ್ವಲೋಕಕ್ಷಯಕ್ಕೆ (ಜನಕ್ಷಯಕ್ಕೆ) ಕಾರಣವಾದ ಯಾವ ಯಾವ ಘಟನೆಗಳು ನಡೆದುವೋ ಆ ಎಲ್ಲವನ್ನೂ ಯಥಾವತ್ತಾಗಿ ಹೇಳುತ್ತೇನೆ. ಧೈರ್ಯವನ್ನು ತಾಳಿ ಸ್ಥಿರಮನಸ್ಕ ನಾಗಿ ಏಕಾಗ್ರಚಿತ್ತನಾಗಿ ಕೇಳು. ಕೇಳಿದನಂತರ ವ್ಯಾಕುಲಚಿತ್ತನಾಗಬೇಡ. ದೃಢಮನಸ್ಕನಾಗು.

**ನ ಹ್ಯೇವ ಕರ್ತಾ ಪುರುಷಃ ಕರ್ಮಣೋಃ ಶುಭಪಾಪಯೋಃ ।**
**ಅಸ್ವತನ್ತ್ರೋ ಹಿ ಪುರುಷಃ ಕಾರ್ಯತೇ ದಾರುಯನ್ತ್ರವತ್ ॥೧೪॥**

ಶುಭ ಮತ್ತು ಅಶುಭಕರ್ಮಗಳಿಗೆ ಮನುಷ್ಯನೆಂದಿಗೂ ಕರ್ತೃವಲ್ಲ. ಅಸ್ವತಂತ್ರನಾದ ಪುರುಷನು ಮರದ ಯಂತ್ರದಂತೆ (ತಿರುಗಣೆಯಂತೆ) ಶುಭಾಶುಭಕರ್ಮಗಳನ್ನು ಮಾಡಲು ಬೇರೊಬ್ಬ ಕರ್ತೃವಿನಿಂದ ಪ್ರಚೋದಿತ ನಾಗುತ್ತಾನೆ (ಹೀಗೆಂದು ನಿರ್ಧರಿಸಿಕೊಂಡು ಮನಸ್ಸನ್ನು ಸ್ತಿಮಿತಗೊಳಿಸು).

**ಕೇಚಿದೀಶ್ವರನಿರ್ದಿಷ್ಟಾಃ ಕೇಚಿದೇವ ಯದೃಚ್ಛಯಾ ।**
**ಪೂರ್ವಕರ್ಮಭಿರಪ್ಯನ್ಯೇ ತ್ರೈಧಮೇತತ್ಪ್ರದೃಶ್ಯತೇ ।**
**ತಸ್ಮಾದನರ್ಥಮಾಪನ್ನಃ ಸ್ಥಿರೋ ಭೂತ್ವಾ ನಿಶಾಮಯ ॥೧೫॥**

ಕಾರ್ಯಗಳು ಮೂರು ಪ್ರಕಾರವಾಗಿ ನಡೆಯುವುದನ್ನು ನಾವು ಕಾಣು ತ್ತಿದ್ದೇವೆ. (ಈಗ ನಡೆಯುವ ಮಹಾಯುದ್ಧವು ದೈವಿಕವೇ, ಸ್ವಕಲ್ಪಿತವೇ ಅಥವಾ ಪೂರ್ವಕರ್ಮಾನುಬಂಧವೇ – ಎಂಬುದನ್ನು ನೀನೇ ನಿರ್ಧರಿಸಬಹುದು.)

ಕಾರ್ಯಗಳು ಮೂರು ವಿಧವಾದ ಕಾರಣಗಳಿಂದ ನಡೆಯುತ್ತವೆ. ಕೆಲವು ಘಟನೆಗಳು (ಅನಾವೃಷ್ಟಿ ಮುಂತಾದುವು) ಈಶ್ವರಾಧೀನವಾದುವು ಗಳು. ಪರಮೇಶ್ವರನ ನಿರ್ದೇಶಕ್ಕೆ ಸೇರಿದುವುಗಳು (ದೈವಿಕಗಳು). ಮತ್ತೆ ಕೆಲವು ತನ್ನ ಇಚ್ಛೆಯಿಂದಲೇ ಸಂಭವಿಸತಕ್ಕುವುಗಳು. (ಪುಣ್ಯ-ಪಾಪ ಕಾರ್ಯಗಳನ್ನು ಮಾಡಲು ಮನುಷ್ಯನು ಸ್ವತಂತ್ರನಾಗಿರುತ್ತಾನೆ.

ಯಾವ ಕಾರ್ಯಮಾಡಿದರೆ ಪುಣ್ಯವು ಲಭ್ಯವಾಗುತ್ತದೆ ; ಯಾವ ಕಾರ್ಯ ಮಾಡಿದರೆ ಪಾಪವು ಸಂಘಟಿಸುತ್ತದೆ–ಎಂಬುದನ್ನು ಶ್ರುತಿ-ಸ್ಮೃತಿಗಳು. ನಿರ್ದೇಶಿಸುತ್ತವೆ. ಎಲ್ಲವನ್ನೂ ಪರ್ಯಾಲೋಚಿಸಿ ಕಾರ್ಯಮಾಡುವುದು ಮನುಷ್ಯನ ಕರ್ತವ್ಯವಾಗಿರುತ್ತದೆ.) ಮನುಷ್ಯನು ಮಾಡುವ ಕೆಲವು ಕ್ರಿಯೆಗಳಿಗೆ ಒಡನೆಯೇ ಫಲವು ಸಿಕ್ಕುತ್ತದೆ. ಮತ್ತೆ ಕೆಲವು ಕ್ರಿಯೆಗಳಿಗೆ ಜನ್ಮಾಂತರಗಳಲ್ಲಿ ಫಲವು ಸಿಕ್ಕುತ್ತದೆ. ಆದುದರಿಂದಲೇ ಮೂರನೆಯದಾಗಿ ಕೆಲವು ಕಾರ್ಯಗಳು ಹಿಂದೆ ಮಾಡಿದ ಕರ್ಮಾನುಸಾರವಾಗಿ ನಡೆಯುತ್ತವೆ. ಆದುದರಿಂದ (ಈ ರೀತಿಯಾಗಿ ಈ ಮೂರು ಕಾರಣಗಳಲ್ಲಿ ಯಾವುದೋ ಒಂದು ಕಾರಣದಿಂದ) ಮಹಾಸಂಕಟಕ್ಕೆ ಸಿಕ್ಕಿಕೊಂಡು ತೊಳಲುತ್ತಿರುವ ನೀನು ಸ್ಥಿರಚಿತ್ತನಾಗಿ ನಾನು ಹೇಳುವುದನ್ನು ಕೇಳು.”

ಂ೫೯ನೆಯ ಅಧ್ಯಾಯವು ಮುಗಿಯಿತು.

೧೬೦ನೆಯ ಅಧ್ಯಾಯ ಉಲೂಕದೂತಾಗಮನಪರ್ವ

## ದುರ್ಯೋಧನನು ಉಲೂಕನನ್ನು ಪಾಂಡವರಲ್ಲಿಗೆ ದೂತನನ್ನಾಗಿ ಕಳುಹಿಸಿದುದು

ಸಂಜಯನು ಮುಂದುವರಿದು ಹೇಳುತ್ತಾನೆ :

**ಹಿರಣ್ವತ್ಯಾಂ ನಿವಿಷ್ಟೇಷು ಪಾಣ್ಡವೇಷು ಮಹಾತ್ಮಸು ।**
**ನ್ಯವಿಶನ್ತ ಮಹಾರಾಜ ಕೌರವೇಯಾ ಯಥಾವಿಧಿ ॥೧॥**

“ಮಹಾರಾಜ! ಪಾಂಡವರು ಹಿರಣ್ವತೀನದಿಯ ತೀರಪ್ರದೇಶದಲ್ಲಿ ಬಿಡಾರಮಾಡಿದ ಸಮಾಚಾರವನ್ನು ತಿಳಿದ ಕೌರವರೂ ಬೇರೊಂದು ಭಾಗದಲ್ಲಿ ತಮ್ಮ ಬಿಡಾರಗಳನ್ನು ನಿರ್ಮಿಸಿದರು. ಅಲ್ಲಿ ದುರ್ಯೋಧನನು ವೀರ್ಯವತ್ತಾದ ಸೈನ್ಯವನ್ನಿಟ್ಟು, ತನ್ನ ಕಡೆಗೆ ಯುದ್ಧಮಾಡಲು ಆಗಮಿಸಿದ್ದ ರಾಜರನ್ನು ಯಥಾಯೋಗ್ಯವಾಗಿ ಸಮ್ಮಾನಿಸಿ ಅವರ ರಕ್ಷಣೆಗಾಗಿ ಸೈನ್ಯದ ತುಕ್ಕಡಿಗಳನ್ನಿಟ್ಟನು. ಈ ರೀತಿಯಾಗಿ ರಾಜರ ಮತ್ತು ಮುಖ್ಯಯೋಧರ ರಕ್ಷಣಾ ವ್ಯವಸ್ಥೆಯನ್ನು ಮಾಡಿ ಕರ್ಣನನ್ನೂ, ದುಃಶಾಸನನನ್ನೂ ಮತ್ತು ಸುಬಲಪುತ್ರನಾದ ಶಕುನಿಯನ್ನೂ ತನ್ನ ಬಿಡಾರಕ್ಕೆ ಕರೆಸಿಕೊಂಡು ಅವರೊಡನೆ

ಮುಂದೆ ಮಾಡಬೇಕಾದ ಕಾರ್ಯದ ವಿಷಯವಾಗಿ ಮಂತ್ರಾಲೋಚನೆಯನ್ನು ಮಾಡಿದನು. ತನ್ನ ಅಮಾತ್ಯರನ್ನು ಪ್ರತ್ಯೇಕ-ಪ್ರತ್ಯೇಕವಾಗಿಯೂ ಸಂಧಿಸಿ ಮಾತನ್ನಾಡಿದನು. ಮೊದಲು ಕರ್ಣನೊಡನೆ ಮಾತನಾಡಿ ಅವನ ಅಭಿಪ್ರಾಯವನ್ನು ಗ್ರಹಿಸಿ, ಅನಂತರ ತನ್ನ ತಮ್ಮನಾದ ದುಃಶಾಸನನೊಡನೆ ಮಾತನಾಡಿ ಅವನ ಅಭಿಪ್ರಾಯವನ್ನೂ ತಿಳಿದು, ಬಳಿಕ ಶಕುನಿಯೊಡನೆ ಮಂತ್ರಾಲೋಚನೆಮಾಡಿ ಒಂದು ನಿರ್ಧಾರಕ್ಕೆ ಬಂದವನಾಗಿ ಏಕಾಂತದಲ್ಲಿ ಉಲೂಕನನ್ನು ಕರೆದು ಅವನೊಡನೆ ದುರ್ಯೋಧನನು ಹೀಗೆಂದು ಹೇಳಿದನು :



"ದ್ಯೂತಕುಶಲನಾದ ಶಕುನಿಯ ಪುತ್ರನೇ! ಉಲೂಕ! ನೀನು ಸೋಮಕರೊಡನಿರುವ ಪಾಂಡವರ ಬಳಿಗೆ ಹೋಗಿ ಶ್ರೀಕೃಷ್ಣನ ಸಮ್ಮುಖದಲ್ಲಿ ನಾನೀಗ ನಿನ್ನೊಡನೆ ಹೇಳುವ ಮಾತುಗಳನ್ನು ಹೇಳು :

'ಹಲವಾರು ವರ್ಷಗಳಿಂದ ಎಲ್ಲರ ಮನಸ್ಸಿನಲ್ಲಿಯೂ ಇದ್ದ ಲೋಕ ಭಯಂಕರವಾದ ಕುರು-ಪಾಂಡವರ ಮಹಾಯುದ್ಧವು ಇದೀಗ ಸನ್ನಿಹಿತವಾಗಿದೆ. ವಾಸುದೇವನ ಸಹಾಯವಿದೆಯೆಂಬ ಕೊಬ್ಬಿನಿಂದ ತಮ್ಮಂದಿರೊಡಗೂಡಿದ ನೀನು ಗರ್ಜನೆಮಾಡುತ್ತಾ ಸಂಜಯನೊಡನೆ ಏನೆಂದು ಜಂಬಕೊಚ್ಚಿದೆಯೋ ಅದೆಲ್ಲವನ್ನೂ ಸಂಜಯನು ಕುರುಗಳ ಸಭಾಮಧ್ಯದಲ್ಲಿ ವಿವರಿಸಿ ಹೇಳಿದ್ದಾನೆ. ನೀವು ಮಾಡಿಕೊಂಡ ಆತ್ಮಪ್ರಶಂಸೆಯನ್ನು ಕಾರ್ಯತಃ ಮಾಡುವ ಕಾಲವೀಗ ಸನ್ನಿಹಿತವಾಗಿದೆ. ನೀವು ಈ ಹಿಂದೆ ಏನೇನು ಪ್ರತಿಜ್ಞೆಮಾಡಿರುವಿರೋ ಆ ಎಲ್ಲವನ್ನೂ ಈಗ ಪೂರ್ಣಮಾಡಿಕೊಳ್ಳಿರಿ.'

ಉಲೂಕ! ಈ ಮಾತನ್ನು ಹೇಳಿದನಂತರ ನೀನು ಜ್ಯೇಷ್ಠನಾದ ಧರ್ಮರಾಜನನ್ನೇ ನಿರ್ದೇಶಿಸಿ ನನ್ನ ಮಾತಿನಿಂದ ಹೀಗೆ (ದುರ್ಯೋಧನನು) ಹೇಳಿದೆನೆಂದೇ ಹೇಳು.

'ನೀನು ಧಾರ್ಮಿಕನಾಗಿರುವೆ. ಆದರೆ ನಿನ್ನ ಅನುಜರೊಡನೆ ಸೋಮಕರೊಡನೆ ಮತ್ತು ಕೇಕಯರೊಡನೆ ಸೇರಿಕೊಂಡವನಾಗಿ ಅಧರ್ಮವೆನಿಸಿದ ಕಾರ್ಯಮಾಡಲು ಹೇಗೆ ಮನಸ್ಸುಮಾಡಿದೆ? ಧರ್ಮಾತ್ಮನಾದ ನೀನು ಸಕಲಪ್ರಾಣಿಗಳಿಗೂ ಅಭಯದಾಯಕನೆಂದು ನಾನು ಭಾವಿಸಿದ್ದೆನು. ನೀನೀಗ ಮಹಾಭಯಂಕರವಾದ ಕಾರ್ಯಮಾಡಲು ನಿರ್ಧರಿಸಿರುವೆ. ಕ್ರೂರನಾದ ಮನುಷ್ಯನಂತೆ–ಜಗತ್ತು ನಾಶಹೊಂದುವುದನ್ನು ನೀನು ಇಚ್ಛಿಸುತ್ತಿರುವೆಯಲ್ಲವೇ?

ಭರತಶ್ರೇಷ್ಠನೇ! ನಿನಗೆ ಮಂಗಳವಾಗಲಿ.

ಪೂರ್ವದಲ್ಲಿ ದೇವತೆಗಳು ಪ್ರಹ್ಲಾದನ ರಾಜ್ಯವನ್ನು ಅಪಹರಿಸಿದನಂತರ ಪ್ರಹ್ಲಾದನು ದೇವತೆಗಳನ್ನು ಕುರಿತು ಈ ಶ್ಲೋಕವನ್ನು ಹೇಳಿದನೆಂದು ನಾನು ಹಿರಿಯರಿಂದ ಕೇಳಿದ್ದೇನೆ. ಅದನ್ನೇ ನಾನೂ ನಿನಗೆ ಹೇಳುತ್ತೇನೆ :

**ಯಸ್ಯ ಧರ್ಮಧ್ವಜೋ ನಿತ್ಯಂ ಸುರಾ ಧ್ವಜ ಇವೋಚ್ಛ್ರಿತಃ ।**
**ಪ್ರಚ್ಛನ್ನಾನಿ ಚ ಪಾಪಾನಿ ಬೈಡಾಲಂ ನಾಮ ತದ್ವ್ರತಮ್ ॥೧೪॥**

‘ದೇವತೆಗಳೇ! ಸಾಧಾರಣಧ್ವಜದಂತಿರುವ ಯಾವನ ಧರ್ಮಧ್ವಜವು ನಿತ್ಯವೂ ಉನ್ನತಸ್ಥಾನದಲ್ಲಿ ಹಾರುತ್ತಿರುವುದೋ, ಆದರೆ ಯಾವ ಧರ್ಮ ಧ್ವಜಿಯು ರಹಸ್ಯದಲ್ಲಿ ಪಾಪಕರ್ಮಗಳನ್ನೇ ಮಾಡುತ್ತಿರುವನೋ– ಅವನನ್ನು ‘ಬೈಡಾಲವ್ರತೀ’ ಎಂದು ಕರೆಯುತ್ತಾರೆ. ಈ ಕ್ರಿಯೆಗೆ ಬಿಡಾಲವ್ರತ ಎಂದು ಹೆಸರು.

ಈ ವಿಷಯದಲ್ಲಿ ನಿನಗೊಂದು ಉತ್ತಮವಾದ ಆಖ್ಯಾನವನ್ನೂ ಹೇಳುತ್ತೇನೆ. ಈ ಆಖ್ಯಾನವು ಹಿಂದೆ ಮಹರ್ಷಿಗಳಾದ ನಾರದರಿಂದ ನಮ್ಮ ತಂದೆಗೆ ಹೇಳಲ್ಪಟ್ಟಿತು.

ಒಂದಾನೊಂದು ಸಮಯದಲ್ಲಿ ದುಷ್ಟಬುದ್ಧಿಯಿದ್ದ ಬೆಕ್ಕೊಂದು ಯಾವ ಕೆಲಸಗಳನ್ನೂ ಮಾಡದೇ ಎರಡು ಕೈಗಳನ್ನೂ ಮೇಲೆತ್ತಿಕೊಂಡು ಗಂಗಾತೀರದಲ್ಲಿ ನಿಂತಿದ್ದಿತು.

ಸಕಲಪ್ರಾಣಿಗಳಿಗೂ ತನ್ನ ವಿಷಯದಲ್ಲಿ ವಿಶ್ವಾಸಹುಟ್ಟಬೇಕೆಂಬ ಆಶಯದಿಂದ ಆ ಬೆಕ್ಕು ಎಲ್ಲ ಪ್ರಾಣಿಗಳನ್ನೂ ಪ್ರತ್ಯೇಕ-ಪ್ರತ್ಯೇಕವಾಗಿಯೂ ಸಾಮೂಹಿಕವಾಗಿಯೂ ಕರೆದು ಹೇಳುತ್ತಿದ್ದಿತು :

‘ಮನಃಶುದ್ಧಿಂ ಕೃತ್ವಾ ಚರಾಮಿ ಧರ್ಮಂ’- ‘ಇಲ್ಲಿಯೇ ಕುಳಿತು ಮನಶ್ಶುದ್ಧಿಯನ್ನು ಮಾಡಿಕೊಂಡು (ಕಾಮ-ಕ್ರೋಧಾದಿಗಳನ್ನೂ, ಹಿಂಸೆಯನ್ನೂ ತ್ಯಜಿಸಿ) ಧರ್ಮಾಚರಣೆಮಾಡುತ್ತೇನೆ.’

ಅನುದಿನವೂ ಎರಡು ಬಾಹುಗಳನ್ನೂ ಮೇಲೆತ್ತಿ ನಿಂತು ‘ಮನಶ್ಶುದ್ಧಿ ಯನ್ನು ಹೊಂದಿ ಧರ್ಮಾಚರಣೆಮಾಡುತ್ತೇನೆ’ ಎಂದು ಹೇಳಿಕೊಳ್ಳುತ್ತಿದ್ದರೆ ಸ್ವಲ್ಪಕಾಲದ ನಂತರವಾದರೂ ಪ್ರಾಣಿಗಳಿಗೆ ಬೆಕ್ಕಿನ ವಿಷಯದಲ್ಲಿ ವಿಶ್ವಾಸಹುಟ್ಟುವುದು ಸಹಜವೇ ಅಲ್ಲವೇ? ಬಹಳ ದಿವಸಗಳು ಕಳೆದನಂತರವೂ ಆ ಬೆಕ್ಕು ಹಾಗೆಯೇ ಕುಳಿತಿರುವುದನ್ನು ಕಂಡು ಮತ್ತು ಹೇಳುತ್ತಿರುವುದನ್ನು ಕೇಳಿ ಪಕ್ಷಿಗಳು ಆ ಬೆಕ್ಕಿನ ವಿಷಯದಲ್ಲಿ ವಿಶ್ವಾಸವನ್ನಿಟ್ಟುವು. ಪಕ್ಷಿಗಳು ಗುಂಪು-ಗುಂಪಾಗಿ ಬಂದು ಬೆಕ್ಕನ್ನು ಪ್ರಶಂಸಿಸತೊಡಗಿದುವು. ತಾನು ಮಾಡುತ್ತಿದ್ದ ‘ತಪಸ್ಸಿಗಾಗಿ’ ಸರ್ವಪಕ್ಷಿಗಳಿಂದಲೂ ಗೌರವಿಸಲ್ಪಡುತ್ತಿದ್ದ,

ಪಕ್ಷಿಗಳನ್ನೇ ತಿಂದು ಜೀವಿಸತಕ್ಕ ಆ ಬೆಕ್ಕು ಹೀಗೆ ಯೋಚಿಸಿತು : 'ನಾನು ಉದ್ದೇಶಿಸಿದ ಕಾರ್ಯದ ಸಾಧನೆಯೂ ಆಯಿತು ; ನಾನಿದುವರೆಗೂ ಗಂಗಾತೀರದಲ್ಲಿ ಮಾಡಿದ ತಪಸ್ಸಿಗೂ ಫಲವು ಸಿಕ್ಕಿತು.'



ಇನ್ನೂ ಸ್ವಲ್ಪಕಾಲ ಕಳೆದನಂತರ ಬೆಕ್ಕು 'ತಪಸ್ಸು' ಮಾಡುತ್ತಿದ್ದ ಆ ಗಂಗಾತೀರಪ್ರದೇಶಕ್ಕೆ ಇಲಿಗಳೂ ಹೋದುವು. ಅಲ್ಲಿ ಅವು ಧಾರ್ಮಿಕನಾದ ಮಾರ್ಜಾಲಸಂನ್ಯಾಸಿಯನ್ನು ಕಂಡುವು. ಮಹಾನುಷ್ಠಾನಮಾಡುತ್ತಿದ್ದ ದಂಭಯುಕ್ತವಾದ ಮಾರ್ಜಾಲಸಂನ್ಯಾಸಿಯನ್ನು ನೋಡಿ ಅವುಗಳು ಈ ರೀತಿಯಾಗಿ ನಿರ್ಧರಿಸಿದುವು :

**ಬಹ್ವಮಿತ್ರಾ ವಯಂ ಸರ್ವೇ ತೇಷಾಂ ನೋ ಮಾತುಲೋ ಹ್ಯಯಮ್ ।**
**ರಕ್ಷಾಂ ಕರೋತು ಸತತಂ ವೃದ್ಧಬಾಲಸ್ಯ ಸರ್ವತಃ ॥೨೨॥**

'ನಮಗೆ ಬಹಳ ಶತ್ರುಗಳಿದ್ದಾರೆ. ಆದುದರಿಂದ ಈ ಮಾರ್ಜಾಲ ಸಂನ್ಯಾಸಿಯನ್ನು ನಮ್ಮ ಸೋದರಮಾವನೆಂದು ಪರಿಗ್ರಹಿಸೋಣ. ನಮ್ಮಲ್ಲಿರುವ ವೃದ್ಧರನ್ನೂ ಮತ್ತು ಬಾಲರನ್ನೂ ಇವನು ರಕ್ಷಣೆಮಾಡಿಕೊಂಡಿರಲಿ.' ಹೀಗೆಂಬುದಾಗಿ ನಿಶ್ಚಯಿಸಿ ಇಲಿಗಳು ಮಾರ್ಜಾಲಸಾಧುವಿನ ಸಮೀಪಕ್ಕೆ ಬಂದು ಹೀಗೆಂದು ಹೇಳಿದುವು :

**ಭವತ್ಪ್ರಸಾದಮಿಚ್ಛಾಮಶ್ಚರ್ತುಂ ಚೈವ ಯಥಾಸುಖಮ್ ।**
**ಭವಾನ್ನೋ ಗತಿರವ್ಯಗ್ರಾ ಭವಾನ್ನಃ ಪರಮಃ ಸುಹೃತ್ ।**
**ತೇ ವಯಂ ಸಹಿತಾಃ ಸರ್ವೇ ಭವನ್ತಂ ಶರಣಂ ಗತಾಃ ॥೨೪॥**

'ನಾವು ಯಾವ ವಿಧವಾದ ಯೋಚನೆಯೂ ಇಲ್ಲದೇ ಸುಖವಾಗಿ ಇಲ್ಲಿಂದಲ್ಲಿಗೆ ಅಡ್ಡಾಡಲು ನಿನ್ನ ಅನುಗ್ರಹವನ್ನು ಇಚ್ಛಿಸುತ್ತೇವೆ. ನೀನೇ ನಮಗೆ ಏಕೈಕಶರಣ್ಯನು. ನೀನೇ ನಮಗೆ ಪರಮಾಪ್ತನಾದ ಸಖನು. ನಾವೆಲ್ಲರೂ ಒಟ್ಟಾಗಿ ನಿನಗೆ ಶರಣಾಗತರಾಗಿದ್ದೇವೆ.

**ಭವಾನ್ಧರ್ಮಪರೋ ನಿತ್ಯಂ ಭವಾನ್ಧರ್ಮೇ ವ್ಯವಸ್ಥಿತಃ ।**
**ಸ ನೋ ರಕ್ಷ ಮಹಾಪ್ರಾಜ್ಞ ತ್ರಿದಶಾನಿವ ವಜ್ರಭೃತ್ ॥೨೫॥**

ನೀನು ಯಾವಾಗಲೂ ಧರ್ಮದಲ್ಲಿಯೇ ತತ್ಪರನಾಗಿರುವೆ. ನೀನು ಧರ್ಮದಲ್ಲಿಯೇ ಸುಪ್ರತಿಷ್ಠನಾಗಿರುವೆ. (ಸರ್ವದಾ ಧರ್ಮನಿಷ್ಠನಾಗಿರುವೆ.) ಮಹಾಪ್ರಾಜ್ಞನೇ! ಇಂದ್ರನು ದೇವತೆಗಳನ್ನು ಸಂರಕ್ಷಿಸುವಂತೆ–ನೀನು ನಮ್ಮನ್ನು ಸಂರಕ್ಷಿಸು."

ವಿಶಾಂಪತೇ! ಮೂಷಿಕಗಳು ಬೆಕ್ಕನ್ನು ಹೀಗೆ ಪ್ರಾರ್ಥಿಸಲಾಗಿ, ಮೂಷಿಕಗಳಿಗೆ ಯಮರಾಜಸ್ವರೂಪವಾದ ಬೆಕ್ಕು ಆ ಎಲ್ಲ ಇಲಿಗಳನ್ನೂ ಕುರಿತು ಹೀಗೆಂದು ಹೇಳಿತು :

'ಮೂಷಿಕಗಳೇ! ತಪಸ್ಸಿಗೂ ಮತ್ತು ರಕ್ಷಣಾಕಾರ್ಯಕ್ಕೂ ಸಂಬಂಧವಿರುವುದನ್ನು ನಾನಿದುವರೆಗೂ ನೋಡಿಲ್ಲ. ಇದು ಸಾಧ್ಯವಾಗುವು

ದಿಲ್ಲವೆಂಬುದೇ ನನ್ನ ಅಭಿಪ್ರಾಯ. ತಪಸ್ಸನ್ನು ಏಕಾಗ್ರತೆಯಿಂದ ಮಾಡಬೇಕಾಗುತ್ತದೆ. ಇತರರ ರಕ್ಷಣೆಗೆಂದು ಮನಸ್ಸನ್ನು ಚಂಚಲಗೊಳಿಸಲು ಸಾಧ್ಯವಿಲ್ಲ. ಆದರೆ ಈ ಸಮಯದಲ್ಲಿ ನನ್ನ ತಪಸ್ಸಿಗಿಂತಲೂ ಹೆಚ್ಚಾಗಿ ನಿಮಗೆ ಹಿತವಾಗುವಂತಹ ಕಾರ್ಯಮಾಡುವುದೇ ನನ್ನ ಕರ್ತವ್ಯವಾಗಿರುತ್ತದೆ. ಆದರೆ ನೀವೂ ನನ್ನದೊಂದು ಮಾತನ್ನು ಪ್ರತಿನಿತ್ಯವೂ ನಡೆಸಿಕೊಡಬೇಕಾಗಿದೆ. ನಾನು ಅನೇಕಾನೇಕ ವರ್ಷಗಳಿಂದಲೂ ದೃಢವಾಗಿ ನಿಯಮವ್ರತಾನುಷ್ಠಾನದಲ್ಲಿದ್ದೇನೆ. ಈ ವಿಧವಾದ ತಪಸ್ಸನ್ನು ಮಾಡಿ- ಮಾಡಿ ಬಹಳ ಶ್ರಾಂತನಾಗಿದ್ದೇನೆ. ನಾನೆಷ್ಟೇ ಯೋಚಿಸಿದರೂ ನನ್ನನ್ನು ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ ಒಯ್ಯುವ ಯಾವ ಶಕ್ತಿಯನ್ನೂ ಕಾಣದವನಾಗಿದ್ದೇನೆ (ನನಗೆ ಸಂಚರಿಸಲೂ ಶಕ್ತಿಯಿಲ್ಲ.) ಆದುದರಿಂದ ನೀವೆಲ್ಲರೂ ನನ್ನನ್ನು (ಸ್ನಾನಕ್ಕಾಗಿ) ಗಂಗಾನದಿಯ ನೀರಿನ ಬಳಿಗೆ ಕರೆದುಕೊಂಡು ಹೋಗಬೇಕು ಮತ್ತು ಅಲ್ಲಿಂದ ಪುನಃ ಇಲ್ಲಿಗೆ ಕರೆತರಬೇಕು.”

ಭರತರ್ಷಭನೇ! ಮೂಷಿಕಗಳು ‘ಹಾಗೆಯೇ ಆಗಲಿ’ ಎಂದು ಮಾರ್ಜಾಲನಿಗೆ ಪ್ರತಿಜ್ಞಾವಚನವನ್ನಿತ್ತು ಮುದಿ ಮತ್ತು ಎಳೆಯ ಇಲಿಗಳನ್ನು ಮಾರ್ಜಾಲನ ರಕ್ಷಣೆಗೆ ಒಪ್ಪಿಸಿ ಹೊರಟುಹೋದುವು. ಅನಂತರದಲ್ಲಿ ಮಾರ್ಜಾಲಸಂನ್ಯಾಸಿಯು ತನ್ನ ರಕ್ಷಣೆಯಲ್ಲಿದ್ದ ಮೂಷಿಕಗಳನ್ನು ಒಂದೊಂದನ್ನಾಗಿಯೇ ತಿನ್ನಲು ಆರಂಭಿಸಿತು. ಮಾರ್ಜಾಲದ ಶರೀರವು ದಿನ-ದಿನಕ್ಕೂ ದಪ್ಪವಾಗತೊಡಗಿತು. ಸುಂದರವಾಯಿತು. ಅದರ ಅಂಗಾಂಗಗಳೆಲ್ಲವೂ ಬಲಿಷ್ಠವಾದುವು. ಮೂಷಿಕಸಮೂಹವು ಬಹಳ ಬೇಗ ಕ್ಷಯಿಸುತ್ತಿದ್ದಿತು. ಅಂತೆಯೇ ಮಾರ್ಜಾಲವು ವರ್ಧಿಸುತ್ತಿದ್ದಿತು. ದಿನ-ದಿನಕ್ಕೂ ಮಾರ್ಜಾಲವು ತೇಜಸ್ಸಿನಿಂದಲೂ ಬಲದಿಂದಲೂ ಅತಿಶಯವಾಗಿ ವೃದ್ಧಿ ಹೊಂದುತ್ತಿದ್ದಿತು.

ಮೂಷಿಕಗಳು ಒಂದೆಡೆಯಲ್ಲಿ ಸೇರಿ ಸಮಾಲೋಚನೆ ನಡೆಸಿ ಪರಸ್ಪರವಾಗಿ ಮಾತನಾಡಿಕೊಂಡುವು :

**ಮಾತುಲೋ ವರ್ಧತೇ ನಿತ್ಯಂ ವಯಂ ಕ್ಷೀಯಾಮಹೇ ಭೃಶಮ್ ॥**

“ಈ ನಮ್ಮ ಮಾವನು ದಿನೇ-ದಿನೇ ತೇಜೋಬಲಸಮನ್ವಿತನಾಗುತ್ತಿದ್ದಾನೆ. ದೃಢಕಾಯನಾಗುತ್ತಿದ್ದಾನೆ. ನಾವಾದರೋ ಕ್ಷಯಿಸುತ್ತಿದ್ದೇವೆ. ಈಗ ನಾವೇನು ಮಾಡೋಣ?”

ಹೀಗೆಯೇ ಪರಸ್ಪರವಾಗಿ ಮಾತನಾಡಿಕೊಳ್ಳುತ್ತಿದ್ದಾಗ ಡಿಂಡಿಕನೆಂಬ ಹೆಸರಿನ ಮಹಾಪ್ರಜ್ಞೆಯಿದ್ದ ಮೂಷಿಕವು ಇಲಿಗಳ ಮಹಾಸಮೂಹವನ್ನು ಉದ್ದೇಶಿಸಿ ಹೇಳಿತು.: “ನೀವೆಲ್ಲರೂ ಒಂದೇ ಗುಂಪಿನಲ್ಲಿ ನದೀತೀರಕ್ಕೆ ಹೋಗಿರಿ. ನಾನು ನಿಮ್ಮ ಹಿಂದೆ ಮಾವನಾದ ಮಾರ್ಜಾಲನೊಡನೆ ಬರುತ್ತೇನೆ.”

‘ಸಾಧು-ಸಾಧು’ ಎಂದು ಹೇಳುತ್ತಾ ಮೂಷಿಕಗಳೆಲ್ಲವೂ ಡಿಂಡಿಕನ ಮಾತನ್ನು ಪ್ರಶಂಸಿಸಿದುವು ಮತ್ತು ಅವನ ಅರ್ಥವತ್ತಾದ ಮಾತಿನಂತೆ ಯಥೋಚಿತವಾದ ರೀತಿಯಲ್ಲಿ ನಡೆದುಕೊಂಡುವು.

ಮೂಷಿಕಗಳಿಗೆ ಕೊಟ್ಟಿದ್ದ ಮಾತಿನಂತೆ ಡಿಂಡಿಕನು ಮಾರ್ಜಾಲನನ್ನು ನದೀತೀರಕ್ಕೆ ಕರೆದುಕೊಂಡು ಹೊರಟನು. ಆದರೆ ಮೂಷಿಕಗಳು ಸಮಾಲೋಚಿಸಿ ಕಾರ್ಯಮಾಡುತ್ತಿವೆಯೆಂಬ ಅರಿವು ಮಾರ್ಜಾಲನಿಗಿರಲಿಲ್ಲ. ಹಿಂದಿನಂತೆಯೇ ಮಾರ್ಜಾಲನು ಇಂದೂ ತನ್ನೊಡನೆ ಬರುತ್ತಿದ್ದ ಡಿಂಡಿಕನನ್ನು ತಿಂದುಬಿಟ್ಟನು.

ಈ ವಿಷಯವು ಮೂಷಿಕಗಳಿಗೆ ಒಡನೆಯೇ ಗೊತ್ತಾಗಲಿಲ್ಲ. ಆದರೆ ಮಾತ್ರ ವೃದ್ಧ-ಬಾಲಮೂಷಿಕಗಳು ದಿನ-ದಿನಕ್ಕೂ ಕ್ಷಯಿಸುವುದು ತಪ್ಪಲೇ ಇಲ್ಲ.

ಒಡನೆಯೇ ಎಲ್ಲ ಮೂಷಿಕಗಳೂ ಒಟ್ಟಾಗಿ ಸೇರಿ ಪುನಃ ಸಮಾಲೋಚಿಸತೊಡಗಿದುವು. ಹೆಚ್ಚು ಮುದಿಯಾಗಿದ್ದ ಕಾಲಿಕ ಎಂಬ ಹೆಸರಿನ ಒಂದು ಮೂಷಿಕವು ಜ್ಞಾತಿಗಳ ಮಧ್ಯದಲ್ಲಿ ಯಥಾರ್ಥವಾದ ಈ ಮಾತನ್ನು ಹೇಳಿತು :

**ನ ಮಾತುಲೋ ಧರ್ಮಕಾಮಶ್ಛದ್ಮಮಾತ್ರಂ ಕೃತಾ ಶಿಖಾ ।**
**ನ ಮೂಲಫಲಭಕ್ಷಸ್ಯ ವಿಷ್ಠಾ ಭವತಿ ಲೋಮಶಾ ॥೩೯॥**

‘ಸಹೋದರರರೇ! ಈ ನಮ್ಮ ಮಾವನಿಗೆ ಧರ್ಮದಲ್ಲಿ ಆಸಕ್ತಿಯು

ಸ್ವಲ್ಪವಾದರೂ ಇರುವುದಿಲ್ಲ. ನಮ್ಮಂತಹವರಿಗೆ ಮೋಸಮಾಡುವ ಸಲುವಾಗಿಯೇ ಜಟೆಯೊಂದನ್ನು ಬಿಟ್ಟುಕೊಂಡಿದ್ದಾನೆ. ಕಂದ-ಮೂಲ-ಫಲಗಳನ್ನೇ ಭಕ್ಷಿಸುವವನ ವಿಷ್ಠೆಯು (ಅಮೇಧ್ಯವು) ಕೂದಲುಗಳಿಂದ ಕೂಡಿರುವುದಿಲ್ಲ. ಈ ಮಾವನ ಅಮೇಧ್ಯವು ಕೂದಲುಗಳಿಂದ ಕೂಡಿರುತ್ತದೆ. ಆದುದರಿಂದ ಈ ಮಾರ್ಜಾಲವು ನಮ್ಮ ಜ್ಞಾತಿ-ಬಾಂಧವರನ್ನು ತಿನ್ನುತ್ತಿರಬೇಕು. ಮೇಲಾಗಿ ಈ ಮಾರ್ಜಾಲದ ಗಾತ್ರವು ದಿನ-ದಿನಕ್ಕೂ ವರ್ಧಿಸುತ್ತಲೇ ಇದೆ. ನಮ್ಮ ಗಣವು ದಿವಸ-ದಿವಸಕ್ಕೂ ಕ್ಷಯಹೊಂದುತ್ತಿದೆ. ಅಂದು ಮಾವನ ಜೊತೆಯಲ್ಲಿ ಹೋಗುವೆನೆಂದು ಹೇಳಿದ್ದ ಡಿಂಡಿಕನೂ ಈಗ ಏಳೆಂಟು ದಿವಸಗಳಿಂದ ಕಾಣುತ್ತಿಲ್ಲ.”

ಮುದಿಇಲಿಯ ಆ ಮಾತನ್ನು ಕೇಳಿದೊಡನೆಯೇ ಅಳಿದುಳಿದ ಮೂಷಿಕಗಳೆಲ್ಲವೂ ದಿಕ್ಕಾಪಾಲಾಗಿ ಓಡಿಹೋದುವು. ದುಷ್ಟಾತ್ಮನಾದ ಬಿಡಾಲನೂ ಅನಾಯಾಸವಾಗಿ ಸಿಕ್ಕಿದ ನೂರಾರು ಇಲಿಗಳನ್ನು ತಿಂದು ಹೃಷ್ಟಾತ್ಮನಾಗಿ ಮತ್ತು ಪುಷ್ಟಾತ್ಮನಾಗಿ ಎಲ್ಲಿಂದ ಬಂದಿದ್ದನೋ ಅಲ್ಲಿಗೇ ಹೊರಟುಹೋದನು.”*

ದುರ್ಯೋಧನನು ಮುಂದುವರಿದು ಹೇಳಿದನು :

‘ದುಷ್ಟಾತ್ಮನಾದ ಯುಧಿಷ್ಠಿರನೇ! ನೀನೂ ಕೂಡ ಇಂದು ಮಾರ್ಜಾಲ ಸಂನ್ಯಾಸವ್ರತಸ್ಥನಾಗಿರುವೆ. ಮಾರ್ಜಾಲವು ಮೂಷಿಕಗಳ ವಿಷಯದಲ್ಲಿ ಹೇಗೆ ನಡೆದುಕೊಂಡಿತೋ– ಅದೇ ರೀತಿಯಲ್ಲಿ ನೀನೂ ನಿನ್ನ ಜ್ಞಾತಿಗಳ ವಿಷಯದಲ್ಲಿ ನಡೆದುಕೊಳ್ಳುತ್ತಿರುವೆ. ನೀನು ಹೇಳುವುದೇ ಒಂದು ; ಮಾಡು

---

* ಈ ಕಥೆಯು ಬಹಳ ಸ್ವಾರಸ್ಯವಾಗಿದ್ದು ಈಗಿನ ಎಷ್ಟೋ ಪ್ರಕರಣಗಳಿಗೆ ಅನುಗುಣವಾಗಿದೆ. ಮಾರ್ಜಾಲನನ್ನು ಪಕ್ಷಿಗಳು ಕೊಂಡಾಡಿದುವು. ಅದನ್ನು ನಂಬಿಕೊಂಡು ಮೂಷಿಕಗಳು ಮೋಸಹೋದುವು. ಅನೇಕ ಸಂನ್ಯಾಸಿಗಳೆಂಬುವವರೂ ಪವಾಡಪುರುಷರೆಂದುಕೊಳ್ಳುವವರೂ ಇದ್ದಾರೆ. ಅವರ ಸುತ್ತಲೂ ಹೊಗಳುಭಟರಿರುತ್ತಾರೆ. ಹೊಗಳಿಕೆಯನ್ನೇ ನಂಬಿ ಮೋಸಹೋಗುವವರೂ ಇದ್ದಾರೆ. ಬಹುಜನರು ಕಷ್ಟ-ನಷ್ಟಗಳನ್ನು ಅನುಭವಿಸಿದ ನಂತರವೇ ಅದು ವಂಚನೆಯ ನಾಟಕವೆಂಬ ಅರಿವಾಗುತ್ತದೆ. ಅಪ್ರಮತ್ತರಾಗಿರುವುದು ಅವಶ್ಯ.

ವುದೇ ಇನ್ನೊಂದು. ನಿನ್ನ ಮಾತಿಗೂ ಮತ್ತು ಆಚರಣೆಗೂ ಸಂಬಂಧವೇ ಇಲ್ಲ. ನಿನ್ನ ವೇದಾಧ್ಯಯನ, ವೈದಿಕಮಾರ್ಗಾವಲಂಬಿಯಾಗಿರುವಂತೆ ತೋರ್ಪಡಿಸಿ ಕೊಳ್ಳುವುದು, ಮಾತೆತ್ತಿದರೆ 'ಶಾಂತಿ' ಎನ್ನುವುದು, ಶಾಂತಸ್ವಭಾವವನ್ನು ಪ್ರಕಟಿಸುವುದು – ಈ ಎಲ್ಲವೂ ಲೋಕವನ್ನು ವಂಚಿಸುವ ಸಲುವಾಗಿಯೇ ಹೊರತು ಇವುಗಳನ್ನು ನೀನು ಆಚರಣೆಯಲ್ಲಿಟ್ಟುಕೊಂಡಿರುವುದಿಲ್ಲ. ನಿನ್ನ ಈಗಿನ ಕರ್ಮಾಚರಣೆಯನ್ನು ನೋಡಿದರೆ ನಿನ್ನ ಇದುವರೆಗಿನ ಶಾಂತಸ್ವಭಾವದ ತೋರಿಕೆಯು ಲೋಕವನ್ನು ವಂಚಿಸುವುದಕ್ಕೇ ಆಗಿದೆ.

ಮಹಾರಾಜ! ನೀನು ಧರ್ಮಿಷ್ಠನೇ ಆಗಿದ್ದ ಪಕ್ಷದಲ್ಲಿ ಈ ಮೋಸದ ವೇಷವನ್ನು ಬಿಟ್ಟುಬಿಡು. (ಶಾಂತಿಪ್ರಿಯನೆಂದು ಹೇಳಿಕೊಳ್ಳಬೇಡ. ಕ್ಷತ್ರಧರ್ಮವನ್ನು ಆಶ್ರಯಿಸಿ ಅದಕ್ಕೆ ಅನುಸಾರವಾಗಿ ಎಲ್ಲ ಕಾರ್ಯಗಳನ್ನೂ ಮಾಡು. ಭುಜಬಲ-ಪರಾಕ್ರಮಗಳಿಂದ ಈ ಪೃಥ್ವಿಯನ್ನು ಪಡೆದುಕೊಂಡು ಬ್ರಾಹ್ಮಣರಿಗೆ ದಾನಮಾಡು. ನಿನ್ನ ಪಿತೃಗಳಿಗೂ ಯಥೋಚಿತವಾದ ಭಾಗವನ್ನು ಕೊಡು. (ಪಿಂಡೋದಕಕ್ರಿಯೆಗಳನ್ನು ಮಾಡು.) ನಿನ್ನ ತಾಯಿಯು ಅನೇಕವರ್ಷಗಳಿಂದ ಕಷ್ಟವನ್ನನುಭವಿಸುತ್ತಿದ್ದಾಳೆ. ಅವಳ ಹಿತದಲ್ಲಿ ಆಸಕ್ತನಾಗು. ಅನೇಕವರ್ಷಗಳಿಂದಲೂ ಅವಳು ನಿಮಗಾಗಿ ಕಣ್ಣೀರಿಡುತ್ತಿದ್ದಾಳೆ. ಅವಳ ಕಣ್ಣೀರನ್ನೊರೆಸು. ಯುದ್ಧದಲ್ಲಿ ವಿಜಯಗಳಿಸಿ ಶ್ರೇಷ್ಠವಾದ ಸಮ್ಮಾನಕ್ಕೆ ಅವಳನ್ನೂ ಭಾಗಿನಿಯನ್ನಾಗಿ ಮಾಡು. ನೀವು ಐದು ಗ್ರಾಮಗಳನ್ನೇ ಕೇಳಿದಿರಿ. ನಾವು ಉದ್ದೇಶಪೂರ್ವಕವಾಗಿಯೇ ಆ ಐದು ಗ್ರಾಮಗಳನ್ನೂ ನಿಮಗಾಗಿ ಪರಿತ್ಯಜಿಸಲು ಇಚ್ಛಿಸಲಿಲ್ಲ. ನಾವು ಒಂದು ವೇಳೆ ನಿಮಗೆ ಐದು ಗ್ರಾಮಗಳನ್ನೇ ಕೊಟ್ಟುಬಿಟ್ಟಿದ್ದರೆ ನಿಮ್ಮನ್ನು ಕೋಪದಿಂದ ಉದ್ರಿಕ್ತರನ್ನಾಗಿ ಮಾಡಲು ನಮಗೆ ಹೇಗೆತಾನೇ ಸಾಧ್ಯವಾಗುತ್ತಿದ್ದಿತು? ನಿಮ್ಮೊಡನೆ ಯುದ್ಧಮಾಡಲು ಹೇಗೆ ಸಾಧ್ಯವಾಗುತ್ತಿದ್ದಿತು? ನಿನ್ನ ಸಲುವಾಗಿಯೇ ನಾನು ದುಷ್ಟಾತ್ಮನಾದ (ನಿಮ್ಮ ಪಕ್ಷಪಾತಿಯಾದ) ವಿದುರನನ್ನೂ ಪರಿತ್ಯಜಿಸಿದೆನು. ಲಾಕ್ಷಾಗೃಹದಲ್ಲಿ ನಿಮ್ಮನ್ನು ಸುಟ್ಟುಬಿಡಲು ಪ್ರಯತ್ನಿಸಿದೆನು. ಈ ಎಲ್ಲವನ್ನೂ ನೀನೀಗ ಸ್ಮರಿಸು. ಅನಂತರವಾದರೂ ನಿನಗೆ ಪುರುಷತ್ವವು ಪ್ರಾಪ್ತವಾಗಲಿ. ಕೌರವಸಭೆಗೆ ಸಂಧಾನಕ್ಕಾಗಿ ಆಗಮಿಸಿದ್ದ ಕೃಷ್ಣನೊಡನೆ ನೀನು ನಮಗೆ ಸಂದೇಶವನ್ನು ಕಳುಹಿಸಿದ್ದೆಯಲ್ಲವೇ?

**ಅಯಮಸ್ಮಿ ಸ್ಥಿತೋ ರಾಜಞ್ಶ್ಯಮಾಯ ಸಮರಾಯ ಚ ॥೯॥**

'ನಾನು ಸಂಧಿಗಾಗಲೀ–ಯುದ್ಧಕ್ಕಾಗಲೀ ಸಿದ್ಧನಾಗಿದ್ದೇನೆ' – ಎಂಬ ಸಂದೇಶವನ್ನು ನೀನು ಕೃಷ್ಣನೊಡನೆ ಹೇಳಿಕಳುಹಿಸಿದ್ದೆ. ನರಾಧಿಪನೇ! ಅಂತಹ ಯುದ್ಧದ ಕಾಲವೀಗ ಸನ್ನಿಹಿತವಾಗಿದೆ. ಆ ಯುದ್ಧವು ನಡೆಯಬೇಕೆಂದೇ ನಾನು ಎಲ್ಲ ಸಿದ್ಧತೆಗಳನ್ನೂ ಮಾಡಿರುತ್ತೇನೆ.

ಕ್ಷತ್ರಿಯನಾದವನು ಯುದ್ಧಲಾಭಕ್ಕಿಂತಲೂ ಮತ್ತಾವ ಲಾಭವನ್ನು ತಾನೇ ಮಹತ್ತ್ವದ್ದೆಂದು ಭಾವಿಸುತ್ತಾನೆ? ಕ್ಷತ್ರಿಯನಿಗೆ ಯುದ್ಧಮಾಡುವುದೇ ಉತ್ಕೃಷ್ಟಲಾಭದಾಯಕವಾದ ಕಾರ್ಯ. ಮೇಲಾಗಿ ನೀನೂ ಕ್ಷತ್ರಿಯಕುಲದಲ್ಲಿ ಹುಟ್ಟಿರುವೆಯಲ್ಲದೇ–ಜಗದ್ವಿಖ್ಯಾತನೂ ಆಗಿರುವೆ.

ಭರತರ್ಷಭನೇ! ದ್ರೋಣಾಚಾರ್ಯರಿಂದಲೂ ಕೃಪರಿಂದಲೂ ಅಸ್ತ್ರವಿದ್ಯೆಯನ್ನು ಪಡೆದುಕೊಂಡು ಜಾತಿಯಲ್ಲಿಯೂ ಬಲದಲ್ಲಿಯೂ ನಮಗೆ ಸಮಾನನಾಗಿರುವೆಯಾದರೂ ಕೃಷ್ಣನನ್ನೂ ಆಶ್ರಯಿಸಿರುವೆ." (ತಾನು ಸಮರ್ಥನಾಗಿರುವಾಗ ಪರಾಶ್ರಯವು ಅವಮಾನಕರ.)'

ಉಲೂಕ! ಯುಧಿಷ್ಠಿರನನ್ನು ಕುರಿತು ನೀನು ಹೀಗೆ ಹೇಳಿದನಂತರ ಪಾಂಡವರ ಹತ್ತಿರದಲ್ಲೇ ಇರುವ ವಾಸುದೇವನಿಗೆ ಈ ಮಾತುಗಳನ್ನು ಹೇಳಬೇಕು :

'ಸಂಪೂರ್ಣಪ್ರಯತ್ನಮಾಡಿ ಅಥವಾ ನಿನ್ನ ಸಂಪೂರ್ಣಬಲವನ್ನೆಲ್ಲಾ ವಿನಿಯೋಗಿಸಿ ನಿನ್ನ ಸಲುವಾಗಿಯೂ ಮತ್ತು ಪಾಂಡವರ ಸಲುವಾಗಿಯೂ ಪಾಂಡವರಿಂದ ಯುದ್ಧಮಾಡಿಸು. (ಪಾಂಡವರು ನನ್ನೊಡನೆ ಯುದ್ಧ ಮಾಡುವಂತೆ ಮಾಡು.) ನೀನು ಸಂಧಾನಕ್ಕಾಗಿ ಬಂದಿದ್ದಾಗ ಸಭಾಮಧ್ಯದಲ್ಲಿ ಮಾಯೆಯಿಂದ ಯಾವ ರೂಪವನ್ನು ಧರಿಸಿದೆಯೋ–ಅದೇ ಮಾಯಾ ರೂಪವನ್ನೇ ಪುನಃ ಧಾರಣೆಮಾಡಿಕೊಂಡು ಅರ್ಜುನಸಮೇತನಾಗಿ ನನ್ನ ಮೇಲೆ ದಾಳಿನಡೆಸು.

ಇಂದ್ರಜಾಲ, ಯಕ್ಷಿಣಿ, ಮಾಯೆ, ಬೆದರಿಸುವಿಕೆ–ಇವುಗಳು ಯುದ್ಧ ದಲ್ಲಿ ಶಸ್ತ್ರವನ್ನು ಮೇಲೆತ್ತಿ ನಿಂತಿರುವ ಶೂರನಿಗೆ ಮಹತ್ತರವಾದ ಕೋಪದಿಂದ

ಗರ್ಜಿಸುವಂತೆ ಮಾಡುತ್ತವೆಯೇ ಹೊರತು ಭಯವನ್ನುಂಟುಮಾಡುವುದಿಲ್ಲ. ನಮಗೂ ಕೂಡ ಈ ಮಾಯೆಗಳು ತಿಳಿಯದೇ ಇಲ್ಲ. ನಾವೂ ಮಾಯಾವಿದ್ಯೆಯಲ್ಲಿ ಪ್ರವೀಣರಾಗಿಯೇ ಇದ್ದೇವೆ. ನಾವೂ ಆಕಾಶಕ್ಕೆ ಹಾರಬಲ್ಲೆವು. ಮಾಯೆಯಿಂದ ಅಂತರಿಕ್ಷದಲ್ಲಿ ಪ್ರಯಾಣಮಾಡಬಲ್ಲೆವು. ರಸಾತಲಕ್ಕೂ ಹೋಗಬಲ್ಲೆವು. ಇಂದ್ರನ ಪಟ್ಟಣವಾದ ಅಮರಾವತಿಗೂ ಹೋಗಬಲ್ಲೆವು. ಇಷ್ಟು ಮಾತ್ರವಲ್ಲ, ಕೃಷ್ಣ! ಕುರುಸಭಾಮಧ್ಯದಲ್ಲಿ ನಿನ್ನ ಶರೀರದಲ್ಲಿಯೇ ನಾನಾರೂಪಗಳನ್ನು ತೋರಿಸಿದೆಯಲ್ಲವೇ? ಅಂತೆಯೇ ನಾವೂ ನಮ್ಮ ಶರೀರಗಳಲ್ಲಿಯೇ ಬಹುವಿಧವಾದ ರೂಪಗಳನ್ನೂ ತೋರಿಸ ಬಲ್ಲೆವು. ಆದರೆ ಅದರಿಂದಾಗುವ ಪ್ರಯೋಜನವೇನು? ಈ ಇಂದ್ರಜಾಲ-ಮಹೇಂದ್ರಜಾಲಗಳ ಪ್ರದರ್ಶನದಿಂದ ನಮ್ಮ ಅಭೀಷ್ಟದ ಸಿದ್ಧಿಯೇನೂ ಆಗುವುದಿಲ್ಲ. ನಮ್ಮ ಶತ್ರುವೂ ಮನುಷ್ಯಸಹಜವಾದ ಬುದ್ಧಿಯನ್ನು ಎಂದರೆ ಭಯವನ್ನು ಹೊಂದುವುದಿಲ್ಲ. ನೀನು ಕುರುಸಭಾಮಧ್ಯದಲ್ಲಿ ತೋರಿದ ಮಾಯಾವಿದ್ಯೆಯ ಪ್ರಯೋಜನವೂ ಇಷ್ಟೇ ಅಲ್ಲವೇ?

**ಮನಸ್ಯೈವ ಹಿ ಭೂತಾನಿ ಧಾತೈವ ಕುರುತೇ ವಶೇ ॥೫೮॥**

ವಿಧಾತನೊಬ್ಬನು ಮಾತ್ರವೇ ಮನಸ್ಸಂಕಲ್ಪದಿಂದ ಸಕಲಪ್ರಾಣಿಗಳನ್ನೂ ತನ್ನ ವಶಮಾಡಿಕೊಳ್ಳಬಲ್ಲನು. ಬೇರೆ ಯಾರಿಂದಲೂ ಸಾಧ್ಯವಾಗುವುದಿಲ್ಲ, ಕೃಷ್ಣ!

ನೀನು ಅನೇಕಪ್ರಕಾರವಾಗಿ ಸಂಜಯನ ಮುಂದೆ ಆತ್ಮಪ್ರಶಂಸೆಯನ್ನು ಮಾಡಿಕೊಂಡ ವಿಷಯವು ನನಗೆ ಸಂಜಯನಿಂದಲೇ ತಿಳಿದಿದೆ :

'ಯುದ್ಧದಲ್ಲಿ ಧೃತರಾಷ್ಟ್ರನ ಮಕ್ಕಳನ್ನು ಧ್ವಂಸಮಾಡಿ ಉತ್ತಮೋತ್ತಮ ವಾದ ಈ ರಾಜ್ಯವನ್ನು ಪಾಂಡವರಿಗೆ ಕೊಟ್ಟುಬಿಡುತ್ತೇನೆ. ನಿಮಗೆ ಅರ್ಜುನನೊಡನೆ ಮಾತ್ರವೇ ವೈರವಿಲ್ಲ. ನನ್ನಿಂದ ಕೂಡಿರುವ, ಸವ್ಯಸಾಚಿ ಯಾದ ಅರ್ಜುನನೊಡನೆ ವೈರವೆಂಬುದನ್ನು ನೆನಪಿನಲ್ಲಿಡಿ.' ಇವೇ ಮುಂತಾದ ಮಾತುಗಳನ್ನು ಸಂಜಯನೊಡನೆ ಹೇಳಿ ನೀನು ಗರ್ಜಿಸಿದೆಯಲ್ಲವೇ? ಕೃಷ್ಣ! ಸತ್ಯಪ್ರತಿಜ್ಞನಾಗು. ನಿನ್ನ ಪ್ರತಿಜ್ಞೆಯನ್ನು ಪೂರೈಸುವ ಕಾಲವೀಗ ಸನ್ನಿಹಿತ ವಾಗಿದೆ. ಪಾಂಡವರ ಸಲುವಾಗಿಯಾದರೂ ನೀನೀಗ ಪರಾಕ್ರಮಿಯಾಗು.

ರಣರಂಗದಲ್ಲಿ ಪ್ರಯತ್ನಪೂರ್ವಕವಾಗಿಯಾದರೂ ಈಗ ಯುದ್ಧಮಾಡು. ಪುರುಷನಾಗು. ವೀರಪುರುಷನಂತೆ ವರ್ತಿಸು. ನೀನು ಪ್ರಯತ್ನಪೂರ್ವಕ ವಾಗಿ, ಪ್ರತಿಜ್ಞಾಪೂರಣಕ್ಕಾಗಿ ಮಾಡಲಿರುವ ಯುದ್ಧವನ್ನಾದರೂ ನಾವು ಕಣ್ತುಂಬ ನೋಡುತ್ತೇವೆ.

**ಯಸ್ತು ಶತ್ರುಮಭಿಜ್ಞಾಯ ಶುದ್ಧಂ ಪೌರುಷಮಾಸ್ಥಿತಃ ।**
**ಕರೋತಿ ದ್ವಿಷತಾಂ ಶೋಕಂ ಸ ಜೀವತಿ ಸುಜೀವಿತಮ್ ॥೬೧॥**

ಯಾವನು ಶತ್ರುವಿನ ನಿಜವಾದ ಪರಾಕ್ರಮವನ್ನು ತಿಳಿದುಕೊಂಡು, ಶುದ್ಧವಾದ ಪರಾಕ್ರಮವನ್ನು ಅವಲಂಬಿಸಿ (ಇಂದ್ರಜಾಲ-ಮಹೇಂದ್ರಜಾಲ ಗಳನ್ನು ಪ್ರದರ್ಶಿಸಹೋಗದೇ) ಶತ್ರುಗಳಿಗೆ ಶೋಕವನ್ನುಂಟುಮಾಡುತ್ತಾ ನೆಯೋ–ಅಂತಹವನೇ ಶ್ರೇಷ್ಠವಾದ ಜೀವನವನ್ನು ನಡೆಸುತ್ತಾನೆ.

ಕೃಷ್ಣ! ಆಕಸ್ಮಿಕವಾಗಿ ನಿನಗೆ ಈ ಲೋಕದಲ್ಲಿ ಖ್ಯಾತಿಯು ಬಂದು ಬಿಟ್ಟಿದೆ. ಮಹಾಯಶಸ್ಸು ಪ್ರಾಪ್ತವಾಗಿದೆ. ಪುರುಷತ್ವದ ಚಿಹ್ನೆಗಳು (ಗಡ್ಡ- ಮೀಸೆಗಳು) ಮಾತ್ರವೇ ಇರುವ ಅನೇಕಷಂಡರು ಈ ಪ್ರಪಂಚದಲ್ಲಿದ್ದಾರೆಂಬುದನ್ನು ಈಗಲಾದರೂ ನಾವು ತಿಳಿದುಕೊಳ್ಳುತ್ತೇವೆ. ವಿಶೇಷವಾಗಿ ಹೇಳುವುದೇನಿದೆ? ನನ್ನಂತಹ ಕ್ಷತ್ರಿಯರಾಜರು ನಿನ್ನಂತಹವನೊಡನೆ ಅದರಲ್ಲಿಯೂ ವಿಶೇಷತಃ ಕಂಸಭೃತ್ಯನೊಡನೆ ಕವಚ-ಧನುರ್ಬಾಣಗಳನ್ನು ಧರಿಸಿ ಯುದ್ಧಕ್ಕೆ ಸಜ್ಜಾಗುವುದೇ ಉಚಿತವಲ್ಲ.'

ಉಲೂಕ! ಕೃಷ್ಣನನ್ನು ಕುರಿತು ಹೀಗೆ ಹೇಳಿದನಂತರ ನನ್ನ ಈ ಸಂದೇಶವನ್ನು ಗಡ್ಡ-ಮೀಸೆಗಳಿಲ್ಲದ, ಮೂರ್ಖನಾದ, ಹೊಟ್ಟೆಬಾಕನಾದ, ಅವಿದ್ಯಾವಂತನಾದ ಭೀಮಸೇನನಿಗೆ ಹೇಳು. ಒಂದೇ ಸಲ ಹೇಳಿ ಸುಮ್ಮನಿದ್ದು ಬಿಡಬೇಡ. ನಾಲ್ಕಾರು ಬಾರಿ ಹೇಳು.; ಪದೇ-ಪದೇ ಹೇಳುತ್ತಲೇ ಇರು.

'ಎಲವೋ ಪಾರ್ಥ! ವಿರಾಟನಗರದಲ್ಲಿ (ವಿರಾಟರಾಜನ ಮನೆ ಯಲ್ಲಿ) ಬಲ್ಲವನೆಂದು ಹೆಸರಿಟ್ಟುಕೊಂಡು ವಿಖ್ಯಾತನಾದ ಅಡಿಗೆಯವನಾಗಿದ್ದೆ ಯಲ್ಲವೇ? ನನ್ನ ಪೌರುಷದಿಂದ ನಿನ್ನನ್ನು ಒಂದು ವರ್ಷಕಾಲ ಅಡಿಗೆಮಾಡಿ ಜೀವಿಸುವಂತೆ ಮಾಡಿಬಿಟ್ಟೆನು. ನೀನು ಹಿಂದೆ ಕೌರವಸಭಾಮಧ್ಯದಲ್ಲಿ ಪ್ರತಿಜ್ಞೆ

ಮಾಡಿದ್ದೆಯಲ್ಲವೇ? ಅದು ಸುಳ್ಳಾಗಕೂಡದು. ತಿಳಿಯಿತೆ? ನಿನಗೆ ಶಕ್ಯವಿದ್ದರೆ ದುಃಶಾಸನನ ರಕ್ತವನ್ನು ಕುಡಿದೇ ಬಿಡು. ಹಿಂದೆ ನೀನು :

**ಧಾರ್ತರಾಷ್ಟ್ರಾನಹಂ ರಣೇ ನಿಹನಿಷ್ಯಾಮಿ ತರಸಾ ।**

'ಧೃತರಾಷ್ಟ್ರನ ಮಕ್ಕಳನ್ನು ಯುದ್ಧದಲ್ಲಿ ಬೇಗನೆ ಸಂಹರಿಸಿಬಿಡುತ್ತೇನೆ' – ಎಂದು ಹತ್ತಾರು ಬಾರಿ ಹೇಳಿದ್ದೆ. ಆ ಕಾಲವು ಇದೀಗ ಬಂದೇ ಬಿಟ್ಟಿದೆ.

**ತ್ವಂ ಹಿ ಭೋಜ್ಯೇ ಪುರಸ್ಕಾರ್ಯೋ ಭಕ್ಷ್ಯೇ ಪೇಯೇ ಚ ಭಾರತ ।**
**ಕ್ವ ಯುದ್ಧಂ ಕ್ವ ಚ ಭೋಕ್ತವ್ಯಂ ಯುಧ್ಯಸ್ವ ಪುರುಷೋ ಭವ ॥**

ಭಾರತ! ನೀನು ಸರ್ವಥಾ ಅಪ್ರಯೋಜಕನೆಂಬುದೂ ನನ್ನ ಅಭಿಪ್ರಾಯವಲ್ಲ. ನಿನ್ನನ್ನು ಯಾವ ವಿಷಯದಲ್ಲಿ ಪುರಸ್ಕರಿಸಬೇಕೋ ಆ ವಿಷಯದಲ್ಲಿ ಪುರಸ್ಕರಿಸಬೇಕು. ಊಟಮಾಡುವುದರಲ್ಲಿ ನಿನ್ನ ಸಮಾನರಾರೂ ಇರುವುದಿಲ್ಲ. ಬಂಡಿಗಟ್ಟಲೆ ಅನ್ನವನ್ನು ತಿನ್ನುವುದರಲ್ಲಿ, ಮಂಕರಿಗಟ್ಟಲೆ ಭಕ್ಷ್ಯಗಳನ್ನು ತಿನ್ನುವುದರಲ್ಲಿ, ಕಡಾಯಿಯಷ್ಟು ಸಾರುಕುಡಿಯುವುದರಲ್ಲಿ ನಿನ್ನನ್ನು ಪುರಸ್ಕರಿಸಲೇಬೇಕು. ಇದರಲ್ಲಿ ನಿನ್ನ ಸಮಾನರು ಯಾರೂ ಇಲ್ಲವೆಂದೇ ಹೇಳಬಹುದಾಗಿದೆ.

ಆದರೆ ಯುದ್ಧವೆಲ್ಲಿ? ಭೋಜನವೆಲ್ಲಿ? ಒಂದಕ್ಕೊಂದಕ್ಕೇನಾದರೂ ಸಂಬಂಧವಿದೆಯೇ? (ಬಂಡಿಗಟ್ಟಲೆ ತಿನ್ನುವ ಸಾಮರ್ಥ್ಯವಿರುವುದರಿಂದಲೇ 'ನಾನು ಮಹಾಪರಾಕ್ರಮೀ' ಎಂದೇ ನೀನು ಭಾವಿಸಿಬಿಟ್ಟಿರಬಹುದು) ಚಿಂತೆಯಿಲ್ಲ. ಈಗ ಯುದ್ಧಮಾಡುವ ಸುಯೋಗವು ಬಂದಿದೆ. ಯುದ್ಧಮಾಡಿ ನಿನ್ನಲ್ಲಿ ಪೌರುಷವೇನಾದರೂ ಇದ್ದರೆ ತೋರಿಸು. ಮುಂದಾಗುವುದನ್ನು ಈಗಲೇ ಹೇಳಿಬಿಡುತ್ತೇನೆ ಕೇಳು, ಮೂರ್ಖ!

**ಶಯಿಷ್ಯಸೇ ಹತೋ ಭೂಮೌ ಗದಾಮಾಲಿಙ್ಗ್ಯ ಭಾರತ ।**
**ತದ್ವೃಥಾ ಚ ಸಭಾಮಧ್ಯೇ ವಲ್ಗಿತಂ ತೇ ವೃಕೋದರ ॥೬॥**

ವೃಕೋದರನೇ! ಗದೆಯನ್ನು ಎದೆಯಲ್ಲಿ ತಬ್ಬಿಕೊಂಡು ಪ್ರಾಣತೊರೆದು ರಣಾಂಗಣದಲ್ಲಿ ಮಲಗುವೆ. ಕುರುಸಭಾಮಧ್ಯದಲ್ಲಿ 'ಹಾಗೆ ಮಾಡುವೆನು–

ಹೀಗೆ ಮಾಡುವೆನು' ಎಂದು ಹೇಳಿಕೊಂಡು ಕುಣಿದು ಕುಪ್ಪಳಿಸಿದುದೆಲ್ಲವೂ ವ್ಯರ್ಥವಾಗಿ ಹೋಗುತ್ತದೆ.'

ಉಲೂಕ! ಮೂರ್ಖನಾದ ಭೀಮನನ್ನು ಕುರಿತು ಹೀಗೆ ಹೇಳಿದನಂತರ ನಕುಲನನ್ನು ಕುರಿತು ನನ್ನ ಈ ಮಾತುಗಳನ್ನು ಹೇಳು.

'ನಕುಲ! ಸ್ಥಿರವಾಗಿ ನಿಂತು ನಮ್ಮೊಡನೆ ಯುದ್ಧಮಾಡು. ನಿನ್ನ ಪೌರುಷವನ್ನು ನಾವೂ ನೋಡುತ್ತೇವೆ.

ನೀನು ಯುದ್ಧಮಾಡುವ ಸಮಯದಲ್ಲಿ ನಾನು ಹೇಳುವ ಎರಡು ಮೂರು ವಿಷಯಗಳನ್ನು ಸ್ಮರಣೆಯಲ್ಲಿಟ್ಟುಕೊಂಡರೆ ನಿನಗೂ ಯುದ್ಧದಲ್ಲಿ ಸ್ವಲ್ಪವಾದರೂ ಉತ್ಸಾಹವುಂಟಾಗಬಹುದು. ನಿನ್ನಲ್ಲಿಯೂ ಶೌರ್ಯವು ಉದಯಿಸಬಹುದು. ಯುಧಿಷ್ಠಿರನು ನಿನ್ನ ಮೇಲಿಟ್ಟಿರುವ ಅಗಾಧವಾದ ಪ್ರೀತಿ, ನನ್ನ ಮೇಲಿನ ದ್ವೇಷ, ದ್ರೌಪದಿಯ ಕ್ಲೇಶ—ಇವುಗಳನ್ನು ಯಥಾವತ್ತಾಗಿ ಸ್ಮರಿಸಿಕೊಂಡು ನಮ್ಮೊಡನೆ ಯುದ್ಧಮಾಡು.'

ಉಲೂಕ! ಅನಂತರ ಸಹದೇವನಿಗೂ ಈ ನನ್ನ ಮಾತುಗಳನ್ನು ಅಲ್ಲಿ ನೆರೆದಿರುವ ರಾಜರ ಮಧ್ಯದಲ್ಲಿ ಹೇಳಬೇಕು.

'ಪಾಂಡವ! ಹಿಂದಿನ ಕ್ಲೇಶಗಳೆಲ್ಲವನ್ನೂ ಸ್ಮರಿಸಿಕೊಂಡು ಸನ್ನದ್ಧನಾಗಿ ರಣರಂಗದಲ್ಲಿ ಈಗ ಯುದ್ಧಮಾಡು. ನಿನ್ನ ಪೌರುಷವನ್ನು ತೋರಿಸು.'

ಉಲೂಕ! ಅನಂತರ, ಆ ಇಬ್ಬರು ವಿರಾಟ-ದ್ರುಪದರಿಗೆ ಈ ನನ್ನ ಮಾತುಗಳನ್ನು ಹೇಳು :

'ಪ್ರಜೆಗಳ ಸೃಷ್ಟಿಯು ಪ್ರಾರಂಭವಾದಾಗಿನಿಂದಲೂ ಪ್ರಪಂಚದಲ್ಲಿ ಈ ಒಂದು ವಿಚಿತ್ರವು ನಡೆಯುತ್ತಲೇ ಬಂದಿದೆ.

ಮಹಾಗುಣವಂತರಾದ ಭೃತ್ಯರಿರುವೆಡೆಯಲ್ಲಿ—ಶ್ಲಾಘ್ಯನಾದ, ಯೋಗ್ಯ ನಾದ ಯಜಮಾನನಿರುವುದಿಲ್ಲ. ಅದೇ ರೀತಿಯಲ್ಲಿ ಯೋಗ್ಯರಾದ ಯಜ ಮಾನರಿಗೆ ಯೋಗ್ಯರಾದ ಸೇವಕರೂ ಸಿಕ್ಕುವುದಿಲ್ಲ. ಯೋಗ್ಯಯಜಮಾನನಿಗೆ ಅಯೋಗ್ಯನಾದ ಸೇವಕನೂ—ಯೋಗ್ಯಸೇವಕನಿಗೆ ಅಯೋಗ್ಯ ಯಜಮಾನನೂ

ಸಿಕ್ಕುತ್ತಾನೆ. ಈ ವೈಚಿತ್ರ್ಯಕ್ಕೆ ನೀವೂ ಹೊರತಾಗಿಲ್ಲ. ನರಪತಿಯಾದ ಯುಧಿಷ್ಠಿರನು ಅಶ್ಲಾಘ್ಯನು. ಶ್ಲಾಘನೆಗೆ ಅರ್ಹನಾದವನಲ್ಲ. ಯೋಗ್ಯನಲ್ಲ. ನೀವಾದರೋ ಯೋಗ್ಯರಾದ ಭೃತ್ಯರು. ನೀವು ಅವನಲ್ಲಿಗೇ ಹೋಗಿ ಸೇರಿಕೊಂಡಿರುತ್ತೀರಿ.

ಅವನ ಕಡೆಗೆ ಸೇರಿಕೊಂಡಿರುವ ಕಾರಣದಿಂದ ನೀವೆಲ್ಲರೂ ಸಂಘಟಿತರಾಗಿ ನನ್ನ ವಧೆಗಾಗಿ ಪ್ರಯತ್ನಿಸಿರಿ. ನಿಮ್ಮ ಸಲುವಾಗಿಯೂ ಪಾಂಡವರ ಸಲುವಾಗಿಯೂ ನನ್ನೊಡನೆ ನೀವು ಯುದ್ಧಮಾಡಿರಿ.'

ಉಲೂಕ! ಅನಂತರ ಪಾಂಚಾಲರಾಜಕುಮಾರನಾದ ಧೃಷ್ಟದ್ಯುಮ್ನನಿಗೆ ನನ್ನ ಈ ಮಾತನ್ನು ಹೇಳಬೇಕು.

'ರಾಜಕುಮಾರ! ಈಗ ನಿನಗೆ ಒಳ್ಳೆಯ ಸಮಯವು ಒದಗಿಬಂದಿದೆ. ಈ ಅವಕಾಶವನ್ನು ನೀನು ಸದುಪಯೋಗಪಡಿಸಿಕೊಳ್ಳಲೇಬೇಕು. ಯುದ್ಧದಲ್ಲಿ ದ್ರೋಣರನ್ನು ಎದುರಿಸಿ ನಿಂತನಂತರ ನಿನಗೆ ಹಿತಕರವಾದುದು ಯಾವುದೆಂಬುದನ್ನು ನೀನೇ ತಿಳಿದುಕೊಳ್ಳುವೆ. ನಿನ್ನ ಸುಹೃದರೊಡನೆ ಸೇರಿ ನೀನು ಯುದ್ಧಮಾಡು ಮತ್ತು ಅತ್ಯಂತದುಷ್ಕರವಾದ ಮತ್ತು ಪಾಪಕರವಾದ ಗುರುವಧೆಯನ್ನೂ ಮಾಡು.'

ಉಲೂಕ! ಅನಂತರ ಶಿಖಂಡಿಯೊಡನೆ ಈ ಮಾತನ್ನು ಹೇಳು :

'ಶಿಖಂಡಿಯೇ! ಯದ್ಯಪಿ ನೀನಿಂದು ಪುರುಷನೇ ಆಗಿದ್ದರೂ ಹಿಂದೆ ನೀನು ಏನಾಗಿದ್ದೆಯೆಂಬುದನ್ನು ತಿಳಿದಿರುವ, ಧನುರ್ಧಾರಿಗಳಲ್ಲಿ ಶ್ರೇಷ್ಠನಾದ ಭೀಷ್ಮನು ನಿನ್ನನ್ನು ಹೆಂಗಸೆಂದೇ ಭಾವಿಸಿ ಕೊಲ್ಲುವುದಿಲ್ಲ. ಆದುದರಿಂದ ನೀನು ಯಾವ ವಿಧವಾದ ಭಯವೂ ಇಲ್ಲದೇ ಯುದ್ಧಮಾಡಬಹುದಾಗಿದೆ. ಯುದ್ಧಭೂಮಿಯಲ್ಲಿ ಪ್ರಯತ್ನಪೂರ್ವಕವಾಗಿ ನಿನ್ನ ಪರಾಕ್ರಮವನ್ನು ತೋರಿಸು. ನಿನ್ನ ಪೌರುಷವನ್ನೂ ನಾವು ನೋಡಬಯಸುತ್ತೇವೆ."

ಸಂಜಯನು ಧೃತರಾಷ್ಟ್ರನೊಡನೆ ಹೇಳುತ್ತಾನೆ :

"ಮಹಾರಾಜ! ನಿನ್ನ ಮಗನು ಉಲೂಕನೊಡನೆ ಹೀಗೆಲ್ಲ ಹೇಳುತ್ತಾ ಮಧ್ಯೆ ಗಹಗಹಿಸಿ ನಕ್ಕು ಪುನಃ ಹೇಳಿದನು :

'ಉಲೂಕ! ವಾಸುದೇವನ ಸಮಕ್ಷದಲ್ಲಿ ಧನಂಜಯನಿಗೆ ಪುನಃ ನೀನು ಈ ಮಾತುಗಳನ್ನು ಹೇಳಬೇಕು :

**ಅಸ್ಮಾನ್ವಾ ತ್ವಾಂ ಪರಾಜಿತ್ಯ ಪ್ರಶಾಧಿ ಪೃಥಿವೀಮಿಮಾಮ್ ।**
**ಅಥವಾ ನಿರ್ಜಿತೋಽಸ್ಮಾಭೀ ರಣೇ ವೀರ ಶಯಿಷ್ಯಸಿ ॥೮೧॥**

'ವೀರ! ಧನಂಜಯ! ನಮ್ಮನ್ನಾದರೂ ನೀನು ಪರಾಜಯಗೊಳಿಸಿ ಈ ಭೂಮಿಯನ್ನು ಶಾಸನಮಾಡು. ಅಥವಾ ನಮ್ಮಿಂದಾದರೂ ಪರಾಜಿತನಾಗಿ ರಣಾಂಗಣದಲ್ಲಿ ಗತಪ್ರಾಣನಾಗಿ ಮಲಗು. ರಾಜ್ಯಭ್ರಷ್ಟನಾದುದರಿಂದ ಉಂಟಾದ ಕ್ಲೇಶವನ್ನೂ, ವನವಾಸದಿಂದ ಉಂಟಾದ ಕ್ಲೇಶವನ್ನೂ ಮತ್ತು ನಿಮ್ಮ ಪತ್ನಿಯಾದ ದ್ರೌಪದಿಯು ಅನುಭವಿಸಿದ ಕ್ಲೇಶವನ್ನೂ ಸ್ಮರಿಸಿ ಪೌರುಷವನ್ನು ಆಶ್ರಯಿಸು. ವೀರಪುರುಷನಾಗು.

ಪಾರ್ಥ! ಕ್ಷತ್ರಿಯಾಣಿಯು ಯಾವ ಪ್ರಯೋಜನವನ್ನುದ್ದೇಶಿಸಿ ವೀರ ಪುತ್ರರನ್ನು ಪಡೆಯುತ್ತಾಳೆಯೋ–ಆ ಪ್ರಯೋಜನದ ಸಿದ್ಧಿಯನ್ನು ಪಡೆದು ಕೊಳ್ಳುವ ಕಾಲವೀಗ ಸನ್ನಿಹಿತವಾಗಿದೆ. ನೀನು ಯುದ್ಧದಲ್ಲಿ ಬಲವನ್ನೂ, ಪರಾಕ್ರಮವನ್ನೂ, ಉತ್ತಮಶೌರ್ಯವನ್ನೂ, ಅಸ್ತ್ರಪ್ರಯೋಗದಲ್ಲಿ ನಿನಗಿರುವ ಕೈಚಳಕವನ್ನೂ ಮತ್ತು ಪೌರುಷವನ್ನೂ ತೋರಿಸುತ್ತಾ ನಿನಗುಂಟಾಗಿರುವ ಕೋಪವನ್ನು ಅಪ್ರಿಯವಾದಿಗಳಾದ ನಮ್ಮ ಮೇಲೆ ವಿಸರ್ಜಿಸು.

**ಪರಿಕ್ಲಿಷ್ಟಸ್ಯ ದೀನಸ್ಯ ದೀರ್ಘಕಾಲೋಷಿತಸ್ಯ ಚ ।**
**ಹೃದಯಂ ಕಸ್ಯ ನ ಸ್ಫೋಟೇದೈಶ್ವರ್ಯಾದ್ಭ್ರಂಶಿತಸ್ಯ ಚ ॥೮೪॥**

ನಾನಾವಿಧವಾದ ಕ್ಲೇಶಗಳನ್ನನುಭವಿಸುತ್ತಿರುವ, ದೀನನಾಗಿರುವ, ಬಹಳ ಕಾಲದವರೆಗೆ ರಾಜ್ಯಭ್ರಷ್ಟನಾಗಿರುವ, ಐಶ್ವರ್ಯದಿಂದ ಭ್ರಂಶಿತನಾಗಿರುವ ಯಾವ ಸ್ವಾಭಿಮಾನಿಯ ಹೃದಯವು ತಾನೇ ಸ್ಫೋಟಿಸದಿರುತ್ತದೆ?

**ಕುಲೇ ಜಾತಸ್ಯ ಶೂರಸ್ಯ ಪರವಿತ್ತೇಷ್ವಗೃಧ್ಯತಃ ।**
**ಆಸ್ಥಿತಂ ರಾಜ್ಯಮಾಕ್ರಮ್ಯ ಕೋಪಂ ಕಸ್ಯ ನ ದೀಪಯೇತ್ ॥೮೫॥**

ಯಾವನು ಸತ್ಕುಲಪ್ರಸೂತನಾಗಿರುವನೋ, ಮಹಾವೀರನಾಗಿರು

ವನೋ, ಇತರರ ಸೊತ್ತಿಗೆ ಆಸೆಪಡುವುದಿಲ್ಲವೋ–ಅಂತಹವನ ರಾಜ್ಯವನ್ನು ಮತ್ತೊಬ್ಬನು ಆಕ್ರಮಿಸಿದರೆ–ಯಾವ ವೀರನಿಗೆ ತಾನೇ ಕೋಪ ವುಂಟಾಗುವುದಿಲ್ಲ? ಇದನ್ನು ಯಾವ ವೀರನೂ ಸಹಿಸಿಕೊಳ್ಳುವುದಿಲ್ಲ. ಆದುದರಿಂದ ಇಂದು ನೀನು ಕೋಪಗೊಂಡಿರುವುದು ಸಹಜವಾಗಿಯೇ ಇದೆ. ನೀನು ನಮ್ಮನ್ನು ಪರಾಜಯಗೊಳಿಸುವ ವಿಷಯದಲ್ಲಿ ಯಾವ ಯಾವ ದೊಡ್ಡ ದೊಡ್ಡ ಮಾತುಗಳನ್ನಾಡಿರುವೆಯೋ ಅದನ್ನು ಕಾರ್ಯರೂಪದಲ್ಲಿ ಮಾಡಿ ತೋರಿಸು.

**ಅಕರ್ಮಣಾ ಕತ್ಥಿತೇನ ಸನ್ತಃ ಕುಪುರುಷಂ ವಿದುಃ ॥೮೬॥**

ಕೆಲಸವನ್ನೇ ಮಾಡದೇ ಬರೀ ಆತ್ಮಶ್ಲಾಘನೆಮಾಡಿಕೊಳ್ಳುವವನನ್ನು ಸತ್ಪುರುಷರು ಕುಪುರುಷನೆಂದು ತಿಳಿಯುತ್ತಾರೆ.

ಅರ್ಜುನ! ನಿನ್ನ ಸ್ಥಾನ-ಮಾನಗಳು (ರಾಜತ್ವ) ಮತ್ತು ರಾಜ್ಯ ಈ ಎರಡೂ ಶತ್ರುಗಳ ವಶವಾಗಿಬಿಟ್ಟಿವೆ. ಈ ಎರಡನ್ನೂ ಪುನರುದ್ಧರಿಸು. ಯುದ್ಧ ಕಾಮನಾದವನಿಗೆ ಈ ಎರಡು ಪ್ರಯೋಜನಗಳೂ ಇರುತ್ತವೆ. ಇವುಗಳ ಸಿದ್ಧಿಗಾಗಿ ನಿನ್ನ ಪೌರುಷವನ್ನು ತೋರಿಸಿ ಯುದ್ಧಮಾಡು. ನೀನು ದ್ಯೂತದಲ್ಲಿ ಪರಾಜಿತನಾದೆ. ನಿಮ್ಮ ಪ್ರೇಯಸಿಯಾದ ಕೃಷ್ಣೆಯು ಸಭಾಮಂಟಪಕ್ಕೆ ಸೆಳೆದು ತರಲ್ಪಟ್ಟಳು. ತಾನೊಬ್ಬ ಪುರುಷನೆಂದು ತಿಳಿದುಕೊಂಡಿರುವ ಮನುಷ್ಯನು ಈ ವಿಷಯಗಳಿಗಾಗಿ ಕೋಪಿಸಿಕೊಳ್ಳುವುದು ಸ್ವಾಭಾವಿಕವಾಗಿಯೇ ಇದೆ. ಹನ್ನೆರಡು ವರ್ಷಗಳ ಕಾಲ ಕಾಡಿಗೆ ಅಟ್ಟಲ್ಪಟ್ಟೆ. ಪುನಃ ಒಂದು ವರ್ಷ ವಿರಾಟನರ ಮನೆಯಲ್ಲಿ ಸೇವಾವೃತ್ತಿಯಿಂದ ಜೀವಿಸುತ್ತಿದ್ದೆ. ಪಾರ್ಥ! ನಾನು ಹಿಂದೆಯೇ ಒಮ್ಮೆ ಹೇಳಿದಂತೆ ರಾಜ್ಯಭ್ರಷ್ಟನಾದುದರಿಂದ ಉಂಟಾದ ಕ್ಲೇಶವನ್ನೂ, ವನವಾಸ ದಿಂದ ಉಂಟಾದ ಕ್ಲೇಶವನ್ನೂ ಮತ್ತು ನಿಮ್ಮ ಪತ್ನಿಯಾದ ದ್ರೌಪದಿಯು ಅನುಭವಿಸಿದ ಕ್ಲೇಶವನ್ನೂ ಸ್ಮರಿಸಿ ಪುರುಷನಾಗು. ಅಪ್ರಿಯವಾದ ಮಾತುಗಳನ್ನು ನಾವು ಪುನಃ ಪುನಃ ಹೇಳುತ್ತಿರುವಾಗ ನೀನು ಬಹುವಾಗಿ ಕೋಪಿಸಿಕೊಳ್ಳಬೇಕು. ನೀನು ಕುಪಿತನಾಗಬೇಕೆಂಬ ಆಶಯದಿಂದಲೇ ನಾವು ಇಷ್ಟು ನಿಷ್ಠುರವಾದ ಮಾತುಗಳನ್ನು ಹೇಳಿಕಳುಹಿಸುತ್ತಿದ್ದೇವೆ. ಆದುದರಿಂದ ನೀನು ನಿನ್ನ ಕೋಪವನ್ನು ಪ್ರದರ್ಶಿಸು. **ಅಮರ್ಷೋ ಹ್ಯೇವ ಪೌರುಷಮ್–**

ಕೋಪವೇ ಪೌರುಷ. ಕೋಪ, ಬಲ, ವೀರ್ಯ, ಜ್ಞಾನಯೋಗ (ಅಸ್ತ್ರಜ್ಞಾನ) ಅಸ್ತ್ರಗಳ ಪ್ರಯೋಗದಲ್ಲಿ ನಿನಗಿರುವ ಕೈಚಳಕ–ಇವುಗಳೆಲ್ಲವನ್ನೂ ಇಲ್ಲಿ ಪ್ರದರ್ಶಿಸು. ಯುದ್ಧಮಾಡು. ನಿನ್ನ ಪುರುಷತ್ವವನ್ನು ತೋರಿಸು. ಶಸ್ತ್ರಗಳ ನೀರಾಜನಕ್ರಿಯೆಯು (ಮಂತ್ರಗಳಿಂದ ದೇವತೆಗಳನ್ನು ಆವಾಹನೆಮಾಡುವುದು ಇತ್ಯಾದಿ) ಮುಗಿದುಹೋಯಿತು. ಕುರುಕ್ಷೇತ್ರವು ಯಾವ ವಿಧವಾದ ಕೆಸರೂ ಇಲ್ಲದೇ ಯುದ್ಧಮಾಡಲು ಯೋಗ್ಯಪ್ರದೇಶವಾಗಿದೆ. ನಿನ್ನ ಕುದುರೆಗಳು ಹೃಷ್ಟ-ಪುಷ್ಟವಾಗಿವೆ. ಕೇಶವನೊಡನೆ ಸೇರಿಕೊಂಡು ನಾಳೆಯೇ ನಮ್ಮೊಡನೆ ಯುದ್ಧಮಾಡು. ಯುದ್ಧದಲ್ಲಿ ಭೀಷ್ಮನನ್ನು ಸಂಧಿಸದೆಯೇ ವ್ಯರ್ಥವಾಗಿ ಆತ್ಮಪ್ರಶಂಸೆಯನ್ನೇಕೆ ಮಾಡಿಕೊಳ್ಳುವೆ? ಅರ್ಜುನ! ಬಲಹೀನನಾದವನು ಮತ್ತು ಮಂದಬುದ್ಧಿಯವನು ಗಂಧಮಾದನಪರ್ವತವು ಎಲ್ಲಿದೆ ಮತ್ತು ಹೇಗಿದೆ–ಎಂಬುದನ್ನೇ ತಿಳಿಯದೆ ಆ ಪರ್ವತವನ್ನು ನಿಮಿಷಮಾತ್ರದಲ್ಲಿ ಹತ್ತಿಬಿಡುತ್ತೇನೆಂದು ಜಂಬಕೊಚ್ಚುವಂತೆ ನೀನೀಗ ನಿನ್ನ ಆತ್ಮಪ್ರಶಂಸೆಯನ್ನು ಮಾಡಿಕೊಳ್ಳುತ್ತಿರುವೆ. ಆತ್ಮಪ್ರಶಂಸೆಮಾಡಿಕೊಳ್ಳದೇ ನಿನ್ನಲ್ಲಿ ಪೌರುಷವೇನಾದರೂ ಇರುವುದಾದರೆ ಅದನ್ನು ಯುದ್ಧರಂಗದಲ್ಲಿ ತೋರಿಸು. ಯಾರೊಡನೆ ಯುದ್ಧಮಾಡಬೇಕು? ಯಾರನ್ನು ಪರಾಜಯಗೊಳಿಸಬೇಕು? – ಎಂಬ ಅರಿವಾದರೂ ನಿನಗೆ ಇರುವಂತೆ ಕಾಣುವುದಿಲ್ಲ. ಅತ್ಯಂತದುರ್ಜಯನಾದ ಸೂತಪುತ್ರನಾದ ಕರ್ಣ, ಬಲಿಷ್ಠರಲ್ಲಿ ಶ್ರೇಷ್ಠನಾದ ಶಲ್ಯ, ಮಹಾಬಲಿಷ್ಠರಾದ, ಯುದ್ಧದಲ್ಲಿ ಇಂದ್ರನಿಗೆ ಸಮಾನವಾಗಿ ಯುದ್ಧಮಾಡುವ ಸಾಮರ್ಥ್ಯವಿರುವ ದ್ರೋಣರು–ಇವರುಗಳನ್ನು ಗೆಲ್ಲದೇ ನೀನು ರಾಜ್ಯವನ್ನು ಹೇಗೆತಾನೇ ಪಡೆದುಕೊಳ್ಳಲಿಚ್ಛಿಸಿರುವೆ? ಬಿರುಗಾಳಿಯು ಎಷ್ಟೇ ರಭಸದಿಂದ ಬೀಸಿದರೂ ಅದು ಮೇರುಪರ್ವತವನ್ನು ಕಿತ್ತುಹಾಕಿತೆಂಬ ವಾರ್ತೆಯನ್ನು ನಾವು ಇದುವರೆಗೂ ಕೇಳಿಲ್ಲ. ಆದುದರಿಂದ ನೀನೆಷ್ಟೇ ಪರಾಕ್ರಮಿಯಾಗಿದ್ದರೂ ಮೇರುಪರ್ವತ ಸದೃಶರಾದ ದ್ರೋಣರ ಮುಂದೆ ನಿನ್ನ ಪರಾಕ್ರಮವೇನೂ ನಡೆಯುವುದಿಲ್ಲ. ನೀನು ಹೇಳಿರುವಂತೆಯೇ ಎಲ್ಲವೂ ನಡೆದುಬಿಟ್ಟರೆ (ನಿನ್ನ ಪ್ರತಿಜ್ಞೆಯಂತೆ ನೀನು ಈ ಮಹಾರಥರೆಲ್ಲರನ್ನೂ ಪರಾಜಯಗೊಳಿಸುವುದೇ ಆದರೆ) ಈ ಪೃಥ್ವಿಯಲ್ಲಿ ಅಸಾಧ್ಯವಾದುದೆಲ್ಲವೂ ಸಾಧ್ಯವಾಗುತ್ತವೆ. ಬಿರುಗಾಳಿಯು

ಮೇರುಪರ್ವತವನ್ನೇ ಹಾರಿಸಿಕೊಂಡು ಹೋಗಬಹುದು ; ಆಕಾಶವೇ ಕಳಚಿ ಭೂಮಿಯ ಮೇಲೂ ಬೀಳಬಹುದು ; ಯುಗದ ಪರಿವರ್ತನೆಯೂ ಆಗಿಬಿಡಬಹುದು.

ಅರ್ಜುನನಾಗಲೀ, ಮತ್ತಾರೇ ಆಗಲಿ–ಜೀವದ ಮೇಲೆ ಆಸೆಯುಳ್ಳ ಮನುಷ್ಯನು ಅರಿಮರ್ದನರಾದ ದ್ರೋಣಾಚಾರ್ಯರ ಸಮ್ಮುಖದಲ್ಲಿ ಯುದ್ಧಕ್ಕೆ ನಿಂತು ಸಕುಶಲನಾಗಿ ಮನೆಗೆ ಹೋಗಬಲ್ಲನೇ?

ಅರ್ಜುನ! ನಿನಗೆ ತಿಳಿದಿರುವಂತೆಯೇ ನಮ್ಮ ಆಚಾರ್ಯದ್ರೋಣರು ಬ್ರಾಹ್ಮವೇದದಲ್ಲಿಯೂ–ಧನುರ್ವೇದದಲ್ಲಿಯೂ ಪಾರಂಗತರು. ಯುದ್ಧದ ಎಲ್ಲ ಹೊಣೆಗಾರಿಕೆಯನ್ನೂ ವಹಿಸಿಕೊಳ್ಳಲು ಸಮರ್ಥರಾಗಿರತಕ್ಕವರು.; ವಿಚಲಿತರಾಗದೇ ಇರತಕ್ಕವರು.; ಸೇನೆಯನ್ನು ನಡೆಸುವುದರಲ್ಲಿ ಮಹಾಸಮರ್ಥರು ; ಹಿಂದೆ ಸರಿಯದೆ ಸ್ಥೈರ್ಯದಿಂದ ಯುದ್ಧಮಾಡ ತಕ್ಕವರು. ಅಂತಹ ಮಹಾದ್ಯುತಿಮಂತರಾದ ದ್ರೋಣರನ್ನು ನೀನು ಜಯಿಸಲಿಚ್ಛಿಸಿರುವೆ. ಇದು ಅಸಂಭವ. ನೀನವರನ್ನು ಜಯಿಸಲು ಸಾಧ್ಯವೇ ಇಲ್ಲ.

ಭೀಷ್ಮ-ದ್ರೋಣರು ಯಾರನ್ನು ಸಂಹರಿಸಲು ನಿಶ್ಚಯಿಸುತ್ತಾರೆಯೋ ಅಥವಾ ಯಾರನ್ನು ತಮ್ಮ ದಾರುಣವಾದ ಬಾಣಗಳಿಂದ ಸ್ಪರ್ಶ ಮಾಡುತ್ತಾರೆಯೋ– ಅಂತಹವರು ಭೂಮಿಯ ಮೇಲೆ ಮನುಷ್ಯಧರ್ಮ ವಿರತಕ್ಕವರಾಗಿದ್ದು (ಮರ್ತ್ಯರಾಗಿದ್ದು) ಜೀವಂತರಾಗಿ ಯುದ್ಧಭೂಮಿಯಿಂದ ಹೊರಬರಲು ಸಾಧ್ಯವಾಗುವುದೇ?

ಅರ್ಜುನ! ನೀನು ಕೇವಲ ಕೂಪಕೂರ್ಮನ್ಯಾಯದಂತೆ ನಿನ್ನ ಪಕ್ಷಕ್ಕೆ ಸೇರಿದವರನ್ನೇ ಎಣಿಕೆಮಾಡಿಕೊಂಡು ಮಹಾಸೈನ್ಯವು ಸಂಗ್ರಹವಾಗಿರುವುದೆಂದು ಸಂತೋಷಪಡುತ್ತಿರುವೆಯೇ ಹೊರತು ಸುಸಂಘಟಿತವಾದ, ಆಕ್ರಮಿಸಲಸಾಧ್ಯ ವಾದ, ದೇವಸೈನ್ಯದೋಪಾದಿಯಲ್ಲಿರುವ, ದೇವತೆಗಳಿಂದ ರಕ್ಷಿತವಾದ ಸ್ವರ್ಗದಂತೆ ರಾಜರಿಂದ ಸುಗುಪ್ತವಾದ ಕುರುರಾಜಸೈನ್ಯವೆಷ್ಟಿದೆಯೆಂಬುದನ್ನು ತಿಳಿದವನಾಗಿಲ್ಲ. ಭರತಖಂಡದ ಪೂರ್ವ-ಪಶ್ಚಿಮ-ದಕ್ಷಿಣೋತ್ತರಗಳಲ್ಲಿ ರುವ ಸಮಸ್ತರಾಜರಿಂದಲೂ ಅವರ ಸೈನ್ಯದಿಂದಲೂ–ಕಾಂಬೋಜ, ಶಕ,

ಖಶ, ಶಾಲ್ವ, ಮತ್ಸ್ಯ, ಕುರು ಮತ್ತು ಮಧ್ಯಪ್ರದೇಶದ ರಾಜರಿಂದಲೂ ಮತ್ತು ಅವರ ಸೈನಿಕರಿಂದಲೂ–ಮ್ಲೇಚ್ಛ, ಪುಲಿಂದ, ದ್ರವಿಡ, ಆಂಧ್ರ ಮತ್ತು ಕಾಂಚೀದೇಶಗಳ ರಾಜರಿಂದಲೂ ಮತ್ತು ಅವರ ಸೈನ್ಯಗಳಿಂದಲೂ–ಕುರು ರಾಜಸೈನ್ಯವು ಸಮೃದ್ಧವಾಗಿದೆ.

ಮೂರ್ಖ! ಅಲ್ಪಬುದ್ಧಿಯವನೇ! ಅರ್ಜುನ! ನಾನಾದೇಶಗಳ ನಾನಾಪ್ರಕಾರವಾದ ಜನಸಮುದಾಯದಿಂದ, ಪೂರ್ಣವೇಗದಿಂದ ಕೂಡಿದ ಗಂಗಾಪ್ರವಾಹದಂತೆ ಸಮೃದ್ಧವಾಗಿರುವ, ಗಂಗಾನದಿಯಂತೆಯೇ ದಾಟಲಸಾಧ್ಯವಾದ, ತಪ್ಪಿಸಿಕೊಂಡುಹೋಗಲು ಶಕ್ಯವಿಲ್ಲದ ಮಹಾಸೈನ್ಯದೊಡನೆಯೂ, ಗಜಸೈನ್ಯದ ಮಧ್ಯದಲ್ಲಿರತಕ್ಕ ನನ್ನೊಡನೆಯೂ ನೀನು ಯುದ್ಧ ಮಾಡಲಿಚ್ಛಿಸಿರುವೆಯಾ? ಇದು ಸಾಧ್ಯವಾಗಲಾರದು.

ಆದರೆ ನಿನ್ನ ಬಳಿಯಲ್ಲಿ ಕೆಲವು ಅಮೋಘವಸ್ತುಗಳಿವೆಯೆಂಬುದು ನನಗೂ ತಿಳಿದಿದೆ. ಅಕ್ಷಯತೂಣೀರಗಳಿವೆ. ಅಗ್ನಿದತ್ತವಾದ ರಥವಿದೆ. ಯುದ್ಧಕಾಲದಲ್ಲಿ ಆ ದಿವ್ಯರಥದ ಮೇಲೆ ದಿವ್ಯವಾದ ಧ್ವಜವೂ ಹಾರಾಡುತ್ತದೆ. ಈ ಎಲ್ಲ ವಿಷಯಗಳನ್ನೂ ನಾವು ತಿಳಿದಿರುತ್ತೇವೆ. ಆದರೆ ಅವು ನಿನ್ನಲ್ಲಿವೆಯೆಂದು ಆತ್ಮಶ್ಲಾಘನೆಮಾಡಿಕೊಳ್ಳಬೇಕಾದ ಕಾರಣವಿಲ್ಲ. ಆತ್ಮಶ್ಲಾಘನೆಮಾಡಿಕೊಳ್ಳದೇ ಯುದ್ಧಮಾಡು. ಹೆಚ್ಚು ಆತ್ಮಶ್ಲಾಘನೆಯನ್ನೇಕೆ ಮಾಡಿಕೊಳ್ಳುವೆ? ನಾನಾಪ್ರಕಾರವಾಗಿ ಯುದ್ಧಮಾಡುವುದರಿಂದ ನಿನಗೆ ವಿಜಯದ ಸಿದ್ಧಿಯಾದರೂ ಆಗಬಹುದು. ಆದರೆ ನೀನು ಏಕಪ್ರಕಾರವಾಗಿ ಆತ್ಮಶ್ಲಾಘನೆಮಾಡಿಕೊಳ್ಳುತ್ತಿದ್ದರೆ ಅಷ್ಟರಿಂದಲೇ ನಿನ್ನ ಯಾವ ಕಾರ್ಯದ ಸಿದ್ಧಿಯೂ ಆಗುವುದಿಲ್ಲ. ಕೇವಲ ಜಂಬಕೊಚ್ಚುವುದರಿಂದಲೇ ಒಂದು ಕಾರ್ಯವು ಸಾಧಿತವಾಗುವುದಾಗಿದ್ದರೆ, ಧನಂಜಯ! ಈ ಪ್ರಪಂಚದಲ್ಲಿ ಎಲ್ಲರೂ ಸಿದ್ಧಾರ್ಥರೇ ಆಗಿಬಿಡುತ್ತಿದ್ದರು. ಜಂಬಕೊಚ್ಚುವುದರಲ್ಲಿ ದರಿದ್ರರಾರು? ದುರ್ಬಲರಾರು? (ಯಾರು ಬೇಕಾದರೂ ಏನು ಬೇಕಾದರೂ ಎಲ್ಲಿ ಬೇಕಾದರೂ ಹೇಳಿಕೊಂಡು ತಿರುಗಬಹುದು. ಬಾಯಿಗೆ ಬೀಗವೆಲ್ಲಿದೆ?)

ಜಾನಾಮಿ ತೇ ವಾಸುದೇವಂ ಸಹಾಯಂ
ಜಾನಾಮಿ ತೇ ಗಾಣ್ಡೀವಂ ತಾಲಮಾತ್ರಮ್ ।

ಜಾನಾಮ್ಯಹಂ ತ್ವಾದೃಶೋ ನಾಸ್ತಿ ಯೋದ್ಧಾ
ಜಾನಾನಸ್ತೇ ರಾಜ್ಯಮೇತದ್ಧರಾಮಿ ॥೧೦೪॥

ನಿನ್ನ ಸಹಾಯಕ್ಕೆ ವಾಸುದೇವನಿದ್ದಾನೆಂಬ ವಿಷಯವು ನನಗೆ ತಿಳಿದಿದೆ. ನಾಲ್ಕು ಅಡಿಗಳುಳ್ಳ, ಉತ್ತಮೋತ್ತಮವಾದ ಗಾಂಡೀವಧನುಸ್ಸು ನಿನ್ನಲ್ಲಿದೆಯೆಂಬ ವಿಷಯವೂ ನನಗೆ ಗೊತ್ತಿದೆ. ನಿನಗೆ ಸಮಾನನಾದ ಯೋಧನು ಬೇರೊಬ್ಬನಿಲ್ಲವೆಂಬುದನ್ನೂ ನಾನು ತಿಳಿದುಕೊಂಡಿರುತ್ತೇನೆ. ಈ ಎಲ್ಲ ವಿಷಯಗಳೂ ನನಗೆ ತಿಳಿದಿದ್ದರೂ ಸಹ ನಾನು ನಿನ್ನ ರಾಜ್ಯವನ್ನು ಅಪಹರಿಸಿದ್ದೇನೆ. ಮಾನವನು (ಕ್ಷತ್ರಿಯನು) ಪರ್ಯಾಯಧರ್ಮದಿಂದ (ಯುದ್ಧಧರ್ಮವೊಂದನ್ನು ಬಿಟ್ಟು ಬೇರೆಯ ಧರ್ಮದಿಂದ) ಸಿದ್ಧಿಯನ್ನು ಹೊಂದುವುದಿಲ್ಲ. ವಿಧಾತೃವು ಮಾತ್ರ ಸಂಕಲ್ಪಮಾತ್ರದಿಂದಲೇ ಎಲ್ಲರನ್ನೂ ತನಗೆ ಅನುಕೂಲರನ್ನಾಗಿಯೂ, ವಶವರ್ತಿಗಳನ್ನಾಗಿಯೂ ಮಾಡಿ ಕೊಳ್ಳುತ್ತಾನೆ. ಹದಿಮೂರು ವರ್ಷಗಳು ನೀನು ಅಳುತ್ತಲೇ ಇದ್ದೆ. ನಾನು ಆನಂದದಿಂದ ರಾಜ್ಯವಾಳಿಯೇಬಿಟ್ಟೆ. ಸಬಾಂಧವನಾದ ನಿನ್ನನ್ನು ಸಂಹರಿಸಿ ಪುನಃ ಈ ರಾಜ್ಯವನ್ನು ನಾನು ಆಳಿಯೇ ಆಳುತ್ತೇನೆ. ಅರ್ಜುನ! ನೀನು ನನ್ನ ದಾಸನಾಗಿದ್ದೆಯೆಂಬುದನ್ನು ಮರೆಯಬೇಡ. ಪಗಡೆಯಾಟದಲ್ಲಿ ನಿಮ್ಮೈವರನ್ನು ಸೋಲಿಸಿ ನಿನ್ನನ್ನು ದಾಸನನ್ನಾಗಿ ಮಾಡಿಕೊಂಡೆನು. ಆ ಸಮಯದಲ್ಲಿ ನಿನ್ನ ಗಾಂಡೀವವೆಲ್ಲಿ ಹೋಗಿತ್ತು? ಭೀಮಸೇನನ ಬಲವು ಆ ಸಮಯದಲ್ಲಿ ಎಲ್ಲಿಗೆ ಹೋಗಿ ಅವಿತುಕೊಂಡಿತ್ತು? ಗದಾಪಾಣಿಯಾದ ಭೀಮಸೇನನಿಂದಾಗಲೀ ಗಾಂಡೀವಧನುರ್ಧರನಾದ ಫಾಲ್ಗುನನಿಂದಾಗಲೀ ದಾಸ್ಯದ ವಿಮುಕ್ತಿಯಾಗಲೇ ಇಲ್ಲ. ಸಾಧ್ವಿಯಾದ, ಅನಿಂದಿತೆಯಾದ ಕೃಷ್ಣೆಯ ಹೊರತಾಗಿ ನಿಮ್ಮ ವಿಮೋಚನೆಯೇ ಆಗುತ್ತಿರಲಿಲ್ಲ. (ಮಹಾವೀರರೆಂದು ಹೇಳಿಕೊಳ್ಳುವ ನಿಮ್ಮ ದಾಸ್ಯಶೃಂಖಲೆಯನ್ನು ಸಾಧ್ವಿಯಾದ, ಅಬಲೆಯಾದ ದ್ರೌಪದಿಯು ಬಿಡಿಸಬೇಕಾಯಿತು.)

ದಾಸ್ಯದಲ್ಲಿದ್ದ, ಮನುಷ್ಯರಿಗುಚಿತವಲ್ಲದ (ಕ್ಷತ್ರಿಯರಿಗುಚಿತವಲ್ಲದ) ನೀಚಭಾವವನ್ನು ಹೊಂದಿದ್ದ, ಸೇವಾಕಾರ್ಯದಲ್ಲಿ ಯುಕ್ತರಾಗಿದ್ದ ನಿಮ್ಮನ್ನು

ದ್ರುಪದನ ಮಗಳಾದ ದ್ರೌಪದಿಯು ಬಿಡಿಸಿಕೊಂಡಳು. ಅವಳಿಂದಾಗಿ ನೀವು ದಾಸ್ಯಭಾವದಿಂದ ನಿವೃತ್ತಿಹೊಂದಿದಿರಿ. ಅರ್ಜುನ! ಆ ಸಮಯದಲ್ಲಿ ನಾನು ನಿಮ್ಮನ್ನು ಅವಹೇಳನಮಾಡಿದುದು ನಿಮ್ಮ ಸ್ಮರಣೆಯಲ್ಲಿರಬಹುದು. ನೀವು ಅರಣ್ಯಕ್ಕೆ ಹೊರಟಸಮಯದಲ್ಲಿ ನಾನು ನಿಮ್ಮನ್ನು 'ನಿರ್ವೀರ್ಯರು' 'ನಪುಂಸಕರು' ಮುಂತಾಗಿ ಹೇಳಿ ಅಪಹಾಸ್ಯಮಾಡಿದೆನು. ನಾನು ಹಾಸ್ಯಕ್ಕಾಗಿ ಹೇಳಿದುದೂ ನಿನ್ನ ವಿಷಯದಲ್ಲಿ ನಿಶ್ಚಯವಾಗಿಯೇ ಪರಿಣಮಿಸಿತು. ವಿರಾಟನಗರದಲ್ಲಿದ್ದಾಗ ಪಾರ್ಥನು (ನೀನು) ಸ್ತ್ರೀಯರಂತೆಯೇ ನೀಳವಾದ ವೇಣಿಯನ್ನು ಧರಿಸಿರಬೇಕಾಯಿತು.

ವಿರಾಟರಾಜನ ಅಡಿಗೆಮನೆಯಲ್ಲಿ ಪಾಕಾಧ್ಯಕ್ಷನಾಗಿದ್ದುಕೊಂಡು ನಿನ್ನ ಅಣ್ಣನಾದ ಭೀಮಸೇನನು ವಿಶೇಷ ಶ್ರಮಪಡುತ್ತಿದ್ದನಲ್ಲವೇ? ಅದು ನನ್ನ ಪೌರುಷದಿಂದಲೇ ಪ್ರಾಪ್ತವಾದ ದುರವಸ್ಥೆ. ಆ ದುರವಸ್ಥೆಯನ್ನು ಅವನು ಅನುಭವಿಸಲು ನಾನು ಅಥವಾ ನನ್ನ ಪೌರುಷವೇ ಕಾರಣ. ನೀನಾದರೋ ನಾನು ಹಿಂದೆಯೇ ಹೇಳಿದಂತೆ ನೀಳವಾದ ವೇಣಿಯನ್ನು ಧಾರಣೆಮಾಡಿಕೊಂಡು ನಪುಂಸಕನ ವೇಷಧರಿಸಿ ಅಂತಃಪುರದ ಹೆಣ್ಣು ಮಕ್ಕಳಿಗೆ ನರ್ತನ ಕಲಿಸುತ್ತಿದ್ದೆ. ಅದೇ ರೀತಿಯಲ್ಲಿ ವೀರಕ್ಷತ್ರಿಯರು ಸದಾಕಾಲದಲ್ಲಿಯೂ ತಮ್ಮ ವಿರೋಧಿಗಳಾದ ಕ್ಷತ್ರಿಯರ ಮೇಲೆ ಯಾವುದಾದರೊಂದು ರೀತಿಯಲ್ಲಿ ದಂಡಪ್ರಯೋಗಮಾಡುತ್ತಲೇ ಇರುತ್ತಾರೆ. ಅರ್ಜುನ! ವಾಸುದೇವನ ಭಯದಿಂದಾಗಲೀ ನಿನ್ನ ಭಯದಿಂದಾಗಲೀ ನಿಮಗೆ ನಾನು ರಾಜ್ಯವನ್ನು ಕೊಡುವುದಿಲ್ಲ. ಕೇಶವನೊಡನೆ ನಮ್ಮನ್ನೆದುರಿಸಿ ಯುದ್ಧಮಾಡು. ನಾನು ಹಿಂದೊಮ್ಮೆ ಹೇಳಿದಂತೆ ಇಂದ್ರಜಾಲ, ಯಕ್ಷಿಣಿ, ಮಾಯೆ– ಇವುಗಳು ಯುದ್ಧದಲ್ಲಿ ಶಸ್ತ್ರವನ್ನು ಮೇಲೆತ್ತಿ ನಿಂತಿರುವ ಶೂರನಿಗೆ ಮಹತ್ತರವಾದ ಕೋಪ ವನ್ನುಂಟುಮಾಡುತ್ತವೆಯೇ ಹೊರತು ಭಯವನ್ನುಂಟುಮಾಡುವುದಿಲ್ಲ.

ಸಾವಿರಾರು ವಾಸುದೇವರು ಬರಲಿ ; ನೂರಾರು ಅರ್ಜುನರು ಬರಲಿ– ಅಮೋಘವಾದ ಬಾಣಗಳ ಸಮುದಾಯವೇ ಇರುವ ನನ್ನನ್ನೆದುರಿಸಿ ನಿಂತೊಡ

ನೆಯೇ ಅವರು ನನ್ನ ಅಮೋಘವಾದ ಬಾಣಗಳಿಂದ ಪೀಡಿತರಾಗಿ (ಹತ್ತು ದಿಕ್ಕುಗಳಿಗೂ) ಓಡಿಹೋಗುತ್ತಾರೆ. ವೀರಪುರುಷನೇ! ಈಗ ನೀನು ಭೀಷ್ಮನೊಡನೆ ಯುದ್ಧವನ್ನಾದರೂ ಮಾಡು. ತಲೆಯಿಂದ ಪ್ರಹರಿಸಿ ಪರ್ವತವನ್ನಾದರೂ ಸೀಳಿಬಿಡು. ಅಥವಾ ಅಗಾಧವಾಗಿರತಕ್ಕ ಮತ್ತು ವಿಶಾಲವಾಗಿರತಕ್ಕ ಸೈನ್ಯಸಮುದ್ರವನ್ನು ಎರಡು ಬಾಹುಗಳಿಂದಲೇ ಈಜಿ ದಾಟುವವನಾಗು. (ಈ ಮೂರೂ ಒಂದೇ ವಿಧವಾದ ಕಾರ್ಯಗಳು. ಭೀಷ್ಮನೊಡನೆ ಯುದ್ಧಮಾಡುವುದೆಂದರೆ: ತಲೆಯಿಂದ ಪ್ರಹರಿಸಿ ಪರ್ವತವನ್ನು ಸೀಳಿದಂತೆ ಅಥವಾ ಎರಡು ಬಾಹುಗಳಿಂದ ಈಜಿ ಅಗಾಧವಾದ ಸಮುದ್ರವನ್ನು ದಾಟಿದಂತೆ ಬಹುದುಃಸಾಧ್ಯವಾದುದು.) ಆ ಅಗಾಧವಾದ ಪುರುಷಸಮುದ್ರದಲ್ಲಿ ಶಾರದ್ವತನು ಮಹಾಮೀನಪ್ರಾಯನಾಗಿದ್ದಾನೆ. ವಿವಿಂಶತಿಯು ದೊಡ್ಡದಾದ ಸರ್ಪಪ್ರಾಯನಾಗಿದ್ದಾನೆ. ಬೃಹದ್ಬಲನು ಉಕ್ಕಿಬರುವ ಸಮುದ್ರದಂತಿದ್ದಾನೆ. ಭೂರಿಶ್ರವನು ಆ ಸೈನ್ಯಸಮುದ್ರದ ಮಿತಿಯಿಲ್ಲದ ವೇಗ. ದ್ರೋಣರು ಆ ಸೈನ್ಯಸಮುದ್ರದಲ್ಲಿ ಮೊಸಳೆಯಂತಿರುವುದರಿಂದ ಅದು ಶತ್ರುಗಳಿಗೆ ದುರವಗಾಹವಾಗಿದೆ. ಶತ್ರುಗಳಿಗೆ ಆ ಸೈನ್ಯಸಮುದ್ರವನ್ನು ಪ್ರವೇಶಿಸುವ ಸಾಧ್ಯತೆಯೇ ಇಲ್ಲ. ಕರ್ಣ-ಶಲ್ಯರು ಆ ಸೈನ್ಯಸಮುದ್ರಕ್ಕೆ ಬಡಬಾಗ್ನಿಯಂತಿದ್ದಾರೆ. ದುಃಶಾಸನನು ಸೇನಾಸಮುದ್ರದ ಪ್ರವಾಹರೂಪನಾಗಿದ್ದಾನೆ. ಶಲ್ಯ ಮತ್ತು ಶಲರು ಸೇನಾಸಮುದ್ರದ ಮೀನುಗಳಂತಿದ್ದಾರೆ. ಸುಷೇಣ ಮತ್ತು ಚಿತ್ರಾಯುಧರು ಸೇನಾಸಮುದ್ರದ ನೀರಾನೆಗಳಂತೆ ಅಥವಾ ಮೊಸಳೆಗಳಂತೆ ಇದ್ದಾರೆ. ಜಯದ್ರಥನು ಸೇನಾಸಮುದ್ರದಲ್ಲಿ ಮೈನಾಕಪರ್ವತಪ್ರಾಯನಾಗಿದ್ದಾನೆ. ಪುರುಮಿತ್ರನು ಸಮುದ್ರದ ಗಾಂಭೀರ್ಯದಂತಿದ್ದಾನೆ. ದುರ್ಮರ್ಷಣನು ಸೇನಾಸಮುದ್ರದ ಉದಕಪ್ರಾಯನಾಗಿದ್ದಾನೆ. ಶಕುನಿಯು ಕಡಿದಾದ ಜಲಪಾತರೂಪದಲ್ಲಿದ್ದಾನೆ. ಕ್ಷಯರಹಿತವಾದ ಶಸ್ತ್ರಾಸ್ತ್ರಗಳ ಸಮೂಹದಿಂದ ಸಮೃದ್ಧವಾದ ಇಂತಹ ಸೈನ್ಯಸಾಗರವನ್ನು ನೀನು ಯಾವಾಗ ಪ್ರವೇಶಿಸುವೆಯೋ – ಆಗ ನೀನು ಯುದ್ಧಮಾಡಲಾಗದೇ ಆಯಾಸದಿಂದ ಪ್ರಜ್ಞಾಹೀನನಾಗುವೆ. ನಿನ್ನ ಬಂಧು-ಮಿತ್ರರೆಲ್ಲರೂ ಅಸುವನ್ನು ನೀಗುತ್ತಾರೆ. ಆ ಸಮಯದಲ್ಲಿ ನಿನ್ನ ಮನಸ್ಸು ನಮ್ಮ ಮೇಲೆ ಯುದ್ಧಮಾಡಲು ನಿಶ್ಚಯಿಸಿದುದಕ್ಕಾಗಿ ಪರಿತಾಪಪಡುತ್ತದೆ. ಅಪವಿತ್ರ

ನಾದವನ ಅಥವಾ ಪಾಪಿಷ್ಠನಾದವನ ಮನಸ್ಸು ಸ್ವರ್ಗದಿಂದ ಹಿಂದಕ್ಕೆ ಸರಿಯುವಂತೆ (ಪಾಪಿಷ್ಠನಾದವನಿಗೆ ಸ್ವರ್ಗವು ಸಿಗದಂತೆ) – ನಿನ್ನ ಮನಸ್ಸೂ ರಾಜ್ಯಾನುಶಾಸನವನ್ನು ಮಾಡಬೇಕೆಂಬ ಅಭಿಲಾಷೆಯಿಂದ ಪ್ರತಿನಿವೃತ್ತ ವಾಗುತ್ತದೆ. ಯುದ್ಧಮಾಡಲು ಆರಂಭಿಸಿ ಅನಂತರ ನಿಸ್ತೇಜನಾಗುವುದ ಕ್ಕಿಂತಲೂ ಈಗಲೇ ಶಾಂತನಾಗುವುದು ಶ್ರೇಯಸ್ಕರ. ತಪಸ್ಸನ್ನೇ ಮಾಡದೇ ಸ್ವರ್ಗವನ್ನು ಅಭಿಲಾಷಿಸುವ ಮಂದಮತಿಯಂತೆ– ನೀನಿಂದು ಸುದುರ್ಲಭ ವಾದ ರಾಜ್ಯವನ್ನು ಅಭಿಲಾಷಿಸಿರುವೆ. ಅದನ್ನು ಪಡೆದುಕೊಳ್ಳಲು ನಿನ್ನಿಂದ ಖಂಡಿತವಾಗಿಯೂ ಸಾಧ್ಯವಾಗುವುದಿಲ್ಲ.'

ಮಹಾರಾಜ! ದುರ್ಯೋಧನನು ಹೀಗೆ ಹೇಳಿ ಉಲೂಕನನ್ನು ಪಾಂಡವರ ಶಿಬಿರಕ್ಕೆ ಕಳುಹಿಸಿಕೊಟ್ಟನು."

೧೬೦ನೆಯ ಅಧ್ಯಾಯವು ಮುಗಿಯಿತು.

೧೬೧ನೆಯ ಅಧ್ಯಾಯ ಉಲೂಕದೂತಾಗಮನಪರ್ವ (ಮುಂದುವರಿದಿದೆ)

## ಉಲೂಕನು ಪಾಂಡವರ ಶಿಬಿರಕ್ಕೆ ಹೋಗಿ ದುರ್ಯೋಧನನ ಸಂದೇಶವನ್ನು ತಿಳಿಯಪಡಿಸಿದುದು

ಸಂಜಯನು ಮುಂದುವರಿದು ಹೇಳುತ್ತಾನೆ :

"ಮಹಾರಾಜ! ಅನಂತರದಲ್ಲಿ ಜೂಜುಗಾರನಾದ ಶಕುನಿಯ ಮಗನಾದ ಉಲೂಕನು ಪಾಂಡವರ ಶಿಬಿರಕ್ಕೆ ಹೋಗಿ ಪಾಂಡವರನ್ನು ಸಂಧಿಸಿ ಯುಧಿಷ್ಠಿರನನ್ನು ಕುರಿತು ಹೀಗೆಂದು ಹೇಳಿದನು :

"ಮಹಾರಾಜ! ನೀನು ದೂತರು ಹೇಳುವ ಮಾತುಗಳ ವಿಷಯವೇನೆಂಬುದನ್ನು ತಿಳಿದವನಾಗಿರುವೆ. ದುರ್ಯೋಧನನು ನಿಮಗೆ ತಿಳಿಸಬೇಕೆಂದು ನನ್ನೊಡನೆ ಹೇಳಿರುವ ಮಾತುಗಳನ್ನು ಯಥಾವತ್ತಾಗಿ ನಿಮ್ಮೊಡನೆ ನಾನು ಹೇಳುತ್ತೇನೆ. ಆ ಮಾತುಗಳನ್ನು ಕೇಳಿದನಂತರ ನೀನು ದಯಮಾಡಿ ನನ್ನ ಮೇಲೆ ಕೋಪಿಸಿಕೊಳ್ಳಬೇಡ. (ಏಕೆಂದರೆ : ನಾನು ಹೇಳುವ ಮಾತುಗಳು ನನ್ನವುಗಳಲ್ಲ.)"

“ಉಲೂಕ! ನಿನಗೆ ಇಲ್ಲಿ ಸ್ವಲ್ಪವಾದರೂ ಭಯವಿಲ್ಲ. ಲೋಭಿಯಾದ, ದೂರದೃಷ್ಟಿಯಿಲ್ಲದ ದುರ್ಯೋಧನನ ಅಭಿಪ್ರಾಯವೇನೆಂಬುದನ್ನು ನಿಶ್ಚಿಂತನಾಗಿ ಹೇಳು.”



ಧೃತರಾಷ್ಟ್ರ! ಯುಧಿಷ್ಠಿರನು ಹೀಗೆ ಹೇಳಿದನಂತರ ಮಹಾತ್ಮರಾದ, ತೇಜೋವಂತರಾದ ಪಾಂಡವರ ಮಧ್ಯದಲ್ಲಿ ಸೃಂಜಯರು, ಮತ್ಸ್ಯರು, ಯಶೋವಂತನಾದ ಶ್ರೀಕೃಷ್ಣ, ಪುತ್ರಸಹಿತನಾದ ದ್ರುಪದ, ವಿರಾಟ–ಇವರ ಸನ್ನಿಧಿಯಲ್ಲಿ ಮತ್ತು ಎಲ್ಲ ರಾಜರ ಮಧ್ಯದಲ್ಲಿ ಉಲೂಕನು ಈ ಮಾತುಗಳನ್ನು ಹೇಳಿದನು :

“ಯುಧಿಷ್ಠಿರಮಹಾರಾಜ! ಉದಾರಹೃದಯನಾದ ದುರ್ಯೋಧನ

ರಾಜನು ಕುರುವೀರರು ಕೇಳುತ್ತಿದ್ದಂತೆಯೇ (ಕುರುವೀರರ ಅವಗಾಹನೆಗೂ ತಂದು) ಸಂದೇಶವನ್ನು ನಿನಗೆ ಕಳುಹಿಸಿದ್ದಾನೆ. ಅದನ್ನು ಲಾಲಿಸು :

'ಪಗಡೆಯಾಟದಲ್ಲಿ ನೀನು ಪರಾಜಿತನಾಗಿ ಹೋದೆ. ಕೃಷ್ಣೆಯು ಕೌರವ ಸಭಾಮಧ್ಯಕ್ಕೆ ಸೆಳೆದು ತರಲ್ಪಟ್ಟಳು. ಪುರುಷನೆಂದು ಹೇಳಿಕೊಳ್ಳುವ ಯಾವ ಮನುಷ್ಯನೇ ಆಗಿದ್ದರೂ ಅಂತಹ ಸಮಯದಲ್ಲಿ ಕೋಪಗೊಳ್ಳಲೇಬೇಕಾಗಿತ್ತು. ರಾಜ್ಯಭ್ರಷ್ಟನಾಗಿ ಮಾಡಲ್ಪಟ್ಟ ನೀನು ಹನ್ನೆರಡು ವರ್ಷಗಳ ಕಾಲ ಅರಣ್ಯದಲ್ಲಿ ವಾಸಮಾಡಿಕೊಂಡಿದ್ದೆ. ಒಂದು ವರ್ಷ ವಿರಾಟನರಮನೆಯಲ್ಲಿ ದಾಸ್ಯವೃತ್ತಿಯಿಂದ ಜೀವಿಸಿದೆ. ದ್ರೌಪದಿಯನ್ನು ಸಭಾಮಧ್ಯದಲ್ಲಿ ಸೆಳೆದೆಳೆದಾಗ ಉತ್ಪನ್ನವಾಗಿದ್ದ ಕ್ರೋಧವನ್ನೂ, ರಾಜ್ಯದ ಅಪಹರಣವನ್ನೂ, ವನವಾಸವನ್ನೂ, ದ್ರೌಪದಿಯ ಅನೇಕವಿಧವಾದ ಕ್ಲೇಶಗಳನ್ನೂ ಸ್ಮರಿಸಿ ಈಗಲಾದರೂ ಪುರುಷತ್ವವನ್ನು ಹೊಂದು. ಆ ಸಮಯದಲ್ಲಿ ನಿನ್ನ ತಮ್ಮನಾದ ಭೀಮಸೇನನಿಗೆ ಏನುಮಾಡಲೂ ಸಾಧ್ಯವಾಗಲಿಲ್ಲ. ಕಾರ್ಯದಲ್ಲಿ ತಮ್ಮ ಶೌರ್ಯವನ್ನು ಪ್ರಕಟಿಸಲಾಗದವರು ಶೌರ್ಯದ ಮಾತುಗಳನ್ನಾದರೂ ಆಡುವುದು ಸ್ವಾಭಾವಿಕವಾಗಿಯೇ ಇದೆ. ಅದರಂತೆಯೇ ಭೀಮನೂ ಆ ಸಮಯದಲ್ಲಿ ಅನೇಕವಿಧವಾದ ಪ್ರತಿಜ್ಞೆಗಳನ್ನು ಮಾಡಿದ್ದನು. ಅವುಗಳಲ್ಲಿ 'ದುಃಶಾಸನನ ರಕ್ತವನ್ನು ಕುಡಿದುಬಿಡುತ್ತೇನೆ' – ಎಂಬುದೂ ಒಂದು. ನಿಮಗೇನಾದರೂ ಸಾಮರ್ಥ್ಯವಿದ್ದರೆ ದುಃಶಾಸನನ ರಕ್ತವನ್ನು ಈಗ ಕುಡಿಯಿರಿ! ನೋಡೋಣ. ಶಸ್ತ್ರಗಳ ನೀರಾಜನಕ್ರಿಯೆಯು ಮುಗಿದುಹೋಯಿತು. ಕುರುಕ್ಷೇತ್ರವು ಯಾವ ವಿಧವಾದ ಕೆಸರೂ ಇಲ್ಲದೇ ಯುದ್ಧಮಾಡಲು ಯೋಗ್ಯವಾದ ಪ್ರದೇಶವಾಗಿದೆ. ಹಾದಿಯೂ ಸಮತಟ್ಟಾಗಿದ್ದು ಸುಗಮವಾಗಿದೆ. ನಿನ್ನ ಕುದುರೆಗಳೂ ಚೆನ್ನಾಗಿ ಪೋಷಿಸಲ್ಪಟ್ಟು ದಷ್ಟ-ಪುಷ್ಟವಾಗಿವೆ.

ಆದುದರಿಂದ ನಾಳೆಯೇ ಕೇಶವನೊಡನೆ ಕೂಡಿಕೊಂಡು ನಮ್ಮೊಡನೆ ಯುದ್ಧಕ್ಕೆ ಆಗಮಿಸು. ಯುದ್ಧದಲ್ಲಿ ಭೀಷ್ಮನನ್ನು ಸಂಧಿಸದೆಯೇ ವ್ಯರ್ಥವಾಗಿ ಆತ್ಮಪ್ರಶಂಸೆಯನ್ನೇಕೆ ಮಾಡಿಕೊಳ್ಳುವೆ? ಬಲಹೀನನಾದವನು ಮತ್ತು ಮಂದಬುದ್ಧಿಯವನು ಗಂಧಮಾದನಪರ್ವತವು ಎಲ್ಲಿದೆ ಮತ್ತು ಹೇಗಿದೆ?–

ಎಂಬುದನ್ನೇ ತಿಳಿಯದೆ ಆ ಪರ್ವತವನ್ನು ನಿಮಿಷಮಾತ್ರದಲ್ಲಿ ಹತ್ತಿ ಬಿಡುತ್ತೇನೆಂದು ಜಂಬಕೊಚ್ಚುವಂತೆ–ನೀನೀಗ ಆತ್ಮಪ್ರಶಂಸೆಯನ್ನು ಮಾಡಿಕೊಳ್ಳುತ್ತಿರುವೆ. ಆತ್ಮಪ್ರಶಂಸೆಯನ್ನು ಮಾಡಿಕೊಳ್ಳದೆಯೇ ನಿನ್ನಲ್ಲಿ ಪೌರುಷವೇನಾದರೂ ಇರುವುದಾದರೆ ಅದನ್ನು ಯುದ್ಧರಂಗದಲ್ಲಿ ತೋರಿಸು. ಯಾರೊಡನೆ ಯುದ್ಧಮಾಡಬೇಕು ಮತ್ತು ಯಾರನ್ನು ಪರಾಜಯ ಗೊಳಿಸಬೇಕು? – ಎಂಬ ಅರಿವೂ ನಿನಗೆ ಇದ್ದಂತೆ ಕಾಣುವುದಿಲ್ಲ. ದುರ್ಜಯನಾದ ಸೂತಪುತ್ರ ಕರ್ಣ, ಬಲಿಷ್ಠರಲ್ಲಿ ಶ್ರೇಷ್ಠನಾದ ಶಲ್ಯ, ಯುದ್ಧದಲ್ಲಿ ಇಂದ್ರನಿಗೆ ಸಮಾನರಾಗಿ ಯುದ್ಧಮಾಡುವ ಸಾಮರ್ಥ್ಯವಿರುವ ಮಹಾಬಲಿಷ್ಠರಾದ ದ್ರೋಣರು–ಇವರನ್ನು ಗೆಲ್ಲದೇ ನೀನು ರಾಜ್ಯವನ್ನು ಹೇಗೆ ತಾನೇ ಪಡೆದುಕೊಳ್ಳಲು ಇಚ್ಛಿಸಿರುವೆ? ಯುಧಿಷ್ಠಿರ! ನಿನಗೆ ತಿಳಿದಿರುವಂತೆಯೇ ನಮ್ಮ ಆಚಾರ್ಯದ್ರೋಣರು ಬ್ರಾಹ್ಮವೇದದಲ್ಲಿಯೂ, ಧನುರ್ವೇದದಲ್ಲಿಯೂ ಪಾರಂಗತರು. ಯುದ್ಧದ ಎಲ್ಲ ಹೊಣೆಗಾರಿಕೆಯನ್ನೂ ವಹಿಸಿಕೊಳ್ಳಲು ಸಮರ್ಥರಾಗಿರತಕ್ಕವರು. ಯುದ್ಧದಲ್ಲಿ ವಿಚಲಿತರಾಗದೇ ಇರತಕ್ಕವರು ; ಸೇನೆಯನ್ನು ನಡೆಸುವುದರಲ್ಲಿ ಮಹಾಸಮರ್ಥರು ; ಹಿಂದಕ್ಕೆ ಸರಿಯದೇ ಸ್ಥೈರ್ಯದಿಂದ ಯುದ್ಧಮಾಡತಕ್ಕವರು–ಇಂತಹ ಮಹಾದ್ಯುತಿ ಮಂತರಾದ ದ್ರೋಣರನ್ನು ನೀನು ಜಯಿಸಲಿಚ್ಛಿಸಿರುವೆ. ಇದು ಸುಳ್ಳು (ಅಸಾಧ್ಯ). ನೀನವರನ್ನು ಜಯಿಸಲು ಸಾಧ್ಯವೇ ಆಗುವುದಿಲ್ಲ. ಬಿರುಗಾಳಿಯು ಎಷ್ಟೇ ರಭಸದಿಂದ ಬೀಸಿದರೂ ಸಹ ಅದು ಮೇರುಪರ್ವತವನ್ನು ಕಿತ್ತುಹಾಕಿಬಿಟ್ಟಿತೆಂಬ ವಾರ್ತೆಯನ್ನು ನಾವು ಇದುವರೆಗೂ ಕೇಳಿರುವುದಿಲ್ಲ. ಆದುದರಿಂದ ನೀನೆಷ್ಟೇ ಪರಾಕ್ರಮಿಯಾಗಿದ್ದರೂ ಮೇರುಪರ್ವತ ಸದೃಶರಾದ ದ್ರೋಣರ ಮುಂದೆ ನಿನ್ನ ಪರಾಕ್ರಮವೇನೂ ನಡೆಯುವುದಿಲ್ಲ. ನೀನು ಸಂಜಯನೊಡನೆ ಹೇಳಿಕಳುಹಿಸಿರುವಂತೆಯೇ ಎಲ್ಲವೂ ನಡೆಯುವುದಾದರೆ ಬಿರುಗಾಳಿಯು ಮೇರುಪರ್ವತವನ್ನೇ ಹಾರಿಸಿಕೊಂಡು ಹೋಗಬಹುದು ; ಆಕಾಶವೇ ಕಳಚಿ ಭೂಮಿಯ ಮೇಲೆ ಬೀಳಬಹುದು ; ಯುಗದ ಪರಿವರ್ತನೆಯೂ ಆಗಿಬಿಡಬಹುದು. ಅರ್ಜುನನಾಗಲೀ, ಮತ್ತಾವ ರಥಿಕರೇ ಆಗಲೀ, ಆನೆ-ಕುದುರೆಗಳೇ ಆಗಲಿ – (ಅವುಗಳ ಮೇಲೆ ಕುಳಿತು ಯುದ್ಧಮಾಡುವವರೇ ಆಗಲೀ) ಜೀವದ ಮೇಲೆ ಆಸೆಯುಳ್ಳ

ಮನುಷ್ಯನು ಅರಿಮರ್ದನರಾದ ದ್ರೋಣಾ ಚಾರ್ಯರ ಸಮ್ಮುಖದಲ್ಲಿ ಯುದ್ಧಕ್ಕೆ ನಿಂತು ಸಕುಶಲನಾಗಿ (ಜೀವಸಹಿತ) ಹಿಂದಿರುಗಲು ಸಾಧ್ಯವೇ? ಭೀಷ್ಮ-ದ್ರೋಣರು ಯಾರನ್ನು ಸಂಹರಿಸಲು ನಿಶ್ಚಯಿಸುತ್ತಾರೆಯೋ ಮತ್ತು ಯಾರನ್ನು ತಮ್ಮ ದಾರುಣವಾದ ಬಾಣಗಳಿಂದ ಸ್ಪರ್ಶಿಸುತ್ತಾರೆಯೋ– ಅಂತಹವರು ಭೂಮಿಯ ಮೇಲೆ ಸಂಚರಿಸುವ ಮನುಷ್ಯಧರ್ಮ ವಿರತಕ್ಕವರಾಗಿದ್ದು (ಮರ್ತ್ಯರಾಗಿದ್ದು) ಜೀವಂತರಾಗಿ ಯುದ್ಧಭೂಮಿಯಿಂದ ಹೊರಬರಲು ಸಾಧ್ಯವಾಗುವುದೇ?

ಧರ್ಮಜ! ನೀನು ಕೇವಲ ಕೂಪಮಂಡೂಕನ್ಯಾಯದಂತೆ ನಿನ್ನ ಪಕ್ಷಕ್ಕೆ ಸೇರಿರುವವರನ್ನೇ ಎಣಿಕೆಮಾಡಿಕೊಂಡು ಮಹಾಸೈನ್ಯವು ಸಂಗ್ರಹವಾಗಿ ಬಿಟ್ಟಿರುವುದೆಂದು ಸಂತೋಷಿಸುತ್ತಿರುವೆಯೇ ಹೊರತು ಸುಸಂಘಟಿತವಾದ, ಆಕ್ರಮಿಸಲು ಅಸಾಧ್ಯವಾದ, ದೇವಸೈನ್ಯದೋಪಾದಿಯಲ್ಲಿರುವ, ದೇವತೆ ಗಳಿಂದ ರಕ್ಷಿತವಾದ ಸ್ವರ್ಗದಂತೆ–ರಾಜರಿಂದ ಸುಗುಪ್ತವಾದ ಕುರುರಾಜ ಸೈನ್ಯವು ಎಷ್ಟಿದೆಯೆಂಬುದನ್ನು ನೀನು ತಿಳಿದವನಾಗಿಲ್ಲ. ಭರತಖಂಡದಲ್ಲಿರುವ ಪೂರ್ವ-ಪಶ್ಚಿಮ-ದಕ್ಷಿಣೋತ್ತರಗಳಲ್ಲಿರುವ ಸಮಸ್ತರಾಜರಿಂದಲೂ ಮತ್ತು ಅವರ ಅಪಾರಸೈನ್ಯದಿಂದಲೂ – ಕಾಂಬೋಜ, ಶಕ, ಖಶ, ಶಾಲ್ವ, ಮತ್ಸ್ಯ, ಕುರು, ಮಧ್ಯಪ್ರದೇಶಗಳ ರಾಜರಿಂದಲೂ ಮತ್ತು ಅವರ ಸೈನಿಕ ರಿಂದಲೂ–ಮ್ಲೇಚ್ಛ, ಪುಲಿಂದ, ದ್ರವಿಡ, ಆಂಧ್ರ ಮತ್ತು ಕಾಂಚೀದೇಶಗಳ ರಾಜರಿಂದಲೂ ಮತ್ತು ಅವರ ಸೈನಿಕರಿಂದಲೂ–ಕುರುರಾಜಸೈನ್ಯವು ಸಮೃದ್ಧ ವಾಗಿದೆ. ಮೂರ್ಖ! ಅಲ್ಪಬುದ್ಧಿಯವನೇ! ಯುಧಿಷ್ಠಿರ! ನಾನಾದೇಶಗಳ ನಾನಾಪ್ರಕಾರವಾದ ಜನಸಮುದಾಯದಿಂದ–ಪೂರ್ಣಪ್ರವಾಹವೇಗದಿಂದ ಕೂಡಿದ ಗಂಗೆಯ ನೀರಿನೋಪಾದಿಯಲ್ಲಿ–ಸಮೃದ್ಧವಾಗಿರುವ (ಗಂಗಾ ಪ್ರವಾಹದಂತಿರುವ) ಗಂಗಾಪ್ರವಾಹದಂತೆಯೇ ದಾಟಲು ಅಸಾಧ್ಯವಾದ ಮಹಾಸೈನ್ಯದೊಡನೆಯೂ–ಗಜಸೈನ್ಯದ ಮಧ್ಯದಲ್ಲಿರತಕ್ಕ ನನ್ನೊಡನೆಯೂ ನೀನು ಯುದ್ಧಮಾಡಲಿಚ್ಛಿಸಿರುವೆಯಾ? (ಅದರ ಫಲವನ್ನು ಬಹುಕ್ಷಿಪ್ರದಲ್ಲಿಯೇ ಪಡೆದುಕೊಳ್ಳುವೆ.)"

ಉಲೂಕನು ಧರ್ಮಪುತ್ರನಾದ ಯುಧಿಷ್ಠಿರನಿಗೆ ದುರ್ಯೋಧನನ

ಸಂದೇಶವನ್ನು ತಿಳಿಸಿ ಬಳಿಕ ಅರ್ಜುನನ ಕಡೆಗೆ ತಿರುಗಿ ಅವನನ್ನು ಕುರಿತು ಹೀಗೆಂದು ಹೇಳಿದನು :

"ಅರ್ಜುನ! ನೀನು ಬಹಳವಾಗಿ ಆತ್ಮಶ್ಲಾಘನೆಯನ್ನು ಮಾಡಿ ಕೊಳ್ಳುತ್ತಿರುವೆ. ಆತ್ಮಶ್ಲಾಘನೆಯನ್ನು ಮಾಡಿಕೊಳ್ಳದೇ ಯುದ್ಧಮಾಡು. ಯಾವಾಗಲೂ ಆತ್ಮಶ್ಲಾಘನೆಯನ್ನು ಮಾಡಿಕೊಳ್ಳುವುದರಿಂದ ಪ್ರಯೋ ಜನವೇನಿದೆ? ನಾನಾಪ್ರಕಾರವಾಗಿ ಯುದ್ಧಮಾಡುವುದರಿಂದ ನಿನಗೆ ವಿಜಯದ ಸಾಧನೆಯಾದರೂ ಆಗಬಹುದು. ಆದರೆ ಆತ್ಮಶ್ಲಾಘನೆಯನ್ನು ಮಾಡಿಕೊಳ್ಳುವುದರಿಂದಲೇ ನಿನಗೆ ವಿಜಯವು ಸಿಕ್ಕಿಬಿಡುವುದಿಲ್ಲ. ಜಂಬ ಕೊಚ್ಚುವುದರಿಂದಲೇ ಒಂದು ಕಾರ್ಯದ ಸಾಧನೆಯಾಗುವುದಾಗಿದ್ದರೆ, ಅರ್ಜುನ! ಈ ಪ್ರಪಂಚದಲ್ಲಿ ಎಲ್ಲರೂ ಸಿದ್ಧಾರ್ಥರೇ ಆಗಿಬಿಡುತ್ತಿದ್ದರು. ಜಂಬಕೊಚ್ಚುವುದರಲ್ಲಿ ದರಿದ್ರರಾರು? ದುರ್ಬಲರಾರು? ನಿನ್ನ ಸಹಾಯಕ್ಕೆ ವಾಸುದೇವನಿದ್ದಾನೆಂಬ ವಿಷಯವು ನನಗೆ ತಿಳಿದಿದೆ. ನಾಲ್ಕು ಅಡಿಗಳುಳ್ಳ ಉತ್ತಮೋತ್ತಮವಾದ ಗಾಂಡೀವಧನುಸ್ಸೂ ನಿನ್ನಲ್ಲಿದೆಯೆಂಬ ವಿಷಯವೂ ನನಗೆ ಗೊತ್ತಿದೆ. ನಿನಗೆ ಸಮಾನನಾದ ಯೋಧನು ಬೇರೊಬ್ಬನಿಲ್ಲ ವೆಂಬುದನ್ನೂ ಸಹ ನಾನು ತಿಳಿದುಕೊಂಡಿರುತ್ತೇನೆ. ಈ ಎಲ್ಲ ವಿಷಯಗಳೂ ನನಗೆ ತಿಳಿದಿದ್ದರೂ ನಾನು ನಿನ್ನ ರಾಜ್ಯವನ್ನು ಅಪಹರಿಸಿ ದ್ದೇನೆ. ಮಾನವನು ಪರ್ಯಾಯಧರ್ಮದಿಂದ (ಮಾಯಾವಿದ್ಯೆ ; ಭೈಕ್ಷ ಮೊದಲಾದುವುಗಳಿಂದ) ಸಿದ್ಧಿಯನ್ನು ಪಡೆಯುವುದಿಲ್ಲ. ವಿಧಾತೃವು ಮಾತ್ರವೇ ತನ್ನ ಸಂಕಲ್ಪಮಾತ್ರದಿಂದ ಎಲ್ಲರನ್ನೂ ತನಗೆ ಅನುಕೂಲರನ್ನಾಗಿಯೂ– ವಶವರ್ತಿಗಳನ್ನಾಗಿಯೂ ಮಾಡಿಕೊಳ್ಳುತ್ತಾನೆ. ಹದಿಮೂರು ವರ್ಷಗಳು ನೀನು ಅಳುತ್ತಲೇ ಇದ್ದೆ. ನಾನು ಆನಂದದಿಂದ ರಾಜ್ಯವನ್ನು ಆಳುತ್ತಲೇ ಇದ್ದೇನೆ. ಸಬಾಂಧವನಾದ ನಿನ್ನನ್ನು ಸಂಹರಿಸಿ ಮುಂದೆಯೂ ಈ ರಾಜ್ಯವನ್ನು ಆಳಿಯೇ ಆಳುತ್ತೇನೆ. ಅರ್ಜುನ! ನೀನು ನನ್ನ ದಾಸನಾಗಿದ್ದೆ ಯೆಂಬುದನ್ನು ಮರೆಯಬೇಡ. ಪಗಡೆಯಾಟದಲ್ಲಿ ನಿಮ್ಮನ್ನು ಸೋಲಿಸಿ ದಾಸರನ್ನಾಗಿ ಮಾಡಿಕೊಂಡಿದ್ದೆನು. ಆ ಸಮಯದಲ್ಲಿ ನಿನ್ನ ಗಾಂಡೀವವೆಲ್ಲಿ ಹೋಗಿದ್ದಿತು? ಭೀಮಸೇನನ ಬಲವು ಆ ಸಮಯದಲ್ಲಿ ಎಲ್ಲಿಗೆ ಹೋಗಿ ಅಡಗಿಕೊಂಡಿದ್ದಿತು? ಗದಾಪಾಣಿಯಾದ ಭೀಮಸೇನನಿಂದಾಗಲೀ,

ಗಾಂಡೀವಧನುರ್ಧರನಾದ ಫಾಲ್ಗುನನಿಂದಾಗಲೀ–ದಾಸ್ಯದ ವಿಮುಕ್ತಿಯಾಗಲೇ ಇಲ್ಲ. ಸಾಧ್ವಿಯಾದ ಅನಿಂದಿತೆಯಾದ ಕೃಷ್ಣೆಯ ಹೊರತಾಗಿ ನಿಮ್ಮ ವಿಮೋಚನೆಯೇ ಆಗುತ್ತಿರಲಿಲ್ಲ. ದಾಸ್ಯದಲ್ಲಿದ್ದ, ಮನುಷ್ಯರಿಗೆ ಉಚಿತವಲ್ಲದ ನೀಚಭಾವವನ್ನು ಹೊಂದಿದ್ದ, ಸೇವಾಕಾರ್ಯ ದಲ್ಲಿ ನಿಯಮಿತರಾಗಿದ್ದ ನಿಮ್ಮನ್ನು ದ್ರುಪದನ ಮಗಳಾದ ಕೃಷ್ಣೆಯು ಬಿಡಿಸಿಕೊಂಡಳು. ಅವಳಿಂದಾಗಿ ನೀವು ದಾಸ್ಯದಿಂದ ವಿಮುಕ್ತಿಹೊಂದಿದಿರಿ.

ಅರ್ಜುನ! ಆ ಸಮಯದಲ್ಲಿ ನಾನು ನಿಮ್ಮನ್ನು ಅವಹೇಳನಮಾಡಿದುದು ನಿಮ್ಮ ಸ್ಮರಣೆಯಲ್ಲಿರಬಹುದು. ನೀವು ಅರಣ್ಯಕ್ಕೆ ಹೊರಟ ಸಮಯದಲ್ಲಿ ನಾನು ನಿಮ್ಮನ್ನು - 'ನಿರ್ವೀರ್ಯರು.; (ಜಳ್ಳುಎಳ್ಳಿನಂತಹವರು) ನಪುಂಸಕರು'– ಮುಂತಾಗಿ ಹೇಳಿ ಅಪಹಾಸ್ಯಮಾಡಿದೆನು. ನಾನಂದು ಹಾಸ್ಯಕ್ಕಾಗಿ ಹೇಳಿದುದೇ ನಿನ್ನ ವಿಷಯದಲ್ಲಿ ನಿಶ್ಚಯವಾಗಿಯೇ ಪರಿಣಮಿಸಿತು. ವಿರಾಟನಗರದಲ್ಲಿದ್ದಾಗ ನೀನು ಹೆಂಗಸಿನಂತೆಯೇ ನೀಳವಾದ ವೇಣಿಯನ್ನು ಧರಿಸಬೇಕಾಯಿತು. ನಿನ್ನ ಅಣ್ಣನಾದ ಭೀಮಸೇನನು ವಿರಾಟರಾಜನ ಅಡಿಗೆಮನೆಯಲ್ಲಿ ಪಾಕಾಧ್ಯಕ್ಷನಾಗಿದ್ದುಕೊಂಡು ವಿಶೇಷಶ್ರಮಪಡುತ್ತಿದ್ದನು. ಅದು ನನ್ನ ಪೌರುಷದಿಂದಲೇ ನಿಮಗೆ ಪ್ರಾಪ್ತವಾದ ದುರವಸ್ಥೆ. ಆ ದುರವಸ್ಥೆಯನ್ನು ನೀವು ಅನುಭವಿಸಲು ನಾನೇ ಅಥವಾ ನನ್ನ ಪೌರುಷವೇ ಕಾರಣ. ನೀನಾದರೋ– ನಾನು ಹಿಂದೆ ಹೇಳಿದಂತೆ ನೀಳವಾದ ವೇಣಿಯನ್ನು ಧಾರಣೆಮಾಡಿಕೊಂಡು ನಪುಂಸಕನ ವೇಷಧರಿಸಿ ಅಂತಃಪುರದ ಹೆಣ್ಣುಮಕ್ಕಳಿಗೆ ನರ್ತನವನ್ನು ಕಲಿಸುತ್ತಿದ್ದೆ. ಇದೇ ರೀತಿಯಲ್ಲಿ ವೀರಕ್ಷತ್ರಿಯರು ಸದಾಕಾಲದಲ್ಲಿಯೂ ತಮ್ಮ ವಿರೋಧಿಗಳಾದ ಕ್ಷತ್ರಿಯರ ಮೇಲೆ ಯಾವುದಾದರೊಂದು ರೀತಿಯಲ್ಲಿ ದಂಡಪ್ರಯೋಗ ಮಾಡುತ್ತಲೇ ಇರುತ್ತಾರೆ.

ಅರ್ಜುನ! ವಾಸುದೇವನ ಭಯದಿಂದಾಗಲೀ, ನಿನ್ನ ಭಯದಿಂದಾ ಗಲೀ ನಿಮಗೆ ರಾಜ್ಯವನ್ನು ನಾನು ಕೊಡುವುದಿಲ್ಲ. ಕೇಶವನೊಡನೆ ಕೂಡಿಕೊಂಡು ನಮ್ಮನ್ನೆದುರಿಸಿ ಯುದ್ಧಮಾಡು. ನಾನು ಹಿಂದೊಮ್ಮೆ ಹೇಳಿ ದಂತೆ ಇಂದ್ರಜಾಲ, ಯಕ್ಷಿಣಿ, ಮಾಯೆ–ಇವುಗಳು, ಯುದ್ಧದಲ್ಲಿ ಶಸ್ತ್ರವನ್ನು ಮೇಲೆತ್ತಿ ನಿಂತಿರುವ ಶೂರನಿಗೆ ಮಹತ್ತರವಾದ ಕೋಪವನ್ನುಂಟುಮಾಡುತ್ತ

ವೆಯೇ ಹೊರತು ಭಯವನ್ನುಂಟುಮಾಡುವುದಿಲ್ಲ. ಸಾವಿರಾರು ವಾಸುದೇವರು ಬರಲಿ, ನೂರಾರು ಅರ್ಜುನರು ಬರಲಿ–ಅಮೋಘವಾದ ಬಾಣಗಳ ಸಮುದಾಯವೇ ಇರುವ ನನ್ನನ್ನೆದುರಿಸಿ ನಿಂತೊಡನೆಯೇ ಅವರು ನನ್ನ ಅಮೋಘವಾದ ದಿವ್ಯಬಾಣಗಳಿಂದ ಪೀಡಿತರಾಗಿ ಹತ್ತುದಿಕ್ಕುಗಳಿಗೂ ಓಡಿಹೋಗುತ್ತಾರೆ. ವೀರಪುರುಷನೇ! ಈಗ ನೀನು ಭೀಷ್ಮನೊಡನೆ ಯುದ್ಧವನ್ನಾದರೂ ಮಾಡು ; ತಲೆಯಿಂದ ಪ್ರಹರಿಸಿ ಪರ್ವತವನ್ನಾದರೂ ಸೀಳು ; ಅಥವಾ ಅತ್ಯಂತ ಅಗಾಧವಾಗಿರತಕ್ಕ ಮತ್ತು ವಿಶಾಲವಾಗಿರತಕ್ಕ ಸೈನ್ಯಸಮುದ್ರವನ್ನಾದರೂ ಎರಡು ತೋಳುಗಳಿಂದಲೇ ಈಜಿಬಿಡು.

ಅಗಾಧವಾದ ಪುರುಷಸಮುದ್ರದಲ್ಲಿ ಶಾರದ್ವತನು ಮಹಾಮೀನಪ್ರಾಯನಾಗಿರುತ್ತಾನೆ. ವಿವಿಂಶತಿಯು ದೊಡ್ಡದಾದ ಸರ್ಪಪ್ರಾಯನಾಗಿದ್ದಾನೆ. ಬೃಹದ್ಬಲನು ಉಕ್ಕಿಬರುವ ಸಮುದ್ರದಂತಿದ್ದಾನೆ. ಭೂರಿಶ್ರವನು ಆ ಸೈನ್ಯಸಮುದ್ರದ ತಿಮಿಂಗಿಲಪ್ರಾಯನಾಗಿದ್ದಾನೆ. ಆ ಮಹಾಸೈನ್ಯದ ಮಿತಿಯಿಲ್ಲದ ವೇಗವೇ ಭೀಷ್ಮನು. ದ್ರೋಣರು ಆ ಸೈನ್ಯಸಮುದ್ರದಲ್ಲಿ ಮೊಸಳೆಯಂತಿರುವುದರಿಂದ ಅದು ಶತ್ರುಗಳಿಗೆ ದುರವಗಾಹವಾಗಿದೆ. ಕರ್ಣ-ಶಲ್ಯರು ಆ ಸೈನ್ಯಸಮುದ್ರದ ಸುಳಿಯರೂಪದಲ್ಲಿದ್ದಾರೆ. ಕಾಂಬೋಜರಾಜನು ಆ ಸೈನ್ಯಸಮುದ್ರದ ಬಡಬಾಗ್ನಿಯ ರೂಪದಲ್ಲಿದ್ದಾನೆ. ದುಃಶಾಸನನು ಪ್ರವಾಹರೂಪನಾಗಿದ್ದಾನೆ. ಶಲ ಮತ್ತು ಶಲ್ಯರು ಮೀನುಗಳಂತಿದ್ದಾರೆ. ಸುಷೇಣ ಮತ್ತು ಚಿತ್ರಾಯುಧರು ಸೇನಾಸಮುದ್ರದ ನೀರಾನೆಗಳಂತೆ ಅಥವಾ ಮೊಸಳೆಗಳಂತಿದ್ದಾರೆ. ಜಯದ್ರಥನು ಸೇನಾಸಮುದ್ರದಲ್ಲಿ ಮೈನಾಕಪರ್ವತಪ್ರಾಯನಾಗಿದ್ದಾನೆ. ಪುರುಮಿತ್ರನು ಸಮುದ್ರದ ಗಾಂಭೀರ್ಯ (ಆಳ) ರೂಪನಾಗಿದ್ದಾನೆ. ದುರ್ಮರ್ಷಣನು ಸೇನಾಸಮುದ್ರದ ಉದಕಪ್ರಾಯನಾಗಿದ್ದಾನೆ. ಶಕುನಿಯು ಕಡಿದಾದ ಜಲಪಾತರೂಪದಲ್ಲಿದ್ದಾನೆ. ಕ್ಷಯರಹಿತವಾದ ಶಸ್ತ್ರಾಸ್ತ್ರಗಳ ಸಮೂಹದಿಂದ ಸಮೃದ್ಧವಾದ ಸೈನ್ಯಸಾಗರವನ್ನು ನೀನು ಯಾವಾಗ ಪ್ರವೇಶಿಸುವೆಯೋ– ಆಗ ನೀನು ಯುದ್ಧಮಾಡಲಾರದೇ ಆಯಾಸದಿಂದ ಪ್ರಜ್ಞಾಹೀನನಾಗುವೆ. ನಿನ್ನ ಬಂಧು-ಮಿತ್ರರೆಲ್ಲರೂ ಅಸುವನ್ನು ನೀಗುತ್ತಾರೆ. ಆ ಸಮಯದಲ್ಲಿ ನಿನ್ನ ಮನಸ್ಸು ನಮ್ಮ ಮೇಲೆ ಯುದ್ಧ

ಮಾಡಲು ನಿಶ್ಚಯಿಸಿದುದಕ್ಕಾಗಿ ಪರಿತಪಿಸುತ್ತದೆ. ಅಪವಿತ್ರನಾದವನ ಅಥವಾ ಪಾಪಿಷ್ಠನಾದವನ ಮನಸ್ಸು ಸ್ವರ್ಗದಿಂದ ಹಿಂದಕ್ಕೆ ಸರಿಯುವಂತೆ ನಿನ್ನ ಮನಸ್ಸೂ ರಾಜ್ಯಾನುಶಾಸನಮಾಡಬೇಕೆಂಬ ಅಭಿಲಾಷೆಯಿಂದ ಪ್ರತಿ ನಿವೃತ್ತವಾಗುತ್ತದೆ. ಯುದ್ಧಮಾಡಲು ಆರಂಭಿಸಿ ಅನಂತರ ನಿಸ್ತೇಜ ನಾಗುವುದಕ್ಕಿಂತಲೂ ಈಗಲೇ ಶಾಂತನಾಗುವುದು ಶ್ರೇಯಸ್ಕರ. ತಪಸ್ಸನ್ನೇ ಮಾಡದೇ ಸ್ವರ್ಗವನ್ನು ಅಭಿಲಾಷಿಸುವ ಮಂದಮತಿಯಂತೆ–ನೀನಿಂದು ಸುದುರ್ಲಭವಾದ ರಾಜ್ಯವನ್ನು ಅಭಿಲಾಷಿಸಿರುವೆ. ಅದನ್ನು ಪಡೆದುಕೊಳ್ಳಲು ನಿನ್ನಿಂದ ಖಂಡಿತವಾಗಿಯೂ ಸಾಧ್ಯವಾಗುವುದಿಲ್ಲ."

೧೬೧ನೆಯ ಅಧ್ಯಾಯವು ಮುಗಿಯಿತು.

*(ಇಲ್ಲಿಯ ೧೬೦ನೆಯ ಅಧ್ಯಾಯವು ಭಂಡಾರ್ಕರ್ ರಿಸರ್ಚ್ ಇನ್‌ಸ್ಟಿಟ್ಯೂಟಿನವರು ಪ್ರಕಟಿಸಿರುವ ಮಹಾಭಾರತದಲ್ಲಿ ೧೫೭ನೆಯ ಅಧ್ಯಾಯವಾಗಿದೆ. ಎರಡು ಪುಸ್ತಕಗಳಲ್ಲಿಯೂ ಹಿರಣ್ವತ್ಯಾಂ ನಿವಿಷ್ಟೇಷು–ಎಂಬ ಶ್ಲೋಕದಿಂದಲೇ ಅಧ್ಯಾಯವು ಪ್ರಾರಂಭವಾಗಿದ್ದರೂ ಭಂ.ರಿ.ಇ. ಪ್ರಕಟಿಸಿರುವ ಪುಸ್ತಕದಲ್ಲಿ ೧೮ ಶ್ಲೋಕಗಳಿಗೆ ಅಧ್ಯಾಯವು ಮುಗಿಯುತ್ತದೆ. ಆದರೆ ಬೇರೆಯ ಪುಸ್ತಕದಲ್ಲಿ ೧೨೫ ಶ್ಲೋಕಗಳಿವೆ. ಭಂ.ರಿ.ಇ. ಪುಸ್ತಕದಲ್ಲಿ ಮಾರ್ಜಾಲಸಂನ್ಯಾಸದ ಕಥೆಯನ್ನು ಬಿಟ್ಟಿರುವುದಲ್ಲದೇ – ಲೋಹಾಭಿಸಾರೋ ನಿರ್ವೃತ್ತಃ – ಎಂಬ ಶ್ಲೋಕದಿಂದ ಮುಂದಕ್ಕೆ ೩೨ ಶ್ಲೋಕಗಳು ಯಥಾರೂಪವಾಗಿ ೧೬೦ ಮತ್ತು ೧೬೧ನೆಯ ಅಧ್ಯಾಯಗಳಲ್ಲಿ ಬಂದಿವೆ. ದುರ್ಯೋಧನನು ಹೇಗೆ ಹೇಳಿ ಕಳುಹಿಸಿದ್ದನೋ ಹಾಗೆಯೇ ಉಲೂಕನು ಯಥಾವತ್ತಾಗಿ ಹೇಳಿದನು– ಎಂಬುದು ಎರಡು ಕಡೆಗಳಲ್ಲಿ ಈ ೩೨ ಶ್ಲೋಕಗಳು ದ್ವಿರುಕ್ತಿಯಾಗಿರುವುದಕ್ಕೆ ಸಮಾಧಾನ. ಆದರೆ ಮಾರ್ಜಾಲ ಸಂನ್ಯಾಸದ ಕಥೆಯನ್ನೂ ಮತ್ತು ಇನ್ನೂ ಇತರ ಕರ್ಣಕಠೋರವಾದ ಶ್ಲೋಕಗಳನ್ನೂ ಉಲೂಕನು ಧರ್ಮಜನ ಮುಂದೆ ಏಕೆ ಹೇಳಲಿಲ್ಲವೆಂಬುದಕ್ಕೆ ಸಮಾಧಾನವು ಸಿಕ್ಕುವುದಿಲ್ಲ. ಭಂ.ರಿ. ಇನ್‌ಸ್ಟಿಟ್ಯೂಟ್‌ನವರ ಪುಸ್ತಕವನ್ನೇ ಆಧಾರವನ್ನಾಗಿಟ್ಟುಕೊಂಡರೂ ಅದರಲ್ಲಿಯೂ ಈ ದೋಷವನ್ನು ನಾವು ಕಾಣಬಹುದಾಗಿದೆ. ೧೫೭ನೆಯ ಅಧ್ಯಾಯದಲ್ಲಿ ದುರ್ಯೋಧನನು ಪಾಂಡವರಿಗೆ*

*ಕೃಷ್ಣನೆದುರಿಗೆ ಹೇಳಲು ಉಲೂಕನಿಗೆ ತಿಳಿಸಿರುವುದು ೧೫ ಶ್ಲೋಕಗಳು ಮಾತ್ರ. ಆದರೆ ಉಲೂಕನು ೩೫ ಶ್ಲೋಕಗಳ ಸಂದೇಶವನ್ನು ಹೇಳುತ್ತಾನೆ. 'ದುರ್ಯೋಧನನು ಹೇಳದೇ ಇದ್ದುದನ್ನು ಉಲೂಕನು ಹೇಳಿದನೇ?' – ಎಂಬ ಜಿಜ್ಞಾಸೆಯೂ ಉಂಟಾಗುತ್ತದೆ. ಈ ಕಾರಣದಿಂದ ದ್ವಿರುಕ್ತಿಯೆನಿಸಿದರೂ ನಾವು ಎರಡು ಅಧ್ಯಾಯಗಳಲ್ಲಿಯೂ ಇರುವ ಎಲ್ಲ ಶ್ಲೋಕಗಳನ್ನೂ ಯಥಾವತ್ತಾಗಿಯೇ ನಿರೂಪಿಸಿದ್ದೇವೆ.)*

೧೬೨ನೆಯ ಅಧ್ಯಾಯ ಉಲೂಕದೂತಾಗಮನಪರ್ವ (ಮುಂದುವರಿದಿದೆ.)

## ಪಾಂಡವರು ದುರ್ಯೋಧನನ ಸಂದೇಶಕ್ಕೆ ಉತ್ತರವನ್ನು ಉಲೂಕನ ಮೂಲಕ ಹೇಳಿಕಳುಹಿಸಿದುದು

ಸಂಜಯನು ಮುಂದುವರಿದು ಹೇಳುತ್ತಾನೆ :

"ಧೃತರಾಷ್ಟ್ರಮಹಾರಾಜ! ಉಲೂಕನು ಇಷ್ಟನ್ನೇ ಹೇಳಿ ನಿಲ್ಲಿಸಲಿಲ್ಲ. ವಿಷಸರ್ಪದಂತೆ ಪರಮಕ್ರುದ್ಧನಾಗಿದ್ದ ಅರ್ಜುನನನ್ನು ವಾಗ್ಬಾಣದಿಂದ ಚುಚ್ಚುತ್ತಾ ದುರ್ಯೋಧನನು ಹೇಳಿದುದೆಲ್ಲವನ್ನೂ ಆಮೂಲಾಗ್ರವಾಗಿ ಪುನಃ ಪುನಃ ಹೇಳಿದನು. ಉಲೂಕನ ಆ ಮಾತುಗಳನ್ನು ಕೇಳಿದೊಡನೆಯೇ ಪಾಂಡವರು ಕುಪಿತರಾದರು. ಮೊದಲೇ ಕೋಪಗೊಂಡಿದ್ದ ಅವರು ಜೂಜುಗಾರನ ಮಗನ ತಿರಸ್ಕಾರದ ಮಾತುಗಳನ್ನು ಕೇಳಿದೊಡನೆಯೇ ಕೋಪದಿಂದ ಕಿಡಿ-ಕಿಡಿಯಾದರು. ಆಸನಗಳಿಂದ ಥಟ್ಟನೆ ಮೇಲೆದ್ದು ನಿಂತರು. ದೀರ್ಘವಾದ ತಮ್ಮ ಬಾಹುಗಳನ್ನು ಬಿರುಸಾಗಿ ಬೀಸಿದರು. ಕೋಪಗೊಂಡ ವಿಷಸರ್ಪದಂತಿದ್ದ ಪಂಚಪಾಂಡವರು ಪರಸ್ಪರವಾಗಿ ನೋಡಿಕೊಂಡರು. ಎದ್ದು ನಿಂತಿದ್ದ ಭೀಮಸೇನನು ಸರ್ಪದಂತೆ ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಾ, ಕೋಪದಿಂದ ಕೆಂಪುಗಟ್ಟಿದ್ದ ಕಣ್ಣುಗಳಿಂದ ಕುಳಿತಿದ್ದ ಕೇಶವನನ್ನು ತಲೆಯನ್ನು ತಗ್ಗಿಸಿಕೊಂಡೇ ನೋಡಿದನು.

ಕ್ರೋಧದಿಂದ ಪ್ರಹತನಾದ ಮತ್ತು ಪೀಡಿತನಾದ, ವಾಯುಪುತ್ರನಾದ ಭೀಮಸೇನನನ್ನು ನೋಡಿ ದಾಶಾರ್ಹಕುಲಭೂಷಣನಾದ ಶ್ರೀಕೃಷ್ಣನು

ಮಂದಸ್ಮಿತನಾಗಿರುವಂತೆಯೇ ತೋರ್ಪಡಿಸಿಕೊಳ್ಳುತ್ತಾ ಉಲೂಕನನ್ನು ಕುರಿತು ಈ ಮಾತುಗಳನ್ನು ಹೇಳಿದನು :

“ಕೈತವ್ಯ! ಶೀಘ್ರವಾಗಿ ದುರ್ಯೋಧನನ ಶಿಬಿರಕ್ಕೆ ಹೋಗು. ಸುಯೋಧನನೊಡನೆ ಈ ಮಾತುಗಳನ್ನು ಹೇಳು :

**ಶ್ರುತಂ ವಾಕ್ಯಂ ಗೃಹೀತೋಽರ್ಥೋ ಮತಂ ಯತ್ತೇ ತಥಾಸ್ತು ತತ್॥**

‘ಪಾಂಡವರು ನಿನ್ನ ಸಂದೇಶವನ್ನು ಕೇಳಿದರು. ನಿನ್ನ ಮಾತಿನ ಅರ್ಥವನ್ನೂ ಮನನಮಾಡಿಕೊಂಡರು. ಯುದ್ಧದ ವಿಷಯದಲ್ಲಿ ನಿನ್ನ ಅಭಿಪ್ರಾಯವು ಹೇಗಿರುವುದೋ ಹಾಗೆಯೇ ನಡೆಯಲಿ.”

ರಾಜಸತ್ತಮನೇ! ಕೇಶವನು ಉಲೂಕನೊಡನೆ ಹೀಗೆ ಹೇಳಿ ಮಹಾಪ್ರಾಜ್ಞನಾದ ಯುಧಿಷ್ಠಿರನನ್ನು ಪುನಃ ನೋಡಿದನು. ಆದರೆ ಶ್ರೀಕೃಷ್ಣನ ಉತ್ತರವನ್ನು ಕೇಳಿದ ಮೇಲೂ ಉಲೂಕನು ತನ್ನ ಮಾತನ್ನು ನಿಲ್ಲಿಸಲೇ ಇಲ್ಲ.

ಸರ್ವಸೃಂಜಯರು, ಯಶೋವಂತನಾದ ಶ್ರೀಕೃಷ್ಣ, ಪುತ್ರಸಹಿತನಾದ ದ್ರುಪದ, ವಿರಾಟ, ಯುಧಿಷ್ಠಿರನಿಗೆ ಸಹಾಯಕರಾಗಿ ಬಂದಿದ್ದ ಸಕಲ ರಾಜರು–ಇವರ ಮಧ್ಯದಲ್ಲಿ ಉಲೂಕನು ದುರ್ಯೋಧನನು ಹೇಳಿದ್ದ ಮಾತುಗಳನ್ನೇ ಪುನಃ ಅರ್ಜುನನಿಗೆ ಹೇಳಿದನು. ವಿಷಸರ್ಪದಂತೆಯೇ ಪರಮಕ್ರುದ್ಧನಾಗಿದ್ದ ಅರ್ಜುನನನ್ನು ವಾಗ್ಬಾಣಗಳಿಂದ ಬಾರಿ-ಬಾರಿಗೂ ಚುಚ್ಚುತ್ತಿದ್ದುದು ಮಾತ್ರವಲ್ಲದೇ–ಕೃಷ್ಣಾದಿಗಳನ್ನು ಕುರಿತು ದುರ್ಯೋಧನನು ಹೇಳಿಕಳುಹಿಸಿದ್ದ ಮಾತುಗಳನ್ನೇ ಪುನರುಚ್ಚರಿಸಿದನು. ಉಲೂಕನು ಹೇಳಿದ ಪಾಪಪೂರ್ಣವಾದ ಮತ್ತು ದಾರುಣವಾದ ಆ ಮಾತುಗಳನ್ನು ಕೇಳಿ ಕುಂತೀಪುತ್ರನಾದ ಪಾರ್ಥನು ಕ್ಷುಭಿತನಾದನು (ಸಿಟ್ಟೇರಿದನು). ಹಣೆಯಲ್ಲಿ ಬೆವರಿಟ್ಟಿತು. ಅದನ್ನು ತನ್ನ ಕೈಯಿಂದ ಒರೆಸಿಕೊಂಡನು. ಮಹಾರಾಜ! ಪಾರ್ಥನು ಅಂತಹ ಸ್ಥಿತಿಯಲ್ಲಿದ್ದುದನ್ನು ಕಂಡು ರಾಜರ ಸಮಿತಿಯೂ ಮತ್ತು ಪಾಂಡವರ ಕಡೆಯಲ್ಲಿದ್ದ ಮಹಾರಥರೂ ಸಹನೆಯನ್ನು ಕಳೆದುಕೊಂಡರು. ಮಹಾತ್ಮನಾದ ಅರ್ಜುನನ ವಿಷಯದಲ್ಲಿ ಮತ್ತು ಶ್ರೀಕೃಷ್ಣನ ವಿಷಯದಲ್ಲಿ

ದೂಷಣೆಯ ಮಾತುಗಳನ್ನು ಕೇಳಿ ಪುರುಷವ್ಯಾಘ್ರರಾದ ಮತ್ತು ಅಚ್ಯುತರಾದ ರಾಜರು ಕೋಪದಿಂದ ಉರಿದುಹೋದರು. ಧೃಷ್ಟದ್ಯುಮ್ನ, ಶಿಖಂಡೀ, ಮಹಾರಥನಾದ ಸಾತ್ಯಕಿ, ಐವರು ಕೇಕಯಸಹೋದರರು, ರಾಕ್ಷಸನಾದ ಘಟೋತ್ಕಚ, ದ್ರೌಪದಿಯ ಐವರು ಮಕ್ಕಳು, ಅಭಿಮನ್ಯು, ಧೃಷ್ಟಕೇತು ಮಹಾರಾಜ, ಭೀಮಸೇನ, ಮಹಾರಥಿಗಳಾದ ನಕುಲ-ಸಹದೇವರು-ಇವರೆಲ್ಲರೂ ಕೋಪದಿಂದ ಕೆಂಪಾಗಿದ್ದ ಕಣ್ಣುಗಳುಳ್ಳವರಾಗಿ ಅಂಗದ ಗಳಿಂದಲೂ, ಮುತ್ತಿನ ಕುಚ್ಚುಗಳಿಂದಲೂ, ಕೇಯೂರಗಳಿಂದಲೂ ವಿಭೂಷಿತವಾಗಿದ್ದ, ರಕ್ತಚಂದನದಿಂದ ಲೇಪಿತವಾಗಿದ್ದ, ಸುಮನೋಹರ ವಾಗಿದ್ದ ತಮ್ಮ ಬಾಹುಗಳನ್ನು ಮುಂದಕ್ಕೆ ಚಾಚಿ (ಬೀಸುತ್ತಾ) ತಮ್ಮ-ತಮ್ಮ ಆಸನಗಳಿಂದ ಥಂಗನೆ ಎದ್ದುನಿಂತರು. ಅವರ ಆಗಿನ ಆಕಾರಗಳಿಂದ ಅವರ ಮನಸ್ಸಿನ ಭಾವವೇನೆಂಬುದನ್ನು ತಿಳಿದು ಕುಂತೀಪುತ್ರನಾದ ವೃಕೋದರನು ಹಲ್ಲುಗಳನ್ನು ಕಟ-ಕಟನೆ ಕಡಿಯುತ್ತಾ ಎರಡು ಕಟವಾಯಿಗಳನ್ನೂ (ತುಟಿಯಂಚುಗಳನ್ನೂ) ನೆಕ್ಕುತ್ತಾ ರಭಸದಿಂದ ಎದ್ದುನಿಂತುಕೊಂಡನು. ಆ ಸಮಯದಲ್ಲವನು ಕೋಪದಿಂದ ಧಗ-ಧಗನೆ ಪ್ರಜ್ವಲಿಸುತ್ತಿರುವನೋ ಎಂಬಂತೆ ಕಾಣುತ್ತಿದ್ದನು. ತನ್ನೆರಡು ಕಣ್ಣುಗಳನ್ನೂ ಮೇಲಕ್ಕೆ ಮಾಡಿ ದುರ-ದುರನೆ ನೋಡುತ್ತಾ ಹಲ್ಲುಗಳನ್ನು ಕಟ-ಕಟನೆ ಕಡಿಯುತ್ತಾ ಕೈಯಿಂದ ಕೈಯನ್ನು ಉಜ್ಜಿಕೊಳ್ಳುತ್ತಾ ಉಲೂಕನನ್ನು ಕುರಿತು ಹೇಳಿದನು :

"ಮೂರ್ಖ! ನಾವು ಬಹುದುರ್ಬಲರೆಂದು ಭಾವಿಸಿ ನಮ್ಮನ್ನು ಹುರಿದುಂಬಿಸುವ ಸಲುವಾಗಿ ದುರ್ಯೋಧನನು ನಿನ್ನೊಡನೆ ಹೇಳಿಕಳುಹಿಸಿದ್ದ ಮಾತುಗಳನ್ನು ಕೇಳಿದೆವು. ಆ ದುರುಳನ ಮಾತನ್ನು ವಿವರಿಸಿ ಹೇಳಿದ ನೀನು ದುರಾಸದವಾದ ನನ್ನ ಮಾತನ್ನಾದರೂ ಕೇಳು. ನಾನು ಹೇಳಲಿರುವ ಈ ಮಾತುಗಳನ್ನು ನೀನು ಎಲ್ಲ ರಾಜರ ಮಧ್ಯದಲ್ಲಿ, ಸೂತಪುತ್ರನಾದ ಕರ್ಣ ಮತ್ತು ನಿನ್ನ ತಂದೆಯಾದ ದುರಾತ್ಮನಾದ ಶಕುನಿ–ಇವರಿಗೂ ಕೇಳಿಸುವಂತೆ (ಅವರ ಸಮ್ಮುಖದಲ್ಲಿ) ಹೇಳಬೇಕು.

'ದುರಾಚಾರ! ದುರ್ಯೋಧನ! ನಿನಗೆ ಸದಾಚಾರವೆಂದರೇನೆಂಬುದೇ ತಿಳಿಯದು. ಸತ್ಪುರುಷರ ಮಾರ್ಗಾವಲಂಬಿಗಳಾದ ನಾವು ನಮ್ಮ ಹಿರಿಯಣ್ಣ

ನಿಗೆ ಪ್ರಿಯವನ್ನುಂಟುಮಾಡಬೇಕೆನ್ನುವ ಅಪೇಕ್ಷೆಯಿಂದ ಅವನ ಆಜ್ಞೆಯನ್ನು ಉಲ್ಲಂಘಿಸದೇ ಕಡುಪಾಪಿಯಾದ ನೀನು ಮಾಡಿದುದೆಲ್ಲವನ್ನೂ ಸಹಿಸಿ ಕೊಂಡೆವು. ಹಿರಿಯರ ಮತ್ತು ಮಹಾತ್ಮರ ಮಾತನ್ನು ಗೌರವಿಸಿ ನಡೆಯಬೇಕೆಂಬ ಈ ಅಂಶವು ಅತಿಮಹತ್ವದ್ದೆಂದು ದುರಾಚಾರಿಯಾದ, ಗುರುಜನರ ಮಾತನ್ನು ಯಾವಾಗಲೂ ಮೀರಿ ನಡೆಯುವ ಸ್ವಭಾವವುಳ್ಳ ನಿನಗೆ ಹೇಗೆತಾನೇ ತಿಳಿದೀತು? ಧೀಮಂತನಾದ, ಕುಲದ ಹಿತಾಪೇಕ್ಷಿ ಯಾದ ಧರ್ಮರಾಜನು–ಉಭಯಪಕ್ಷಗಳೂ ಸುಖ-ಶಾಂತಿಗಳಿಂದಿರ ಬೇಕೆಂಬ ಅಭಿಲಾಷೆಯುಳ್ಳ ಶ್ರೀಕೃಷ್ಣನನ್ನು ಕುರುಗಳ ಸಮೀಪಕ್ಕೆ ಸಂಧಿಕಾರ್ಯ ಕ್ಕಾಗಿ ಕಳುಹಿಸಿಕೊಟ್ಟಿದ್ದನು. ನೀನು ಕಾಲಚೋದಿತನಾಗಿರುವುದಂತೂ ನಿಶ್ಚಯ. ಯಮಸದನಕ್ಕೆ ಶೀಘ್ರಾತಿಶೀಘ್ರವಾಗಿ ಹೋಗಿಬಿಡಬೇಕೆಂದು ಅಭಿಲಾಷಿಸುತ್ತಿರುವೆ. ಒಳ್ಳೆಯದೇ ಆಯಿತು. ಯುದ್ಧಕ್ಕೆ ಹೊರಡು. ಆ ಮಹಾಯುದ್ಧವು ನಾಳೆಯೇ ಪ್ರಾರಂಭವಾಗುವುದಂತೂ ನಿಶ್ಚಯ. ನಾನೂ ಅನುಜಸಮೇತನಾದ ನಿನ್ನನ್ನು ಸಂಹಾರಮಾಡುವೆನೆಂದು ಪ್ರತಿಜ್ಞೆಮಾಡಿರು ತ್ತೇನೆ. ಅದು ಹಾಗೆಯೇ ನಡೆಯುತ್ತದೆ. ನಿಮ್ಮೆಲ್ಲರನ್ನೂ ನಾನೊಬ್ಬನೇ ಸಂಹರಿಸುತ್ತೇನೆ. ಈ ವಿಷಯದಲ್ಲಿ ಪುನಃ ವಿಚಾರಮಾಡುವ ಅಗತ್ಯವೇ ಇಲ್ಲ. ವರುಣನಿಗೆ ಆಲಯವಾಗಿರುವ ಸಮುದ್ರವು ತನ್ನ ಎಲ್ಲೆಯನ್ನು ಉಲ್ಲಂಘಿಸಿ ಬಿಡಬಹುದು ; ಪರ್ವತಗಳು ಇದ್ದಕ್ಕಿದ್ದಂತೆಯೇ ಸೀಳಿಹೋಗಲೂಬಹುದು– ಆದರೆ ನನ್ನ ಪ್ರತಿಜ್ಞೆಯು ಮಾತ್ರ ಖಂಡಿತವಾಗಿಯೂ ಸುಳ್ಳಾಗದು. ದುರ್ಬುದ್ಧಿಯವನೇ! ಮೂರ್ಖ! ನಿನ್ನಲ್ಲಿ ಸೈನ್ಯದ ಆಧಿಕ್ಯವಿದೆಯೆಂಬ ಕೊಬ್ಬು ನಿನಗಿರಬಹುದು. ಅತಿರಥ-ಮಹಾರಥರೂ ಇದ್ದಾರೆಂಬ ಮದವಿರಬಹುದು. ಅವರೇ ಅಲ್ಲದೆ ನಿನಗೆ ಸಹಾಯಕನಾಗಿ ಸಾಕ್ಷಾತ್ ಯಮನೇ ಬರಲಿ ; ಕುಬೇರನೇ ಬರಲಿ ; ರುದ್ರನೇ ಬರಲಿ–ಪ್ರತಿಜ್ಞೆ ಮಾಡಿರುವಂತೆ ಪಾಂಡವರು ನಡೆದುಕೊಂಡೇ ತೀರುತ್ತಾರೆ. ಈ ವಿಷಯದಲ್ಲಿ ನೀನು ಸಂಶಯಪಡುವ ಕಾರಣವಿಲ್ಲ. ನನ್ನ ಪ್ರತಿಜ್ಞೆಯಂತೆ ಮತ್ತು ನಿನ್ನ ಅಭಿಲಾಷೆಯಂತೆ ದುಃಶಾಸನನ ರಕ್ತವನ್ನು ನಾನು ಅತ್ಯವಶ್ಯವಾಗಿ ಪಾನಮಾಡುತ್ತೇನೆ. ದುಃಶಾಸನನ ರಕ್ತವನ್ನು ಪಾನಮಾಡುವ ಸಮಯದಲ್ಲಿ ಕೋಪಾಭಿಭೂತನಾದ ಯಾವನೇ ಕ್ಷತ್ರಿಯ ನಾಗಲಿ ಮಹಾಪರಾಕ್ರಮಿಯೆನಿಸಿರುವ ಭೀಷ್ಮನನ್ನೇ ಮುಂದೆಮಾಡಿಕೊಂಡು

ನನಗೆ ಅಭಿಮುಖನಾಗಿ ನಿಂತು ಯುದ್ಧಮಾಡಲು ಬಂದರೆ ಅವನನ್ನೂ ನಾನು ಕ್ಷಣಮಾತ್ರದಲ್ಲಿ ಯಮಾಲಯಕ್ಕೆ ಕಳುಹಿಸುತ್ತೇನೆ. ಕ್ಷತ್ರಿಯರ ಸಭೆಯಲ್ಲಿ ನಾನು ಯಾವ ಮಾತನ್ನು ಹೇಳಿದ್ದೇನೋ–ಆ ಮಾತು ಸತ್ಯವಾಗಿ ಪರಿಣಮಿಸುತ್ತದೆ. ನಾನೀಮಾತನ್ನು ಹೃದಯವನ್ನು ಮುಟ್ಟಿ ಶಪಥಮಾಡಿ ಹೇಳುತ್ತೇನೆ."

ಭೀಮಸೇನನ ಆ ಮಾತನ್ನು ಕೇಳಿದನಂತರ ಬಹುವಾಗಿ ಕೋಪಗೊಂಡ ಸಹದೇವನು ಕ್ರೋಧದಿಂದ ಕೆಂಪಾದ ಕಣ್ಣುಗಳುಳ್ಳವನಾಗಿ ವೀರಯೋಗ್ಯವಾದ ಮಾತುಗಳನ್ನು ಸೈನ್ಯದ ಮಧ್ಯದಲ್ಲಿ ಹೇಳಿದನು :

"ಪಾಪಿಷ್ಠನೇ! ಗರ್ವಿಷ್ಠರಾದ ಶೂರರು ಮಾತ್ರವೇ ಆಡಲು ಯೋಗ್ಯವಾದ ಈ ಮಾತುಗಳನ್ನು ಕುರುಸಭೆಯಲ್ಲಿ ಹೇಳುವ ಸಲುವಾಗಿ ನಿನ್ನೊಡನೆ ಹೇಳುತ್ತೇನೆ. ಈ ನನ್ನ ಮಾತುಗಳನ್ನು ನೀನೂ ಕೇಳು ಮತ್ತು ಕುರುಸಭೆಯಲ್ಲಿರುವ ನಿನ್ನ ತಂದೆಗೂ ಹೇಳು.

'ಪಾಪಿಷ್ಠನಾದ ಶಕುನಿಯೇ! ಧೃತರಾಷ್ಟ್ರನೊಡನೆ ನಿನ್ನ ಬಂಧುತ್ವವು ಇರದಿದ್ದ ಪಕ್ಷದಲ್ಲಿ ಕುರುಗಳಿಗೂ ಮತ್ತು ನಮಗೂ ಭೇದವು (ದ್ವೇಷವು) ಖಂಡಿತವಾಗಿಯೂ ಉಂಟಾಗುತ್ತಿರಲಿಲ್ಲ. ನೀನು ಸ್ವಕುಲಘ್ನ. 'ಕುಲಕ್ಕೆ ಮೃತ್ಯು ಕೊಡಲೀಕಾವು' – ಎಂಬಂತೆ ನಿನ್ನ ವಂಶವನ್ನೇ ನಿರ್ಮೂಲಮಾಡಲು ಹುಟ್ಟಿರುವ ಮಹಾಪುರುಷ. ವೈರವೆಂಬುದು ಮೂರ್ತಿಮತ್ತಾಗಿ ನಿನ್ನ ರೂಪದಲ್ಲಿದೆ. ಯಾವ ಮಹಾಪಾಪವನ್ನೂ ಮಾಡಲು ನೀನು ಅಂಜುವವನಲ್ಲ. ನೀನು ಲೋಕದ ವಿನಾಶಕ್ಕೂ ಮತ್ತು ಧೃತರಾಷ್ಟ್ರನ ಕುಲದ ವಿನಾಶಕ್ಕೂ ಜನ್ಮತಾಳಿರುವೆ.'

ಉಲೂಕನನ್ನೇ ಉದ್ದೇಶಿಸಿ ಸಹದೇವನು ಹೇಳುತ್ತಾನೆ :

"ಉಲೂಕ! ಪಾಪಪುರುಷನಾದ ನಿನ್ನ ತಂದೆಯು ನಾವು ಹುಟ್ಟಿದಾಗಿ ನಿಂದಲೂ ನಮ್ಮ ವಿಷಯದಲ್ಲಿ ನಿರ್ದಯೆಯಿಂದಲೇ ವರ್ತಿಸುತ್ತಿದ್ದಾನೆ ಮತ್ತು ಅನುದಿನವೂ ನಮಗೆ ಅಹಿತವಾಗತಕ್ಕಂತಹ ಕ್ರೂರಕಾರ್ಯಗಳನ್ನೇ ಮಾಡುತ್ತಿರುತ್ತಾನೆ. ಆ ಶಕುನಿಯ ಸಮಕ್ಷದಲ್ಲಿಯೇ ನಿನ್ನನ್ನು ಸಂಹರಿಸಿ ಅನಂತರ

ದಲ್ಲಿ ಸರ್ವಧನುಷ್ಮಂತರೂ ನೋಡುತ್ತಿರುವಂತೆಯೇ ನಿನ್ನ ತಂದೆಯನ್ನೂ ಕೊಲ್ಲುತ್ತೇನೆ. ಈ ರೀತಿಯಾಗಿ ನಾನು ಆ ವೈರದ ಸಂಬಂಧವಾದ ಸುದುರ್ಗಮವಾದ ಅಂತವನ್ನು ಮುಟ್ಟುತ್ತೇನೆ. (ಈ ರೀತಿಯಾಗಿ ನನ್ನ ದ್ವೇಷದ ಸೇಡನ್ನು ತೀರಿಸಿಕೊಳ್ಳುತ್ತೇನೆ.)"

ಮಹಾರಾಜ! ಭೀಮಸೇನ-ಸಹದೇವರಿಬ್ಬರ ಮಾತುಗಳನ್ನೂ ಕೇಳಿದ ನಂತರ ಅರ್ಜುನನು ನಗುತ್ತಿರುವನೋ ಎಂಬಂತೆ ಭೀಮಸೇನನನ್ನು ನೋಡಿ ಮುಗುಳ್ನಗೆಯನ್ನು ಬೀರುತ್ತಾ ಅವನನ್ನು ಕುರಿತು ಹೇಳಿದನು :

"ಅಣ್ಣ! ಭೀಮಸೇನ! ನಿನ್ನೊಡನೆ ಯಾರಿಗೆ ಶತ್ರುತ್ವವಿದೆಯೋ ಅವರು ಇನ್ನುಳಿಯುವುದಿಲ್ಲ. ಮೃತರಾದಂತೆಯೇ ಸರಿ. ಮನೆಗಳಲ್ಲಿ ನಾನಾವಿಧವಾದ ಸುಖೋಪಭೋಗಗಳನ್ನನುಭವಿಸುತ್ತಿರುವ ಆ ಕೌರವಮೂರ್ಖರು ಮೃತ್ಯುಪಾಶವಶರಾಗಿಬಿಟ್ಟಿದ್ದಾರೆ. ಪುರುಷೋತ್ತಮನೇ! ಉಲೂಕನ ವಿಷಯದಲ್ಲಿ ನೀನು ಕಠಿನವಾದ ಮಾತುಗಳನ್ನಾಡುವ ಕಾರಣವಿಲ್ಲ. ಅಲ್ಲಿ ಅವರು ಹೇಳಿಕಳುಹಿಸಿರುವಂತೆ ಇಲ್ಲಿಗೆ ಬಂದು ಹೇಳಿರುವುದರಲ್ಲಿ ದೂತರ ಅಪರಾಧವೇನಿದೆ?"

ಮಹಾರಾಜ! ಮಹಾಬಾಹುವಾದ ಅರ್ಜುನನು ಭೀಮ ಪರಾಕ್ರಮನಾದ ಭೀಮನಿಗೆ ಹೀಗೆ ಹೇಳಿ ಮಹಾವೀರರಾದ ಧೃಷ್ಟದ್ಯುಮ್ನಪ್ರಮುಖರಾದ ಸುಹೃದರನ್ನು ಉದ್ದೇಶಿಸಿ ಹೇಳಿದನು :

"ಪಾಪಿಷ್ಠನಾದ, ಧೃತರಾಷ್ಟ್ರನ ಮಗನಾದ ದುರ್ಯೋಧನನು ದೂತನ ಮೂಲಕ ಹೇಳಿಕಳುಹಿಸಿರುವುದನ್ನು ನೀವೆಲ್ಲರೂ ಕೇಳಿಯೇ ಇರುವಿರಿ. ವಾಸುದೇವನನ್ನೂ ವಿಶೇಷವಾಗಿ ನನ್ನನ್ನೂ ಅವನು ಬಹುವಾಗಿ ನಿಂದಿಸಿರುವನು. ನಮಗೆ ಹಿತವನ್ನುಂಟುಮಾಡುವ ಅಪೇಕ್ಷೆಯಿಂದ ಅವನ ಕುತ್ಸಿತವಾದ ಮಾತುಗಳನ್ನು ಕೇಳುತ್ತಲೇ ನೀವೆಲ್ಲರೂ ಕ್ರೋಧಾಭಿಭೂತರಾಗಿ ಎದ್ದುನಿಂತಿದ್ದೀರಿ. ವಾಸುದೇವನ ಪ್ರಭಾವದಿಂದಲೂ ಮತ್ತು ನಿಮ್ಮೆಲ್ಲರ ಸಹಕಾರದಿಂದಲೂ ನಮ್ಮ ಎದುರುಪಕ್ಷದಲ್ಲಿರುವ ಸಮಗ್ರವಾದ ರಾಜಸಮೂಹವನ್ನೂ ನಾನು ಪರಿ

ಗಣಿಸುವುದೇ ಇಲ್ಲ. (ಅವರು ನನ್ನ ಲೆಕ್ಕಕ್ಕೇ ಇಲ್ಲ ; ಕ್ಷಣಮಾತ್ರದಲ್ಲಿ ಅವರೆಲ್ಲರನ್ನೂ ಸಂಹರಿಸಿಬಿಡುತ್ತೇನೆ.) ನಿಮ್ಮಿಂದ ಅನುಜ್ಞಾತನಾದ ನಾನು ದುರ್ಯೋಧನನ ಸಂದೇಶಕ್ಕೆ ಉತ್ತರವನ್ನು ದೂತನಾಗಿ ಬಂದಿರುವ ಈ ಉಲೂಕನ ಸಂಗಡ ಹೇಳಿಕಳುಹಿಸುತ್ತೇನೆ. ನಮ್ಮ ಈ ಉತ್ತರವನ್ನು ಉಲೂಕನು ದುರ್ಯೋಧನನಿಗೆ ಹೇಳುತ್ತಾನೆ.

**ಶ್ವೋಭೂತೇ ಕತ್ಥಿತಸ್ಯಾಸ್ಯ ಪ್ರತಿವಾಕ್ಯಂ ಚಮೂಮುಖೇ ।**
**ಗಾಣ್ಡೀವೇನಾಭಿಧಾಸ್ಯಾಮಿ ಕ್ಲೀಬಾ ಹಿ ವಚನೋತ್ತರಾಃ ॥೪೪॥**

ಈ ಆತ್ಮಪ್ರಶಂಸೆಯ ಮಾತುಗಳಿಗೆ ಪ್ರತ್ಯುತ್ತರವನ್ನು ನಾಳೆ ಬೆಳಗಾಗುತ್ತಲೇ ಸೈನ್ಯಕ್ಕೆ ಅಭಿಮುಖನಾಗಿ ನಿಂತು ಗಾಂಡೀವದ ಮೂಲಕವಾಗಿಯೇ ಕೊಡುತ್ತೇನೆ. ಏಕೆಂದರೆ : ಮಾತಿಗೆ ಮಾತನ್ನೇ ಬೆಳೆಸುತ್ತಾ ಹೋಗುವವರು ನಪುಂಸಕರೇ ಸರಿ. ಪುರುಷರಾದವರು ಕ್ರಿಯೆಯಲ್ಲಿ ಮಾತ್ರವೇ ತೋರಿಸುತ್ತಾರೆ."

ಧನಂಜಯನ ಆ ಮಾತನ್ನು ಕೇಳಿದೊಡನೆಯೇ ಅಲ್ಲಿ ನೆರೆದಿದ್ದ ರಾಜರೆಲ್ಲರೂ ಅರ್ಜುನನನ್ನು ಮುಕ್ತಕಂಠದಿಂದ ಹೊಗಳಿದರು. ಅವನ ಸಾನುನಯವಾದ ಮಾತನ್ನು ಕೇಳಿ ರಾಜರೆಲ್ಲರೂ ಆಶ್ಚರ್ಯಭರಿತರಾದರು.

ಮಹಾರಾಜ! ಅನಂತರ ಯುಧಿಷ್ಠಿರನು ರಾಜರೆಲ್ಲರನ್ನೂ ಸಮಾಧಾನಗೊಳಿಸಿ ಅವರವರ ವಯೋನುಗುಣವಾಗಿ ಎಲ್ಲರನ್ನೂ ಸತ್ಕರಿಸಿ, ದುರ್ಯೋಧನನಿಗೆ ಹೇಳಿಕಳುಹಿಸಲು ಉಚಿತವಾದ ಸಂದೇಶದ ವಿಷಯವಾಗಿ ಮಾತನಾಡಿದನು :

"ಉಲೂಕ! ತನಗಾಗುವ ಅಪಮಾನವನ್ನು ಸಹಿಸಿಕೊಳ್ಳತಕ್ಕವನು, ತನ್ನನ್ನೇ ಕೀಳಾಗಿ ಭಾವಿಸಿಕೊಳ್ಳುವವನು ಪಾರ್ಥಿವೋತ್ತಮನೆನಿಸಲಾರನು. ಮಾನವನ್ನು ರಕ್ಷಿಸಿಕೊಳ್ಳುವ ಸಲುವಾಗಿ ಪ್ರಾಣವನ್ನಾದರೂ ತೊರೆಯುವನೇ ಹೊರತು ಮಾನಹಾನಿಯನ್ನು ಯಾವ ಕ್ಷತ್ರಿಯನೂ ಸಹಿಸಿಕೊಳ್ಳುವುದಿಲ್ಲ. ನಾನಿದುವರೆಗೂ ನೀನು ಹೇಳಿದುದನ್ನು ಕೇಳುವುದರಲ್ಲಿಯೇ ಆಸಕ್ತನಾಗಿದ್ದೆನು. ನೀನು ಹೇಳಿದುದಕ್ಕೆ ಈಗ ಉತ್ತರವನ್ನು ಕೊಡುತ್ತೇನೆ."

ಸಂಜಯನು ಮುಂದುವರಿಸುತ್ತಾ ಹೇಳುತ್ತಾನೆ :

"ಧೃತರಾಷ್ಟ್ರಮಹಾರಾಜ! ಯುಧಿಷ್ಠಿರನು ಮೊದಲು ಉಲೂಕನೊಡನೆ ಮಧುರವಾದ ಮಾತುಗಳನ್ನೇ ಆಡಿದನು. ಆದರೆ ದುರ್ಯೋಧನನ ಅಂಕುಶಪ್ರಾಯವಾದ ಮಾತುಗಳನ್ನು ಸ್ಮರಿಸಿದೊಡನೆಯೇ ಶಾಂತಸ್ವಭಾವದವನಾದ ಯುಧಿಷ್ಠಿರನೂ ಕುಪಿತನಾಗಿಯೇ ಅರ್ಥವತ್ತಾಗಿ ಉತ್ತರಿಸಿದನು. ಆ ಸಮಯದಲ್ಲಿ ಅವನ ಕಣ್ಣುಗಳು ಬಹಳ ಕೆಂಪಾಗಿದ್ದುವು. ಸರ್ಪದಂತೆಯೇ ಅವನು ನಿಟ್ಟುಸಿರುಬಿಡುತ್ತಿದ್ದನು. ಕೋಪದಿಂದ ತನ್ನೆರಡು ಕಟವಾಯಿಗಳನ್ನೂ ನಾಲಿಗೆಯಿಂದ ನೆಕ್ಕುತ್ತಿದ್ದನು. ಜನಾರ್ದನನನ್ನೂ ಮತ್ತು ತನ್ನ ತಮ್ಮಂದಿರನ್ನೂ ನೋಡಿ ವಿಶಾಲವಾದ ಭುಜವನ್ನು ಮೇಲೆತ್ತಿ ನಗುತ್ತಿರುವನೋ ಎಂಬಂತೆ ತೋರಿಸಿಕೊಳ್ಳುತ್ತಾ ಉಲೂಕನಿಗೆ ಹೇಳಿದನು :

"ಹೋಗು, ಕೈತವ್ಯ! ದುರ್ಯೋಧನನ ಶಿಬಿರಕ್ಕೆ ಹೋಗಿ ಕೃತಘ್ನನಾದ, ವೈರಪುರುಷನಾದ, ದುರ್ಮತಿಯಾದ, ಕುಲಪಾಂಸನನಾದ ಅವನಿಗೆ ಹೀಗೆ ಹೇಳು :

'ಪಾಪಿಷ್ಠನೇ! ಪಾಂಡವರ ವಿಷಯದಲ್ಲಿ ನೀನು ಯಾವಾಗಲೂ ಕುಟಿಲತೆಯಿಂದಲೇ ವರ್ತಿಸುತ್ತಿರುವೆ.

**ಸ್ವವೀರ್ಯಾದ್ಯಃ ಪರಾಕ್ರಮ್ಯ ಪಾಪ ಆಹ್ವಯತೇ ಪರಾನ್ ।**
**ಅಭೀತಃ ಪೂರಯನ್ವಾಕ್ಯಮೇಷ ವೈ ಕ್ಷತ್ರಿಯಃ ಪುಮಾನ್ ॥೫೨॥**

ಪಾಪಾತ್ಮನೇ! ಯಾವನು ಯಾರಿಗೂ ಭಯಪಡದೇ, ತಾನು ಹೇಳಿದ ಮಾತಿನಂತೆ ನಡೆದುಕೊಳ್ಳುತ್ತಾ, ಸ್ವಭುಜಬಲ-ಪರಾಕ್ರಮಗಳ ಅವಲಂಬನೆ ಯಿಂದಲೇ ಶತ್ರುಗಳನ್ನು ಯುದ್ಧಕ್ಕೆ ಆಹ್ವಾನಿಸುತ್ತಾನೆಯೋ–ಅವನು ಕ್ಷತ್ರಿಯಪುರುಷನೆನಿಸಿಕೊಳ್ಳುತ್ತಾನೆ. ಕುಲಾಧಮನೇ! ಪಾಪಿಷ್ಠ! ನಮ್ಮನ್ನು ನೀನು ಯುದ್ಧಕ್ಕೆ ಆಹ್ವಾನಿಸುತ್ತಿರುವುದೇನೋ ನಿಜ. ಕ್ಷತ್ರಿಯನಾಗಿರುವ ನಿನಗೆ ನಮ್ಮೊಡನೆ ನೇರವಾಗಿ ಯುದ್ಧಮಾಡುವುದು ಉಚಿತವೆನಿಸುತ್ತದೆ. ಆದರೆ ನೀನು ನಮ್ಮನ್ನು ಯುದ್ಧಕ್ಕೆ ಆಹ್ವಾನಿಸಿ, ನೀನು ಹಿಂದುಳಿದು–ನಮಗೆ ಮಾನ್ಯರಾದವರನ್ನೂ (ವೃದ್ಧರಾದ ಗುರುಜನರನ್ನೂ) ಅಮಾತ್ಯರನ್ನೂ

(ಕರ್ಣಾದಿಗಳನ್ನೂ) ಮುಂದಕ್ಕೆ ತಳ್ಳಿ ಯುದ್ಧಮಾಡುವುದು ನಿನಗೆ ಖಂಡಿತವಾಗಿಯೂ ಉಚಿತವೆನಿಸುವುದಿಲ್ಲ. ನಿನ್ನ ಪರಾಕ್ರಮವನ್ನೇ ಅವಲಂಬಿಸಿ ನಿಲ್ಲು. ಸಹಾಯಕ್ಕೆ ನಿನ್ನ ಭೃತ್ಯರನ್ನೂ ಜೊತೆಗೆ ಕರೆದುಕೋ. ನಿನ್ನ ಪರಾಕ್ರಮವನ್ನೂ ಭೃತ್ಯರ ಪರಾಕ್ರಮವನ್ನೂ ಆಶ್ರಯಿಸಿ ಪಾಂಡವರನ್ನು ಯುದ್ಧಕ್ಕೆ ಆಹ್ವಾನಿಸು. ಆಗ ನೀನು ನಿಜವಾದ ಕ್ಷತ್ರಿಯನಾಗುವೆ. ಹೀಗೆ ಮಾಡಿ ವೀರಕ್ಷತ್ರಿಯನಾಗು.

**ಪರವೀರ್ಯಂ ಸಮಾಶ್ರಿತ್ಯ ಯಃ ಸಮಾಹ್ವಯತೇ ಪರಾನ್ ।**
**ಅಶಕ್ತಃ ಸ್ವಯಮಾದಾತುಮೇತದೇವ ನಪುಂಸಕಮ್ ॥೫೫॥**

ಶತ್ರುವನ್ನು ತಾನು ಎದುರಿಸಿ ನಿಲ್ಲಲು ಅಸಮರ್ಥನಾಗಿ ಯಾವನು ಇತರರ ಪರಾಕ್ರಮವನ್ನೇ ಅವಲಂಬಿಸಿ ಶತ್ರುಗಳನ್ನು ಯುದ್ಧಕ್ಕೆ ಆಹ್ವಾನಿಸುತ್ತಾನೆಯೋ–ಅವನು ನಪುಂಸಕನೇ ಸರಿ (ಅಂತಹ ಕಾರ್ಯವನ್ನು ನಪುಂಸಕನಾದವನು ಮಾತ್ರವೇ ಮಾಡುವನು). ವೀರನಾದವನು ಹೀಗೆಂದಿಗೂ ಮಾಡುವುದಿಲ್ಲ.

ಇತರರ ವೀರ್ಯ-ಪರಾಕ್ರಮಗಳನ್ನೇ ನೀನು ಅವಲಂಬಿಸಿದ್ದರೂ 'ನಾನೇ ಮಹಾಬಲಿಷ್ಠನು' ಎಂದು ಭಾವಿಸಿಕೊಂಡುಬಿಟ್ಟಿರುವೆ. ನಿನ್ನಲ್ಲಿ ಅಂತಹ ಪರಾಕ್ರಮವೇನೂ ಇರುವುದಿಲ್ಲ. ವಸ್ತುತಃ ನೀನು ಅಶಕ್ತನಾಗಿದ್ದುಕೊಂಡು ನಮ್ಮ ಮುಂದೆ ಹೇಗೆ ಗರ್ಜನೆ ಮಾಡುತ್ತಿರುವೆ?"

ಯುಧಿಷ್ಠಿರನು ಹೀಗೆ ಹೇಳಿದನಂತರ ಶ್ರೀಕೃಷ್ಣನು ಉಲೂಕನೊಡನೆ ಹೇಳಿದನು :

"ಉಲೂಕ! ನಾನು ಹೇಳಲಿರುವ ಮಾತನ್ನೂ ನೀನು ಪುನಃ ಪುನಃ ದುರ್ಯೋಧನನ ಮುಂದೆ ಹೇಳಬೇಕು :

'ದುರ್ಮತಿಯೇ! ನಾಳೆ ಇದೇ ವೇಳೆಗೆ ನೀನು ನಮ್ಮನ್ನು ರಣಭೂಮಿಯಲ್ಲಿ ಸಂಧಿಸುವೆ. ಪುರುಷನಂತೆ ವರ್ತಿಸು. ಮೂಢನೇ! ನೀನಿಂದು ನನ್ನ ವಿಷಯವಾಗಿ ಭಯಪಡದಿರುವುದಕ್ಕೆ ನನಗೆ ಕಾರಣವು ಗೊತ್ತಿದೆ. 'ಪಾಂಡವರು ಕೃಷ್ಣನನ್ನು ಸಾರಥ್ಯಕ್ಕಾಗಿ ಮಾತ್ರವೇ ಇಟ್ಟುಕೊಂಡಿದ್ದಾರೆ.

ಜನಾರ್ದನನು ಯಾವ ಕಾರಣದಿಂದಲೂ ನಮ್ಮೆದುರಾಗಿ ನಿಂತು ಯುದ್ಧಮಾಡುವುದಿಲ್ಲ' – ಎಂಬ ಈ ದೃಢನಂಬಿಕೆಯಲ್ಲವೇ ನೀನು ಭಯಪಡದಿರುವುದಕ್ಕೆ ಕಾರಣ?

ದುರ್ಯೋಧನ! ನಾನು ಯುದ್ಧಮಾಡಬೇಕಾದ ಅವಶ್ಯಕತೆಯೇ ಇಲ್ಲ. ನಾನು ಇಚ್ಛೆಸಿದ್ದೇ ಆದರೆ – ಯಜ್ಞೇಶ್ವರನು ಹುಲ್ಲುಮೆದೆಗಳನ್ನು ಕ್ಷಣಮಾತ್ರದಲ್ಲಿ ಸುಟ್ಟುಬಿಡುವಂತೆ–ನನ್ನ ಕ್ರೋಧಾಗ್ನಿಯಿಂದಲೇ ಸರ್ವರಾಜರನ್ನೂ ಸುಟ್ಟುಬಿಡಬಲ್ಲೆನು. ಆದರೆ ಯುದ್ಧದ ಕಡೆಯವರೆಗೂ ಹೀಗಾಗಕೂಡದೆಂಬುದೇ ನನ್ನ ಇಚ್ಛೆಯಾಗಿದೆ. ಯುಧಿಷ್ಠಿರನ ಆಜ್ಞೆಯಂತೆ ಮಹಾತ್ಮನಾದ, ಜಿತೇಂದ್ರಿಯನಾದ ಅರ್ಜುನನಿಗೆ ಯುದ್ಧಮಾಡುವ ಸಮಯದಲ್ಲಿ ಸಾರಥ್ಯಮಾಡುತ್ತೇನೆ. ನನ್ನ ಸಾರಥ್ಯದ ಪ್ರಭಾವವನ್ನೂ ನೀನು ಬೆಳಗಾಗುತ್ತಲೇ ಕಾಣುವೆ. ಮೂರು ಲೋಕಗಳ ಮೇಲೆ ಹಾರಿದರೂ – ಭೂಮಿಯ ತಳಭಾಗಕ್ಕೆ ಪ್ರವೇಶಿಸಿದರೂ ಅಲ್ಲಿಯೂ ನೀನು ಅರ್ಜುನನ ರಥವನ್ನು ಕಾಣುವೆ. ಭೀಮಸೇನನು ಮಾಡಿರುವ ಪ್ರತಿಜ್ಞೆಯು ವ್ಯರ್ಥಪ್ರತಿಜ್ಞೆಯೆಂದೂ, ಆ ಪ್ರತಿಜ್ಞೆಯು ಕಾರ್ಯರೂಪಕ್ಕೆ ಬಾರದೆಂದೂ – ನೀನು ಭಾವಿಸಿಬಿಟ್ಟಿರುವಂತಿದೆ. ಆದರೆ ನಾನು ನಿಶ್ಚಯವಾಗಿ ಹೇಳುತ್ತೇನೆ. ಭೀಮಸೇನನು ಈಗಾಗಲೇ ದುಃಶಾಸನನ ರಕ್ತವನ್ನು ಕುಡಿದೇಬಿಟ್ಟಿರುವನೆಂದು ಭಾವಿಸು. ಮೂಢ! ಅವನ ಪ್ರತಿಜ್ಞೆಯೆಂದಿಗೂ ವ್ಯರ್ಥಪ್ರತಿಜ್ಞೆ ಯಾಗುವುದಿಲ್ಲ. ನೀನು ಪಾಂಡವರ ವಿಷಯದಲ್ಲಿ ಅನೇಕಕಟುವಚನ ಗಳನ್ನಾಡಿರುವೆ. ಪ್ರತಿಕೂಲಭಾಷಿಯಾದ ನಿನ್ನನ್ನು ಪಾರ್ಥನಾಗಲೀ, ಯುಧಿಷ್ಠಿರನಾಗಲೀ, ಭೀಮಸೇನನಾಗಲೀ ಅಥವಾ ನಕುಲ-ಸಹದೇವರೇ ಆಗಲೀ–ಗಣನೆಗೇ ತೆಗೆದುಕೊಂಡಿಲ್ಲ. ನಿನ್ನ ವಿಷಯದಲ್ಲವರು ನಿರ್ಲಕ್ಷ್ಯ ದಿಂದಿದ್ದುಬಿಟ್ಟಿದ್ದಾರೆ. (ಪ್ರತಿಕೂಲಭಾಷಿಯಾದ ನಿನ್ನನ್ನು ನೋಡುವುದೂ ಇಲ್ಲ.)"*

೧೬೨ನೆಯ ಅಧ್ಯಾಯವು ಮುಗಿಯಿತು.

---

*ಭಂಡಾರ್ಕರ್ ರಿಸರ್ಚ್ ಇನ್‌ಸ್ಟಿಟ್ಯೂಟ್‌ನವರು ಪ್ರಕಟಿಸಿರುವ ಮಹಾಭಾರತದ ಈ ಅಧ್ಯಾಯದಲ್ಲಿ ಕೇವಲ ೧೩ ಶ್ಲೋಕಗಳಿವೆ. ಧರ್ಮರಾಜನು ಕುಪಿತನಾದನೆಂದು

## ಪಂಚಪಾಂಡವರು, ವಿರಾಟ, ದ್ರುಪದ, ಶಿಖಂಡೀ ಮತ್ತು ಧೃಷ್ಟದ್ಯುಮ್ನ ಇವರೆಲ್ಲರ ಸಂದೇಶಗಳನ್ನೂ ಹೊತ್ತು ಉಲೂಕನು ಹಿಂದಿರುಗಿದುದು : ದುರ್ಯೋಧನನು ಯುದ್ಧಕ್ಕೆ ಸಿದ್ಧವಾಗುವಂತೆ ಸೈನಿಕರಿಗೆ ಆಜ್ಞೆಯಿತ್ತುದು

ಸಂಜಯನು ಧೃತರಾಷ್ಟ್ರನನ್ನು ಕುರಿತು ಹೇಳುತ್ತಾನೆ :

“ಭರತರ್ಷಭನೇ! ಶ್ರೀಕೃಷ್ಣನು ಉಲೂಕನೊಡನೆ ಹೀಗೆಂದು ಹೇಳಿದ ನಂತರ, ಉಲೂಕನು ಹೇಳಿದ ದುರ್ಯೋಧನನ ಸಂದೇಶವನ್ನೇ ಮತ್ತೆ ಮತ್ತೆ ಸ್ಮರಿಸಿಕೊಂಡ ಅರ್ಜುನನು ಹೆಚ್ಚು ಕೆಂಪಾಗಿದ್ದ ತನ್ನ ಕಣ್ಣುಗಳಿಂದ ಶಕುನಿಯ ಮಗನಾದ ಉಲೂಕನನ್ನು ದುರ-ದುರನೆ ನೋಡಿದನು. ಮಹಾ ಯಶೋವಂತನಾದ ಗುಡಾಕೇಶನು ಕೇಶವನನ್ನೂ ಒಮ್ಮೆ ನೋಡಿ ತನ್ನ ಸುದೀರ್ಘವಾದ ಬಾಹುವನ್ನು ಮೇಲಕ್ಕೆತ್ತಿ ಉಲೂಕನೊಡನೆ ಮಾತನಾಡಿದನು :

“ಉಲೂಕ! ನಾನು ಹೇಳುವ ಈ ಮಾತುಗಳನ್ನು ದುರ್ಯೋಧನನೊಡನೆ ಹೇಳಬೇಕು.

‘ದುರ್ಯೋಧನ! ನಮ್ಮಣ್ಣನು ಹೇಳಿದಂತೆ :

**ಸ್ವವೀರ್ಯಂ ಯಃ ಸಮಾಶ್ರಿತ್ಯ ಸಮಾಹ್ವಯತಿ ವೈ ಪರಾನ್ ।**
**ಅಭೀತೋ ಯುಧ್ಯತೇ ಶತ್ರೂನ್ಸ ವೈ ಪುರುಷ ಉಚ್ಯತೇ ॥೩॥**

ತನ್ನ ವೀರ್ಯ-ಪರಾಕ್ರಮಗಳನ್ನೇ ಅವಲಂಬಿಸಿ, ನಿರ್ಭೀತನಾಗಿ

---

ಹೇಳಿ ಅವನನ್ನು ವರ್ಣಿಸಿರುವ ಪ್ರಸಂಗವನ್ನು ನೋಡಿದರೆ ಇವುಗಳು ಪ್ರಕ್ಷಿಪ್ತ ಶ್ಲೋಕಗಳಿರಬಹುದೆಂದು ಭಾಸವಾಗುತ್ತದೆ. ನಾವು ಇಟ್ಟುಕೊಂಡಿರುವ ಉಳಿದ ಮೂರು ಪ್ರತಿಗಳಲ್ಲಿಯೂ ಈ ಆನುಪೂರ್ವಿಯೇ ಇರುವುದರಿಂದ ನಾವು ಇದನ್ನೂ ಯಥಾವತ್ತಾಗಿಯೇ ಭಾಷಾಂತರಿಸಿದ್ದೇವೆ.

ಯಾವನು ಶತ್ರುಗಳನ್ನು ಯುದ್ಧಕ್ಕೆ ಆಹ್ವಾನಿಸಿ ಶತ್ರುಗಳೊಡನೆ ಯುದ್ಧ ಮಾಡುತ್ತಾನೆಯೋ–ಅಂತಹವನನ್ನು ಮಾತ್ರವೇ ಪುರುಷನೆಂದು ಹೇಳುತ್ತಾರೆ.

**ಪರವೀರ್ಯಂ ಸಮಾಶ್ರಿತ್ಯ ಯಃ ಸಮಾಹ್ವಯತೇ ಪರಾನ್ ।**
**ಕ್ಷತ್ರಬನ್ಧುರಶಕ್ತತ್ವಾಲ್ಲೋಕೇ ಸ ಪುರುಷಾಧಮಃ ॥೪॥**

ತನ್ನಲ್ಲಿರುವ ದೌರ್ಬಲ್ಯದ ಕಾರಣದಿಂದಾಗಿ ಯಾವನು ಇತರರ ವೀರ್ಯ-ಪರಾಕ್ರಮಗಳನ್ನೇ ಆಶ್ರಯಿಸಿ ಶತ್ರುಗಳನ್ನು ಯುದ್ಧಕ್ಕೆ ಆಹ್ವಾನಿಸುತ್ತಾನೆಯೋ–ಅವನು ಕ್ಷತ್ರಬಂಧುವೇ (ಹೀನಕ್ಷತ್ರಿಯನೇ) ಸರಿ. ಲೋಕದಲ್ಲಿ ಅಂತಹವನನ್ನು ಪುರುಷಾಧಮನೆಂದೂ ಹೇಳುತ್ತಾರೆ.

ದುರ್ಯೋಧನ! ನೀನಿಂದು ಅಂತಹ ಪುರುಷಾಧಮನಾಗಿರುವೆ. ಮತ್ತೊಂದು ವೈಚಿತ್ರ್ಯವೇನೆಂದರೆ : ಯದ್ಯಪಿ ನೀನು ಇತರರ ಪರಾಕ್ರಮವನ್ನೇ ಅವಲಂಬಿಸಿದ್ದರೂ 'ನಾನೇ ಮಹಾಪರಾಕ್ರಮೀ' ಎಂದು ಭಾವಿಸಿರುವೆ. ನೀನೇ ಹೇಡಿಯಾಗಿದ್ದುಕೊಂಡು ಇತರರನ್ನು ಹೇಡಿಗಳೆಂದು ನಿಂದನೆಮಾಡುತ್ತಿರುವೆ.

ರಾಜರುಗಳಲ್ಲಿ ವೃದ್ಧನಾದ, ಎಲ್ಲರಿಗೂ ಹಿತವಾಗಲೆಂಬ ಬುದ್ಧಿಯುಳ್ಳ, ಜಿತೇಂದ್ರಿಯನಾದ, ಮಹಾಪ್ರಾಜ್ಞನಾದ, ಪಿತಾಮಹನಾದ ಭೀಷ್ಮನನ್ನು ದಂಡನಾಯಕನನ್ನಾಗಿ ಮಾಡುವುದರ ಮೂಲಕ ಅವನನ್ನು ಮರಣಕ್ಕೆ ಗುರಿಮಾಡಿ ನೀನೇ ಮಹಾಪರಾಕ್ರಮಿಯೆಂದು ಜಂಬಕೊಚ್ಚಿಕೊಳ್ಳುತ್ತಿರುವೆ. (ನಿನ್ನಲ್ಲಿ ಪರಾಕ್ರಮವೇ ಇರುವುದಾದರೆ ವೃದ್ಧನಾದವನನ್ನು ಸಾಯಗೊಡದೆ ನೀನೇ ದಂಡನಾಯಕತ್ವವನ್ನು ವಹಿಸಬಹುದಾಗಿತ್ತಲ್ಲವೇ?) ಆದರೆ ನೀನು ಗಾಂಗೇಯನನ್ನು ಸೇನಾಪತಿಯನ್ನಾಗಿ ಮಾಡಿರುವುದರ ಕಾರಣವೂ ನಮಗೆ ತಿಳಿಯದೇ ಇಲ್ಲ. ದುರ್ಬುದ್ಧಿಯೇ! ಕುಲಪಾಂಸನನೇ! ನಿನ್ನ ಹೃದಯವನ್ನು ನಾವು ಚೆನ್ನಾಗಿ ಅರಿತಿದ್ದೇವೆ. 'ಪಾಂಡವರು ದಯಾಪರವಶರಾಗಿ ಗಾಂಗೇಯನನ್ನು ಸಂಹರಿಸುವುದಿಲ್ಲ' – ಎಂದು ಭಾವಿಸಿಯೇ ನೀನು ಆ ವೃದ್ಧನನ್ನು ಮುಂದಕ್ಕೆ ತಳ್ಳಿರುವೆ. ಅಲ್ಲವೇ? ಆದರೆ, ದುರ್ಯೋಧನ! ಯಾವನ ಪರಾಕ್ರಮವನ್ನು ಅವಲಂಬಿಸಿ ನೀನು ಬಡಾಯಿಕೊಚ್ಚುತ್ತಿರುವೆಯೋ ಆ

ಭೀಷ್ಮನನ್ನು ಸರ್ವಧನುಷ್ಮಂತರೂ ನೋಡುತ್ತಿರುವಂತೆಯೇ ಮೊದಲು ಸಂಹರಿಸುತ್ತೇನೆ.'

ಉಲೂಕ! ನೀನೀಗಲೇ ಭರತಕುಲಪ್ರದೀಪರಾದ ರಾಜಕುಮಾರರ ಬಳಿಗೆ ಹೋಗಿ ಅವರ ಮಧ್ಯದಲ್ಲಿರುವ ಧೃತರಾಷ್ಟ್ರನ ಮಗನಾದ ದುರ್ಯೋಧನನಿಗೆ ಹೇಳು :

'ದುರ್ಯೋಧನ! ನಿನ್ನ ಮಾತಿಗೆ ಸವ್ಯಸಾಚಿಯಾದ ಅರ್ಜುನನು 'ತಥಾಸ್ತು–ಹಾಗೆಯೇ ಆಗಲಿ.; ನಿನ್ನ ಮಾತಿನಂತೆಯೇ ನಾನು ಯುದ್ಧದಲ್ಲಿ ನನ್ನ ಪೌರುಷವನ್ನು ತೋರಿಸುತ್ತೇನೆ' – ಎಂಬುದಾಗಿ ಹೇಳಿದನೆಂದು ಹೇಳು. ಈ ರಾತ್ರಿಯು ಕಳೆದೊಡನೆಯೇ ಯುದ್ಧವು ಆರಂಭವಾಗಿ ಬಿಡುವುದು.

'ದುರ್ಯೋಧನ! ನಾನು ಹಿಂದೆ ಹೇಳಿದಂತೆ ಭೀಷ್ಮನು ನಿನಗೆ ಕೊಟ್ಟಿರುವ ಆಶ್ವಾಸನೆಯೇ ನಿನ್ನ ಅಹಂಕಾರವನ್ನು ಹೆಚ್ಚಿಸಿಬಿಟ್ಟಿದೆ. ಅದಕ್ಕಾಗಿಯೇ ನೀನು ಬಾಯಿಗೆ ಬಂದಂತೆ ದೂತನ ಮೂಲಕ ಹೇಳಿಕಳುಹಿಸಿರುವೆ. ಸತ್ಯಪ್ರತಿಜ್ಞನಾದ, ಮಹಾಪರಾಕ್ರಮಿಯಾದ, ಸತ್ಯಸಂಧನಾದ ಭೀಷ್ಮನು ಕುರುರಾಜರ ಮಧ್ಯದಲ್ಲಿ ನಿಮ್ಮೆಲ್ಲರನ್ನೂ ಹರ್ಷಿತರನ್ನಾಗಿ ಮಾಡುತ್ತಾ ಏನು ಹೇಳಿದನೆಂಬುದನ್ನು ನಾವೂ ತಿಳಿದುಕೊಂಡಿದ್ದೇವೆ. 'ಸೃಂಜಯರ ಸೇನಾಸಮೂಹವನ್ನೇ ನಾನು ಧ್ವಂಸಮಾಡಿಬಿಡುತ್ತೇನೆ. ಶಾಲ್ವದೇಶದ ಸೇನೆಯನ್ನು ಸಂಹರಿಸುವ ಭಾರವೂ ನನಗಿರಲಿ. ದ್ರೋಣಾಚಾರ್ಯರ ಸಹಾಯವಿಲ್ಲದೆಯೇ ನಾನು ಈ ಭೂಮಂಡಲವನ್ನೇ ಧ್ವಂಸಮಾಡಿಬಿಡಬಲ್ಲೆನು. ಆದುದರಿಂದ ಕೇವಲ ಪಾಂಡವರಿಗಾಗಿ ನೀನು ಭಯಪಡಬೇಕಾದ ಕಾರಣವಿಲ್ಲ. ಅವರಿಂದ ನಿನಗೆ ಖಂಡಿತವಾಗಿಯೂ ಭಯವಿಲ್ಲ' – ಎಂದಲ್ಲವೇ ಭೀಷ್ಮನು ಹೇಳಿದುದು?

ಭೀಷ್ಮನು ನಿನ್ನನ್ನು ಆಶ್ವಾಸಿಸಲು ಹೀಗೆಂದು ಹೇಳಿದೊಡನೆಯೇ ನೀನು ಉಬ್ಬಿಹೋದೆ. ಅಖಂಡಸಾಮ್ರಾಜ್ಯವೇ ನಿನ್ನ ವಶವಾಗಿಬಿಟ್ಟಿತೆಂದು ಹಿರಿಹಿಗ್ಗಿದೆ. ಭೀಷ್ಮನೇ ಹೀಗೆ ಪ್ರತಿಜ್ಞೆಮಾಡಿದ ಮೇಲೆ ಪಾಂಡವರು ಆಪತ್ತಿಗೊಳಗಾದರೆಂದೇ ನಿಶ್ಚಯಿಸಿಬಿಟ್ಟೆ. ಅಲ್ಲವೇ? ದುರ್ಯೋಧನ! ಅಹಂಕಾರ

ಭರಿತನಾಗಿರುವ ನೀನು ಮುಂದೆ ನಿನಗೆ ಒದಗಬಹುದಾದ ಅನರ್ಥವನ್ನು ಕುರಿತು ಚಿಂತಿಸುತ್ತಿಲ್ಲ. ಎಲ್ಲವೂ ನಿನ್ನ ಎಣಿಕೆಯಂತೆಯೇ ನಡೆದುಹೋಗುವುದೆಂಬ ಭರವಸೆಯು ನಿನಗಿದೆ. ಈ ಕಾರಣದಿಂದಲೇ ನಾನು ಆ ನಿನ್ನ ಪರಿವಾರದಲ್ಲಿ ಕುರುವೃದ್ಧನಾದ ಭೀಷ್ಮನನ್ನು ನಿನ್ನ ಸಮಕ್ಷದಲ್ಲಿಯೇ ಮೊದಲು ಸಂಹರಿಸುತ್ತೇನೆ.

ದುರ್ಯೋಧನ! ಸೂರ್ಯೋದಯವಾಗುತ್ತಲೇ ಸೇನಾಯುಕ್ತನಾಗಿ, ಧ್ವಜಯುಕ್ತನಾಗಿ, ರಥಯುಕ್ತನಾಗಿ ಸರ್ವಪ್ರಕಾರದಿಂದಲೂ ಜಾಗರೂಕ ನಾಗಿದ್ದು ಸತ್ಯಸಂಧನಾದ ಆ ಭೀಷ್ಮನನ್ನು ಸಂರಕ್ಷಿಸು. ನಾನಾದರೋ ಮುಳುಗಿಹೋಗುತ್ತಿರುವ ನಿಮಗೆ ದ್ವೀಪಪ್ರಾಯನಾಗಿರುವ ಭೀಷ್ಮನನ್ನು ನೀವೆಲ್ಲರೂ ನೋಡುತ್ತಿರುವಾಗಲೇ ನನ್ನ ತೀಕ್ಷ್ಣವಾದ ಬಾಣಗಳ ಪ್ರಯೋಗದಿಂದ ರಥದಿಂದ ಕೆಳಕ್ಕೆ ಬೀಳಿಸುತ್ತೇನೆ. ನಾಳೆ ಬೆಳಗಾಗುತ್ತಲೇ ನಾನು ಬಾಣಗಳ ಬಲೆಯಿಂದ ಪಿತಾಮಹನನ್ನು ಮುಚ್ಚಿರುವುದನ್ನು ನೋಡಿ ದುರ್ಯೋಧನನು ಆತ್ಮಪ್ರಶಂಸೆಯ ಪರಿಣಾಮವೇನೆಂಬುದನ್ನು ಅರಿತು ಕೊಳ್ಳುತ್ತಾನೆ. ಕ್ಷುದ್ರವಾದುದನ್ನೇ ಸದಾ ಚಿಂತಿಸುವ, ಅಧರ್ಮಜ್ಞನಾದ, ನಿತ್ಯವೈರಿಯಾದ, ಪಾಪಬುದ್ಧಿಯಾದ, ಕ್ರೂರಕರ್ಮಿಯಾದ, ನಿನ್ನ ತಮ್ಮನಾದ ದುಃಶಾಸನನ ವಿಷಯದಲ್ಲಿ– ಕ್ರುದ್ಧನಾದ ಭೀಮಸೇನನು ಸಭಾಮಧ್ಯದಲ್ಲಿ ಯಾವ ಪ್ರತಿಜ್ಞೆಯನ್ನು ಮಾಡಿರುವನೋ – ಆ ಪ್ರತಿಜ್ಞೆಯು ಸತ್ಯಪ್ರತಿಜ್ಞೆಯಾಗಿ ಪರಿಣಮಿಸುವುದನ್ನು ಶೀಘ್ರದಲ್ಲಿಯೇ ಕಾಣುವೆ.

ಅಭಿಮಾನ (ತಾನೇ ಎಲ್ಲರಿಗೂ ಶ್ರೇಷ್ಠನಾದವನೆಂಬ ಬುದ್ಧಿ), ದರ್ಪ (ಇತರರನ್ನು ಪರಾಜಯಗೊಳಿಸುವ ಸಾಮರ್ಥ್ಯವು ತನ್ನಲ್ಲಿರುವುದೆಂಬ ಬುದ್ಧಿ), ಕ್ರೋಧ (ಶತ್ರುಗಳ ವಿಷಯದಲ್ಲಿ ಕಾರಣವಿಲ್ಲದೆಯೇ ಕಿಡಿ-ಕಿಡಿಯಾಗುವುದು), ಪಾರುಷ್ಯ (ನಿಷ್ಠುರವಾದ ಮಾತುಗಳನ್ನಾಡುವುದು) ನೈಷ್ಠುರ್ಯ (ಸತ್ಪುರುಷರೊಡನೆ ಸ್ನೇಹಬೆಳೆಸದಿರುವುದು), ಅನಲೇಪ (ಇತರರನ್ನು ತಿರಸ್ಕಾರಭಾವದಿಂದ ಕಾಣುವುದು), ಆತ್ಮಸಂಭಾವನೆ (ತಾನೇ ಸರ್ವಜ್ಞನು ; ಮಹಾಶೂರನು–ಎಂದು ಭಾವಿಸಿಕೊಳ್ಳುವುದು), ನೃಶಂಸತಾ (ನಿರ್ದಯತ್ವ) ತೈಕ್ಷ್ಣ್ಯ (ವಿಷಹಾಕುವುದು ; ಮಲಗಿರುವವನ ತಲೆಯ

ಮೇಲೆ ಬಂಡೆಯನ್ನು ಹಾಕುವುದು–ಇವೇ ಮೊದಲಾದ ಕ್ರೂರಕರ್ಮಗಳು), ಧರ್ಮವಿದ್ವೇಷಣೆ (ಧರ್ಮಕ್ಕೆ ವಿರೋಧವಾದ ಕಾರ್ಯಮಾಡುವುದು ; ಮೋಸದ ಪಗಡೆಯಾಟ–ಇದೇ ಮೊದಲಾದುವು), ಅಧರ್ಮ (ಪ್ರತಿಜ್ಞೆಯನ್ನು ಮುಗಿಸಿಬಂದರೂ ರಾಜ್ಯವನ್ನು ಹಿಂದಕ್ಕೆ ಕೊಡದಿರುವುದು), ಅತಿವಾದ (ಚುಚ್ಚುಮಾತು ; ಧರ್ಮನಿಷ್ಠರ ಮೇಲೆ ಅಧರ್ಮಿಷ್ಠರೆಂಬ ಆರೋಪ ಹೊರೆಸುವುದು), ವೃದ್ಧಾತಿಕ್ರಮಣ (ವೃದ್ಧರಾದ ಭೀಷ್ಮ-ಧೃತರಾಷ್ಟ್ರ-ವಿದುರಾದಿಗಳ ಹಿತಕರವಾದ ಮಾತುಗಳನ್ನು ಕೇಳದಿರುವುದು), ದರ್ಶನ (ಕರ್ಣಾದಿಗಳು ವಿಜಯವನ್ನು ಗಳಿಸಿಯೇ ತೀರುವರೆಂಬ ಸಿದ್ಧಾಂತ), ಚಕ್ರ (ಅತ್ಯಧಿಕವಾದ ಸೇನಾಸಂಗ್ರಹ), ಅಪನಯ (ಮೋಸಮಾರ್ಗದಿಂದ ನಮ್ಮಗ್ರಳ ದೂರೀಕರಣ) – ಈ ಎಲ್ಲ ಅನ್ಯಾಯಗಳ ಮತ್ತು ಅತ್ಯಾಚಾರಗಳ ಘೋರಫಲವನ್ನು ನೀನು ಬಹುಬೇಗ ಕಾಣಲಿರುವೆ. ನರಾಧಮನೇ! ವಾಸುದೇವದ್ವಿತೀಯನಾದ ವಾಸುದೇವನ ಸಹಾಯಪಡೆದಿರುವ ನಾನು ಕೋಪಗೊಂಡಿರುವಾಗ ನಿನಗೆ ರಾಜ್ಯವನ್ನು ಉಳಿಸಿಕೊಳ್ಳುವ ಮತ್ತು ಜೀವಸಹಿತವಾಗಿ ಉಳಿದುಕೊಳ್ಳುವ ಆಸೆಯಾದರೂ ಯಾವ ಕಾರಣದಿಂದ ಉಳಿದಿದೆ? ನಿನಗೆ ಜೀವಿತದ ಮತ್ತು ರಾಜ್ಯದ ಆಶೆಯೇ ಉಳಿಯಲು ಶಕ್ಯವಿಲ್ಲ. ಭೀಷ್ಮ, ಆಚಾರ್ಯ ದ್ರೋಣರು, ಸೂತಪುತ್ರನಾದ ಕರ್ಣ–ಇವರೆಲ್ಲರೂ ನನ್ನಿಂದ ಸಂಹೃತರಾಗಿ ಕೆಳಗೆ ಬಿದ್ದನಂತರ ನಿನಗೆ ಜೀವಿತದಲ್ಲಿ, ರಾಜ್ಯದಲ್ಲಿ ಮತ್ತು ನಿನ್ನ ಮಕ್ಕಳಲ್ಲಿ ನಿರಾಶೆಯುಂಟಾಗುತ್ತದೆ. ತಮ್ಮಂದಿರ ಮತ್ತು ಮಕ್ಕಳ ನಿಧನವನ್ನು ಕೇಳಿ, ಭೀಮಸೇನನಿಂದ ಸಂಹೃತನಾಗುವ ಸಮಯದಲ್ಲಿ ನೀನು ನಿನ್ನ ಜೀವನದಲ್ಲಿ ಮಾಡಿದ ದುಷ್ಕೃತ್ಯಗಳನ್ನು ಸ್ಮರಿಸುವೆ.'

ಶಕುನಿಪುತ್ರ! ಉಲೂಕ! ನನಗೆ ಎರಡನೆಯ ಬಾರಿ ಪ್ರತಿಜ್ಞೆ ಮಾಡುವ ವಿಷಯವೇ ತಿಳಿಯದು. ಒಂದು ಬಾರಿ ಮಾಡಿಬಿಟ್ಟರೆ ಅದು ಕಾರ್ಯಗತವಾದಂತೆಯೇ ಸರಿ. ಎರಡನೆಯ ಬಾರಿ ಹೇಳಿದುದನ್ನೇ ಹೇಳುವ ಅವಶ್ಯಕತೆಯಿಲ್ಲ. ನಾನು ನಿನ್ನೊಡನೆ ಸತ್ಯದ ಮೇಲೆ ಆಣೆಯಿಟ್ಟು ಹೇಳುತ್ತೇನೆ. ನಾನು ನಿನ್ನೊಡನೆ ಹೇಳಿದುದೆಲ್ಲವೂ ಸತ್ಯವಾಗಿಯೇ ಪರಿಣಮಿಸುತ್ತದೆ."

ಮಹಾರಾಜ! ಅರ್ಜುನನು ಉಲೂಕನೊಡನೆ ಹೀಗೆ ಹೇಳಿದನಂತರ ಯುಧಿಷ್ಠಿರನೂ ಜೂಜುಕೋರನಾದ ಶಕುನಿಯ ಮಗನಾದ ಉಲೂಕನೊಡನೆ ಹೇಳಿದನು :

“ಮಗು! ಉಲೂಕ! ನೀನು ಸುಯೋಧನನ ಬಳಿಗೆ ಹೋಗಿ ನನ್ನ ಈ ಮಾತನ್ನು ಹೇಳು: ‘ನಿನ್ನ ದುರಾಚಾರದಿಂದ ನನ್ನಲ್ಲಿರುವ ಸದಾಚಾರವನ್ನು ತಿಳಿದುಕೊಳ್ಳಲು ನೀನು ಖಂಡಿತವಾಗಿಯೂ ಸಮರ್ಥನಲ್ಲ. ಆದರೆ ನಾನು ನಮ್ಮಿಬ್ಬರ ಅಂತರವನ್ನು ತಿಳಿದಿರುತ್ತೇನೆ. ಸತ್ಯ ಮತ್ತು ಅಸತ್ಯಗಳ ಅಂತರವನ್ನು ತಿಳಿದಿರುತ್ತೇನೆ. ಕೀಟ ಮತ್ತು ಇರುವೆಗಳಿಗೂ ಕೆಟ್ಟದಾಗುವುದನ್ನು ನಾನು ಇಚ್ಛಿಸುವುದಿಲ್ಲ. ಹೀಗಿರುವಾಗ ಜ್ಞಾತಿಗಳ ವಧೆಯನ್ನು ನಾನು ಎಂದಾದರೂ ಯಾವ ಕಾರಣದಿಂದಲಾದರೂ ಇಚ್ಛಿಸುವೆನೇ? ನನ್ನ ಜ್ಞಾತಿಯಾದ ನಿನಗೆ ಪ್ರಾಪ್ತವಾಗುವ ಮಹಾಕಷ್ಟವನ್ನು ಉಪೇಕ್ಷಿಸುವುದೆಂತು?–ಎಂದು ಯೋಚಿಸಿಯೇ ನಾನು ಕೇವಲ ಐದು ಗ್ರಾಮಗಳನ್ನಾದರೂ ಪಡೆದುಕೊಳ್ಳಲು ಸಿದ್ಧನಾಗಿದ್ದೆನು. ಆದರೆ ಕಾಮಾಭಿಭೂತನಾದ ನೀನು ನಿನ್ನ ಮೌಢ್ಯದಿಂದಾಗಿ ಆ ಐದು ಗ್ರಾಮಗಳನ್ನೂ ಕೊಡಲು ಒಪ್ಪಲಿಲ್ಲ. ಅಂತೆಯೇ ವಾಸುದೇವನ ಹಿತಕರವಾದ ಮಾತನ್ನೂ ಕೇಳಲಿಲ್ಲ. ಈಗ ಆ ಎಲ್ಲ ವಿಷಯಗಳನ್ನೂ ಹೇಳುವುದರಿಂದ ಪ್ರಯೋಜನವಾದರೂ ಏನಿದೆ? ನಿನ್ನ ಬಂಧುಗಳೊಡನೆ ಸೇರಿಕೊಂಡು ಯುದ್ಧಮಾಡು.’

ಉಲೂಕ! ನನಗೆ ಅಪ್ರಿಯವಾದ ಕಾರ್ಯವನ್ನೇ ಮಾಡುವುದರಲ್ಲಿ ಹೆಚ್ಚಿನ ಆಸಕ್ತಿಯುಳ್ಳ ದುರ್ಯೋಧನನಿಗೆ ಹೇಳು – ‘ನಿನ್ನ ಸಂದೇಶವನ್ನು ಕೇಳಿದುದಾಯಿತು. ಅದರ ಅಭಿಪ್ರಾಯವನ್ನೂ ಗ್ರಹಿಸಿದ್ದಾಯಿತು. ನಿನ್ನ ಅಭಿಮತವು ಹೇಗಿರುವುದೋ ಹಾಗೆಯೇ ಅದು ನಡೆದುಹೋಗಲಿ.’ ”

ಮಹಾರಾಜ! ಅನಂತರ ಭೀಮಸೇನನು ಪುನಃ ಉಲೂಕನನ್ನು ಕುರಿತು ಹೇಳಿದನು :

“ಉಲೂಕ! ದುರ್ಮತಿಯಾದ, ಪಾಪಪೂರುಷನಾದ, ಶಠನಾದ, ಮೋಸಗಾರನಾದ, ಪಾಪಿಷ್ಠನಾದ, ದುರಾಚಾರಿಯಾದ ಸುಯೋಧನನನ್ನು ಕುರಿತು ಈ ಮಾತನ್ನು ಹೇಳು :

'ನರಾಧಮ! 'ಗೃಧ್ರೋದರೇ ವಾ ವಸ್ತವ್ಯಂ ಪುರೇ ವಾ ನಾಗ ಸಾಹ್ವಯೇ – ಯುದ್ಧದಲ್ಲಿ ಸತ್ತುಹೋಗಿ ರಣಹದ್ದಿನ ಹೊಟ್ಟೆಯನ್ನಾದರೂ ಸೇರಬೇಕು ಅಥವಾ ಯುದ್ಧದಲ್ಲಿ ಗೆದ್ದು ಹಸ್ತಿನಾಪುರದಲ್ಲಾದರೂ ವಾಸಮಾಡಬೇಕು' – ಈ ಪ್ರತಿಜ್ಞೆಯನ್ನು ನಾನು ಹದಿಮೂರು ವರ್ಷಗಳ ಹಿಂದೆಯೇ ಸಭಾಮಧ್ಯದಲ್ಲಿ ಮಾಡಿರುತ್ತೇನೆ. ನಾನೀಗಲೂ ಸತ್ಯದ ಮೇಲೆ ಆಣೆಯಿಟ್ಟು ಹೇಳುತ್ತೇನೆ. ನಾನು ಆ ಪ್ರತಿಜ್ಞೆಯನ್ನು ಸತ್ಯವಾಗಿಯೂ ಪರಿಪಾಲಿಸುತ್ತೇನೆ. ಸುಯೋಧನ! ಯುದ್ಧದಲ್ಲಿ ದುಃಶಾಸನನನ್ನು ಸಂಹರಿಸಿ ಅವನ ರಕ್ತವನ್ನು ನಾನು ಕುಡಿಯುತ್ತೇನೆ. ಅನಂತರ ನಿನ್ನ ಸಹೋದರರೆಲ್ಲರನ್ನೂ ಸಂಹರಿಸುತ್ತೇನೆ. ಕಡೆಯದಾಗಿ ನಿನ್ನ ತೊಡೆಗಳನ್ನು ನನ್ನ ಗದೆಯಿಂದ ಭೇದಿಸಿ ನಿನ್ನನ್ನೂ ಸಂಹರಿಸುತ್ತೇನೆ. ಒಟ್ಟಿನಲ್ಲಿ ಹೇಳುವುದಾದರೆ :

**ಸರ್ವೇಷಾಂ ಧಾರ್ತರಾಷ್ಟ್ರಾಣಾಮಹಂ ಮೃತ್ಯುಃ ಸುಯೋಧನ ॥**

ಸುಯೋಧನ! ಧೃತರಾಷ್ಟ್ರನ ಎಲ್ಲ ಮಕ್ಕಳಿಗೂ ನಾನೇ ಮೃತ್ಯುವು. ನಾನು ಧೃತರಾಷ್ಟ್ರನ ಮಕ್ಕಳಿಗೆ ಮೃತ್ಯುವಾಗಿರುವಂತೆ ಅಭಿಮನ್ಯುವು ಎಲ್ಲ ಕೌರವರಾಜಪುತ್ರರಿಗೂ ಮೃತ್ಯುವಾಗುತ್ತಾನೆ. ಇದರಲ್ಲಾವ ಸಂಶಯವೂ ಇಲ್ಲ. ದುರ್ಯೋಧನ! ನನ್ನ ಪರಮಾದ್ಭುತವಾದ ಕರ್ಮದಿಂದ ನಿನ್ನನ್ನು ಸಂತೋಷಗೊಳಿಸುತ್ತೇನೆ. ಈ ವಿಷಯದಲ್ಲಿ ನೀನು ಯೋಚಿಸಬೇಕಾದ ಕಾರಣವಿಲ್ಲ. ನಿನಗೆ ಇನ್ನೂ ಒಂದು ಮಾತು ಹೇಳುವುದಿದೆ. ಹೇಳುತ್ತೇನೆ, ಕೇಳು ; ಸಕಲಸೋದರರೊಡನೆ ನಿನ್ನನ್ನು ಸಂಹರಿಸಿದನಂತರ ಧರ್ಮರಾಜನ ಸಮಕ್ಷದಲ್ಲಿಯೇ ನನ್ನ ಕಾಲಿನಿಂದ ನಿನ್ನ ತಲೆಯನ್ನು ಮೆಟ್ಟುತ್ತೇನೆ.'

ಧೃತರಾಷ್ಟ್ರ ಮಹಾರಾಜ! ಭೀಮನು ಹೀಗೆ ಹೇಳಿದನಂತರ ನಕುಲನು ಉಲೂಕನನ್ನು ಕುರಿತು ಹೇಳಿದನು :

ಉಲೂಕ! ಧೃತರಾಷ್ಟ್ರನ ಮಗನಾದ, ಕುರುಕುಲೋತ್ಪನ್ನನಾದ ದುರ್ಯೋಧನನಿಗೆ ನಾನು ಹೇಳುವ ಈ ಮಾತುಗಳನ್ನು ಹೇಳು :

'ಕೌರವ್ಯ! ನೀನು ನನಗೆ ಹೇಳುವಂತೆ ಉಲೂಕನ ಮೂಲಕ ಹೇಳಿ ಕಳುಹಿಸಿದ್ದ ಮಾತುಗಳನ್ನು ನಾನು ಯಥಾವತ್ತಾಗಿ ಕೇಳಿ ತಿಳಿದು

ಕೊಂಡೆನು. ನನಗೆ ನೀನು ಅನುಶಾಸನಮಾಡಿರುವಂತೆಯೇ ನಾನು ಎಲ್ಲ ಕಾರ್ಯಗಳನ್ನೂ ಮಾಡಿ ಮುಗಿಸುತ್ತೇನೆ.'

ಮಹಾರಾಜ! ನಕುಲನು ಹೀಗೆ ಹೇಳಿದನಂತರ ಸಹದೇವನೂ ಉಲೂಕನೊಡನೆ ಹೇಳಿದನು :

'ದುರ್ಯೋಧನ! 'ಪಾಂಡವರನ್ನು ನಿಮಿಷಮಾತ್ರದಲ್ಲಿ ಜಯಿಸಿಬಿಡುತ್ತೇನೆ' – ಎಂಬ ನಿನ್ನ ಅಹಂಕಾರದ ಬುದ್ಧಿಯು ಯಾವುದಿರುವುದೋ–ಅದು ವ್ಯರ್ಥವಾಗಿ ಪರಿಣಮಿಸುತ್ತದೆ. ನಿನ್ನ ಯೋಜನೆಗಳೊಂದೂ ಫಲಿಸುವುದಿಲ್ಲ. ಈಗ ನಮ್ಮ ಕ್ಲೇಶವನ್ನು ಕಂಡು ಹೃಷ್ಟನಾಗಿ ಆತ್ಮಪ್ರಶಂಸೆಯನ್ನು ಮಾಡಿಕೊಳ್ಳುತ್ತಿರುವ ನೀನು ಅತ್ಯಲ್ಪಕಾಲ ದಲ್ಲಿಯೇ ಪುತ್ರ-ಜ್ಞಾತಿ-ಬಾಂಧವಸಹಿತನಾಗಿ ದುಃಖಿಸುವೆ.'

ಅನಂತರ ವೃದ್ಧರಾದ ವಿರಾಟ-ದ್ರುಪದರು ಉಲೂಕನಿಗೆ ಹೇಳಿದರು :

"ಉಲೂಕ! ನೀನು ದುರ್ಯೋಧನನೊಡನೆ ಹೀಗೆಂದು ಹೇಳಬೇಕು :

'ನೀನು ನಮ್ಮ ದಾಸಭಾವದ ವಿಷಯವಾಗಿ ಎತ್ತಿಹೇಳುವ ಆವಶ್ಯಕತೆಯೇ ಇಲ್ಲ. ಸಾಧುವಿನ ಅಥವಾ ಸತ್ಪುರುಷನ ವಿಷಯದಲ್ಲಿ ದಾಸಭಾವದಿಂದಿರಬೇಕೆಂಬುದೇ ನಮ್ಮಿಬ್ಬರ ಅಭಿಮತವೂ ಆಗಿದೆ. ನಾವಿಬ್ಬರೂ ಸಾಧುವಾದ ಯುಧಿಷ್ಠಿರನ ವಿಷಯದಲ್ಲಿ ದಾಸಭಾವದಿಂದಿ ದ್ದೇವೆಯೇ ಅಥವಾ ಅದಾಸಭಾವದಿಂದಿದ್ದೇವೆಯೇ ಎಂಬುದನ್ನೂ ಯಾರು ಯಾರಲ್ಲಿ ಯಾವ ವಿಧವಾದ ಪೌರುಷವಿದೆ ಎಂಬುದನ್ನೂ ನಾಳೆಯೇ ನೀನು ಕಾಣಬಹುದಾಗಿದೆ.'

ವಿರಾಟ-ದ್ರುಪದರು ಹೀಗೆ ಹೇಳಿದನಂತರ ಶಿಖಂಡಿಯು ಉಲೂಕನಿಗೆ ಹೇಳಿದನು :

"ಉಲೂಕ! ಪಾಪಕಾರ್ಯಗಳಲ್ಲಿಯೇ ಸರ್ವದಾ ಆಸಕ್ತನಾಗಿರುವ ದುರ್ಯೋಧನನನ್ನು ಕುರಿತು ನನ್ನ ಪರವಾಗಿ ಹೀಗೆಂದು ಹೇಳಬೇಕು :

'ದುರ್ಯೋಧನರಾಜೇಂದ್ರ! ದಾರುಣವಾದ ಕರ್ಮಮಾಡುವ (ಭಯಂಕರವಾಗಿ ಯುದ್ಧಮಾಡುವ) ನನ್ನನ್ನು ನೀನು ನಾಳಿನ ಯುದ್ಧದಲ್ಲಿ ಕಾಣಲಿರುವೆ. ಯಾವನ ಪರಾಕ್ರಮದ ಆಶ್ರಯವನ್ನು ಪಡೆದು ನೀನು

ಯುದ್ಧದಲ್ಲಿ ವಿಜಯಿಯಾಗುವೆನೆಂಬ ಭರವಸೆಯಿಂದಿರುವೆಯೋ ಅಂತಹ ಪಿತಾಮಹನಾದ ಭೀಷ್ಮನನ್ನು ನಾನು ಯುದ್ಧದಲ್ಲಿ ಕೆಳಕ್ಕೆ ಕೆಡಹುತ್ತೇನೆ. ನಿಶ್ಚಯವಾಗಿ ಹೇಳುತ್ತೇನೆ–ಭೀಷ್ಮನ ವಧೆಮಾಡಲೆಂದೇ ಮಹಾತ್ಮನಾದ ಬ್ರಹ್ಮನು ನನ್ನನ್ನು ಸೃಷ್ಟಿಸಿದ್ದಾನೆ. ಸಕಲಧನುರ್ಧಾರಿಗಳೂ ನೋಡುತ್ತಿರುವಂತೆಯೇ ನಾನು ಭೀಷ್ಮನನ್ನು ಸಂಹರಿಸುತ್ತೇನೆ.'

ಅನಂತರ ಧೃಷ್ಟದ್ಯುಮ್ನನೂ ಶಕುನಿಯ ಮಗನನ್ನು ಕುರಿತು ಹೇಳಿದನು :

"ಉಲೂಕ! ಧೃತರಾಷ್ಟ್ರನ ಮಗನಾದ ಸುಯೋಧನನಿಗೆ ನೀನು ನನ್ನ ಈ ಮಾತುಗಳನ್ನು ಹೇಳಬೇಕು :

'ದುರ್ಯೋಧನ! ನಾನು ಸೇನಾಗಣಯುಕ್ತರಾದ ಮತ್ತು ಬಂಧು-ಬಾಂಧವಸಹಿತರಾದ ದ್ರೋಣರನ್ನು ಸಂಹರಿಸುತ್ತೇನೆ. ಹಿಂದಿನವರ ಮಹಾಚರಿತ್ರೆಯ ಅನುಕರಣವನ್ನು ನಾನು ಅವಶ್ಯವಾಗಿ ಮಾಡಬೇಕಾಗಿದೆ. (ದ್ರೋಣವಧೆಯಿಂದ ಪಿತೃವೈರದ ಪರಿಸಮಾಪ್ತಿಯಾಗಬೇಕಾಗಿದೆ.) ಬೇರೆ ಯಾರೂ ಮಾಡಲಾಗದಂತಹ ಅದ್ಭುತಕಾರ್ಯವನ್ನು ನಾನು ನಾಳಿನ ಯುದ್ಧದಲ್ಲಿ ಮಾಡಿತೋರಿಸುತ್ತೇನೆ.'

ಮಹಾರಾಜ! ಅನಂತರ ಧರ್ಮರಾಜನು ತನ್ನ ದಾಯಾದರ ಮೇಲಿನ ಕರುಣೆಯ ಕಾರಣದಿಂದಾಗಿ ಮಹತ್ತ್ವಪೂರ್ಣವಾದ ಈ ಮಾತುಗಳನ್ನು ಹೇಳಿದನು :

**ನಾಹಂ ಜ್ಞಾತಿವಧಂ ರಾಜನ್ಕಾಮಯೇಯಂ ಕಥಂಚನ ॥೪೮॥**

'ನಾನು ಜ್ಞಾತಿಗಳ ವಧೆಮಾಡಲು ಖಂಡಿತವಾಗಿಯೂ ಇಚ್ಛೆಪಡುವುದಿಲ್ಲ. ದುರ್ಬುದ್ಧೇ! ಸುಯೋಧನ! ನಿನ್ನೊಬ್ಬನ ದೋಷದಿಂದಾಗಿ ಈ ಎಲ್ಲವೂ ಪ್ರಾಪ್ತವಾಗಿದೆ. (ಸರ್ವವಿನಾಶದ ಕಾಲವು ಸನ್ನಿಹಿತವಾಗಿದೆ.)' ಹೀಗೆಂದು ದುರ್ಯೋಧನನಿಗೆ ಹೇಳುವಂತೆ ಯುಧಿಷ್ಠಿರನು ಹೇಳಿ ಉಲೂಕನನ್ನು ಕುರಿತು ಪುನಃ ಹೇಳಿದನು :

'ಉಲೂಕ! ಕಾಲಯಾಪನೆಮಾಡದೇ ಶೀಘ್ರವಾಗಿ ದುರ್ಯೋಧನನ ಶಿಬಿರಕ್ಕೆ ಹೋಗು. ನೀನು ಇಚ್ಛಿಸುವೆಯಾದರೆ ನೀನು ನಮ್ಮ ಕಡೆಯಲ್ಲಾ

ದರೂ ಇರಬಹುದು. ನಾವೂ ನಿನ್ನ ಬಂಧುಗಳೇ ಆಗಿರುತ್ತೇವೆ. ನಿನಗೆ ಮಂಗಳವಾಗಲಿ.'

ಮಹಾರಾಜ! ಅನಂತರದಲ್ಲಿ ಉಲೂಕನು ಧರ್ಮಪುತ್ರನಾದ ಯುಧಿಷ್ಠಿರನ ಅಪ್ಪಣೆಯನ್ನು ಪಡೆದು ದುರ್ಯೋಧನರಾಜನಿದ್ದೆಡೆಗೆ ಹೊರಟುಹೋದನು.

ಉಲೂಕನು ದುರ್ಯೋಧನನ ಶಿಬಿರಕ್ಕೆ ಹೋಗಿ ಅವನನ್ನು ಸಂಧಿಸಿ ಅವನೊಡನೆ ಅರ್ಜುನನ ಸಂದೇಶವನ್ನು ಯಥಾವತ್ತಾಗಿ ಹೇಳಿದನು. ವಾಸುದೇವ-ಭೀಮ-ಧರ್ಮರಾಜರ ಪೌರುಷದ ಮಾತುಗಳನ್ನೂ ಯಥಾವತ್ತಾಗಿ ಹೇಳಿದನು. ನಕುಲ, ವಿರಾಟ, ದ್ರುಪದ, ಸಹದೇವ, ಧೃಷ್ಟದ್ಯುಮ್ನ, ಶಿಖಂಡಿ, ಕೇಶವಾರ್ಜುನರು–ಈ ಎಲ್ಲರ ಮಾತುಗಳೆಲ್ಲವನ್ನೂ ಉಲೂಕನು ವಿವರಿಸಿ ದುರ್ಯೋಧನನಿಗೆ ಹೇಳಿದನು.

ಜೂಜುಕೋರನ ಮಗನಾದ ಉಲೂಕನ ಮಾತುಗಳನ್ನು ಕೇಳಿದೊಡನೆಯೇ ಭರತರ್ಷಭನಾದ ದುರ್ಯೋಧನನು ದುಃಶಾಸನನನ್ನೂ, ಶಕುನಿಯನ್ನೂ ಮತ್ತು ಕರ್ಣನನ್ನೂ ಕುರಿತು ಹೇಳಿದನು :

"ಬಂಧುಗಳೇ! ರಾಜರಿಗೂ ಸೈನ್ಯಗಳಿಗೂ, ಮಿತ್ರರ ಸೈನ್ಯಗಳಿಗೂ ಈ ಕೂಡಲೇ ಆಜ್ಞೆಮಾಡಿರಿ.

ಎಲ್ಲ ಸೈನಿಕರೂ ನಾಳೆ ಬೆಳಗಾಗುವ ಮೊದಲಾಗಿಯೇ ಯುದ್ಧಕ್ಕೆ ಸಿದ್ಧರಾಗಿ ರಣಾಂಗಣದಲ್ಲಿರಬೇಕು."

ಮಹಾರಾಜ! ದುರ್ಯೋಧನನ ಮಾತಿನಂತೆ ಕರ್ಣನು ತನ್ನ ದೂತರಿಗೆ ಆಜ್ಞಾಪಿಸಿದನು. ಕರ್ಣನಿಂದ ಆಜ್ಞಪ್ತರಾದ ದೂತರಲ್ಲಿ ಕೆಲವರು ರಥಗಳಲ್ಲಿಯೂ, ಕೆಲವರು ಒಂಟೆಗಳ ಮೇಲೂ ಮತ್ತೆ ಕೆಲವರು ಹೇಸರಕತ್ತೆಗಳನ್ನೇರಿಯೂ, ಇನ್ನು ಕೆಲವರು ವೇಗಶಾಲಿಗಳಾದ ಕುದುರೆಗಳನ್ನು ಹತ್ತಿಯೂ–ಸೇನೆಯ ಎಲ್ಲ ವಿಭಾಗಗಳಿಗೂ ಹೋಗಿ ಕರ್ಣನ ಆಜ್ಞೆಯನ್ನು ವಿವರಿಸಿ ಹೇಳಿದರು. ಕರ್ಣನ ಶಾಸನಾನುಸಾರವಾಗಿ ಬೆಳಗಾಗುವ ಮೊದಲೇ ಸೇನಾಸಮೇತರಾಗಿ ರಣಭೂಮಿಯಲ್ಲಿರುವಂತೆ ಸಕಲರಾಜರಿಗೂ ದೂತರು ಹೇಳಿದರು."

೧೬೩ನೆಯ ಅಧ್ಯಾಯವು ಮುಗಿಯಿತು.

## ಪಾಂಡವರ ಸೈನ್ಯವು ಯುದ್ಧಭೂಮಿಗೆ ಆಗಮಿಸಿದುದು : ತಮ-ತಮಗೆ ಯೋಗ್ಯರಾದ ಪ್ರತಿಸ್ಪರ್ಧಿಗಳನ್ನಾರಿಸಿಕೊಳ್ಳುವಂತೆ ಧೃಷ್ಟದ್ಯುಮ್ನನು ತನ್ನ ಕಡೆಯವರಿಗೆ ನಿರ್ದೇಶಿಸಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ಕುಂತೀಪುತ್ರನಾದ ಯುಧಿಷ್ಠಿರನು ಉಲೂಕನ ಮೂಲಕ ದುರ್ಯೋಧನನ ಅಭಿಪ್ರಾಯವೇನೆಂಬುದನ್ನು ಖಚಿತಪಡಿಸಿ ಕೊಂಡನಂತರ ಸೇನಾಪತಿಯಾಗಿ ಅಭಿಷಿಕ್ತನಾಗಿದ್ದ ಧೃಷ್ಟದ್ಯುಮ್ನನ ನೇತೃತ್ವ ದಲ್ಲಿ ಸೇನೆಯನ್ನು ಹೊರಡಿಸಿದನು. ಆ ಸೈನ್ಯಸಮೂಹವು ಕಾಲಾಳುಗಳು, ಗಜ, ತುರಗ, ರಥ—ಈ ನಾಲ್ಕು ವಿಧವಾದ ಬಲದಿಂದಲೂ ಕೂಡಿದ್ದು ಭಯಂಕರವಾಗಿಯೂ ಭೂಮಿಯಂತೆ ಅವಿಕಂಪಿಯಾಗಿಯೂ (ಸುಸ್ಥಿರ ವಾಗಿಯೂ) ಇದ್ದಿತು. ಭೀಮಾರ್ಜುನರೇ ಮೊದಲಾದ ಮಹಾರಥರಿಂದ ರಕ್ಷಿತವಾಗಿದ್ದಿತು. ಧೃಷ್ಟದ್ಯುಮ್ನನ ಅಧೀನದಲ್ಲಿದ್ದ ಆ ಮಹಾಸೈನ್ಯವು ದುರ್ಗಮವಾಗಿಯೂ, ಪ್ರಶಾಂತವಾದ ಸಾಗರೋಪಮವಾಗಿಯೂ ಇದ್ದಿತು. ಆ ಮಹಾಸೇನೆಯ ಮುಂಭಾಗದಲ್ಲಿ ಮಹಾಧನುರ್ಧರನಾದ, ಯುದ್ಧೋನ್ಮತ್ತನಾದ, ಪಾಂಚಾಲರಾಜಕುಮಾರನಾದ ಧೃಷ್ಟದ್ಯುಮ್ನನಿದ್ದು ಚತುರ್ವಿಧಸೈನ್ಯಗಳನ್ನೂ ಸುವ್ಯವಸ್ಥಿತವಾಗಿ ನಡೆಸಿಕೊಂಡು ಹೋಗುತ್ತಿದ್ದನು.

ಸೇನಾನಾಯಕನಾದ ಧೃಷ್ಟದ್ಯುಮ್ನನು—ತನ್ನ ಕಡೆಯಲ್ಲಿ ಯಾರಿಗೆ ಎಷ್ಟರಮಟ್ಟಿಗೆ ಬಲವಿದೆ, ಎಷ್ಟರಮಟ್ಟಿನ ಯುದ್ಧೋತ್ಸಾಹವಿದೆ – ಎಂಬು ದನ್ನರಿತು ಯಾರು ಯಾರನ್ನು ಎದುರಿಸಬೇಕೆಂಬುದನ್ನು ಅತಿರಥ-ಮಹಾ ರಥರಿಗೆ ನಿರ್ದೇಶಿಸಿದನು. ಅರ್ಜುನನಿಗೆ ಸೂತಪುತ್ರನಾದ ಕರ್ಣನೊಡನೆ ಯುದ್ಧಮಾಡುವಂತೆಯೂ, ಭೀಮನಿಗೆ ದುರ್ಯೋಧನನೊಡನೆ ಯುದ್ಧ ಮಾಡುವಂತೆಯೂ, ಧೃಷ್ಟಕೇತುವಿಗೆ ಶಲ್ಯನೊಡನೆ ಯುದ್ಧಮಾಡುವಂತೆಯೂ, ಉತ್ತಮೌಜಸನಿಗೆ ಕೃಪಾಚಾರ್ಯರೊಡನೆ ಯುದ್ಧಮಾಡುವಂತೆಯೂ, ನಕುಲನಿಗೆ ಅಶ್ವತ್ಥಾಮನೊಡನೆ ಯುದ್ಧಮಾಡುವಂತೆಯೂ, ಶೈಬ್ಯನಿಗೆ

ಕೃತವರ್ಮನೊಡನೆ ಯುದ್ಧಮಾಡುವಂತೆಯೂ, ವೃಷ್ಣಿಕುಲಾವತಂಸನಾದ ಸಾತ್ಯಕಿಗೆ ಸೈಂಧವನೊಡನೆ ಯುದ್ಧಮಾಡುವಂತೆಯೂ, ಶಿಖಂಡಿಗೆ ಭೀಷ್ಮ ನೊಡನೆ ಯುದ್ಧಮಾಡುವಂತೆಯೂ–ಸೇನಾಪತಿಯಾದ ಧೃಷ್ಟದ್ಯುಮ್ನನು ಆದೇಶವನ್ನಿತ್ತು–ಸಹದೇವನಿಗೆ ಶಕುನಿಯೊಡನೆ ಯುದ್ಧಮಾಡುವಂತೆಯೂ, ಚೇಕಿತಾನನಿಗೆ ಶಲನನ್ನು ಎದುರಿಸುವಂತೆಯೂ, ದ್ರೌಪದಿಯ ಐವರು ಮಕ್ಕಳಿಗೆ ತ್ರಿಗರ್ತರೊಡನೆ ಯುದ್ಧಮಾಡುವಂತೆಯೂ ಆದೇಶವನ್ನಿತ್ತನು. ಅಭಿಮನ್ಯುವು ಯುದ್ಧದಲ್ಲಿ ಅರ್ಜುನನಿಗಿಂತಲೂ ಹೆಚ್ಚಿನ ಸಾಮರ್ಥ್ಯವನ್ನು ತೋರಿಸುವನೆಂಬುದನ್ನು ಮನಗಂಡ ಧೃಷ್ಟದ್ಯುಮ್ನನು – ಅವನಿಗೆ ಕರ್ಣನ ಮಗನಾದ ವೃಷಸೇನನೊಡನೆಯೂ ಮತ್ತು ಉಳಿದೆಲ್ಲ ರಾಜರೊಡನೆಯೂ ಯುದ್ಧಮಾಡುವಂತೆ ನಿರ್ದೇಶಿಸಿದನು. ಈ ರೀತಿಯಾಗಿ ಯಾರು-ಯಾರ ಮೇಲೆ ಯುದ್ಧಮಾಡಬೇಕೆಂಬುದನ್ನು ವಿಭಾಗಮಾಡಿಕೊಟ್ಟನಂತರ ಪ್ರಧಾನ ದಂಡನಾಯಕನಾದ, ಪ್ರಜ್ವಲಿಸುವ ಯಜ್ಞೇಶ್ವರನಿಗೆ ಸಮಾನವಾಗಿ ಕಾಣುತ್ತಿದ್ದ, ಮಹಾಧನುರ್ಧರನಾದ ಧೃಷ್ಟದ್ಯುಮ್ನನು ತನ್ನ ಪಾಲಿಗೆ ದ್ರೋಣರನ್ನಿಟ್ಟುಕೊಂಡನು. ಯುದ್ಧೈಕಮನಸ್ಕನಾಗಿದ್ದ, ಮೇಧಾವಿಯಾದ ಧೃಷ್ಟದ್ಯುಮ್ನನು ಪಾಂಡವರ ವಿಜಯಸಾಧನೆಗಾಗಿ ಎಲ್ಲ ಸೈನ್ಯವನ್ನೂ ವಿಧಿವತ್ತಾದ ಮತ್ತು ಯಥೋಚಿತವಾದ ವ್ಯೂಹಗಳಲ್ಲಿ ನಿಲ್ಲಿಸಿ, ತಾನೂ ಸಹ ಯುದ್ಧಸನ್ನದ್ಧನಾಗಿ ಸಮರಾಂಗಣದಲ್ಲಿ ಸಮಸ್ಥಿತಿಯಲ್ಲಿ ನಿಂತನು.”

೧೬೪ನೆಯ ಅಧ್ಯಾಯವು ಮುಗಿಯಿತು.

೧೬೫ನೆಯ ಅಧ್ಯಾಯ ರಥಾತಿರಥಸಂಖ್ಯಾನಪರ್ವ

## ಭೀಷ್ಮನು ದುರ್ಯೋಧನನ ಅಪೇಕ್ಷೆಯಂತೆ ಕೌರವಪಕ್ಷದಲ್ಲಿದ್ದ ರಥರ ಮತ್ತು ಅತಿರಥರ ಪರಿಚಯವನ್ನು ಮಾಡಿಕೊಟ್ಟುದು

ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ :

“ಸಂಜಯ! ಯುದ್ಧದಲ್ಲಿ ಭೀಷ್ಮನನ್ನು ಸಂಹಾರಮಾಡುವೆನೆಂದು

ಅರ್ಜುನನು ಪ್ರತಿಜ್ಞೆಮಾಡಿದ ವಿಷಯವನ್ನು ಉಲೂಕನು ಹೇಳಿದನಂತರ ದುರ್ಯೋಧನನೇ ಮೊದಲಾದ ನನ್ನ ಮೂರ್ಖಪುತ್ರರು ಏನು ಮಾಡಿದರು? ಅವರ ಪ್ರತಿಕ್ರಿಯೆಯೇನು? ವಾಸುದೇವಸಹಾಯನಾದ, ದೃಢಧನ್ವನಾದ ಅರ್ಜುನನು ತಂದೆಯಾದ ಭೀಷ್ಮನನ್ನು ರಣಾಂಗಣದಲ್ಲಿ ಸಂಹರಿಸಿಯೇ ಬಿಟ್ಟನೆಂಬ ಭಾವನೆಯು ನನಗುಂಟಾಗಿದೆ. ಪಾರ್ಥನ ಆ ಪ್ರತಿಜ್ಞಾವಚನವನ್ನು ಉಲೂಕನಿಂದ ಕೇಳಿದ, ಅಪರಿಮಿತಪ್ರಾಜ್ಞನಾದ, ಮಹಾಧನುರ್ಧರನಾದ, ಯೋಧರಲ್ಲಿ ಶ್ರೇಷ್ಠನಾದ ಭೀಷ್ಮನೇನು ಹೇಳಿದನು? ಕೌರವಕುಲದ ರಕ್ಷಣಾಭಾರವನ್ನು ವಹಿಸಿರತಕ್ಕ, ಮಹಾಬುದ್ಧಿವಂತನಾದ, ಮಹಾಪರಾಕ್ರಮಿಯಾದ ಗಾಂಗೇಯನು ಸೇನಾಪತಿಯಾದನಂತರ ಏನು ಮಾಡಿದನು?"

ಜನಮೇಜಯ! ಧೃತರಾಷ್ಟ್ರನ ಪ್ರಶ್ನೆಗೆ ಸಂಜಯನು, ಅಮಿತ ತೇಜಸ್ಕನಾದ ಭೀಷ್ಮನು ಈ ಸಮಯದಲ್ಲಿ ಹೇಳಿದ ಮಾತುಗಳನ್ನೂ ಕೈಗೊಂಡ ಕಾರ್ಯಗಳನ್ನೂ ವಿವರಿಸಿ ಯಥಾವತ್ತಾಗಿ ಉತ್ತರಿಸಿದನು.

"ಧೃತರಾಷ್ಟ್ರಮಹಾರಾಜ! ಭೀಷ್ಮನು ಕೌರವರ ಕಡೆಯಲ್ಲಿ ಪ್ರಧಾನ ದಂಡನಾಯಕನಾಗಿ ನಿಯಮಿತನಾದನಂತರ, ದುರ್ಯೋಧನನ ಸಂತೋಷವನ್ನು ಹೆಚ್ಚಿಸುತ್ತಿರುವನೋ ಎಂಬಂತೆ ಅವನನ್ನು ಕುರಿತು ಈ ಮಾತುಗಳನ್ನು ಹೇಳಿದನು :

**ನಮಸ್ಕೃತ್ಯ ಕುಮಾರಾಯ ಸೇನಾನ್ಯೇ ಶಕ್ತಿಪಾಣಯೇ ।**
**ಅಹಂ ಸೇನಾಪತಿಸ್ತೇಽದ್ಯ ಭವಿಷ್ಯಾಮಿ ನ ಸಂಶಯಃ ॥೭॥**

"ಮಹಾರಾಜ! ದೇವಸೇನಾನಾಯಕನಾದ, ಶಕ್ತ್ಯಾಯುಧವನ್ನು ಧರಿಸಿರುವ ಕುಮಾರಸ್ವಾಮಿಗೆ (ಕಾರ್ತಿಕೇಯನಿಗೆ) ಮೊದಲು ನಮಸ್ಕರಿಸಿ, ನಾನು ನಿನ್ನ ಸೈನ್ಯದ ಪ್ರಧಾನದಂಡನಾಯಕನಾಗುತ್ತೇನೆ. ನಾನು ನಿನ್ನ ಸೇನಾಪತಿಯಾಗುವುದರಲ್ಲಿ ಸಂಶಯವೇನೂ ಇರುವುದಿಲ್ಲ. ಸೈನ್ಯಕ್ಕೆ ಸಂಬಂಧಿಸಿದಂತೆ ಎಲ್ಲ ವಿಷಯಗಳೂ ನನಗೆ ತಿಳಿದಿವೆ. ಅನೇಕವಿಧವಾದ ವ್ಯೂಹಗಳನ್ನೂ ನಾನು ರಚಿಸಬಲ್ಲೆನು. ವ್ಯೂಹರಚನೆಯಲ್ಲಿಯೂ ನಾನು ನಿಷ್ಣಾತನಾಗಿರುತ್ತೇನೆ. ವೇತನವನ್ನು ಪಡೆಯುತ್ತಿರುವ ನಮ್ಮ ಸೈನಿಕರಿಂದಲೂ, ವೇತನವನ್ನು

ಪಡೆದುಕೊಳ್ಳದಿರುವ ನಮ್ಮ ಮಿತ್ರರ ಸೈನಿಕರಿಂದಲೂ ಕೆಲಸಮಾಡಿಸಿಕೊಳ್ಳು ವುದು ಹೇಗೆಂಬ ವಿಷಯವೂ ನನಗೆ ಚೆನ್ನಾಗಿ ತಿಳಿದಿದೆ. 'ಯುದ್ಧಕ್ಕೆ ಯಾವ ಸಮಯದಲ್ಲಿ ಹೇಗೆ ಪ್ರಯಾಣಮಾಡಬೇಕು? ಯಾರು ಯಾರೊಡನೆ ಯುದ್ಧಮಾಡಬೇಕು? ಶತ್ರುಪಕ್ಷದವರು ಪ್ರಯೋಗಿಸುವ ಮಹಾಸ್ತ್ರಗಳನ್ನು ಹೇಗೆ ಉಪಶಮನಗೊಳಿಸಬೇಕು?' - ಇವೇ ಮುಂತಾದ ಯುದ್ಧ ಸಂಬಂಧವಾದ ಎಲ್ಲ ವಿಷಯಗಳನ್ನೂ ನಾನು, ದೇವಗುರುವಾದ ಬೃಹಸ್ಪತಿಯು ತಿಳಿದುಕೊಂಡಿರುವಂತೆಯೇ ತಿಳಿದುಕೊಂಡಿರುತ್ತೇನೆ. ನನಗೆ ಯುದ್ಧವಿಜ್ಞಾನದಲ್ಲಿ ಬೃಹಸ್ಪತಿಗೆ ಸಮಾನವಾದ ಜ್ಞಾನವಿದೆ. ದೇವ, ಮನುಷ್ಯ, ಗಂಧರ್ವ– ಈ ಮೂರೂ ವಿಧವಾದ ಸೈನ್ಯವ್ಯೂಹರಚನೆಯಲ್ಲಿ ನಾನು ನಿಷ್ಣಾತನಾಗಿದ್ದೇನೆ. ಈ ಮೂರೂ ವಿಧವಾದ ವ್ಯೂಹಗಳನ್ನು ರಚಿಸಿ ಪಾಂಡವರನ್ನು ಭ್ರಾಂತರನ್ನಾಗಿ ಮಾಡುತ್ತೇನೆ. ನೀನಿನ್ನು ಚಿಂತಿಸುವ ಕಾರಣವಿಲ್ಲ. ನಿನ್ನ ಭಯವು ದೂರವಾಗಲಿ."

ಮಹಾರಾಜ! ಅದಕ್ಕುತ್ತರವಾಗಿ ನಿನ್ನ ಮಗನಾದ ದುರ್ಯೋಧನನು ಹೀಗೆ ಹೇಳಿದನು :

**ವಿದ್ಯತೇ ಮೇ ನ ಗಾಙ್ಗೇಯ ಭಯಂ ದೇವಾಸುರೇಷ್ವಪಿ ।**
**ಸಮಸ್ತೇಷು ಮಹಾಬಾಹೋ ಸತ್ಯಮೇತದ್ಬ್ರವೀಮಿ ತೇ ॥೧೨॥**

"ಪಿತಾಮಹ! ನನಗೆ ದೇವತೆಗಳ ವಿಷಯದಲ್ಲಾಗಲೀ, ಅಸುರರ ವಿಷಯದಲ್ಲಾಗಲೀ-ಸ್ವಲ್ಪವಾದರೂ ಭಯವಿಲ್ಲ. ದೇವಾಸುರ-ಮನುಷ್ಯ ರೆಲ್ಲರೂ ಕೂಡಿ ಬಂದರೂ ನನಗೆ ಯಾವವಿಧವಾದ ಭಯವೂ ಇಲ್ಲ. ಮಹಾಬಾಹುವೇ! ನಾನು ಸತ್ಯಸಂಗತಿಯನ್ನು ನಿನ್ನೊಡನೆ ಹೇಳುತ್ತೇನೆ. ಏಕಾಕಿಯಾದ ನಾನೊಬ್ಬನೇ ದೇವಾಸುರ-ಮನುಷ್ಯರಿಗೂ ಭಯಪಡದಿರು ವಾಗ, ದುರ್ಧರ್ಷನಾದ ನೀನು ನನ್ನ ಪ್ರಧಾನದಂಡನಾಯಕನಾಗಿರುವಾಗ, ಯುದ್ಧವನ್ನು ಶ್ಲಾಘಿಸುವ (ಯುದ್ಧಪ್ರಿಯರಾದ) ಪುರುಷವ್ಯಾಘ್ರರಾದ ದ್ರೋಣಾ ಚಾರ್ಯರು ಯುದ್ಧಸನ್ನದ್ಧರಾಗಿ ನಿಂತಿರುವಾಗ – ನನಗೆ ಭಯವುಂಟಾಗಲು ಕಾರಣವೇನಿದೆ? ನಾನೇಕೆ ಭಯಪಡಲಿ? ಪುರುಷವ್ಯಾಘ್ರರಾದ ನೀವಿಬ್ಬರೂ ನನಗೆ ವಿಜಯಗಳಿಸಿಕೊಡಲು ಬದ್ಧಕಟಿಗಳಾಗಿ ನಿಂತಿರುವಾಗ

ನನಗೆ ದುರ್ಲಭವಾದುದು ಯಾವುದೂ ಇರುವುದಿಲ್ಲ. ದೇವರಾಜ್ಯ ವನ್ನಾದರೂ ನಾನು ನಿಮ್ಮಿಬ್ಬರ ಬೆಂಬಲದಿಂದ ಪಡೆದುಕೊಳ್ಳಬಲ್ಲೆನು. ಇದು ನಿಶ್ಚಯ, ಪಿತಾಮಹ!

ಕೌರವೋತ್ತಮ! ನನಗೆ ನಿನ್ನಿಂದ ಒಂದು ವಿಷಯವನ್ನು ಕೇಳಿ ತಿಳಿದುಕೊಳ್ಳುವ ಆಶಯವಿದೆ. ನಮ್ಮಲ್ಲಿ ರಥರು ಎಷ್ಟು ಮಂದಿ ಇದ್ದಾರೆ? ನಮ್ಮ ಶತ್ರುಗಳಲ್ಲಿ ಎಷ್ಟು ಮಂದಿ ಇದ್ದಾರೆ? – ಇದನ್ನು ನಾನು ಸಮಗ್ರವಾಗಿ ತಿಳಿಯಬೇಕೆಂದಿದ್ದೇನೆ. ಅತಿರಥರು ನಮ್ಮಲ್ಲಿ ಮತ್ತು ಅವರಲ್ಲಿ ಎಷ್ಟು ಮಂದಿ ಇದ್ದಾರೆಂಬುದನ್ನು ತಿಳಿಯುವ ಇಚ್ಛೆಯೂ ಇದೆ. ಪಿತಾಮಹನು ನಮ್ಮ ಮತ್ತು ಶತ್ರುಪಕ್ಷದವರ ಬಲಾಬಲಗಳ ಪರಿಗಣನೆಯಲ್ಲಿ ಬಹಳ ಕುಶಲನಾಗಿದ್ದಾನೆ. ಎರಡು ಪಕ್ಷಗಳ ವಿಷಯವೂ ನಮ್ಮ ತಾತನಿಗೆ ಸಂಪೂರ್ಣವಾಗಿ ತಿಳಿದಿದೆ. ಆದುದರಿಂದ, ಭೀಷ್ಮಪಿತಾಮಹ! ನನ್ನ ಸಂಗಡಿಗರಾದ ಎಲ್ಲ ರಾಜರೊಡನೆ ನಾನು ಈ ಎರಡು ವಿಷಯಗಳನ್ನೂ ನಿನ್ನಿಂದ ಕೇಳಿ ತಿಳಿದುಕೊಳ್ಳುವ ಇಚ್ಛೆಯಿಂದಿರುತ್ತೇನೆ, ದಯಮಾಡಿ ಹೇಳು."

"ಗಾಂಧಾರೇ! ರಾಜೇಂದ್ರ! ನಿನ್ನ ಆಶಯದಂತೆಯೇ ನಿನಗೆ ಈ ವಿಷಯವನ್ನು ಯಥಾವತ್ತಾಗಿ ಹೇಳುತ್ತೇನೆ. ನಮ್ಮ ಪಕ್ಷದಲ್ಲಿರುವ ರಥರೆಷ್ಟು? ಅತಿರಥರು ಯಾರು? ಎಲ್ಲವನ್ನೂ ವಿವರಿಸಿ ಹೇಳುತ್ತೇನೆ. ನಿನ್ನ ಸೈನ್ಯದಲ್ಲಿರುವ ರಥಿಗಳ ಸಂಖ್ಯೆ ಅಗಣಿತ ; ಸಾವಿರ-ಹತ್ತುಸಾವಿರ-ಲಕ್ಷ-ಕೋಟಿಯವರೆಗೂ ಹೋಗುತ್ತದೆ. ಆದರೆ ಅದರಲ್ಲಿ ಪ್ರಮುಖರಾದ ರಥರ ನಾಮಧೇಯಗಳನ್ನು ಮಾತ್ರ ಹೇಳುತ್ತೇನೆ.

ಮೊದಲನೆಯದಾಗಿ : ಉದಾರನಾದ ನೀನು ಮತ್ತು ದುಃಶಾಸನನೇ ಮೊದಲಾದ ನಿನ್ನ ಅನುಜರು ಒಟ್ಟು ನೂರು ಮಂದಿ ಶ್ರೇಷ್ಠ ರಥರಾಗಿರುವಿರಿ. ನೀವೆಲ್ಲರೂ ಅಸ್ತ್ರವಿದ್ಯೆಯನ್ನು ತಿಳಿದವರಾಗಿರುವಿರಿ. ಛೇದನ-ಭೇದನಗಳಲ್ಲಿ ಕುಶಲರಾಗಿರುವಿರಿ. ರಥದ ಮೇಲೆ ಮತ್ತು ಆನೆಯ ಮೇಲೆ ಕುಳಿತು ಯುದ್ಧಮಾಡುವ ಸಾಮರ್ಥ್ಯವು ನಿಮಗಿದೆ. ಗದೆ, ಪ್ರಾಸಾಯುಧ ಮತ್ತು ಕತ್ತಿ-ಗುರಾಣಿಗಳನ್ನು ಹಿಡಿದು ಯುದ್ಧಮಾಡುವುದರಲ್ಲಿಯೂ ನೀವು ಕುಶಲ ರಾಗಿರುವಿರಿ. ನೀವು ರಥಸಂಚಲನೆಯಲ್ಲಿಯೂ ಅಸ್ತ್ರಪ್ರಹಾರದಲ್ಲಿಯೂ

ನಿಪುಣರಾಗಿರುವಿರಿ. ಅಸ್ತ್ರವಿದ್ಯೆಯನ್ನು ತಿಳಿದವರಾಗಿರುವಿರಿ ಮತ್ತು ಭಾರವಾದ ವಸ್ತುವನ್ನು ಎತ್ತುವುದರಲ್ಲಿಯೂ ಸಮರ್ಥರಾಗಿರುವಿರಿ. ನೀವು ಧನುರ್ಬಾಣವಿದ್ಯೆಯನ್ನು ದ್ರೋಣರಿಂದಲೂ, ಕೃಪರಿಂದಲೂ ಅಭ್ಯಾಸಮಾಡಿರುವಿರಿ. ಅವರ ಸಚ್ಛಿಷ್ಯರು ನೀವು. ಪಾಂಡವರೊಡನೆ ದ್ವೇಷಕಟ್ಟಿಕೊಂಡಿರುವ ಮನಸ್ವಿಗಳಾದ ಧೃತರಾಷ್ಟ್ರನ ಎಲ್ಲ ಮಕ್ಕಳೂ ಸೇರಿ ಯುದ್ಧದುರ್ಮದರಾದ ಪಾಂಚಾಲರನ್ನು ಸಂಹರಿಸುವಿರಿ. ಭರತಶ್ರೇಷ್ಠನೇ! ಹಾಗೆಯೇ ನಿನ್ನ ಸೇನೆಗೆ ಪ್ರಧಾನದಂಡನಾಯಕನಾಗಿರುವ ನಾನೂ ಕೂಡ ಪಾಂಡವರ ಪರಾಕ್ರಮವನ್ನು ಪ್ರಯೋಜನವಿಲ್ಲದಂತೆ ಮಾಡಿ ಶತ್ರುಗಳನ್ನು ಧ್ವಂಸಮಾಡುತ್ತೇನೆ. ನನ್ನ ಗುಣಗಳು ಅಥವಾ ಪರಾಕ್ರಮವೆಷ್ಟಿರುವು ದೆಂಬುದನ್ನು ನಾನೇ ಹೇಳಿಕೊಳ್ಳಲು ನನಗೆ ಇಚ್ಛೆಯಿಲ್ಲ. ನನ್ನ ಪರಾಕ್ರಮವೆಷ್ಟೆಂಬುದು ನಿನಗೇ ತಿಳಿದಿದೆ.

ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಭೋಜವಂಶೀಯನಾದ ಕೃತವರ್ಮನು ನಿನ್ನ ಸೇನೆಯಲ್ಲಿ ಅತಿರಥನಾಗಿರುತ್ತಾನೆ. (ಅಮಿತಾನ್ಯೋಧಯೇದ್ಯಸ್ತು **ಸಂಪ್ರೋಕ್ತೋSತಿರಥಸ್ತು** ಸಃ – ಅಸಂಖ್ಯಾತಯೋಧರನ್ನು ಏಕಕಾಲದಲ್ಲಿ ಎದುರಿಸಿ ನಿಂತು ಯುದ್ಧಮಾಡುವ ಸಾಮರ್ಥ್ಯವುಳ್ಳವನು ಅತಿರಥನೆಂದು ಕರೆಯಲ್ಪಡುತ್ತಾನೆ.)

ಈ ಕೃತವರ್ಮನು ಯುದ್ಧದಲ್ಲಿ ನಿನ್ನ ಅಭೀಷ್ಟವನ್ನು ನೆರವೇರಿಸಿ ಕೊಡುತ್ತಾನೆಂಬುದರಲ್ಲಿ ಸಂಶಯವೇ ಇಲ್ಲ. ಮಹಾ-ಮಹಾಶಸ್ತ್ರವೇತ್ತ ರಿಂದಲೂ ಇವನು ಜಯಿಸಲಾಗದವನು. ಎಷ್ಟೇ ದೂರದ ಲಕ್ಷ್ಯಕ್ಕಾದರೂ ಗುರಿಯಿಟ್ಟು ಬಾಣಪ್ರಯೋಗಮಾಡಲು ಸಮರ್ಥನಾಗಿದ್ದಾನೆ. ದೃಢವಾದ ಆಯುಧವನ್ನು ಧರಿಸಿರುವ ಈ ಕೃತವರ್ಮನು–ಮಹೇಂದ್ರನು ದಾನವರನ್ನು ಸಂಹರಿಸಿದಂತೆ–ನಿನ್ನ ಶತ್ರುಪಕ್ಷದ ಸೇನೆಯನ್ನು ಅಗಣಿತಸಂಖ್ಯೆಯಲ್ಲಿ ಸಂಹರಿಸುತ್ತಾನೆ.

ಮಹಾಧನುಸ್ಸನ್ನು ಧರಿಸಿರುವ, ಮದ್ರರಾಜನಾದ ಶಲ್ಯನನ್ನೂ ಅತಿ ರಥನೆಂದು ನಾನು ಭಾವಿಸಿದ್ದೇನೆ. ಇವನು ಪ್ರತಿಯೊಂದು ಯುದ್ಧದಲ್ಲಿಯೂ ವಾಸುದೇವನೊಡನೆಯೇ ಸ್ಪರ್ಧಿಸುತ್ತಾನೆ. ತನ್ನ ಭಾಗಿನೇಯರಾದ ಪಾಂಡವ

ರನ್ನು ಬಿಟ್ಟು ನಿನ್ನ ಕಡೆಗೆ ಬಂದಿರುತ್ತಾನೆ. ಮಹಾರಥರಾದ ಪಾಂಡವರೊಡನೆ ಇವನು ಯುದ್ಧಮಾಡುತ್ತಾನೆ. ಸಮುದ್ರದ ಅಲೆಗಳಿಗೆ ಸಮಾನವಾದ ಬಾಣಗಳ ಸಮೂಹದಿಂದ ಶತ್ರುಗಳನ್ನು ಹಾರಿಸಿಬಿಡುತ್ತಿರುವನೋ ಎಂಬಂತೆ ಶಲ್ಯನು ಬಹುಭಯಂಕರವಾಗಿ ಯುದ್ಧಮಾಡುತ್ತಾನೆ.

(ಮಹಾರಥನ ಲಕ್ಷಣ :

**ಏಕೋ ದಶಸಹಸ್ರಾಣಿ ಯೋಧಯೇದ್ಯಸ್ತು ಧನ್ವಿನಾಮ್ ।**
**ಶಸ್ತ್ರಶಾಸ್ತ್ರಪ್ರವೀಣಶ್ಚ ವಿಜ್ಞೇಯಃ ಸ ಮಹಾರಥಃ ॥**

ಏಕಾಕಿಯಾಗಿ ಹತ್ತುಸಾವಿರ ಧನುರ್ಧಾರಿಗಳಾದ ಯೋಧರನ್ನು ಎದುರಿಸಿ ಯುದ್ಧಮಾಡುವ ಸಾಮರ್ಥ್ಯವುಳ್ಳವನೂ, ಶಸ್ತ್ರವಿದ್ಯೆಯಲ್ಲಿ ಮತ್ತು ಶಾಸ್ತ್ರಗಳಲ್ಲಿ ಪ್ರಾವೀಣ್ಯವುಳ್ಳವನೂ-ಮಹಾರಥನೆನಿಸಿಕೊಳ್ಳುತ್ತಾನೆ.)

ಅಸ್ತ್ರವಿದ್ಯಾಪಾರಂಗತನಾದ, ಸೋಮದತ್ತನ ಮಗನಾದ, ನಿನಗೆ ಅತ್ಯಂತಹಿತೈಷಿಯಾದ ಮತ್ತು ಮಿತ್ರನಾದ ಭೂರಿಶ್ರವಸನು ರಥಗಳೊಡೆಯರಿಗೇ ಒಡೆಯನಾಗಿದ್ದಾನೆ. ಇವನು ತನ್ನ ಭುಜಬಲ-ಪರಾಕ್ರಮಗಳಿಂದ ನಿನ್ನ ಶತ್ರುಗಳ ಅಪಾರಸೈನ್ಯವನ್ನು ನಾಶಪಡಿಸುತ್ತಾನೆ. ಮಹಾರಾಜ! ಸಿಂಧುರಾಜನಾದ ಜಯದ್ರಥನು ಇಬ್ಬರು ರಥಿಕರಿಗೆ ಸಮಾನವಾದ ಪರಾಕ್ರಮವುಳ್ಳವನೆಂಬುದು ನನ್ನ ಅಭಿಪ್ರಾಯವಾಗಿದೆ. ಪರಾಕ್ರಮಿಯಾದ ಮತ್ತು ರಥಿಕರಲ್ಲಿ ಶ್ರೇಷ್ಠನಾದ ಜಯದ್ರಥನು ಪಾಂಡವರೊಡನೆ ವೀರಾವೇಶದಿಂದ ಯುದ್ಧಮಾಡುತ್ತಾನೆ. ಇವನು ದ್ರೌಪದಿಯನ್ನು ಹರಣಮಾಡಲು ಹೋದಾಗ ಪಾಂಡವರ ಕೈಗೆ ಸಿಕ್ಕಿಬಿದ್ದು ಅವರಿಂದ ಬಹುವಾದ ಕ್ಲೇಶವನ್ನು ಅನುಭವಿಸಿರುತ್ತಾನೆ. ಶತ್ರುಗಳನ್ನು ನಾಶಮಾಡುವ ಸಾಮರ್ಥ್ಯವುಳ್ಳ ಈ ಜಯದ್ರಥನು ಅಂದು ತನಗೆ ಪಾಂಡವರಿಂದಾದ ಕ್ಲೇಶವನ್ನೂ ಮತ್ತು ಅವಮಾನವನ್ನೂ ಸ್ಮರಿಸಿಕೊಂಡು ಅದಕ್ಕೆ ಪ್ರತೀಕಾರಮಾಡಲು ಪಾಂಡವರೊಡನೆ ಯುದ್ಧಮಾಡುತ್ತಾನೆ. ದ್ರೌಪದಿಯನ್ನು ಹರಣಮಾಡಲು ಹೋಗಿ ಪಾಂಡವರಿಂದ ಅವಮಾನಿತನಾದ ಸಮಯದಲ್ಲಿ, ಅವರ ಮೇಲೆ ಸೇಡುತೀರಿಸಿಕೊಳ್ಳುವ ಸಲುವಾಗಿ ಘೋರವಾದ ತಪಸ್ಸನ್ನು ಮಾಡಿ, ಪಾಂಡವರೊಡನೆ ಯುದ್ಧ ಮಾಡುವ ಸಲುವಾಗಿಯೇ ಪರಮೇಶ್ವರನಿಂದ ಸುದುರ್ಲಭವಾದ ವರವನ್ನೂ

ಪಡೆದುಕೊಂಡಿರುತ್ತಾನೆ. ರಥಿಗಳಲ್ಲಿ ಶ್ರೇಷ್ಠನಾದ ಜಯದ್ರಥನು ಇಂದು ಅಂದಿನ ವೈರವನ್ನು ಸ್ಮರಿಸಿಕೊಂಡು ಬಹಳ ಕಷ್ಟದಿಂದಲೂ ಪರಿತ್ಯಜಿಸಲಾಗದ, ಪರಮಪ್ರಿಯವಾದ ಪ್ರಾಣಗಳನ್ನೇ ಒತ್ತೆಯಾಗಿಟ್ಟು ಪಾಂಡವರೊಡನೆ ಯುದ್ಧಮಾಡುತ್ತಾನೆ."

೧೬೫ನೆಯ ಅಧ್ಯಾಯವು ಮುಗಿಯಿತು.

೧೬೬ನೆಯ ಅಧ್ಯಾಯ ರಥಾತಿರಥಸಂಖ್ಯಾನಪರ್ವ (ಮುಂದುವರಿದಿದೆ)

## ಭೀಷ್ಮನು ಕೌರವರ ಪಕ್ಷದ ರಥಾತಿರಥರನ್ನು ದುರ್ಯೋಧನನಿಗೆ ವಿವರಿಸಿ ಹೇಳಿದುದು

ಜನಮೇಜಯ! ಭೀಷ್ಮನು ಮುಂದುವರಿದು ಹೇಳುತ್ತಾನೆ :

"ದುರ್ಯೋಧನ! ಕಾಂಬೋಜದೇಶೀಯನಾದ ಸುದಕ್ಷಿಣನು ಒಬ್ಬ ರಥಿಕನೆನಿಸಿಕೊಳ್ಳುತ್ತಾನೆ. ನಿನಗೆ ಜಯಗಳಿಸಿಕೊಡಬೇಕೆಂಬ ಆಶಯದಿಂದ ಸಮರಾಂಗಣದಲ್ಲಿವನು ಶತ್ರುಗಳೊಡನೆ ಯುದ್ಧಮಾಡುತ್ತಾನೆ. ರಾಜಸತ್ತಮನೇ! ನಿನ್ನ ಸಲುವಾಗಿ ಯುದ್ಧಮಾಡುವ ಈ ರಥಸಿಂಹನ (ಸುದಕ್ಷಿಣನ) ಇಂದ್ರನ ಪರಾಕ್ರಮಕ್ಕೆ ಸಮಾನವಾದ ಪರಾಕ್ರಮವನ್ನು ಯುದ್ಧದಲ್ಲಿ ಕೌರವರು ಕಾಣುತ್ತಾರೆ. ಪ್ರಚಂಡವೇಗದಿಂದ ಪ್ರಹರಿಸುವ ಸಾಮರ್ಥ್ಯವುಳ್ಳ ಸುದಕ್ಷಿಣನ ರಥಸೈನ್ಯಯುಕ್ತವಾದ ಕಾಂಬೋಜಸೇನೆಯು ಆ ಮಹಾಸೈನ್ಯಸಮೂಹದಲ್ಲಿ ಶಲಭದ ಹುಳುಗಳಂತೆ ಸರ್ವತ್ರವ್ಯಾಪಿಸುತ್ತದೆ. ಮಾಹಿಷ್ಮತೀನಗರವಾಸಿಯಾದ ನೀಲನು ನಿನ್ನ ಸೈನ್ಯದಲ್ಲಿ ರಥಿಕನೆಂದು ಪರಿಗಣಿತನಾಗಿದ್ದಾನೆ. ನೀಲವಾದ ಕವಚವನ್ನು ಧರಿಸಿರುವ ಇವನು ತನ್ನ ರಥಸಮೂಹದೊಡನೆ ಕೂಡಿಕೊಂಡು ನಿನ್ನ ಶತ್ರುಗಳಾದ ಪಾಂಡವರೊಡನೆ ಯುದ್ಧಮಾಡುತ್ತಾನೆ. ರಾಜಸೂಯಯಾಗದ ಸಮಯದಲ್ಲಿ ಸಹದೇವನು ದಂಡಯಾತ್ರೆಗೆ ಹೋಗಿದ್ದಾಗ ಅವನೊಡನೆ ಈ ನೀಲನು ದ್ವೇಷಕಟ್ಟಿ ಕೊಂಡಿದ್ದನು. ಅದೇ ದ್ವೇಷವನ್ನು ಇಂದಿಗೂ ನೀಲನು ಮನಸ್ಸಿನಲ್ಲಿಟ್ಟುಕೊಂಡು ನಿನ್ನ ಸಲುವಾಗಿ ಪಾಂಡವರೊಡನೆ ಸತತವಾಗಿ ಯುದ್ಧಮಾಡುತ್ತಾನೆ. ಅವಂತೀದೇಶದ ರಾಜಕುಮಾರರಾದ ಸರ್ವಸಮ್ಮತರಾದ ವಿಂದ ಮತ್ತು

ಅನುವಿಂದರು ಶ್ರೇಷ್ಠರಾದ ರಥಿಕರೆಂದು ಪರಿಗಣಿತರಾಗಿದ್ದಾರೆ. ಇವರು ಯುದ್ಧಕಲೆಯಲ್ಲಿ ಪಂಡಿತರಾಗಿರುವರಲ್ಲದೇ ಸುದೃಢವಾದ ಬಲ ಮತ್ತು ಪರಾಕ್ರಮಗಳಿಂದ ಸಂಪನ್ನರಾಗಿರುತ್ತಾರೆ. ಪುರುಷವ್ಯಾಘ್ರರಾದ ವಿಂದಾನುವಿಂದರು ತಮ್ಮ ಕೈಗಳಿಂದ ಚ್ಯುತವಾಗುವ ಗದೆ, ಪ್ರಾಸಾಯುಧ, ಕತ್ತಿ, ನಾರಾಚ, ತೋಮರಾದಿಗಳಿಂದ ಶತ್ರುಸೈನ್ಯವನ್ನು ಸುಟ್ಟುಬಿಡುತ್ತಾರೆ. ಯುದ್ಧಾಕಾಂಕ್ಷಿಗಳಾದ ವೀರರಾದ ವಿಂದಾನುವಿಂದರು–ಮದಿಸಿದ ಎರಡು ಸಲಗಗಳು ಆಟವಾಡುವಂತೆ–ಸ್ವೇಚ್ಛೆಯಿಂದ ಅತ್ತಲಿಂದಿತ್ತ ಸಂಚರಿಸುತ್ತಾ ಸಮರಾಂಗಣದಲ್ಲಿ ಸಾಕ್ಷಾತ್ ಯಮರಾಜನಂತೆಯೇ ವಿರಾಜಿಸುತ್ತಾರೆ. ತ್ರಿಗರ್ತದೇಶದ ಐವರು ರಾಜಕುಮಾರರನ್ನು ಖ್ಯಾತಿವೆತ್ತ ರಥಿಕರೆಂದು ನಾನು ಪರಿಗಣಿಸಿದ್ದೇನೆ. ವಿರಾಟನಗರದಲ್ಲಿ ಗೋಗ್ರಹಣಸಮಯದಲ್ಲಿ ಯುದ್ಧವಾದಾಗ ಇವರು ಪಾಂಡವರೊಡನೆ ದ್ವೇಷಕಟ್ಟಿಕೊಂಡಿದ್ದಾರೆ. ಮೇಲೇರಿ ಬರುತ್ತಿರುವ ತೆರೆಗಳುಳ್ಳ ಗಂಗಾನದಿಯನ್ನು ಅದರಲ್ಲಡಗಿರುವ ಮೊಸಳೆಗಳು ವಿಕ್ಷೋಭಗೊಳಿಸುವಂತೆ–ಈ ಐವರು ತ್ರಿಗರ್ತರಾಜಕುಮಾರರು ಪಾಂಡವರ ಮಹಾಸೇನೆಯನ್ನು ಅಲ್ಲೋಲ-ಕಲ್ಲೋಲಮಾಡಿಬಿಡುತ್ತಾರೆ. ವಿರಾಟನಗರದಲ್ಲಿ ಆದ ಅಪಮಾನಕ್ಕಿಂತಲೂ ಹೆಚ್ಚಾಗಿ ರಾಜಸೂಯಯಾಗದ ಸಮಯದಲ್ಲಿ ಅರ್ಜುನನು ದಂಡಯಾತ್ರೆಗೆ ಹೊರಟಾಗ ಅರ್ಜುನನಿಂದ ತಮಗಾದ ಅಪಮಾನವನ್ನು ತ್ರಿಗರ್ತರಿನ್ನೂ ಮರೆತಿಲ್ಲ. ಭೀಮಸೇನನ ತಮ್ಮನಾದ ಶ್ವೇತವಾಹನನಿಂದ ದಿಗ್ವಿಜಯಸಮಯದಲ್ಲಿ ಆದ ಪರಾಜಯವನ್ನು ಸಂಸ್ಮರಿಸುತ್ತಾ ಸತ್ಯರಥಪ್ರಮುಖರಾದ ಐವರು ತ್ರಿಗರ್ತರಾಜಕುಮಾರರು ನಿನ್ನ ಸಲುವಾಗಿ ರೋಷಾವೇಷದಿಂದ ಪಾಂಡವರೊಡನೆ ಯುದ್ಧಮಾಡುತ್ತಾರೆ. ಇವರು ಪಾಂಡವರ ಪಕ್ಷದಲ್ಲಿರುವ ಮಹಾರಥರನ್ನು ಎದುರಿಸಿ ಅವರೊಡನೆ ಯುದ್ಧಮಾಡುತ್ತಾ ಮಹಾಧನುರ್ಧಾರಿಗಳಾದ ಶ್ರೇಷ್ಠರಾದ ಕ್ಷತ್ರಿಯಧುರಂಧರ ರನ್ನು ಅಗಣಿತಸಂಖ್ಯೆಯಲ್ಲಿ ಸಂಹರಿಸುತ್ತಾರೆ. ದುರ್ಯೋಧನ! ನಿನ್ನ ಮಗ ಲಕ್ಷಣ ಮತ್ತು ದುಃಶಾಸನನ ಮಗ – ಈ ಇಬ್ಬರೂ ಪುರುಷವ್ಯಾಘ್ರರು. ಯುದ್ಧದಲ್ಲಿ ಶತ್ರುವಿಗೆ ಹೆದರಿ ಪಲಾಯನಮಾಡುವ ಸ್ವಭಾವದವರಲ್ಲ. ಇನ್ನೂ ತರುಣರು. ಸುಕುಮಾರರು. ಬಹುಶೀಘ್ರವಾಗಿ ಕೆಲಸಮಾಡತಕ್ಕವರು.

ಅನೇಕವಿಧವಾದ ಯುದ್ಧಕಲೆಗಳನ್ನೂ ತಿಳಿದಿರತಕ್ಕವರು. ನಾಲ್ಕು ರೀತಿಯ ಸೈನ್ಯಗಳನ್ನೂ ನಡೆಸಲು ಸಮರ್ಥರಾದವರು. ಕ್ಷತ್ರಧರ್ಮದಲ್ಲಿಯೇ ನಿರತರಾಗಿರತಕ್ಕವರು. ಮಹಾವೀರರು. ರಥಿಗಳಾದ ಇವರು ರಥಶ್ರೇಷ್ಠರೂ ಆಗಿರುವರೆಂದು ನನ್ನ ಅಭಿಮತವಾಗಿದೆ. ಇವರು ಯುದ್ಧದಲ್ಲಿ ತಮ್ಮ ಅತುಲಪರಾಕ್ರಮವನ್ನು ಪ್ರದರ್ಶಿಸುತ್ತಾರೆ. ಮಹಾರಾಜ! ನರಶ್ರೇಷ್ಠನೇ! ನಿನ್ನ ಸೈನ್ಯದಲ್ಲಿರುವ ರಾಜನಾದ ದಂಡಧಾರನೂ ಒಬ್ಬ ರಥಿಕನು. ಇವನು ತನ್ನ ಸೈನ್ಯದಿಂದ ಸಂರಕ್ಷಿತನಾಗಿ ಶತ್ರುಗಳೊಡನೆ ಯುದ್ಧಮಾಡುತ್ತಾನೆ. ಮಹಾವೇಗಪರಾಕ್ರಮನಾದ, ರಥಿಗಳಲ್ಲಿ ಶ್ರೇಷ್ಠನಾದ, ಕೋಸಲದೇಶದ ರಾಜನಾದ ಬೃಹದ್ಬಲನೂ ಒಬ್ಬ ರಥಿಕನೆಂದು ನಾನು ಅಭಿಪ್ರಾಯಪಡುತ್ತೇನೆ. ಧೃತರಾಷ್ಟ್ರನ ಮಕ್ಕಳ ಹಿತದಲ್ಲಿಯೇ ಯಾವಾಗಲೂ ಆಸಕ್ತನಾಗಿರುವ, ಉಗ್ರಾಯುಧನಾದ, ಮಹಾಧನುರ್ಧರನಾದ ಬೃಹದ್ಬಲನು ತನ್ನ ಬಂಧು-ಮಿತ್ರರನ್ನು ಪ್ರೋತ್ಸಾಹಿಸುತ್ತಾ ಸಮರಾಂಗಣದಲ್ಲಿ ಅತ್ಯುತ್ಸಾಹದಿಂದ ಯುದ್ಧಮಾಡುತ್ತಾನೆ. ರಥಯೂಥಪತಿಗಳಿಗೂ ಒಡೆಯರಾದ ಶರದ್ವಂತರ ಪುತ್ರರಾದ ಕೃಪಾಚಾರ್ಯರು ತಮ್ಮ ಪ್ರಿಯವಾದ ಪ್ರಾಣಗಳನ್ನಾದರೂ ತ್ಯಜಿಸಲು ಸಿದ್ಧರಾಗಿ ಯುದ್ಧದಲ್ಲಿ ನಿನ್ನ ಶತ್ರುಗಳನ್ನು ಸುಟ್ಟುಬಿಡುತ್ತಾರೆ. ಗೌತಮವಂಶೀಯರಾದ, ಮಹರ್ಷಿಗಳಾದ, ಆಚಾರ್ಯ ಶರದ್ವಂತರ ಪುತ್ರರಾದ ಕೃಪರು ಕಾರ್ತಿಕೇಯನಂತೆ ಜೊಂಡುಹುಲ್ಲಿನ ಕಾಂಡದಿಂದ ಜನ್ಮ ತಾಳಿದವರು ಮತ್ತು ಕಾರ್ತಿಕೇಯನಂತೆಯೇ ಅಜೇಯರೂ ಆಗಿದ್ದಾರೆ. ಶಾರದ್ವತರು ನಾನಾವಿಧವಾದ ಶಸ್ತ್ರಾಸ್ತ್ರಗಳನ್ನೂ ಮತ್ತು ಧನುಸ್ಸುಗಳನ್ನೂ ಧರಿಸಿರುವ ಅಸಂಖ್ಯಾತಸೈನಿಕರನ್ನು ಅಗ್ನಿಯೋಪಾದಿಯಲ್ಲಿ ದಹಿಸುತ್ತಾ ಸಮರಾಂಗಣದಲ್ಲಿ ಅತ್ತಲಿಂದಿತ್ತ ಸ್ವೇಚ್ಛೆಯಿಂದ ಸಂಚರಿಸುತ್ತಾರೆ.”

೧೬೬ನೆಯ ಅಧ್ಯಾಯವು ಮುಗಿಯಿತು.

## ಕೌರವಪಕ್ಷದ ರಥಾತಿರಥ-ಮಹಾರಥರ ವರ್ಣನೆ

ಮಹಾರಾಜ! ಭೀಷ್ಮನು ಮುಂದುವರಿದು ಹೇಳುತ್ತಾನೆ :

"ದುರ್ಯೋಧನ! ನಿನ್ನ ಮಾವನಾದ ಶಕುನಿಯೂ ಒಬ್ಬ ರಥಿಯೇ ಸರಿ. ಪಾಂಡವರೊಡನೆ ದ್ವೇಷಕಟ್ಟಿಕೊಂಡಿರುವ ಇವನು ನಿನ್ನ ಸಲುವಾಗಿ ಯುದ್ಧಮಾಡುವನೆಂಬುದರಲ್ಲಿ ಸಂಶಯವೇ ಇಲ್ಲ. ಶತ್ರುಗಳಿಗೆದುರಾಗಿ ನಿಲ್ಲುವ ಇವನ ಸೇನೆಯು ದುರ್ಧರ್ಷವಾದುದು. ನಾನಾವಿಧವಾದ ಆಕಾರ ಗಳುಳ್ಳ ಆಯುಧಗಳನ್ನು ಹೊಂದಿರುವ, ವಾಯುವಿನ ವೇಗಕ್ಕೆ ಸಮಾನವಾದ ವೇಗದಿಂದ ಸಂಚರಿಸುವ ಶಕುನಿಯ ಸೈನ್ಯವು ಶತ್ರುಗಳಿಂದ ಎದುರಿಸಲು ಅಸಾಧ್ಯವಾಗುತ್ತದೆ. ದೊಡ್ಡದಾದ ಧನುಸ್ಸನ್ನು ಧಾರಣೆಮಾಡಿರುವ ದ್ರೋಣ ಪುತ್ರನಾದ ಅಶ್ವತ್ಥಾಮನು ಎಲ್ಲ ಧನುರ್ಧಾರಿಗಳನ್ನೂ ಅತಿಶಯಿಸಿದ್ದಾನೆ. ರಣರಂಗದಲ್ಲಿ ವಿಚಿತ್ರ ರೀತಿಯಲ್ಲಿ ಯುದ್ಧಮಾಡುತ್ತಾನೆ. ಸುದೃಢವಾದ ಅಸ್ತ್ರಗಳಿಂದ ಕೂಡಿದವನಾಗಿದ್ದಾನೆ. ಇವನನ್ನು ನಾನು ಮಹಾರಥನೆಂದು ತಿಳಿದಿರುತ್ತೇನೆ. ಗಾಂಡೀವಧನ್ವನಾದ ಅರ್ಜುನನ ಬಾಣಗಳಂತೆಯೇ ಇವನ ಧನುಸ್ಸಿನಿಂದ ಚ್ಯುತವಾದ ಬಾಣಗಳೂ ಒಂದಕ್ಕೊಂದು ಅಂಟಿಕೊಂಡಿರು ವಂತೆಯೇ ವೇಗವಾಗಿ ಹೋಗುತ್ತಿರುತ್ತವೆ. ರಥಿಕರಲ್ಲಿ ಶ್ರೇಷ್ಠನಾದ ಅಶ್ವತ್ಥಾಮನ ಪರಾಕ್ರಮವೆಷ್ಟೆಂಬುದನ್ನು ಹೇಳುವ ಸಾಧ್ಯತೆಯೇ ಇಲ್ಲ. ಮಹಾರಥನಾದ ಇವನೇನಾದರೂ ಇಷ್ಟಪಟ್ಟರೆ ಮೂರು ಲೋಕಗಳನ್ನೂ ತನ್ನ ಮಹಾಸ್ತ್ರಗಳಿಂದ ಸುಟ್ಟುಬಿಡಬಲ್ಲನು. ಇವನಲ್ಲಿ ಕ್ರೋಧವಿದೆ ; ತೇಜಸ್ಸಿದೆ ; ಆಶ್ರಮವಾಸಿಗಳಾದ ಮಹರ್ಷಿಗಳಿಗೆ ಯೋಗ್ಯವಾದ ತಪಸ್ಸಿನಿಂದಲೂ ಇವನು ಸಂಪನ್ನನಾಗಿದ್ದಾನೆ. ಮಿಗಿಲಾಗಿ ಉದಾರಮತಿಯಾದ ಇವನಿಗೆ ದ್ರೋಣಾಚಾರ್ಯರು ದಿವ್ಯಾಸ್ತ್ರಗಳೆಲ್ಲವನ್ನೂ ಉಪದೇಶಿಸಿ ಅನುಗ್ರಹಿಸಿದ್ದಾರೆ. ಇಷ್ಟೆಲ್ಲಾ ಇದ್ದರೂ ಇವನಲ್ಲಿ ಒಂದು ಮಹಾದೋಷವಿರುವುದರಿಂದ ನಾನಿವನನ್ನು ಅತಿರಥನೆಂದಾಗಲೀ-ರಥಿಯೆಂದಾಗಲೀ ಪರಿಗಣಿಸುವುದಿಲ್ಲ.

**ಜೀವಿತಂ ಪ್ರಿಯಮತ್ಯರ್ಥಮಾಯುಷ್ಕಾಮಃ ಸದಾ ದ್ವಿಜಃ ।**
**ನ ಹ್ಯಸ್ಯ ಸದೃಶಃ ಕಶ್ಚಿದುಭಯೋಃ ಸೇನಯೋರಪಿ ॥೮॥**

ಈ ಬ್ರಾಹ್ಮಣನಿಗೆ ಪ್ರಾಣಗಳ ಮೇಲಿನ ಆಸೆಯು ಬಹಳವಾಗಿದೆ. ದೀರ್ಘಕಾಲದವರೆಗೂ ಬದುಕಿ-ಬಾಳುವ ಆಸೆಯಿಂದಿರುತ್ತಾನೆ. ಈ ಒಂದು ಮಹಾದೋಷದಿಂದಾಗಿ ಇವನು ಯಾವ ಪ್ರಯೋಜನಕ್ಕೂ ಬರುವುದಿಲ್ಲ. ನಿಶ್ಚಯವಾಗಿಯೂ ಪರಾಕ್ರಮದಲ್ಲಿ ಇವನಿಗೆ ಸಮಾನರಾದವರು ಎರಡು ಪಕ್ಷಗಳಲ್ಲಿಯೂ ಯಾರೂ ಇರುವುದಿಲ್ಲ. ದುರ್ಯೋಧನ! ಒಂದೇ ರಥದಲ್ಲಿ ಏಕಾಂಗಿಯಾಗಿ ಕುಳಿತು ಅಖಂಡದೇವಸೇನೆಯನ್ನೂ ಸಂಹರಿಸುವಷ್ಟು ಸಾಮರ್ಥ್ಯವು ಈ ಅಶ್ವತ್ಥಾಮನಲ್ಲಿದೆ. ದಷ್ಟ-ಪುಷ್ಟವಾದ ಶರೀರಸೌಷ್ಠವದಿಂದ ಕೂಡಿರತಕ್ಕ ಇವನು ಚಪ್ಪಾಳೆಹೊಡೆಯುವುದರಿಂದಲೇ ಪರ್ವತಗಳನ್ನೇ ಸೀಳಿಬಿಡಬಲ್ಲನು. ಈ ವೀರನಲ್ಲಿ ಅಗಣಿತವಾದ ಗುಣಗಳಿವೆ. ಶತ್ರುಗಳನ್ನು ಪ್ರಹರಿಸುವುದರಲ್ಲಿ ಬಹಳ ಕುಶಲನು. ಭಯಂಕರವಾದ ತೇಜಸ್ಸಿನಿಂದ ಕೂಡಿದ್ದಾನೆ. ದಂಡಪಾಣಿಯಾದ ಕಾಲಪುರುಷನೋಪಾದಿಯಲ್ಲಿ-ಶತ್ರುಪಕ್ಷ ದವರಿಂದ ಸಹಿಸಿಕೊಳ್ಳಲಸಾಧ್ಯನಾಗಿ ಇವನು ರಣಾಂಗಣದಲ್ಲಿ ಸಂಚರಿಸು ತ್ತಾನೆ. ಯುಗದ ಕಡೆಯಲ್ಲಿ ಪ್ರಾದುರ್ಭಾವವಾಗುವ ಪ್ರಳಯಾಗ್ನಿಗೆ ಸಮಾನವಾದ ಕೋಪವು ಇವನಲ್ಲಡಗಿದೆ. ಇವನ ಕುತ್ತಿಗೆಯು ಸಿಂಹದ ಕುತ್ತಿಗೆಯಂತೆಯೇ ಇದೆ. ಮಹಾತೇಜಸ್ವಿಯಾದ ಈ ಅಶ್ವತ್ಥಾಮನು ಭಾರತ ಯುದ್ಧದ ಕಡೆಯಲ್ಲಿ ಬಂದು ಅಳಿದುಳಿದವರನ್ನೆಲ್ಲಾ ಮುಗಿಸಿಬಿಡುತ್ತಾನೆ.

ಮಹಾತೇಜಸ್ವಿಯಾದ ಇವನ ತಂದೆಯು ವೃದ್ಧರಾಗಿದ್ದರೂ ಪರಾಕ್ರಮ ದಲ್ಲಿ ನವಯುವಕರಿಗಿಂತಲೂ ಶ್ರೇಷ್ಠರೆನಿಸಿದ್ದಾರೆ. ಇವರು ನಿನ್ನ ಸಲುವಾಗಿ ರಣಾಂಗಣದಲ್ಲಿ ತಮ್ಮ ಅತುಲಪರಾಕ್ರಮವನ್ನು ಕಾರ್ಯರೂಪದಲ್ಲಿ ತೋರಿಸು ವರೆಂಬುದರಲ್ಲಿ ನನಗೆ ಸಂಶಯವಿಲ್ಲ. ಅಸ್ತ್ರವೇಗಾನಿಲದಿಂದ (ವಾಯುವಿನಿಂದ) ಉದ್ಭೂತವಾದ ದ್ರೋಣಾಗ್ನಿಯು ಒಣಹುಲ್ಲಿನ ಮತ್ತು ಸೌದೆಯ ರೂಪದಲ್ಲಿರುವ ಸೈನ್ಯದ ಮೇಲೆ ಬಿದ್ದು ಭಗ್ಗನೆ ಹೊತ್ತಿಕೊಂಡು ರಣರಂಗದಲ್ಲಿ ಯುಧಿಷ್ಠಿರನ ಸೈನ್ಯವೆಲ್ಲವನ್ನೂ ಸುಟ್ಟುಬಿಡುತ್ತದೆ. ರಥಯೂಥಪತಿಗಳಿಗೂ ಒಡೆಯರಾದ ನರರ್ಷಭರಾದ ಇವರು ಭರದ್ವಾಜಮಹರ್ಷಿಗಳ ಪುತ್ರರು.

ನಿನಗೆ ಹಿತಕರವಾದ ಬಹುತೀಕ್ಷ್ಣವಾದ ಕಾರ್ಯವನ್ನು ಮಾಡುತ್ತಾರೆ. ಯುದ್ಧದಲ್ಲಿವರು ತಮ್ಮ ಅಮೋಘಪರಾಕ್ರಮವನ್ನು ತೋರಿಸುತ್ತಾರೆ. ಮೂರ್ಧಾಭಿಷಿಕ್ತರಾಗಿರುವ ಪೃಥ್ವಿಯ ಸಕಲರಾಜರಿಗೂ ಆಚಾರ್ಯರಾಗಿದ್ದಾರೆ. ಎಲ್ಲ ರಾಜರಿಗೂ ಇವರು ಧನುರ್ವಿದ್ಯೆಯನ್ನು ಉಪದೇಶಿಸಿದ್ದಾರೆ. ಇವರು ವೃದ್ಧಗುರುಗಳು. ಇವರೇ ಯುದ್ಧದಲ್ಲಿ ಸೃಂಜಯವಂಶದ ಕ್ಷತ್ರಿಯರೆಲ್ಲರನ್ನೂ ವಿನಾಶಮಾಡುತ್ತಾರೆ. ಆದರಿವರು ಧನಂಜಯಪ್ರಿಯರು. ಅರ್ಜುನನನ್ನು ಬಹುವಾಗಿ ಪ್ರೀತಿಸತಕ್ಕವರು. ಸಮುಜ್ವಲಿತವಾದ ಆಚಾರ್ಯಭಾವವು ಅರ್ಜುನನ ಗುಣಗಳಿಂದ ಜಯಿಸಲ್ಪಟ್ಟಿದೆ. ದ್ರೋಣರು ಅರ್ಜುನನನ್ನು ಪ್ರೀತಿಸುವುದು ಮಾತ್ರವಲ್ಲ ; ಅರ್ಜುನನೂ ಆಚಾರ್ಯರನ್ನು ಬಹುವಾಗಿ ಗೌರವಿಸುತ್ತಾನೆ. ತನ್ನ ವಿನಯಾದಿ ಗುಣಗಳಿಂದ ಆಚಾರ್ಯರನ್ನು ಜಯಿಸಿಬಿಟ್ಟಿದ್ದಾನೆ. ಆಚಾರ್ಯರು ತನ್ನ ಮೇಲೆ ಸದಾ ಅನುಕಂಪ ತೋರುವಂತೆ ಮಾಡಿಬಿಟ್ಟಿದ್ದಾನೆ. ಇದನ್ನೇ ಬಾರಿ-ಬಾರಿಗೂ ಸ್ಮರಿಸುವ ಮಹಾಧನುರ್ಧಾರಿಗಳಾದ ದ್ರೋಣಾಚಾರ್ಯರು ಬಹುಸುಲಭವಾಗಿ ಕಾರ್ಯವನ್ನು ಸಾಧಿಸುವ ಸಾಮರ್ಥ್ಯವುಳ್ಳ ಪ್ರಿಯಶಿಷ್ಯನಾದ ಅರ್ಜುನನನ್ನು ಯಾವ ಕಾರಣದಿಂದಲೂ ಸಂಹರಿಸುವುದಿಲ್ಲ.

**ಶ್ಲಾಘತೇಽಯಂ ಸದಾ ವೀರ ಪಾರ್ಥಸ್ಯ ಗುಣವಿಸ್ತರೈಃ ।**
**ಪುತ್ರಾದಭ್ಯಧಿಕಂ ಚೈನಂ ಭಾರದ್ವಾಜೋಽನುಪಶ್ಯತಿ ॥೧೭॥**

ಅರ್ಜುನನ ಸದ್ಗುಣಗಳನ್ನು ವಿಸ್ತಾರವಾಗಿ ಉಲ್ಲೇಖಿಸುತ್ತಾ ದ್ರೋಣರು ಅವನನ್ನು ಸರ್ವದಾ ಶ್ಲಾಘಿಸುತ್ತಲೇ ಇರುತ್ತಾರೆ. ಆಚಾರ್ಯದ್ರೋಣರು ಅರ್ಜುನನನ್ನು ತಮ್ಮ ಮಗನಿಗಿಂತಲೂ ಹೆಚ್ಚಾಗಿ ಭಾವಿಸುತ್ತಾರೆ. ಇವರ ಪರಾಕ್ರಮವಂತೂ ಅಪರಿಮಿತವಾದುದು. ದೇವ-ಗಂಧರ್ವ-ಮನುಷ್ಯಯೋಧರು ಒಟ್ಟಾಗಿ ಬಂದು ಇವರನ್ನು ಎದುರಿಸಿದರೂ ಒಂದೇ ರಥದಲ್ಲಿ ಒಬ್ಬರೇ ಕುಳಿತು ಪ್ರತಾಪವಂತರಾದ ಈ ದ್ರೋಣರು ತಮ್ಮಲ್ಲಿರುವ ದಿವ್ಯಾಸ್ತ್ರಗಳಿಂದ ಎಲ್ಲರನ್ನೂ ಸಂಹರಿಸಿಬಿಡಬಲ್ಲರು. ಅಂತಹ ಅದ್ಭುತಪರಾಕ್ರಮವು ಆಚಾರ್ಯದ್ರೋಣರಲ್ಲಿದೆ.

ಶತ್ರುಪಕ್ಷದ ರಥಯೋಧರಿಗೆ ಪೀಡೆಯನ್ನುಂಟುಮಾಡುವ ಸಾಮರ್ಥ್ಯವುಳ್ಳ ಪೌರವನನ್ನು ನಿನ್ನ ಸೈನ್ಯದಲ್ಲಿರುವ ಮಹಾರಥನೆಂದು ನಾನು ಪರಿಗಣಿಸಿದ್ದೇನೆ. ಪೌರವನು ತನ್ನಲ್ಲಿರುವ ವಿಶಾಲವಾದ ಸೈನ್ಯದೊಡನೆ ಶತ್ರುಸೈನ್ಯಕ್ಕೆ ಪರಿತಾಪವನ್ನುಂಟುಮಾಡುತ್ತಾ–ಗಾಳಿಯ ದಿಕ್ಕನ್ನೇ ಅನುಸರಿಸಿ ಹೋಗುವ ಅಗ್ನಿಯು ಹುಲ್ಲಿನ ಮೆದೆಯನ್ನು ನಿಮಿಷಮಾತ್ರದಲ್ಲಿ ಭಸ್ಮಮಾಡಿಬಿಡುವಂತೆ–ತನ್ನ ಅಮೋಘವಾದ ಅಸ್ತ್ರಗಳಿಂದ ಪಾಂಚಾಲರನ್ನು ಭಸ್ಮಮಾಡಿಬಿಡುತ್ತಾನೆ. ನಿನ್ನ ಸೈನ್ಯದಲ್ಲಿರುವ ರಾಜಕುಮಾರನಾದ ಬೃಹದ್ಬಲನೂ ಒಬ್ಬ ರಥಿಯಾಗಿದ್ದಾನೆ. ಇವನು ಸತ್ಯನಿಷ್ಠನೆಂಬ ಕೀರ್ತಿಯನ್ನು ಪಡೆದಿರುತ್ತಾನೆ. ಇವನು ಶತ್ರುಗಳ ಸೈನ್ಯದ ಮಧ್ಯದಲ್ಲಿ ಕಾಲಪುರುಷನಂತೆ ಸ್ವೇಚ್ಛೆಯಿಂದ (ಸೈನಿಕರನ್ನು ಸಂಹಾರಮಾಡುತ್ತಾ) ತಿರುಗಾಡುತ್ತಿರುತ್ತಾನೆ. ಬೃಹದ್ಬಲರಾಜನ ಯೋಧರು ವಿಚಿತ್ರವಾದ ಕವಚಗಳನ್ನೂ ಆಯುಧಗಳನ್ನೂ ಧರಿಸಿರುತ್ತಾರೆ. ಇವರು ನಿನ್ನ ಶತ್ರುಪಕ್ಷದ ಯೋಧರನ್ನು ಕಂಡಕಂಡಲ್ಲಿ ಸಂಹರಿಸುತ್ತಾ ಸಮರಾಂಗಣದ ಸುತ್ತಲೂ ತಿರುಗುತ್ತಾರೆ. ಕರ್ಣಪುತ್ರನಾದ ವೃಷಸೇನನೂ ನಿನ್ನ ಸೇನೆಯಲ್ಲಿ ಒಬ್ಬ ಶ್ರೇಷ್ಠನಾದ ರಥಿಯಾಗಿರುತ್ತಾನೆ. ಇವನನ್ನು ಮಹಾರಥನೆಂದೂ ಹೇಳಬಹುದಾಗಿದೆ. ಬಲಿಷ್ಠರಲ್ಲಿ ಶ್ರೇಷ್ಠನೆನಿಸಿರುವ ಇವನು ನಿನ್ನ ಶತ್ರುಗಳ ಬಲವನ್ನು ತನ್ನ ನಿಶಿತವಾದ ಶಸ್ತ್ರಾಸ್ತ್ರಗಳಿಂದ ಭಸ್ಮಮಾಡಿಬಿಡುತ್ತಾನೆ. ಮಹಾತೇಜಸ್ವಿಯಾದ ಮಧುವಂಶೀಯನಾದ ಜಲಸಂಧನನ್ನು ನಿನ್ನ ಸೈನ್ಯದಲ್ಲಿ ಒಬ್ಬ ಶ್ರೇಷ್ಠರಥಿಕನೆಂದು ನಾನು ಪರಿಗಣಿಸಿದ್ದೇನೆ. ಶತ್ರುಗಳನ್ನು ಸಂಹರಿಸುವ ಸಾಮರ್ಥ್ಯವುಳ್ಳ ಇವನು ನಿನಗಾಗಿ ತನ್ನ ಪ್ರಾಣಗಳನ್ನೇ ಒತ್ತೆಯಿಟ್ಟು ಶತ್ರುಗಳೊಡನೆ ಯುದ್ಧಮಾಡುತ್ತಾನೆ. ಮಹಾಬಾಹುವಾದ ಜಲಸಂಧನು ರಥದಲ್ಲಿ ಕುಳಿತು ಅಥವಾ ಆನೆಯ ಮೇಲೆ ಕುಳಿತು ಯುದ್ಧಮಾಡುವುದರಲ್ಲಿ ಕುಶಲಿಯಾಗಿದ್ದಾನೆ. ರಥದಲ್ಲಿಯೋ ಅಥವಾ ಆನೆಯ ಮೇಲೋ ಕುಳಿತು ಶತ್ರುಸೈನ್ಯವನ್ನು ಕ್ಷಣ-ಕ್ಷಣಕ್ಕೂ ಸಂಹರಿಸುತ್ತಾ ಯುದ್ಧಮಾಡುತ್ತಾನೆ. ಆದುದರಿಂದ, ದುರ್ಯೋಧನ! ನಿನ್ನ ಸೈನ್ಯದಲ್ಲಿ ಇವನೊಬ್ಬ ಶ್ರೇಷ್ಠರಥಿಕನೆಂಬುದು ನನ್ನ ಅಭಿಪ್ರಾಯವಾಗಿದೆ. ನಿನ್ನ ಸಲುವಾಗಿ ಇವನು ಇಂದಿನ ಮಹಾಯುದ್ಧದಲ್ಲಿ ಕಡೆಯವರೆಗೂ ಹೋರಾಡಿ ಸಸೈನ್ಯನಾಗಿ ಪ್ರಾಣತ್ಯಾಗಮಾಡುತ್ತಾನೆ. ಈ

ಜಲಸಂಧನು ಮಹಾಪರಾಕ್ರಮದಿಂದಲೂ ವಿಚಿತ್ರರೀತಿಯಿಂದಲೂ ಯುದ್ಧ ಮಾಡುವ ವೀರಯೋಧನು. ಇವನು ನಿನ್ನ ಶತ್ರುಗಳೊಡನೆ ಸ್ವಲ್ಪವಾದರೂ ಭಯವೇ ಇಲ್ಲದೇ ಕಾದಾಡುತ್ತಾನೆ. ನಿನ್ನ ಪಕ್ಷದಲ್ಲಿರುವ ಮತ್ತೊಬ್ಬ ರಾಜ ಬಾಹ್ಲಿಕನೂ ಯುದ್ಧದಿಂದ ಯಾವುದೇ ಕಾರಣದಿಂದಲೂ ಹಿಂದಿರುಗುವವನಲ್ಲ. ಮಹಾಶೂರನಾದ ಇವನು ರಣಾಂಗಣದಲ್ಲಿ ಯಮನಿಗೆ ಸಮಾನನಾಗಿ ಯುದ್ಧಮಾಡುತ್ತಾನೆ. ಇವನು ಅತಿರಥನೆಂಬುದು ನನ್ನ ಅಭಿಪ್ರಾಯವಾಗಿದೆ. ರಣಭೂಮಿಗೆ ಪ್ರವೇಶಮಾಡಿದನೆಂದರೆ ಹಿಂದಿರುಗುವುದು ಹೇಗೆಂಬುದೇ ಇವನಿಗೆ ತಿಳಿಯದು. ಯಾವುದೇ ಕಾರಣದಿಂದಲೂ ಇವನು ಯುದ್ಧದಿಂದ ಹಿಂದಿರುಗತಕ್ಕವನಲ್ಲ. ಶೀಘ್ರಗಾಮಿಯಾದ ವಾಯುವಿನಂತೆ ಇವನೂ ಶತ್ರುಗಳ ಮೇಲೆ ರಭಸದಿಂದ ಬೀಳುತ್ತಾ ಅವರನ್ನು ಸಂಹರಿಸುತ್ತಾನೆ. ರಥಾರೂಢನಾಗಿ ರಣರಂಗದಲ್ಲಿ ಅದ್ಭುತಪರಾಕ್ರಮವನ್ನು ತೋರುವ ಮತ್ತು ಶತ್ರುಪಕ್ಷದ ರಥಸೈನ್ಯಕ್ಕೆ ಪೀಡೆಯನ್ನುಂಟುಮಾಡುವ ಸಾಮರ್ಥ್ಯವುಳ್ಳ ನಿನ್ನ ಸೇನಾಪತಿಯಾದ ಸತ್ಯವಂತನನ್ನೂ ಮಹಾರಥನೆಂದು ನಾನು ಭಾವಿಸಿದ್ದೇನೆ. ಇವನಿಗೆ ಯುದ್ಧವನ್ನು ನೋಡಿ ಭಯವಾಗಲೀ ದುಃಖವಾಗಲೀ ಉಂಟಾಗುವುದಿಲ್ಲ. ತನ್ನ ರಥದ ಮಾರ್ಗದಲ್ಲಿ ನಿಂತಿರುವ ಶತ್ರುಪಕ್ಷದ ಸೈನ್ಯದ ಮೇಲೆ ಈ ಸತ್ಯವಂತನು ನಗು-ನಗುತ್ತಲೇ ದಾಳಿಮಾಡುತ್ತಾನೆ. ಪುರುಷಶ್ರೇಷ್ಠನಾದ ಇವನು ನಿನ್ನ ಶತ್ರುಗಳಿಗೆ ತನ್ನ ಪರಾಕ್ರಮವೆಷ್ಟೆಂಬುದನ್ನು ತೋರಿಸುತ್ತಾನೆ. ಇವನು ಯುದ್ಧದಲ್ಲಿ ನಿನ್ನ ಸಲುವಾಗಿ ಸತ್ಪುರುಷೋಚಿತವಾದ ಮಹಾಕಾರ್ಯವನ್ನು ಮಾಡುತ್ತಾನೆ. ಕ್ರೂರಕರ್ಮನಾದ ರಾಕ್ಷಸೇಂದ್ರನಾದ ಅಲಂಬುಷನೂ ಮಹಾರಥನೆಂಬುದು ನನ್ನ ಭಾವನೆಯಾಗಿದೆ. ಇವನು ಪಾಂಡವರೊಡನೆ ತನಗಿದ್ದ ಹಿಂದಿನ ದ್ವೇಷವನ್ನು ಸ್ಮರಿಸಿಕೊಂಡು ಅವರ ಸೈನ್ಯವನ್ನು ಸಂಹಾರಮಾಡುತ್ತಾನೆ. ಮಾಯಾವಿಯಾದ, ದ್ವೇಷವನ್ನು ಬಿಡದೇ ಕಡೆಯವರೆಗೂ ಸಾಧಿಸುವ ಸ್ವಭಾವವುಳ್ಳ, ಸಕಲರಾಕ್ಷಸಸೈನಿಕರಲ್ಲಿಯೇ ಶ್ರೇಷ್ಠರಥಿಕನೆಂದು ಹೆಸರು ಪಡೆದಿರುವ ಈ ಅಲಂಬುಷನು ನಿರ್ಭಯದಿಂದ ನಿನ್ನ ಶತ್ರುಗಳನ್ನು ಸಂಹರಿಸುತ್ತಾ ರಣಾಂಗಣದಲ್ಲಿ ಸಂಚರಿಸುತ್ತಾನೆ. ಪ್ರಾಗ್ಜ್ಯೋತಿಷಪುರದ ಅಧಿಪತಿಯಾದ, ಪ್ರತಾಪವಂತನಾದ, ವೀರನಾದ, ಅಂಕುಶವನ್ನು ಹಿಡಿದು ಎಂತಹ

ಮದಿಸಿದ ಆನೆಯನ್ನಾದರೂ ನಿಯಂತ್ರಿಸುವುದರಲ್ಲಿ ಸಮರ್ಥನಾದ, ವೀರಶ್ರೇಷ್ಠನಾದ, ಗಜಯೋಧನಾದ ಭಗದತ್ತನು ರಥಯುದ್ಧದಲ್ಲಿಯೂ ವಿಶಾರದನಾಗಿದ್ದಾನೆ. ಹಿಂದೆ ಗಾಂಡೀವಧನ್ವನಾದ ಅರ್ಜುನನಿಗೂ ಮತ್ತು ಅವನಿಗೂ ಯುದ್ಧವು ಪ್ರಾರಂಭವಾಯಿತು. ವಿಜಯಾಕಾಂಕ್ಷಿಗಳಾಗಿದ್ದ ಇಬ್ಬರೂ ಬಹಳ ದಿವಸಗಳವರೆಗೆ ಯುದ್ಧಮಾಡುತ್ತಲೇ ಇದ್ದರು. ಅನಂತರ ಭಗದತ್ತನು ತನ್ನ ಮಿತ್ರನಾದ ಇಂದ್ರನನ್ನು ಗೌರವಿಸುವ ಸಲುವಾಗಿ ಮಹಾತ್ಮನಾದ ಇಂದ್ರನ ಮಗನಾದ ಅರ್ಜುನನೊಡನೆ ಸಂಧಿ ಮಾಡಿಕೊಂಡನು. ಆನೆಯ ಮೇಲೆ ಕುಳಿತು ಯುದ್ಧಮಾಡುವುದರಲ್ಲಿ ಅತಿನಿಪುಣನಾದ ಇವನು–ಐರಾವತದ ಮೇಲೆ ಕುಳಿತು ದೇವತೆಗಳ ರಾಜನಾದ ಇಂದ್ರನು ಯುದ್ಧಮಾಡುವಂತೆಯೇ–ನಿನ್ನ ಶತ್ರುಗಳೊಡನೆ ಯುದ್ಧಮಾಡುತ್ತಾನೆ."

೧೬೭ನೆಯ ಅಧ್ಯಾಯವು ಮುಗಿಯಿತು.

೧೬೮ನೆಯ ಅಧ್ಯಾಯ ರಥಾತಿರಥಸಂಖ್ಯಾನಪರ್ವ (ಮುಂದುವರಿದಿದೆ)

## ಕೌರವಪಕ್ಷದ ರಥಾತಿರಥರ ವರ್ಣನೆ : ಕರ್ಣ ಮತ್ತು ಭೀಷ್ಮರ ರೋಷಪೂರ್ವಕವಾದ ಸಂವಾದ : ದುರ್ಯೋಧನನು ಇಬ್ಬರನ್ನೂ ಸಮಾಧಾನಪಡಿಸಿದುದು

ಭೀಷ್ಮನು ರಥಾತಿರಥ-ಮಹಾರಥರ ವರ್ಣನೆಯನ್ನು ಮುಂದುವರಿಸುತ್ತಾ ಹೇಳುತ್ತಾನೆ :

"ದುರ್ಯೋಧನ! ಏಕತ್ರ ವಾಸವಾಗಿರುವ ಸಹೋದರರಾದ ಇಬ್ಬರು ಅಚಲ-ವೃಷಕರು ರಥಿಗಳೆಂಬುದು ನನ್ನ ಅಭಿಪ್ರಾಯವಾಗಿದೆ. ದುರಾಧರ್ಷರಾದ ಈ ಇಬ್ಬರು ಸಹೋದರರೂ ನಿನ್ನ ಶತ್ರುಗಳನ್ನು ವಿಧ್ವಂಸನಮಾಡುತ್ತಾರೆ. ಈ ಇಬ್ಬರು ಪುರುಷಸಿಂಹರೂ ಮಹಾಬಲಿಷ್ಠರು, ಸುದೃಢವಾದ ಅವಿನಾಶಿಯಾದ ಕ್ರೋಧವುಳ್ಳವರು. ಶತ್ರುಗಳನ್ನು ಪ್ರಹರಿಸುವುದರಲ್ಲಿ ನಿಪುಣರು. ಗಾಂಧಾರಪ್ರಮುಖರಾದ ಇವರಿನ್ನೂ ಯುವಕರು. ಮಹಾ

ಬಲಿಷ್ಠರು ಮತ್ತು ಸುಂದರಪುರುಷರು. ಇವರು ನಿನ್ನ ಸಲುವಾಗಿ ಪಾಂಡವರೊಡನೆ ಯುದ್ಧಮಾಡುತ್ತಾರೆ.

ನಿನ್ನ ಅತ್ಯಂತಪ್ರಿಯಸಖನಾದ ಕರ್ಣನ ವಿಷಯವನ್ನು ಹೇಳುವೆನು ; ಕೇಳು, ದುರ್ಯೋಧನ! ಪಾಂಡವರೊಡನೆ ಯುದ್ಧಮಾಡಲು ಪ್ರತಿನಿತ್ಯವೂ ಪ್ರೋತ್ಸಾಹಿಸುವ ನಿನ್ನ ಪ್ರಿಯಸಖನಾದ ಕರ್ಣನು ರಣಭಯಂಕರನು ; ಕಟುಭಾಷೀ ; ಆತ್ಮಪ್ರಶಂಸೆಯನ್ನೇ ಸರ್ವದಾ ಮಾಡಿಕೊಳ್ಳುವವನು ; ಅತ್ಯಂತನೀಚಸ್ವಭಾವದವನು. ಈ ವೈಕರ್ತನನು ನಿನಗೆ ಮಂತ್ರೀ, ನಾಯಕ, ಬಂಧು. ದುರಭಿಮಾನಿಯಾದ ಇವನು ನಿನ್ನ ಆಶ್ರಯವನ್ನು ಪಡೆದು ಬಹಳ ಮೇಲಕ್ಕೆ ಹೋಗಿಬಿಟ್ಟಿದ್ದಾನೆ. (ಬಹಳ ಕೊಬ್ಬಿಹೋಗಿದ್ದಾನೆ.) ನನ್ನ ಅಭಿಪ್ರಾಯದಲ್ಲಿ ಇವನು ರಥಿಯೂ ಅಲ್ಲ ; ಅತಿರಥನೂ ಅಲ್ಲ. ಹೀಗೆ ಹೇಳಲು ಕಾರಣವಿಲ್ಲದೇ ಇಲ್ಲ. ಅವಿವೇಕಿಯಾದ ಇವನು ಹುಟ್ಟಿನಿಂದಲೇ ತನ್ನೊಡನಿದ್ದ ಕವಚವನ್ನು ಕಳೆದುಕೊಂಡನು. ದಿವ್ಯವಾದೆರಡು ಕರ್ಣಕುಂಡಲಗಳನ್ನೂ ಕಳೆದುಕೊಂಡನು. ಇತರರ ವಿಷಯದಲ್ಲಿ ಸರ್ವದಾ ದಯಾಪರನಾಗಿರುತ್ತಾನೆ. ಸರ್ವದಾ ದಯಾಪರತೆಯು ವೀರನ ಲಕ್ಷಣವಲ್ಲ.

**ಅಭಿಶಾಪಾಚ್ಚ ರಾಮಸ್ಯ ಬ್ರಾಹ್ಮಣಸ್ಯ ಚ ಭಾಷಣಾತ್ ॥೬॥**
**ಕರಣಾನಾಂ ವಿಯೋಗಾಚ್ಚ ತೇನ ಮೇಽರ್ಧರಥೋ ಮತಃ ।**
**ನೈಷ ಫಾಲ್ಗುನಮಾಸಾದ್ಯ ಪುನರ್ಜೀವನ್ವಿಮೋಕ್ಷ್ಯತೇ ॥೭॥**

ಪರಶುರಾಮನ ಮತ್ತು ಬ್ರಾಹ್ಮಣನ ಶಾಪಕ್ಕೊಳಗಾಗಿರುವುದ* ರಿಂದಲೂ, ವಿಜಯಸಾಧಕವಾದ ಮತ್ತು ಹುಟ್ಟಿನಿಂದಲೇ ಬಂದಿದ್ದ ಉಪ ಕರಣಗಳನ್ನು ಅವಿವೇಕದಿಂದ ಕಳೆದುಕೊಂಡಿರುವುದರಿಂದಲೂ ಇವನನ್ನು ನಾನು ಅರ್ಧರಥನೆಂದು ಪರಿಗಣಿಸಿದ್ದೇನೆ. ಅರ್ಜುನನೊಡನೆ ಯುದ್ಧ

---

*(ಅಜಾಗರೂಕತೆಯಿಂದ ಬ್ರಾಹ್ಮಣನೊಬ್ಬನ ಹಸುವನ್ನು ಕೊಂದುದಕ್ಕಾಗಿ ಬ್ರಾಹ್ಮಣನು- 'ಯುದ್ಧಸಮಯದಲ್ಲಿ ರಥಚಕ್ರವು ಭೂಮಿಯೊಳಕ್ಕೆ ಹೂತುಕೊಳ್ಳಲಿ' – ಎಂದು ಕರ್ಣನಿಗೆ ಶಾಪಕೊಟ್ಟ ಕಥೆಯು ಕರ್ಣಪರ್ವದಲ್ಲಿ ಬರುತ್ತದೆ.)

ಮಾಡಲು ಹೋಗುವ ಇವನು ಖಂಡಿತವಾಗಿಯೂ ಪ್ರಾಣಸಹಿತನಾಗಿ ಹಿಂದಿರುಗುವುದಿಲ್ಲ."

ಭೀಷ್ಮನು ಹೇಳಿದ ಮಾತನ್ನು ಕೇಳಿ ಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ದ್ರೋಣಾಚಾರ್ಯರು ಹೇಳಿದರು :

"ಭೀಷ್ಮ! ನೀನು ಹೇಳಿದಂತೆಯೇ ಸರಿ. ಕರ್ಣನು ಶಾಪಾಭಿಭೂತ ನಾಗಿರುವುದರಿಂದಲೂ, ಅವಿವೇಕದಿಂದ ರಕ್ಷಾಕವಚವನ್ನೂ ಕರ್ಣ-ಕುಂಡಲ ಗಳನ್ನೂ ಪರಿತ್ಯಜಿಸಿದುದರಿಂದಲೂ ಕೇವಲ ಅರ್ಧರಥನೆಂಬುದು ನಿಶ್ಚಯ. ನಿನ್ನ ಮಾತೆಂದಿಗೂ ಸುಳ್ಳಲ್ಲ. ನೀನು ಇಲ್ಲದಿರುವುದನ್ನು ಹೇಳಿಲ್ಲ. ಪ್ರತಿಯೊಂದು ಬಾರಿಯೂ ಯುದ್ಧವಾಗುವ ಮೊದಲು ಇವನು ದುರಹಂಕಾರದ ಮಾತುಗಳನ್ನೇ ಆಡುತ್ತಾನೆ. ಯುದ್ಧವಾಗುತ್ತಿದ್ದಾಗ ಶತ್ರುಗಳನ್ನು ಎದುರಿಸಲಾರದೇ ಪರಾಙ್ಮುಖನಾಗುವುದನ್ನು ನಾವು ಅನೇಕ ಬಾರಿ ನೋಡಿದ್ದೇವೆ. ಪರಾಕ್ರಮಿಯಲ್ಲಿ ಇರಬಾರದಾದ ಎರಡು ಮಹಾದೋಷಗಳೂ ಇವನಲ್ಲಿವೆ. ಇವನು ಪರಮದಯಾಳುವು. ಎರಡನೆಯದಾಗಿ ಅಜಾಗರೂಕನು. ಯಾವ ಸಮಯದಲ್ಲಿ ಯಾರೊಡನೆ ಹೇಗೆ ನಡೆದುಕೊಳ್ಳಬೇಕೆಂಬ ವಿವೇಚನೆಯೂ ಇವನಿಗಿಲ್ಲ. ಈ ಕಾರಣಗಳಿಂದಾಗಿ ನಾನೂ ಇವನನ್ನು ಅರ್ಧರಥನೆಂದೇ ಪರಿಗಣಿಸುತ್ತೇನೆ."

ಭೀಷ್ಮ-ದ್ರೋಣರು ಹೇಳಿದ ಮಾತುಗಳನ್ನು ಕೇಳಿ ಕರ್ಣನು ಕಿಡಿ-ಕಿಡಿಯಾದನು. ಕೆರಳಿದ ಕೋಪದಿಂದ ಕಣ್ಣುಗಳು ಅರಳಿದುವು. ಕಣ್ಣುಗಳನ್ನು ದೊಡ್ಡದಾಗಿ ಅರಳಿಸಿ ಚಾವಟಿಯಿಂದ ಪ್ರಹರಿಸುವಂತೆಯೇ ಭೀಷ್ಮನನ್ನು ಬಹು ಕಟುವಾದ ಮಾತುಗಳಿಂದ ಪ್ರಹರಿಸಿದನು :

"ಪಿತಾಮಹ! ತಡೆಯೇ ಇಲ್ಲದೆ ನಿನ್ನ ಮಾತುಗಳೆಂಬ ಬಾಣಗಳಿಂದ ನನ್ನನ್ನು ಕತ್ತರಿಸುತ್ತಿರುವೆ. ಯದ್ಯಪಿ ನಾನು ಸರ್ವಥಾ ಅಪರಾಧಿಯಲ್ಲ ದಿದ್ದರೂ ದೋಷರಹಿತನಾಗಿದ್ದರೂ ನನ್ನ ಮೇಲಿನ ದ್ವೇಷದ ಕಾರಣದಿಂದಾಗಿ ನನ್ನನ್ನು ನೀನು ಇದೇ ರೀತಿಯಲ್ಲಿ ಪದೇ ಪದೇ ತೆಗಳುತ್ತಲೇ ಇರುವೆ. ನೀನು ಹೇಳಿದುದಕ್ಕೆ ಪ್ರತಿಯಾಗಿ ಹೇಳಲು ಅಥವಾ ನಿನ್ನನ್ನೇ ಎದುರಿಸಿ ನಿಲ್ಲಲು

ನನಗೆ ಸಾಮರ್ಥ್ಯವಿಲ್ಲದೇ ಇಲ್ಲ. ಆದರೆ ನಾನು ದುರ್ಯೋಧನನಿಗೋಸ್ಕರ ನೀನು ಹೇಳಿದುದೆಲ್ಲವನ್ನೂ ಸಹಿಸಿಕೊಂಡು ಸುಮ್ಮನಿದ್ದುಬಿಟ್ಟಿದ್ದೇನೆ. ನಾನು ಹೀಗೆ, ನಿನ್ನ ಮಾತಿಗೆ ಯಾವ ಪ್ರತಿಕ್ರಿಯೆಯನ್ನೂ ತೋರಿಸದೇ ತೂಷ್ಣೀಂ ಭಾವದಿಂದಿರುವುದರಿಂದಲೇ ನೀನು ನನ್ನನ್ನು–ಮೂರ್ಖನನ್ನು ಕಾಣುವಂತೆ –ತುಚ್ಛಮನುಷ್ಯನನ್ನು ಕಾಣುವಂತೆ ಕಾಣುತ್ತಿರುವೆ. ಭೀಷ್ಮ! ನೀನು ನನ್ನನ್ನು ಅರ್ಧರಥನನ್ನಾಗಿ ಪರಿಗಣಿಸಿರುವೆ. ಜಗತ್ತೂ ಹೀಗೆಂದೇ ಭಾವಿಸುತ್ತದೆ. ಯದ್ಯಪಿ ನನ್ನ ಸಾಮರ್ಥ್ಯವೆಷ್ಟೆಂಬುದನ್ನು (ದಿಗ್ವಿಜಯದ ಸಮಯದಲ್ಲಿ) ಜಗತ್ತು ಅನೇಕವೇಳೆ ಪ್ರತ್ಯಕ್ಷವಾಗಿಯೇ ತಿಳಿದುಕೊಂಡಿದ್ದರೂ ನೀನು ಕೊಟ್ಟಿರುವ ತೀರ್ಪಿನ ವಿಷಯದಲ್ಲಿ ಸಂಶಯಪಡುವುದಿಲ್ಲ. ಏಕೆಂದರೆ **'ಗಾಙ್ಗೇಯೋ ನ ಮೃಷಾ ವದೇತ್'** – 'ಗಾಂಗೇಯನೆಂದಿಗೂ ಸುಳ್ಳು ಹೇಳತಕ್ಕವನಲ್ಲ' – ಎಂಬ ಅಭಿಪ್ರಾಯವು ಜಗತ್ತಿನಲ್ಲಿ ರೂಢಮೂಲವಾಗಿ ರುವುದೇ ಇದಕ್ಕೆ ಕಾರಣವಾಗಿದೆ. ನಿನ್ನ ವರ್ತನೆಯಿಂದ ನೀನು ಕೌರವರಿಗೆ ಸದಾ ಅಹಿತವನ್ನೇ ಮಾಡುತ್ತಿರುವೆ. ಆದರೆ ದುರ್ಯೋಧನರಾಜನು ಈ ವಿಷಯವನ್ನು ಮನಗಂಡಿಲ್ಲ. ಉದಾರಚರಿತರಾದ, ಸಮಾನಶ್ರೇಣಿಯ ರಾಜರ ಮಧ್ಯದಲ್ಲಿ ಒಬ್ಬನನ್ನೇ ನಿರ್ದೇಶಿಸಿ ನೀನು ಮಾಡಿದ ರೀತಿಯಲ್ಲಿ ತೇಜೋವಧೆಯನ್ನು ಮತ್ತಾರುತಾನೇ ಮಾಡುತ್ತಾರೆ? ಯುದ್ಧದಲ್ಲಿ ರಾಜನ ಗೆಲುವಿಗಾಗಿ ಐಕಮತ್ಯದಿಂದ ಹೋರಾಡಬೇಕೆನ್ನುವ ಉದ್ದೇಶವು ನಿನಗಿಲ್ಲ. ನಮ್ಮಲ್ಲಿಯೇ ಒಡಕನ್ನುಂಟುಮಾಡುವುದು ನಿನ್ನ ಇಚ್ಛೆಯಾಗಿದೆ. ನನ್ನಲ್ಲಿರುವ ಗುಣಗಳು ಒಳ್ಳೆಯವೇ ಅಥವಾ ಕೆಟ್ಟವೇ–ಎಂಬ ವಿವೇಚನೆಯೇ ಇಲ್ಲದೇ ನೀನು ಆ ಗುಣಗಳನ್ನೇ ದ್ವೇಷಿಸುವೆ ಮತ್ತು ಇತರ ರಾಜರಿಗೆ ನನ್ನಲ್ಲಿ ವಿರಕ್ತಿಯುಂಟಾಗುವಂತೆ ವಿಶ್ವಾಸವಿಲ್ಲದಂತೆ ಮಾಡಲು ಪ್ರಯತ್ನಿಸುತ್ತಿರುವೆ.

**ನ ಹಾಯನೈರ್ನ ಪಲಿತೈರ್ನ ವಿತ್ತೈರ್ನ ಚ ಬನ್ಧುಭಿಃ ।**
**ಮಹಾರಥತ್ವಂ ಸಂಖ್ಯಾತುಂ ಶಕ್ಯಂ ಕ್ಷತ್ರಸ್ಯ ಕೌರವ ॥೧೬॥**

ಮಹಾರಥರಾರೆಂಬುದನ್ನು ನಿರ್ದೇಶಿಸಿ ಹೇಳುವುದು ಅಷ್ಟು ಸುಲಭ ಸಾಧ್ಯವಾದ ಕಾರ್ಯವಲ್ಲ, ಭೀಷ್ಮ! ಅಧಿಕವಯಸ್ಸಾಗಿದ್ದ ಮಾತ್ರಕ್ಕೆ ಮಹಾ

ರಥರಾರೆಂಬುದನ್ನು ಹೇಳಲಾಗುವುದಿಲ್ಲ. ಕೂದಲುಗಳು ನರೆತಮಾತ್ರಕ್ಕೆ ಮಹಾರಥರ ಪರಿಗಣನೆಯು ಸಾಧ್ಯವಾಗುವುದಿಲ್ಲ. ಅಪಾರವಾದ ಐಶ್ವರ್ಯವಿರುವುದರಿಂದಾಗಲೀ, ಅಧಿಕಸಂಖ್ಯೆಯಲ್ಲಿ ಬಂಧುಗಳಿರುವರೆಂಬ ಕಾರಣದಿಂದಾಗಲೀ–ಮಹಾರಥರಾರೆಂಬುದನ್ನು ಹೇಳುವ ಸಾಧ್ಯತೆಯಿಲ್ಲ.

**ಬಲಜ್ಯೇಷ್ಠಂ ಸ್ಮೃತಂ ಕ್ಷತ್ರಂ ಮನ್ತ್ರಜ್ಯೇಷ್ಠಾ ದ್ವಿಜಾತಯಃ ।**
**ಧನಜ್ಯೇಷ್ಠಾಃ ಸ್ಮೃತಾ ವೈಶ್ಯಾಃ ಶೂದ್ರಾಸ್ತು ವಯಸಾಧಿಕಾಃ ॥೧೭॥**

ಕ್ಷತ್ರಿಯರಲ್ಲಿ ಯಾವನು ಅಧಿಕಬಲವುಳ್ಳವನಾಗಿರುವನೋ – ಅವನೇ ಜ್ಯೇಷ್ಠನೆನಿಸುತ್ತಾನೆ. ಬ್ರಾಹ್ಮಣರಲ್ಲಿ ಯಾರು ಹೆಚ್ಚು ಮಂತ್ರವೇತ್ತರಾಗಿರು ವರೋ - ಅವರು ಜ್ಯೇಷ್ಠರೆನಿಸಿಕೊಳ್ಳುತ್ತಾರೆ. ವೈಶ್ಯರಲ್ಲಿ ಯಾರು ಹೆಚ್ಚು ಸಂಪತ್ತನ್ನು ಹೊಂದಿರುವರೋ–ಅವರು ಜ್ಯೇಷ್ಠರೆನಿಸಿಕೊಳ್ಳುತ್ತಾರೆ. ಶೂದ್ರ ರಲ್ಲಿ ಯಾರು ಅಧಿಕವಯಸ್ಕರೋ - ಅವರು ಜ್ಯೇಷ್ಠರೆನಿಸಿಕೊಳ್ಳುತ್ತಾರೆ. ಭೀಷ್ಮ! ದೊಡ್ಡ ಪದವಿಯನ್ನಲಂಕರಿಸಿರುವವನಿಗೆ ಪಕ್ಷಪಾತವಿರಬಾರದು ; ರಾಗ-ದ್ವೇಷಾದಿಗಳಿರಬಾರದು ; ಎಲ್ಲರನ್ನೂ ಒಂದೇ ದೃಷ್ಟಿಯಿಂದ ಕಾಣಬೇಕು. ಆದರೆ ನೀನಿಂದು ಕಾಮ-ದ್ವೇಷಯುಕ್ತನಾಗಿರುವೆ. ಮೋಹಪರ ವಶನಾಗಿ ಕಾರ್ಯಮಾಡುತ್ತಿರುವೆ. ವೀರರಲ್ಲಿರುವ ನೈಜವಾದ ಶಕ್ತಿ-ಸಾಮರ್ಥ್ಯಗಳನ್ನು ವಿವೇಚಿಸದೇ ಕೇವಲ ದ್ವೇಷಭಾವವನ್ನೇ ಇಟ್ಟುಕೊಂಡು ಮನಬಂದಂತೆ ರಥಾತಿರಥರಾರೆಂಬುದನ್ನು ವಿಭಾಗಿಸುತ್ತಿರುವೆ. ನಮ್ಮ ಪಕ್ಷದವರಲ್ಲಿಯೇ ಪರಸ್ಪರವಾಗಿ ಭಿನ್ನಭಾವವನ್ನುಂಟುಮಾಡಿ ದುರ್ಯೋ ಧನನ ಪಕ್ಷವನ್ನು ದುರ್ಬಲಗೊಳಿಸುವುದೇ ನಿನ್ನ ಪರಮೋದ್ದೇಶವಾಗಿರು ವಂತೆ ಕಾಣುತ್ತದೆ."

ಅನಂತರ ಕರ್ಣನು ದುರ್ಯೋಧನನನ್ನು ಕುರಿತು ಹೇಳುತ್ತಾನೆ :

**ದುರ್ಯೋಧನ ಮಹಾಬಾಹೋ ಸಾಧು ಸಮ್ಯಗವೇಕ್ಷ್ಯತಾಮ್ ।**
**ತ್ಯಜ್ಯತಾಂ ದುಷ್ಟಭಾವೋಽಯಂ ಭೀಷ್ಮಃ ಕಿಲ್ಬಿಷಕೃತ್ತವ ॥೧೮॥**

"ಮಹಾಬಾಹೋ! ದುರ್ಯೋಧನ! ಇದು ಬಹಳ ಸಂದಿಗ್ಧಸಮಯ ವಾಗಿದೆ. ಚೆನ್ನಾಗಿ, ಕೂಲಂಕಷವಾಗಿ ಪರಿಶೀಲಿಸಿ ನೋಡು. ನನ್ನ ಅಭಿ

ಪ್ರಾಯದಲ್ಲಿ ಈ ಭೀಷ್ಮನು ನಿನಗೆ ಕೆಡುಕನ್ನೇ ಮಾಡತಕ್ಕವನು ; ದುಷ್ಟಭಾವ ದಿಂದ ಕೂಡಿರತಕ್ಕವನು. ನಿನಗೆ ಹಿತವನ್ನು ಮಾಡುವ ಅಭಿಪ್ರಾಯವು ಇವನಿಗಿದ್ದಿದ್ದರೆ ಸ್ವಪಕ್ಷದಲ್ಲಿಯೇ ಭಿನ್ನತೆಗೆ ಅವಕಾಶವಾಗುವಂತಹ, ವೀರರ ಉತ್ಸಾಹವನ್ನು ಕುಗ್ಗಿಸುವಂತಹ ಇಂತಹ ಮಾತುಗಳನ್ನಾಡುತ್ತಿರಲಿಲ್ಲ. ಆದುದರಿಂದ ಈ ಕೂಡಲೇ ಇವನನ್ನು ತ್ಯಜಿಸಿಬಿಡು. (ಇಂತಹವನನ್ನು ಪ್ರಧಾನದಂಡನಾಯಕನನ್ನಾಗಿ ಮಾಡಿಕೊಳ್ಳುವುದು ಖಂಡಿತವಾಗಿಯೂ ಒಳಿತಲ್ಲ.)

**ಭಿನ್ನಾ ಹಿ ಸೇನಾ ನೃಪತೇ ದುಃಸಂಧೇಯಾ ಭವತ್ಯುತ ।**
**ಮೌಲಾ ಹಿ ಪುರುಷವ್ಯಾಘ್ರ ಕಿಮು ನಾನಾಸಮುತ್ಥಿತಾಃ ॥೨೦॥**

ಮಹಾರಾಜ! ಸೈನ್ಯದಲ್ಲಿ ಒಡಕುಂಟಾಗಿಬಿಟ್ಟರೆ ಪುನಃ ಅದನ್ನು ಒಂದುಗೂಡಿಸುವುದು ಬಹಳ ಕಷ್ಟ. ವಂಶಪಾರಂಪರ್ಯವಾಗಿರುವ ರಾಜ ಸೇವಕರೇ ಸಮಯಗಳಲ್ಲಿ ಬಿಟ್ಟುಹೋಗುತ್ತಾರೆ. ಹೀಗಿರುವಾಗ ನಾನಾದೇಶ ಗಳಿಂದ ಯಾವುದೋ ಒಂದು ನಿರ್ದಿಷ್ಟಕಾರ್ಯಕ್ಕಾಗಿ ಬಂದಿರುವವರು-ನಾಯಕರಲ್ಲಿಯೇ ಐಕಮತ್ಯವಿಲ್ಲದಿದ್ದಾಗ ಏಕೀಭಾವದಿಂದಿರುತ್ತಾರೆಯೇ?

**ಏಷಾಂ ದ್ವೈಧಂ ಸಮುತ್ಪನ್ನಂ ಯೋಧಾನಾಂ ಯುಧಿ ಭಾರತ ।**
**ತೇಜೋವಧೋ ನಃ ಕ್ರಿಯತೇ ಪ್ರತ್ಯಕ್ಷೇಣ ವಿಶೇಷತಃ ॥೨೧॥**

ಇವನು ಹೇಳಿದ ಮಾತಿನಿಂದಾಗಿ ಯುದ್ಧವು ಆರಂಭವಾಗುವ ಮೊದಲೇ ನಮ್ಮ ಯೋಧರಲ್ಲಿ ಪರಸ್ಪರಭಿನ್ನಭಾವವು ಉಂಟಾಗಿಬಿಟ್ಟಿದೆ. (ನನ್ನನ್ನು ತೆಗಳಿದ್ದರಿಂದ ಅನೇಕಯೋಧರು ಅಸಮಾಧಾನಹೊಂದಿದ್ದಾರೆ.) ನೀನು ನೋಡುತ್ತಿರುವಂತೆಯೇ ಈ ಭೀಷ್ಮನು ಸರ್ವರಾಜರ ಸಮ್ಮುಖದಲ್ಲಿ ನನ್ನ ತೇಜೋವಧೆಯನ್ನು ಮಾಡುತ್ತಿದ್ದಾನೆ ; ನನ್ನ ಯುದ್ಧೋತ್ಸಾಹವನ್ನು ಕುಗ್ಗಿಸುತ್ತಿದ್ದಾನೆ.

**ರಥಾನಾಂ ಕ್ವ ಚ ವಿಜ್ಞಾನಂ ಕ್ವ ಚ ಭೀಷ್ಮೋಽಲ್ಪಚೇತನಃ ।**
**ಅಹಮಾವಾರಯಿಷ್ಯಾಮಿ ಪಾಣ್ಡವಾನಾಮನೀಕಿನೀಮ್ ॥೨೨॥**

ರಥಾತಿರಥ-ಮಹಾರಥರನ್ನು ತಿಳಿದುಕೊಳ್ಳುವ ಮಹಾವಿಜ್ಞಾನವೆಲ್ಲಿ?

ಅಲ್ಪಬುದ್ಧಿಯವನಾದ ಈ ಭೀಷ್ಮನೆಲ್ಲಿ? ಅಲ್ಪಮತಿಯಾದ, ರಾಗ-ದ್ವೇಷಪೂರಿತ ನಾದ ಈ ಭೀಷ್ಮನಿಗೆ ರಥಾತಿರಥ-ಮಹಾರಥರನ್ನು ವಿಭಾಗಿಸುವ ಬುದ್ಧಿಕೌಶಲ್ಯವು ಹೇಗೆ ತಾನೇ ಇರಲು ಸಾಧ್ಯ? ಇವನು ನನ್ನನ್ನು ಅರ್ಧರಥನೆಂದು ಗಣನೆಮಾಡಿರುವನಲ್ಲವೇ? ದುರ್ಯೋಧನ! ನಾನೊಬ್ಬನೇ ನಿಂತು ಅಖಂಡವಾದ ಪಾಂಡವಸೈನ್ಯವನ್ನೂ ಎದುರಿಸಿ ನಿಲ್ಲುತ್ತೇನೆ. ಅಮೋಘವಾದ ಬಾಣಗಳಿಂದ ಕೂಡಿರುವ ನನ್ನನ್ನು ಎದುರಿಸಿ ನಿಲ್ಲಲಾರದೇ ಪಾಂಚಾಲರಿಂದ ಕೂಡಿರುವ ಪಾಂಡವರು–ಸಿಂಹವನ್ನು ಕಂಡ ಎತ್ತುಗಳಂತೆ–ದಿಕ್ಕಾಪಾಲಾಗಿ ಓಡಿಹೋಗುತ್ತಾರೆ. ಕೌರವೇಶ್ವರ! ಆ ಮಹಾಯುದ್ಧವೆಲ್ಲಿ? ಸಾವಿನ ಪರಿಣಾಮವನ್ನುಂಟುಮಾಡುವ ಹೊಡೆದಾಟ-ಬಡಿದಾಟಗಳೆಲ್ಲಿ? ಗುಪ್ತಸಮಾಲೋಚನೆಯಲ್ಲಿ ಯಾರೊಬ್ಬರಿಗೂ ಅಸಮಾಧಾನವಾಗದ ರೀತಿ ಯಲ್ಲಾಡುವ ಸೌಜನ್ಯದ ಮಾತುಗಳೆಲ್ಲಿ? ಆಯುಷ್ಯವನ್ನು ಸಂಪೂರ್ಣವಾಗಿ ಕಳೆದುಕೊಂಡಿರುವ ಕಾಲಚೋದಿತನಾಗಿರುವ ಮಂದಾತ್ಮನಾದ ಭೀಷ್ಮನೆಲ್ಲಿ? ಒಂದೊಂದಕ್ಕೂ ಸಂಬಂಧವೇ ಇಲ್ಲ. ಗತವಯಸ್ಕನು, ವೃದ್ಧನಾಗಿರತಕ್ಕವನು ಯುದ್ಧ ಮಾಡುವನೇ? ಹೊಡೆದಾಟ-ಬಡಿದಾಟಗಳನ್ನು ತಡೆದು ನಿಲ್ಲುವನೇ? ಮೂರ್ಖನಾದವನಿಗೆ 'ಮಂತ್ರಾಲೋಚನೆ' ಎಂದರೆ ಏನೆಂಬುದಾದರೂ ತಿಳಿದಿರುವುದೇ? ತನ್ನ ಪಕ್ಷೀಯರ ವಿಷಯದಲ್ಲಿ ಸೌಜನ್ಯದ ಮಾತುಗಳನ್ನೂ ಆಡದವನು ಮೂರ್ಖನಲ್ಲವೇ? ಇಂತಹವನಿಂದ ನೀನು ಯಾವ ಕಾರ್ಯವನ್ನು ತಾನೇ ಸಾಧಿಸಬಲ್ಲೆ? ಈ ಭೀಷ್ಮನು ಕೇವಲ ಕಾಲಚೋದಿತನಾಗಿದ್ದಾನೆ. ಇವನ ಅಂತ್ಯಕಾಲವು ಸಮೀಪಿಸಿಬಿಟ್ಟಿದೆ. ಅಖಂಡವಿಶ್ವವನ್ನೂ ತಾನೊಬ್ಬನೇ ಎದುರಿಸಿ ನಿಲ್ಲುವೆನೆಂದು ಅನುದಿನವೂ ಸ್ಪರ್ಧಿಸುತ್ತಲೇ ಇರುತ್ತಾನೆ. ಹೀನದೃಷ್ಟಿಯವನಾದ ಇವನು ತನ್ನನ್ನು ಬಿಟ್ಟು ಬೇರೆಯವರನ್ನು ಪುರುಷರೆಂದೇ ಭಾವಿಸುವುದಿಲ್ಲ. ಇವನ ದೃಷ್ಟಿಯಲ್ಲಿ ಇವನಿಗೆ ಸಮಾನರಾದ ವೀರಪುರುಷರು ಹುಟ್ಟಿಯೇ ಇಲ್ಲ.

**ಶ್ರೋತವ್ಯಂ ಖಲು ವೃದ್ಧಾನಾಮಿತಿ ಶಾಸ್ತ್ರನಿದರ್ಶನಮ್ ।**
**ನ ತ್ವೇವ ಹ್ಯತಿವೃದ್ಧಾನಾಂ ಪುನರ್ಬಾಲಾ ಹಿ ತೇ ಮತಾಃ ॥೨೬॥**

ವೃದ್ಧರಾದವರ ಹಿತೋಕ್ತಿಗಳನ್ನು ಕೇಳಬೇಕೆಂದು ಶಾಸ್ತ್ರಗಳೇನೋ ನಿರ್ದೇಶಿಸುತ್ತವೆ. ಆದರೆ ಆ ಮಾತು ಈ ಭೀಷ್ಮನಿಗನ್ವಯಿಸುವುದಿಲ್ಲ.

ಇವನು ಅತಿವೃದ್ಧನಾಗಿಬಿಟ್ಟಿದ್ದಾನೆ. ಅತಿವೃದ್ಧರಾದವರ ಮಾತನ್ನು ಕೇಳುವುದು ಖಂಡಿತವಾಗಿಯೂ ಉಚಿತವಲ್ಲ. ಏಕೆಂದರೆ : ವಸ್ತುತಃ ಅತಿವೃದ್ಧರಾದವರು ಏನೂ ಅರಿಯದ ಬಾಲಕರಂತಿರುತ್ತಾರೆ. ಅವರಿಗೆ ಯಾವ ವಿಧವಾದ ವೈಚಾರಿಕಬುದ್ಧಿಯೂ ಇರುವುದಿಲ್ಲ. ರಾಜಶಾರ್ದೂಲ! ಧರ್ಮಯುದ್ಧದಲ್ಲಿ ನಾನೊಬ್ಬನೇ ಪಾಂಡವರ ಸೈನ್ಯವೆಲ್ಲವನ್ನೂ ಸಂಹಾರಮಾಡಬಲ್ಲೆನು. ಆದರೆ ಇದರ ಯಶಸ್ಸು ಮಾತ್ರ ಭೀಷ್ಮನಿಗೆ ಸೇರುತ್ತದೆ. ನೀನಿವನನ್ನು ಸೇನಾಪತಿಯನ್ನಾಗಿ ಮಾಡಿಬಿಟ್ಟಿರುವೆ.

**ಸೇನಾಪತೌ ಯಶೋ ಗನ್ತಾ ನ ತು ಯೋಧಾನ್ಕಥಂಚನ ॥೨೮॥**

ಯುದ್ಧದಲ್ಲಿ ಗೆದ್ದರೆ ಯಶಸ್ಸು ಸೇನಾಪತಿಗೆ ಸೇರುತ್ತದೆಯೇ ಹೊರತು ಪ್ರಾಣಗಳನ್ನೇ ಒತ್ತೆಯಾಗಿಟ್ಟು ಯುದ್ಧಮಾಡುವ ಯೋಧನಿಗೆ ಯಾವ ಕಾಲಕ್ಕೂ ಸೇರುವುದಿಲ್ಲ.

**ನಾಹಂ ಜೀವತಿ ಗಾಙ್ಗೇಯೇ ಯೋತ್ಸ್ಯೇ ರಾಜನ್ಕಥಂಚನ ।**
**ಹತೇ ಭೀಷ್ಮೇ ತು ಯೋದ್ಧಾಸ್ಮಿ ಸರ್ವೈರೇವ ಮಹಾರಥೈಃ ॥೨೯॥**

ಭೀಷ್ಮನು ಜೀವಿಸಿರುವ ಪರ್ಯಂತವಾಗಿ ನಾನು ಶತ್ರುಗಳೊಡನೆ ಖಂಡಿತವಾಗಿಯೂ ಯುದ್ಧಮಾಡುವುದಿಲ್ಲ. ಶತ್ರುಗಳಿಂದ ಇವನ ಸಂಹಾರವಾದನಂತರದಲ್ಲಿ ಶತ್ರುಪಕ್ಷದ ಎಲ್ಲ ಮಹಾರಥರನ್ನೂ ಎದುರಿಸಿ ನಾನು ಯುದ್ಧಮಾಡುತ್ತೇನೆ.”

ಕರ್ಣನ ಮಾತನ್ನು ಕೇಳಿ ರುಷ್ಟನಾದ ಭೀಷ್ಮನು ಹೇಳಿದನು :

“ಎಲ್ಲವೋ ಸೂತಪುತ್ರ! ದುರ್ಯೋಧನನ ಈ ಯುದ್ಧದಲ್ಲಿ ಸಾಗರೋಪಮವಾದ ಸೇನಾಪತ್ಯದ ಮಹಾಭಾರವನ್ನಿಂದು ನಾನು ವಹಿಸಿ ಕೊಂಡಿರುತ್ತೇನೆ. ಈ ಸಂಗ್ರಾಮದ ವಿಷಯವಾಗಿಯೇ ನಾನು ಅನೇಕವರ್ಷ ಗಳಿಂದ ಚಿಂತಿಸುತ್ತಿದ್ದೆನು. ಸರ್ವಸಂತಾಪದಾಯಕವಾದ, ರೋಮಾಂಚಕಾರಕ ವಾದ ಅಂತಹ ಸಂಗ್ರಾಮವು ಸನ್ನಿಹಿತವಾಗಿರುವ ಈ ಸಮಯದಲ್ಲಿ ನಾನು ನಮ್ಮ ಪಕ್ಷದಲ್ಲಿಯೇ ಒಡಕನ್ನುಂಟುಮಾಡಕೂಡದೆಂಬ ಅಭಿಲಾಷೆಯಿಂದಿರುತ್ತೇನೆ. ಇಷ್ಟು ನಿಷ್ಠುರವಾದ ಮಾತುಗಳನ್ನಾಡಿದನಂತರವೂ ನೀನು ಬದುಕಿ ಉಳಿದಿ

ರುವ ಅವಕಾಶವು ಸಿಕ್ಕಿರುವುದಕ್ಕೆ ನಮ್ಮ ಪಕ್ಷದಲ್ಲಿ ಭೇದವನ್ನುಂಟು ಮಾಡಕೂಡದೆಂಬ ನನ್ನ ಆಶಯವೇ ಕಾರಣವಾಗಿದೆ. ಹಾಗಿಲ್ಲದಿದ್ದರೆ ಈ ಮಾತುಗಳನ್ನಾಡಿದ ಮರುಕ್ಷಣದಲ್ಲಿಯೇ ನಿನ್ನ ಸಂಹಾರವಾಗಿಬಿಡುತ್ತಿದ್ದಿತು.

**ನ ಹ್ಯಹಂ ತ್ವದ್ಯ ವಿಕ್ರಮ್ಯ ಸ್ಥವಿರೋಽಪಿ ಶಿಶೋಸ್ತವ ।**
**ಯುದ್ಧಶ್ರದ್ಧಾಮಹಂ ಛಿನ್ದ್ಯಾಂ ಜೀವಿತಸ್ಯ ಚ ಸೂತಜ ॥೩೨॥**

ನಾನು ಯದ್ಯಪಿ ವೃದ್ಧನೇ ಆಗಿದ್ದರೂ ಶಿಶುಸಮಾನನಾದ ನಿನ್ನ ಯುದ್ಧಶ್ರದ್ಧೆಯನ್ನೂ ಮತ್ತು ಜೀವಿತವನ್ನೂ ಕತ್ತರಿಸಿಯೇ ಬಿಡುತ್ತಿದ್ದೆನು. ಆದರೆ ನಮ್ಮ ಪಕ್ಷದಲ್ಲಿ ಒಡಕುಂಟಾಗಕೂಡದೆಂಬ ಒಂದೇ ಒಂದು ಕಾರಣದಿಂದ ಆ ಕಾರ್ಯವನ್ನು ನಾನೀಗ ಮಾಡುವುದಿಲ್ಲ. ತಿಳಿಯಿತೇ? ಸೂತಪುತ್ರ! ಮಹಾಸ್ತ್ರಗಳನ್ನು ನನ್ನ ಮೇಲೆ ಸತತವಾಗಿ ಪ್ರಯೋಗಿಸಿದ ಪರಶುರಾಮನೇ ನನಗೆ ಯಾವ ವಿಧವಾದ ವ್ಯಥೆಯನ್ನೂ ಉಂಟುಮಾಡಲು ಸಮರ್ಥನಾಗಲಿಲ್ಲ. ನೀನೇನು ಮಾಡಬಲ್ಲೆ?

**ಕಾಮಂ ನೈತತ್ಪ್ರಶಂಸನ್ತಿ ಸನ್ತಃ ಸ್ವಬಲಸಂಸ್ತವಮ್ ।**
**ವಕ್ಷ್ಯಾಮಿ ತು ತ್ವಾಂ ಸಂತಪ್ತೋ ನಿಹೀನಕುಲಪಾಂಸನ ॥೩೪॥**

ನೀಚಕುಲದಲ್ಲಿ ಹುಟ್ಟಿರುವುದು ಮಾತ್ರವಲ್ಲದೇ-ಆ ಕುಲಕ್ಕೂ ಕಳಂಕಪ್ರಾಯನಾಗಿರತಕ್ಕವನೇ! ಸಾಧುಪುರುಷರು ಆತ್ಮಬಲಶ್ಲಾಘನೆಯನ್ನು ಯಾವ ಕಾರಣದಿಂದಲೂ ಪ್ರಶಂಸೆಮಾಡುವುದಿಲ್ಲ. ಆದರೂ ನಿನ್ನ ಮಾತಿನ ಪ್ರಹಾರದಿಂದ ಸಂತಪ್ತನಾಗಿರುವ ನಾನು ನನ್ನ ಬಲದ ವಿಷಯವಾಗಿ ಎರಡು ಮಾತುಗಳನ್ನು ಹೇಳುತ್ತೇನೆ. ಕಾಶಿರಾಜನು ಏರ್ಪಡಿಸಿದ್ದ ಸ್ವಯಂವರಕ್ಕೆ ಭೂಮಂಡಲದ ಸಕಲರಾಜರೂ ಬಂದಿದ್ದರು. ಏಕರಥದಲ್ಲಿ ಕುಳಿತು ಅವರೆಲ್ಲರೊಡನೆಯೂ ಯುದ್ಧಮಾಡಿ ಎಲ್ಲರನ್ನೂ ಪರಾಜಯಗೊಳಿಸಿ ಮೂವರು ಕನ್ಯೆಯರನ್ನೂ ನಾನು ಬಲಾತ್ಕಾರಪೂರ್ವಕವಾಗಿ ಕರೆದುಕೊಂಡು ಬಂದೆನು. ಇಲ್ಲಿ ಸೇರಿರುವಂತೆಯೇ ಅಲ್ಲಿಯೂ ಚತುರಂಗಬಲಸಮೇತರಾದ ಇಂತಹ ಸಾವಿರಾರು ರಾಜರೂ, ಇನ್ನೂ ಶೂರರಾದ ರಾಜರೂ ಏಕತ್ರ ಮಿಳಿತರಾಗಿದ್ದರು. ರಣಾಂಗಣದಲ್ಲಿ ನನ್ನೊಬ್ಬನಿಂದಲೇ ಅಸಂಖ್ಯಾತರಾಜರು ಪರಾಜಿತರಾದರು. ವೈರವೇ ಮೂರ್ತಿಮತ್ತಾಗಿರುವ ನಿನ್ನನ್ನು ಪಡೆದುಕೊಂಡ

ಕೌರವರಿಗೆ ಬಹಳ ಅನ್ಯಾಯವಾಗಿ ಹೋಯಿತು. ಈ ಕುರುವಂಶವಿಂದು ವಿನಾಶಕ್ಕೆ ಸಮೀಪಸ್ಥವಾಗಿ ನಿಂತಿದೆ. (ನಿನ್ನಿಂದಾಗಿ ಕುರುವಂಶವೇ ವಿನಾಶದ ಹಾದಿಯನ್ನು ಹಿಡಿದು ನಿಂತಿದೆ.) ಈ ಸಮಯದಲ್ಲಿ ನೀನು ಇಲ್ಲಸಲ್ಲದ ವ್ಯಾಜಗಳನ್ನೊಡ್ಡಿ ಯುದ್ಧದಿಂದ ತಪ್ಪಿಸಿಕೊಳ್ಳಲು ಯತ್ನಿಸಬೇಡ. ಕೌರವರ ವಿಜಯಕ್ಕಾಗಿ ಸಾಕಷ್ಟು ಪ್ರಯತ್ನಿಸಿ ನಿನ್ನ ಪೌರುಷವನ್ನು ಪ್ರಕಟಿಸು.

ದುರ್ಮತಿಯೇ! ನೀನು ಯಾರೊಡನೆ ಅನುದಿನವೂ ಸ್ಪರ್ಧಿಸಲು ಇಚ್ಛಿಸುತ್ತಿರುವೆಯೋ– ಆ ಅರ್ಜುನನೊಡನೆ ರಣಾಂಗಣದಲ್ಲಿ ಯುದ್ಧ ಮಾಡು. ನೀನು ಆ ಯುದ್ಧದಿಂದ ವಿಮುಕ್ತನಾಗಿ ಹೇಗೆ ಹೊರ ಬರುವೆಯೆಂಬುದನ್ನು ನಾನೂ ನೋಡುತ್ತೇನೆ."

ಧೃತರಾಷ್ಟ್ರಮಹಾರಾಜ! ಈ ರೀತಿಯಲ್ಲಿ ತನ್ನಿಬ್ಬರು ಸೇನಾ ಪ್ರಮುಖರಲ್ಲಿಯೇ ಈ ವಿಧವಾದ ವಾಗ್ವಾದವು ನಡೆಯುತ್ತಿದ್ದಾಗ ಪ್ರತಾಪವಂತನಾದ ದುರ್ಯೋಧನನು ಭೀಷ್ಮನನ್ನು ಕುರಿತು ಹೇಳಿದನು :

**ಮಾಂ ಸಮೀಕ್ಷಸ್ವ ಗಾಙ್ಗೇಯ ಕಾರ್ಯಂ ಹಿ ಮಹದುದ್ಯತಮ್ ॥**

"ತಾತ! ಗಾಂಗೇಯ! ನೀನು ನನ್ನನ್ನು ನೋಡಿ ನನಗಾಗಿ ಕಾರ್ಯಮಾಡು. ದೊಡ್ಡದಾದೊಂದು ಕಾರ್ಯವು (ಯುದ್ಧವು) ಆರಂಭವಾಗಿ ಬಿಟ್ಟಿದೆ. ಅವ್ಯಗ್ರಚಿತ್ತರಾಗಿ ನೀವಿಬ್ಬರೂ ಕೂಡ ನನ್ನ ಶ್ರೇಯಸ್ಸಿನ ವಿಷಯವಾಗಿ ಯೋಚಿಸಿರಿ. ನೀವಿಬ್ಬರೂ ನನಗಾಗಿ ಮತ್ತು ನನ್ನ ಶ್ರೇಯಸ್ಸಿಗಾಗಿ ಮಹಾಕಾರ್ಯವನ್ನು ಮಾಡಬಲ್ಲಿರಿ.

ಪಿತಾಮಹ! ನಮ್ಮ ಶತ್ರುಪಕ್ಷದಲ್ಲಿರುವ ರಥಶ್ರೇಷ್ಠರನ್ನು ಪುನಃ ನಿನ್ನಿಂದ ಕೇಳಿ ತಿಳಿದುಕೊಳ್ಳಬೇಕೆಂದಿರುತ್ತೇನೆ. ಅಲ್ಲಿರುವ ಅತಿರಥರು ಮತ್ತು ರಥಯೂಥಪರು ಯಾರೆಂಬುದನ್ನು ತಿಳಿದುಕೊಳ್ಳುವ ಇಚ್ಛೆಯಿಂದಿರುತ್ತೇನೆ. ಕೌರವ! ಶತ್ರುಗಳ ಬಲಾಬಲವನ್ನು ತಿಳಿದುಕೊಳ್ಳಬೇಕೆಂದಿರುತ್ತೇನೆ. ರಾತ್ರಿಯು ಕಳೆದು ಬೆಳಗಾಗುತ್ತಲೇ ಮಹಾಯುದ್ಧವು ಪ್ರಾರಂಭವಾಗುತ್ತದೆ."

೧೬೮ನೆಯ ಅಧ್ಯಾಯವು ಮುಗಿಯಿತು.

## ಪಾಂಡವರ ಪಕ್ಷದ ರಥಾತಿರಥರನ್ನು ಭೀಷ್ಮನು ಹೆಸರಿಸಿದುದು

ಭೀಷ್ಮನು ದುರ್ಯೋಧನನಿಗೆ ಹೇಳುತ್ತಾನೆ :

"ನರೇಶ್ವರ! ನಾನು ಹೇಳಿರುವ ಇವರೇ ನಿನ್ನ ಪಕ್ಷದಲ್ಲಿರುವ ರಥಾತಿರಥರು ಮತ್ತು ಅರ್ಧರಥರು. ನಿನ್ನ ಅಪೇಕ್ಷೆಯಂತೆ ಪಾಂಡವರ ಪಕ್ಷದಲ್ಲಿರುವ ರಥಾತಿರಥ-ಮಹಾರಥರನ್ನೂ ಹೆಸರಿಸುತ್ತೇನೆ. ನಿನಗೇನಾದರೂ ಪಾಂಡವರ ಪಕ್ಷದಲ್ಲಿರುವ ರಥಿಗಳ ಸಂಖ್ಯೆಯನ್ನು ತಿಳಿದುಕೊಳ್ಳಲು ಕೌತೂಹಲವಿರುವುದಾದರೆ ಈ ಪೃಥ್ವೀಪಾಲರ ಸಮಕ್ಷದಲ್ಲಿಯೇ ನಾನು ಹೇಳುವುದನ್ನು ಕೇಳು.

ಕುಂತಿಗೆ ಆನಂದದಾಯಕನಾದ, ಸಮರ್ಥನಾದ, ರಾಜನಾದ ಯುಧಿಷ್ಠಿರನೇ ಸ್ವಯಂಶ್ರೇಷ್ಠನಾದ ರಥನಾಗಿದ್ದಾನೆ. ಅವನು ಸಮರಾಂಗಣ ದಲ್ಲಿ ಯಜ್ಞೇಶ್ವರನಂತೆ ಸರ್ವತ್ರ ಸಂಚರಿಸುತ್ತಾನೆ. ಇದರಲ್ಲಾವ ಸಂಶಯವೂ ಇಲ್ಲ. ಭೀಮಸೇನನು ಎಂಟು ಮಂದಿ ರಥರಿಗೆ ಸಮಾನನು. ಗದಾಯುದ್ಧ ದಲ್ಲಾಗಲೀ ಧನುರ್ಯುದ್ಧದಲ್ಲಾಗಲೀ–ಅವನಿಗೆ ಸಮಾನವಾಗಿ ಯುದ್ಧ ಮಾಡುವವರು ಮತ್ತಾರೂ ಇರುವುದಿಲ್ಲ. ಮಾನಿಷ್ಠನಾದ ಭೀಮಸೇನನು ಹತ್ತುಸಾವಿರ ಆನೆಗಳ ಬಲವುಳ್ಳವನಾಗಿದ್ದಾನೆ. ಮಾನವಾತೀತವಾದ (ಅಲೌಕಿಕವಾದ) ತೇಜಸ್ಸಿನಿಂದ ಕೂಡಿದ್ದಾನೆ. ಅಶ್ವಿನೀದೇವತೆಗಳಂತೆ ರೂಪಸಂಪನ್ನರಾಗಿಯೂ ತೇಜಃಪುಂಜಯುಕ್ತರಾಗಿಯೂ ಇರುವ ಪುರುಷರ್ಷಭರಾದ ಮಾದ್ರಿಯ ಮಕ್ಕಳಾದ ನಕುಲ-ಸಹದೇವರಿಬ್ಬರೂ ರಥರು. ಆ ನಾಲ್ವರೂ ಹಿಂದೆ ಅನುಭವಿಸಿದ ಕ್ಲೇಶಗಳನ್ನು ಸ್ಮರಿಸುತ್ತಾ ನಿನ್ನ ಸೇನೆಯೊಳಗೆ ನುಗ್ಗಿ ಸಾಕ್ಷಾತ್ ರುದ್ರದೇವನಂತೆಯೇ ರಣಾಂಗಣದ ಸುತ್ತಲೂ ಭಯರಹಿತರಾಗಿ ಸಂಚರಿಸುತ್ತಾರೆ. ಈ ವಿಷಯದಲ್ಲಿ ನನಗೆ ಸಂಶಯವೇ ಇಲ್ಲ. ದುರ್ಯೋಧನ! ಅವರೆಲ್ಲರೂ ಮಹಾತ್ಮರು. ಶಾಲವೃಕ್ಷದ ಸ್ತಂಭ ಗಳಂತೆ ಎತ್ತರವಾಗಿರುವವರು. ಎತ್ತರದಲ್ಲಿ ಅನ್ಯಪುರುಷರಿಗಿಂತಲೂ ಒಂದು

ಚೋಟಿನಷ್ಟು ಹೆಚ್ಚು ಎತ್ತರವಿರುವವರು. ಸಿಂಹಕ್ಕೆ ಸಮಾನವಾದ ಮೈಕಟ್ಟುಳ್ಳವರು. ಪಾಂಡುವಿನ ಮಕ್ಕಳೆಲ್ಲರೂ ಮಹಾಬಲಿಷ್ಠರು. ಬ್ರಹ್ಮಚರ್ಯವ್ರತಾನುಷ್ಠಾನವನ್ನು ಮಾಡಿರುವವರು. ಎಲ್ಲರೂ ತಪಸ್ವಿಗಳು. ಲಜ್ಜಾಶೀಲರು. ಪುರುಷವ್ಯಾಘ್ರರಾದ ಅವರು ವ್ಯಾಘ್ರಗಳಂತೆಯೇ ಉತ್ಕಟವಾದ ಬಲವುಳ್ಳವರಾಗಿದ್ದಾರೆ. ವೇಗದಲ್ಲಿ, ಪ್ರಹರಿಸುವುದರಲ್ಲಿ ಮತ್ತು ಸಂಘರ್ಷದಲ್ಲಿ (ಆಕ್ರಮಣಮಾಡುವುದರಲ್ಲಿ) ಅವರೆಲ್ಲರೂ ಅತಿಮಾನುಷರೀತಿಯಲ್ಲಿ ವರ್ತಿಸತಕ್ಕವರು. ದಿಗ್ವಿಜಯಸಮಯದಲ್ಲಿ ಪಾಂಡುಪುತ್ರರು ಪೃಥ್ವಿಯ ಎಲ್ಲ ರಾಜರನ್ನೂ ಪರಾಜಯಗೊಳಿಸಿದರು. ಪಾಂಡುಪುತ್ರರ ಆಯುಧಪ್ರಹಾರವನ್ನಾಗಲೀ, ಗದಾಪ್ರಹಾರವನ್ನಾಗಲೀ, ಬಾಣಪ್ರಹಾರವನ್ನಾಗಲೀ–ಯಾವ ಪುರುಷರೂ ಸಹಿಸಿಕೊಳ್ಳಲಾರರು. ಇಷ್ಟುಮಾತ್ರವಲ್ಲ. ಅವರ ಧನುಸ್ಸುಗಳಿಗೆ ಹೆದೆಯೇರಿಸಲು ಸಹ (ಶಿಂಜಿನಿಯನ್ನು ಸೆಳೆದು ಕಟ್ಟಲು ಸಹ) ಯಾರಿಂದಲೂ ಸಾಧ್ಯವಾಗುವುದಿಲ್ಲ. ಅವರಲ್ಲಿರುವ ಬಾಣಗಳನ್ನೂ ಬೇರೆಯವರು ಧನುಸ್ಸಿಗೆ ಯೋಜಿಸಿ ಸೆಳೆದು ಬಿಡಲಾರರು. ಅವರು ಇನ್ನೂ ಬಾಲಕರಾಗಿದ್ದಾಗಲೇ ವೇಗದಲ್ಲಿ (ಓಡುವುದರಲ್ಲಿ), ಲಕ್ಷ್ಯವನ್ನು ಭೇದಿಸುವುದರಲ್ಲಿ, ಊಟದಲ್ಲಿ, ಮಣ್ಣಿನಲ್ಲಿ ಆಟವಾಡುವುದರಲ್ಲಿ–ನಿಮ್ಮೆಲ್ಲರನ್ನೂ ಮೀರಿಸಿಬಿಡುತ್ತಿದ್ದರು. ಬಲೋತ್ಕಟ ರಾದ ಅವರೆಲ್ಲರೂ ಯುದ್ಧದಲ್ಲಿ ನಿನ್ನ ಸೈನ್ಯದೊಳಗೆ ನುಗ್ಗಿ ನಿನ್ನ ಸೈನ್ಯವನ್ನು ಧ್ವಂಸಮಾಡಿಬಿಡುತ್ತಾರೆ.

ಯುದ್ಧದಲ್ಲಿ ಅವರೊಡನೆ ನೀನು ನೇರವಾಗಿ ಸಂಪರ್ಕಹೊಂದ ಬಾರದೆಂದು ನಾನು ಅಭಿಲಾಷಿಸುತ್ತೇನೆ. ಯುದ್ಧದಲ್ಲಿ ಅವರು ಒಬ್ಬೊಬ್ಬರೇ ಈ ಎಲ್ಲ ಮಹೀಕ್ಷಿತರನ್ನೂ ಎದುರಿಸಿ ನಿಂತು ಇವರೆಲ್ಲರನ್ನೂ ಸಂಹರಿಸ ಬಲ್ಲರು. ರಾಜಸೂಯಯಾಗದ ಸಮಯದಲ್ಲಿ ಹೇಗೆ ನಡೆಯಿತೆಂಬುದನ್ನು ನೀನು ಪ್ರತ್ಯಕ್ಷವಾಗಿಯೇ ನೋಡಿರುವೆ. ದ್ರೌಪದಿಯು ಅನುಭವಿಸಿದ ಕ್ಲೇಶವನ್ನೂ ದ್ಯೂತಸಮಯದಲ್ಲಿ ನೀವುಗಳಾಡಿದ ಕಾಠಿನ್ಯದ ಮಾತುಗಳನ್ನೂ ಸ್ಮರಿಸುತ್ತಾ ಆ ಪಾಂಡವರು ರುದ್ರದೇವನಂತೆಯೇ ಈ ರಣಾಂಗಣದಲ್ಲಿ ಅತ್ತಲಿಂದಿತ್ತ ಸಂಚರಿಸುತ್ತಾರೆ. ಲೋಹಿತಾಕ್ಷನಾದ, ನಿದ್ರೆಯನ್ನೇ ಜಯಿಸಿರುವ ಅರ್ಜುನನು ನಾರಾಯಣನನ್ನೇ (ಶ್ರೀಕೃಷ್ಣನನ್ನೇ) ಸಹಾಯಕನನ್ನಾಗಿ ಪಡೆದುಕೊಂಡಿರುತ್ತಾನೆ. ಎರಡು ಪಕ್ಷಗಳ ಸೈನ್ಯಗಳಲ್ಲಿಯೂ ಅಂತಹ

ರಥಿಯು ಇಲ್ಲವೆಂಬುದೇ ನನ್ನ ಅಭಿಪ್ರಾಯವಾಗಿದೆ, ದುರ್ಯೋಧನ! ಎರಡು ಸೈನ್ಯಗಳಲ್ಲಿಯೇ ಮಾತ್ರವಲ್ಲ! ಸಮಸ್ತದೇವತೆಗಳಲ್ಲಾಗಲೀ, ಅಸುರ ರಲ್ಲಾಗಲೀ, ರಾಕ್ಷಸರಲ್ಲಾಗಲೀ, ಯಕ್ಷರಲ್ಲಾಗಲೀ-ಅರ್ಜುನನಂತಹ ವೀರನಿಲ್ಲ. ಹೀಗಿರುವಾಗ ಮನುಷ್ಯರಲ್ಲಿ ಅಂತಹ ವೀರನೆಲ್ಲಿರುವನು? ಇರಲು ತಾನೇ ಹೇಗೆ ಸಾಧ್ಯ? ಹಿಂದೆಯೂ ಇಂತಹ ವೀರನೊಬ್ಬನಿದ್ದನೆಂಬ ವಾರ್ತೆಯನ್ನು ನಾನಿದುವರೆಗೂ ಕೇಳಿಲ್ಲ. ಮುಂದಾದರೂ ಅರ್ಜುನನಿಗೆ ಸಮಾನನಾದ ಅತಿರಥನು ಹುಟ್ಟುವನೇ–ಎಂಬ ವಿಷಯದಲ್ಲೂ ನನಗೆ ಸಂದೇಹವಿದೆ. ಹುಟ್ಟಲಾರನೆಂಬುದೇ ನನ್ನ ಖಚಿತವಾದ ಅಭಿಪ್ರಾಯವಾಗಿದೆ.

ಮಹಾರಾಜ! ಧೀಮಂತನಾದ ಪಾರ್ಥನ ರಥವು ಸಜ್ಜಾಗಿ ನಿಂತಿದೆ. ವಾಸುದೇವನೇ ಆ ರಥದ ಚಾಲಕನು. ರಥದಲ್ಲಿ ಕುಳಿತು ಯುದ್ಧಮಾಡುವವನು ಧನಂಜಯನೇ ಆಗಿದ್ದಾನೆ. ಅವನ ಬಳಿಯಲ್ಲಿ ದಿವ್ಯವಾದ ಗಾಂಡೀವಧನುಸ್ಸಿದೆ. ರಥಕ್ಕೆ ಕಟ್ಟಿರುವ ಕುದುರೆಗಳು ವಾಯುವೇಗಕ್ಕೆ ಸಮಾನವಾದ ವೇಗವುಳ್ಳವುಗಳಾಗಿವೆ. ದಿವ್ಯವಾದ ಅಭೇದ್ಯವಾದ ಕವಚವೂ ಅವನಲ್ಲಿದೆ. ಕ್ಷಯಿಸದೇ ಇರತಕ್ಕ ಎರಡು ಬತ್ತಳಿಕೆಗಳೂ ಅವನಲ್ಲಿವೆ. ಅವನ ರಥದಲ್ಲಿ ಮಹಾಸ್ತ್ರಗಳ ಸಮುದಾಯವೇ ಇದೆ. ಮಾಹೇಂದ್ರ, ರೌದ್ರ, ಕೌಬೇರ, ಯಾಮ್ಯ, ವಾರುಣ – ಇವೇ ಮುಂತಾದ ಮಹಾಸ್ತ್ರಗಳಿರುವುದಲ್ಲದೇ–ಭಯಂಕರವಾಗಿ ಕಾಣುವ ಗದೆಗಳೂ ಆ ರಥದಲ್ಲಿವೆ. ವಜ್ರಾಯುಧವೇ ಮೊದಲಾದ ಅತಿಮುಖ್ಯವಾದ, ನಾನಾವಿಧವಾದ ಆಯುಧಗಳೂ ಆ ರಥದಲ್ಲಿವೆ. ಹಿರಣ್ಯಪುರವಾಸಿಗಳಾದ ಸಾವಿರಾರು ದಾನವರನ್ನು ಏಕರಥನಾಗಿಯೇ ಬೇರೆಯವರ ಸಹಾಯ ವಿಲ್ಲದೆಯೇ ಅರ್ಜುನನು ಸಂಹರಿಸಿದನು. ಆ ರಥಕ್ಕೆ ಸದೃಶವಾದ ರಥ ವಾದರೂ ಯಾವುದಿದೆ? (ಅರ್ಜುನನಿಗೆ ಸಮಾನರಾದ ರಥಿಕರೂ ಇಲ್ಲ ; ಅರ್ಜುನನ ರಥಕ್ಕೆ ಸಮಾನವಾದ ಬೇರೆಯ ರಥವೂ ಇಲ್ಲ.) ಮಹಾಬಲಿಷ್ಠ ನಾದ, ಸತ್ಯಪರಾಕ್ರಮಿಯಾದ, ಮಹಾಬಾಹುವಾದ ಅರ್ಜುನನು ಕೋಪ ಗೊಂಡನಾದರೆ ತನ್ನ ಸೇನೆಯನ್ನು ರಕ್ಷಣೆಮಾಡಿಕೊಳ್ಳುತ್ತಾ ನಿನ್ನ ಈ ಅಪಾರ ಸೈನ್ಯವನ್ನೂ ಏಕಾಕಿಯಾಗಿಯೇ ಸಂಹರಿಸಬಲ್ಲನು. ಅಂತಹ ಮಹಾಪರಾಕ್ರಮಿ ಯಾದ ಧನಂಜಯನನ್ನು ನಾನಾದರೂ ಎದುರಿಸಿ ನಿಂತೇನು ;

ಆಚಾರ್ಯದ್ರೋಣರಾದರೂ ಎದುರಿಸಿ ನಿಂತಾರು. ಎರಡು ಪಕ್ಷಗಳ ಸೈನ್ಯ ಗಳಲ್ಲಿಯೂ–ಗ್ರೀಷ್ಮರ್ತುವಿನ ಕಡೆಯಲ್ಲಿ ಚಂಡಮಾರುತದಿಂದ ಪ್ರೇರಿತವಾದ ಕಾರ್ಮುಗಿಲು ಮಳೆಗರೆಯುವಂತೆ–ಬಾಣಗಳ ಮಳೆಗರೆಯುವ ಅರ್ಜುನ ನನ್ನೆದುರಿಸಿ ನಿಲ್ಲುವ ಸಾಮರ್ಥ್ಯವುಳ್ಳ ಮೂರನೆಯ ರಥಿಕನನ್ನೇ ನಾನು ಕಾಣೆನು. ನಮ್ಮಿಬ್ಬರನ್ನುಳಿದು ಬೇರೆಯವರಾರೂ ಅರ್ಜುನನನ್ನೆದುರಿಸಿ ನಿಲ್ಲಲಾರರು. ವಾಸುದೇವನನ್ನು ಸಹಾಯಕನನ್ನಾಗಿ ಪಡೆದುಕೊಂಡು ಅರ್ಜುನನು ಯುದ್ಧಸನ್ನದ್ಧನಾಗಿದ್ದಾನೆ. ಅವನು ಅಸ್ತ್ರವಿದ್ಯಾಪಾರಂಗತ ನಾಗಿದ್ದಾನೆ. ಮೇಲಾಗಿ ಇನ್ನೂ ತರುಣನು. ನಾವಾದರೋ ವೃದ್ಧರಾಗಿಬಿಟ್ಟಿದ್ದೇವೆ."

ಜನಮೇಜಯ! ಭೀಷ್ಮನ ಮಾತನ್ನು ಅಲ್ಲಿ ನೆರೆದಿದ್ದ ರಾಜರೆಲ್ಲರೂ ಕೇಳಿದರು. ಪಾಂಡವೇಯರ ಪರಾಕ್ರಮಪ್ರದರ್ಶನಗಳನ್ನು ಪ್ರತ್ಯಕ್ಷವಾಗಿ ಕಾಣುತ್ತಿರುವಂತೆ ಅವರಿಗೆ ಭಾಸವಾಯಿತು. ಸ್ಥೂಲವಾಗಿದ್ದ ಸ್ವರ್ಣಮಯ ವಾದ ಅಂಗದಗಳಿಂದ ವಿಭೂಷಿತವಾಗಿದ್ದ, ಚಂದನಚರ್ಚಿತವಾಗಿದ್ದ ಅವರ ಭುಜಗಳು ಅವರ ಆವೇಗಪೂರ್ಣವಾದ ಮನಸ್ಸುಗಳೊಡನೆ ಕುಸಿದುವು."

೧೬೯ನೆಯ ಅಧ್ಯಾಯವು ಮುಗಿಯಿತು.

೧೭೦ನೆಯ ಅಧ್ಯಾಯ ರಥಾತಿರಥಸಂಖ್ಯಾನಪರ್ವ (ಮುಂದುವರಿದಿದೆ)

## ಭೀಷ್ಮನಿಂದ ಪಾಂಡವಪಕ್ಷದ ರಥಾತಿರಥರ ಕಥನ ಮತ್ತು ವಿರಾಟ ಮತ್ತು ದ್ರುಪದರ ಪ್ರಶಂಸೆ

ಭೀಷ್ಮನು ಮುಂದುವರಿದು ಹೇಳುತ್ತಾನೆ :

"ದುರ್ಯೋಧನ! ದ್ರೌಪದಿಯ ಐವರು ಮಕ್ಕಳೂ ಮಹಾರಥ ರೆಂಬುದು ನನ್ನ ಅಭಿಪ್ರಾಯವಾಗಿದೆ. ವಿರಾಟನ ಮಗನಾದ ಉತ್ತರನು ಸಮರ್ಥನಾದ ರಥಿಕನಾಗಿರುತ್ತಾನೆ. ಶತ್ರುನಾಶಕನಾದ ಅಭಿಮನ್ಯುವು ರಥಗಳೊಡೆಯರಿಗೇ ಒಡೆಯನಾಗಿದ್ದಾನೆ. ಮಹಾಬಾಹುವಾದ ಆ ವೀರನು ಯುದ್ಧದಲ್ಲಿ ಕೃಷ್ಣಾರ್ಜುನರಿಬ್ಬರಿಗೂ ಸಮಾನವಾಗಿ ಶತ್ರುಗಳೊಡನೆ ಕಾದಾಡುತ್ತಾನೆ. ಅವರಲ್ಲಿರುವ ಪರಾಕ್ರಮವೇ ಅಭಿಮನ್ಯುವಿನಲ್ಲಿಯೂ

ಇದೆ. ಅವನು ಅಸ್ತ್ರವಿದ್ಯೆಯಲ್ಲಿ ಸುಶಿಕ್ಷಿತನಾಗಿರುತ್ತಾನೆ. ವಿಚಿತ್ರರೀತಿಯಲ್ಲಿ ಯುದ್ಧಮಾಡುವ ಕಲೆಯು ಅವನಿಗೆ ತಿಳಿದಿದೆ. ಅಭಿಮನ್ಯುವು ಜಿತೇಂದ್ರಿಯನು. ಕೈಗೊಂಡವ್ರತವನ್ನು ದೃಢತೆಯಿಂದ ಪರಿಪಾಲನೆ ಮಾಡತಕ್ಕವನು. ಶತ್ರುಗಳಿಂದ ತನ್ನ ತಂದೆಯನುಭವಿಸಿದ ಕ್ಲೇಶಗಳನ್ನು ಸ್ಮರಿಸಿಕೊಳ್ಳುತ್ತಾ ರಣಾಂಗಣದಲ್ಲವನು ತನ್ನ ಪರಾಕ್ರಮವನ್ನು ಪ್ರದರ್ಶಿಸು ತ್ತಾನೆ. ಮಧುವಂಶೀಯನಾದ ಶೂರನಾದ ಸಾತ್ಯಕಿಯು ರಥಗಳೊಡೆಯರ ಒಡೆಯನೆಂದು ನಾನು ಭಾವಿಸಿದ್ದೇನೆ. ವೃಷ್ಣಿವಂಶದ ಪ್ರಮುಖವೀರರಲ್ಲಿ ಅವನೊಬ್ಬನು ಅಸಹನಶೀಲನೆಂದು ವಿಖ್ಯಾತನಾಗಿದ್ದಾನೆ. ಸಾತ್ಯಕಿಯು ಭಯವೆಂಬುದನ್ನೇ ಸಂಪೂರ್ಣವಾಗಿ ಜಯಿಸಿಬಿಟ್ಟಿದ್ದಾನೆ.

ಉತ್ತಮೌಜಸನೂ ಶ್ರೇಷ್ಠನಾದ ರಥಿಕನೆಂಬುದು ನನ್ನ ಅಭಿಪ್ರಾಯ ವಾಗಿದೆ. ಅವನಂತೆಯೇ ಮಹಾಪರಾಕ್ರಮಿಯಾದ ಯುಧಾಮನ್ಯುವೂ ವಿಖ್ಯಾತನಾದ ರಥಿಕನಾಗಿದ್ದಾನೆ. ಅವರುಗಳ ಅಧೀನದಲ್ಲಿ ಅನೇಕಾನೇಕ ಸಹಸ್ರರಥಗಳೂ, ಆನೆಗಳೂ, ಕುದುರೆಗಳೂ ಇವೆ. ಅವರೆಲ್ಲರೂ ತಮ್ಮ ಶರೀರವನ್ನು (ದೇಹಾಭಿಮಾನವನ್ನು) ಸಂಪೂರ್ಣವಾಗಿ ಪರಿತ್ಯಜಿಸಿ ಕುಂತೀಪುತ್ರನಾದ ಯುಧಿಷ್ಠಿರನಿಗೆ ಪ್ರಿಯವನ್ನುಂಟುಮಾಡುವ ಸಲುವಾಗಿ ಯುದ್ಧಮಾಡುತ್ತಾರೆ. ದುರ್ಯೋಧನ! ಪಾಂಡವರೊಡನೆ (ಪಾಂಡವಸೈನ್ಯ ದೊಡನೆ) ನಿನ್ನ ಸೇನೆಯು ಯುದ್ಧದಲ್ಲಿ ತೊಡಗಲು, ಒಬ್ಬರು ಮತ್ತೊಬ್ಬರನ್ನು ವೀರಘೋಷಣೆಗಳಿಂದ ಆಹ್ವಾನಿಸುತ್ತಾ–ಕಾಡುಗಿಚ್ಚಿನಂತೆ ಅಥವಾ ಚಂಡ ಮಾರುತದಂತೆ – ನಿನ್ನ ಸೇನೆಯ ಮೇಲೆ ಬಿದ್ದು ಯುದ್ಧಮಾಡುತ್ತಾರೆ.

ವೃದ್ಧರಾದ ವಿರಾಟ-ದ್ರುಪದರು ಅಜೇಯರು. ಮಹಾವೀರ್ಯರಾದ ಪುರುಷರ್ಷಭರಾದ ಆ ಇಬ್ಬರನ್ನೂ ನಾನು ಮಹಾರಥರೆಂದೇ ಪರಿಗಣಿಸಿದ್ದೇನೆ. ಯದ್ಯಪಿ ವಿರಾಟ-ದ್ರುಪದರು ವಯಸ್ಸಿನಿಂದ ವೃದ್ಧರಾಗಿದ್ದರೂ ಕ್ಷತ್ರಧರ್ಮ ಪರಾಯಣರಾದ, ವೀರಮಾರ್ಗಾನುವರ್ತಿಗಳಾದ ಅವರು, ತಮ್ಮ ಶಕ್ತಿಮೀರಿ ಯುದ್ಧಮಾಡಿ ಯುಧಿಷ್ಠಿರನಿಗೆ ಜಯಗಳಿಸಿಕೊಡಲು ಪ್ರಯತ್ನಿಸುತ್ತಾರೆ. ವೀರ್ಯ ಮತ್ತು ಬಲಗಳಿಂದ ಯುಕ್ತರಾದ ಶ್ರೇಷ್ಠಪುರುಷರಂತೆ ವಿರಾಟ-ದ್ರುಪದರು ಸದಾಚಾರಸಂಪನ್ನರೂ ಮಹಾಧನುರ್ಧಾರಿಗಳೂ ಆಗಿರುತ್ತಾರೆ.

ಪಾಂಡವರೊಡನೆ ಸಂಬಂಧವನ್ನು ಬೆಳೆಸಿರುವ ಕಾರಣದಿಂದಾಗಿ ಆ ಇಬ್ಬರೂ ಸ್ನೇಹಪಾಶದಿಂದ ಬಂಧಿತರಾಗಿದ್ದಾರೆ.

**ಕಾರಣಂ ಪ್ರಾಪ್ಯ ತು ನರಾಃ ಸರ್ವ ಏವ ಮಹಾಭುಜಾಃ ।**
**ಶೂರಾ ವಾ ಕಾತರಾ ವಾಪಿ ಭವನ್ತಿ ಕುರುಪುಙ್ಗವ ॥೧೧॥**

ಕುರುಪುಂಗವನೇ! ಮಹಾಭುಜರಾದ ಎಲ್ಲ ಕ್ಷತ್ರಿಯರೂ ಯಾವುದಾದರೂ ಕಾರಣದಿಂದ ಶೂರರಾಗುತ್ತಾರೆ ಅಥವಾ ಹೇಡಿಗಳಾಗುತ್ತಾರೆ. ಹೇಡಿಗಳಾಗಿರುವವರು ಕಾರಣಾಂತರಗಳಿಂದ ಶೂರರೂ ಆಗಬಹುದು ; ಶೂರರಾದವರು ಕಾರಣಾಂತರಗಳಿಂದ ಹೇಡಿಗಳೂ ಆಗಬಹುದು. ಪರಂತಪನೇ! ದೃಢಧನ್ವರಾದ, ಪಾರ್ಥಿವಶ್ರೇಷ್ಠರಾದ ವಿರಾಟ-ದ್ರುಪದರು ಮರಣೈಕಮಾರ್ಗಾನುಸಾರಿಗಳಾಗಿದ್ದಾರೆ. ಅವರಿಗೆ ಜೀವಿತದ ಮೇಲೆ ಯಾವ ಆಸೆಯೂ ಇಲ್ಲ. ಪ್ರಾಣಗಳನ್ನೇ ಪಣವನ್ನಾಗಿಟ್ಟು ತಮ್ಮ ಸರ್ವಶಕ್ತಿಯಿಂದಲೂ ನಿನ್ನ ಸೇನೆಯನ್ನು ನೆಲಕ್ಕೆ ಹಾಕಿ ಉಜ್ಜಿಬಿಡುತ್ತಾರೆ. ಯುದ್ಧಸಮಯದಲ್ಲಿ ಬಹುಭಯಂಕರರಾಗಿ ಕಾಣುವ ವಿರಾಟ-ದ್ರುಪದರು, ಒಬ್ಬೊಬ್ಬರೂ ಒಂದೊಂದು ಅಕ್ಷೌಹಿಣೀಸೈನ್ಯದೊಡನೆ, ಬಹುಪರಾಕ್ರಮದಿಂದ ನಿನ್ನೊಡನೆ ಯುದ್ಧಮಾಡುತ್ತಾರೆ. ಲೋಕವೀರರಾದ ಮಹಾಧನುರ್ಧಾರಿಗಳಾದ ವಿರಾಟ-ದ್ರುಪದರು, ಪಾಂಡವರು ತಮ್ಮ ಮೇಲಿಟ್ಟಿರುವ ವಿಶ್ವಾಸವನ್ನು ಸಂರಕ್ಷಿಸುತ್ತಾ, ಶರೀರದ ಹಂಗನ್ನೇ ಸಂಪೂರ್ಣವಾಗಿ ತೊರೆದು ರಣಾಂಗಣದಲ್ಲಿ ಅದ್ಭುತಕಾರ್ಯವನ್ನೇ ಮಾಡುತ್ತಾರೆ."

೧೭೦ನೆಯ ಅಧ್ಯಾಯವು ಮುಗಿಯಿತು.

೧೭೧ನೆಯ ಅಧ್ಯಾಯ ರಥಾತಿರಥಸಂಖ್ಯಾನಪರ್ವ (ಮುಂದುವರಿದಿದೆ)

## ಪಾಂಡವರ ಪಕ್ಷದ ರಥಾತಿರಥ-ಮಹಾರಥರ ವಿವರಣೆ

ಭೀಷ್ಮನು ಮುಂದುವರಿದು ಹೇಳುತ್ತಾನೆ :

"ದುರ್ಯೋಧನ! ಪಾಂಚಾಲರಾಜನ ಮಗನಾದ, ಪರಪುರಂಜಯ

ನಾದ (ಶತ್ರುಗಳ ನಗರವನ್ನು ಜಯಿಸುವ ಸಾಮರ್ಥ್ಯವುಳ್ಳ) ಶಿಖಂಡಿಯನ್ನು ಯುಧಿಷ್ಠಿರನ ಸೈನ್ಯದಲ್ಲಿ ಒಬ್ಬ ಪ್ರಮುಖನಾದ ರಥಿಕನೆಂದು ನಾನು ಪರಿಗಣಿಸಿದ್ದೇನೆ. ಅವನು ರಣರಂಗದಲ್ಲಿ ಹಿಂದಿನ (ಸ್ತ್ರೀಯೆಂಬ) ಅಪಯಶಸ್ಸನ್ನು ವಿನಾಶಗೊಳಿಸುತ್ತಾ, ಪೌರುಷವನ್ನು ಪ್ರದರ್ಶಿಸುತ್ತಾ, ಶ್ರೇಷ್ಠವಾದ ತನ್ನ ಯಶಸ್ಸನ್ನು ಅತುಲಪರಾಕ್ರಮದಿಂದ ವಿಸ್ತಾರಗೊಳಿಸುತ್ತಾ, ಅತ್ಯುತ್ಸಾಹದಿಂದ ನಿನ್ನ ಸೇನೆಯೊಡನೆ ಯುದ್ಧಮಾಡುತ್ತಾನೆ. ಅವನೊಡನೆ ಪ್ರಭದ್ರಕರ ಮತ್ತು ಪಾಂಚಾಲರ ಮಹಾಸೈನ್ಯವೇ ಇರುತ್ತದೆ. ಅಸಂಖ್ಯಾತವಾದ ರಥಸಮೂಹದಿಂದ ಕೂಡಿದ ಶಿಖಂಡಿಯು ಯುದ್ಧದಲ್ಲಿ ಅದ್ಭುತ ಕಾರ್ಯವನ್ನೇ ಮಾಡಿತೋರಿಸುತ್ತಾನೆ.

ಪಾಂಡವರ ಪಕ್ಷದಲ್ಲಿ ಪ್ರಧಾನದಂಡನಾಯಕನಾಗಿರುವ, ದ್ರೋಣ ಶಿಷ್ಯನಾದ, ಮಹಾರಥನಾದ ಧೃಷ್ಟದ್ಯುಮ್ನನು ನನ್ನ ಅಭಿಪ್ರಾಯದಲ್ಲಿ ಒಬ್ಬ ಅತಿರಥನಾಗಿರುತ್ತಾನೆ. ಯುಗಾಂತ್ಯದಲ್ಲಿ ಕೋಪಗೊಂಡ ಭಗವಾನ್ ಪಿನಾಕ ಪಾಣಿಯು ಪ್ರಾಣಿಗಳ ಪ್ರಾಣಹರಣಮಾಡುವಂತೆ–ಸಂಕ್ರುದ್ಧನಾದ ಧೃಷ್ಟದ್ಯುಮ್ನನು ಶತ್ರುಗಳನ್ನು ಅಪರಿಮಿತಸಂಖ್ಯೆಯಲ್ಲಿ ಸಂಹರಿಸುತ್ತಾ ಯುದ್ಧ ಮಾಡುತ್ತಾನೆ. ಅವನ ರಥಸೈನ್ಯವು ದೇವಸೇನೆಯಂತೆ ಬಹುವಿಶಾಲವಾಗಿ, ಬಹುಸಂಖ್ಯಾಕವಾಗಿ ಇರುವ ಕಾರಣದಿಂದ ಯುದ್ಧಪ್ರಿಯರಾದ ಸೈನಿಕರು ಆ ರಥಸೈನ್ಯವನ್ನು ಸಮುದ್ರೋಪಮವಾಗಿದೆಯೆನ್ನುತ್ತಾರೆ.

ಧೃಷ್ಟದ್ಯುಮ್ನನ ಮಗನಾದ ಕ್ಷತ್ರಧರ್ಮನು ಕೇವಲ ಅರ್ಧರಥನೆಂಬುದು ನನ್ನ ಅಭಿಮತವಾಗಿದೆ. ಅವನಿನ್ನೂ ಬಾಲಕನಾಗಿರುವುದರಿಂದ ಅಸ್ತ್ರವಿದ್ಯೆಯಲ್ಲಿ ಅವನಿಗೆ ಹೆಚ್ಚಿನ ಪರಿಶ್ರಮವಿಲ್ಲ. ಶಿಶುಪಾಲನ ಮಗನಾದ, ಚೇದಿಯ ರಾಜನಾದ, ವೀರನಾದ, ಮಹಾಧನುರ್ಧರನಾದ, ಯುಧಿಷ್ಠಿರನ ಸಂಬಂಧಿಯಾದ ಧೃಷ್ಟಕೇತುವನ್ನು ಒಬ್ಬ ಮಹಾರಥನೆಂದು ನಾನು ಪರಿಗಣಿಸು ತ್ತೇನೆ. ಶೂರನಾದ ಚೇದಿಪತಿಯಾದ ಧೃಷ್ಟಕೇತುವು ತನ್ನ ಮಗನೊಡಗೂಡಿ ಮಹಾರಥರಾದವರಿಗೆ ಬಹುಸುಲಭಸಾಧ್ಯವಾದ, ಇತರರಿಗೆ ಬಹಳ ಅಗಾಧ ವೆನಿಸಿದ ಕಾರ್ಯವನ್ನು ಮಾಡಿ ತೋರಿಸುತ್ತಾನೆ. ಕ್ಷತ್ರಧರ್ಮರತ ನಾದ, ಶತ್ರುಗಳ ಪಟ್ಟಣಗಳನ್ನು ಜಯಿಸುವ ಸಾಮರ್ಥ್ಯವುಳ್ಳ ಕ್ಷತ್ರದೇವನು

ಪಾಂಡವಸೈನ್ಯದಲ್ಲಿ ಒಬ್ಬ ಉತ್ತಮನಾದ ರಥಿಕನೆಂಬುದು ನನ್ನ ಅಭಿಮತ ವಾಗಿದೆ. ಮಹಾತ್ಮರಾದ ಪಾಂಚಾಲರಲ್ಲಿ ಶ್ರೇಷ್ಠರಾದ ಜಯಂತ, ಅಮಿ ತೌಜಸ, ಮಹಾರಥನಾದ ಸತ್ಯಜಿತ–ಇವರನ್ನೂ ಮಹಾರಥರೆಂದು ನಾನು ಪರಿಗಣಿಸಿದ್ದೇನೆ. ಅವರು ರಣಾಂಗಣದಲ್ಲಿ ಸಂಕ್ರುದ್ಧವಾದ ಆನೆಗಳಂತೆಯೇ ಕ್ರೋಧಪರವಶರಾಗಿ ಯುದ್ಧಮಾಡುತ್ತಾರೆ. ಪಾಂಡವರ ಸಲುವಾಗಿ ನಿನ್ನೊಡನೆ ಯುದ್ಧಮಾಡಲು ಬಂದಿರುವ ಮಹಾಪರಾಕ್ರಮಿಗಳಾದ, ಮಹಾಬಲಿಷ್ಠರಾದ, ಶೂರರಾದ ಅಜ ಮತ್ತು ಭೋಜರು ಮಹಾರಥರು. ಅವರು ತಮ್ಮ ಅಪಾರಶಕ್ತಿಯಿಂದ ಶತ್ರುಪಕ್ಷವನ್ನು ವಿನಾಶಗೊಳಿಸುತ್ತಾರೆ.

ಅಸ್ತ್ರಗಳನ್ನು ಶೀಘ್ರಾತಿಶೀಘ್ರವಾಗಿ ಬಿಡುವ ಕೈಚಳಕವುಳ್ಳ, ವಿಚಿತ್ರ ರೀತಿಯಲ್ಲಿ ಯುದ್ಧಮಾಡುವ ಕಲೆಯನ್ನು ತಿಳಿದಿರುವ, ಸರ್ವಾಸ್ತ್ರಕೋವಿದ ರಾದ, ದೃಢಪರಾಕ್ರಮಿಗಳಾದ, ಕೆಂಪಾದ ಧ್ವಜಗಳಿಂದ ಕೂಡಿರುವ ಐವರು ಕೇಕಯಸಹೋದರರು ವಿಖ್ಯಾತರಾದ ರಥಿಗಳಾಗಿದ್ದಾರೆ. ಧೈರ್ಯದಿಂದ ಯುದ್ಧಮಾಡುವವರೆಂಬ ಮುಖಲಕ್ಷಣಗಳಿಂದ ಕೂಡಿರುವ, ಸರ್ವಾಸ್ತ್ರ ವಿಶಾರದರಾದ, ಮಹಾತ್ಮರಾದ ಕಾಶಿಕ, ಸುಕುಮಾರ, ನೀಲ, ಸೂರ್ಯದತ್ತ, ಶಂಖ ಮತ್ತು ಮದಿರಾಶ್ವ–ಇವರನ್ನೂ ಸುವಿಖ್ಯಾತರಾದ ರಥಿಕರೆಂದು ನಾನು ಪರಿಗಣಿಸಿದ್ದೇನೆ. ದುರ್ಯೋಧನ! ಪಾಂಡವಸೈನ್ಯದಲ್ಲಿರುವ ವಾರ್ಧ ಕ್ಷೇಮಿಯು ನನ್ನ ಅಭಿಪ್ರಾಯದಲ್ಲಿ ಒಬ್ಬ ಮಹಾರಥನು. ಚಿತ್ರಾಯುಧರಾಜನು ಒಬ್ಬ ಶ್ರೇಷ್ಠರಥಿಕನು. ಅವನು ಯುದ್ಧಕ್ಕೇ ಶೋಭೆಯನ್ನುಂಟು ಮಾಡತಕ್ಕವನು. ಅರ್ಜುನನ ಭಕ್ತನೂ ಆಗಿದ್ದಾನೆ. ಚೇಕಿತಾನ-ಸತ್ಯಧೃತಿ ಗಳಿಬ್ಬರೂ ಪಾಂಡವರ ಸೈನ್ಯದಲ್ಲಿ ಮಹಾರಥಿಗಳಾಗಿದ್ದಾರೆ. ಪುರುಷವ್ಯಾಘ್ರ ರಾದ ಆ ಇಬ್ಬರೂ ವಿಖ್ಯಾತರಾದ ರಥಿಕರೆಂಬುದು ನನ್ನ ಅಭಿಮತವಾಗಿದೆ.

ಪಾಂಡವಸೈನ್ಯದಲ್ಲಿರುವ ವ್ಯಾಘ್ರದತ್ತ ಮತ್ತು ಚಂದ್ರಸೇನರು ಸುವಿಖ್ಯಾತರಾದ ರಥಿಕರೆಂಬುದು ನನ್ನ ಅಭಿಪ್ರಾಯವಾಗಿದೆ. ಅವರು ಶ್ರೇಷ್ಠರಥಿಕರೆಂಬುದರಲ್ಲಿ ಸಂಶಯವೇ ಇಲ್ಲ.

ದುರ್ಯೋಧನರಾಜೇಂದ್ರ! ಯುಧಿಷ್ಠಿರನ ಸೈನ್ಯದಲ್ಲಿರುವ ಸೇನಾ ಬಿಂದುವನ್ನು 'ಕ್ರೋಧಹಂತಾ' ಎಂಬ ಹೆಸರಿನಿಂದಲೂ ಕರೆಯುತ್ತಾರೆ.

ಅವನು ಪರಾಕ್ರಮದಲ್ಲಿ ವಾಸುದೇವನಿಗೆ ಅಥವಾ ಭೀಮಸೇನನಿಗೆ ಸಮಾನನಾಗಿದ್ದಾನೆ. ಅವನು ನಿನ್ನ ಸೈನಿಕರೊಡನೆ ಅತುಲಪರಾಕ್ರಮದಿಂದ ಯುದ್ಧಮಾಡುತ್ತಾನೆ.

ನನ್ನನ್ನೂ, ದ್ರೋಣರನ್ನೂ ಮತ್ತು ಕೃಪರನ್ನೂ ಸಮ್ಮಾನಿಸುವಂತೆಯೇ ನೀನು ಸಮರಶ್ಲಾಘಿಯಾದ, ಶ್ರೇಷ್ಠರಥಿಕನಾದ, ಶೀಘ್ರಾಸ್ತ್ರ ಪ್ರಯೋಗಕುಶಲ ನಾದ, ಶ್ಲಾಘನೀಯನಾದ, ನರೋತ್ತಮನಾದ ಕಾಶೀರಾಜನನ್ನೂ ಸಮ್ಮಾನಿಸಬೇಕು. ಶತ್ರುಗಳ ಪತ್ತನಗಳನ್ನು ಜಯಿಸುವ ಸಾಮರ್ಥ್ಯವಿರುವ ಕಾಶೀರಾಜನು ನನ್ನ ಅಭಿಪ್ರಾಯದಲ್ಲಿ ಏಕರಥನು ಅಥವಾ ರಥಿಕನು. ಆದರೆ ಯುದ್ಧದಲ್ಲಿ ಅತುಲಪರಾಕ್ರಮದಿಂದ ಯುದ್ಧಮಾಡುತ್ತಿರುವಾಗ ಅವನನ್ನು ಅಷ್ಟರಥಿಕನೆಂದು (ಎಂಟು ಮಂದಿ ರಥಿಕರಿಗೆ ಸಮಾನನಾದವನೆಂದು) ಪರಿಗಣಿಸಬೇಕು. ಸಮರಶ್ಲಾಘಿಯಾದ, ಯುವಕನಾದ, ದ್ರುಪದನ ಮಗ ನಾದ ಸತ್ಯಜಿತನು ಧೃಷ್ಟದ್ಯುಮ್ನನಂತೆಯೇ ಅತಿರಥನಾಗಿದ್ದಾನೆ. ಪಾಂಡವರ ಯಶಸ್ಕಾಮನಾದ ಅವನು ಯುದ್ಧದಲ್ಲಿ ಅಗಾಧವಾದ ಕಾರ್ಯವನ್ನು ಮಾಡುತ್ತಾನೆ. ಪಾಂಡವಪಕ್ಷದಲ್ಲಿ ಸೈನ್ಯಸಂಚಾಲನೆಯ ಭಾರವನ್ನು ವಹಿಸಿಕೊಂಡಿರುವ, ಪಾಂಡವರಲ್ಲಿ ವಿಶೇಷವಾದ ಅನುರಾಗವನ್ನಿಟ್ಟು ಕೊಂಡಿರುವ, ಶೂರನಾದ, ಮಹಾವೀರ್ಯನಾದ, ಸುದೃಢವಾದ ಮತ್ತು ದೊಡ್ಡದಾದ ಧನುಸ್ಸನ್ನು ಹೊಂದಿರುವ ಪಾಂಡ್ಯರಾಜನನ್ನೂ ಮಹಾರಥ ನೆಂದೇ ನಾನು ಪರಿಗಣಿಸಿದ್ದೇನೆ. ಕೌರವಶ್ರೇಷ್ಠನೇ! ಪರಪುರಂಜಯರಾದ ಶ್ರೇಣಿಮಂತ ಮತ್ತು ವಸುದಾನರಾಜರಿಬ್ಬರೂ ಅತಿರಥರೆಂಬುದು ನನ್ನ ಅಭಿಮತವಾಗಿದೆ.”

೧೭೧ನೆಯ ಅಧ್ಯಾಯವು ಮುಗಿಯಿತು.

## ಭೀಷ್ಮನು ಪಾಂಡವಪಕ್ಷದ ರಥಾತಿರಥ-ಮಹಾರಥರನ್ನು ವಿವರಿಸಿದುದು : ಪಾಂಡವರನ್ನೂ ಮತ್ತು ಶಿಖಂಡಿಯನ್ನೂ ಸಂಹರಿಸುವುದಿಲ್ಲವೆಂದು ದುರ್ಯೋಧನನಿಗೆ ಸ್ಪಷ್ಟಪಡಿಸಿದುದು

ಭೀಷ್ಮನು ಮುಂದುವರಿದು ಹೇಳುತ್ತಾನೆ :

"ಮಹಾರಾಜ! ಪಾಂಡವರ ಸೈನ್ಯದಲ್ಲಿ ರೋಚಮಾನನೂ ಒಬ್ಬ ಮಹಾರಥನು. ಅವನು ರಣಾಂಗಣದಲ್ಲಿ ಶತ್ರುಸೈನ್ಯದೊಡನೆ ಸಾಕ್ಷಾತ್ ದೇವತೆಯೋಪಾದಿಯಲ್ಲಿ ಯುದ್ಧಮಾಡುತ್ತಾನೆ. ಮಹಾಧನುರ್ಧರನಾದ, ಮಹಾಬಲನಾದ, ಭೀಮಸೇನನ ಸೋದರಮಾವನಾದ, ಕುಂತಿಭೋಜನ ಮಗನಾದ ಪುರುಜಿತನು ಪಾಂಡವಸೈನ್ಯದಲ್ಲಿ ಒಬ್ಬ ಅತಿರಥನೆಂದು ನನ್ನ ಅಭಿಪ್ರಾಯವಾಗಿದೆ. ಅವನು ಮಹಾವೀರನು ; ಮಹಾಧನುರ್ಧರನು ; ಅಸ್ತ್ರವಿದ್ಯಾಕುಶಲನು ; ಯುದ್ಧಕುಶಲನು ; ಚಿತ್ರ-ವಿಚಿತ್ರವಾದ ರೀತಿಯಲ್ಲಿ ಯುದ್ಧಮಾಡತಕ್ಕವನು ; ಶಕ್ತನು. ಅವನೊಬ್ಬ ರಥಪುಂಗವನೆಂಬುದು (ಅತಿರಥನೆಂಬುದು) ನನ್ನ ಅಭಿಪ್ರಾಯವಾಗಿದೆ. ದೇವೇಂದ್ರನು ದಾನವ ರೊಡನೆ ಯುದ್ಧಮಾಡಿದಂತೆಯೇ–ರಣಾಂಗಣದಲ್ಲವನು ಅತುಲ ಪರಾಕ್ರಮದಿಂದ ಶತ್ರುಗಳೊಡನೆ ಯುದ್ಧಮಾಡುತ್ತಾನೆ. ಅವನ ಜೊತೆಯಲ್ಲಿ ಬಂದಿರುವ ಅವನ ಸೈನಿಕರೆಲ್ಲರೂ ಯುದ್ಧಕಲೆಯಲ್ಲಿ ನಿಪುಣರೂ ಮತ್ತು ವಿಖ್ಯಾತರೂ ಆಗಿದ್ದಾರೆ. ಪಾಂಡವರಿಗೆ ಪ್ರಿಯವಾದ ಮತ್ತು ಹಿತವಾದ ಕಾರ್ಯವನ್ನು ಮಾಡುವುದರಲ್ಲಿಯೇ ಆಸಕ್ತನಾದ, ವೀರನಾದ ಪುರುಜಿತನು ತನ್ನ ತಂಗಿಯ ಮಗನಾದ ಭೀಮಸೇನನ ಸಲುವಾಗಿ ರಣಾಂಗಣದಲ್ಲಿ ಇತರರಿಂದ ದುಸ್ಸಾಧ್ಯವಾದ ಕಾರ್ಯವನ್ನು ಮಾಡುತ್ತಾನೆ.

ಭೀಮಸೇನ-ಹಿಡಿಂಬೆಯರ ಪುತ್ರನಾದ, ರಾಕ್ಷಸೇಶ್ವರನಾದ, ಮಹಾ ಮಾಯಾವಿಯಾದ ಘಟೋತ್ಕಚನು ಮಹಾರಥಿಗಳ ಗುಂಪಿಗೇ ಒಡೆಯ ನೆಂಬುದು ನನ್ನ ಅಭಿಪ್ರಾಯವಾಗಿದೆ. ಸಮರಪ್ರಿಯನಾದ, ಮಾಯಾವಿ

ಯಾದ ಘಟೋತ್ಕಚನು ರಣಾಂಗಣದಲ್ಲಿ ಬಹುಪರಾಕ್ರಮದಿಂದ ಯುದ್ಧಮಾಡುತ್ತಾನೆ. ವೀರರಾದ ರಾಕ್ಷಸರೂ ಮತ್ತು ಸಚಿವರೂ ಅವನ ವಶವರ್ತಿಗಳಾಗಿದ್ದಾರೆ. ಅವರೆಲ್ಲರೂ ಘಟೋತ್ಕಚನಿಗೆ ಬೆಂಬಲಿಗರಾಗಿ ಯುದ್ಧಮಾಡುತ್ತಾರೆ.

ನಾನು ಹೇಳಿದ ರಾಜರೇ ಅಲ್ಲದೇ ಇನ್ನೂ ಅನೇಕದೇಶಗಳ ರಾಜರು ಒಟ್ಟಾಗಿ ಸೇರಿ ವಾಸುದೇವನನ್ನು ಮುಂದೆಮಾಡಿಕೊಂಡು ಯುಧಿಷ್ಠಿರನ ಸಲುವಾಗಿ ಯುದ್ಧಮಾಡುತ್ತಾರೆ.

ನಾನು ಹೇಳಿದ ಈ ಎಲ್ಲರೂ ಮಹಾತ್ಮನಾದ ಯುಧಿಷ್ಠಿರನ ಸೇನೆಯಲ್ಲಿ ಪ್ರಧಾನಭೂತರಾದ ರಥಾತಿರಥ-ಮಹಾರಥ-ಅರ್ಧರಥರಾಗಿರುತ್ತಾರೆ. ದೇವರಾಜನಾದ ಇಂದ್ರನಿಗೆ ಸಮಾನನಾಗಿರುವ, ವೀರನಾದ ಅರ್ಜುನನಿಂದ ಸಂರಕ್ಷಿತರಾದ ಅವರೆಲ್ಲರೂ ರಣಾಂಗಣದಲ್ಲಿ ಬಹುಭಯಂಕರವಾದ ಯುಧಿಷ್ಠಿರನ ಸೇನೆಯನ್ನು ನಿಯಂತ್ರಿಸುತ್ತಾರೆ. ಮಾಯಾಯುದ್ಧವನ್ನೂ ತಿಳಿದಿರುವ ವಿಜಯಕಾಂಕ್ಷಿಗಳಾದ ಪಾಂಡವರೊಡನೆ ರಣಾಂಗಣದಲ್ಲಿ ನಾನೂ ಸಹ ವಿಜಯಗಳಿಸಬೇಕೆಂಬ ಅಭಿಲಾಷೆಯಿಂದ ಅಥವಾ ಮೃತ್ಯುವನ್ನಾದರೂ ಅಪ್ಪಬೇಕೆಂಬ ಆಶಯದಿಂದ ಯುದ್ಧಮಾಡುತ್ತೇನೆ. ಸಂಧ್ಯಾಕಾಲದಲ್ಲಿ ಪರಸ್ಪರವಾಗಿ ಸಮ್ಮಿಳಿತರಾಗುವ ಸೂರ್ಯ-ಚಂದ್ರರೋಪಾದಿಯಲ್ಲಿರುವ, ಚಕ್ರ- ಗಾಂಡೀವಧಾರಿಗಳಾದ ರಥೋತ್ತಮರಾದ (ಶ್ರೇಷ್ಠರಥಿಗಳಾದ) ವಾಸುದೇವ- ಪಾರ್ಥರಿಬ್ಬರೂ ಒಟ್ಟುಗೂಡಿ ರಣಾಂಗಣಕ್ಕೆ ಬರುತ್ತಾರೆ. ನಾನವರನ್ನು ಎದುರಿಸಿ ನಿಲ್ಲುತ್ತೇನೆ. ಪಾಂಡುಪುತ್ರನ ಇತರ ರಥಾತಿರಥರು ಯಾರಿದ್ದಾರೆಯೋ, ಸೈನಿಕರು ಯಾರಿದ್ದಾರೆಯೋ–ಅವರೆಲ್ಲರನ್ನೂ ನಾನು ರಣಾಂಗಣದಲ್ಲಿ ಎದುರಿಸಿ ನಿಲ್ಲುತ್ತೇನೆ.

ಕೌರವೇಂದ್ರ! ನಿನ್ನ ಆಶಯದಂತೆಯೇ ನಾನು ನಿನ್ನ ಪಕ್ಷದಲ್ಲಿರುವ ಪ್ರಧಾನಭೂತರಾದ ರಥಾತಿರಥ-ಮಹಾರಥರ ಪರಿಚಯವನ್ನು ನಿನಗೆ ಮಾಡಿಕೊಟ್ಟಿದ್ದೇನೆ. ಅದೂ ಅಲ್ಲದೇ ಕೆಲವು ಅರ್ಧರಥರ ಪರಿಚಯವನ್ನೂ ಮಾಡಿಕೊಟ್ಟಿದ್ದೇನೆ. ಇದೇ ರೀತಿಯಲ್ಲಿ ಪಾಂಡವಪಕ್ಷದಲ್ಲಿರುವ ರಥಾತಿರಥ-ಮಹಾರಥರ ಮತ್ತು ಅರ್ಧರಥರ ಪರಿಚಯವನ್ನೂ ಮಾಡಿಕೊಟ್ಟಿದ್ದೇನೆ. ಅರ್ಜು

ನನೇ ಬರಲೀ ; ವಾಸುದೇವನೇ ಬರಲಿ ; ಅರ್ಜುನ-ವಾಸುದೇವರಿಬ್ಬರೂ ಒಟ್ಟಾಗಿ ಬರಲಿ ; ಅವರೇ ಅಲ್ಲದೇ ಅಲ್ಲಿರುವ ಅನೇಕಾನೇಕರಾಜರೂ ಬರಲಿ-ಅವರೆಲ್ಲರನ್ನೂ ನಾನು– ರಣಾಂಗಣದಲ್ಲಿ ನೋಡಿದೊಡನೆಯೇ ತಡೆದುನಿಲ್ಲಿಸುತ್ತೇನೆ. ಆದರೆ, ಪಾಂಚಾಲರಾಜಕುಮಾರನಾದ ಶಿಖಂಡಿಯು ಧನುಸ್ಸಿಗೆ ಬಾಣವನ್ನು ಯೋಜಿಸಿ ನನ್ನೆದುರಾಗಿ ಬಂದು ಯುದ್ಧದಲ್ಲಿ ನನಗೆ ಪ್ರತಿಯಾಗಿ ನಿಂತು ಯುದ್ಧಮಾಡುತ್ತಿರುವುದನ್ನು ನೋಡಿದರೂ ನಾನವನನ್ನು ಕೊಲ್ಲುವುದಿಲ್ಲ. ದುರ್ಯೋಧನ! ಇದಕ್ಕೆ ಕಾರಣವನ್ನೂ ಹೇಳುವೆನು ; ಕೇಳು. ನಾನು ತಂದೆಗೆ ಪ್ರಿಯವನ್ನುಂಟುಮಾಡಬೇಕೆಂಬ ಆಶಯದಿಂದ ಆನುವಂಶಿಕ ವಾಗಿ ನನಗೇ ಸೇರಬೇಕಾಗಿದ್ದ ರಾಜ್ಯವನ್ನೂ ಪರಿತ್ಯಜಿಸಿ, ಬ್ರಹ್ಮಚರ್ಯವ್ರತಸ್ಥ ನಾಗಿಯೇ ಇದ್ದುಬಿಟ್ಟಿದ್ದೇನೆ. ಈ ವಿಷಯವು ಪ್ರಪಂಚದಲ್ಲಿ ಸರ್ವರಿಗೂ ತಿಳಿದಿರುವ ವಿಷಯವೇ ಆಗಿದೆ. ಅನಂತರದಲ್ಲಿ ನಾನು ಸತ್ಯವತಿಯ ಹಿರಿಯಮಗನಾದ ಚಿತ್ರಾಂಗದನನ್ನು ಕುರುರಾಜ್ಯದ ಸಿಂಹಾಸನದಲ್ಲಿ ಕುಳ್ಳಿರಿಸಿ ಪಟ್ಟಾಭಿಷೇಕಮಾಡಿಸಿದೆನು. ಅಂತೆಯೇ ಶಿಶುವಾಗಿದ್ದ ವಿಚಿತ್ರವೀರ್ಯನನ್ನು ಯುವರಾಜನ ಸಿಂಹಾಸನದಲ್ಲಿ ಕುಳ್ಳಿರಿಸಿ ಪಟ್ಟಾಭಿಷೇಕಮಾಡಿಸಿದೆನು. ದೇವವ್ರತನೆಂದು (ಬ್ರಹ್ಮಚರ್ಯವ್ರತಸ್ಥನೆಂದು) ಈ ಭೂಮಂಡಲದ ಸಕಲರಾಜ ರಲ್ಲಿಯೂ ವಿಖ್ಯಾತನಾಗಿರುವ ನಾನು ಸ್ತ್ರೀಹತ್ಯೆಯನ್ನು ಎಂದಿಗೂ ಮಾಡುವುದಿಲ್ಲ.

ದುರ್ಯೋಧನ! ಹಿಂದೆ ಸ್ತ್ರೀಯಾಗಿದ್ದು ಈಗ ಪುರುಷನಾಗಿರುವವನ ಹತ್ಯೆಯನ್ನೂ ಮಾಡುವುದಿಲ್ಲ. ನಿನಗೆ ಈ ವಿಷಯವು ಗೊತ್ತಿದ್ದರೂ ಗೊತ್ತಿರಬಹುದು ಅಥವಾ ಗೊತ್ತಿಲ್ಲದೆಯೂ ಇರಬಹುದು. ಈಗ ಶಿಖಂಡಿ ಯೆಂದು ಪ್ರಖ್ಯಾತನಾಗಿರತಕ್ಕವನು ಹಿಂದೆ ಸ್ತ್ರೀಯಾಗಿದ್ದನು. ಮೊದಲು ಕನ್ಯೆಯಾಗಿಯೇ ಹುಟ್ಟಿ ಅನಂತರದಲ್ಲಿ ಪುರುಷನಾದನು. ಆದುದರಿಂದ ನಾನವನೊಡನೆ ಮಾತ್ರ ಖಂಡಿತವಾಗಿಯೂ ಯುದ್ಧಮಾಡುವುದಿಲ್ಲ. ಇನ್ನೂ ಒಂದು ವಿಷಯವನ್ನೂ ನಿನ್ನೊಡನೆ ಈಗಲೇ ಹೇಳಿಬಿಡುತ್ತೇನೆ.

**ಸರ್ವಾಂಸ್ತ್ವನ್ಯಾನ್ಹನಿಷ್ಯಾಮಿ ಪಾರ್ಥಿವಾನ್ಭರತರ್ಷಭ ।**
**ಯಾನ್ಸಮೇಷ್ಯಾಮಿ ಸಮರೇ ನ ತು ಕುನ್ತೀಸುತಾನ್ನೃಪ ॥೨೧॥**

ಭರತರ್ಷಭನೇ! ನನ್ನೆದುರಾಗಿ ಬರುವ ಸಕಲರಾಜರನ್ನೂ ನಾನು

ಯುದ್ಧದಲ್ಲಿ ಸಂಹರಿಸುತ್ತೇನೆ. ಆದರೆ ಕುಂತಿಯ ಮಕ್ಕಳನ್ನು ಮಾತ್ರ ಯಾವ ಕಾರಣದಿಂದಲೂ ಸಂಹರಿಸುವುದಿಲ್ಲ."

೧೭೨ನೆಯ ಅಧ್ಯಾಯವು ಮುಗಿಯಿತು.

೧೭೩ನೆಯ ಅಧ್ಯಾಯ ಅಮ್ಬೋಪಾಖ್ಯಾನಪರ್ವ

## ಭೀಷ್ಮನು ಶಿಖಂಡಿಯನ್ನು ಕೊಲ್ಲದಿರಲು ಕಾರಣವನ್ನು ತಿಳಿಸಿದುದು : ಕಾಶೀರಾಜನ ಮೂವರು ಕನ್ಯೆಯರನ್ನು ಬಲಪೂರ್ವಕವಾಗಿ ಅಪಹರಿಸಿದುದು

ಕುತೂಹಲಾವಿಷ್ಟನಾದ ದುರ್ಯೋಧನನು ಭೀಷ್ಮನನ್ನು ಪ್ರಶ್ನಿಸುತ್ತಾನೆ :

**ಕಿಮರ್ಥಂ ಭರತಶ್ರೇಷ್ಠ ನೈವ ಹನ್ಯಾಃ ಶಿಖಣ್ಡಿನಮ್ ।**
**ಉದ್ಯತೇಷುಮಥೋ ದೃಷ್ಟ್ವಾ ಸಮರೇಷ್ವಾತತಾಯಿನಮ್ ॥೧॥**

"ಪಿತಾಮಹ! ರಣಾಂಗಣದಲ್ಲಿ ಬಾಣವನ್ನು ಧನುಸ್ಸಿಗೆ ಯೋಜಿಸಿ ಗುರಿಯಿಟ್ಟು ನಿನ್ನನ್ನು ಸಂಹರಿಸಲೆಂದೇ ಬರುವ ಶಿಖಂಡಿಯನ್ನು ಕೊಲ್ಲದೆಯೇ ಇರಲು ಕಾರಣವೇನು? ನಿನ್ನೆದುರಾಗಿ ನಿಂತು ಯುದ್ಧಮಾಡಲು ಬರದಿದ್ದರೆ ನೀನು ಅವನಿರುವ ಸ್ಥಳಕ್ಕೆ ಹೋಗಿ ಅವನನ್ನು ಸಂಹರಿಸುವ ಕಾರಣವಿಲ್ಲ. ಒಂದು ವೇಳೆ ಎದುರಾಗಿ ಬಂದರೂ ನಿನ್ನ ಮೇಲೆ ಕೈಮಾಡದಿದ್ದರೆ ಆಗಲೂ ಅವನ ವಿಷಯದಲ್ಲಿ ಉದಾಸೀನನಾಗಿದ್ದುಬಿಡಬಹುದು. ನಿನ್ನನ್ನು ಸಂಹರಿಸುವ ಆಶಯದಿಂದಲೇ ಧನುಸ್ಸಿಗೆ ಬಾಣವನ್ನು ಯೋಜಿಸಿ ನಿನ್ನೆದುರಾಗಿ ಬಂದು ನಿಂತರೆ ಆಗವನನ್ನು ನೀನೇಕೆ ಕೊಲ್ಲುವುದಿಲ್ಲ? ಒಂದು ವೇಳೆ ಕೊಲ್ಲಲು ಇಷ್ಟವಿಲ್ಲದಿದ್ದರೂ ಅವನು ಬಿಡುವ ಬಾಣಗಳನ್ನು ಕತ್ತರಿಸುವುದಕ್ಕಾದರೂ ನೀನು ಬಾಣವನ್ನು ಬಿಡಲೇಬೇಕಾಗುವುದು. ಹಾಗೆ ಮಾಡದೇ ಅವನು ನಿನ್ನೆದುರಾಗಿ ಬಂದೊಡನೆಯೇ ಪ್ರತಿಭಟನೆಯನ್ನೇ ತೋರದೇ ಸುಮ್ಮನಿದ್ದುಬಿಟ್ಟರೆ ಅವನು ಕ್ಷಣಮಾತ್ರದಲ್ಲಿ ನಿನ್ನನ್ನು ಸಂಹರಿಸಿಬಿಡಬಹುದಲ್ಲವೇ?

ನಿನ್ನನ್ನೇ ಸಂಹರಿಸಲು ಬರುವ ಆತತಾಯಿಯನ್ನು ನೀನು ಸಂಹರಿಸುವು

ದಿಲ್ಲವೆಂದರೆ ಅರ್ಥವೇನು? ಇದಕ್ಕೆ ಕಾರಣವೇನು? ಯಾವ ಕಾರಣದಿಂದ ನೀನು ಅವನ ವಿಷಯದಲ್ಲಿ ಈ ವಿಧವಾದ ಭಾವನೆಯನ್ನು ತಾಳಿರುವೆ?

ಈ ಮೊದಲು ನೀನು ಸೋಮಕರೊಡನೆ ಪಾಂಚಾಲರೆಲ್ಲರನ್ನೂ ಸಂಹರಿಸುವೆನೆಂದು ಭರವಸೆಯನ್ನಿತ್ತಿರುವೆ. ಈಗ ನೀನು ಪಾಂಚಾಲರಲ್ಲೊಬ್ಬ ನಾದ ಶಿಖಂಡಿಯನ್ನು ಕೊಲ್ಲುವುದಿಲ್ಲವೆಂದು ಹೇಳುತ್ತಿರುವೆ. ಇದರ ಕಾರಣವನ್ನಾದರೂ ನನ್ನೊಡನೆ ಹೇಳು."

ಭೀಷ್ಮನು ಹೇಳುತ್ತಾನೆ :

"ದುರ್ಯೋಧನ! ಧನುಸ್ಸಿಗೆ ಬಾಣವನ್ನು ಯೋಜಿಸಿ ನನ್ನನ್ನು ಕೊಲ್ಲಲೆಂದೇ ಬರುವ ಶಿಖಂಡಿಯನ್ನು ಕೊಲ್ಲದಿರುವುದಕ್ಕೆ ಕಾರಣವಾದ ಒಂದು ಕಥೆಯನ್ನು ಹೇಳುತ್ತೇನೆ. ಆ ಕಥೆಯನ್ನು ನೀನು ಈ ಪೃಥ್ವೀಪತಿಗಳೊಡನೆ ಕೇಳುವವನಾಗು :

ಲೋಕವಿಖ್ಯಾತನಾದ, ಧರ್ಮಾತ್ಮನಾದ, ನನ್ನ ತಂದೆಯಾದ ಶಾಂತನು ಮಹಾರಾಜನು ನಿಧನಹೊಂದಿದನು. ಆ ಸಮಯದಲ್ಲಿ ನಾನು ನನ್ನ ತಂದೆಯ ಸಲುವಾಗಿ ಮಾಡಿದ್ದ ಪ್ರತಿಜ್ಞಾವಚನದಂತೆ ನನ್ನ ತಮ್ಮ ಚಿತ್ರಾಂಗದನನ್ನು ರಾಜ್ಯಸಿಂಹಾಸನದಲ್ಲಿ ಕುಳ್ಳಿರಿಸಿ ಪಟ್ಟಾಭಿಷೇಕಮಾಡಿದೆನು. ದುರದೃಷ್ಟವಶ ದಿಂದ ಚಿತ್ರಾಂಗದನೂ ಕಾರಣಾಂತರದಿಂದ ನಿಧನಹೊಂದಲಾಗಿ ಸತ್ಯವತಿಯ ಸಮ್ಮತಿಯನ್ನು ಪಡೆದು ನನ್ನ ಮತ್ತೊಬ್ಬ ತಮ್ಮನಾದ ವಿಚಿತ್ರವೀರ್ಯನಿಗೆ ಯಥಾವಿಧಿಯಾಗಿ ಕುರುರಾಜ್ಯದ ಪಟ್ಟಗಟ್ಟಿದೆನು. ಬಹಳ ಚಿಕ್ಕವನಾಗಿದ್ದರೂ ಧರ್ಮತಃ ನನ್ನಿಂದ ಅಭಿಷಿಕ್ತನಾದ, ಧರ್ಮಾತ್ಮನಾದ ವಿಚಿತ್ರವೀರ್ಯನು ರಾಜಕಾರ್ಯಗಳಲ್ಲಿ ನನ್ನ ಕಡೆಗೇ ನೋಡುತ್ತಿದ್ದನು. (ನನ್ನ ಅಭಿಪ್ರಾಯ ದಂತೆಯೇ ಸಕಲರಾಜಕಾರ್ಯಗಳನ್ನೂ ನಿರ್ವಹಿಸುತ್ತಿದ್ದನು.) ಸ್ವಲ್ಪದಿನಗಳು ಕಳೆದ ನಂತರ ನನ್ನ ತಮ್ಮನಾದ ವಿಚಿತ್ರವೀರ್ಯನಿಗೆ ಮದುವೆಮಾಡಬೇಕೆಂಬ ಇಚ್ಛೆಯಾಯಿತು. ಅನುರೂಪವಾದ ಕುಲದಿಂದ ಹೆಣ್ಣುತಂದು ಮದುವೆ ಮಾಡಬೇಕೆಂದು ನಾನು ಮನಸ್ಸುಮಾಡಿದೆನು. ಅದೇ ಸಮಯಕ್ಕೆ ಸರಿಯಾಗಿ ಅಪ್ರತಿಮವಾದ ರೂಪ-ಲಾವಣ್ಯವಿದ್ದ ಕಾಶೀರಾಜನ ಮೂವರು ಮಕ್ಕಳಾದ ಅಂಬೆ, ಅಂಬಿಕೆ ಮತ್ತು ಅಂಬಾಲಿಕೆಯರು ಸ್ವಯಂವರದ ಮೂಲಕವಾಗಿ

ವಿವಾಹವಾಗುತ್ತಾರೆಂಬ ವಾರ್ತೆಯನ್ನು ನಾನು ಕೇಳಿದೆನು. ಭೂಮಂಡಲದ ಸಕಲರಾಜರೂ ಆ ಸ್ವಯಂವರಕ್ಕೆ ಆಹ್ವಾನಿತರಾಗಿದ್ದರು. ಆ ಮೂವರು ಕನ್ಯೆಯರಲ್ಲಿ ಅಂಬೆಯು ಹಿರಿಯವಳಾಗಿದ್ದಳು. ಅಂಬಿಕೆಯು ಎರಡನೆಯವಳು. ಅಂಬಾಲಿಕೆಯು ಕಿರಿಯವಳು. ಅನುಪಮರೂಪಲಾವಣ್ಯವಿದ್ದ ಆ ಕನ್ಯೆಯರ ವಿವಾಹವಾರ್ತೆಯನ್ನು ಕೇಳಿದ ನಾನು ಏಕರಥನಾಗಿ (ಏಕಾಕಿಯಾಗಿ) ಕಾಶೀರಾಜನ ಪಟ್ಟಣಕ್ಕೆ ಪ್ರಯಾಣಮಾಡಿದೆನು. ಅಲ್ಲಿಗೆ ಹೋದನಂತರ ನಾನು ರಾಜಭವನದಲ್ಲಿ ಸರ್ವಾಭರಣಗಳಿಂದ ಅಲಂಕೃತರಾದ ಮೂವರು ಕನ್ಯೆಯರನ್ನೂ ನೋಡಿದೆನು. ಅಂತೆಯೇ ಸ್ವಯಂವರಕ್ಕಾಗಿ ಆಹೂತರಾಗಿದ್ದ ರಾಜರುಗಳನ್ನೂ ನೋಡಿದೆನು.

ಅನಂತರ ನಾನು ಆ ಸ್ವಯಂವರಮಂಟಪದಲ್ಲಿದ್ದ ಆ ರಾಜಕುಮಾರರೆಲ್ಲರನ್ನೂ ಯುದ್ಧಕ್ಕೆ ಆಹ್ವಾನಿಸಿ, ಸರ್ವಾಭರಣಗಳಿಂದ ಅಲಂಕೃತರಾಗಿದ್ದ ಆ ಮೂವರು ಕನ್ಯೆಯರನ್ನೂ ನನ್ನ ರಥದಲ್ಲಿ ಕುಳ್ಳಿರಿಸಿಕೊಂಡೆನು. ಆ ರಾಜಕುಮಾರಿಯರು ವೀರ್ಯಶುಲ್ಕದಿಂದ ಪ್ರಾಪ್ತರಾಗತಕ್ಕವರೆಂಬುದನ್ನು ನಿಶ್ಚಯಿಸಿಕೊಂಡು ಭೂಮಂಡಲದ ಎಲ್ಲ ದೇಶಗಳಿಂದಲೂ ಅಲ್ಲಿಗೆ ಆಗಮಿಸಿದ್ದ ರಾಜರನ್ನು ಕುರಿತು ನಾನು ಹೀಗೆ ಹೇಳಿದೆನು : 'ಭೀಷ್ಮಃ ಶಾನ್ತನವಃ ಕನ್ಯಾಃ ಹರತಿ–ಶಾಂತನುವಿನ ಮಗನಾದ ಭೀಷ್ಮನು ಕನ್ಯೆಯರನ್ನು ಅಪಹರಣಮಾಡುತ್ತಿದ್ದಾನೆ!' ಹೀಗೆಂಬುದಾಗಿ ನಾನು ಬಾರಿ-ಬಾರಿಗೂ ಘೋಷಿಸುತ್ತಿದ್ದೆನು. 'ನೀವುಗಳೆಲ್ಲರೂ ಒಟ್ಟಾಗಿ ಬಂದು ನನ್ನೊಡನೆ ಯುದ್ಧಮಾಡಿ ಈ ಕನ್ಯೆಯರನ್ನು ಬಿಡಿಸಿಕೊಳ್ಳಲು ಪ್ರಯತ್ನಿಸಿರಿ. ನರರ್ಷಭರೇ! ನೀವೆಲ್ಲರೂ ನೋಡುತ್ತಿರುವಂತೆಯೇ ಈ ಭೀಷ್ಮನು ಬಲಾತ್ಕಾರಪುರ್ವಕವಾಗಿ ಕಾಶೀರಾಜಕನ್ಯೆಯರನ್ನು ಸೆಳೆದೊಯ್ಯುತ್ತಿದ್ದಾನೆ.'

ದುರ್ಯೋಧನ! ನನ್ನ ಮಾತನ್ನು ಕೇಳಿದೊಡನೆಯೇ ಎಲ್ಲ ರಾಜರೂ ಏಕಕಾಲದಲ್ಲಿ ಆಯುಧಗಳನ್ನು ಮೇಲೆತ್ತಿ ಹಠಾತ್ತನೆ ಎದ್ದುನಿಂತರು. ಅವರು ಕ್ರುದ್ಧರಾಗಿ– 'ಕುದುರೆಗಳನ್ನು ರಥಕ್ಕೆ ಕಟ್ಟಿರಿ ; ತಡಮಾಡಬೇಡಿರಿ! ಶೀಘ್ರವಾಗಿ ರಥವನ್ನು ಸಿದ್ಧಪಡಿಸಿರಿ!'–ಎಂದು ತಮ್ಮ ಸಾರಥಿಗಳಿಗೆ ಅವಸರದ ಆದೇಶವನ್ನಿತ್ತರು. ಮಹೀಪಾಲರಲ್ಲಿ ರಥಿಕರಾಗಿದ್ದವರು ಆನೆಗಳಂತಿದ್ದ ರಥ

ಗಳಲ್ಲಿಯೂ, ಗಜಯೋಧರು (ಗಜಸೈನಿಕರು) ಆನೆಗಳ ಮೇಲೂ, ಅಶ್ವ ಯೋಧರು ದಷ್ಟ-ಪುಷ್ಟವಾಗಿದ್ದ ಕುದುರೆಗಳ ಮೇಲೂ ಕುಳಿತು ಆಯುಧಗಳನ್ನೆತ್ತಿಕೊಂಡು ನಾಲ್ಕು ದಿಕ್ಕುಗಳಿಂದಲೂ ಏಕಕಾಲದಲ್ಲಿ ನನ್ನ ಮೇಲೆ ಬಿದ್ದರು. ಆ ಎಲ್ಲ ಮಹೀಪಾಲರೂ ದೊಡ್ಡದಾದ ರಥಗಳ ಸಮೂಹದಿಂದ ನಾಲ್ಕು ಕಡೆಗಳಿಂದಲೂ ನನ್ನನ್ನು ಮುತ್ತಿಬಿಟ್ಟರು. ನಾನೊಬ್ಬನೇ ಅವರೆಲ್ಲರನ್ನೂ ಎದುರಿಸಿನಿಂತು ಶರವರ್ಷದಿಂದ (ಬಾಣಗಳ ಮಳೆಗರೆಯುವಿಕೆಯಿಂದ) ತಡೆದು ನಿಲ್ಲಿಸಿದೆನು.

ದೇವರಾಜನು ದಾನವರನ್ನು ಜಯಿಸಿದಂತೆ–ನಾನೊಬ್ಬನೇ ಆ ಎಲ್ಲ ರಾಜರನ್ನೂ ಪರಾಜಯಗೊಳಿಸಿದೆನು. ನನ್ನ ಮೇಲೆ ಬೀಳಲುಬಂದ ರಾಜರ ಚಿತ್ರ-ವಿಚಿತ್ರವಾದ ಮತ್ತು ಸ್ವರ್ಣಮಯವಾದ ಧ್ವಜಗಳನ್ನು ಪ್ರದೀಪ್ತವಾದ ಬಾಣಗಳಿಂದ ನಗು-ನಗುತ್ತಲೇ ಕತ್ತರಿಸಿದೆನು. ಒಬ್ಬನನ್ನು ಬೀಳಿಸುವುದಕ್ಕೆ ಎರಡು ಬಾಣಗಳನ್ನು ಬಿಡುವ ಅಗತ್ಯವೇ ಬರಲಿಲ್ಲ. ಒಂದೊಂದು ಬಾಣದಿಂದಲೇ ಆ ರಾಜರ ಕುದುರೆಗಳನ್ನೂ, ಆನೆಗಳನ್ನೂ, ಸಾರಥಿಗಳನ್ನೂ ನೆಲದ ಮೇಲೆ ಹೊಡೆದುರುಳಿಸುತ್ತಿದ್ದೆನು. ಕೆಲವರು ಬಾಣಪ್ರಯೋಗದಲ್ಲಿ ನನ್ನ ಕೈಚಳಕವನ್ನು ಕಂಡು ಭೀತರಾಗಿ ಪಲಾಯನಮಾಡಿದರು. ಈ ರೀತಿ ನಾನು ಆ ರಾಜರೆಲ್ಲರನ್ನೂ ಪರಾಜಯಗೊಳಿಸಿ ಮೂವರು ಕನ್ಯೆಯರೊಡನೆ ಹಸ್ತಿನಾಪುರಕ್ಕೆ ಬಂದೆನು. ನಾನು ಹಿಂದೆಯೇ ಹೇಳಿದಂತೆ ಆ ಮೂವರು ಕನ್ಯೆಯರನ್ನು ನನ್ನ ತಮ್ಮನಿಗೆ ತಂದುಕೊಂಡು ಮದುವೆಮಾಡುವ ಸಲುವಾಗಿ ಅಪಹರಿಸಿ ತಂದು ತಾಯಿಯಾದ ಸತ್ಯವತಿಗೊಪ್ಪಿಸಿ, ಕನ್ಯೆಯರನ್ನು ಬಲಾತ್ಕಾರವಾಗಿ ಸೆಳೆದು ತರಲಿದ್ದಾಗ ರಾಜರನ್ನು ಎದುರಿಸಬೇಕಾಗಿ ಬಂದುದು ; ಎಲ್ಲ ರಾಜರನ್ನೂ ಏಕಕಾಲದಲ್ಲಿ ಎದುರಿಸಿನಿಂತು ಅವರೊಡನೆ ಯುದ್ಧಮಾಡಿ ಎಲ್ಲರನ್ನೂ ಪರಾಜಯಗೊಳಿಸಿದುದು–ಈ ಎಲ್ಲ ವಿಷಯಗಳನ್ನೂ ಅವಳೊಡನೆ ಹೇಳಿದೆನು.”

೧೭೩ನೆಯ ಅಧ್ಯಾಯವು ಮುಗಿಯಿತು.

೧೭೪ನೆಯ ಅಧ್ಯಾಯ ಅಮ್ಬೋಪಾಖ್ಯಾನಪರ್ವ (ಮುಂದುವರಿದಿದೆ)

## ಅಂಬೆಯು ತಾನು ಶಾಲ್ವನನ್ನು ಪ್ರೀತಿಸಿರುವುದಾಗಿ ಹೇಳಿ ಅವನಲ್ಲಿಗೆ ಹೋಗಲು ಭೀಷ್ಮನ ಅನುಮತಿಯನ್ನು ಪ್ರಾರ್ಥಿಸಿದುದು

ಭೀಷ್ಮನು ಹೇಳುತ್ತಾನೆ :

"ಭರತಶ್ರೇಷ್ಠನೇ! ಅನಂತರದಲ್ಲಿ ನಾನು ವೀರಮಾತೆಯಾದ ದಾಶ ರಾಜಕುಮಾರಿಯಾದ ಸತ್ಯವತಿಯ ಬಳಿಗೆ ಹೋಗಿ ಅವಳಿಗೆ ಅಭಿವಾದನ ಪೂರ್ವಕವಾಗಿ ನಮಸ್ಕರಿಸಿ ಅವಳೊಡನೆ ಹೇಳಿದೆನು :

"ಅಮ್ಮ! ಇವರು ಕಾಶೀರಾಜನ ಮೂವರು ಕನ್ಯೆಯರು. ವೀರ್ಯ ಶುಲ್ಕದ ಮೂಲಕವಾಗಿ ಇವರ ಸ್ವಯಂವರವು ನಿಶ್ಚಯವಾಗಿತ್ತು. ನಾನು ಸ್ವಯಂವರಕ್ಕೆಂದು ಆಗಮಿಸಿದ್ದ ರಾಜರೆಲ್ಲರನ್ನೂ ಪರಾಜಯಗೊಳಿಸಿ ವಿಚಿತ್ರವೀರ್ಯನಿಗೆ ಇವರನ್ನು ತಂದುಕೊಂಡು ಮದುವೆಮಾಡುವ ಸಲುವಾಗಿ ಕರೆತಂದಿದ್ದೇನೆ."

ನನ್ನ ಮಾತನ್ನು ಕೇಳಿದ ಸತ್ಯವತಿಯು ಪರಮಹೃಷ್ಟಳಾಗಿ ಆನಂದಾಶ್ರುಗಳನ್ನು ಸುರಿಸುತ್ತಾ ನನ್ನ ನೆತ್ತಿಯನ್ನು ಪ್ರೀತಿಯಿಂದ ಆಘ್ರಾಣಿಸಿ, 'ಮಗು! ಅದೃಷ್ಟವಶದಿಂದ ನೀನು ಆ ರಾಜರೆಲ್ಲರನ್ನೂ ಗೆದ್ದು ಈ ನಾರೀಮಣಿಯರನ್ನು ತಂದಿರುವೆ' ಹೀಗೆ ಹೇಳಿ ವಿಧಿಪೂರ್ವಕವಾಗಿ ವಿಚಿತ್ರವೀರ್ಯನಿಗೆ ವಿವಾಹಮಾಡಲು ಅನುಮತಿಯನ್ನಿತ್ತಳು. ಅವಳ ಅನುಮತಿಯನ್ನು ಪಡೆದ ನಾನು ವಿವಾಹದ ಸಿದ್ಧತೆಗಳನ್ನು ಮಾಡುತ್ತಿರುವಾಗ ಕಾಶೀರಾಜನ ಹಿರಿಯ ಮಗಳಾದ ಅಂಬೆಯು ನನ್ನ ಬಳಿಗೆ ಬಂದು ಸ್ವಲ್ಪ ಸಂಕೋಚದಿಂದಲೇ ಈ ಮಾತುಗಳನ್ನು ಹೇಳಿದಳು :

"ಭೀಷ್ಮ! ನೀನು ಧರ್ಮಜ್ಞನಾಗಿರುವೆ. ಸರ್ವಶಾಸ್ತ್ರವಿಶಾರದನಾಗಿ ರುವೆ. ನಾನೀಗ ಹೇಳಲಿರುವ ಮಾತನ್ನು ಕೇಳಿ ಧರ್ಮಾವಿರೋಧಿಯಾದ ಕಾರ್ಯವನ್ನು ಮಾಡುವುದು ನಿನಗೆ ಉಚಿತವಾಗಿದೆ.

ನಾನು ಶಾಲ್ವರಾಜನನ್ನು ಈ ಮೊದಲೇ ಮನಸ್ಸಿನಿಂದ ನನ್ನ ಪತಿಯನ್ನಾಗಿ ವರಿಸಿಬಿಟ್ಟಿದ್ದೇನೆ. ಅವನೂ ನಮ್ಮ ತಂದೆಗೆ ತಿಳಿಯದಂತೆಯೇ ಏಕಾಂತದಲ್ಲಿ ನನ್ನನ್ನು ವರಿಸಿದ್ದಾನೆ. ನಾನು ಬೇರೆಯವರನ್ನು ಮನಸಾ ಪ್ರೀತಿಸುತ್ತಿದ್ದೇನೆ. ಹೀಗಿರುವಾಗ ಸುಪ್ರಥಿತವಾದ ಕುರುವಂಶದಲ್ಲಿ ಹುಟ್ಟಿರುವ ನೀನು ರಾಜಧರ್ಮವನ್ನು ಮೀರಿ ನಿನ್ನ ಮನೆಯಲ್ಲಿ ನನ್ನನ್ನು ಹೇಗೆತಾನೇ ಇಟ್ಟುಕೊಳ್ಳುವೆ? ಈ ವಿಷಯವನ್ನು ನೀನು ಮನಸ್ಸಿನಿಂದಲೂ ಮತ್ತು ಬುದ್ಧಿಯಿಂದಲೂ ಚೆನ್ನಾಗಿ ಸಮಾಲೋಚಿಸಿ, ಈ ವಿಷಯದಲ್ಲಿ ಮತ್ತು ಈ ಸಮಯದಲ್ಲಿ ನಿನ್ನ ಕರ್ತವ್ಯವೇನೆಂಬುದನ್ನು ನಿಶ್ಚಯಿಸಿಕೊಂಡು, ಹೇಗೆ ಮಾಡಿದರೆ ಯೋಗ್ಯವೆನಿಸುವುದೋ ಮತ್ತು ಧರ್ಮವೆನಿಸುವುದೋ –ಹಾಗೆ ಮಾಡುವುದು ಸೂಕ್ತವಾಗಿದೆ. ಪ್ರಜಾನಾಥನೇ! ನನ್ನ ಅಭಿಪ್ರಾಯವನ್ನೇ ನೀನು ಕೇಳುವುದಾದಲ್ಲಿ ಶಾಲ್ವರಾಜನು ನನ್ನ ಪ್ರತೀಕ್ಷೆಯಲ್ಲಿರುತ್ತಾನೆಂದು ತಿಳಿಸಲು ಬಯಸುತ್ತೇನೆ. ಆದುದರಿಂದ ಅವನ ಬಳಿಗೆ ಹೋಗಲು ನನಗೆ ನೀನು ಅನುಮತಿಯನ್ನೀಯುವುದು ಯುಕ್ತವಾಗಿದೆ. ಧರ್ಮಾತ್ಮರಲ್ಲಿ ಶ್ರೇಷ್ಠನಾದವನೇ! ಮಹಾಬಾಹುವೇ! ನನ್ನ ವಿಷಯದಲ್ಲಿ ಕೃಪೆತೋರು. ನೀನು ಈ ಪೃಥ್ವಿಯಲ್ಲೇ ಪ್ರಸಿದ್ಧನಾದ ಸತ್ಯವ್ರತನೆಂದು ನಾನು ಅನೇಕರಿಂದ ಕೇಳಿದ್ದೇನೆ.”

೧೭೪ನೆಯ ಅಧ್ಯಾಯವು ಮುಗಿಯಿತು.

೧೭೫ನೆಯ ಅಧ್ಯಾಯ ಅಮ್ಬೋಪಾಖ್ಯಾನಪರ್ವ (ಮುಂದುವರಿದಿದೆ)

### ಅಂಬೆಯು ಶಾಲ್ವನ ಬಳಿಗೆ ಹೋದುದು : ಶಾಲ್ವನು ಅವಳನ್ನು ಪರಿಗ್ರಹಿಸದೇ ತಿರಸ್ಕರಿಸಿದುದು : ಅನಂತರ ಅಂಬೆಯು ತಪಸ್ವಿಗಳ ಆಶ್ರಮಕ್ಕೆ ಹೋದುದು : ಶೈಖಾವತ್ಯ ಮತ್ತು ಅಂಬೆಯರ ಸಂವಾದ

ಭೀಷ್ಮನು ಮುಂದುವರಿದು ಹೇಳುತ್ತಾನೆ :

“ದುರ್ಯೋಧನ! ಆ ಸಮಯದಲ್ಲಿ ನನಗೆ ಅಂಬೆಯನ್ನು ಶಾಲ್ವ ರಾಜನ ಬಳಿಗೆ ಕಳುಹಿಸುವುದೇ ಯುಕ್ತವೆನಿಸಿತು. ಆ ವಿಷಯವನ್ನು ನಾನು

ನಮ್ಮ ತಾಯಿಯಾದ ಗಂಧವತಿಗೂ ಹೇಳಿ ಅವಳನ್ನೂ ಒಪ್ಪಿಸಿದೆನು. ಅವಳನ್ನು ಕಳುಹಿಸಲು ಕಾಲಿಯಿಂದ ಅನುಮತಿಯನ್ನು ಪಡೆದನಂತರ ಮಂತ್ರಿಗಳಿಗೂ, ಋತ್ವಿಜರಿಗೂ ಮತ್ತು ಪುರೋಹಿತರಿಗೂ ಆ ವಿಷಯವನ್ನು ತಿಳಿಸಿ, ಕಾಶೀರಾಜನ ಜ್ಯೇಷ್ಠಪುತ್ರಿಯಾದ ಅಂಬೆಗೆ ಶಾಲ್ವರಾಜನ ಬಳಿಗೆ ಹೋಗಲು ಅನುಮತಿಯನ್ನಿತ್ತೆನು. ನನ್ನಿಂದ ಅನುಜ್ಞಾತಳಾದ ಅಂಬೆಯು ಶಾಲ್ವನ ಪಟ್ಟಣಕ್ಕೆ ಹೋದಳು. ಅವಳಿಲ್ಲಿಂದ ಪ್ರಯಾಣ ಹೊರಟಾಗ ಅವಳ ರಕ್ಷಣೆಗಾಗಿ ವೃದ್ಧರಾದ ಬ್ರಾಹ್ಮಣರನ್ನು ಕಳುಹಿಸಿದ್ದೆನು. ಅವಳ ದಾದಿಯೂ ಅವಳೊಡನೆಯೇ ಇದ್ದಳು. ಬಹುದೂರದ ಹಾದಿಯನ್ನು ಅಂಬೆಯು ಬ್ರಾಹ್ಮಣರೊಡನೆಯೂ, ದಾದಿಯೊಡನೆಯೂ ದಾಟಿದನಂತರ ಶಾಲ್ವರಾಜನ ಅರಮನೆಯನ್ನು ಸೇರಿ ಅವನನ್ನು ಸಂಧಿಸಿ ಅವನೊಡನೆ ಈ ಮಾತುಗಳನ್ನು ಹೇಳಿದಳು :

**ಆಗತಾಹಂ ಮಹಾಬಾಹೋ ತ್ವಾಮುದ್ದಿಶ್ಯ ಮಹಾಮತೇ ॥೪॥**

"ಮಹಾಮತಿಯೇ! ಮಹಾಬಾಹುವೇ! ನಾನು ನಿನ್ನನ್ನೇ ಉದ್ದೇಶಿಸಿ ಆಗಮಿಸಿದ್ದೇನೆ. (ನಿನ್ನನ್ನೇ ಪ್ರೇಮಿಸಿ ಬಂದಿರುತ್ತೇನೆ.)"

ದುರ್ಯೋಧನ! ಅಂಬೆಯು ಹೇಳಿದ ಮಾತನ್ನು ಕೇಳಿ ಶಾಲ್ವಪತಿಯು ನಸುನಗುತ್ತಲೋ ಎಂಬಂತೆ ಹೇಳಿದನು :

**ತ್ವಯಾನ್ಯಪೂರ್ವಯಾ ನಾಹಂ ಭಾರ್ಯಾರ್ಥೀ ವರವರ್ಣಿನಿ ॥೫॥**

"ವರವರ್ಣಿನಿಯೇ! ಬೇರೆಯವರು ಮೊದಲು ನಿನ್ನನ್ನು ಪರಿಗ್ರಹಿಸಿ ಬಿಟ್ಟಿದ್ದಾರೆ. ಅನ್ಯರಿಂದ ಪರಿಗೃಹೀತಳಾದ ನಿನ್ನನ್ನು ಭಾರ್ಯೆಯನ್ನಾಗಿ ನಾನು ಅಂಗೀಕರಿಸಲಾರೆನು. ಪುನಃ ನೀನು ಭೀಷ್ಮನ ಸಮೀಪಕ್ಕೇ ಹೊರಟುಹೋಗು. ಭೀಷ್ಮನಿಂದ ಬಲಾತ್ಕಾರಪೂರ್ವಕವಾಗಿ ಅಪಹರಿಸಲ್ಪಟ್ಟಿರುವ ನಿನ್ನನ್ನು ಪರಿಗ್ರಹಿಸಲು ನಾನು ಖಂಡಿತವಾಗಿಯೂ ಇಚ್ಛಿಸುವುದಿಲ್ಲ.

ಭೀಷ್ಮನು ಆ ಮಹಾಯುದ್ಧದಲ್ಲಿ ಸಮಸ್ತಭೂಪಾಲಕರನ್ನೂ ತನ್ನ ಭುಜಬಲದಿಂದ ಗೆದ್ದು ತನ್ಮೂಲಕವಾಗಿ ನಿನ್ನನ್ನೂ ಜಯಿಸಿ ರಥದಲ್ಲಿ ಕುಳ್ಳಿರಿಸಿ ಕೊಂಡು ಹೋಗಿದ್ದಾನೆ. ಆ ಸಮಯದಲ್ಲಿ ನೀನೂ ಅವನೊಡನೆ ಪ್ರಸನ್ನಳಾ

ಗಿಯೇ ಇದ್ದೆಯಲ್ಲವೇ? ಶುಭಾಂಗಿಯೇ! ನಾನು ಹಿಂದೆಯೇ ಹೇಳಿದಂತೆ ಅನ್ಯರಿಂದ ಮೊದಲು ಪರಿಗೃಹೀತಳಾದ ನಿನ್ನನ್ನು ನನ್ನ ಭಾರ್ಯೆಯನ್ನಾಗಿ ಮಾಡಿಕೊಳ್ಳಲಾರೆನು. ನಡೆದ ವಿಷಯಗಳೆಲ್ಲವನ್ನೂ ಮೊದಲಿಂದ ಕಡೆಯ ವರೆಗೂ ಯಥಾವತ್ತಾಗಿ ತಿಳಿದುಕೊಂಡಿರುವ ಮತ್ತು ಇತರರಿಗೆ ಹೀಗೆಯೇ ಇರಬೇಕೆಂದು ಧರ್ಮೋಪದೇಶಮಾಡುವ (ಅನುಶಾಸನಮಾಡುವ) ನನ್ನಂತಹ ರಾಜನು–ಮೊದಲು ಅನ್ಯರಿಂದ ಪರಿಗೃಹೀತಳಾದ ಸ್ತ್ರೀಯನ್ನು ತನ್ನ ಮನೆಯೊಳಕ್ಕೆ ಹೇಗೆತಾನೇ ಸೇರಿಸಿಕೊಳ್ಳುವನು? ನನ್ನಿಂದಂತೂ ನಿನ್ನನ್ನು ಪುನಃ ಪರಿಗ್ರಹಿಸಲು ಸಾಧ್ಯವೇ ಆಗುವುದಿಲ್ಲ. ಭದ್ರೇ! ನಿನ್ನ ಅಮೋಘವಾದ (ಈ ಯೌವನದ) ಕಾಲವು ವ್ಯರ್ಥವಾಗದಿರಲಿ. ಮನಬಂದಲ್ಲಿಗೆ ಹೊರಟುಹೋಗು."

ಮೊದಲು ತನ್ನನ್ನು ಪ್ರೇಮಿಸಿದ್ದ ಶಾಲ್ವರಾಜನು ಹೀಗೆ ಮಾತನಾಡುವನೆಂದು ಅಂಬೆಯು ಸರ್ವಥಾ ಭಾವಿಸಿರಲಿಲ್ಲ. ಅನಂಗನ ಬಾಣಪ್ರಹಾರದಿಂದ ಪೀಡಿತಳಾಗಿದ್ದ ಅಂಬೆಯು ಶಾಲ್ವರಾಜನ ಮಾತನ್ನು ಕೇಳಿ ಅತ್ಯಂತ ಖಿನ್ನಳಾಗಿ ಅವನನ್ನು ಕುರಿತು ಹೇಳಿದಳು :

**ನೈವಂ ವದ ಮಹೀಪಾಲ ನೈತದೇವಂ ಕಥಂಚನ ।**
**ನಾಸ್ಮಿ ಪ್ರೀತಿಮತೀ ನೀತಾ ಭೀಷ್ಮೇಣಾಮಿತ್ರಕರ್ಶನ ।**
**ಬಲಾನ್ನೀತಾಸ್ಮಿ ರುದತೀ ವಿದ್ರಾವ್ಯ ಪೃಥಿವೀಪತೀನ್ ॥೧೦॥**

"ಮಹೀಪಾಲನೇ! ನೀನು ಯಾವುದೇ ಕಾರಣದಿಂದಲೂ ಇಂತಹ ಮಾತನ್ನು ಮಾತ್ರ ಹೇಳಬೇಡ. ಇದು ನೀನು ಭಾವಿಸಿರುವಂತೆ ನಡೆದಿಲ್ಲ. ಭೀಷ್ಮನು ನನ್ನನ್ನು ಬಲಾತ್ಕಾರವಾಗಿ ಕರೆದೊಯ್ಯುತ್ತಿದ್ದಾಗ ಪ್ರಸನ್ನಳಾಗಿದ್ದೆನೆಂದು ಹೇಳಿ ನನ್ನ ಮನಸ್ಸನ್ನು ನೋಯಿಸುತ್ತಿರುವೆ. ನಾನು ಆ ಸಮಯದಲ್ಲಿ ಖಂಡಿತವಾಗಿಯೂ ಪ್ರಸನ್ನಮನಸ್ಕಳಾಗಿರಲಿಲ್ಲ. ಶತ್ರುಸೂದನನೇ! ಭೀಷ್ಮನು ಸಮಸ್ತರಾಜರನ್ನೂ ಓಡಿಸಿ ಬಲಾತ್ಕಾರಪೂರ್ವಕವಾಗಿ ನನ್ನನ್ನು ಸೆಳೆದುಕೊಂಡು ಹೋದನು. ನಾನು ಅಳುತ್ತಳುತ್ತಲೇ ಅವನ ಜೊತೆಯಲ್ಲಿ ಹೋದೆನು. ಶಾಲ್ವಪತಿಯೇ! ನಾನು ನಿರಪರಾಧಿನಿಯಾಗಿದ್ದೇನೆ. ಏನೂ

ತಿಳಿಯದ ಬಾಲೆಯಾಗಿದ್ದೇನೆ. ನಿನ್ನಲ್ಲಿಯೇ ಅನುರಕ್ತಳಾಗಿದ್ದೇನೆ. ನನ್ನನ್ನು ಸ್ವೀಕರಿಸು. ಪರಿತ್ಯಾಗಮಾಡಬೇಡ.

**ಭಕ್ತಾನಾಂ ಹಿ ಪರಿತ್ಯಾಗೋ ನ ಧರ್ಮೇಷು ಪ್ರಶಸ್ಯತೇ ||೧೨||**

ಭಕ್ತರಾದವರ (ಅನುರಕ್ತರಾದವರ) ಪರಿತ್ಯಾಗವು ಧರ್ಮಗಳಲ್ಲಿ (ಧರ್ಮಜ್ಞರ) ಪ್ರಶಂಸೆಗೆ ಅರ್ಹವಾಗುವುದಿಲ್ಲ. ಭಕ್ತರ ಪರಿತ್ಯಾಗ ಮಾಡುವುದನ್ನು ಧರ್ಮವು ಅನುಮೋದಿಸುವುದಿಲ್ಲ. ಧರ್ಮಾತ್ಮರಿದನ್ನು ಒಪ್ಪುವುದಿಲ್ಲ. ಯುದ್ಧದಲ್ಲಿ ಶತ್ರುವಿಗೆ ಬೆನ್ನುತೋರಿಸುವುದೆಂಬುದನ್ನೇ ಅರಿಯದ ಗಾಂಗೇಯನಿಗೆ ನನ್ನ ಮನಸ್ಸಿನಲ್ಲಿದ್ದುದೆಲ್ಲವನ್ನೂ ಹೇಳಿ, ಅವನಿಂದಲೇ ನಿನ್ನ ಬಳಿಗೆ ಬರಲು ಅನುಜ್ಞೆಯನ್ನೂ ಪಡೆದು, ಅನಂತರ ನಿನ್ನನ್ನು ಸೇರಬೇಕೆಂಬ ಕಾತರದಿಂದ ಅತ್ಯವಸರವಾಗಿ ಇಲ್ಲಿಗೆ ಬಂದಿರುತ್ತೇನೆ. ಮಹಾರಾಜ! ಮೇಲಾಗಿ ಭೀಷ್ಮನು ನಮ್ಮನ್ನು ವೀರ್ಯಶುಲ್ಕದ ಮೂಲಕ ಸೆಳೆದುಕೊಂಡು ಹೋದುದು ಮದುವೆಯಾಗಬೇಕೆಂಬ ಆಶಯದಿಂದಲ್ಲ. ಅವನ ಈ ಕನ್ಯಾಪಹರಣಸಮಾರಂಭವು ಅಪಹೃತರಾದ ಕನ್ಯೆಯರನ್ನು ತನ್ನ ತಮ್ಮನಿಗೆ ತಂದುಕೊಂಡು ಮದುವೆಮಾಡುವ ಕಾರಣದಿಂದಾಗಿ ಆಯಿತೆಂಬುದನ್ನು ನಾನಲ್ಲಿಗೆ ಹೋದನಂತರವೇ ಬೇರೆಯವರಿಂದ ಕೇಳಿ ತಿಳಿದುಕೊಂಡೆನು. ಭೀಷ್ಮನು ಸೆಳೆದುಕೊಂಡುಹೋದ ಅಂಬಿಕೆ-ಅಂಬಾಲಿಕೆಯರೆಂಬ ನನ್ನ ಇಬ್ಬರು ತಂಗಿಯರನ್ನು ತನ್ನ ಚಿಕ್ಕತಮ್ಮನಾದ ವಿಚಿತ್ರವೀರ್ಯನಿಗೆ ಕೊಟ್ಟು ಮದುವೆಮಾಡಿದನು. ಪುರುಷವ್ಯಾಘ್ರನೇ! ನಿನ್ನನ್ನು ಬಿಟ್ಟು ಅನ್ಯರನ್ನು ನಾನು ಮನಸ್ಸಿನಿಂದಲೂ ಯಾವುದೇ ಕಾರಣದಿಂದಲೂ ಚಿಂತಿಸುವುದಿಲ್ಲ. ಈ ವಿಷಯವನ್ನು ನಾನು ನನ್ನ ತಲೆಯನ್ನು ಮುಟ್ಟಿಕೊಂಡು ಹೇಳುತ್ತೇನೆ. (ಪ್ರಮಾಣಮಾಡಿ ಹೇಳುತ್ತೇನೆ.) ರಾಜೇಂದ್ರ! ನಾನು ಹಿಂದೆ ಯಾವಾಗಲೂ ಬೇರೆಯವರಿಗೆ ಸೇರಿದವಳಾಗಿರಲಿಲ್ಲ. ಮೊದಲು ನಾನೇ ಮನಸ್ಸಿನಿಂದ ನಿನ್ನ ಸಮೀಪಸ್ಥಳಾಗಿದ್ದೆನು. (ನಿನ್ನನ್ನು ಮನಸಾರ ವರಿಸಿಬಿಟ್ಟೆನು.) ನಾನಿದನ್ನು ಸತ್ಯಮಾಡಿ ಹೇಳುತ್ತಿದ್ದೇನೆ. ನನ್ನ ಹೃದಯವನ್ನು ಮುಟ್ಟಿ ಸತ್ಯದ ಮೇಲೆ ಆಣೆಯಿಟ್ಟು ಹೇಳುತ್ತೇನೆ. ನಾನು ಹಿಂದೆಯೂ ನಿನ್ನವಳೇ; ಈಗಲೂ

ನಿನ್ನವಳೇ. ಈ ಮಾತು ಸತ್ಯವಾದುದು. ವಿಶಾಲಾಕ್ಷನೇ! ತಾನಾಗಿ ಒಲಿದುಬಂದಿರುವ ಕನ್ಯೆಯನ್ನು ಪರಿಗ್ರಹಿಸು. ನನ್ನ ಮನಸ್ಸನ್ನು ಬಹಳ ಹಿಂದೆಯೇ ನಿನಗರ್ಪಿಸಿಬಿಟ್ಟಿದ್ದೇನೆ. ನಿನ್ನ ಕೃಪೆಯನ್ನೇ ಕಾತರತೆಯಿಂದ ನಿರೀಕ್ಷಿಸುತ್ತಿರುವ ಬಾಲೆಯನ್ನು ಧರ್ಮಪತ್ನಿಯನ್ನಾಗಿ ಸ್ವೀಕರಿಸು."

ದುರ್ಯೋಧನ! ಈ ರೀತಿಯಲ್ಲಿ ಅಂಬೆಯು ಶಾಲ್ವರಾಜನನ್ನು ಪರಿ-ಪರಿಯಾಗಿ ಪ್ರಾರ್ಥಿಸಿದರೂ ಶಾಲ್ವನು ಕಾಶೀಪತಿಯ ಮಗಳಾದ ಅಂಬೆಯನ್ನು–ಸರ್ಪವು ಜೀರ್ಣವಾಗಿ ಹೋದ ಪೊರೆಯನ್ನು ಕಳಚಿಹಾಕುವಂತೆ–ತ್ಯಜಿಸಿಯೇಬಿಟ್ಟನು. ಅನೇಕಪ್ರಕಾರವಾಗಿ ಅಂಬೆಯು ಅಂಗಲಾಚಿಬೇಡಿಕೊಂಡರೂ ಶಾಲ್ವಪತಿಯ ಹೃದಯದ ಪರಿವರ್ತನೆಯಾಗಲಿಲ್ಲ ; ಅಂಬೆಯ ಮಾತಿನಲ್ಲಿ ಅವನಿಗೆ ವಿಶ್ವಾಸವೂ ಹುಟ್ಟಲಿಲ್ಲ. ಕಾಮಕ್ಕೆ ಉಪಹತಿಯುಂಟಾದಾಗ ಕ್ರೋಧವು ಆವಿರ್ಭವಿಸುವುದು ಸ್ವಾಭಾವಿಕವಲ್ಲವೇ? ದುರ್ಯೋಧನ! ಕಾಮಾಭಿಭೂತಳಾಗಿದ್ದ ಅಂಬೆಯು ಕಾಮಕ್ಕೆ ಉಪಹತಿಯುಂಟಾದೊಡನೆಯೇ ಕೋಪಾವಿಷ್ಟಳಾದಳು. ಕಾಶೀಪತಿಯ ಹಿರಿಯ ಮಗಳಾದ ಅಂಬೆಯು ಕೋಪಾವಿಷ್ಟಳಾಗಿ ಕಣ್ಣುಗಳಲ್ಲಿ ನೀರುತುಂಬಿಕೊಂಡು ಗದ್ಗದಸ್ವರದಿಂದ ಈ ಮಾತುಗಳನ್ನು ಹೇಳಿದಳು :

**ತ್ವಯಾ ತ್ಯಕ್ತಾ ಗಮಿಷ್ಯಾಮಿ ಯತ್ರ ತತ್ರ ವಿಶಾಮ್ಪತೇ ।**
**ತತ್ರ ಮೇ ಗತಯಃ ಸನ್ತು ಸನ್ತಃ ಸತ್ಯಂ ಯಥಾ ಧ್ರುವಮ್ ॥೨೨॥**

"ಮಹಾರಾಜ! ನಿಜಸಂಗತಿಯು ಹೇಗೆ ನಡೆಯಿತೋ ಹಾಗೆಯೇ ನಿನ್ನೊಡನೆ ಹೇಳಿದ್ದೇನೆ. ನನ್ನ ಹೃದಯವನ್ನು ಬಿಚ್ಚಿ ತೋರಿಸಲಾಗದಿದ್ದರೂ ಆತ್ಮಸಾಕ್ಷಿಯಾಗಿ ಎಲ್ಲ ವಿಷಯಗಳನ್ನೂ ಹೇಳಿದ್ದೇನೆ. ಆದರೂ ನೀನು ನನ್ನನ್ನು ಪರಿತ್ಯಜಿಸಲು ನಿಶ್ಚಯಿಸಿರುವೆ. ಚಿಂತೆಯಿಲ್ಲ ; ನಿನ್ನಿಂದ ಪರಿತ್ಯಕ್ತಳಾಗಿ ನಾನು ಹೊರಟುಹೋಗುತ್ತೇನೆ. ಇಲ್ಲಿ ಒಂದು ಕ್ಷಣವೂ ನಿಲ್ಲುವುದಿಲ್ಲ. ನಾನು ಎಲ್ಲಿಗೆ ಹೋಗುವೆನೋ ಅಲ್ಲಿ ನನಗೆ ಸತ್ಪುರುಷರು ರಕ್ಷಕರಾಗಿರಲಿ."

ದುರ್ಯೋಧನ! ಕಾರುಣ್ಯಪೂರಿತಳಾಗಿ, ಬಹುದೀನಳಾಗಿ ಬಿಕ್ಕಿ-ಬಿಕ್ಕಿ

ಅಳುತ್ತಾ ಅಂಗಲಾಚುತ್ತಿದ್ದರೂ ಅಂಬೆಯನ್ನು ಶಾಲ್ವಪತಿಯು ಪರಿತ್ಯಜಿಸಿಯೇ ಬಿಟ್ಟನು. ಅವಳು ಅತ್ತುಕರೆದರೂ, ಅಂಗಲಾಚಿದರೂ ಅವನ ಮನಸ್ಸು ಪರಿವರ್ತನೆಹೊಂದಲಿಲ್ಲ.; ಹೃದಯವು ಕರಗಲಿಲ್ಲ. 'ಹೋಗು! ಇಲ್ಲಿಂದ ಮೊದಲು ಹೊರಟುಹೋಗು! ಒಂದು ಕ್ಷಣವಾದರೂ ಇಲ್ಲಿ ನಿಲ್ಲಬೇಡ. ನಿನ್ನನ್ನು ಭೀಷ್ಮನು ನನ್ನ ಸಮಕ್ಷದಲ್ಲಿಯೇ ಪರಿಗ್ರಹಿಸಿದ್ದಾನೆ. ಭೀಷ್ಮನ ಭಯ ದಿಂದಾಗಿ ಅವನಿಂದ ಪರಿಗೃಹೀತಳಾದ ನಿನ್ನನ್ನು ನೋಡಲೂ ಭಯಪಡುತ್ತೇನೆ. ಈ ಕಾರಣದಿಂದ ಬೇಗನೇ ಇಲ್ಲಿಂದ ಹೊರಡು'–ಎಂದು ಶಾಲ್ವನು ಪುನಃ ಪುನಃ ಹೇಳುತ್ತಲೇ ಇದ್ದನು. ಶಾಲ್ವನ ಅತಿನಿಷ್ಠುರವಾದ ಮಾತನ್ನು ಕೇಳಿ ಮುಂದೇನು ಮಾಡಬೇಕೆಂಬುದನ್ನು ತಿಳಿಯದ ದೀನಳಾದ ಅಂಬೆಯು–ಕಡಲಹದ್ದು ಕಿರುಚಿಕೊಳ್ಳುವಂತೆ–ರೋದನಮಾಡುತ್ತಾ ಶಾಲ್ವರಾಜನ ಪಟ್ಟಣದಿಂದ ಹೊರಟಳು.

ದುರ್ಯೋಧನ! ಶಾಲ್ವನಗರದಿಂದ ಹೊರಹೊರಟ, ಬಹುದುಃಖಿತೆ ಯಾಗಿದ್ದ ಅಂಬೆಯು ಮುಂದೇನು ಮಾಡಬೇಕೆಂಬುದನ್ನು ಚಿಂತಿಸತೊಡಗಿ ದಳು. ಶೋಕಪೀಡಿತಹೃದಯಳಾಗಿದ್ದ ಅವಳು ತನ್ನಲ್ಲಿಯೇ ಹೀಗೆ ಹೇಳಿಕೊಂಡಳು : 'ನನ್ನ ಹಾಗೆ ಸಂಕಟದಲ್ಲಿ ಸಿಕ್ಕಿಕೊಂಡಿರುವ ಯುವತಿಯು ಈ ವಿಶ್ವದಲ್ಲಿಯೇ ಬೇರೊಬ್ಬಳಿಲ್ಲ. ಬಂಧು-ಬಾಂಧವರಿಂದ ದೂರವಾಗಿ ಬಿಟ್ಟಿದ್ದೇನೆ. ನಾನು ಬಹುವಾಗಿ ಪ್ರೀತಿಸಿದ್ದ ಶಾಲ್ವರಾಜನಿಂದಲೂ ತಿರಸ್ಕೃತ ಳಾಗಿದ್ದೇನೆ. ನಾನು ಈಗೆಲ್ಲಿಗೆ ಹೋಗಲಿ? ಪುನಃ ಹಾಸ್ತಿನಪುರಕ್ಕೆ ಹೋಗಲಂತೂ ನನ್ನಿಂದ ಸಾಧ್ಯವಾಗುವುದಿಲ್ಲ. ಶಾಲ್ವನ ಮೇಲಿನ ಅನುರಾಗ ದಿಂದಾಗಿ ನಾನಾಗಿಯೇ ಶಾಲ್ವನ ಬಳಿಗೆ ಹೋಗಲು ಭೀಷ್ಮನಿಂದ ಅನುಜ್ಞೆಯನ್ನು ಬೇಡಿ ಬಂದೆನು. ಹಸ್ತಿನಾಪಟ್ಟಣದಿಂದ ಹೊರಟುಬಂದುದ ಕ್ಕಾಗಿ ನನ್ನನ್ನೇ ನಾನು ನಿಂದಿಸಿಕೊಳ್ಳಲೇ? ಅಥವಾ ಶಾಲ್ವನ ಬಳಿಗೆ ಹೋಗಲು ಅನುಜ್ಞೆಕೊಟ್ಟುದಕ್ಕಾಗಿ ದುರಾಸದನಾದ ಭೀಷ್ಮನನ್ನು ನಿಂದಿಸಲೇ? ಅಥವಾ ನನ್ನ ಸ್ವಯಂವರವನ್ನೇರ್ಪಡಿಸಿದ ಮೂಢನಾದ ನನ್ನ ತಂದೆಯನ್ನೇ ನಿಂದಿಸಲೇ? ಯಾರನ್ನು ತಾನೇ ಏಕೆ ನಿಂದಿಸಲಿ?– ಈ ವಿಷಯದಲ್ಲಿ ನನ್ನದೇ ಒಂದು ಮಹಾಪರಾಧವಾಗಿದೆ. ದಾರುಣವಾದ ಆ ಯುದ್ಧವು ನಡೆಯುತ್ತಿದ್ದ ಸಮಯದಲ್ಲಿ ಭೀಷ್ಮನ ರಥದಲ್ಲಿದ್ದ ನಾನು ಶಾಲ್ವನ ಸಲುವಾಗಿ ರಥದಿಂದ

ಕೆಳಕ್ಕೆ ಹಾರಿ ಬಿಡಲಿಲ್ಲ. ಮೂರ್ಖಸ್ತ್ರೀಯಂತೆ ಅಂದು ಮಾಡಿದ ಆ ಅಪರಾಧಕ್ಕೆ ಇಂದು ನಾನು ಅದರ ಫಲವನ್ನು ಅನುಭವಿಸುತ್ತಿದ್ದೇನೆ. ಬೇರೊಬ್ಬರ ಸಲುವಾಗಿ ನನ್ನನ್ನು ಸೆಳೆದುಕೊಂಡು ಹೋದ ಭೀಷ್ಮನಿಗೆ ಧಿಕ್ಕಾರವಿರಲಿ. ಎಲ್ಲಕ್ಕಿಂತಲೂ ಮೊದಲಾಗಿ ಮೂರ್ಖನಾದ, ಮಂದಬುದ್ಧಿಯವನಾದ ನನ್ನ ತಂದೆಗೆ ಧಿಕ್ಕಾರವಿರಲಿ. ವೀರ್ಯಶುಲ್ಕದ ವಿನಿಮಯದಿಂದ ನನ್ನ ಸ್ವಯಂವರವನ್ನೇರ್ಪಡಿಸಿ ವೇಶ್ಯೆಯಂತೆ ಸಮಸ್ತರಾಜರ ಮಧ್ಯದಲ್ಲಿ ನಿಲ್ಲಲು ನನ್ನನ್ನವನು ಪ್ರಚೋದಿಸಿದನಲ್ಲವೇ? ನನಗೂ ಧಿಕ್ಕಾರವಿರಲಿ! ಶಾಲ್ವನಿಗೂ ಧಿಕ್ಕಾರವಿರಲಿ! ನನ್ನ ಹಣೆಯಲ್ಲಿ ಇಷ್ಟು ನಿಷ್ಠುರವಾಗಿ ಭವಿಷ್ಯವನ್ನು ಬರೆದಿರುವ ಬ್ರಹ್ಮನಿಗೂ ಧಿಕ್ಕಾರವಿರಲಿ!

ಈ ಎಲ್ಲರ ದುರ್ನೀತಿಯ ಕಾರಣದಿಂದಾಗಿ ನಾನಿಂದು ದೊಡ್ಡದಾದ ವಿಪತ್ತಿನಲ್ಲಿ ಸಿಕ್ಕಿಕೊಂಡಿರುತ್ತೇನೆ.

**ಸರ್ವಥಾ ಭಾಗಧೇಯಾನಿ ಸ್ವಾನಿ ಪ್ರಾಪ್ನೋತಿ ಮಾನವಃ ।**
**ಅನಯಸ್ಯಾಸ್ಯ ತು ಮುಖಂ ಭೀಷ್ಮಃ ಶಾನ್ತನವೋ ಮಮ ॥೩೩॥**

ತನ್ನದೇ ಆದ ಪೂರ್ವಾರ್ಜಿತವಾದ ಸೌಭಾಗ್ಯಗಳನ್ನು ಮಾನವನು ಪಡೆದುಕೊಂಡೇ ಪಡೆದುಕೊಳ್ಳುತ್ತಾನೆ. ನನ್ನ ಸೌಭಾಗ್ಯವನ್ನೂ ನಾನು ಪಡೆದುಕೊಂಡೇ ಪಡೆದುಕೊಳ್ಳುತ್ತಿದ್ದೆನು. ನನಗೆ ಈಗ ಅನ್ಯಾಯವಾಗಿರು ವುದಕ್ಕೆ ಮುಖ್ಯಕಾರಣನು ಶಾಂತನುವಿನ ಮಗನಾದ ಭೀಷ್ಮನೆಂಬುದರಲ್ಲಿ ಸಂಶಯವೇ ಇಲ್ಲ. ಭೀಷ್ಮನಿಂದ ಸೌಭಾಗ್ಯವನ್ನು ಕಳೆದುಕೊಂಡಿರುವ ನಾನು ತಪಸ್ಸಿನಿಂದಾಗಲೀ, ಯುದ್ಧದಿಂದಾಗಲೀ– ಅವನಿಗೆ ಪ್ರತೀಕಾರವನ್ನು ಮಾಡಲೇಬೇಕು. ನಿಶ್ಚಯವಾಗಿಯೂ ನನ್ನ ಇಂದಿನ ದುಃಖಕ್ಕೆ ಭೀಷ್ಮನೇ ಮುಖ್ಯಕಾರಣನೆಂಬುದು ನನ್ನ ಅಭಿಪ್ರಾಯವಾಗಿದೆ. ಆದುದರಿಂದ ತಪಸ್ಸಿನಿಂದ ಅಥವಾ ಯುದ್ಧದಿಂದ ಭೀಷ್ಮನಿಗೆ ಪ್ರತೀಕಾರ ಮಾಡಬೇಕು. ಆದರೆ ಯುದ್ಧದಲ್ಲಿ ಭೀಷ್ಮನನ್ನು ಪರಾಜಯಗೊಳಿಸುವ ಸಾಮರ್ಥ್ಯವುಳ್ಳ ರಾಜರು ಈ ವಿಶ್ವದಲ್ಲಿ ಯಾರಿದ್ದಾರೆ? ಭೀಷ್ಮನನ್ನೆದುರಿಸುವ ರಾಜರಿರಲಿ ; ಇಲ್ಲದಿರಲಿ–ಅವನಿಗಂತೂ ಪ್ರತೀ ಕಾರವನ್ನು ಮಾಡಿಯೇ ತೀರಬೇಕು'– ಹೀಗೆ ಮನದಲ್ಲಿ ನಿಶ್ಚಯಿಸಿ ಶಾಲ್ವನ

ಪಟ್ಟಣದಿಂದ ಹೊರಹೊರಟ ಅಂಬೆಯು ಪುಣ್ಯಶೀಲರಾದ ಮಹಾತ್ಮರಾದ ತಪಸ್ವಿಗಳ ಆಶ್ರಮಕ್ಕೆ ಹೋಗಿ, ಅಲ್ಲಿದ್ದ ತಪಸ್ವಿಗಳಿಂದ ಪರಿವೃತಳಾಗಿ (ಸಂರಕ್ಷಿತಳಾಗಿ) ಆ ರಾತ್ರಿಯನ್ನು ಅಲ್ಲಿಯೇ ಕಳೆದಳು. ಶುಚಿಸ್ಮಿತೆಯಾದ ಅಂಬೆಯು ತನ್ನ ಮನಸ್ಸಿನಲ್ಲಿದ್ದ ಎಲ್ಲ ವಿಷಯಗಳನ್ನೂ ಹೇಗೆ ನಡೆಯಿತೋ ಹಾಗೆಯೇ ಸವಿಸ್ತರವಾಗಿ ತನ್ನನ್ನು ಸುತ್ತುವರಿದು ಕುಳಿತಿದ್ದ ತಪಸ್ವಿಗಳೊಡನೆ ಹೇಳಿದಳು– ನಾನು ಸಕಲರಾಜರನ್ನೂ ಜಯಿಸಿ ಮೂವರು ರಾಜಕುಮಾರಿ ಯರನ್ನೂ ಅಪಹರಿಸಿಕೊಂಡು ಹೋದುದು ; ಅವಳ ಪ್ರಾರ್ಥನೆಯಂತೆ ನಾನು ಅವಳನ್ನು ಶಾಲ್ವನಗರಿಗೆ ಕಳುಹಿಸಿಕೊಟ್ಟುದು ಮತ್ತು ಶಾಲ್ವನು ಅವಳ ಪ್ರಾರ್ಥನೆಯನ್ನು ಮನ್ನಿಸದೇ ಪರಿತ್ಯಾಗಮಾಡಿದುದು–ಇದಿಷ್ಟು ಪ್ರಕರಣಗಳನ್ನೂ ಅಂಬೆಯು ತಪಸ್ವಿಗಳಿಗೆ ವಿಶದವಾಗಿ ಹೇಳಿದಳು. ಅದೇ ಆಶ್ರಮದಲ್ಲಿಯೇ ಕಠೋರವ್ರತನಿಷ್ಠನಾದ, ತಪೋವೃದ್ಧನಾದ, ಶಾಸ್ತ್ರ ದಲ್ಲಿಯೂ– ಆರಣ್ಯಕೋಪನಿಷತ್ತಿನಲ್ಲಿಯೂ (ಬ್ರಹ್ಮವಿದ್ಯೆಯಲ್ಲಿಯೂ) ನಿಷ್ಣಾತನಾಗಿದ್ದ ಶೈಖಾವತ್ಯ*ನೆಂಬ ಶ್ರೇಷ್ಠನಾದ ಬ್ರಾಹ್ಮಣನೊಬ್ಬನಿದ್ದನು. ಅತ್ಯಾರ್ತಳಾಗಿದ್ದ, ದೀರ್ಘವಾಗಿ ನಿಟ್ಟುಸಿರುಬಿಡುತ್ತಿದ್ದ, ದುಃಖ-ಶೋಕಪರಾಯಣೆಯಾಗಿದ್ದ, ಬಾಲೆಯಾದ, ಸಾಧ್ವಿಯಾದ ಅಂಬೆಯನ್ನು ಕುರಿತು ಮಹಾತಪಸ್ವಿಯಾದ ಶೈಖಾವತ್ಯಮುನಿಯು ಹೇಳಿದನು :

**ಏವಂ ಗತೇ ತು ಕಿಂ ಭದ್ರೇ ಶಕ್ಯಂ ಕರ್ತುಂ ತಪಸ್ವಿಭಿಃ ।**
**ಆಶ್ರಮಸ್ಥೈರ್ಮಹಾಭಾಗೇ ತಪೋಯುಕ್ತೈರ್ಮಹಾತ್ಮಭಿಃ ॥೪೦॥**

"ಮಹಾಭಾಗಳೇ! ಪರಿಸ್ಥಿತಿಯು ಹೀಗಿರುವಾಗ–ಆಶ್ರಮಸ್ಥರಾದ ತಪಸ್ವಿಗಳಿಂದ, ತಪೋಯುಕ್ತರಾದ ಮಹಾತ್ಮರಿಂದ ಏನು ತಾನೇ ಮಾಡಲು ಸಾಧ್ಯವಿದೆ?"

---

* ಶೈಖಾವತ್ಯಃ = ಶಿಖಾವಾನ್ - ಅಗ್ನಿಃ, ತತ್ಸಾಧ್ಯಾನಿ ಶ್ರೌತ-ಸ್ಮಾರ್ತಕರ್ಮಾಣಿ ಶೈಖಾವತಾನಿ. ಅಗ್ನಿಯಿಂದ ಸಾಧ್ಯವಾಗತಕ್ಕ ಕೆಲಸಗಳು. ತೇಷು ಸಾಧುಃ = ಅದರಲ್ಲಿ ನಿಷ್ಣಾತನಾದವನು-ಶೈಖಾವತ್ಯಃ... ಎಂಬುದಾಗಿ ವ್ಯಾಖ್ಯಾನಕಾರರು ಅರ್ಥಮಾಡಿರುತ್ತಾರೆ.

ದುರ್ಯೋಧನ! ಆ ಮಾತನ್ನು ಕೇಳಿ ಅಂಬೆಯು ಶೈಖಾವತ್ಯನನ್ನು ಕುರಿತು ಹೇಳಿದಳು :

**ಕ್ರಿಯತಾಂ ಮದನುಗ್ರಹಃ ।**
**ಪ್ರಾವ್ರಾಜ್ಯಮಹಮಿಚ್ಛಾಮಿ ತಪಸ್ತಪ್ಸ್ಯಾಮಿ ದುಶ್ಚರಮ್ ॥೪೧॥**

"ತಾಪಸೋತ್ತಮರೇ! ನನ್ನನ್ನು ತಾವು ಅನುಗ್ರಹಿಸಿರಿ. ತಮ್ಮ ಅನುಗ್ರಹವನ್ನಷ್ಟೇ ನಾನು ಬಯಸಿ ಬಂದಿದ್ದೇನೆ. ನಾನು ಸಂನ್ಯಾಸಧರ್ಮವನ್ನು ಪರಿಪಾಲಿಸಿಕೊಂಡಿರಲು ಇಚ್ಛಿಸಿದ್ದೇನೆ. ಸಂನ್ಯಾಸಧರ್ಮದಲ್ಲಿರುತ್ತಾ ದುಷ್ಕರವಾದ ತಪಸ್ಸನ್ನು ಮಾಡುತ್ತೇನೆ.*

ಮೂಢೆಯಾದ ನಾನು ಹಿಂದಿನ ಜನ್ಮದಲ್ಲಿ ಮಾಡಿರಬಹುದಾದ ಕರ್ಮಗಳೆಲ್ಲವೂ ಪಾಪಕರ್ಮಗಳೇ ಆಗಿರಬಹುದು. ಇಂದು ನಾನು ಅನುಭವಿಸುತ್ತಿರುವ ಈ ಸಂಕಟವು ಆ ಪಾಪಕರ್ಮಗಳ ಫಲವೇ ಆಗಿರುತ್ತದೆ.

ತಾಪಸೋತ್ತಮರೇ! ನಾನು ಖಂಡಿತವಾಗಿಯೂ ಪುನಃ ನನ್ನ ಬಂಧುಗಳ ಬಳಿಗೆ ಹೋಗುವುದಿಲ್ಲ. ಶಾಲ್ವನು ನನಗೆ ಅಸಹನೀಯವಾದ ಪ್ರತ್ಯುತ್ತರವಿತ್ತನು. ಮೇಲಾಗಿ ಪರಿತ್ಯಜಿಸಿಯೂ ಬಿಟ್ಟನು. ಈ ಕಾರಣದಿಂದಾಗಿ ನಾನು ಆನಂದರಹಿತಳಾಗಿದ್ದೇನೆ. ನನ್ನ ಈಗಿನ ಸ್ಥಿತಿಯಲ್ಲಿ ನನಗೆ ಬಂಧು-ಬಾಂಧವರೂ ಬೇಡವಾಗಿದೆ.

ನಿಷ್ಕಲಂಕರೇ! ದೇವಸದೃಶರಾದ ನಿಮ್ಮಿಂದ ನಾನು ತಪಸ್ಸಿನ ಉಪದೇಶವನ್ನು ಪಡೆಯಲಿಚ್ಛಿಸಿದ್ದೇನೆ. ತಪಸ್ಸುಮಾಡುವ ವಿಧಾನವನ್ನು ತಿಳಿಯಲಿಚ್ಛಿಸಿದ್ದೇನೆ. ತಮ್ಮೆಲ್ಲರ ಕೃಪಾದೃಷ್ಟಿಯು ನನ್ನ ಮೇಲೆ ಬೀಳಲೆಂದು ಕೇಳಿಕೊಳ್ಳುತ್ತೇನೆ."

ಅಂಬೆಯ ದೈನ್ಯಪೂರಿತವಾದ ಮಾತನ್ನು ಕೇಳಿ ಶೈಖಾವತ್ಯನು ಲೌಕಿಕ ದೃಷ್ಟಾಂತಗಳಿಂದಲೂ, ಶಾಸ್ತ್ರೀಯವಚನಗಳಿಂದಲೂ ಮತ್ತು ಯುಕ್ತಿಯುಕ್ತವಾದ ಮಾತುಗಳಿಂದಲೂ ಆಶ್ವಾಸನೆಯನ್ನಿತ್ತು ಅಂಬೆಯನ್ನು ಸಮಾಧಾನ

---

* ಪ್ರವ್ರಜ್ಯಾ-ಸಂನ್ಯಾಸಃ, ತತ್ರೋಚಿತಂ ಕರ್ಮ-ಪ್ರಾವ್ರಾಜ್ಯಂ ಸಂನ್ಯಾಸೋಚಿತವಾದ ಕರ್ಮಕ್ಕೆ ಪ್ರಾವ್ರಾಜ್ಯವೆಂದು ಹೆಸರು.

ಗೊಳಿಸಿದನು. ಅಲ್ಲಿದ್ದ ಬ್ರಾಹ್ಮಣರೊಡನೆ ಸಮಾಲೋಚಿಸಿ ಕಾರ್ಯಸಾಧನೆಗೆ ಪ್ರಯತ್ನಮಾಡುವುದಾಗಿ ಪ್ರತಿಜ್ಞೆಯನ್ನೂ ಮಾಡಿದನು."

೧೭೫ನೆಯ ಅಧ್ಯಾಯವು ಮುಗಿಯಿತು.

೧೭೬ನೆಯ ಅಧ್ಯಾಯ ಅಮ್ಬೋಪಾಖ್ಯಾನಪರ್ವ (ಮುಂದುವರಿದಿದೆ)

## ತಪಸ್ವಿಗಳ ಆಶ್ರಮಕ್ಕೆ ರಾಜರ್ಷಿಗಳಾದ ಹೋತ್ರವಾಹನ ಮತ್ತು ಅಕೃತವ್ರಣರು ಆಗಮಿಸಿದುದು : ಅವರೊಡನೆ ಅಂಬೆಯ ಮಾತುಕತೆ

ಭೀಷ್ಮನು ಹೇಳುತ್ತಾನೆ :

"ದುರ್ಯೋಧನ! ಅಂಬೆಗೆ ಆಶ್ವಾಸನೆಯನ್ನಿತ್ತು ಸಮಾಧಾನಮಾಡಿದ ಬಳಿಕ ತಪಸ್ವಿಗಳೆಲ್ಲರೂ ಕಾರ್ಯೋನ್ಮುಖರಾದರು. ಅಂಬೆಯ ವಿಷಯವನ್ನೇ ಕುರಿತು ಚಿಂತಿಸುತ್ತಿದ್ದ ಧಾರ್ಮಿಕರಾದ ತಪಸ್ವಿಗಳು ಅಂಬೆಯ ಹಿತಕ್ಕಾಗಿ ತಾವು ಏನು ಮಾಡಬೇಕೆಂಬುದನ್ನು ಪರಸ್ಪರವಾಗಿ ಸಮಾಲೋಚಿಸತೊಡಗಿದರು.

ಕೆಲವು ತಾಪಸರು 'ಇವಳನ್ನು ಇವಳ ತಂದೆಯ ಮನೆಗೆ ಕರೆದುಕೊಂಡು ಹೋಗೋಣ' ಎಂದರು. ಮತ್ತೆ ಕೆಲವು ತಾಪಸರು ನನ್ನನ್ನು ನಿಂದಿಸಲು ತೊಡಗಿದರು. ಮತ್ತೆ ಕೆಲವು ತಾಪಸರು ಶಾಲ್ವಪತಿಯ ಬಳಿಗೆ ಹೋಗಿ ಅವನನ್ನೇ ಬಾಧ್ಯನನ್ನಾಗಿ ಮಾಡಬೇಕೆಂಬ ಅಭಿಪ್ರಾಯವನ್ನಿತ್ತರು. ಒಡನೆಯೇ ಮತ್ತೆ ಕೆಲವರು 'ಹಾಗೆಂದಿಗೂ ಆಗಕೂಡದು' ಎಂದರು. 'ಶಾಲ್ವನು ಅಂಬೆಯೊಡನೆ ಬಹಳ ಕಟುವಾಗಿ ವರ್ತಿಸಿದ್ದಾನೆ. ಅವಳನ್ನು ತಿರಸ್ಕಾರಮಾಡಿದ್ದಾನೆ. ಅಂತಹವನ ಬಳಿಗೆ ಪುನಃ ಹೋಗುವುದೆಂದರೇನು?' ಎಂಬುದು ಅವರ ಅಭಿಪ್ರಾಯವಾಗಿತ್ತು. ತಪಸ್ವಿಗಳು ಒಮ್ಮತವಾದ ಅಭಿಪ್ರಾಯಕ್ಕೆ ಬರಲಿಲ್ಲ. ಕಠೋರವ್ರತನಿಷ್ಠರಾದ ತಪಸ್ವಿಗಳು ಪುನಃ ಅಂಬೆಯನ್ನು ಕುರಿತು ಹೇಳಿದರು :

"ಭದ್ರೇ! ನಿನಗೆ ಹಿತವನ್ನುಂಟುಮಾಡಬೇಕೆಂದು ಅಪೇಕ್ಷಿಸಿರುವ

ನಮಗೆ ಯಾವ ಮಾರ್ಗವೂ ಸುಗಮವಾಗಿ ಕಾಣುತ್ತಿಲ್ಲ. ಹೀಗಿರುವಾಗ ಮನೀಷಿಗಳಾದ ನಾವು ನಿನ್ನ ವಿಷಯದಲ್ಲಿ ಏನು ತಾನೇ ಮಾಡಬಲ್ಲೆವು? ಆದರೆ ನಮಗೆ ತಿಳಿದಿರುವಂತೆ ಕೆಲವು ಸಲಹೆಗಳನ್ನು ಮಾತ್ರ ನಿನ್ನ ಮುಂದಿಡುತ್ತೇವೆ. ಅದರಲ್ಲಿರುವ ಅನುಕೂಲ್ಯಗಳನ್ನೂ ನಿನಗೆ ವಿವರಿಸಿ ಹೇಳುತ್ತೇವೆ ; ಲಾಲಿಸು. ನೀನು ಸರ್ವಸಂಗಪರಿತ್ಯಾಗಮಾಡಿ ಸಂನ್ಯಾಸ ಧರ್ಮವನ್ನು ಸ್ವೀಕರಿಸುವುದು, ಸಂನ್ಯಾಸಿಗಳಿಗೆ ಉಚಿತವಾದ ಕರ್ಮಮಾಡು ವುದು–ಸಾಧುವಾಗಿ ಕಾಣುವುದಿಲ್ಲ. ಆದುದರಿಂದ ಸಂನ್ಯಾಸಿನಿಯಾಗ ಬೇಕೆಂಬ ಅಭಿಪ್ರಾಯವನ್ನು ನೀನು ದೂರೀಕರಿಸು. ಇಲ್ಲಿಂದ ನೀನು ನಿನ್ನ ತಂದೆಯ ಮನೆಗೆ ಹೋಗು. ನಿನಗೆ ಮಂಗಳವಾಗಲಿ. ನೀನು ನಿನ್ನ ತಂದೆಯ ಮನೆಗೆ ಹೋದನಂತರದಲ್ಲಿ ಅವನೇ ನಿನ್ನ ಭವಿತವ್ಯದ ವಿಷಯವನ್ನು ಯೋಚಿಸಿ ಕಾರ್ಯಮಾಡುತ್ತಾನೆ. ಕಲ್ಯಾಣಿ! ಸರ್ವಗುಣಾನ್ವಿತೆಯಾಗಿ ನೀನು ನಿನ್ನ ತಂದೆಯ ಮನೆಯಲ್ಲಿ ಸುಖವಾಗಿರುವೆ.

**ನ ಚ ತೇಽನ್ಯಾ ಗತಿರ್ನ್ಯಾಯ್ಯಾ ಭವೇದ್ಭದ್ರೇ ಯಥಾ ಪಿತಾ ।**
**ಪತಿರ್ವಾಪಿ ಗತಿರ್ನಾರ್ಯಾಃ ಪಿತಾ ವಾ ವರವರ್ಣಿನಿ ॥೭॥**

ವರವರ್ಣಿನಿಯೇ! ನೀನು ತಂದೆಯ ಆಶ್ರಯವನ್ನು ಪಡೆಯುವುದು ನ್ಯಾಯಸಮ್ಮತವಾಗಿಯೂ ಇದೆ. ಸ್ತ್ರೀಯಾದವಳು ಬೇರೆಯವರ ಆಶ್ರಯ ದಲ್ಲಿರುವುದು ಸೂಕ್ತವಲ್ಲ. ಹೆಂಗಸಿಗೆ ಗಂಡನಾದರೂ ಆಶ್ರಯದಾತನಾಗ ಬೇಕು ಅಥವಾ ತಂದೆಯಾದರೂ ಆಶ್ರಯನೀಡಬೇಕು. (ಹೆಂಗಸು ಪತಿಯ ಆಶ್ರಯದಲ್ಲಾದರೂ ಇರಬೇಕು ಅಥವಾ ತಂದೆಯ ಆಶ್ರಯದಲ್ಲಾದರೂ ಇರಬೇಕು.)

**ಗತಿಃ ಪತಿಃ ಸಮಸ್ಥಾಯಾ ವಿಷಮೇ ಚ ಪಿತಾ ಗತಿಃ ।**
**ಪ್ರವ್ರಜ್ಯಾ ಹಿ ಸುದುಃಖೇಯಂ ಸುಕುಮಾರ್ಯಾ ವಿಶೇಷತಃ ॥೮॥**

ಸಾಮಾನ್ಯಸಮಯಗಳಲ್ಲಿ ಎಲ್ಲ ಕಾರ್ಯಗಳಲ್ಲಿಯೂ ಹೆಂಗಸಿಗೆ ಪತಿಯೇ ಆಶ್ರಯನಾಗಿರುತ್ತಾನೆ. ಒಂದು ವೇಳೆ ಯಾವುದಾದರೂ ಕಾರಣ ದಿಂದ ವಿರಸವುಂಟಾದಲ್ಲಿ ಅಥವಾ ಪತಿಯೊಡನಿರುವ ಹೆಂಗಸಿಗೆ ಯಾವು ದಾದರೂ ಕಷ್ಟವು ಒದಗಿಬಂದಲ್ಲಿ–ತಂದೆಯ ಮನೆಯ (ತೌರಿನ) ಆಶ್ರಯ

ವನ್ನು ಪಡೆಯಬೇಕು. ಈ ಎರಡನ್ನೂ ಬಿಟ್ಟು ನೀನಪೇಕ್ಷಿಸುತ್ತಿರುವ ಸಂನ್ಯಾಸವು ಹೆಚ್ಚು ದುಃಖಕರವಾದುದು. ಮಿಗಿಲಾಗಿ, ಸುಕುಮಾರಿಯಾದ ನಿನ್ನಂತಹವಳಿಗೆ ಸಂನ್ಯಾಸಧರ್ಮದ ಕರ್ಮಾನುಷ್ಠಾನಗಳನ್ನು ಮಾಡಲು ಸಾಧ್ಯವೇ ಆಗುವುದಿಲ್ಲ. ಭಾಮಿನಿ! ಮೊದಲೇ ನೀನು ರಾಜಪುತ್ರಿಯು. ದೈಹಿಕವಾದ ಕಷ್ಟವೇನೆಂಬುದನ್ನೇ ಕಂಡರಿಯದವಳು. ಎರಡನೆಯದಾಗಿ : ನೀನಿನ್ನೂ ಕೌಮಾರ್ಯದಲ್ಲಿರುವೆ. ಹರೆಯದಲ್ಲಿರುವೆ. ಭದ್ರೇ! ನೀನು ಆಶ್ರಮದಲ್ಲಿಯೇ ವಾಸಮಾಡಿಕೊಂಡಿರುವೆಯಾದರೆ ಅನೇಕ ದೋಷಗಳು (ತೊಂದರೆಗಳು) ಸಂಭವಿಸಲು ಅವಕಾಶವಿದೆ. ಆದರೆ ತಂದೆಯ ಮನೆಯಲ್ಲಿರುವುದಾದರೆ ಯಾವ ವಿಧವಾದ ತೊಂದರೆಗಳಿಗೂ ಅವಕಾಶವಿರುವುದಿಲ್ಲ."

ಆಶ್ರಮದಲ್ಲಿದ್ದರೆ ಸಂಭವಿಸಬಹುದಾದ ತೊಂದರೆ ಅಥವಾ ದೋಷಗಳೇನೆಂಬುದನ್ನು ವಿವರಿಸುತ್ತಾ ಮತ್ತೂ ಕೆಲವು ತಪಸ್ವಿಗಳು ವರವರ್ಣಿನಿಯಾದ ಅಂಬೆಗೆ ಹೇಳಿದರು :

"ರಾಜಕುಮಾರಿ! ನಿರ್ಜನವಾದ ಮತ್ತು ಗಹನವಾದ ಅರಣ್ಯದಲ್ಲಿ ನೀನು ಏಕಾಕಿನಿಯಾಗಿರುವುದನ್ನು ಕಂಡು ಇಲ್ಲಿಗೆ ಆಗಾಗ ಬಂದು ಹೋಗುವ ರಾಜರೂ ನಿನ್ನ ಪ್ರಣಯವನ್ನು ಪ್ರಾರ್ಥಿಸುತ್ತಾರೆ. (ನಿನ್ನನ್ನು ಬಯಸುತ್ತಾರೆ.) ಆದುದರಿಂದ ನೀನು ಅರಣ್ಯದಲ್ಲಿ ಸಂನ್ಯಾಸಧರ್ಮದಿಂದಿರಲು ಮನಸ್ಸುಮಾಡಬೇಡ."

ತಾಪಸೋತ್ತಮರ ಸಲಹೆಗೆ ಉತ್ತರವಾಗಿ ಅಂಬೆಯು ಹೇಳಿದಳು :

"ತಾಪಸೋತ್ತಮರೇ! ಕಾಶೀನಗರದಲ್ಲಿರುವ ನಮ್ಮ ತಂದೆಯ ಮನೆಗೆ ಪುನಃ ಹೋಗಲು ನನಗೆ ಖಂಡಿತವಾಗಿಯೂ ಶಕ್ಯವಿಲ್ಲ. ಒಂದು ವೇಳೆ ನಾನು ಅಲ್ಲಿಗೆ ಪುನಃ ಹೋದೆನಾದರೆ ನನ್ನ ಬಾಂಧವರಿಂದ ನಾನು ಅವಮಾನಿತಳಾಗುತ್ತೇನೆ. ನನ್ನ ಬಂಧುಗಳು ನನ್ನನ್ನು ಮನಬಂದಂತೆ ತೆಗಳುತ್ತಾರೆ. ಇದರಲ್ಲಾವ ಸಂಶಯವೂ ಇಲ್ಲ. ಬಾಲ್ಯಾವಸ್ಥೆಯಲ್ಲಿ ನಾನು ನನ್ನ ತಂದೆಯ ಮನೆಯಲ್ಲಿದ್ದುಬಿಟ್ಟೆನು. ಯೌವನಾವಸ್ಥೆಯಲ್ಲಿ ನಾನು

ನನ್ನ ಪತಿಯ ಮನೆಯಲ್ಲಿ ಅಥವಾ ಪತಿಯ ರಕ್ಷಣೆಯಲ್ಲಿರಬೇಕಾಗಿದ್ದಿತು. ದುರದೃಷ್ಟವಶದಿಂದ ಅದು ಸಾಧ್ಯವಾಗಲಿಲ್ಲ. ಈ ಅವಸ್ಥೆಯಲ್ಲಿ ನಾನು ನನ್ನ ತಂದೆಯ ಮನೆಗೆ ಹೋಗುವುದು ಸೂಕ್ತವಲ್ಲ. ಆದುದರಿಂದ ನನ್ನ ತಂದೆಯಿರುವ ಕಾಶೀಪಟ್ಟಣಕ್ಕೆ ನಾನು ಹೋಗುವುದಿಲ್ಲ. ನಿಮಗೆ ಮಂಗಳವಾಗಲಿ. ಮಹಾತ್ಮರಾದ ತಪಸ್ವಿಗಳಿಂದ ಅಭಿರಕ್ಷಿತಳಾದ ನಾನು ಇಲ್ಲಿಯೇ ತಪಸ್ಸುಮಾಡಿಕೊಂಡಿರಲು ಇಚ್ಛಿಸಿದ್ದೇನೆ. ನನ್ನ ತಪಸ್ಸಿನ ಉದ್ದೇಶವೇನೆಂದು ತಾವು ಕೇಳಬಹುದು. ಪರಲೋಕದಲ್ಲಾದರೂ ನನಗೆ ಈ ವಿಧವಾದ ಸಂಕಟವಾಗದಿರಲೆಂದೂ, ಭಾಗ್ಯಹೀನೆಯಾಗಬಾರದೆಂದೂ ನಾನು ತಪಸ್ಸುಮಾಡುತ್ತೇನೆ.”

ದುರ್ಯೋಧನ! ಅಂಬೆಯು ಇಷ್ಟು ಪರಿಯಾಗಿ ಹೇಳಿದರೂ ತಪಸ್ವಿಗಳು ಯಾವ ನಿರ್ಧಾರಕ್ಕೂ ಬರಲಿಲ್ಲ. ಅಂಬೆಯ ಭವಿತವ್ಯದ ವಿಷಯವಾಗಿ ಚಿಂತಿಸುತ್ತಲೇ ಇದ್ದರು.

ಅದೇ ಸಮಯಕ್ಕೆ ಸರಿಯಾಗಿ ಮಹಾತಪಸ್ವಿಯಾದ ಹೋತ್ರವಾಹನನೆಂಬ ರಾಜರ್ಷಿಯು ಅದೇ ಅರಣ್ಯಕ್ಕೆ ಆಗಮಿಸಿದನು. ಅವನು ಬಂದೊಡನೆಯೇ ಆಶ್ರಮದಲ್ಲಿದ್ದ ತಪಸ್ವಿಗಳೆಲ್ಲರೂ ಅವನಿಗೆ ಸ್ವಾಗತವನ್ನಿತ್ತು ಅರ್ಘ್ಯ-ಪಾದ್ಯಾಚಮನಾದಿ ಯಥೋಚಿತವಾದ ಪೂಜೆಗಳಿಂದ ಸತ್ಕರಿಸಿದರು. ಹೋತ್ರವಾಹನನು ಆಸನದಲ್ಲಿ ಕುಳಿತು ವಿಶ್ರಾಂತಿಸುಖವನ್ನು ಅನುಭವಿಸುತ್ತಿರುವಾಗ, ಅವನು ಕೇಳುತ್ತಿದ್ದಂತೆಯೇ (ಅವನ ಸಮ್ಮುಖದಲ್ಲಿಯೇ) ತಪಸ್ವಿಗಳು ಆಶ್ರಮಕ್ಕಾಗಮಿಸಿದ್ದ ಕನ್ಯೆಯ ವಿಷಯವಾಗಿ ಪುನಃ ಮಾತುಕತೆಗಳನ್ನು ಪ್ರಾರಂಭಿಸಿದರು. ಅಂಬೆಯ ಮತ್ತು ಕಾಶೀರಾಜನ ಸಂಬಂಧವಾದ ಆ ಕಥೆಯನ್ನು ಕೇಳಿ ಮಹಾತೇಜಸ್ವಿಯಾದ, ರಾಜರ್ಷಿಯಾದ ಹೋತ್ರವಾಹನನು ಉದ್ವಿಗ್ನಚಿತ್ತನಾದನು. ಅವನ ಉದ್ವಿಗ್ನತೆಗೆ ಕಾರಣವೇನೆಂದರೆ : ಹೋತ್ರವಾಹನನು ಅಂಬೆಗೆ ಮಾತಾಮಹನೇ (ತಾಯಿಯ ತಂದೆಯೇ) ಆಗಿದ್ದನು. ಹೋತ್ರವಾಹನನು ಉದ್ವಿಗ್ನಮನಸ್ಕನಾಗಿ ತರ-ತರನೆ ನಡುಗುತ್ತಲೇ ಮೊಮ್ಮಗಳಾದ ಅಂಬೆಯನ್ನು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಸಂತೈಸಿದನು. ಹೋತ್ರವಾಹನನು ಅವಳ ವ್ಯಸನದ ಉತ್ಪತ್ತಿಗೆ ಕಾರಣವನ್ನು ಮೊದಲಿನಿಂದಲೂ ಹೇಳುವಂತೆ ಅಂಬೆಯನ್ನು ಕೇಳಿದನು. ಅವಳೂ ನಡೆದು

ದೆಲ್ಲವನ್ನೂ ತಾತನ ಮುಂದೆ ಹೇಗೆ ನಡೆಯಿತೋ ಹಾಗೆಯೇ ವಿವರಿಸಿ ಹೇಳಿದಳು. ಮಹಾತಪಸ್ವಿಯಾದ, ರಾಜರ್ಷಿಯಾದ ಹೋತ್ರವಾಹನನು ಮೊಮ್ಮಗಳ ಹೃದಯವಿದ್ರಾವಕವಾದ ಕಥೆಯನ್ನು ಕೇಳಿ ದುಃಖ-ಶೋಕ ಸಮನ್ವಿತನಾದನು ಮತ್ತು ತಾನು ಅವಳಿಗಾಗಿ (ಅವಳ ಒಳಿತಿಗಾಗಿ) ಮಾಡಬೇಕಾದ ಕಾರ್ಯವನ್ನೂ ನಿಶ್ಚಯಿಸಿದನು. ಬಹುದುಃಖಿತನಾಗಿದ್ದ ಹೋತ್ರವಾಹನನು ದುಃಖಾಧಿಕ್ಯದಿಂದ ಕಂಪಿಸುತ್ತಾ ಬಹುದುಃಖಿತಳಾಗಿದ್ದ ಅಂಬೆಯನ್ನು ಕುರಿತು ಹೇಳಿದನು :

"ಭದ್ರೇ! ನಿನಗೆ ಇಚ್ಛೆಯಿಲ್ಲದಿದ್ದಲ್ಲಿ ತಂದೆಯ ಮನೆಗೆ ಹೋಗಲೇ ಬೇಡ. ನಾನು ನಿನ್ನ ತಾಯಿಯ ತಂದೆಯಾಗಿದ್ದೇನೆ. ಮಗಳೇ! ನೀನು ನನ್ನ ಬಳಿಯಲ್ಲಿಯೇ ಇದ್ದುಬಿಡು. ನಾನು ನಿನ್ನ ದುಃಖವನ್ನು ಖಂಡಿತವಾಗಿಯೂ ತೊಡೆದುಹಾಕುತ್ತೇನೆ. ವತ್ಸೇ! ನಿನ್ನ ಮನಸ್ಸು ಸಂಕಟದಿಂದ ತುಂಬಿಹೋಗಿದೆ. ಈ ಕಾರಣದಿಂದಲೇ ನೀನು ಕೃಶಳಾಗಿಬಿಟ್ಟಿರುವೆ. ನನ್ನ ಮಾತಿನಂತೆ ನೀನು ಜಮದಗ್ನಿಯ ಮಗನಾದ, ಮಹಾತಪಸ್ವಿಯಾದ ಪರಶುರಾಮನ ಬಳಿಗೆ ಹೋಗು. ಪರಶುರಾಮನು ನಿನ್ನ ಈ ಮಹಾದುಃಖವನ್ನೂ ಮತ್ತು ಶೋಕವನ್ನೂ ಹೋಗಲಾಡಿಸುತ್ತಾನೆ. ಒಂದು ವೇಳೆ ಪರಶುರಾಮನ ಮಾತನ್ನು ಭೀಷ್ಮನೇನಾದರೂ ಕೇಳದಿದ್ದರೆ–ಯುದ್ಧದಲ್ಲಿ ರಾಮನು ಭೀಷ್ಮನನ್ನೇ ಕೊಂದುಬಿಡುತ್ತಾನೆ. ಕಾಲಾಗ್ನಿಗೆ ಸಮಾನವಾದ ತೇಜಸ್ಸಿನಿಂದ ಕೂಡಿರುವ ಭಾರ್ಗವಶ್ರೇಷ್ಠನಾದ ಪರಶುರಾಮನ ಸಮೀಪಕ್ಕೆ ನೀನು ಈಗಲೇ ಹೋಗು, ಮಗಳೇ! ಮಹಾತಪಸ್ವಿಯಾದ ಭಾರ್ಗವರಾಮನು ನಿನ್ನನ್ನು ನ್ಯಾಯೋಚಿತವಾದ ಮಾರ್ಗದಲ್ಲಿ, ಒಳ್ಳೆಯ ಮಾರ್ಗದಲ್ಲಿ, ನಿನಗೆ ಹಿತವಾಗುವಂತಹ ಮಾರ್ಗದಲ್ಲಿ ಕೊಂಡೊಯ್ಯುತ್ತಾನೆ."

ಹೋತ್ರವಾಹನನ ಮಾತನ್ನು ಕೇಳುತ್ತಲೇ ಅಂಬೆಗೆ ಅಪರಿಮಿತವಾದ ಆನಂದವಾಯಿತು. ಆನಂದಬಾಷ್ಪಗಳು ಎರಡು ಕಣ್ಣುಗಳಿಂದಲೂ ಧಾರಾ ಕಾರವಾಗಿ ಸುರಿದುವು. ಬಾರಿ-ಬಾರಿಗೂ ಆನಂದಬಾಷ್ಪಗಳನ್ನು ಸುರಿಸುತ್ತಾ ಮಾತಾಮಹನಾದ ಹೋತ್ರವಾಹನನಿಗೆ ತಲೆಬಾಗಿ ಅಭಿವಾದನಮಾಡಿ ಹೇಳಿದಳು :

"ತಾತ! ನಿನ್ನ ಆಜ್ಞೆಯಂತೆ ನಾನು ಪರಶುರಾಮನಲ್ಲಿಗೆ ಹೋಗುತ್ತೇನೆ. ಆದರೆ ಲೋಕವಿಖ್ಯಾತನಾದ ಆ ಪರಶುರಾಮನನ್ನು ನಾನು ಹೇಗೆ ನೋಡಲಿ? ಎಲ್ಲಿ ನೋಡಲಿ? ಅತಿತೀವ್ರವಾದ ನನ್ನ ದುಃಖವನ್ನು ಆ ಮಹಾತ್ಮನು ಹೇಗೆತಾನೇ ನಿವಾರಣೆ ಮಾಡಬಲ್ಲನು? ಆ ಮಹಾನುಭಾವನಲ್ಲಿಗೆ ಹೋಗಲಿರುವ ನಾನು ಈ ವಿಷಯವನ್ನು ನಿನ್ನಿಂದ ತಿಳಿದುಕೊಳ್ಳಬೇಕೆಂದಿರುತ್ತೇನೆ."

"ಭದ್ರೇ! ಉಗ್ರವಾದ ತಪಸ್ಸಿನಲ್ಲಿ ನಿರತನಾಗಿರುವ, ಸತ್ಯಸಂಧನಾದ, ಮಹಾಬಲನಾದ, ಜಮದಗ್ನಿಯ ಮಗನಾದ ರಾಮನನ್ನು ನೀನು ಮಹಾವನದಲ್ಲಿ ಕಾಣುವೆ. ಪರಶುರಾಮನು ಯಾವಾಗಲೂ ಪರ್ವತಗಳಿಗೆಲ್ಲಾ ಶ್ರೇಷ್ಠವಾದುದೆಂದು ಖ್ಯಾತವಾಗಿರುವ ಮಹೇಂದ್ರಪರ್ವತದಲ್ಲಿಯೇ ಇರುತ್ತಾನೆ. ಆ ಪರ್ವತದಲ್ಲಿಯೇ ಋಷಿಗಳೂ, ವೇದವಿದ್ವಾಂಸರೂ, ಗಂಧರ್ವರೂ ಮತ್ತು ಅಪ್ಸರೆಯರೂ ಇದ್ದಾರೆ. ನಿನಗೆ ಮಂಗಳವಾಗಲಿ.

ಮಗಳೇ! ನೀನಲ್ಲಿಗೆ ಹೋಗು. ತಪೋವೃದ್ಧನಾದ, ದೃಢವ್ರತನಾದ, ಪರಶುರಾಮನಿಗೆ ತಲೆಬಾಗಿ ನಮಸ್ಕರಿಸಿ ನಾನು ಹೇಳಿಕಳುಹಿಸಿರುವೆನೆಂದು ಅವನೊಡನೆ ನೀನು ಹೇಳಬೇಕು. ಅನಂತರ ನಿನ್ನ ಮನಸ್ಸಿನಲ್ಲಿ ಯಾವ ಕಾರ್ಯದ ಸಿದ್ಧಿಯಾಗಬೇಕೆಂದಿರುವುದೋ ಅದನ್ನು ಅವನೊಡನೆ ನಿಸ್ಸಂಕೋಚವಾಗಿ ಹೇಳು. ನಾನೇ (ಹೋತ್ರವಾಹನನೇ) ಹೇಳಿಕಳುಹಿಸಿರುವೆನೆಂದು ಹೇಳಿದನಂತರ ಅವನು, ನೀನು ಹೇಳುವ ಎಲ್ಲ ಕಾರ್ಯಗಳನ್ನೂ ಮಾಡಿಕೊಡುತ್ತಾನೆ. ವತ್ಸೇ! ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ, ಜಮದಗ್ನಿಯ ಮಗನಾದ, ವೀರನಾದ ಪರಶುರಾಮನು ನನಗೆ ಪ್ರೀತಿಪಾತ್ರನಾದ, ಸೌಹಾರ್ದದಿಂದ ಕೂಡಿರುವ ಗೆಳೆಯನಾಗಿರುತ್ತಾನೆ. ಈ ಕಾರಣದಿಂದಲೇ ಅವನು ನನ್ನ ಹೆಸರನ್ನು ಹೇಳಿದಕೂಡಲೇ ಎಲ್ಲ ಕಾರ್ಯಗಳನ್ನೂ ಮಾಡಿಕೊಡುತ್ತಾನೆ."

ರಾಜರ್ಷಿಯಾದ ಹೋತ್ರವಾಹನನು ಮೊಮ್ಮಗಳೊಡನೆ ಕಾರ್ಯಸಿದ್ಧಿಯ ವಿಷಯವಾಗಿ ಮಾತನಾಡುತ್ತಿರುವ ಸಮಯಕ್ಕೆ ಸರಿಯಾಗಿ ಪರಶುರಾಮನ ಪ್ರಿಯಸಹಚರನಾದ ಅಕೃತವ್ರಣನು ಕಾಕತಾಳೀಯನ್ಯಾಯದಂತೆ

ಅಲ್ಲಿಗೆ ಆಗಮಿಸಿದನು. ಅವನು ಆಶ್ರಮಕ್ಕೆ ಆಗಮಿಸುತ್ತಲೇ ಆಶ್ರಮದಲ್ಲಿದ್ದ ಸಾವಿರಾರು ಋಷಿಗಳೂ ಮತ್ತು ವಯೋವೃದ್ಧನಾದ, ಸೃಂಜಯವಂಶೀಯನಾದ, ರಾಜರ್ಷಿಯಾದ ಹೋತ್ರವಾಹನನೂ ಪ್ರತ್ಯುತ್ಥಾನಮಾಡಿ ಗೌರವಿಸಿದರು. ಆಶ್ರಮದ ತಪಸ್ವಿಗಳೆಲ್ಲರೂ ಸೇರಿ ಅಕೃತವ್ರಣನಿಗೆ ಯಥೋಚಿತವಾದ ಸತ್ಕಾರವನ್ನು ಮಾಡಿದನಂತರ ಅವರೆಲ್ಲರೂ ಗುಂಪುಕಟ್ಟಿಕೊಂಡು ಅಕೃತವ್ರಣನ ಸುತ್ತಲೂ ಕುಳಿತುಕೊಂಡರು. ಅಕೃತವ್ರಣನ ಆಗಮನದಿಂದಾಗಿ ಪ್ರೀತಿ-ಹರ್ಷ ಮತ್ತು ಸಂತೋಷಗಳಿಂದ ಯುಕ್ತರಾದ ಆ ವನವಾಸಿಗಳು ಮನೋಹರವಾದ, ಪುಣ್ಯಪ್ರದವಾದ ಮತ್ತು ದಿವ್ಯವಾದ ಅನೇಕಕಥೆಗಳನ್ನು ಅಕೃತವ್ರಣನಿಗೆ ಹೇಳಿದರು. ಮಾತುಕತೆಗಳೆಲ್ಲವೂ ಮುಗಿದನಂತರದಲ್ಲಿ ರಾಜರ್ಷಿಯಾದ, ಮಹಾತ್ಮನಾದ ಹೋತ್ರವಾಹನನು ಮಹರ್ಷಿಗಳಲ್ಲಿ ಶ್ರೇಷ್ಠನಾದ ಪರಶುರಾಮನ ವಿಷಯವಾಗಿ ಅಕೃತವ್ರಣನನ್ನು ಪ್ರಶ್ನಿಸಿದನು :

**ಕ್ವ ಸಮ್ಪ್ರತಿ ಮಹಾಬಾಹೋ ಜಾಮದಗ್ನ್ಯಃ ಪ್ರತಾಪವಾನ್ ।**
**ಅಕೃತವ್ರಣ ಶಕ್ಯೋ ವೈ ದ್ರಷ್ಟುಂ ವೇದವಿದಾಂ ವರಃ ॥೪೦॥**

"ಮಹಾಬಾಹುವೇ! ಅಕೃತವ್ರಣ! ವೇದವಿದರಲ್ಲಿ ಶ್ರೇಷ್ಠನಾದ, ಪ್ರತಾಪವಂತನಾದ, ಜಮದಗ್ನಿಯ ಮಗನಾದ ಪರಶುರಾಮನನ್ನು ಈಗ ಎಲ್ಲಿ ನೋಡಲು ಸಾಧ್ಯವಾಗುತ್ತದೆ?"

ಅಕೃತವ್ರಣನು ಹೇಳುತ್ತಾನೆ :

"ಮಹಾರಾಜ! ಪರಶುರಾಮನು ನಿನ್ನ ವಿಷಯವಾಗಿಯೇ ಸದಾ ಮಾತನಾಡುತ್ತಿರುತ್ತಾನೆ. 'ಸೃಂಜಯವಂಶೀಯನಾದ, ರಾಜರ್ಷಿಯಾದ ಹೋತ್ರವಾಹನನೆಂಬುವನೊಬ್ಬನಿದ್ದಾನೆ. ಅವನು ನನಗೆ ಅತ್ಯಂತಪ್ರಿಯ ಮಿತ್ರನು'– ಹೀಗೆಂಬುದಾಗಿ ರಾಮನು ಬಾರಿಬಾರಿಗೂ ಹೇಳುತ್ತಲೇ ಇರುತ್ತಾನೆ. ಅವನು ನಾಳೆಯ ದಿನ ಪ್ರಾತಃಕಾಲದಲ್ಲಿಯೇ ಇಲ್ಲಿಗೆ ಆಗಮಿಸುತ್ತಾನೆಂದು ನಾನು ಭಾವಿಸಿದ್ದೇನೆ. ನಿನ್ನನ್ನು ನೋಡುವ ಸಲುವಾಗಿಯೇ ಇಲ್ಲಿಗೆ ಬರಲಿರುವ ಅವನನ್ನು ನೀನು ನಾಳೆಯೇ ಕಾಣಲಿರುವೆ."

ಅಕೃತವ್ರಣನು ಹೋತ್ರವಾಹನನಿಗೆ ಹೀಗೆ ಉತ್ತರಿಸಿದನಂತರ ತನ್ನ ಪಕ್ಕದಲ್ಲಿಯೇ ಕುಳಿತಿದ್ದ ಅಂಬೆಯನ್ನು ನೋಡಿ ಕುತೂಹಲಾವಿಷ್ಟನಾಗಿ ಹೋತ್ರವಾಹನನನ್ನು ಪ್ರಶ್ನಿಸಿದನು :

"ರಾಜರ್ಷಿಯೇ! ಈ (ರಾಜ) ಕನ್ಯೆಯು ಅರಣ್ಯಕ್ಕೇಕೆ ಬಂದಳು? ಇವಳು ಯಾರ ಮಗಳು ಮತ್ತು ನಿನಗೇನಾಗಬೇಕು?–ಎಂಬುದನ್ನು ತಿಳಿದುಕೊಳ್ಳಲು ಕುತೂಹಲಿಯಾಗಿದ್ದೇನೆ."

"ಪ್ರಭುವೇ! ಇವಳು ನನ್ನ ಪ್ರೀತಿಪಾತ್ರಳಾಗಿರುವ ಮೊಮ್ಮಗಳು. ಕಾಶೀರಾಜನ ಹಿರಿಯ ಮಗಳು. ತನ್ನ ತಂಗಿಯರೊಡನೆ ಸ್ವಯಂವರಕ್ಕೆ ಸಿದ್ಧಳಾಗಿದ್ದಳು. ಕಾಶೀಪತಿಯ ಹಿರಿಯಮಗಳಾದ ಇವಳು ಅಂಬಾ ಎಂದು ವಿಖ್ಯಾತಳಾಗಿದ್ದಾಳೆ. ತಪೋಧನನೇ! ಅಂಬಿಕೆ ಮತ್ತು ಅಂಬಾಲಿಕೆ ಎಂಬಿಬ್ಬರು ಇವಳ ತಂಗಿಯರು.

ವಿಪ್ರರ್ಷಿಯೇ! ಕನ್ಯಾನಿಮಿತ್ತವಾಗಿ ಭೂಮಂಡಲದ ಕ್ಷತ್ರಿಯಸಮೂಹವೆಲ್ಲವೂ ಕಾಶೀಪಟ್ಟಣದಲ್ಲಿ ಸೇರಿತ್ತು. ಅಲ್ಲಿ ಈ ಮೂವರು ಕನ್ಯೆಯರ ಸ್ವಯಂವರಸಂಬಂಧವಾಗಿ ದೊಡ್ಡ ಉತ್ಸವವೇ ನಡೆದಿತ್ತು. ಆ ಸಮಯದಲ್ಲಿ ಮಹಾವೀರ್ಯನಾದ ಶಾಂತನುವಿನ ಮಗನಾದ ಭೀಷ್ಮನು ಅಲ್ಲಿ ನೆರೆದಿದ್ದ ಕ್ಷತ್ರಿಯಸಮೂಹವನ್ನು ತಿರಸ್ಕರಿಸಿ ಕಾಶೀರಾಜನ ಮೂವರು ಕನ್ಯೆಯರನ್ನೂ ಅಪಹರಿಸಿ ರಥದ ಮೇಲೆ ಕುಳ್ಳಿರಿಸಿಕೊಂಡನು. ತನ್ನೊಡನೆ ಯುದ್ಧಮಾಡಲು ಬಂದ ಸಕಲರಾಜರನ್ನೂ ಪರಾಜಯಗೊಳಿಸಿ ವಿಶುದ್ಧಾತ್ಮನಾದ ಭೀಷ್ಮನು ಕನ್ಯೆಯರೊಡನೆ ಹಾಸ್ತಿನಪುರಕ್ಕೆ ಪ್ರಯಾಣಮಾಡಿದನು. ಅನಂತರ ತಾಯಿಯಾದ ಸತ್ಯವತಿಗೆ ಎಲ್ಲ ವಿಷಯಗಳನ್ನೂ ಹೇಳಿ, ತಾನು ಕರೆತಂದಿರುವ ಮೂವರು ರಾಜಕುಮಾರಿಯರನ್ನೂ ತನ್ನ ತಮ್ಮನಾದ ವಿಚಿತ್ರವೀರ್ಯನಿಗೆ ಕೊಟ್ಟು ಮದುವೆಮಾಡಬೇಕೆಂದೂ ಮತ್ತು ಅದಕ್ಕೆ ತಕ್ಕ ಸಿದ್ಧತೆಯಾಗಬೇಕೆಂದೂ ಭೀಷ್ಮನು ಆಜ್ಞಾಪಿಸಿದನು. ವೈವಾಹಿಕವಾದ ಕೆಲಸಕಾರ್ಯಗಳು ಆರಂಭವಾಗುತ್ತಿರುವಾಗ–ಈ ನನ್ನ ಮೊಮ್ಮಗಳು ಮಂತ್ರಿಮಧ್ಯದಲ್ಲಿದ್ದ ಗಾಂಗೇಯನನ್ನು ಕುರಿತು ಹೇಳಿದಳು :

'ನಾನು ಈ ಮೊದಲೇ ಶಾಲ್ವಪತಿಯನ್ನು ಮನಸ್ಸಿನಿಂದ ಪತಿಯನ್ನಾಗಿ ವರಿಸಿಬಿಟ್ಟಿದ್ದೇನೆ. ಬೇರೆಯವರಲ್ಲಿ ಅನುರಕ್ತಳಾಗಿರುವ ನನ್ನನ್ನು ನಿನ್ನ ತಮ್ಮನಿಗೆ ಕೊಟ್ಟು ಮದುವೆಮಾಡುವುದು ಧರ್ಮಜ್ಞನಾದ ನಿನಗೆ ಯೋಗ್ಯವೆನಿಸಲಾರದು.'

ಅಕೃತವ್ರಣ! ನನ್ನ ಮೊಮ್ಮಗಳು ಭೀಷ್ಮನೊಡನೆ ಹೀಗೆ ಹೇಳಿದೊಡನೆಯೇ, ಸತ್ಯವತಿಯ ಅಭಿಪ್ರಾಯವನ್ನು ತಿಳಿದು ಭೀಷ್ಮನು–ಮಂತ್ರಿಗಳೊಡನೆ ಈ ವಿಷಯವನ್ನು ಸಮಾಲೋಚಿಸಿ, ಬೇರೆಯವರಲ್ಲಿ ಅನುರಕ್ತಳಾದವಳನ್ನು ತನ್ನ ತಮ್ಮನಿಗೆ ತಂದುಕೊಳ್ಳುವುದು ಉಚಿತವಲ್ಲವೆಂದು ನಿರ್ಧರಿಸಿ, ಅಂಬೆಯ ಇಚ್ಛಾನುಸಾರವಾಗಿ ಇವಳನ್ನು ಶಾಲ್ವನಲ್ಲಿಗೆ ಕಳುಹಿಸಿಕೊಟ್ಟನು. ಭೀಷ್ಮನಿಂದ ಅನುಜ್ಞೆಯನ್ನು ಪಡೆದ ನನ್ನ ದೌಹಿತ್ರಳು ಪರಮಹೃಷ್ಟಳಾಗಿ ಸೌಭಪತಿಯಾದ (ಸೌಭವೆಂಬ ವಿಮಾನದ ಒಡೆಯನಾದ) ಶಾಲ್ವನ ಸಮೀಪಕ್ಕೆ ಹೋಗಿ ಸಮಯವರಿತು ಅವನೊಡನೆ ಈ ಮಾತುಗಳನ್ನು ಹೇಳಿದಳು :

'ಪಾರ್ಥಿವರ್ಷಭನೇ! ನನ್ನನ್ನು ತನ್ನ ತಮ್ಮನಿಗೆ ಕೊಟ್ಟು ಮದುವೆ ಮಾಡಬೇಕೆಂದಿದ್ದ ಭೀಷ್ಮನು ನಾನು ಹೇಳಿದ ಮಾತನ್ನು ಗೌರವಿಸಿ ನನ್ನನ್ನು ಕಳುಹಿಸಿಕೊಟ್ಟಿರುವನು. ಸ್ವಯಂವರವು ನಡೆಯುವ ಮೊದಲೇ ನಾನು ನಿನ್ನನ್ನು ಮನಸ್ಸಿನಿಂದಲೇ ವರಿಸಿದ್ದೆನು. ಈ ವಿಷಯವನ್ನೇ ನಾನು ಭೀಷ್ಮನೊಡನೆಯೂ ಹೇಳಿದೆನು. ನಾನೀಗ ನಿನ್ನ ಬಳಿಗೆ ಬಂದಿರುತ್ತೇನೆ. ನನ್ನನ್ನೂ ಮತ್ತು ಧರ್ಮವನ್ನೂ ಕಾಪಾಡು.'

ಬ್ರಾಹ್ಮಣೋತ್ತಮನೇ! ಅಂಬೆಯ ಚಾರಿತ್ರ್ಯದಲ್ಲಿ ಸಂಶಯಗೊಂಡ ಶಾಲ್ವನು ಇವಳ ಪ್ರಾರ್ಥನೆಯನ್ನು ತಿರಸ್ಕರಿಸಿಬಿಟ್ಟನು. ಅದರಿಂದ ಬಹು ದುಃಖಿತಳಾದ ನನ್ನ ಮೊಮ್ಮಗಳೀಗ ಅರಣ್ಯಕ್ಕೆ ಬಂದು ತಪಸ್ಸುಮಾಡಲು ಅತ್ಯಾಸಕ್ತಳಾಗಿದ್ದಾಳೆ. ನಾನು ಈ ಅರಣ್ಯಕ್ಕೆ ಆಗಮಿಸಿದನಂತರ ಇಲ್ಲಿಯ ತಪಸ್ವಿಗಳು ಇವಳ ಕಥೆಯನ್ನೂ, ವಂಶಾವಳಿಯನ್ನೂ ನನಗೆ ಆಮೂಲಾಗ್ರವಾಗಿ ಹೇಳಿದರು. ಆ ಬಳಿಕ ನಾನು ಇವಳು ನನ್ನ ಮೊಮ್ಮಗಳೆಂಬುದನ್ನು ಅರಿತೆನು. ಈ ನನ್ನ ದೌಹಿತ್ರಳು ತನ್ನ ದುಃಖಕ್ಕೆ ಭೀಷ್ಮನೇ ಮೂಲಕಾರಣನೆಂದು ಭಾವಿಸಿದ್ದಾಳೆ."

ಹೋತ್ರವಾಹನನು ಮಾತು ಮುಗಿಸಿದನಂತರ ಅಂಬೆಯು ಅಕೃತವ್ರಣನಿಗೆ ಹೇಳಿದಳು :

"ಬ್ರಾಹ್ಮಣೋತ್ತಮ! ನನ್ನ ತಾಯಿಯ ಶರೀರಜನಕನಾದ (ತಾಯಿಯ ತಂದೆಯಾದ), ಸೃಂಜಯವಂಶೀಯನಾದ, ಪೃಥಿವೀಪತಿಯಾದ ಹೋತ್ರವಾಹನನು ವರ್ಣಿಸಿದಂತೆಯೇ ನನ್ನ ಇಂದಿನ ಪರಿಸ್ಥಿತಿಯಿದೆ.

ತಪೋಧನನೇ! ಅಪಮಾನವಾಗುವುದೆಂಬ ಭಯದಿಂದಲೂ ಮತ್ತು ನಾಚಿಕೆಯ ಕಾರಣದಿಂದಲೂ ನಾನು ನನ್ನ ಊರಾದ ಕಾಶೀಪಟ್ಟಣಕ್ಕೆ ಹೋಗಲಾರೆನು. ದ್ವಿಜಸತ್ತಮ! ಈ ಸಮಯದಲ್ಲಿ ಭಗವಾನ್ ಪರಶುರಾಮನು ನನ್ನ ವಿಷಯವಾಗಿ ಏನು ಹೇಳುವನೋ, ಯಾವ ಕಾರ್ಯಮಾಡಲು ನಿರ್ದೇಶಿಸುವನೋ– ಅದೇ ನನ್ನ ಸೌಭಾಗ್ಯಪ್ರಾಪ್ತಿಗೆ ಸರ್ವೋತ್ತಮವಾದ ಕರ್ತವ್ಯವೆಂಬುದು ನನ್ನ ಅಭಿಮತವಾಗಿದೆ."

೧೭೬ನೆಯ ಅಧ್ಯಾಯವು ಮುಗಿಯಿತು.

೧೭೭ನೆಯ ಅಧ್ಯಾಯ ಅಮ್ಬೋಪಾಖ್ಯಾನಪರ್ವ (ಮುಂದುವರಿದಿದೆ)

## ಅಕೃತವ್ರಣ-ಪರಶುರಾಮರು ಅಂಬೆಯೊಡನೆ ಮಾತನಾಡಿದುದು

ಅಕೃತವ್ರಣನು ಅಂಬೆಯನ್ನು ಪ್ರಶ್ನಿಸುತ್ತಾನೆ :

"ಭದ್ರೆ! ನಿನ್ನ ಹೃದಯದಲ್ಲಿ ಎರಡು ವಿಧವಾದ ದುಃಖವಡಗಿದೆಯೆಂದು ನಾನು ಭಾವಿಸುತ್ತೇನೆ. ಯಾವ ರೀತಿಯಲ್ಲಿ ನೀನು ಯಾವ ದುಃಖಕ್ಕೆ ಪ್ರತೀಕಾರವನ್ನು ಇಚ್ಛಿಸಿರುವೆ? ಎಂತಹ ಪ್ರತೀಕಾರವನ್ನು ಇಚ್ಛಿಸಿರುವೆ? (ಶಾಲ್ವನನ್ನು ಪತಿಯಾಗುವಂತೆ ಒಪ್ಪಿಸುವುದು ಮೊದಲನೆಯ ದುಃಖಕ್ಕೆ ಪ್ರತೀಕಾರವಾಗುತ್ತದೆ. ಭೀಷ್ಮನನ್ನು ಯುದ್ಧದಲ್ಲಿ ಸೋಲಿಸುವುದರಿಂದ ಎರಡನೆಯ ದುಃಖಕ್ಕೆ ಪ್ರತೀಕಾರವಾಗುತ್ತದೆ.) ಯಾವ ರೀತಿಯಲ್ಲಿ ಪ್ರತೀಕಾರಮಾಡಬೇಕಾಗಿದೆ? ಈ ವಿಷಯವನ್ನು ನನ್ನೊಡನೆ ಹೇಳು. ಈ ವಿಷಯದಲ್ಲಿ ಯಾರಿಗೆ ಯಾವ ಸಲಹೆ ನೀಡಬೇಕಾಗಿದೆ? ಯಾರನ್ನು ಯಾವ

ರೀತಿಯಲ್ಲಿ ಒತ್ತಾಯಿಸಬೇಕಾಗಿದೆ? ಈ ವಿಷಯವನ್ನೂ ಸ್ಪಷ್ಟವಾಗಿ ಹೇಳು. ಮಗಳೇ! ನೀನು ಸ್ವಯಂವರಕ್ಕೂ ಮೊದಲೇ ಮನಸ್ಸಿನಲ್ಲಿ ವರಿಸಿಬಿಟ್ಟಿದ್ದ ಸೌಭಪತಿಯನ್ನೇ (ಶಾಲ್ವ) ನಿನ್ನನ್ನು ವಿವಾಹವಾಗುವಂತೆ ಒತ್ತಾಯಿಸಬೇಕೆ? ಹಾಗಿದ್ದರೆ ಮಹಾತ್ಮನಾದ ಪರಶುರಾಮನು ನಿನಗೆ ಹಿತವನ್ನುಂಟುಮಾಡುವ ಇಚ್ಛೆಯಿಂದ ನಿನ್ನನ್ನು ಮದುವೆಯಾಗಲು ಶಾಲ್ವನನ್ನು ನಿಯಂತ್ರಿಸುತ್ತಾನೆ. ಅಥವಾ ಆಪಗೇಯನಾದ ಭೀಷ್ಮನನ್ನು ಸಮರಾಂಗಣದಲ್ಲಿ ಪರಶುರಾಮನು ಪರಾಜಯಗೊಳಿಸುವುದನ್ನು ನೀನು ಕಾಣಬೇಕೇನು? ಹಾಗೆ ನಿನಗೆ ಅಭಿಲಾಷೆಯಿರುವುದಾದರೆ ಅದನ್ನೂ ಧೀಮಂತನಾದ ಭಾರ್ಗವನು ನಡೆಸಿಕೊಡುತ್ತಾನೆ. ಸೃಂಜಯವಂಶೀಯನಾದ ಹೋತ್ರವಾಹನನ ಮತ್ತು ನಿನ್ನ ಮಾತನ್ನು ಕೇಳಿದನಂತರ ನಿನ್ನ ಮನಸ್ಸಿನಲ್ಲಿರಬಹುದಾದ ಆಶಯವನ್ನು ಊಹಿಸಿ ನಾನು ಈ ಮಾತನ್ನು ಹೇಳುತ್ತಿದ್ದೇನೆ. ನಿನ್ನ ಮನಸ್ಸಿಗೆ ಸಮಾಧಾನ ವುಂಟಾಗಲು ಯಾವ ಕಾರ್ಯವನ್ನು ಬಹುಶೀಘ್ರವಾಗಿ ಮಾಡಿ ಮುಗಿಸಬೇಕೆಂಬುದನ್ನು ನೀನು ಈಗಲೇ ವಿಚಾರಮಾಡಿ ಹೇಳು."

ಯಾರಿಂದ ತನಗೆ ದುಃಖವುಂಟಾಯಿತೆಂಬುದನ್ನು ಅಂಬೆಯು ನಿಶ್ಚಯಿಸಲಾರದೇ ಹೋದಳು. ತನಗೆ ದುಃಖವುಂಟಾಗಿರುವುದಂತೂ ನಿಶ್ಚಯ. ಆದರೆ ದುಃಖಕ್ಕೆ ಕಾರಣರಾರು? ಭೀಷ್ಮನದು ತಪ್ಪಿದೆಯೇ?

ಅಂಬೆಯು ಹೇಳುತ್ತಾಳೆ :

**ಅಪನೀತಾಸ್ಮಿ ಭೀಷ್ಮೇಣ ಭಗವನ್ನವಿಜಾನತಾ ।**
**ನಾಭಿಜಾನಾತಿ ಮೇ ಭೀಷ್ಮೋ ಬ್ರಹ್ಮಞ್ಶಾಲ್ವಗತಂ ಮನಃ ॥೫॥**

"ಪೂಜ್ಯರೇ! ನನ್ನ ಮನೋಗತವಾದ ವಿಷಯವನ್ನು ಭೀಷ್ಮನು ತಿಳಿಯದೇ ಇದ್ದುದರಿಂದ ನನ್ನನ್ನು ನನ್ನ ತಂಗಿಯರೊಡನೆ ಅಪಹರಿಸಿಕೊಂಡು ಹೋದನು. ನನ್ನ ಮನಸ್ಸು ಶಾಲ್ವನಲ್ಲಿ ಲೀನವಾಗಿತ್ತೆಂಬ ವಿಷಯವನ್ನು ಭೀಷ್ಮನು ನಿಶ್ಚಯವಾಗಿಯೂ ತಿಳಿದವನಾಗಿರಲಿಲ್ಲ.

ಬ್ರಾಹ್ಮಣೋತ್ತಮ! ಈ ವಿಷಯವನ್ನು ನೀನೇ ಸಂಪೂರ್ಣವಾಗಿ

ವಿಚಾರಮಾಡಿನೋಡು. ನೀನೇ ಒಂದು ನಿರ್ಧಾರಕ್ಕೆ ಬಾ. ವಿಷಯವೆಲ್ಲ ವನ್ನೂ ನಾನು ನಿನ್ನ ಮುಂದೆ ಇಟ್ಟುಬಿಟ್ಟಿದ್ದೇನೆ. (ಇಂತಹವನೇ ನನ್ನ ದುಃಖಕ್ಕೆ ಕಾರಣನೆಂಬುದನ್ನು ನಿಶ್ಚಯಿಸಿ ಹೇಳುವ ಸಾಧ್ಯತೆಯಿಲ್ಲದಿದ್ದರೂ ಪ್ರತೀಕಾರವಾಗದಿದ್ದರೆ ನನ್ನ ಮನಸ್ಸು ಸಮಾಧಾನಹೊಂದುವುದಿಲ್ಲ.) ಆದುದರಿಂದ ನನ್ನ ದುಃಖಕ್ಕೆ ಕಾರಣರಾರೆಂಬುದನ್ನು ನೀನೇ ಕಂಡುಹಿಡಿ. ಅದಕ್ಕೆ ತಕ್ಕುದಾದ ನ್ಯಾಯಸಮ್ಮತವಾದ ಪ್ರತೀಕಾರವನ್ನು ಮಾಡು.

**ಭೀಷ್ಮೇ ವಾ ಕುರುಶಾರ್ದೂಲೇ ಶಾಲ್ವರಾಜೇಽಥವಾ ಪುನಃ ।**
**ಉಭಯೋರೇವ ವಾ ಬ್ರಹ್ಮನ್ಯುಕ್ತಂ ಯತ್ತತ್ಸಮಾಚರ ॥೭॥**

ಭೀಷ್ಮನಿಗಾದರೂ ಪ್ರತೀಕಾರಮಾಡು ; ಶಾಲ್ವನಿಗಾದರೂ ಪ್ರತೀಕಾರ ಮಾಡು ಅಥವಾ ಇಬ್ಬರನ್ನೂ ಸೇರಿಸಿಯಾದರೂ ಸರಿಯೇ. ಯಾವುದು ಯುಕ್ತವೆಂದು ನೀನು ಭಾವಿಸುವೆಯೋ ಅದರಂತೆ ಮಾಡು. ನನ್ನ ದುಃಖದ ಮೂಲಕಾರಣವನ್ನು ನಿನಗೆ ಯಥಾವತ್ತಾಗಿ ಹೇಳಿಬಿಟ್ಟಿದ್ದೇನೆ. ಭಗವನ್! ನನ್ನ ದುಃಖಕ್ಕೆ ಕಾರಣರಾದವರಿಗೆ ಪ್ರತೀಕಾರವನ್ನು ಯುಕ್ತಿಯಿಂದ ಮಾಡಲು ನೀನೇ ಸಮರ್ಥನಾಗಿರುವೆ."

"ಭದ್ರೇ! ವರವರ್ಣಿನಿ! ಧರ್ಮದ ವಿಷಯವಾಗಿ ನೀನು ಹೇಳಿರುವ ಮಾತು ಧರ್ಮದ ವಿಷಯವಾಗಿ ನಿನಗಿರುವ ಸಂದೇಹ ಮತ್ತು ಆ ಸಂದೇಹ ವನ್ನು ಯಥಾವತ್ತಾಗಿ ಸ್ಪಷ್ಟಪಡಿಸಿರುವುದು ನಿನಗೆ ಉಚಿತವಾಗಿಯೇ ಇದೆ. ಈ ವಿಷಯದಲ್ಲಿ ನನ್ನ ಅಭಿಪ್ರಾಯವೇನೆಂಬುದನ್ನು ಕೇಳು : ಒಂದು ವೇಳೆ ಗಾಂಗೇಯನೇನಾದರೂ ನಿನ್ನನ್ನು ಹಸ್ತಿನಾಪಟ್ಟಣಕ್ಕೆ ಕರೆದೊಯ್ಯದೇ ಇದ್ದ ಪಕ್ಷದಲ್ಲಿ ಪರಶುರಾಮನಿಂದ ಪ್ರೇರಿತನಾದ ಶಾಲ್ವನು ನಿನ್ನನ್ನು ತಲೆಯ ಮೇಲೆ ಕುಳ್ಳಿರಿಸಿಕೊಳ್ಳುತ್ತಿದ್ದನು. (ಆದರಪೂರ್ವಕವಾಗಿ ಪರಿಗ್ರಹಿಸುತ್ತಿದ್ದನು.) ಭೀಷ್ಮನು ಪೃಥ್ವಿಯ ರಾಜರೊಡನೆ ಯುದ್ಧಮಾಡಿ ನಿನ್ನನ್ನು ಗೆದ್ದುಕೊಂಡು ತನ್ನೊಡನೆ ಕರೆದುಕೊಂಡು ಹೋಗಿಬಿಟ್ಟನು. ಈ ಕಾರಣದಿಂದಲೇ ಶಾಲ್ವರಾಜನಿಗೆ ಸಂಶಯವುಂಟಾಗಿದೆ. ಇತರರಿಂದ ಅಪಹೃತರಾದ ಸ್ತ್ರೀಯರ ಚಾರಿತ್ರ್ಯದ ವಿಷಯದಲ್ಲಿ ಸಂಶಯಿಸುವುದು ಪುರುಷರ ಸ್ವಭಾವವೇ

ಆಗಿದೆ. ಭೀಷ್ಮನು ತನ್ನ ಪೌರುಷದಲ್ಲಿ ದುರಭಿಮಾನವಿರತಕ್ಕವನು ಮತ್ತು ಈ ಸಮಯದಲ್ಲವನು ತನಗೆ ಪ್ರಾಪ್ತವಾದ ವಿಜಯದಿಂದ ಉಬ್ಬಿಹೋಗಿದ್ದಾನೆ. ಆದುದರಿಂದ ನೀನು ಪರಶುರಾಮನ ಮೂಲಕವಾಗಿ ಭೀಷ್ಮನಿಗೆ ಪ್ರತೀಕಾರಮಾಡಿಸುವುದೇ ಯುಕ್ತ. ಇದೇ ನನ್ನ ಅಭಿಪ್ರಾಯವೂ ಆಗಿದೆ.”

ಅಂಬೆಯು ಹೇಳುತ್ತಾಳೆ :

“ನಿಜ, ಬ್ರಾಹ್ಮಣೋತ್ತಮ! ನನ್ನ ಅಂತರಾತ್ಮವೂ ಇದನ್ನೇ ಹೇಳುತ್ತಿದೆ. ತಾರ್ಕಿಕವಾಗಿ ನೋಡಿದರೆ ಭೀಷ್ಮನಲ್ಲಿ ನನಗೆ ತಪ್ಪು ಕಾಣದಿದ್ದರೂ ಅವನನ್ನು ಯುದ್ಧದಲ್ಲಿ ವಧೆಮಾಡಬೇಕೆನ್ನುವ ಕಾಮನೆಯು ನನ್ನ ಹೃದಯದಲ್ಲಿ ಯಾವಾಗಲೂ ಇದೆ. ಆದರೆ ನೀನೂ ಪುನಃ ಈ ವಿಷಯದಲ್ಲಿ ಪರ್ಯಾಲೋಚಿಸು. ನನ್ನ ದುಃಖಕ್ಕೆ ಕಾರಣರಾರೆಂಬುದನ್ನು ನಿರ್ಧರಿಸು.

ಭೀಷ್ಮನಾದರೂ ಸರಿಯೇ ; ಶಾಲ್ವನಾದರೂ ಸರಿಯೇ–ನನ್ನ ದುಃಖಕ್ಕೆ ಯಾರು ಕಾರಣರೆಂಬುದನ್ನು ನೀನು ನಿರ್ಧರಿಸುವೆಯೋ ಮತ್ತು ಯಾವನ ಕಾರಣದಿಂದ ನಾನು ದುಃಖಕ್ಕೀಡಾಗಿರುವೆನೋ–ಅವನನ್ನು ಈ ಕೂಡಲೇ ಶಿಕ್ಷಿಸು.”

ಭೀಷ್ಮನು ಕಥೆಯನ್ನು ಮುಂದುವರಿಸಿ ಹೇಳುತ್ತಾನೆ :

“ದುರ್ಯೋಧನ! ಹೀಗೆ ಹೋತ್ರವಾಹನ-ಅಕೃತವ್ರಣ-ಅಂಬೆಯರು ಪರಸ್ಪರವಾಗಿ ಮಾತನಾಡುತ್ತಿದ್ದಾಗಲೇ ಹಗಲು ಕಳೆದುಹೋಯಿತು. ಅಂತೆಯೇ ಸುಖಶೀತೋಷ್ಣವಾತಾವರಣದಿಂದ ಕೂಡಿದ್ದ ರಾತ್ರಿಯೂ ಕಳೆಯಿತು.

ಅಕೃತವ್ರಣನು ಹೇಳಿದ್ದಂತೆ ಬೆಳಗಾಗುತ್ತಲೇ ಜಟಾವಲ್ಕಲಧರನಾಗಿದ್ದ, ಮುನಿಯಾದ, ತೇಜಸ್ಸಿನಿಂದ ಪ್ರಜ್ವಲಿಸುತ್ತಿರುವನೋ ಎಂಬಂತೆ ಕಾಣುತ್ತಿದ್ದ ಪರಶುರಾಮನು ತನ್ನ ಶಿಷ್ಯರಿಂದ ಪರಿವೃತನಾಗಿ ತಪಸ್ವಿಗಳ ಆಶ್ರಮಕ್ಕೆ ಆಗಮಿಸಿದನು. ಧನುಷ್ಪಾಣಿಯಾದ, ಅದೀನಾತ್ಮನಾದ (ಧೀರನಾದ), ರಜೋಗುಣರಹಿತನಾಗಿದ್ದ, ಭಗವಂತನಾದ ಪರಶುರಾಮನು ಖಡ್ಗವನ್ನೂ,

ಗಂಡುಗೊಡಲಿಯನ್ನೂ ಹಿಡಿದುಕೊಂಡು ಮಿತ್ರನಾದ ಸೃಂಜಯವಂಶೀಯನಾದ ಹೋತ್ರವಾಹನನ ಸಮೀಪಕ್ಕೆ ಬಂದನು. ಸಶಿಷ್ಯನಾದ ಪರಶುರಾಮನು ಆಶ್ರಮದೊಳಕ್ಕೆ ಬಂದೊಡನೆಯೇ ಅಲ್ಲಿದ್ದ ತಪಸ್ವಿಗಳೂ, ಮಹಾತಪಸ್ವಿಯಾದ ಹೋತ್ರವಾಹನನೂ ಮತ್ತು ತಪಸ್ವಿನಿಯಾದ ಅಂಬೆಯೂ ಬದ್ಧಾಂಜಲಿಗಳಾಗಿ ಪ್ರತ್ಯುತ್ಥಾನಮಾಡಿದರು.

ಮಹಾಮಹಿಮನಾದ ಪರಶುರಾಮನ ಆತಿಥ್ಯದಲ್ಲಿಯೇ ನೆಟ್ಟ ಮನಸ್ಸುಳ್ಳವರಾಗಿದ್ದ ಆಶ್ರಮದ ತಪಸ್ವಿಗಳು ಮಧುಪರ್ಕವನ್ನಿತ್ತು ಭಾರ್ಗವನನ್ನು ಸತ್ಕರಿಸಿದರು. ಮಹರ್ಷಿಗಳಿಂದ ವಿಧಿಪೂರ್ವಕವಾಗಿ ಸತ್ಕೃತನಾದ ಪರಶುರಾಮನು ಆಶ್ರಮದ ತಪಸ್ವಿಗಳೊಡನೆ ಕುಳಿತುಕೊಂಡನು.

ಜಮದಗ್ನಿಯ ಮಗನಾದ ಪರಶುರಾಮನೂ ಮತ್ತು ಸೃಂಜಯ ವಂಶೋತ್ಪನ್ನನಾದ ಹೋತ್ರವಾಹನನೂ ಹಿಂದೆ ನಡೆದ ಅನೇಕಕಥಾ ಪ್ರಸಂಗಗಳನ್ನು ಪರಸ್ಪರವಾಗಿ ಹೇಳಿಕೊಂಡು ಕುಳಿತಿದ್ದರು. ಸಂಭಾಷಣೆಯು ಮುಗಿಯುವುದರಲ್ಲಿದ್ದಾಗ ಹೋತ್ರವಾಹನನು ಮಹಾಬಲನಾದ, ಭೃಗುಶ್ರೇಷ್ಠನಾದ ಪರಶುರಾಮನನ್ನು ಕುರಿತು ಅರ್ಥಯುಕ್ತವಾದ, ಸುಮಧುರವಾದ ಈ ಮಾತನ್ನು ಹೇಳಿದನು :

"ಕಾರ್ಯವಿಶಾರದನೇ! ಪರಶುರಾಮ! ಪ್ರಭೋ! ಇವಳು ನನ್ನ ಮೊಮ್ಮಗಳು. ಸುಪ್ರಸಿದ್ಧನಾದ ಕಾಶೀರಾಜನ ಮಗಳು. ಇವಳ ಸಂಬಂಧವಾದ ಕಥೆಯನ್ನು ಯಥಾವತ್ತಾಗಿ ಕೇಳಿ, ಇವಳಿಗೆ ನಿನ್ನಿಂದ ಆಗಬೇಕಾಗಿರುವ ಕಾರ್ಯವನ್ನೂ ಲಾಲಿಸು."

ಹೋತ್ರವಾಹನನು ಹೀಗೆ ಹೇಳಿದೊಡನೆಯೇ ಪರಶುರಾಮನು ಅಂಬೆಯನ್ನು ಕುರಿತು ಹೇಳಿದನು :

"ನೀನು ಹೇಳಬೇಕೆಂದಿರುವುದನ್ನು ಅವಶ್ಯವಾಗಿ ಹೇಳು, ಮಗಳೇ!"

ದುರ್ಯೋಧನ! ಪರಶುರಾಮನು ಭರವಸೆಯನ್ನು ಕೊಟ್ಟನಂತರ ಪ್ರಜ್ವಲಿಸುವ ಯಜ್ಞೇಶ್ವರನಂತೆಯೇ ಕಾಣುತ್ತಿದ್ದ ರಾಮನ ಸಮೀಪಕ್ಕೆ ಅಂಬೆಯು ಹೋದಳು. ಅನಂತರ ರಾಮನ ಶುಭಚರಣಗಳಿಗೆ ತಲೆಬಾಗಿ

ನಮಸ್ಕರಿಸಿ, ಪದ್ಮದಳದ ಕಾಂತಿಯಂತೆ ಕಾಂತಿಯುಕ್ತವಾಗಿದ್ದ ತನ್ನೆರಡು ಕೈಗಳಿಂದಲೂ ಆ ದಿವ್ಯಪಾದಗಳನ್ನು ಸ್ಪರ್ಶಿಸಿ ಅವನ ಮುಂದೆ ನಿಂತು ಕೊಂಡಳು. ತನ್ನ ದುಃಖವನ್ನು ನೆನೆದು ಅಂಬೆಯು ಗಟ್ಟಿಯಾಗಿ ಅತ್ತಳು. ಅವಳೆರಡು ಕಣ್ಣುಗಳಲ್ಲಿಯೂ ನೀರು ತುಂಬಿಕೊಂಡಿತು. ಸರ್ವಶರಣ್ಯನಾದ ಸರ್ವರಿಗೂ ಆಶ್ರಯಭೂತನಾದ ಭಾರ್ಗವನನ್ನು ಅಂಬೆಯು ಶರಣು ಹೋದಳು. ಅಂಬೆಯ ದುಃಖವನ್ನು ನೋಡಿ ಮರುಕಗೊಂಡ ಪರಶುರಾಮನು ಅವಳನ್ನು ಸಂತೈಸುತ್ತಾ ಹೇಳಿದನು :

"ರಾಜಕುಮಾರಿ! ನೀನು ನನ್ನ ಮಿತ್ರನಾದ ಸೃಂಜಯನಿಗೆ ಮೊಮ್ಮಗ್ಗಳಾಗಿರುವಂತೆ ನನಗೂ ಮೊಮ್ಮಗ್ಗಳಾಗಿರುವೆ. ನಿನ್ನ ಮನಸ್ಸಿನ ದುಃಖವೇನೆಂಬುದನ್ನು ನಿಃಸಂಕೋಚವಾಗಿ ಹೇಳು. ನಿನ್ನ ದುಃಖವನ್ನು ನಿವಾರಿಸಲು ನಾನು, ನೀನು ಹೇಳಿದಂತೆ ಮಾಡುತ್ತೇನೆ. (ನಿನ್ನ ಮಾತನ್ನು ನಡೆಸಿಕೊಡುತ್ತೇನೆ.)"

"ಭಗವನ್! ಮಹಾವ್ರತನಾದ ನಿನ್ನನ್ನು ನಾನೀಗ ಮರೆಹೊಕ್ಕಿದ್ದೇನೆ. ಶೋಕವೆಂಬ ಕೆಸರಿನ ಸಮುದ್ರದಲ್ಲಿಯೇ ನಾನೀಗ ಮುಳುಗಿಹೋಗಿದ್ದೇನೆ. ವಿಭುವೇ! ಇಂತಹ ಅತಿಘೋರವಾದ ಶೋಕಸಾಗರದಿಂದ ನನ್ನನ್ನು ಉದ್ಧರಿಸು."

ದುರ್ಯೋಧನ! ಅಂಬೆಯು ಸುಮನೋಹರವಾದ ರೂಪವನ್ನು ಹೊಂದಿದ್ದಳು. ನವತಾರುಣ್ಯದಲ್ಲಿದ್ದಳು. ಸುಕುಮಾರಿಯಾಗಿದ್ದಳು. ಅವಳನ್ನು ನೋಡಿದ ರಾಮನು ಚಿಂತಾಪರನಾದನು. ಇವಳು ತನ್ನಿಂದ ಏನನ್ನು ಕೇಳಬಹುದೆಂದು ಬಹುವಾಗಿ ಯೋಚಿಸಿದನು. ಅವಳ ದುಃಖವನ್ನು ನೋಡಿ ದಯಾಭಾವಪೂರ್ಣನಾಗಿದ್ದ ಪರಶುರಾಮನು ಅವಳ ದುಃಖಕ್ಕೆ ಕಾರಣವೇನಿರ ಬಹುದೆಂಬುದನ್ನು ಸ್ವಲ್ಪ ಹೊತ್ತಿನವರೆಗೂ ಚಿಂತಿಸುತ್ತಲೇ ಇದ್ದನು. ಅನಂತರ ಪರಶುರಾಮನು ವಿಷಯವೇನೆಂಬುದನ್ನು ಹೇಳುವಂತೆ ಅಂಬೆಯನ್ನೇ ಕೇಳಿದನು. ಅಂಬೆಯು ಬಿಕ್ಕಿ-ಬಿಕ್ಕಿ ಅಳುತ್ತಿದ್ದಳೇ ಹೊರತು ಅವಳಿಗೆ ತನ್ನ

ದುಃಖವನ್ನು ಹೇಳಿಕೊಳ್ಳಲು ಸಾಧ್ಯವಾಗಲಿಲ್ಲ. ಪುನಃ ಪುನಃ ರಾಮನು ವಿಷಯವೇನೆಂಬುದನ್ನು ಹೇಳುವಂತೆ ಅಂಬೆಯನ್ನು ಒತ್ತಾಯಪಡಿಸಿದುದರಿಂದ, ಶುಚಿಸ್ಮಿತೆಯಾದ ಅಂಬೆಯು ನಡೆದ ಎಲ್ಲ ವಿಷಯಗಳನ್ನೂ ಹೇಗೆ ನಡೆಯಿತೋ ಹಾಗೆಯೇ ಭಾರ್ಗವನಿಗೆ ನಿವೇದಿಸಿದಳು. ರಾಜಪುತ್ರಿಯ ಆತ್ಮಚರಿತ್ರೆಯನ್ನು ಅವಳ ಬಾಯಿಂದಲೇ ಕೇಳಿದನಂತರ ಪರಶುರಾಮನು ತಾನು ಅವಳಿಗಾಗಿ ಏನು ಮಾಡಬೇಕೆಂಬುದನ್ನು ನಿಶ್ಚಯಿಸಿದವನಾಗಿ ವರಾರೋಹೆಯಾದ ಅಂಬೆಯನ್ನು ಕುರಿತು ಈ ಮಾತುಗಳನ್ನು ಹೇಳಿದನು :

"ಭಾಮಿನಿ! ಕುರುಶ್ರೇಷ್ಠನಾದ ಭೀಷ್ಮನ ಸಮೀಪಕ್ಕೆ ನಾನು ನನ್ನ ಪ್ರತಿನಿಧಿಯನ್ನು ಕಳುಹಿಸುತ್ತೇನೆ. ನರಪತಿಯಾದ ಭೀಷ್ಮನು ನಾನು ಹೇಳಿಕಳುಹಿಸುವ ಮಾತನ್ನು ಕೇಳಿ ಅದರಂತೆಯೇ ನಡೆದುಕೊಳ್ಳುತ್ತಾನೆ. ಒಂದು ವೇಳೆ ಗಂಗಾಪುತ್ರನು ನನ್ನ ಆಜ್ಞೆಯನ್ನು ಪರಿಪಾಲಿಸದಿದ್ದರೆ, ಭದ್ರೇ! ಅಮಾತ್ಯಸಹಿತನಾದ ಅವನನ್ನು ಯುದ್ಧದಲ್ಲಿ ನನ್ನ ಶಸ್ತ್ರಗಳ ತೇಜಸ್ಸಿನಿಂದ ಭಸ್ಮಮಾಡಿಬಿಡುತ್ತೇನೆ. ಅಥವಾ ಹೀಗೆ ಮಾಡುವುದು ನಿನಗೆ ಸರಿಯೆನಿಸದಿದ್ದರೆ ಈ ವಿವಾಹಕರ್ಮದಲ್ಲಿ ವೀರನಾದ ಶಾಲ್ವಪತಿಯನ್ನೇ ಯೋಜಿಸುತ್ತೇನೆ. (ಶಾಲ್ವಪತಿಗೆ ಹೇಳಿ ಅವನೊಡನೆಯೇ ನಿನ್ನ ವಿವಾಹವಾಗುವಂತೆ ಮಾಡುತ್ತೇನೆ.)"

"ಭಾರ್ಗವ! ನಾನು ನನ್ನ ಸ್ವಯಂವರದ ಮೊದಲೇ ಶಾಲ್ವಪತಿಯನ್ನು ಮನಸ್ಸಿನಲ್ಲಿ ವರಿಸಿಬಿಟ್ಟಿದ್ದೆನು. ನನ್ನ ಅನುರಾಗವು ಶಾಲ್ವಪತಿಯ ಮೇಲಿರುವುದೆಂಬ ವಿಷಯವು ತಿಳಿದೊಡನೆಯೇ ಭೀಷ್ಮನು ನನ್ನನ್ನು ಕಳುಹಿಸಿಯೇ ಬಿಟ್ಟನು. ಸೌಭರಾಜನ ಬಳಿಗೆ ಹೋದ ನಾನು, ಸಾಧ್ವಿಯಾದವಳು ಹೇಳಲಾಗದಂತಹ ಮಾತುಗಳನ್ನೇ ಹೇಳಿದೆನು. ನಾಚಿಕೆಬಿಟ್ಟು ನಿನ್ನನ್ನು ಪ್ರೀತಿಸಿ ಬಂದೆನೆಂದೇ ಹೇಳಿದೆನು. ಅಷ್ಟು ಹೇಳಿದರೂ ಪರರಿಂದ ಅಪಹೃತಳಾದ ನನ್ನ ಚಾರಿತ್ರ್ಯವನ್ನು ಶಂಕಿಸಿ ನನ್ನನ್ನು ಅವನು ಪರಿಗ್ರಹಿಸಲಿಲ್ಲ. ಭೃಗುನಂದನ! ನಿನ್ನ ಮುಂದೆ ಎಲ್ಲ ವಿಷಯಗಳನ್ನೂ ಮಂಡಿಸಿದ್ದೇನೆ. ನನ್ನ ದುಃಖಕ್ಕೆ ಕಾರಣರಾರೆಂಬ ಬಗೆಗೆ ನಿಶ್ಚಿತಜ್ಞಾನವು ನನಗಿಲ್ಲ. ಆದುದರಿಂದ ನೀನೇ ಸ್ವಬುದ್ಧಿಯಿಂದ ಇದನ್ನು ವಿಮರ್ಶಿಸಬೇಕಾಗಿದೆ. ವಿಮರ್ಶಿಸಿ ಕಾರ್ಯಮಾಡ

ಬೇಕಾಗಿದೆ. ಈ ಕಾರ್ಯಸಾಧನೆಯ ಉಪಾಯವನ್ನು ಚಿಂತಿಸಲೂ ನೀನೇ ಸಮರ್ಥನಾಗಿರುವೆ. ಮಹಾವ್ರತನಾದ ಭೀಷ್ಮನೇ ನನ್ನೀ ದುಃಖಕ್ಕೆ ಮೂಲ ಕಾರಣನೆಂಬುದು ನನ್ನ ಅಭಿಪ್ರಾಯವಾಗಿದೆ. ಬಲಾತ್ಕಾರವಾಗಿ ಎತ್ತಿ ರಥದಲ್ಲಿ ಕುಳ್ಳಿರಿಸಿಕೊಂಡು ಅಂದವನು ನನ್ನನ್ನು ಹಸ್ತಿನಾಪಟ್ಟಣಕ್ಕೆ ಕರೆದುಕೊಂಡು ಹೊರಟುಹೋದನು. ಅದೇ ಮುಂದೆ ನನ್ನ ದುಃಖಕ್ಕೆ ಮೂಲಕಾರಣ ವಾಯಿತು. ಭೃಗುಶಾರ್ದೂಲನೇ! ನಾನು ಯಾವನ ಕಾರಣದಿಂದ ಈ ವಿಧವಾದ ದುಃಖಕ್ಕೆ ಗುರಿಯಾಗಿರುವೆನೋ ಅಂತಹ ಭೀಷ್ಮನನ್ನು ನೀನಿಂದು ಸಂಹರಿಸು. ಅವನ ಕಾರಣದಿಂದಲೇ ನಾನು ಈ ದುಃಖವನ್ನು ಅನುಭವಿಸುತ್ತಿದ್ದೇನೆ ಮತ್ತು ಅತ್ಯಂತ ಅಪ್ರಿಯವಾದ ಆಚರಣೆಯಲ್ಲಿ ಪ್ರವೃತ್ತಳಾಗಿದ್ದೇನೆ. ಅನಘನೇ! ಭೀಷ್ಮನು ಮಹಾಲೋಭಿಯು. ಮಹಾನೀಚನು. ಯುದ್ಧದಲ್ಲಿ ಜಯಪಡೆದಿರತಕ್ಕವನು. ಇದರಿಂದಲೇ ಅವನು ಗರ್ವಿಷ್ಠನಾಗಿದ್ದಾನೆ. ಈ ಕಾರಣಗಳಿಂದ ನೀನು ಅವನಿಗೆ ಪ್ರತಿಕ್ರಿಯೆ ಮಾಡುವುದು ಯುಕ್ತವಾಗಿದೆ. ಭರತವಂಶೀಯನಾದ ಭೀಷ್ಮನು ಯಾವಾಗ ನನ್ನನ್ನು ಈ ದುಃಸ್ಥಿತಿಗೀಡು ಮಾಡಿದನೋ– ಆಗಲೇ ನನ್ನ ಮನಸ್ಸಿನಲ್ಲಿ ಮಹಾವ್ರತನಾದ ಭೀಷ್ಮನನ್ನು ವಧಿಸಬೇಕೆಂಬ ಇಚ್ಛೆಯುಂಟಾಯಿತು. ಆದುದರಿಂದ ನಿಷ್ಪಾಪನೇ! ಮಹಾಬಾಹುವೇ! ಪರಶುರಾಮ! ನನ್ನ ಮನಸ್ಸಿನ ಇಚ್ಛೆಯನ್ನು ಪೂರ್ಣಗೊಳಿಸು. ಪುರಂದರನು ವೃತ್ರಾಸುರನನ್ನು ಸಂಹರಿಸಿದಂತೆ-ಭೀಷ್ಮನನ್ನು ಸಂಹರಿಸು.”

ಗ೭೭ನೆಯ ಅಧ್ಯಾಯವು ಮುಗಿಯಿತು.

## ಅಂಬಾ-ಪರಶುರಾಮರ ಸಂಭಾಷಣೆ: ಅಕೃತವ್ರಣನ ಸಲಹೆ: ಪರಶುರಾಮ ಮತ್ತು ಭೀಷ್ಮರ ಸಂವಾದ: ಯುದ್ಧಕ್ಕಾಗಿ ಕುರುಕ್ಷೇತ್ರಕ್ಕೆ ಭೀಷ್ಮ-ಪರಶುರಾಮರ ಪ್ರಯಾಣ

ಭೀಷ್ಮನು ಹೇಳುತ್ತಾನೆ :

"ದುರ್ಯೋಧನ! ಅಂಬೆಯು ಅಳುತ್ತಳುತ್ತಲೇ ಪರಶುರಾಮನನ್ನು ಕುರಿತು 'ಪ್ರಭೋ! ಜಹಿ ಭೀಷ್ಮಂ' 'ಪ್ರಭುವೇ! ಭೀಷ್ಮನನ್ನು ಸಂಹರಿಸು' ಎಂದು ಪದೇ-ಪದೇ ಒತ್ತಾಯಿಸುತ್ತಲೇ ಇದ್ದಳು. ಬಿಕ್ಕಿ-ಬಿಕ್ಕಿ ಅಳುತ್ತಿದ್ದ ಅಂಬೆಯನ್ನು ಸಮಾಧಾನಗೊಳಿಸುತ್ತಾ ಪರಶುರಾಮನು ಹೇಳಿದನು :

"ಕಾಶ್ಯೇ! (ಕಾಶೀರಾಜಕುಮಾರಿ!) ನೀನು ಹೇಳಿದುದು ಯುಕ್ತವಾಗಿಯೇ ಇದೆ. ಆದರೆ ನನ್ನದೊಂದು ಪ್ರತಿಜ್ಞೆಯಿದೆ. ಮನಬಂದಂತೆ ನಾನು ಶಸ್ತ್ರಗ್ರಹಣವನ್ನು ಮಾಡುವಂತಿಲ್ಲ. ನನ್ನ ಪ್ರತಿಜ್ಞಾನುಸಾರವಾಗಿ ಬ್ರಾಹ್ಮಣರ ಸಲುವಾಗಿ ಅಥವಾ ಅವರ ರಕ್ಷಣೆಗಾಗಿ ಮಾತ್ರವೇ ನಾನು ಶಸ್ತ್ರಗ್ರಹಣವನ್ನು ಮಾಡಬಹುದಾಗಿದೆ. ಬೇರೆ ಯಾವ ಕಾರಣದಿಂದಲೂ ಶಸ್ತ್ರಗ್ರಹಣ ಮಾಡುವುದಿಲ್ಲವೆಂದು ನಾನು ಪ್ರತಿಜ್ಞೆಮಾಡಿರುತ್ತೇನೆ. ಆದುದರಿಂದ ನೀನು ಹೇಳಿದಂತೆ ನಾನೀಗ ಭೀಷ್ಮನೊಡನೆ ಯುದ್ಧಮಾಡುವಂತಿಲ್ಲ. ಆದರೆ ನಿನ್ನ ದುಃಖವನ್ನು ಪರಿಹರಿಸಬೇಕೆಂಬ ಆಶಯವೂ ಇದೆ. ಭೀಷ್ಮನೊಡನೆ ಯುದ್ಧವನ್ನು ಬಿಟ್ಟು ಬೇರಾವ ಕಾರ್ಯಮಾಡುವುದರಿಂದ ನಿನ್ನ ದುಃಖವು ದೂರವಾಗುತ್ತದೆ? ಬೇರೆ ಯಾವ ಕಾರ್ಯವನ್ನು ಮಾಡಿಕೊಡಲಿ? ಭೀಷ್ಮ-ಶಾಲ್ವರಿಬ್ಬರೂ ನನ್ನ ಆಜ್ಞೆಗೆ ಅಧೀನರಾಗಿರತಕ್ಕವರು. ನಾನು ಹೇಳಿದ ಮಾತನ್ನು ಅವರು ತಪ್ಪದೇ ನಡೆಸಿಕೊಡುತ್ತಾರೆ. ಆದುದರಿಂದ ನಿನ್ನ ಕಾರ್ಯವನ್ನು ನಾನು ಮಾಡಿಕೊಡುತ್ತೇನೆ.

ಅಕಳಂಕಳೇ! ಅಳುವುದನ್ನು ನಿಲ್ಲಿಸು. ಆದರೆ ಬ್ರಾಹ್ಮಣರ ಆಜ್ಞೆಯ

ಹೊರತಾಗಿ ಮತ್ತಾವ ಕಾರಣದಿಂದಲೂ ನಾನೂ ಖಂಡಿತವಾಗಿಯೂ ಶಸ್ತ್ರಧಾರಣೆಮಾಡುವುದಿಲ್ಲ."

ಇದೊಂದು ಸಮಸ್ಯೆಯೇ ಆಯಿತು. ಪರಶುರಾಮನು ಶಸ್ತ್ರಧಾರಣೆ ಮಾಡುವಂತಿಲ್ಲ. ನನ್ನನ್ನು ಸಂಹರಿಸದೇ ಅಂಬೆಯ ದುಃಖವು ದೂರವಾಗು ವಂತಿಲ್ಲ. ಅಂಬೆಯು ಪುನಃ ತನ್ನ ನಿಲುವನ್ನೇ ಸಮರ್ಥಿಸಿ ಹೇಳಿದಳು :

"ಭಗವಾನ್ ಪರಶುರಾಮನು ನನ್ನ ದುಃಖವನ್ನು ದೂರಮಾಡಲೇ ಬೇಕಾಗಿದೆಯಲ್ಲವೇ? ಈ ನನ್ನ ದುಃಖವು ಭೀಷ್ಮಮೂಲವಾದುದು. ಭೀಷ್ಮನಿಂದಲೇ ನನಗೆ ದುಃಖವು ಪ್ರಾಪ್ತವಾಗಿದೆ. ಆದುದರಿಂದ ಭೀಷ್ಮನ ಸಂಹಾರವಾಗದೇ ನನ್ನ ದುಃಖಪರಿಹಾರವೂ ಆಗುವುದಿಲ್ಲ. ಆದುದರಿಂದ ಈಶ್ವರ! ಸಾವಕಾಶಮಾಡದೇ ಭೀಷ್ಮನನ್ನು ಸಂಹರಿಸು."

"ಕಾಶಿಕನ್ಯೆ! ಪುನಃ ಯೋಚಿಸಿ ಹೇಳು. ಭೀಷ್ಮನನ್ನು ಸಂಹರಿಸಬೇಕೆಂಬ ಒಂದೇ ಹಠಮಾಡಬೇಡ. ಭೀಷ್ಮನು ನಿನಗೂ ತಲೆಬಾಗಿ ವಂದನೆ ಮಾಡಲು ಯೋಗ್ಯನಾಗಿದ್ದರೂ ನಿನ್ನಿಂದ ಅಭಿವಾದನ ಮಾಡಿಸಿಕೊಳ್ಳಲು ಯೋಗ್ಯನಾಗಿದ್ದರೂ ನನ್ನ ಮಾತಿನಿಂದ ನಿನ್ನೆರಡು ಕಾಲುಗಳನ್ನೂ ಹಿಡಿದುಕೊಳ್ಳುವಂತೆ ಮಾಡಿಯೇನು."

ಅಂಬೆಯು ತನ್ನ ಹಠವನ್ನು ಬಿಡಲೇ ಇಲ್ಲ.

**ಜಹಿ ಭೀಷ್ಮಂ ರಣೇ ರಾಮ ಗರ್ಜನ್ತಮಸುರಂ ಯಥಾ ।**
**ಸಮಾಹೂತೋ ರಣೇ ರಾಮ ಮಮ ಚೇದಿಚ್ಛಸಿ ಪ್ರಿಯಮ್ ।**
**ಪ್ರತಿಶ್ರುತಂ ಚ ಯದಪಿ ತತ್ಸತ್ಯಂ ಕರ್ತುಮರ್ಹಸಿ ॥೭॥**

"ರಾಮ! ನನಗೆ ನೀನು ಪ್ರಿಯವಾದ ಕಾರ್ಯವನ್ನು ಮಾಡಲು ಇಚ್ಛಿಸಿರುವುದೇ ಆದರೆ–ಯುದ್ಧಕ್ಕೆ ಆಹ್ವಾನಿಸಿದೊಡನೆಯೇ ರಾಕ್ಷಸನಂತೆಯೇ ಗರ್ಜನೆಮಾಡುತ್ತಾ ಬರುವ–ಭೀಷ್ಮನನ್ನು ಸಂಹರಿಸು. ನನ್ನ ದುಃಖವನ್ನು ದೂರಮಾಡುವೆನೆಂದು ಮಾಡಿರುವ ನಿನ್ನ ಪ್ರತಿಜ್ಞೆಯು ಸತ್ಯವಾಗಿ ಪರಿಣಮಿಸುವಂತೆ ಮಾಡುವುದು ಯೋಗ್ಯವಾಗಿದೆ."

ದುರ್ಯೋಧನ! ಪರಶುರಾಮನಿಗೂ ಮತ್ತು ಅಂಬೆಗೂ ಈ ವಿಧವಾದ

ಮಾತುಕತೆಗಳಾಗುತ್ತಿರುವಾಗ, ಪರಮಧಾರ್ಮಿಕನಾದ ಅಕೃತವ್ರಣ ಮಹರ್ಷಿಯು ಪರಶುರಾಮನಿಗೆ ಈ ಮಾತುಗಳನ್ನು ಹೇಳಿದನು :

"ಮಹಾಬಾಹೋ! ಪರಶುರಾಮ! ನಿನಗೆ ಶರಣಾಗತಳಾಗಿರುವ ಈ ಕನ್ಯೆಯನ್ನು ಪರಿತ್ಯಜಿಸುವುದು ನಿನಗೆ ಯೋಗ್ಯವಾಗಿ ಕಾಣುವುದಿಲ್ಲ. ಶರಣಾಗತರಾದವರನ್ನು ಯಾವುದೇ ಕಾರಣದಿಂದಲೂ ಪರಿತ್ಯಜಿಸಬಾರದು. ನೀನು ಶಸ್ತ್ರಧಾರಣೆಮಾಡಿ ಭೀಷ್ಮನೊಡನೆ ಯುದ್ಧಮಾಡಬೇಕಾದ ಸಂದರ್ಭವು ಸಂಭವಿಸದೆಯೂ ಇರಬಹುದು. ನೀನು ಭೀಷ್ಮನನ್ನು ಯುದ್ಧಕ್ಕೆ ಆಹ್ವಾನಿಸಿದ್ದೇ ಆದರೆ ಅವನು ರಣರಂಗಕ್ಕೆ ಬಂದು ನಿನ್ನೊಡನೆ ಯುದ್ಧಮಾಡಲಿಚ್ಛಿಸದೇ 'ನಾನು ನಿನ್ನಿಂದ ಜಯಿಸಲ್ಪಟ್ಟಿದ್ದೇನೆ' ಎಂದೇ ಹೇಳಿಬಿಡಬಹುದು. ಅಥವಾ ನೀನು ಅಂಬೆಯ ಸಲುವಾಗಿ ಹೇಳುವ ಮಾತನ್ನು ನಡೆಸಿಕೊಡಲೂಬಹುದು. ಈ ಎರಡು ಪ್ರಕಾರದಿಂದಲೂ ಇವಳ ಕಾರ್ಯವು ಸಿದ್ಧಿಸಿದಂತಾಗುತ್ತದೆ. ನೀನು ಇವಳಿಗೆ ಕೊಟ್ಟ ಮಾತೂ ಸತ್ಯವಾಗಿ ಪರಿಣಮಿಸುತ್ತದೆ.

ಮಹಾಮುನೇ! ನೀನಂದು ಮಾಡಿದ ಪ್ರತಿಜ್ಞೆಯೂ ನನ್ನ ಸ್ಮರಣೆಯಲ್ಲಿದೆ. ನೀನು ಎಲ್ಲ ಕ್ಷತ್ರಿಯರನ್ನೂ ಪರಾಜಯಗೊಳಿಸಿದನಂತರ ಬ್ರಾಹ್ಮಣರ ಮಧ್ಯದಲ್ಲಿ ಕುಳಿತು ನೀನು ಈ ಪ್ರತಿಜ್ಞೆಯನ್ನು ಮಾಡಿರುವೆ.

ನೀನು ಮಾಡಿರುವ ಪ್ರತಿಜ್ಞೆಯ ಪೂರ್ಣಪಾಠವು ಈ ರೀತಿಯಾಗಿದೆ :

**ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರಶ್ಚೈವ ರಣೇ ಯದಿ ॥೧೨॥**

**ಬ್ರಹ್ಮದ್ವಿಟ್ಭವಿತಾ ತಂ ವೈ ಹನಿಷ್ಯಾಮೀತಿ ಭಾರ್ಗವ ।**
**ಶರಣಾರ್ಥೇ ಪ್ರಪನ್ನಾನಾಂ ಭೀತಾನಾಂ ಶರಣಾರ್ಥಿನಾಮ್ ॥೧೩॥**

**ನ ಶಕ್ಷ್ಯಾಮಿ ಪರಿತ್ಯಾಗಂ ಕರ್ತುಂ ಜೀವನ್ಕಥಂಚನ ।**
**ಯಶ್ಚ ಕೃತ್ಸ್ನಂ ರಣೇ ಕ್ಷತ್ರಂ ವಿಜೇಷ್ಯತಿ ಸಮಾಗತಮ್ ।**
**ದೀಪ್ತಾತ್ಮಾನಮಹಂ ತಂ ಚ ಹನಿಷ್ಯಾಮೀತಿ ಭಾರ್ಗವ ॥೧೪॥**

"ಬ್ರಾಹ್ಮಣರನ್ನು ದ್ವೇಷಿಸತಕ್ಕವನು ಬ್ರಾಹ್ಮಣನೇ ಆಗಿರಲಿ ; ಕ್ಷತ್ರಿ

ಯನೇ ಆಗಿರಲಿ ; ವೈಶ್ಯನೇ ಆಗಿರಲಿ ; ಶೂದ್ರನೇ ಆಗಿರಲಿ–ಅವನನ್ನು ನಾನು ಯುದ್ಧದಲ್ಲಿ ಸಂಹಾರಮಾಡುವೆನು. ರಕ್ಷಣೆಗಾಗಿ ಪ್ರಪನ್ನರಾಗಿ ಬಂದವರ, ಭೀತರಾಗಿ ಬಂದು ಶರಣಾಗತರಾದವರ ತ್ಯಾಗವನ್ನು ನಾನು ಜೀವಿಸಿರುವಾಗ ಯಾವುದೇ ಕಾರಣದಿಂದಲೂ ಮಾಡುವುದಿಲ್ಲ. ಶರಣಾಗತರಾದವರ ರಕ್ಷಣೆಯನ್ನು ಮಾಡಿಯೇ ತೀರುತ್ತೇನೆ. ಯಾವನು ಒಂದು ಕಡೆಯಲ್ಲಿ ಸೇರಿರುವ ಸಕಲಕ್ಷತ್ರಿಯರನ್ನೂ ಪರಾಜಯಗೊಳಿಸುತ್ತಾನೆಯೋ–ಅಂತಹ ದೀಪ್ತಾತ್ಮನಾದ ಮಹಾತೇಜಸ್ವಿಯಾದ ಪುರುಷನನ್ನೂ ನಾನು ಯುದ್ಧಕ್ಕೆ ಆಹ್ವಾನಿಸಿ ಸಂಹಾರಮಾಡುವೆನು."

ಭಾರ್ಗವ! ಈ ವಿಧವಾಗಿ ನೀನು ಮೂರು ಪ್ರತಿಜ್ಞೆಗಳನ್ನು ಮಾಡಿರುವೆ. ಭೀಷ್ಮನೀಗ ಸ್ವಯಂವರಕ್ಕಾಗಿ ಏಕತ್ರ ಸೇರಿದ್ದ ಸರ್ವಕ್ಷತ್ರಿಯರನ್ನೂ ಪರಾಜಯಗೊಳಿಸಿರುತ್ತಾನೆ. ನೀನು ಮಾಡಿರುವ ಎರಡನೆಯ ಮತ್ತು ಮೂರನೆಯ ಪ್ರತಿಜ್ಞೆಯಂತೆ ಅವನನ್ನೀಗ ಆಹ್ವಾನಿಸಿ ರಣಾಂಗಣದಲ್ಲಿ ಸಂಹರಿಸುವುದು ಅನಿವಾರ್ಯವಾಗಿದೆ.

**ಸ ಏವಂ ವಿಜಯೀ ರಾಮ ಭೀಷ್ಮಃ ಕುರುಕುಲೋದ್ವಹಃ ।**
**ತೇನ ಯುಧ್ಯಸ್ವ ಸಂಗ್ರಾಮೇ ಸಮೇತ್ಯ ಭೃಗುನನ್ದನ ॥೧೫॥**

ಭೃಗುನಂದನನೇ! ಈ ರೀತಿಯಲ್ಲಿ ಕುರುವಂಶದ ಭಾರವನ್ನು ವಹಿಸಿರುವ ಭೀಷ್ಮನಿಂದು ವಿಶ್ವದ ಸಮಸ್ತರಾಜರನ್ನೂ ಪರಾಜಯಗೊಳಿಸಿ ವಿಜಯಿಯಾಗಿದ್ದಾನೆ. ಈ ಕಾರಣದಿಂದ ನೀನು ಅವನನ್ನು ಯುದ್ಧಕ್ಕೆ ಆಹ್ವಾನಿಸಿ ಅವನೊಡನೆ ಯುದ್ಧಮಾಡು."

"ಋಷಿಸತ್ತಮನೇ! ನೀನು ಹೇಳಿದನಂತರ ನಾನು ಅಂದು ಮಾಡಿದ ಪ್ರತಿಜ್ಞೆಯನ್ನು ಸ್ಮರಿಸಿಕೊಂಡಿರುತ್ತೇನೆ. ನೀನು ಹೇಳಿದಂತೆಯೇ ನಾನಂದು ಬ್ರಾಹ್ಮಣರ ಸಮೂಹದಲ್ಲಿ ಕುಳಿತು ಪ್ರತಿಜ್ಞೆಮಾಡಿದುದು ನಿಜ. ಆದರೂ ನಾನಿಂದು ಸಾಮೋಪಾಯದಿಂದಲೇ ಈ ಕಾರ್ಯವನ್ನು ಸಾಧಿಸಲು ಪ್ರಯತ್ನಿಸುತ್ತೇನೆ. ಕಾಶೀರಾಜಕುಮಾರಿಯ ಮನಸ್ಸಿನಲ್ಲಿರುವ ಕಾರ್ಯವು ಬಹಳ ಗುರುತರವಾದುದು. ಸಾಧಿಸಲು ದುಃಸ್ಸಾಧ್ಯವಾದುದು. ನಾನೇ ಈ ಕನ್ಯೆಯನ್ನು ಕರೆದುಕೊಂಡು ಭೀಷ್ಮನಿರುವಲ್ಲಿಗೇ ಹೋಗುತ್ತೇನೆ. ಅವನಿಗೆ ನಾನು

ಹೀಗೆಯೇ ಮಾಡಬೇಕೆಂದು ನಿರ್ದೇಶಿಸುತ್ತೇನೆ. ರಣಶ್ಲಾಘಿಯಾದ, ರಣಪ್ರಿಯನಾದ ಅವನು ಒಂದು ವೇಳೆ ನಾನು ಹೇಳಿದಂತೆ ಮಾಡದಿದ್ದರೆ–ಉದ್ರಿಕ್ತನಾದ ಅವನನ್ನು ಸಂಹಾರಮಾಡುತ್ತೇನೆ. ಇದು ನನ್ನ ನಿಶ್ಚಿತವಾದ ಅಭಿಪ್ರಾಯವಾಗಿದೆ.

ಋಷಿಸತ್ತಮ! ನನ್ನಿಂದ ಬಿಡಲ್ಪಡುವ ಬಾಣಗಳು ನನ್ನ ಎದುರಾಗಿ ನಿಲ್ಲುವ ಯೋಧರ ಶರೀರಗಳಲ್ಲಿ ಚುಚ್ಚಿಕೊಳ್ಳುವುದಿಲ್ಲ. ಶರೀರವನ್ನು ಭೇದಿಸಿಕೊಂಡೇ ಹೊರಬರುತ್ತವೆ. ಹಿಂದೆ ಕ್ಷತ್ರಿಯರೊಡನೆ ನಡೆದ ಯುದ್ಧವನ್ನು ನೋಡಿರುವ ನೀನು ಈ ವಿಷಯವನ್ನು ಮನಗಂಡಿರುವೆ."

ದುರ್ಯೋಧನ! ಪರಶುರಾಮನು ಅಕೃತವ್ರಣನೊಡನೆ ಹೀಗೆ ಹೇಳಿ, ಅನಂತರ ಅಲ್ಲಿದ್ದ ಬ್ರಹ್ಮವಾದಿಗಳೊಡನೆ ಭೀಷ್ಮನ ಬಳಿಗೆ ಪ್ರಯಾಣ ಮಾಡಬೇಕೆಂದು ನಿಶ್ಚಯಿಸಿದನು. ಅದಕ್ಕಾಗಿಯೇ ಮಹಾತಪಸ್ವಿಯಾದ ಭಾರ್ಗವನು ಸರ್ವಸಿದ್ಧತೆಗಳನ್ನೂ ಮಾಡಿಕೊಂಡನು.

ದುರ್ಯೋಧನ! ಅನಂತರದಲ್ಲಿ ತಪಸ್ವಿಗಳೆಲ್ಲರೂ ಆ ರಾತ್ರಿಯನ್ನು ಅರಣ್ಯದ ಆಶ್ರಮದಲ್ಲಿಯೇ ಕಳೆದರು. ಪ್ರಾತಃಕಾಲವಾಗುತ್ತಲೇ ಸ್ನಾನ-ಸಂಧ್ಯಾವಂದನಾದಿಗಳನ್ನು ಮಾಡಿ, ಗಾಯತ್ರೀಜಪಮಾಡಿ, ಸೂರ್ಯೋಪಸ್ಥಾನವನ್ನು ಮುಗಿಸಿ, ಔಪಸನಾಗ್ನಿಹೋತ್ರಗಳ ಮೂಲಕವಾಗಿ ಯಜ್ಞೇಶ್ವರನನ್ನು ಆರಾಧಿಸಿ, ನನ್ನನ್ನು ಸಂಹರಿಸುವ ಇಚ್ಛೆಯಿಂದ ಆಶ್ರಮವನ್ನು ಬಿಟ್ಟು ಹೊರಟರು. ಅನಂತರ, ಪರಶುರಾಮನಿಂದ ಪುರಸ್ಕೃತರಾದ ಆ ಎಲ್ಲ ಮಹರ್ಷಿಗಳೂ ವೇದಾಧ್ಯಯನಪರಾಯಣರಾದ ಬ್ರಾಹ್ಮಣರೊಡನೆಯೂ ಮತ್ತು ಆ ಕನ್ಯೆಯೊಡನೆಯೂ ಸರಸ್ವತೀನದಿಯ ತೀರದಲ್ಲಿ ಬಿಡಾರಮಾಡಿ ಆ ರಾತ್ರಿಯನ್ನು ಕಳೆದರು.

ಮಾರನೆಯ ದಿವಸ ಮಹಾವ್ರತನಾದ ಪರಶುರಾಮನು ಹಸ್ತಿನಾಪಟ್ಟಣದ ಹೊರಭಾಗದ ಒಂದು ಸ್ಥಾನದಲ್ಲಿ ನಿಂತು ನನಗೊಂದು ಸಂದೇಶವನ್ನು ಕಳುಹಿಸಿಕೊಟ್ಟನು :

'ಸತ್ಯವ್ರತನೇ! ನಾನು ಹಸ್ತಿನಾಪಟ್ಟಣದ ಸಮೀಪಕ್ಕೆ ಆಗಮಿಸಿದ್ದೇನೆ. ನನಗೆ ಪ್ರಿಯವಾದ ಕಾರ್ಯವನ್ನು ಮಾಡು.'

ತೇಜೋನಿಧಿಯಾದ, ಪ್ರಭುವಾದ, ಮಹಾಬಲಿಷ್ಠನಾದ ಭಗವಾನ್ ಪರಶುರಾಮನು ನನ್ನ ಪಟ್ಟಣದ ಎಲ್ಲೆಗೆ ಆಗಮಿಸಿರುವ ವಾರ್ತೆಯನ್ನು ಕೇಳಿ, ನಾನು ಬಹುವೇಗವಾಗಿ ಪ್ರೀತಿಯಿಂದಲೇ ಅವನ ಸಮೀಪಕ್ಕೆ ಹೋದೆನು. ಮಂಗಳಮಯಿಯಾದ ಧೇನುವನ್ನು ಮುಂದೆಮಾಡಿಕೊಂಡು, ದೇವಕಲ್ಪರಾದ ಋತ್ವಿಜರಿಂದಲೂ–ಬ್ರಾಹ್ಮಣರಿಂದಲೂ ಪರಿವೃತನಾಗಿ, ಪುರೋಹಿತರಿಂದೊಡಗೂಡಿ ಪರಶುರಾಮನನ್ನು ಯಥೋಚಿತವಾಗಿ ಸತ್ಕರಿಸಿದೆನು. ಪ್ರತಾಪವಂತನಾದ ಪರಶುರಾಮನು ಸಪರಿವಾರನಾಗಿ ಸ್ವಾಗತಿಸಲು ಹೋದ ನನ್ನನ್ನು ನೋಡಿ ನಾನು ಅರ್ಪಿಸಿದ ಪೂಜೆಯನ್ನೂ ಆದರದಿಂದ ಸ್ವೀಕರಿಸಿ ನನ್ನೊಡನೆ ಈ ಮಾತನ್ನು ಹೇಳಿದನು :

"ಭೀಷ್ಮ! ಕಾಶೀರಾಜನ ಮಗಳನ್ನು ಮದುವೆಯಾಗುವ ಇಚ್ಛೆಯು ನಿನಗಿರಲಿಲ್ಲ. ಮದುವೆಯಾಗುವ ಇಚ್ಛೆಯು ಇಲ್ಲದಿದ್ದರೂ ನೀನವಳನ್ನು ಬಲಾತ್ಕಾರವಾಗಿ ಸೆಳೆದುಕೊಂಡುಹೋದೆ. ಬಳಿಕ ಅವಳನ್ನು ನೀನು ವಿಸರ್ಜಿಸಿಬಿಟ್ಟೆ. ಯಾವ ಕಾರಣದಿಂದ ನೀನು ಹೀಗೆ ಮಾಡಿದೆ? ಗಾಂಗೇಯ! ಯಾವ ವಿಪರೀತವಾದ ಬುದ್ಧಿಯಿಂದ ನೀನು ಈ ಕಾರ್ಯಮಾಡಿದೆ? ಯಶಸ್ವಿನಿಯಾದ ಇವಳು ನಿನ್ನ ಕಾರಣದಿಂದಾಗಿ ಧರ್ಮದಿಂದ ಭ್ರಷ್ಟಳಾಗಿ ಹೋದಳು. ಮೊದಲು ನಿನ್ನಿಂದ ಪರಿಗೃಹೀತಳಾದ ಇವಳನ್ನು ಯಾರು ತಾನೇ ಪುನಃ ಪರಿಗ್ರಹಿಸಲಿಚ್ಛಿಸುತ್ತಾರೆ? ನೀನಿವಳನ್ನು ಸೆಳೆದುಕೊಂಡು ಹೋದ ಕಾರಣದಿಂದಲೇ ಶಾಲ್ವನೂ ಇವಳನ್ನು ತಿರಸ್ಕರಿಸಿಬಿಟ್ಟನು. ಈ ಕಾರಣದಿಂದಾಗಿ ನೀನಿವಳನ್ನು ನನ್ನ ನಿರ್ದೇಶಾನುಸಾರವಾಗಿ ಪರಿಗ್ರಹಿಸು. ಪುರುಷವ್ಯಾಘ್ರನೇ! ಈ ರಾಜಪುತ್ರಿಯು ಸ್ತ್ರೀಧರ್ಮವನ್ನು ಪಾಲಿಸುವಂತಾಗಲಿ. ನಿಷ್ಪಾಪನೇ! ವಿಶ್ವದ ಸಮಸ್ತರಾಜರಿಗೂ ಈ ರೀತಿಯಲ್ಲಿ ಅಪಮಾನಮಾಡಿದುದು ಖಂಡಿತವಾಗಿಯೂ ಉಚಿತವಲ್ಲ."

ದುರ್ಯೋಧನ! ನನ್ನ ವಿಷಯದಲ್ಲಿ ಅಪ್ರೀತಿಯ ಮನೋಭಾವವನ್ನು ಹೊಂದಿದ ಪರಶುರಾಮನನ್ನು ಕುರಿತು ನಾನು ಹೀಗೆಂದು ಹೇಳಿದೆನು :

**ನಾಹಮೇನಾಂ ಪುನರ್ದದ್ಯಾಂ ಬ್ರಹ್ಮನ್ಭ್ರಾತ್ರೇ ಕಥಂಚನ ॥೩೨॥**

“ನಾನು ಪುನಃ ಇವಳನ್ನು ನನ್ನ ತಮ್ಮನಿಗೆ ತಂದುಕೊಂಡು ಖಂಡಿತ ವಾಗಿಯೂ ಯಾವುದೇ ಕಾರಣದಿಂದಲೂ ಮದುವೆಮಾಡುವುದಿಲ್ಲ. ಭಾರ್ಗವ! ಇವಳು ನನ್ನೊಡನೆಯೇ ‘ಶಾಲ್ವಸ್ಯಾಹಂ’ ‘ನಾನು ಶಾಲ್ವನಿಗೆ ಸೇರಿದವಳಾಗಿದ್ದೇನೆ’ ಎಂದು ಸ್ಪಷ್ಟವಾಗಿ ಹೇಳಿದಳು. ನಾನೇ ಇವಳಿಗೆ ತನ್ನ ಪ್ರಿಯತಮನ ಬಳಿಗೆ ಹೋಗಲು ಅನುಮತಿಯನ್ನು ನೀಡಿದೆನು. ನನ್ನಿಂದ ಅನುಮತಿಯನ್ನು ಪಡೆದು ಶಾಲ್ವರಾಜನ ನಗರಕ್ಕೆ ಇವಳು ಹೊರಟು ಹೋದಳು.

**ನ ಭಯಾನ್ನಾಪ್ಯನುಕ್ರೋಶಾನ್ನಾರ್ಥಲೋಭಾನ್ನ ಕಾಮ್ಯಯಾ ।**
**ಕ್ಷಾತ್ರಂ ಧರ್ಮಮಹಂ ಜಹ್ಯಾಮಿತಿ ಮೇ ವ್ರತಮಾಹಿತಮ್ ॥೩೪॥**

ಭಯದಿಂದಾಗಲೀ, ಕರುಣೆಯಿಂದಾಗಲೀ, ಧನಲೋಭದಿಂದಾಗಲೀ ಅಥವಾ ಯಾವುದಾದರೂ ಕಾಮನೆಯಿಂದಾಗಲೀ–ಕ್ಷಾತ್ರಧರ್ಮವನ್ನು ಬಿಡುವುದಿಲ್ಲವೆಂಬ ವ್ರತವನ್ನು ನಾನು ಸ್ವೀಕಾರಮಾಡಿದ್ದೇನೆ.”

ದುರ್ಯೋಧನ! ನಾನು ಹೀಗೆ ಹೇಳಿದುದರಿಂದ ಪರಶುರಾಮನಿಗೆ ಅತಿಯಾದ ಕೋಪವೇ ಬಂದಿತು. ಕೋಪದಿಂದ ಪರ್ಯಾಕುಲಿತವಾದ (ಅಸ್ತವ್ಯಸ್ತವಾದ ಅಥವಾ ಕೆಂಪಾದ) ಕಣ್ಣುಗಳನ್ನು ಹೊಂದಿದವನಾಗಿ ರಾಮನು ಈ ಮಾತುಗಳನ್ನು ಹೇಳಿದನು :

“ನರಪುಂಗವನೇ! ನನ್ನ ಮಾತನ್ನು ನೀನು ನಡೆಸಿಕೊಡದೇ ಹೋದಪಕ್ಷದಲ್ಲಿ ಸಹಾಮಾತ್ಯನಾದ ನಿನ್ನನ್ನು ನಾನೀಗಲೇ ಈ ಕ್ಷಣದಲ್ಲಿಯೇ ಸಂಹರಿಸಿಬಿಡುತ್ತೇನೆ.”

ಹೀಗೆ ಒಂದು ಬಾರಿಯಲ್ಲ.; ಅನೇಕಬಾರಿ ಹೇಳಿದನು. ಕ್ರೋಧದಿಂದ ಪರ್ಯಾಕುಲಿತವಾದ ಕಣ್ಣುಗಳಿಂದ ಕೂಡಿದ್ದ ರಾಮನು ರೋಷಾವೇಶ ದಿಂದಲೇ ಈ ಮಾತುಗಳನ್ನು ಪುನಃ ಪುನಃ ಹೇಳುತ್ತಿದ್ದನು. ನಾನಾದರೋ ಪ್ರಿಯವಚನಗಳಿಂದ ಕೋಪಮಾಡಿಕೊಳ್ಳಬಾರದೆಂದು ಅವನನ್ನು ಬಾರಿ-ಬಾರಿಗೂ ಪ್ರಾರ್ಥಿಸಿಕೊಳ್ಳುತ್ತಿದ್ದೆನು. ಆದರೆ ನಾನೆಷ್ಟೇ ಪ್ರಾರ್ಥಿಸಿಕೊಂಡರೂ

ಅವನು ಪ್ರಶಾಂತನಾಗಲೇ ಇಲ್ಲ. ಬ್ರಾಹ್ಮಣಶ್ರೇಷ್ಠನಾದ ಪರಶುರಾಮನಿಗೆ ನಾನು ಬಾರಿ-ಬಾರಿಗೂ ತಲೆಬಾಗಿ ನಮಸ್ಕರಿಸಿ ಪ್ರಶ್ನಿಸುತ್ತಿದ್ದೆನು :

"ಪೂಜ್ಯನೇ! ನನ್ನೊಡನೆ ನೀನು ಯುದ್ಧಮಾಡಲು ಇಚ್ಛಿಸಿರುವುದರ ಕಾರಣವೇನು? ಬಾಲ್ಯದಲ್ಲಿ ನೀನೇ ನನಗೆ ನಾಲ್ಕು ವಿಧವಾದ ಇಷ್ವಸ್ತ್ರ ಪ್ರಯೋಗವಿಧಾನಗಳನ್ನೂ ಬೋಧಿಸಿರುವೆ. ನಾನು ನಿನ್ನ ಶಿಷ್ಯನಾಗಿದ್ದೇನೆ. ಶಿಷ್ಯನೊಡನೆ ಯುದ್ಧಮಾಡುವ ಕಾರಣವೇನಿದೆ? ಮಹಾನುಭಾವ!"

ನಾನು ಹೀಗೆ ಹೇಳಿದನಂತರ ಕೋಪದಿಂದ ಕೆಂಪಾದ ಕಣ್ಣುಗಳಿಂದ ಕೂಡಿದ್ದ ರಾಮನು ಗಡುಸಾದ ಧ್ವನಿಯಿಂದ ಹೇಳಿದನು :

"ಭೀಷ್ಮ! ನನ್ನನ್ನು 'ಗುರು' ಎಂದು ಭಾವಿಸಿರುವುದು ಸರಿಯೇ. ಆದರೆ ನನ್ನ ಪ್ರೀತ್ಯರ್ಥವಾಗಿ ಕಾಶೀರಾಜಕುಮಾರಿಯಾದ ಈ ಅಂಬೆಯನ್ನು ನೀನು ಪರಿಗ್ರಹಿಸಲು ಸಿದ್ಧನಾಗಿಲ್ಲ. ಆದರೆ, ಕುರುನಂದನ! ಈ ವಿಷಯವನ್ನು ಸ್ಪಷ್ಟವಾಗಿ ಹೇಳುತ್ತೇನೆ. ನೀನಿವಳನ್ನು ಪರಿಗ್ರಹಿಸದಿದ್ದರೆ ನಿನಗೆ ಶಾಂತಿಯು ಲಭಿಸದು.

**ಗೃಹಾಣೇಮಾಂ ಮಹಾಬಾಹೋ ರಕ್ಷಸ್ವ ಕುಲಮಾತ್ಮನಃ ।**
**ತ್ವಯಾ ವಿಭ್ರಂಶಿತಾ ಹೀಯಂ ಭರ್ತಾರಂ ನಾಧಿಗಚ್ಛತಿ ॥೪೨॥**

ಮಹಾಬಾಹುವೇ! ಇನ್ನೂ ಒಮ್ಮೆ ಹೇಳುತ್ತೇನೆ. ಇವಳನ್ನು ನೀನು ಪರಿಗ್ರಹಿಸು. ನಿನ್ನ ಕುಲವನ್ನು ಸಂರಕ್ಷಿಸು. ನಿನ್ನಿಂದ ವಿಭ್ರಂಶಿತಳಾದ ಇವಳು ಬೇರೆಯ ಪತಿಯನ್ನು ಪಡೆದುಕೊಳ್ಳಲಾರಳು."

ಹೀಗೆ ಹೇಳಿದ ಪರಪುರಂಜಯನಾದ ರಾಮನಿಗೆ ನಾನು ಸ್ಪಷ್ಟವಾಗಿಯೇ ಹೇಳಿದೆನು :

**ನೈತದೇವಂ ಪುನರ್ಭಾವಿ ಬ್ರಹ್ಮರ್ಷೇ ಕಿಂ ಶ್ರಮೇಣ ತೇ ॥೪೩॥**

"ಬ್ರಹ್ಮರ್ಷಿಯೇ! ಈ ಕಾರ್ಯವು ಮಾತ್ರ ನನ್ನಿಂದ ಸಾಧ್ಯವಾಗುವುದೇ ಇಲ್ಲ. ನೀನು ಇವಳಿಗಾಗಿ ಪಡುವ ಶ್ರಮದಿಂದ ಯಾವ ಪ್ರಯೋಜನವೂ ಆಗಲಾರದು. ಜಮದಗ್ನಿನಂದನನೇ! ನೀನೇ ನನಗೆ ಹಿಂದೆ ಆಚಾರ್ಯನಾಗಿದ್ದೆ. ಅದನ್ನೇ ಸ್ಮರಿಸಿ ನಾನು ನಿನ್ನನ್ನು ಪ್ರಸನ್ನನಾಗುವಂತೆ

ಪ್ರಾರ್ಥಿಸುತ್ತಿದ್ದೇನೆ. ನಾನು ಹಿಂದೆಯೇ ಇವಳನ್ನು ಇವಳ ಅಭಿಪ್ರಾಯಾನುಸಾರವಾಗಿಯೇ ತ್ಯಜಿಸಿಬಿಟ್ಟೆನು.

**ಕೋ ಜಾತು ಪರಭಾವಾಂ ಹಿ ನಾರೀಂ ವ್ಯಾಲೀಮಿವ ಸ್ಥಿತಾಮ್ ।**
**ವಾಸಯೇತ ಗೃಹೇ ಜಾನನ್ ಸ್ತ್ರೀಣಾಂ ದೋಷೋ ಮಹಾತ್ಯಯಃ ॥**

ನೀನೇ ಹೇಳು, ಪರಶುರಾಮ! ಅನ್ಯನಲ್ಲಿ ಅನುರಾಗವಿಟ್ಟಿರುವ ಕಲುಷಪೂರಿತಹೃದಯಳಾದ ಸರ್ಪಿಣಿಯಂತಿರುವ ಸ್ತ್ರೀ ಎಂಬುದನ್ನು ತಿಳಿದೂ–ಅಂತಹವಳನ್ನು ಯಾರು ತಾನೇ ಮನೆಯಲ್ಲಿಟ್ಟುಕೊಳ್ಳಲು ಅಪೇಕ್ಷಿಸುತ್ತಾರೆ? ಸ್ತ್ರೀಯರ ಪರಪುರುಷಕಾಮನೆಯೆಂಬ ದೋಷವು ದೊಡ್ಡ ಅನರ್ಥಕ್ಕೆ ಕಾರಣವಾಗುತ್ತದೆ. ಇಂತಹ ದೋಷಯುಕ್ತಳಾದ ಸ್ತ್ರೀಯನ್ನು ನಾನು ಖಂಡಿತವಾಗಿಯೂ ಪುನಃ ಪರಿಗ್ರಹಿಸುವುದಿಲ್ಲ. ಇಂದ್ರನೇ ನನ್ನ ಮೇಲೆ ಯುದ್ಧಕ್ಕೆ ಬರುವನೆಂಬ ಭಯದಿಂದಲೂ ನಾನು ಕ್ಷಾತ್ರಧರ್ಮವನ್ನು ಪರಿತ್ಯಜಿಸತಕ್ಕವನಲ್ಲ. ಮಹಾವ್ರತನೇ! ನೀನು ಪ್ರಸನ್ನನಾದರೂ ಸರಿಯೇ ; ಪ್ರಸನ್ನನಾಗದಿದ್ದರೂ ಸರಿಯೇ–ನಿನ್ನ ಮಾತನ್ನು ನಡೆಸಿಕೊಡಲು ಆಗದಿರುವುದಕ್ಕೆ ನೀನೇನು ಮಾಡಬೇಕೆಂದಿರುವೆಯೋ ಅದನ್ನು ಸಾಧ್ಯವಾದಷ್ಟು ಬೇಗ ಮಾಡಿಬಿಡು.

ವಿಶುದ್ಧಾತ್ಮನೇ! ಮಹಾಮತಿಯೇ! ಈ ವಿಷಯದಲ್ಲಿ ಮಹಾತ್ಮನಾದ ಮರುತ್ತನಿಂದ ಹೇಳಲ್ಪಟ್ಟ ಶ್ಲೋಕವೊಂದು ಪುರಾಣಪ್ರಸಿದ್ಧವಾಗಿದೆ. ಅದನ್ನೇ ನಾನು ನಿನಗೆ ಹೇಳುತ್ತೇನೆ :

**ಗುರೋರಪ್ಯವಲಿಪ್ತಸ್ಯ ಕಾರ್ಯಾಕಾರ್ಯಮಜಾನತಃ ।**
**ಉತ್ಪಥಪ್ರತಿಪನ್ನಸ್ಯ ಪರಿತ್ಯಾಗೋ ವಿಧೀಯತೇ ॥೪೮॥**

'ಗುರುವೇ ಆಗಿದ್ದರೂ-ಅವನು ಅಹಂಕಾರಿಯಾಗಿದ್ದರೆ ; ಕಾರ್ಯಾಕಾರ್ಯವಿವೇಚನೆಯಿಲ್ಲದವನಾಗಿದ್ದರೆ ; ಅಪಮಾರ್ಗವನ್ನು ಹಿಡಿದು ಹೋಗುವವನಾಗಿದ್ದರೆ–ಅಂತಹವನನ್ನೂ ಪರಿತ್ಯಜಿಸಬೇಕು.'

ನಾನೇನೋ ನಿನ್ನನ್ನು ನನ್ನ ಗುರುವೆಂಬ ಅಭಿಮಾನದಿಂದ ಭಕ್ತಿಪೂರ್ವಕವಾಗಿ ಸಮ್ಮಾನಿಸಿದೆನು. ಆದರೆ ನಿನಗೆ ಸದ್ಗುರುವಿನಲ್ಲಿರಬೇಕಾದ

ಗುಣಗಳೇನೂ ಇರುವುದಿಲ್ಲ. 'ಗುರುವೃತ್ತಿ' ಎಂದರೇನೆಂಬುದೇ ನಿನಗೆ ತಿಳಿಯದು. ಈ ಕಾರಣದಿಂದಾಗಿ ನಾನೂ ನಿನ್ನೊಡನೆ ಯುದ್ಧಮಾಡಲು ಸಿದ್ಧನಾಗಿಯೇ ಇದ್ದೇನೆ.

ನಾನಿದುವರೆಗೂ ನಿನ್ನನ್ನು ಪ್ರಸನ್ನನಾಗುವಂತೆ ಪ್ರಾರ್ಥಿಸುತ್ತಿದ್ದುದು ದೌರ್ಬಲ್ಯದಿಂದಲ್ಲ ; ಭಯದಿಂದಲೂ ಅಲ್ಲ.

**ಗುರುಂ ನ ಹನ್ಯಾಂ ಸಮರೇ ಬ್ರಾಹ್ಮಣಂ ಚ ವಿಶೇಷತಃ ।**
**ವಿಶೇಷತಸ್ತಪೋವೃದ್ಧಮೇವಂ ಕ್ಷಾನ್ತಂ ಮಯಾ ತವ ॥೫೦॥**

'ಯುದ್ಧದಲ್ಲಿ ಗುರುವನ್ನು ವಧೆಮಾಡಕೂಡದು. ಮೇಲಾಗಿ ಬ್ರಾಹ್ಮಣನಾಗಿರುತ್ತಾನೆ. ಅದಕ್ಕಿಂತಲೂ ಮಿಗಿಲಾಗಿ ತಪೋವೃದ್ಧನಾಗಿರುತ್ತಾನೆ. ಇಂತಹವನನ್ನು ಯುದ್ಧದಲ್ಲಿ ಸಂಹರಿಸುವುದು ಯುಕ್ತವಲ್ಲ'–ಈ ಒಂದು ಮನೋಭಾವನೆಯಿಂದಾಗಿ ನಾನಿದುವರೆಗೂ ಕ್ಷಮೆಯನ್ನು ತಾಳಿದೆನು.

**ಉದ್ಯತೇಷುಮಥೋ ದೃಷ್ಟ್ವಾ ಬ್ರಾಹ್ಮಣಂ ಕ್ಷತ್ರಬನ್ಧುವತ್ ।**
**ಯೋ ಹನ್ಯಾತ್ಸಮರೇ ಕ್ರುದ್ಧಂ ಯುಧ್ಯನ್ತಮಪಲಾಯಿನಮ್ ॥೫೧॥**

**ಬ್ರಹ್ಮಹತ್ಯಾ ನ ತಸ್ಯ ಸ್ಯಾದಿತಿ ಧರ್ಮೇಷು ನಿಶ್ಚಯಃ ।**
**ಕ್ಷತ್ರಿಯಾಣಾಂ ಸ್ಥಿತೋ ಧರ್ಮೇ ಕ್ಷತ್ರಿಯೋಽಸ್ಮಿ ತಪೋಧನ ॥೫೨॥**

ಬ್ರಾಹ್ಮಣನಾಗಿದ್ದರೂ ಕ್ಷತ್ರಬಂಧುವಿನಂತೆ (ಕ್ಷತ್ರಿಯನಂತೆ) ಧನುರ್ಬಾಣಗಳನ್ನು ಧರಿಸಿ ಕ್ರೋಧಾಭಿಭೂತನಾಗಿ ಪಲಾಯನಮಾಡದೆ ಯುದ್ಧಮಾಡುವವನನ್ನು ಯಾವನು ಸಂಹರಿಸುತ್ತಾನೆಯೋ– ಅವನಿಗೆ ಬ್ರಹ್ಮಹತ್ಯಾದೋಷವು ಪ್ರಾಪ್ತವಾಗುವುದಿಲ್ಲವೆಂದು ಧರ್ಮಶಾಸ್ತ್ರಗಳಲ್ಲಿ ನಿರ್ಣೀತವಾಗಿದೆ. ಆದುದರಿಂದ ಸ್ವೇಚ್ಛೆಯಿಂದಲೇ ಯುದ್ಧಕ್ಕೆ ಬಂದಿರುವ ನಿನ್ನನ್ನು ವಧಿಸಿದರೂ ನನಗೆ ಯಾವ ವಿಧವಾದ ಪಾಪದ ಸಂಘಟನೆಯೂ ಆಗಲಾರದು.

ತಪೋಧನನೇ! ನಾನು ಕ್ಷತ್ರಿಯನಾಗಿದ್ದೇನೆ ಮತ್ತು ಕ್ಷತ್ರಧರ್ಮದಲ್ಲಿ ನಿರತನಾಗಿದ್ದೇನೆ.

**ಯೋ ಯಥಾ ವರ್ತತೇ ಯಸ್ಮಿಂಸ್ತಸ್ಮಿನ್ನೇವ ಪ್ರವರ್ತಯನ್ ।**
**ನಾಧರ್ಮಂ ಸಮವಾಪ್ನೋತಿ ನ ಚಾಶ್ರೇಯಶ್ಚ ವಿನ್ದತಿ ॥೫೩॥**

ಯಾವನು ಯಾವ ರೀತಿಯಲ್ಲಿ ವರ್ತಿಸುತ್ತಾನೆಯೋ-ಅವನ ವಿಷಯದಲ್ಲಿ ಅದೇ ರೀತಿಯಲ್ಲೇ ವರ್ತಿಸುವುದರಿಂದ ಪುರುಷನು ಅಧರ್ಮದ ಫಲವನ್ನು ಹೊಂದುವುದಿಲ್ಲ ಮತ್ತು ಅವನಿಗೆ ಅಶ್ರೇಯಸ್ಸೂ ಉಂಟಾಗುವುದಿಲ್ಲ. ಶಠಂ ಪ್ರತಿ ಶಾಠ್ಯಂ–ಎಂಬಂತೆ ಧೂರ್ತನೊಡನೆ ಧೂರ್ತತನದಿಂದಲೇ ವರ್ತಿಸಬೇಕು. ಮೋಸಗಾರನೊಡನೆ ಮೋಸ ದಿಂದಲೇ ವರ್ತಿಸಬೇಕು. ಅಂತಹ ಸಮಯಗಳಲ್ಲಿ ಧೂರ್ತನಾಗಿ ವರ್ತಿಸಿದ ಅಥವಾ ಮೋಸಮಾಡಿದ ದೋಷವುಂಟಾಗುವುದಿಲ್ಲ.

**ಅರ್ಥೇ ವಾ ಯದಿ ವಾ ಧರ್ಮೇ ಸಮರ್ಥೋ ದೇಶಕಾಲವಿತ್ ।**
**ಅರ್ಥಸಂಶಯಮಾಪನ್ನಃ ಶ್ರೇಯಾನ್ನಿಃಸಂಶಯೋ ನರಃ ॥೫೪॥**

ಯಾವ ಕಾಲದಲ್ಲಿ ಯಾವ ಸ್ಥಳದಲ್ಲಿ ಹೇಗೆ ನಡೆದುಕೊಳ್ಳಬೇಕೆಂಬು ದನ್ನು ಚೆನ್ನಾಗಿ ತಿಳಿದುಕೊಂಡಿರುವ, ಸಮರ್ಥನಾದ ಪುರುಷನು ಧರ್ಮಾರ್ಥಸಂಗ್ರಹದ ಸಮಯವು ಬಂದಾಗ–ಅರ್ಥವು ಧರ್ಮಮೂಲ ವಾಗಿರುವುದೇ ಎಂಬುದನ್ನು ವಿವೇಚಿಸಿ ಕಾರ್ಯಮಾಡಬೇಕು. ಅರ್ಥವು ಧರ್ಮಮೂಲವಾಗಿರುವುದರಲ್ಲಿ ಸಂಶಯವುಂಟಾದಾಗ–ಅರ್ಥವನ್ನು ಪರಿತ್ಯಾಗಮಾಡಿ ಸಂಶಯರಹಿತವಾದ ಧರ್ಮಕ್ಕೆ ಅಂಟಿಕೊಳ್ಳುವುದೇ ಶ್ರೇಯಸ್ಕರ. ಒಂದು ವೇಳೆ ಧರ್ಮವೇ ಸಂಶಯಾತ್ಮಕವಾಗಿದ್ದಲ್ಲಿ ಅದನ್ನೂ ಪರಿತ್ಯಜಿಸಬೇಕಾಗುತ್ತದೆ. ಧರ್ಮದಲ್ಲಾಗಲೀ ಅರ್ಥದಲ್ಲಾಗಲೀ ಸಂಶಯಕ್ಕೆ ಅವಕಾಶವಿರಬಾರದು. ಈ ಅರ್ಥವನ್ನು ಪಡೆದುಕೊಳ್ಳುವುದು ಸರಿಯೇ ಎಂಬ ಸಂಶಯವಿರಬಾರದು ; ಅಥವಾ ಈ ಧರ್ಮಾನುಸರಣೆಯು ಸಾಧುವೇ– ಎಂಬ ಸಂಶಯವೂ ಉಂಟಾಗಬಾರದು. ಅಂತಹ ಸಂದರ್ಭದಲ್ಲಿ ಧರ್ಮಾರ್ಥಗಳೆರಡನ್ನೂ ತ್ಯಜಿಸುವುದೇ ಶ್ರೇಯಸ್ಕರ.

ಅಂಬೆಯು ಅರ್ಥರೂಪಳಾಗಿದ್ದಾಳೆ. ಆದರೆ ಪರಪುರುಷನಲ್ಲಿ ಮನಸ್ಸಿ ಟ್ಟಿರುವ ಅಂಬೆಯ ವಿಷಯದಲ್ಲಿ ಸಂಶಯವಿದೆ. ಆದುದರಿಂದ ಅವಳು ಪರಿ ಗ್ರಹಕ್ಕೆ ಯೋಗ್ಯಳಲ್ಲ. ಗುರುಗಳ ಆಜ್ಞೆಯನ್ನು ನಡೆಸಿಕೊಡುವುದು ಧರ್ಮ.

ಆದರೆ ಗುರುಗಳ ಆಜ್ಞೆಯು ಯಾವ ರೂಪದಲ್ಲಿದೆಯೆಂಬುದನ್ನು ವಿವೇಚಿಸಬೇಕು. ಗುರುಗಳ ಮಾತಿನಂತೆ ನಡೆದುಕೊಂಡರೆ ಸಂಶಯಗ್ರಸ್ತವಾದ ಅರ್ಥವನ್ನು ಸ್ವೀಕರಿಸಬೇಕಾಗುತ್ತದೆ. ಪ್ರಕೃತಸಂದರ್ಭದಲ್ಲಿ ಗುರುಗಳ ಆಜ್ಞೆಯು ಧರ್ಮಸಮ್ಮತವೇ? – ಎಂಬ ಸಂಶಯಕ್ಕೆ ಅವಕಾಶವಿದೆ. ಗುರುಗಳ ಮಾತಿನಂತೆ ನಡೆದುಕೊಳ್ಳಬೇಕೆಂಬುದು ಧರ್ಮವಾದರೂ ಗುರುಗಳು ಹೇಳಿದುದೆಲ್ಲಾ ಧರ್ಮಸಮ್ಮತವಾಗಿರುವುದೆಂದು ಹೇಳುವುದಕ್ಕಾಗುವುದಿಲ್ಲ. ಅಂತಹ ಸಂದರ್ಭದಲ್ಲಿ ವಿವೇಚನೆಯು ಅತ್ಯಗತ್ಯ. ವಿವೇಚಿಸಿದನಂತರ ಸಂಶಯದಿಂದ ಕೂಡಿದ ಧರ್ಮವನ್ನೂ ಪರಿತ್ಯಜಿಸಬೇಕು. ಪರಿಶುದ್ಧನಾದ ಆತ್ಮನ ಪ್ರೇರಣೆಯಂತೆ ನಡೆದುಕೊಳ್ಳಬೇಕು.

ಒಬ್ಬ ವಿದ್ವಾಂಸರು ಈ ಶ್ಲೋಕಕ್ಕೆ ಮತ್ತೊಂದು ವಿಧದಲ್ಲಿ ವಿವರಣೆ ಕೊಟ್ಟಿರುತ್ತಾರೆ.

ಮಾಡಬೇಕಾದ ಕಾರ್ಯದ ವಿಷಯದಲ್ಲಾಗಲೀ, ಧರ್ಮದ ವಿಷಯದಲ್ಲಾಗಲೀ, ದೇಶ-ಕಾಲಗಳನ್ನು ತಿಳಿದು ಕೆಲಸಮಾಡುವವನು ಸಮರ್ಥನೆನಿಸುತ್ತಾನೆ. ನೀನು ಈಗ ನಿನ್ನ ಕಾರ್ಯದ ವಿಷಯದಲ್ಲಿಯೂ ಅದರ ಫಲದ ವಿಷಯದಲ್ಲಿಯೂ ಸಂಶಯದಿಂದಿರುವೆ. ನಿನಗಿಂತಲೂ ಸಂಶಯರಹಿತನಾದ ಮಾನವನೇ (ನಾನೇ) ಶ್ರೇಷ್ಠನು. ಒಂದು ವೇಳೆ ಒಬ್ಬಾತನು–ಲೋಕದ ದೃಷ್ಟಿಯಲ್ಲಿ ಎಷ್ಟೇ ದೊಡ್ಡವನಿದ್ದರೂ– ಮಾಡಬೇಕಾದ ಕಾರ್ಯದ ವಿಷಯದಲ್ಲಿ ಸಂಶಯಹೊಂದಿದ್ದರೆ ಅವನಿಗಿಂತಲೂ ಸಂಶಯವಿಲ್ಲದ ಮಾನವನೇ ಶ್ರೇಷ್ಠನು.

ತನ್ನ ದುಃಖಕ್ಕೆ ಯಾರು ಮುಖ್ಯಕಾರಣರೆಂಬ ವಿಷಯದಲ್ಲಿ ಅಂಬೆಗೆ ಸಂಶಯವಿದೆ. ಭೀಷ್ಮನಿಗೆ ಮೊದಲು ತಾನು ಶಾಲ್ವನಲ್ಲಿ ಪ್ರೀತಿಹೊಂದಿರುವುದನ್ನು ತಿಳಿಸಲಿಲ್ಲವೆಂದೂ, ತಿಳಿಸಿದನಂತರ ಭೀಷ್ಮನು ತನ್ನ ಇಚ್ಛೆಯಂತೆಯೇ ಶಾಲ್ವರಾಜನ ಬಳಿಗೆ ಕಳುಹಿಸಿಕೊಟ್ಟನೆಂಬುದೂ ಅಂಬೆಗೆ ತಿಳಿದಿದೆ. ಅವಳ ಮನೋಗತದಂತೆಯೇ ಆಚರಿಸಿದ ಮೇಲೆ ಭೀಷ್ಮನ ಹೊಣೆಗಾರಿಕೆಯೇನೂ ಉಳಿದಿಲ್ಲ. ಹೀಗಿರುವಾಗ ಅಂಬೆಯು 'ಭೀಷ್ಮನನ್ನು ವಧಿಸು' ಎಂದು ಹೇಳಿದ ಮಾತ್ರದಿಂದ ಪರಶುರಾಮನು ಅಪರಾಧಿಯಲ್ಲದ ಭೀಷ್ಮನೊಡನೆ

ಯುದ್ಧಮಾಡುವುದು ಸರಿಯೇ?–ಎಂಬ ಸಂಶಯವುಂಟಾಗುತ್ತದೆ. ಆದರೆ ಭೀಷ್ಮನಿಗೆ ತಾನು ಮಾಡಿದುದು ಮತ್ತು ಮಾಡುತ್ತಿರುವುದು ಸರಿಯೆಂಬ ನಿಶ್ಚಯವಿದೆ. ನ್ಯಾಯಕ್ಕೆ ಅನುಗುಣವಲ್ಲದ ಗುರುವಿನ ಮಾತನ್ನು ಮೀರಿದರೂ ದೋಷವಿಲ್ಲವೆಂದು ಭೀಷ್ಮನು ಹೇಳಿಯೇ ಇದ್ದಾನೆ.)

ಭೀಷ್ಮನು ಮುಂದುವರಿದು ಹೇಳುತ್ತಾನೆ :

"ಭಾರ್ಗವ! ಅರ್ಥವು ಸಂಶಯಾತ್ಮಕವಾಗಿರುವಾಗ–ಅನ್ಯಾಸಕ್ತಳಾದ ಅಂಬೆಯ ವಿಷಯದಲ್ಲಿ ಸಂಶಯವಿರುವಾಗ–ನೀನು ನ್ಯಾಯವನ್ನು ಅತಿಕ್ರಮಿಸಿ ವರ್ತಿಸುತ್ತಿರುವೆ. ಸಂಶಯದಿಂದ ಕೂಡಿರುವ ಅರ್ಥವನ್ನು ಪರಿಗ್ರಹಿಸುವಂತೆ ಪ್ರಚೋದಿಸುತ್ತಿರುವೆ. ಈ ಕಾರಣದಿಂದಲೇ ನಾನು ಯುದ್ಧಭೂಮಿಯಲ್ಲಿ ನಿನ್ನೊಡನೆ ಯುದ್ಧಮಾಡುತ್ತೇನೆ. ಮುಂದೆ ನಡೆಯಲಿರುವ ಮಹಾಯುದ್ಧದಲ್ಲಿ ನನ್ನ ಬಾಹುಬಲವನ್ನೂ, ಅತಿಮಾನುಷವಾದ ಪರಾಕ್ರಮವನ್ನೂ ಕಾಣಲಿರುವೆ. ಇಂತಹ ಪರಿಸ್ಥಿತಿಯಲ್ಲಿ ಏನುಮಾಡಬೇಕೋ ಅದನ್ನೇ ಮಾಡುತ್ತೇನೆ.

ಕುರುಕ್ಷೇತ್ರದಲ್ಲಿ ನಿನ್ನೊಡನೆ ಯುದ್ಧಮಾಡುತ್ತೇನೆ. ಮಹಾದ್ಯುತಿ ಮಂತನೇ! ನನ್ನೊಡನೆ ಯಥೇಷ್ಟವಾಗಿ ದ್ವಂದ್ವಯುದ್ಧಮಾಡಲು ಸನ್ನದ್ಧ ನಾಗು. ಕುರುಕ್ಷೇತ್ರದ ಮಹಾಯುದ್ಧದಲ್ಲಿ ನನ್ನ ನೂರಾರು ಬಾಣಗಳಿಂದ ಪೀಡಿತನಾದ ನೀನು ಕಡೆಯಲ್ಲಿ ಶಸ್ತ್ರಾಘಾತದಿಂದ ಪ್ರಾಣತೊರೆದು ಪೂತಾತ್ಮನಾಗಿ ಅನೇಕಪುಣ್ಯಕರ್ಮಗಳ ಮೂಲಕವಾಗಿ ಜಯಿಸಿರುವ ಶ್ರೇಷ್ಠ ವಾದ ಲೋಕಗಳನ್ನು ಹೊಂದುವೆ. ಯುದ್ಧದಲ್ಲಿ ಮರಣಹೊಂದುವುದ ರಿಂದಲೂ ಪುಣ್ಯಲೋಕಗಳು ಲಭ್ಯವಾಗುತ್ತವೆ ಮತ್ತು ನೀನು ಮಾಡಿರುವ ಅನೇಕ ಪುಣ್ಯಕರ್ಮಗಳಿಂದಲೂ ಉತ್ತಮಲೋಕಗಳು ಲಭ್ಯವಾಗುತ್ತವೆ.

ರಣಪ್ರಿಯನೇ! ಹಿಂದಿರುಗು. ಕುರುಕ್ಷೇತ್ರಕ್ಕೆ ಹೋಗು. ಮಹಾಬಾಹೋ! ನಿನ್ನೊಡನೆ ಯುದ್ಧಮಾಡುವ ಸಲುವಾಗಿ ನಾನೂ ನಿನ್ನ ಬಳಿಗೆ ಒಡನೆಯೇ ಬಂದುಬಿಡುತ್ತೇನೆ. ಭಾರ್ಗವ! ಕುರುಕ್ಷೇತ್ರ ದಲ್ಲಿಯೇ ನೀನು ನಿನ್ನ ತಂದೆಗೆ ತರ್ಪಣವನ್ನಿತ್ತು ಆತ್ಮಶುದ್ಧಿಯನ್ನು ಮಾಡಿ

ಕೊಂಡೆಯಲ್ಲವೇ? ಈಗ ನಾನೂ ನಿನ್ನನ್ನು ಅದೇ ಸ್ಥಳದಲ್ಲಿ ಸಂಹರಿಸಿ ನಿನಗೆ ಉತ್ತರಕ್ರಿಯಾದಿಗಳನ್ನು ಮಾಡಿ ಆತ್ಮಶುದ್ಧಿಯನ್ನು ಮಾಡಿಕೊಳ್ಳುತ್ತೇನೆ. ಬ್ರಾಹ್ಮಣನಿಗೆ ಯೋಗ್ಯವಾದ ಕರ್ಮಗಳನ್ನು ಮಾಡದಿದ್ದರೂ ಬ್ರಾಹ್ಮಣನೆಂದು ಹೇಳಿಕೊಳ್ಳುತ್ತಿರುವವನೇ! ಯುದ್ಧದುರ್ಮದನೇ! ನೀನು ಶೀಘ್ರಾತಿಶೀಘ್ರವಾಗಿ ಕುರುಕ್ಷೇತ್ರಕ್ಕೆ ಹೋಗು. ಪ್ರಾಚೀನಕಾಲದಿಂದಲೂ ನಿನ್ನಲ್ಲಿ ಮನೆಮಾಡಿಕೊಂಡಿರುವ ದರ್ಪವನ್ನು ಇಂದು ಕಿತ್ತೊಗೆಯುತ್ತೇನೆ. ನೀನು ದೊಡ್ಡ-ದೊಡ್ಡ ಸಭೆಗಳಲ್ಲಿ 'ನನ್ನೊಬ್ಬನಿಂದಲೇ ಪ್ರಪಂಚದ ಕ್ಷತ್ರಿಯರೆಲ್ಲರೂ ಜಯಿಸಲ್ಪಟ್ಟರು' ಮುಂತಾಗಿ ಆತ್ಮಶ್ಲಾಘನೆಯನ್ನು ಮಾಡಿಕೊಳ್ಳುತ್ತಿದ್ದೆಯಲ್ಲವೇ? ಅದಕ್ಕಿಂದು ಉತ್ತರ ಹೇಳುವೆನು ಕೇಳು :

**ನ ತದಾ ಜಾತವಾನ್ಭೀಷ್ಮಃ ಕ್ಷತ್ರಿಯೋ ವಾಪಿ ಮದ್ವಿಧಃ ।**
**ಪಶ್ಚಾಜ್ಜಾತಾನಿ ತೇಜಾಂಸಿ ತೃಣೇಷು ಜ್ವಲಿತಂ ತ್ವಯಾ ॥೬೩॥**

ಆ ದಿನಗಳಲ್ಲಿ ಭೀಷ್ಮನಿನ್ನೂ ಹುಟ್ಟಿರಲಿಲ್ಲ. ಭೀಷ್ಮನಿಗೆ ಸಮಾನರಾದ ಕ್ಷತ್ರಿಯರೂ ಹುಟ್ಟಿರಲಿಲ್ಲ. ಅನಂತರವೇ ಕ್ಷತ್ರಿಯತೇಜಸ್ಸುಗಳು ಸರ್ವತ್ರ ಉದಯಿಸಿವೆ. ಆ ಸಮಯದಲ್ಲಿ ನೀನು ತೃಣಸಮಾನರಾದ ಕ್ಷತ್ರಿಯರ ಮಧ್ಯದಲ್ಲಿ ಜಾಜ್ವಲ್ಯಮಾನನಾಗಿ ಪ್ರಕಾಶಿಸುತ್ತಿದ್ದೆ. (ಈಗ ವೀರಕ್ಷತ್ರಿಯರು ಬಹುಸಂಖ್ಯೆಯಲ್ಲಿದ್ದಾರೆ. ಹಿಂದಿನಂತೆ ಈಗ ನಿನ್ನ ದರ್ಪವೇನೂ ನಡೆಯುವುದಿಲ್ಲ.) ನಿನ್ನಲ್ಲಿರುವ ಯುದ್ಧದರ್ಪ ಮತ್ತು ಯುದ್ಧದ ಕಾಮನೆ– ಇವುಗಳನ್ನು ತೊಡೆದುಹಾಕಬೇಕಲ್ಲವೇ? ಮಹಾಬಾಹುವೇ! ಪರಪುರಂಜಯ ನಾದ, ಭೀಷ್ಮನೆಂದು ವಿಖ್ಯಾತನಾಗಿರುವ ನಾನು ಅದೇ ಕಾರ್ಯಕ್ಕಾಗಿಯೇ ಹುಟ್ಟಿದ್ದೇನೆ. ರಾಮ! ಯುದ್ಧದಲ್ಲಿ ನಿಸ್ಸಂಶಯವಾಗಿ ನಿನ್ನ ದರ್ಪವನ್ನು ತೊಡೆದುಹಾಕುತ್ತೇನೆ."

ದುರ್ಯೋಧನ! ನಾನು ಹೀಗೆ ಹೇಳುತ್ತಲೇ ಪರಶುರಾಮನು ಪರಿಹಾಸಮಾಡುತ್ತಿರುವನೋ ಎಂಬಂತೆ ಹೇಳಿದನು :

"ಭೀಷ್ಮ! ಅದೃಷ್ಟವಶದಿಂದ ನೀನು ರಣಾಂಗಣದಲ್ಲಿ ನನ್ನೊಡನೆ ಯುದ್ಧಮಾಡಲು ಇಚ್ಛಿಸಿರುವೆ. ಒಳ್ಳೆಯದು. ಕೌರವ್ಯ! ನಿನ್ನೊಡನೆ ಯುದ್ಧ

ಮಾಡುವ ಸಲುವಾಗಿ ಈಗಲೇ ನಾನು ಕುರುಕ್ಷೇತ್ರಕ್ಕೆ ಹೋಗುತ್ತೇನೆ. ಪರಂತಪನೇ! ನೀನೂ ಅಲ್ಲಿಗೆ ಆಗಮಿಸು. ನೀನು ಹೇಳಿದಂತೆಯೇ ಮಾಡುತ್ತೇನೆ. ಅಲ್ಲಿ ನನ್ನಿಂದ ಸಂಹರಿಸಲ್ಪಟ್ಟ, ನೂರಾರು ಬಾಣಗಳಿಂದ ಚುಚ್ಚಲ್ಪಟ್ಟ ಶರೀರವುಳ್ಳ ಮತ್ತು ರಣಹದ್ದುಗಳಿಗೂ ಮತ್ತು ಕಾಗೆಗಳಿಗೂ ಭೋಜನವಾಗುವ ನಿನ್ನನ್ನು ನಿನ್ನ ತಾಯಿಯಾದ ಗಂಗೆಯು ನೋಡಲಿ.

ಕೃಪಣನಾದ ನೀನು ನನ್ನಿಂದ ಹತನಾಗಿ ಬಿದ್ದಿರುವುದನ್ನು ನೋಡಿ ಸಿದ್ಧ-ಚಾರಣರಿಂದ ಸಂಸೇವ್ಯಮಾನಳಾದ ಗಂಗಾದೇವಿಯು ರೋದನ ಮಾಡಲಿ. ಮಹಾಭಾಗೆಯಾದ, ಭಗೀರಥನ ಮಗಳಾದ, ಪಾಪರಹಿತಳಾದ ಗಂಗಾದೇವಿಯು ಪುತ್ರವಿಯೋಗದ ದುಃಖವನ್ನನುಭವಿಸಲು ಅನರ್ಹಳೇ ಸರಿ. ಪುಣ್ಯವತಿಯಾದ ಅವಳಿಗೆ ಪುತ್ರವಿಯೋಗದ ದುಃಖವುಂಟಾಗಬಾರ ದಾಗಿತ್ತು. ಆದರೂ ಮಾಡುವುದೇನಿದೆ? ನಿನ್ನಂತಹ ಮಂದನಾದ, ಯುದ್ಧಾಭಿಲಾಷಿಯಾದ, ಆತುರದ ಸ್ವಭಾವವುಳ್ಳ ಮಗನನ್ನು ಹೆತ್ತಮೇಲೆ ಪುತ್ರವಿಯೋಗದುಃಖವನ್ನು ಅನುಭವಿಸದಿರಲು ಹೇಗೆ ತಾನೇ ಸಾಧ್ಯವಾಗುವುದು?

ಯುದ್ಧಕಾಮನೇ! ಭೀಷ್ಮ! ಬಾ.; ನನ್ನೊಡನೆಯೇ ಹೊರಡು. ಭರತರ್ಷಭನೇ! ರಥವೇ ಮೊದಲಾದ ಚತುರಂಗಬಲಸಮೇತನಾಗಿ ಹೊರಡು.”

ಹೀಗೆ ಹೇಳಿದ ಪರಪುರಂಜಯನಾದ ರಾಮನಿಗೆ ನಾನು ತಲೆಬಾಗಿ ನಮಸ್ಕರಿಸಿ ‘ಏವಮಸ್ತು’ – ‘ಹಾಗೆಯೇ ಆಗಲಿ’ ಎಂದು ಹೇಳಿದೆನು. ಅನಂತರ ರಾಮನು ನನ್ನೊಡನೆ ಯುದ್ಧಮಾಡುವ ಇಚ್ಛೆಯಿಂದ ಕುರುಕ್ಷೇತ್ರಕ್ಕೆ ಹೊರಟುಹೋದನು. ನಾನು ನಗರಕ್ಕೆ ಬಂದು ನನ್ನ ತಾಯಿಯಾದ ಸತ್ಯವತಿಗೆ ಎಲ್ಲ ವಿಷಯಗಳನ್ನೂ ಹೇಳಿದೆನು.

ಯುದ್ಧಸನ್ನದ್ಧನಾದ ನಾನು ವಿಪ್ರರಿಂದ ಸ್ವಸ್ತಿವಾಚನವನ್ನು ಮಾಡಿಸಿ ಕೊಂಡೆನು. ನನ್ನ ತಾಯಿಯಾದ ಸತ್ಯವತಿಯು ಆಶೀರ್ವಾದಮಾಡಿ ನನ್ನನ್ನು ಸಂತೋಷಗೊಳಿಸಿದಳು. ಬ್ರಾಹ್ಮಣರು ಪುಣ್ಯಾಹವಾಚನಮಾಡಿ ಶುಭವಾಗ ಲೆಂದು ಆಶೀರ್ವದಿಸಿದರು. ಅನಂತರದಲ್ಲಿ ನಾನು ಸುಂದರವಾಗಿದ್ದ ರಜತಮಯವಾದ ರಥದಲ್ಲಿ ಕುಳಿತುಕೊಂಡೆನು.

ಆ ರಥಕ್ಕೆ ಬಿಳಿಯದಾದ ಕುದುರೆಗಳನ್ನು ಕಟ್ಟಿದ್ದರು. ಆ ರಥವು ಸಕಲವಿಧವಾದ ಯುದ್ಧಸಾಮಗ್ರಿಗಳಿಂದಲೂ ಪೂರ್ಣವಾಗಿದ್ದಿತು. ಒಳ್ಳೆಯ ಚಕ್ರಗಳಿಂದ ಕೂಡಿದುದಾಗಿದ್ದಿತು. ವ್ಯಾಘ್ರಚರ್ಮದ ಆವರಣವನ್ನು ಹೊಂದಿದ್ದಿತು. ಆ ರಥವು ಮಹಾಶಸ್ತ್ರಗಳಿಂದಲೂ ಸರ್ವೋಪಕರಣ ಗಳಿಂದಲೂ ಸಂಪನ್ನವಾಗಿದ್ದಿತು. ಹಿಂದೆ ಅನೇಕ ಬಾರಿ ಯುದ್ಧದಲ್ಲಿ ಭಾಗವಹಿಸಿ ಅನುಭವವನ್ನು ಪಡೆದಿದ್ದ, ಸತ್ಕುಲಪ್ರಸೂತನಾದ, ವೀರನಾದ, ಅಶ್ವಶಾಸ್ತ್ರವನ್ನು ಚೆನ್ನಾಗಿ ತಿಳಿದಿದ್ದ ಸೂತನಿಂದ ಆ ರಥವು ನಿಯಂತ್ರಿತ ವಾಗಿದ್ದಿತು. ದುರ್ಯೋಧನ! ನಾನು ಬಿಳಿಯದಾದ ಕವಚವನ್ನು ತೊಟ್ಟು ಕೊಂಡಿದ್ದೆನು. ಬಿಳಿಯ ಧನುಸ್ಸನ್ನು ಧರಿಸಿ ಕುರುಕ್ಷೇತ್ರಕ್ಕೆ ಹೊರಟೆನು. ಮೇಲೆ ಶ್ವೇತಚ್ಛತ್ರಿಯಿದ್ದಿತು. ರಾಜಭಟರು ಬಿಳಿಯದಾದ ಬೀಸಣಿಗೆಗಳಿಂದ ನನ್ನೆರಡು ಪಾರ್ಶ್ವಗಳಲ್ಲಿಯೂ ನಿಂತು ಗಾಳಿಬೀಸುತ್ತಿದ್ದರು. ಬಿಳಿಯ ಬಟ್ಟೆಯನ್ನುಟ್ಟಿ ದ್ದೆನು. ಬಿಳಿಯದಾದ ಶಿರಸ್ತ್ರಾಣವನ್ನು ಧರಿಸಿದ್ದೆನು. ನನ್ನ ಎಲ್ಲ ಅಲಂಕಾರವಸ್ತುಗಳೂ ಶ್ವೇತವರ್ಣದುವುಗಳೇ ಆಗಿದ್ದುವು.

ವಂದಿ-ಮಾಗಧರು ಸ್ತೋತ್ರಮಾಡುತ್ತಿರಲಾಗಿ, ಬ್ರಾಹ್ಮಣರು 'ವಿಜಯೀಭವ!' ಎಂದು ಆಶೀರ್ವಾದಮಾಡುತ್ತಿರಲಾಗಿ, ನಾನು ಹಸ್ತಿನಾಪಟ್ಟಣದಿಂದ ಹೊರಟು ರಣಕ್ಷೇತ್ರವಾದ ಕುರುಕ್ಷೇತ್ರಕ್ಕೆ ಪ್ರಯಾಣ ಮಾಡಿದೆನು. ಮನೋವೇಗ-ವಾಯುವೇಗಗಳಿಗೆ ಸಮಾನವಾದ ವೇಗವುಳ್ಳ ರಥದ ಕುದುರೆಗಳು ಸಾರಥಿಯಿಂದ ಚೋದಿತವಾದೊಡನೆಯೇ ಶೀಘ್ರಾತಿಶೀಘ್ರವಾಗಿ ನನ್ನನ್ನು ರಣಾಂಗಣಕ್ಕೆ ಒಯ್ದುವು. ಆ ವೇಳೆಗೆ ರಾಮನೂ ಯುದ್ಧಸನ್ನದ್ಧನಾಗಿಯೇ ನಿಂತಿದ್ದನು. ಒಡನೆಯೇ ನಾವಿಬ್ಬರೂ ಯುದ್ಧವನ್ನು ಪ್ರಾರಂಭಿಸುವ ಸಲುವಾಗಿ ಒಬ್ಬರು ಮತ್ತೊಬ್ಬರನ್ನು ಆಕ್ರಮಿಸಿ ನಿಂತುಕೊಂಡೆವು. ಮಹಾತಪಸ್ವಿಯಾದ ಪರಶುರಾಮನನ್ನು ಆಕ್ರಮಿಸಿ ಅವನ ಮುಂದೆ ನಿಂತಿದ್ದ ನಾನು ಶ್ರೇಷ್ಠವಾದ ಶಂಖವನ್ನು ಕೈಗೆ ತೆಗೆದುಕೊಂಡು ಬಹಳ ಗಟ್ಟಿಯಾಗಿ ಊದಿದೆನು. ದುರ್ಯೋಧನ! ಆ ಸಮಯದಲ್ಲಿ ಅಲ್ಲಿದ್ದ ಬ್ರಾಹ್ಮಣರು, ತಪಸ್ವಿಗಳು, ಅರಣ್ಯವಾಸಿಗಳು, ಇಂದ್ರಸಹಿತರಾದ ದೇವಗಣಗಳು –ಇವರೆಲ್ಲರೂ ರಣರಂಗವನ್ನು ಉತ್ಸುಕತೆಯಿಂದ ವೀಕ್ಷಿಸುತ್ತಿದ್ದರು. ಅಲ್ಲಲ್ಲಿ ದಿವ್ಯವಾದ ಮಾಲೆಗಳು ಕಾಣತೊಡಗಿದ್ದುವು. ವಾದ್ಯಗಳ ಘೋಷವು

ಕೇಳಿಬರುತ್ತಿದ್ದಿತು. ಮೇಘಗಳ ಸಮೂಹಗಳೂ ರಣಾಂಗಣದ ಮೇಲ್ಭಾಗದಲ್ಲಿ ಕಾಣಿಸಿಕೊಂಡುವು. ಪರಶುರಾಮನನ್ನು ಹಿಂಬಾಲಿಸಿ ಬಂದಿದ್ದ ಎಲ್ಲ ತಪಸ್ವಿಗಳೂ ರಣಾಂಗಣವನ್ನು ಆವರಿಸಿ ಪ್ರೇಕ್ಷಕರಾಗಿ ಕುಳಿತಿದ್ದರು. ಆ ಸಮಯದಲ್ಲಿ ಸರ್ವಪ್ರಾಣಿಗಳ ಹಿತಕಾಮಿನಿಯಾದ ನನ್ನ ತಾಯಿಯಾದ ಗಂಗಾದೇವಿಯು ನಿಜಸ್ವರೂಪವನ್ನು ಧರಿಸಿ ನನ್ನ ಬಳಿಗೆ ಬಂದು ನನ್ನನ್ನು ಪ್ರಶ್ನಿಸಿದಳು :

"ಮಗು! ನೀನೇನು ಮಾಡಬೇಕೆಂದು ಇಚ್ಛಿಸಿರುವೆ? ಕುರುಪುಂಗವನೇ! ನಾನು ನಿನ್ನ ಸಲುವಾಗಿ ಜಮದಗ್ನಿಯ ಮಗನಾದ ಪರಶುರಾಮನ ಬಳಿಗೆ ಹೋಗಿ 'ನಿನ್ನ ಶಿಷ್ಯನಾದ ಭೀಷ್ಮನೊಡನೆ ಯುದ್ಧಮಾಡಬೇಡ' – ಎಂಬುದಾಗಿ ಪುನಃ ಪುನಃ ಪ್ರಾರ್ಥಿಸುತ್ತೇನೆ. ಮಗು! ಬ್ರಾಹ್ಮಣೋತ್ತಮನಾದ ಪರಶುರಾಮನೊಡನೆ ರಣಾಂಗಣದಲ್ಲಿ ನಿಂತು ಯುದ್ಧಮಾಡಿಯೇ ತೀರುವೆನೆಂದು ಹಟಮಾಡಬೇಡ" – ಹೀಗೆ ನನ್ನ ತಾಯಿಯು ನನ್ನನ್ನು ಗದರಿಸಿದಳು. ಅವಳು ತನ್ನ ಮಾತನ್ನು ಮುಂದುವರಿಸಿ ಹೇಳಿದಳು :

**ಕಿನ್ನ ವೈ ಕ್ಷತ್ರಿಯಹಣೋ ಹರತುಲ್ಯಪರಾಕ್ರಮಃ ।**
**ವಿದಿತಃ ಪುತ್ರ ರಾಮಸ್ತೇ ಯತಸ್ತಂ ಯೋದ್ಧುಮಿಚ್ಛಸಿ ॥೯॥**

"ಮಗು! ಕ್ಷತ್ರಿಯಕುಲವಿಧ್ವಂಸಕನಾದ ಪರಶುರಾಮನು ರುದ್ರನ ಪರಾಕ್ರಮಕ್ಕೆ ಸಮಾನವಾದ ಪರಾಕ್ರಮವುಳ್ಳವನೆಂಬುದನ್ನು ನೀನರಿಯೆಯಾ? ಈ ವಿಷಯವು ನಿನಗೆ ತಿಳಿದಿದ್ದರೂ ಅವನೊಡನೆ ಯುದ್ಧ ಮಾಡಲಿಚ್ಛಿಸಿರುವೆಯೇಕೆ?" – ಎಂದು ಪ್ರಶ್ನಿಸಿದಳು.

ದುರ್ಯೋಧನ! ಅನಂತರ ನಾನು ಮೇಲೆದ್ದು ನನ್ನ ತಾಯಿಯಾದ ಗಂಗಾದೇವಿಗೆ ಅಭಿವಾದನಪೂರ್ವಕವಾಗಿ ನಮಸ್ಕರಿಸಿ ಬದ್ಧಾಂಜಲಿಯಾಗಿ ನಿಂತು, ಸ್ವಯಂವರಸಮಯದಲ್ಲಿ ನಡೆದುದೆಲ್ಲವನ್ನೂ ಯಥಾವತ್ತಾಗಿ ವಿವರಿಸಿ ಹೇಳಿದೆನು.

ಪರಶುರಾಮನನ್ನು ನಾನು ಸಾಂತ್ವನಗೊಳಿಸಲು ಪ್ರಯತ್ನಿಸಿದುದು ; ಕಾಶೀರಾಜನ ಮಗಳಾದ ಅಂಬೆಯು ಮನಸಾವರಿಸಿದ್ದ ಶಾಲ್ವರಾಜನ ಬಳಿಗೆ ಸ್ವೇಚ್ಛೆಯಿಂದಲೇ ಹೊರಟುಹೋದುದು– ಈ ಎಲ್ಲ ವಿಷಯಗಳನ್ನೂ

ನಾನು ಅವಳೊಡನೆ ಹೇಳಿದೆನು. ರಾಮನಿಂದಲೇ ಪ್ರಚೋದಿತನಾಗಿ ನಾನು ಯುದ್ಧಕ್ಕೆ ಬಂದಿರುವೆನೆಂಬ ವಿಷಯವನ್ನೂ ನಾನು ನನ್ನ ತಾಯಿಗೆ ಮನವರಿಕೆ ಮಾಡಿಕೊಟ್ಟೆನು.

ಬಳಿಕ ನನ್ನ ತಾಯಿಯಾದ, ದೇವನದಿಯಾದ, ಗಂಗಾದೇವಿಯು ರಾಮನ ಬಳಿಗೆ ಹೋಗಿ ನನ್ನ ಸಲುವಾಗಿ ಆ ಋಷಿಯನ್ನು ಕಂಡು ಕ್ಷಮೆಯನ್ನು ಯಾಚಿಸಿದಳು.

"ಭಾರ್ಗವ! ನಿನ್ನ ಪ್ರಿಯಶಿಷ್ಯನಾದ ಭೀಷ್ಮನೊಡನೆ ಯುದ್ಧಮಾಡಬೇಡ."

ಹೀಗೆ ಪ್ರಾರ್ಥಿಸಿದ ನನ್ನ ತಾಯಿಯನ್ನು ಕುರಿತು ಪರಶುರಾಮನು ಹೇಳಿದನು :

"ಗಂಗಾದೇವಿ! ಭೀಷ್ಮನನ್ನೇ ನೀನು ಯುದ್ಧದಿಂದ ವಿಮುಖನನ್ನಾಗಿ ಮಾಡು. ಅವನು, ನಾನು ಇಷ್ಟಪಟ್ಟುದನ್ನು ಮಾಡದೇ ಇದ್ದುದರಿಂದ ಅವನೊಡನೆ ಯುದ್ಧಮಾಡುವುದು ಅನಿವಾರ್ಯವಾಯಿತು."

ವೈಶಂಪಾಯನರು ಹೇಳುತ್ತಾರೆ :

"ಜನಮೇಜಯ! ಪುತ್ರವಾತ್ಸಲ್ಯದ ಕಾರಣದಿಂದ ಗಂಗಾದೇವಿಯು ಪುನಃ ಭೀಷ್ಮನ ಬಳಿಗೆ ಬಂದಳು. ಆದರೆ ಆ ಸಮಯದಲ್ಲಿ ಭೀಷ್ಮನು ಕ್ರೋಧದಿಂದ ವ್ಯಾಪ್ತವಾದ ಕಣ್ಣುಗಳುಳ್ಳವನಾಗಿದ್ದನು. ಕೋಪಾಭಿಭೂತ ನಾಗಿದ್ದನು. ಭೀಷ್ಮನು ಗಂಗೆಯು ಹೇಳಿದಂತೆ ಮಾಡಲಿಲ್ಲ. ಯುದ್ಧದಿಂದ ಹಿಂದಿರುಗಲಿಲ್ಲ. ಅನಂತರದಲ್ಲಿ ಧರ್ಮಾತ್ಮನಾದ ಭೃಗುಶ್ರೇಷ್ಠನಾದ, ಮಹಾತಪಸ್ವಿಯಾದ, ಬ್ರಾಹ್ಮಣಶಿರೋಮಣಿಯಾದ ಪರಶುರಾಮನು ಭೀಷ್ಮನ ಸಮೀಪಕ್ಕೆ ಬಂದು ಭೀಷ್ಮನನ್ನು ಯುದ್ಧಕ್ಕೆ ಆಹ್ವಾನಿಸಿದನು."

೧೭೮ನೆಯ ಅಧ್ಯಾಯವು ಮುಗಿಯಿತು.

## ಪರಶುರಾಮನು ಸಂಕಲ್ಪದಿಂದಲೇ ಸಿದ್ಧವಾದ ರಥದಲ್ಲಿ ಕುಳಿತು ಭೀಷ್ಮನೊಡನೆ ಯುದ್ಧವನ್ನಾರಂಭಿಸಿದುದು

ಜನಮೇಜಯ! ಭೀಷ್ಮನು ಮುಂದುವರಿದು ಹೇಳುತ್ತಾನೆ :

“ದುರ್ಯೋಧನ! ನಾನು ರಥದಲ್ಲಿ ಕುಳಿತಿದ್ದೆನು. ಪರಶುರಾಮನು ಭೂಮಿಯ ಮೇಲೆ ನಿಂತಿದ್ದನು. ಅವನು ವಾಹನವಿಲ್ಲದೇ ಯುದ್ಧಸನ್ನದ್ಧನಾಗಿ ನಿಂತಿರುವುದನ್ನು ನೋಡಿ ತೋರಿಕೆಯ ನಗುವಿನೊಡನೆ ಅವನನ್ನು ಕುರಿತು ಹೇಳಿದೆನು :

“ಭಾರ್ಗವ! ನಾನು ರಥದಲ್ಲಿ ಕುಳಿತಿದ್ದೇನೆ. ನೀನು ನೆಲದ ಮೇಲೆ ನಿಂತಿರುವೆ. ಈ ಸ್ಥಿತಿಯಲ್ಲಿ ನಾನು ನಿನ್ನೊಡನೆ ಯುದ್ಧಮಾಡಲು ಇಚ್ಛಿಸುವುದಿಲ್ಲ. ನನ್ನೊಡನೆ ನೀನು ಯುದ್ಧಮಾಡಲಿಚ್ಛೆಯುಳ್ಳವನಾಗಿದ್ದರೆ ರಥವನ್ನು ಹತ್ತಿಕುಳಿತುಕೋ. ಕವಚವನ್ನು ಧರಿಸು. ಮಹಾಭುಜನೇ! ರಾಮ! ನೀನು ಕವಚವನ್ನು ಧರಿಸಿ ರಥದಲ್ಲಿ ಕುಳಿತನಂತರವೇ ನಾನು ನಿನ್ನೊಡನೆ ಯುದ್ಧಮಾಡುತ್ತೇನೆ.”

ನನ್ನ ಮಾತನ್ನು ಕೇಳಿ ಪರಶುರಾಮನು ನಗುತ್ತಲೇ ಹೇಳಿದನು :

**ರಥೋ ಮೇ ಮೇದಿನೀ ಭೀಷ್ಮ ವಾಹಾ ವೇದಾಃ ಸದಶ್ವವತ್ ।**
**ಸೂತಶ್ಚ ಮಾತರಿಶ್ವಾ ವೈ ಕವಚಂ ವೇದಮಾತರಃ ।**
**ಸುಸಂವೀತೋ ರಣೇ ತಾಭಿರ್ಯೋತ್ಸ್ಯೇಽಹಂ ಕುರುನನ್ದನ ॥೪॥**

“ಕುರುನಂದನನೇ! ಭೀಷ್ಮ! ನನಗೆ ಈ ಭೂಮಿಯೇ ರಥ. ನಾಲ್ಕು ವೇದಗಳೇ ಉತ್ತಮಾಶ್ವಗಳಿಗೆ ಸದೃಶವಾದ ವಾಹನಗಳಾಗಿವೆ. ವಾಯು ದೇವನೇ ನನ್ನ ರಥದ ಸಾರಥಿಯಾಗಿದ್ದಾನೆ. ವೇದಮಾತೆಯರಾದ ಗಾಯತ್ರೀ -ಸಾವಿತ್ರೀ-ಸರಸ್ವತಿಯರೇ ನನಗೆ ಕವಚಪ್ರಾಯರಾಗಿದ್ದಾರೆ. ಇವರೆಲ್ಲ ರಿಂದಲೂ ಸಂರಕ್ಷಿತನಾಗಿ ನಾನು ನಿನ್ನೊಡನೆ ಯುದ್ಧಮಾಡುತ್ತೇನೆ.”

ದುರ್ಯೋಧನ! ಸತ್ಯವಿಕ್ರಮನಾದ ಪರಶುರಾಮನು ಹೀಗೆ ನನ್ನೊಡನೆ

ಹೇಳಿ ಮರುಕ್ಷಣದಲ್ಲಿಯೇ ದೊಡ್ಡದಾದ ಶರಸಮೂಹದಿಂದ ನನ್ನನ್ನು ಎಲ್ಲ ಕಡೆಗಳಿಂದಲೂ ಮುಚ್ಚಿಬಿಟ್ಟನು.

ಮರುಕ್ಷಣದಲ್ಲಿಯೇ ಶ್ರೇಷ್ಠವಾದ ಸರ್ವಾಯುಧಗಳಿಂದಲೂ ಸುಶೋಭಿತವಾದ, ಕಾಂತಿಯುಕ್ತವಾದ, ಪರಮಾದ್ಭುತವಾಗಿ ಕಾಣುತ್ತಿದ್ದ ದಿವ್ಯರಥದಲ್ಲಿ ಜಮದಗ್ನಿಯ ಮಗನಾದ ರಾಮನು ಕುಳಿತಿರುವುದನ್ನು ಕಂಡೆನು. ಆ ಮಹಾಪುಣ್ಯರಥವು ರಾಮನ ಮನಸ್ಸಂಕಲ್ಪದಿಂದಲೇ ಸಿದ್ಧವಾಗಿದ್ದಿತು. ಅದು ಒಂದು ನಗರದಷ್ಟೇ ವಿಸ್ತೀರ್ಣವಾಗಿದ್ದಿತು. ದಿವ್ಯಾಶ್ವಗಳಿಂದ ಯೋಜಿತವಾಗಿದ್ದಿತು. ಸ್ವರ್ಣಭೂಷಿತವಾಗಿದ್ದ ಆ ರಥವು ಸರ್ವೋಪಸ್ಕರಗಳಿಂದಲೂ ಸಮೃದ್ಧವಾಗಿದ್ದಿತು. ಪರಶುರಾಮನು ಒಂದು ಸುಂದರವಾದ ಕವಚವನ್ನೂ ಧರಿಸಿದ್ದನು. ಅದರಲ್ಲಿ ಸೂರ್ಯ ಮತ್ತು ಚಂದ್ರರ ಚಿಹ್ನೆಗಳಿದ್ದುವು. ರಾಮನು ಧನುಸ್ಸನ್ನು ಧರಿಸಿದ್ದನು. ಬೆನ್ನಿಗೆ ಬತ್ತಳಿಕೆಯನ್ನು ಬಿಗಿದಿದ್ದನು. ಗೋಧೆಯನ್ನು (ಧನುಸ್ಸಿನ ಹೆದೆಯ ಏಟು ತಗುಲದಿರಲು ತೋಳಿಗೆ ಕಟ್ಟುವ ಚರ್ಮದ ಪಟ್ಟಿಯನ್ನು) ಕಟ್ಟಿಕೊಂಡಿದ್ದನು. ಅಂಗುಲಿತ್ರವನ್ನು (ಬಿಲ್ಲಿನ ಹೆದೆಯನ್ನು ಎಳೆಯುವಾಗ ಗಾಯವಾಗದಿರಲು ಬೆರಳಿಗೆ ಹಾಕಿಕೊಳ್ಳುವ ಚರ್ಮದ ಮುಚ್ಚಳ ; ಕೈಚೀಲವನ್ನು) ಬೆರಳುಗಳಿಗೆ ತೊಟ್ಟು ಕೊಂಡಿದ್ದನು. ಪರಮಪವಿತ್ರನಾದ, ವೇದವಿದನಾದ, ಪರಶುರಾಮನಿಗೆ ಅತ್ಯಂತಪ್ರಿಯನಾದ ಅಕೃತವ್ರಣನು– ನನ್ನೊಡನೆ ಯುದ್ಧಮಾಡಲಿಚ್ಛಿಸಿ ರಥದಲ್ಲಿ ಕುಳಿತಿದ್ದ ಪರಶುರಾಮನಿಗೆ– ಸಾರಥಿಯಾದನು.

ಅನಂತರ ಪರಶುರಾಮನು 'ಯುದ್ಧಕ್ಕೆ ಬಾ, ಭೀಷ್ಮ! ಯುದ್ಧಕ್ಕೆ ಬಾ' ಎಂದು ಬಾರಿ-ಬಾರಿಗೂ ಕೂಗಿ ನನ್ನ ಮನಸ್ಸನ್ನು ಹರ್ಷಗೊಳಿಸು ತ್ತಿರುವನೋ–ಎಂಬಂತೆ ಯುದ್ಧಕ್ಕೆ ಆಹ್ವಾನಿಸುತ್ತಿದ್ದನು.

ಉದಯಕಾಲದ ಸೂರ್ಯನ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಪ್ರಕಾಶಿಸುತ್ತಿದ್ದ, ಅಜೇಯನಾದ, ಮಹಾಬಲಿಷ್ಠನಾದ, ಕ್ಷತ್ರಿಯಕುಲದ ವಿನಾಶಕನಾದ ಪರಶುರಾಮನನ್ನು ಸಂಧಿಸಿ ಪರಶುರಾಮನೊಡನೆ ಯುದ್ಧ ಮಾಡಲು ನಾನು ಏಕಾಕಿಯಾಗಿ ಮುಂದೆ ಹೋದೆನು. ಪರಶುರಾಮನು ನನ್ನ ಮೇಲೆ ಮೂರು ಬಾಣಗಳನ್ನು ಬಿಟ್ಟನಂತರ, ನಾನು ನನ್ನ ಕುದುರೆ

ಗಳನ್ನು ನಿಲ್ಲಿಸುವಂತೆ ಸಾರಥಿಗೆ ಹೇಳಿ, ಧನುಸ್ಸನ್ನು ರಥದಲ್ಲಿಯೇ ಇಟ್ಟು ರಥದಿಂದಿಳಿದು, ಕಾಲ್ನಡಿಗೆಯಲ್ಲಿಯೇ ದ್ವಿಜಸತ್ತಮನಾದ ಪರಶುರಾಮನ ಸಮೀಪಕ್ಕೆ ಹೋಗಿ, ಅವನನ್ನು ಯಥಾಯೋಗ್ಯವಾಗಿ ಪೂಜಿಸಿ ಅವನಿಗೆ ಅಭಿವಾದನಪೂರ್ವಕವಾಗಿ ನಮಸ್ಕಾರಮಾಡಿ ಬದ್ಧಾಂಜಲಿಯಾಗಿ ನಿಂತು ಈ ಮಾತುಗಳನ್ನು ಹೇಳಿದೆನು :

**ಯೋತ್ಸ್ಯೇ ತ್ವಯಾ ರಣೇ ರಾಮ ಸದೃಶೇನಾಧಿಕೇನ ವಾ ।**
**ಗುರುಣಾ ಧರ್ಮಶೀಲೇನ ಜಯಮಾಶಾಸ್ವ ಮೇ ವಿಭೋ ॥೧೪॥**

"ರಾಮ! ನನಗೆ ಸಮಾನಬಲನಾದ ಅಥವಾ ನನಗಿಂತಲೂ ಅಧಿಕಬಲನಾದ, ನನ್ನ ಪೂಜ್ಯಗುರುವಾದ, ಧರ್ಮಶೀಲನಾದ ನಿನ್ನೊಡನೆ ನಾನು ಯುದ್ಧ ಮಾಡುತ್ತೇನೆ. ವಿಭುವೇ! ಜಯಶೀಲನಾಗುವಂತೆ ನನ್ನನ್ನು ಆಶೀರ್ವದಿಸು."

ಅದಕ್ಕೆ ಭಗವಾನ್ ಪರಶುರಾಮನು ಹೇಳಿದನು :

**ಏವಮೇತತ್ಕುರುಶ್ರೇಷ್ಠ ಕರ್ತವ್ಯಂ ಭೂತಿಮಿಚ್ಛತಾ ।**
**ಧರ್ಮೋ ಹ್ಯೇಷ ಮಹಾಬಾಹೋ ವಿಶಿಷ್ಟೈಃ ಸಹ ಯುಧ್ಯತಾಮ್ ॥**

"ಕುರುಶ್ರೇಷ್ಠನೇ! ಆತ್ಮೋನ್ನತಿಯನ್ನು ಅಭಿಲಾಷಿಸುವವನು ಹೀಗೆ ಮಾಡಬೇಕಾದುದು ಕರ್ತವ್ಯವೇ ಆಗಿರುತ್ತದೆ. ತನಗಿಂತಲೂ ವಿಶಿಷ್ಟರಾದವರೊಡನೆ (ತನ್ನ ಗುರುಜನರೊಡನೆ) ಯುದ್ಧಮಾಡಬೇಕಾಗಿ ಬಂದ ಸಮಯದಲ್ಲಿ ಹೀಗೆ ಮಾಡುವುದು ಧರ್ಮವೂ ಆಗಿರುತ್ತದೆ. ಒಂದು ವೇಳೆ ನೀನೇನಾದರೂ ನನ್ನ ಬಳಿಗೆ ಬಂದು ಆಶೀರ್ವಾದವನ್ನು ಅಪೇಕ್ಷಿಸದೇ ಇದ್ದಿದ್ದರೆ ನಾನು ನಿನ್ನನ್ನು ಶಪಿಸಿಯೇ ಬಿಡುತ್ತಿದ್ದೆನು ಕೌರವ್ಯ! ಧೈರ್ಯವನ್ನವಲಂಬಿಸಿ ಪ್ರಯತ್ನಪೂರ್ವಕವಾಗಿ ಯುದ್ಧಮಾಡು. ಆದರೆ ನೀನು ವಿಜಯಶಾಲಿಯಾಗೆಂದು ಮಾತ್ರ ನಾನು ಆಶೀರ್ವದಿಸುವುದಿಲ್ಲ. ನಿನ್ನನ್ನು ಜಯಿಸುವ ಸಲುವಾಗಿಯೇ ನಾನಿಲ್ಲಿ ನಿಂತಿದ್ದೇನೆ. ಧರ್ಮದಿಂದ ಯುದ್ಧಮಾಡು. ನಿನ್ನ ಈ ಶಿಷ್ಟಾಚಾರದ ಅನುಸರಣೆಯಿಂದ ನಾನು ಸುಪ್ರೀತನಾಗಿದ್ದೇನೆ."

ಪರಶುರಾಮನು ಹೀಗೆ ಹೇಳಿದನಂತರ ನಾನು ಹಿಂದಿರುಗಿಬಂದು ನನ್ನ ರಥದಲ್ಲಿ ಕುಳಿತು ಮತ್ತೊಮ್ಮೆ ಸುವರ್ಣಖಚಿತವಾದ ಶಂಖವನ್ನು ಊದಿದೆನು.

ನಮ್ಮಿಬ್ಬರಿಗೂ ಘೋರವಾದ ಯುದ್ಧವು ಪ್ರಾರಂಭವಾಯಿತು. ಒಬ್ಬರು ಮತ್ತೊಬ್ಬರನ್ನು ಜಯಿಸಬೇಕೆಂಬ ಆಕಾಂಕ್ಷೆಯು ನಮ್ಮಿಬ್ಬರಲ್ಲಿಯೂ ಇದ್ದಿತಾದ್ದರಿಂದ ಬಹಳ ದಿವಸಗಳವರೆಗೆ ಯುದ್ಧವು ಮುಂದುವರಿಯಿತು. ಆ ಮಹಾಯುದ್ಧದಲ್ಲಿ ಪ್ರಥಮತಃ ಪರಶುರಾಮನು ಗೃಧ್ರಪಕ್ಷಿಗಳ ರೆಕ್ಕೆಗಳಿಂದಲೂ, ಬಗ್ಗಿದ್ದ ಗಿಣ್ಣುಗಳಿಂದಲೂ ಕೂಡಿದ್ದ ಒಂಬೈನೂರ ಅರುವತ್ತು ಬಾಣಗಳನ್ನು ನನ್ನ ಮೇಲೆ ಪ್ರಯೋಗಿಸಿದನು. ಬಹುಸಂಖ್ಯಾತವಾದ ಆ ಬಾಣಪ್ರಯೋಗದಿಂದ ನನ್ನ ನಾಲ್ಕು ಕುದುರೆಗಳು ಪ್ರತಿರುದ್ಧವಾದುವು (ಆಕ್ರಮಿತವಾದುವು). ನನ್ನ ಸಾರಥಿಯೂ ಬಾಣಗಳಿಂದ ಮುಚ್ಚಿಹೋದನು. ಆದರೆ ಕವಚವನ್ನು ಧರಿಸಿದ್ದ ನಾನು ಮಾತ್ರ ಸುಸ್ಥಿರನಾಗಿ ಕುಳಿತಿದ್ದೆನು. ಅನಂತರದಲ್ಲಿ ನಾನು ದೇವತೆಗಳಿಗೂ ವಿಶೇಷವಾಗಿ ಬ್ರಾಹ್ಮಣರಿಗೂ ನಮಸ್ಕರಿಸಿ ನಗುತ್ತಿರುವವನಂತೆಯೇ ತೋರ್ಪಡಿಸಿಕೊಳ್ಳುತ್ತಾ ವ್ಯವಸ್ಥಿತನಾಗಿ ರಥದಲ್ಲಿ ಕುಳಿತಿದ್ದ ಭಾರ್ಗವರಾಮನನ್ನು ಕುರಿತು ಹೇಳಿದೆನು :

"ಬ್ರಾಹ್ಮಣೋತ್ತಮನೇ! ನೀನು ಲೋಕಮರ್ಯಾದೆಯನ್ನು ಮೀರಿ ಕಾರಣವಿಲ್ಲದೆಯೇ ನನ್ನೊಡನೆ ಯುದ್ಧಸನ್ನದ್ಧನಾಗಿ ನಿಂತಿದ್ದರೂ ನಿನ್ನ ಆಚಾರ್ಯತ್ವಕ್ಕೆ ಮಾನ್ಯತೆಯನ್ನು ನೀಡಿದ್ದೇನೆ. ಧರ್ಮಸಂಗ್ರಹದ ವಿಷಯದಲ್ಲಿ ಸಂಪದ್ರೂಪವಾದ ಇನ್ನೂ ಕೆಲವು ಮುಖ್ಯವಿಷಯಗಳನ್ನು ಹೇಳುವೆನು, ಕೇಳು :

**ಯೇ ತೇ ವೇದಾಃ ಶರೀರಸ್ಥಾ ಬ್ರಾಹ್ಮಣ್ಯಂ ಯಚ್ಚ ತೇ ಮಹತ್ ।**
**ತಪಶ್ಚ ತೇ ಮಹತ್ತಪ್ತಂ ನ ತೇಭ್ಯಃ ಪ್ರಹರಾಮ್ಯಹಮ್ ॥೨೪॥**

ನಿನ್ನ ಶರೀರಸ್ಥವಾಗಿ ಯಾವ ನಾಲ್ಕು ವೇದಗಳಿವೆಯೋ, ನಿನ್ನಲ್ಲಿ ಯಾವ ಬ್ರಾಹ್ಮಣತ್ವವಿದೆಯೋ ಮತ್ತು ನೀನು ಯಾವ ಮಹತ್ತರವಾದ ತಪಸ್ಸನ್ನು ಮಾಡಿರುವೆಯೋ–ಅವುಗಳ ಮೇಲೆ ನಾನು ಬಾಣಪ್ರಯೋಗ ಮಾಡುವುದಿಲ್ಲ. ಬ್ರಾಹ್ಮಣನಾಗಿದ್ದೂ ನೀನು ಯಾವ ಕ್ಷತ್ರಿಯಧರ್ಮವನ್ನು ಆಶ್ರಯಿಸಿರುವೆಯೋ–ನಿನ್ನಲ್ಲಿರುವ ಆ ಕ್ಷತ್ರಿಯಧರ್ಮದ ಮೇಲೆ ನಾನು ಬಾಣಪ್ರಯೋಗಮಾಡುತ್ತೇನೆ.

**ಬ್ರಾಹ್ಮಣಃ ಕ್ಷತ್ರಿಯತ್ವಂ ಹಿ ಯಾತಿ ಶಸ್ತ್ರಸಮುದ್ಯಮಾತ್ ॥೨೫॥**

ಬ್ರಾಹ್ಮಣನಾದವನು ಶಸ್ತ್ರವನ್ನು ಹಿಡಿದು ನಿಲ್ಲುವುದರಿಂದ ಕ್ಷತ್ರಿಯತ್ವವನ್ನು ಹೊಂದುತ್ತಾನೆ.

ಇದರಿಂದಾಗಿ ಕ್ಷತ್ರಿಯತ್ವದ ಕುರುಹಾಗಿರುವ ನಿನ್ನ ಧನುಸ್ಸನ್ನೇ ಮೊದಲು ನನ್ನ ನಿಶಿತವಾದ ಬಾಣಗಳಿಂದ ಕತ್ತರಿಸಿಬಿಡುತ್ತೇನೆ. ವೀರನೇ! ಈಗ ನನ್ನ ಧನುಸ್ಸಿನ ಶಕ್ತಿಯನ್ನೂ ಮತ್ತು ನನ್ನ ಬಾಹುಗಳಲ್ಲಿರುವ ಬಲವನ್ನೂ ನೋಡು."

ದುರ್ಯೋಧನ! ನಾನು ಹೀಗೆ ಹೇಳಿ ಪರಶುರಾಮನ ಧನುಸ್ಸಿಗೆ ಗುರಿಯಿಟ್ಟು ಭಲ್ಲವೆಂಬ ಹೆಸರಿನ ನಿಶಿತವಾದ ಬಾಣವನ್ನು ಹೆದೆಗೇರಿಸಿ ಶಿಂಜಿನಿಯನ್ನು ಕರ್ಣಾಂತವಾಗಿ ಸೆಳೆದು ಪ್ರಯೋಗಿಸಿದೆನು. ನಾನು ಪ್ರಯೋಗಿಸಿದ ಆ ಭಲ್ಲವು ಮರುಕ್ಷಣದಲ್ಲಿಯೇ ಪರಶುರಾಮನ ಧನುಸ್ಸಿನ ಅಗ್ರಭಾಗವನ್ನು ಕತ್ತರಿಸಿ ಅದನ್ನು ಭೂಮಿಯ ಮೇಲೆ ಬೀಳಿಸಿತು. ಅದೇ ರೀತಿಯಲ್ಲಿ ಬಗ್ಗಿದ ಗಿಣ್ಣುಗಳುಳ್ಳ ರಣಹದ್ದಿನ ಗರಿಯಿಂದ ಕೂಡಿದ್ದ ನಿಶಿತವಾದ ನೂರು ಬಾಣಗಳನ್ನು ಪರಶುರಾಮನ ರಥಕ್ಕೆ ಗುರಿಯಿಟ್ಟು ಪ್ರಯೋಗಿಸಿದೆನು. ಆಕರ್ಣಾಂತವಾಗಿ ಸೆಳೆದುಬಿಟ್ಟುದರ ಜೊತೆಗೆ ವಾಯುವಿನಿಂದಲೂ ಹಾರಿಸಲ್ಪಟ್ಟ ಆ ನೂರು ಬಾಣಗಳು ಸರ್ಪಗಳೋಪಾದಿಯಲ್ಲಿ ಪರಶುರಾಮನ ಶರೀರದೊಳಗೆ ಹೊಕ್ಕು ಅವನ ಶರೀರದಿಂದ ರಕ್ತವನ್ನು ಸುರಿಸಿದುವು. ಪರಶುರಾಮನ ಶರೀರವೆಲ್ಲವೂ ಬಾಣಗಳಿಂದ ಕ್ಷತವಾಗಿದ್ದಿತು. ಆ ಗಾಯ ಗಳಿಂದ ಹೊರಬಂದರಕ್ತವು ಅವನ ಸರ್ವಾಂಗಗಳನ್ನೂ ತೋಯಿಸಿಬಿಟ್ಟಿತು. ವರ್ಷಾಕಾಲದಲ್ಲಿ ಗೈರಿಕಾದಿ ಧಾತುಗಳಿಂದ ಮಿಶ್ರಿತವಾದ ನೀರನ್ನು ಪ್ರವಾಹರೂಪವಾಗಿ ವಿಸರ್ಜಿಸುವ ಮೇರುಪರ್ವತದಂತೆ–ರಕ್ತಸಿಕ್ತನಾಗಿದ್ದ, ರಕ್ತಪ್ರವಾಹದಿಂದ ಕೂಡಿದ್ದ ಪರಶುರಾಮನು ಪ್ರಕಾಶಿಸಿದನು. ಹೇಮಂತರ್ತುವಿನ ಅಂತ್ಯದಲ್ಲಿ ಕೆಂಪಾದ ಕುಸುಮಗಳ ಗೊಂಚಲುಗಳಿಂದ ಅಲಂಕೃತವಾಗಿರುವ ಅಶೋಕವೃಕ್ಷದಂತೆ ಮತ್ತು ವಿಕಸಿತವಾದ ಹೂಗಳಿಂದ ಕೂಡಿರುವ ಮುತ್ತುಗದ ಮರದಂತೆ–ಪರಶುರಾಮನು ಪ್ರಕಾಶಿಸಿದನು. ಅನಂತರದಲ್ಲಿ ಕ್ರೋಧಮೂರ್ಛಿತನಾದ ಪರಶುರಾಮನು ಮತ್ತೊಂದು ಧನುಸ್ಸನ್ನು ತೆಗೆದು

ಕೊಂಡು ಸುವರ್ಣಮಯವಾದ ರೆಕ್ಕೆಗಳಿಂದ ಕೂಡಿದ್ದ ಬಹುಚೂಪಾಗಿದ್ದ ಬಾಣಗಳ ಮಳೆಯನ್ನೇ ನನ್ನ ಮೇಲೆ ಸುರಿಸಿದನು. ರೌದ್ರಾಕಾರವಾಗಿದ್ದ ಬಹುಪ್ರಕಾರವಾಗಿ ಮರ್ಮಸ್ಥಳಗಳನ್ನು ಭೇದಿಸುವ ಸಾಮರ್ಥ್ಯವನ್ನು ಹೊಂದಿದ್ದ, ಮಹಾವೇಗಯುಕ್ತವಾಗಿದ್ದ ಸರ್ಪಾಗ್ನಿ–ವಿಷಗಳಿಗೆ ಸಮಾನವಾಗಿದ್ದ ನಿಶಿತವಾದ ಆ ಬಾಣಗಳು ನನ್ನ ಮೇಲೆ ಮಳೆಯ ರೂಪದಲ್ಲಿ ಬಿದ್ದು ನನ್ನನ್ನು ನಡುಗಿಸಿಬಿಟ್ಟುವು. ಮರುಕ್ಷಣದಲ್ಲಿಯೇ ನಾನು ರಾಮಬಾಣಪ್ರಹಾರದಿಂದ ಭ್ರಮಿಸಿದ್ದ ನನ್ನ ಬುದ್ಧಿಯನ್ನು ಹತೋಟಿಗೆ ತಂದುಕೊಂಡು ಯುದ್ಧಕ್ಕೆ ಸಜ್ಜಾಗಿ ನಿಂತು ರಾಮನನ್ನು ತಡೆದು ನಿಲ್ಲಿಸಿ ಆತನ ಮೇಲೆ ಬಹುವಾಗಿ ಕೋಪಗೊಂಡು ಶತಸಂಖ್ಯಾಕವಾದ ಬಾಣಗಳಿಂದ ಆತನನ್ನು ಮುಚ್ಚಿಬಿಟ್ಟೆನು. ಅಗ್ನಿ, ಸೂರ್ಯ ಮತ್ತು ವಿಷಸರ್ಪಗಳಿಗೆ ಸದೃಶವಾದ, ಬಹುತೀಕ್ಷ್ಣವಾದ ನನ್ನ ಬಾಣಗಳಿಂದ ಪ್ರಹೃತನಾದ ಪರಶುರಾಮನು ಕ್ಷಣಕಾಲ ಮೂರ್ಛಿತನಾದಂತೆಯೇ ದಿಕ್ಕುತೋಚದೇ ಕುಳಿತುಬಿಟ್ಟನು. ರಾಮನ ಆ ಚಿಂತಾಜನಕಸ್ಥಿತಿಯನ್ನು ನೋಡಿ ಕೃಪಾಪೂರ್ಣನಾಗಿ ನನ್ನನ್ನೇ ನಾನು ತಡೆಹಿಡಿದು, ಮುಂದೆ ಬಾಣಬಿಡಲು ಯತ್ನಿಸದೆ 'ಯುದ್ಧಕ್ಕೆ ಧಿಕ್ಕಾರವಿರಲಿ! ಕ್ಷತ್ರಿಯಧರ್ಮಕ್ಕೆ ಧಿಕ್ಕಾರವಿರಲಿ!' – ಎಂಬುದಾಗಿ ಉದ್ಗಾರಮಾಡಿದೆನು. ಶೋಕಾಧಿಕ್ಯದಿಂದ ವ್ಯಾಕುಲನಾಗಿದ್ದ ನಾನು ಒಂದು ಬಾರಿಯಲ್ಲ ; ಹತ್ತಾರು ಬಾರಿ ಹಾಗೆಯೇ ಹೇಳಿಕೊಂಡು ಕೊರಗಿದೆನು.

**ಅಹೋ ಬತ ಕೃತಂ ಪಾಪಂ ಮಯೇದಂ ಕ್ಷತ್ರಧರ್ಮಣಾ ।**
**ಗುರುರ್ದ್ವಿಜಾತಿರ್ಧರ್ಮಾತ್ಮಾ ಯದೇವಂ ಪೀಡಿತಃ ಶರೈಃ ॥೩೭॥**

'ಕ್ಷತ್ರಧರ್ಮರತನಾದ ನಾನು ಮಹಾಪಾಪವನ್ನು ಮಾಡಿಬಿಟ್ಟೆನು. ನನ್ನ ಗುರುವಾದ, ಮೇಲಾಗಿ ಬ್ರಾಹ್ಮಣನಾದ, ಅದಕ್ಕಿಂತಲೂ ಮಿಗಿಲಾಗಿ ಧರ್ಮಾತ್ಮನಾದ ಇವನನ್ನು ನಾನು ನಿಶಿತವಾದ ಬಾಣಗಳಿಂದ ಮೂರ್ಛೆ ಹೊಂದುವ ರೀತಿಯಲ್ಲಿ ಪೀಡಿಸಿಬಿಟ್ಟೆನಲ್ಲವೇ? ಅಯ್ಯೋ! ಕ್ಷತ್ರಧರ್ಮಕ್ಕೂ ಧಿಕ್ಕಾರವಿರಲಿ ; ಯುದ್ಧಕ್ಕೂ ಧಿಕ್ಕಾರವಿರಲಿ!'

ದುರ್ಯೋಧನ! ಪುನಃ ನಾನು ಪರಶುರಾಮನ ಮೇಲೆ ಬಾಣಪ್ರಯೋಗ ಮಾಡಲಿಲ್ಲ. ಆ ವೇಳೆಗೆ ಸರಿಯಾಗಿ ಪೃಥ್ವಿಯನ್ನು ತಾಪನಗೊಳಿಸುತ್ತಿದ್ದ

ಸೂರ್ಯನು ಹಗಲಿನ ಕೊನೆಯಲ್ಲಿ ಅಸ್ತಂಗತನಾದನು. ಆ ಕಾರಣದಿಂದಾಗಿ ಯುದ್ಧವೂ ಅಂದಿಗೆ ಉಪರತವಾಯಿತು."

೧೮೯ನೆಯ ಅಧ್ಯಾಯವು ಮುಗಿಯಿತು.

೧೯೦ನೆಯ ಅಧ್ಯಾಯ ಅಮ್ಬೋಪಾಖ್ಯಾನಪರ್ವ (ಮುಂದುವರಿದಿದೆ)

## ಭೀಷ್ಮ-ಪರಶುರಾಮರ ಘೋರಯುದ್ಧ

ಭೀಷ್ಮನು ಮುಂದುವರಿದು ಹೇಳುತ್ತಾನೆ :

"ದುರ್ಯೋಧನ! ಕುಶಲನಾಗಿಯೂ ಸರ್ವಸಮ್ಮತನಾಗಿಯೂ ಇದ್ದ ನನ್ನ ರಥದ ಸಾರಥಿಯು ಯುದ್ಧಕ್ಕೆ ತಾತ್ಕಾಲಿಕವಾಗಿ ವಿರಾಮಸಿಕ್ಕಿದ ವೇಳೆಯಲ್ಲಿ ತನ್ನ ಮತ್ತು ನನ್ನ ಶರೀರದ ಒಳಹೊಕ್ಕಿದ್ದ ಬಾಣಗಳನ್ನು ಹೊರ ತೆಗೆದು ಕುದುರೆಗಳ ಶರೀರಗಳಲ್ಲಿ ನಾಟಿದ್ದ ಬಾಣಗಳನ್ನೂ ಹೆಚ್ಚು ತೊಂದರೆಯಾಗದ ರೀತಿಯಲ್ಲಿ ಹೊರತೆಗೆದನು. ಅನಂತರ ಸಾರಥಿಯು ಕುದುರೆಗಳನ್ನು ಸ್ವಲ್ಪ ಹೊತ್ತು ತಿರುಗಾಡಿಸಿ ಸ್ನಾನಮಾಡಿಸಿದನು. ಬಳಿಕ ಸೂತನು ಅವುಗಳಿಗೆ ನೀರುಕುಡಿಸಿ ದಣಿವಾರಿಸಿಕೊಳ್ಳುವಂತೆ ಮಾಡಿದನು. ಆ ರಾತ್ರಿಯಲ್ಲಿ ಕುದುರೆಗಳೂ ವಿಶ್ರಾಂತಿಯನ್ನು ಪಡೆದುವು.

ದುರ್ಯೋಧನ! ಸೂರ್ಯನುದಯಿಸಿ ಬೆಳಗಾಗುತ್ತಲೇ ಪುನಃ ಯುದ್ಧವು ಪ್ರಾರಂಭವಾಯಿತು.

ಕವಚವನ್ನು ಧರಿಸಿ ರಥದಲ್ಲಿ ಕುಳಿತು ಬಹುಶೀಘ್ರವಾಗಿ ಯುದ್ಧಕ್ಕೆ ಬರುತ್ತಿದ್ದ ನನ್ನನ್ನು ಕಂಡು ಪ್ರತಾಪವಂತನಾದ ಪರಶುರಾಮನು ತನ್ನ ರಥವನ್ನು ಅತ್ಯಂತವ್ಯವಸ್ಥಿತವಾಗಿ ಸಜ್ಜುಗೊಳಿಸಿದನು.

ರಾಮನು ಸಮರಾಕಾಂಕ್ಷಿಯಾಗಿ ಬರುತ್ತಿರುವುದನ್ನು ನೋಡಿ ಒಡನೆಯೇ ನಾನು ನನ್ನ ಕೈಲಿದ್ದ ಶ್ರೇಷ್ಠಧನುಸ್ಸನ್ನು ಬದಿಗಿಟ್ಟು ರಥದಿಂದ ಕೆಳಗಿಳಿದೆನು. ಹಿಂದಿನಂತೆಯೇ ನಾನು ನನ್ನ ಆಚಾರ್ಯನಾದ ರಾಮನಿಗೆ ಅಭಿವಾದನಪೂರ್ವಕವಾಗಿ ನಮಸ್ಕಾರಮಾಡಿ ರಥವನ್ನು ಹತ್ತಿಕುಳಿತು ಯುದ್ಧಮಾಡುವ ಇಚ್ಛೆಯಿಂದ ಪರಶುರಾಮನ ಸಮ್ಮುಖದಲ್ಲಿ ನಿರ್ಭಯ

ನಾಗಿ ನನ್ನ ರಥವನ್ನು ನಿಲ್ಲಿಸಿದೆನು. ಮರುಕ್ಷಣದಲ್ಲಿಯೇ ನಾನು ಧನುಸ್ಸನ್ನೆತ್ತಿಕೊಂಡು ಬಾಣಗಳ ಭಾರಿಮಳೆಯನ್ನೇ ಸುರಿಸಿದೆನು. ಆ ರೀತಿಯಲ್ಲಿ ಬಾಣಗಳ ಮಳೆಗರೆಯುತ್ತಿದ್ದ ನನ್ನನ್ನು ಪರಶುರಾಮನೂ ಬಾಣಗಳ ಮಳೆಯಿಂದ ಮುಚ್ಚಿದನು. ಸಂಕ್ರುದ್ಧನಾಗಿದ್ದ ಪರಶುರಾಮನು ಸರ್ಪಗಳೋಪಾದಿಯಲ್ಲಿ ಪ್ರದೀಪ್ತವಾದ ಮುಖಗಳನ್ನು ಹೊಂದಿದ್ದ, ಘೋರರೂಪವಾಗಿದ್ದ ಬಹುತೀಕ್ಷ್ಣವಾಗಿ ಮಾಡಲ್ಪಟ್ಟಿದ್ದ ಬಾಣಗಳನ್ನು ನನ್ನ ಮೇಲೆ ಪುನಃ ಪ್ರಯೋಗಿಸಿದನು. ಅನಂತರ ನಾನು ನಿಶಿತವಾದ ಭಲ್ಲವೆಂಬ ಬಾಣಗಳಿಂದ ರಾಮನು ಬಿಡುತ್ತಿದ್ದ ಬಾಣಗಳನ್ನು ಅಂತರಿಕ್ಷದಲ್ಲಿಯೇ ನೂರಾರು-ಸಾವಿರಾರು ಚೂರುಗಳನ್ನಾಗಿ ಕತ್ತರಿಸಿಬಿಡುತ್ತಿದ್ದೆನು. ಅವನು ಸುತೀಕ್ಷ್ಣವಾದ ಬಾಣಗಳನ್ನು ಬಿಡುವುದು ಮತ್ತು ನಾನು ಅವುಗಳನ್ನು ಅರ್ಧದಾರಿಯಲ್ಲಿಯೇ ನನ್ನ ನಿಶಿತವಾದ ಬಾಣಗಳಿಂದ ತುಂಡು-ತುಂಡಾಗಿ ಕತ್ತರಿಸಿಬಿಡುವುದು – ಈ ಕ್ರಿಯೆಯು ಪುನಃ ಪುನಃ ನಡೆಯುತ್ತಲೇ ಇದ್ದಿತು. ಕೇವಲ ಬಾಣಗಳ ಪ್ರಯೋಗದಿಂದ ಪ್ರಯೋಜನವಾಗದಿರುವುದನ್ನು ಕಂಡು ಪ್ರತಾಪವಂತನಾದ, ಜಮದಗ್ನಿಯ ಮಗನಾದ ಪರಶುರಾಮನು ದಿವ್ಯವಾದ ಅಸ್ತ್ರಗಳನ್ನು ನನ್ನ ಮೇಲೆ ಪ್ರಯೋಗಿಸಲು ಉಪಕ್ರಮಿಸಿದನು. ಅವನಿಗಿಂತಲೂ ಅಧಿಕಪರಾಕ್ರಮಿಯೆಂಬುದನ್ನು ತೋರಿಸಿಕೊಳ್ಳುವ ಸಲುವಾಗಿ ಅವನು ಬಿಡುತ್ತಿದ್ದ ದಿವ್ಯಾಸ್ತ್ರಗಳಿಗೆ ಪ್ರತಿಯಾಗಿ ನಾನೂ ಪ್ರತ್ಯಸ್ತ್ರಗಳನ್ನು ಪ್ರಯೋಗಿಸಿ ಆ ದಿವ್ಯಾಸ್ತ್ರಗಳೆಲ್ಲವನ್ನೂ ನಿಷ್ಕ್ರಿಯಗೊಳಿಸು ತ್ತಿದ್ದೆನು. ಆ ಸಮಯದಲ್ಲಿ ಆಕಾಶದ ಸುತ್ತಲೂ ಕಲಕಲನಿನಾದ ವುಂಟಾಯಿತು. ಅನಂತರ ನಾನು ಮಂತ್ರಪುನಶ್ಚರಣಮಾಡಿ ಜಾಮದಗ್ನ್ಯನ ಮೇಲೆ ವಾಯವ್ಯಾಸ್ತ್ರವನ್ನು ಪ್ರಯೋಗಿಸಿದೆನು. ರಾಮನು ಅದಕ್ಕೆ ಪ್ರತ್ಯಸ್ತ್ರವಾದ ಗುಹ್ಯಕಾಸ್ತ್ರದಿಂದ ನಾನು ಪ್ರಯೋಗಿಸಿದ್ದ ವಾಯವ್ಯಾಸ್ತ್ರವನ್ನು ನಿವಾರಿಸಿ ದನು. ಒಡನೆಯೇ ವಾಯವ್ಯಾಸ್ತ್ರವು ನಿಷ್ಕ್ರಿಯವಾಯಿತು. ಅನಂತರದಲ್ಲಿ ನಾನು ಆಗ್ನೇಯಾಸ್ತ್ರವನ್ನು ಅಭಿಮಂತ್ರಿಸಿ ರಾಮನ ಮೇಲೆ ಪ್ರಯೋಗಿಸಿದೆನು. ಒಡನೆಯೇ ರಾಮನು ಆಗ್ನೇಯಾಸ್ತ್ರಕ್ಕೆ ಪ್ರತ್ಯಸ್ತ್ರವಾದ ವಾರುಣಾಸ್ತ್ರ ಪ್ರಯೋಗದಿಂದ ಆಗ್ನೇಯಾಸ್ತ್ರದ ಪ್ರಹಾರವನ್ನು ನಿವಾರಿಸಿಕೊಂಡನು.

ಅದೇ ರೀತಿಯಲ್ಲಿ ರಾಮನು ಬಿಡುತ್ತಿದ್ದ ದಿವ್ಯಾಸ್ತ್ರಗಳನ್ನು ಪ್ರತ್ಯಸ್ತ್ರಗಳ ಪ್ರಯೋಗದಿಂದ ನಾನೂ ನಿರಸನಗೊಳಿಸುತ್ತಿದ್ದೆನು.

ಅಂತೆಯೇ ಅರಿಂದಮನಾದ, ತೇಜಸ್ವಿಯಾದ ರಾಮನೂ ನಾನು ಬಿಡುತ್ತಿದ್ದ ಮಹಾಸ್ತ್ರಗಳನ್ನು ಅವುಗಳಿಗೆ ತಕ್ಕುದಾದ ಪ್ರತ್ಯಸ್ತ್ರಗಳಿಂದ ಪ್ರತಿರೋಧಿಸುತ್ತಿದ್ದನು. ದುರ್ಯೋಧನ! ಅನಂತರ ಬಹುಕ್ರುದ್ಧನಾದ, ಜಮದಗ್ನಿಯ ಮಗನಾದ, ಪ್ರತಾಪವಂತನಾದ, ದ್ವಿಜೋತ್ತಮನಾದ ಪರಶುರಾಮನು ನನ್ನನ್ನು ಎಡಕ್ಕೆ ಬಿಟ್ಟುಕೊಂಡು ನನ್ನ ಎದೆಗೆ ಗುರಿಯಿಟ್ಟು ಬಾಣಗಳಿಂದ ಪ್ರಹರಿಸಿದನು.

ಭರತಶ್ರೇಷ್ಠನೇ! ಪರಶುರಾಮನು ನನ್ನ ವಕ್ಷಸ್ಥಳಕ್ಕೆ ಗುರಿಯಿಟ್ಟು ಬಾಣಪ್ರಯೋಗಮಾಡಿದೊಡನೆಯೇ ನಾನು ಉತ್ತಮೋತ್ತಮವಾದ ನನ್ನ ರಥದಲ್ಲಿ ಸುಮ್ಮನೇ ಕುಳಿತುಬಿಟ್ಟೆನು. ಮೂರ್ಛಿತನಾಗಿ ಕೆಳಗೆ ಬೀಳುವುದರಲ್ಲಿದ್ದ ನನ್ನನ್ನು ಕಂಡು ಸಾರಥಿಯು ಬಹುಶೀಘ್ರವಾಗಿ ಬೇರೆಯೆಡೆಗೆ ನನ್ನ ರಥವನ್ನು ಒಯ್ದನು. ರಾಮನ ಬಾಣಗಳ ಪ್ರಹಾರಗಳಿಂದ ಬಹುಪೀಡಿತನಾಗಿ ಆಯಾಸಗೊಂಡಿದ್ದ ಮತ್ತು ಗಾಯಗೊಂಡು ಮೂರ್ಛಿತನಾಗಿದ್ದ ಮತ್ತು ಅದೇ ಕಾರಣದಿಂದ ಸಾರಥಿಯಿಂದ ಒಯ್ಯಲ್ಪಟ್ಟು ರಣಾಂಗಣದಿಂದ ಬಹುವೇಗವಾಗಿ ಹೊರಟುಹೋದ ನನ್ನನ್ನು ನೋಡಿ ಅಕೃತವ್ರಣನೇ ಮೊದಲಾದ ಪರಶುರಾಮನ ಅನುಚರರೂ ಮತ್ತು ಕಾಶೀರಾಜಕುಮಾರಿಯಾದ ಅಂಬೆಯೂ ಸಂತೋಷದಿಂದ ಕೂಗಾಡಿದರು.

ಅನಂತರದಲ್ಲಿ ಮೂರ್ಛೆಯಿಂದ ಎಚ್ಚೆತ್ತ ನಾನು ಎಲ್ಲ ವಿಷಯವನ್ನೂ ಸಾರಥಿಯಿಂದ ಕೇಳಿ ತಿಳಿದುಕೊಂಡು ಸೂತನನ್ನು ಕುರಿತು ಹೇಳಿದೆನು :

"ಸೂತ! ರಾಮನಿರುವೆಡೆಗೆ ಈಗಲೇ ರಥವನ್ನು ಒಯ್ಯುವವನಾಗು. ಈಗ ನನಗೆ ವೇದನೆಯೇನೂ ಇರುವುದಿಲ್ಲ.; ರಾಮನೊಡನೆ ಯುದ್ಧಮಾಡಲು ಸಿದ್ಧನಾಗಿದ್ದೇನೆ." ನಾನು ಹೀಗೆ ಹೇಳಿದನಂತರ ನಡಿಗೆಯಲ್ಲಿ ಗಾಳಿಗೆ ಸಮಾನವಾದ ವೇಗದಿಂದ ಕೂಡಿದ್ದ, ನೃತ್ಯಮಾಡುತ್ತಿವೆಯೋ ಎಂಬಂತೆ ತಾಳಬದ್ಧವಾಗಿ ಕಾಲುಗಳನ್ನಿಟ್ಟುಕೊಂಡು ಮುನ್ನಡೆಯುತ್ತಿದ್ದ, ಪರಮಶೋಭನ ವಾದ ಕುದುರೆಗಳಿಂದ ಯುಕ್ತವಾಗಿದ್ದ ರಥದಲ್ಲಿ ಕುಳಿತಿದ್ದ ನನ್ನನ್ನು ಸಾರಥಿಯು

ಯುದ್ಧಭೂಮಿಗೊಯ್ದನು. ರಾಮನ ಸಮೀಪಕ್ಕೆ ಹೋದೊಡನೆಯೇ ಪರಮಕ್ರುದ್ಧನಾಗಿದ್ದ ನಾನು ಕೋಪಾಭಿಭೂತನಾಗಿದ್ದ ಪರಶುರಾಮನನ್ನು ಜಯಿಸುವ ಇಚ್ಛೆಯಿಂದ ಬಾಣಗಳ ಮಳೆಯನ್ನೇ ಆ ಪರಶುರಾಮನ ಮೇಲೆ ಸುರಿಸಿಬಿಟ್ಟೆನು. ವಕ್ರಗತಿಯಿಲ್ಲದೇ ನೇರವಾಗಿ ಲಕ್ಷ್ಯದ ಕಡೆಗೇ ವೇಗವಾಗಿ ಹೋಗುತ್ತಿದ್ದ ಬಾಣಗಳನ್ನು–ಅವು ಬೀಳುವುದರೊಳಗಾಗಿಯೇ–ಪರಶುರಾಮನು ತನ್ನ ಬಾಣಗಳಿಂದ, ನಾನು ಬಿಟ್ಟ ಒಂದೊಂದು ಬಾಣವನ್ನೂ ಮೂರು-ಮೂರು ತುಂಡುಗಳಾಗಿ ಕತ್ತರಿಸಿಬಿಟ್ಟನು.

ನನ್ನಿಂದ ಬಿಡಲ್ಪಟ್ಟ ತೀಕ್ಷ್ಣಾಗ್ರವುಳ್ಳ ನೂರಾರು ಬಾಣಗಳು ರಾಮನ ಬಾಣಗಳಿಂದ ಎರಡು ಕಡೆಗಳಲ್ಲಿ ಕತ್ತರಿಸಲ್ಪಟ್ಟು ಒಂದೊಂದು ಬಾಣವೂ ಮೂರು ಮೂರು ತುಂಡುಗಳಾದುವು. ಅಂತಹ ಬಾಣಗಳ ತುಂಡುಗಳು ಸಾವಿರಾರು ಸಂಖ್ಯೆಯಲ್ಲಿ ತೊಪ-ತೊಪನೆ ಕೆಳಕ್ಕೆ ಬಿದ್ದುವು. ಅದನ್ನು ನೋಡಿ ಬೇಸರಗೊಂಡ ನಾನು ಪ್ರದೀಪ್ತವಾಗಿದ್ದ, ಕಣ್ಣುಕೋರೈಸುವ ಪ್ರಭೆಯಿಂದ ಕೂಡಿದ್ದ, ಕಾಲಾಗ್ನಿಗೆ ಸಮಾನವಾದ ಬಾಣವೊಂದನ್ನು ಪರಶುರಾಮನನ್ನು ಹಿಂಸಿಸುವ ಇಚ್ಛೆಯಿಂದಲೇ ಧನುಸ್ಸಿನ ಹೆದೆಗೇರಿಸಿ ಕರ್ಣಾಂತವಾಗಿ ಸೆಳೆದುಬಿಟ್ಟೆನು. ನಾನು ಬಿಟ್ಟ ಆ ಬಾಣವು ಅವನ ಶರೀರದಲ್ಲಿ ಬಹಳ ಗಾಢವಾಗಿ ನೆಟ್ಟುಕೊಂಡಿತು. ಬಾಣದ ವೇಗಕ್ಕೆ ವಶನಾಗಿ ಹೋದ (ವೇಗಯುಕ್ತವಾದ ಬಾಣದಿಂದ ಪ್ರಹೃತನಾದ) ರಾಮನು ಒಡನೆಯೇ ಮೂರ್ಛೆಹೊಂದಿ ಕೆಳಕ್ಕೆ ಬಿದ್ದುಬಿಟ್ಟನು. ರಾಮನು ಭೂಮಿಯ ಮೇಲೆ ಬಿದ್ದೊಡನೆಯೇ ಸರ್ವತ್ರ ಹಾಹಾಕಾರವುಂಟಾಯಿತು. ಸೂರ್ಯನು ತನ್ನ ಪಥದಿಂದ ಕೆಳಕ್ಕೆ ಬಿದ್ದುಬಿಟ್ಟರೆ ವಿಶ್ವವೇ ಉದ್ವಿಗ್ನವಾಗುವಂತೆ–ಪರಶುರಾಮನು ರಥದಿಂದ ಬಿದ್ದೊಡನೆಯೇ ಜಗತ್ತು ಉದ್ವೇಗಗೊಂಡಿತು. ಉದ್ವಿಗ್ನರಾದ ತಪೋಧನರೂ ಮತ್ತು ಕಾಶೀರಾಜನ ಮಗಳೂ ಒಡನೆಯೇ ಪರಶುರಾಮನ ಸಮೀಪಕ್ಕೆ ಧಾವಿಸಿದರು.

ತಪಸ್ವಿಗಳಲ್ಲೊಬ್ಬರು ನೆಲದ ಮೇಲೆ ಬಿದ್ದಿದ್ದ ರಾಮನನ್ನು ಎತ್ತಿಕೊಂಡರು. ಮತ್ತೊಬ್ಬರು ಗಾಳಿಬೀಸುತ್ತಿದ್ದರು. ಇನ್ನೊಬ್ಬರು ತಣ್ಣೀರು ತಂದು ಶೈತ್ಯೋಪಚಾರಮಾಡಿದರು. 'ರಾಮ! ವಿಜಯೀಭವ' ಎಂಬು

ದಾಗಿ ಹೇಳುತ್ತಾ ಮತ್ತೆ ಕೆಲವು ತಪಸ್ವಿಗಳು ಆಶೀರ್ವಾದಮಾಡುತ್ತಿದ್ದರು. ಈ ರೀತಿಯಲ್ಲಿ ತಪಸ್ವಿಗಳೆಲ್ಲರೂ ರಾಮನ ಸುತ್ತಲೂ ಕುಳಿತು ಅವನನ್ನು ಆಶ್ವಸಿಸಿದರು. ಸ್ವಲ್ಪಹೊತ್ತು ಕಳೆದನಂತರದಲ್ಲಿ ತಪಸ್ವಿಗಳು ಮಾಡಿದ ಶೈತ್ಯೋಪಚಾರಗಳಿಂದ ರಾಮನು ಪುನಶ್ಚೇತನವನ್ನು ಹೊಂದಿ ಎದ್ದುನಿಂತು ಧನುಸ್ಸಿನಲ್ಲಿ ಬಾಣವನ್ನು ಯೋಜಿಸಿ ವ್ಯಾಕುಲಯುಕ್ತವಾದ ಈ ಮಾತನ್ನು ಹೇಳಿದನು :

'ತಿಷ್ಠ ಭೀಷ್ಮ ! ಹತೋऽಸಿ'-'ನಿಲ್ಲು ಭೀಷ್ಮ! ನೀನೀಗ ಸತ್ತೇ ಹೋದೆ. ನೀನಿನ್ನು ಖಂಡಿತವಾಗಿಯೂ ಉಳಿಯಲಾರೆ' – ಹೀಗೆ ಹೇಳಿ ಅವನು ಬಿಟ್ಟ ಬಾಣವು ಬಹುಶೀಘ್ರವಾಗಿ ಬಂದು ನನ್ನ ಎಡಪಾರ್ಶ್ವಕ್ಕೆ ನೆಟ್ಟುಕೊಂಡಿತು. ಅದರಿಂದ ನಾನು ಗಾಳಿಯ ಆಘಾತಕ್ಕೆ ಸಿಕ್ಕಿದ ವೃಕ್ಷದಂತೆಯೇ ತತ್ತರಿಸಿಹೋದೆನು. ರಾಮನು ಅಷ್ಟರಿಂದಲೇ ತೃಪ್ತನಾಗಲಿಲ್ಲ. ಪುನಃ ಶೀಘ್ರಾಸ್ತ್ರಗಳನ್ನು ಪ್ರಯೋಗಿಸಿ ನನ್ನ ರಥದ ಕುದುರೆಗಳನ್ನು ಸಂಹರಿಸಿಬಿಟ್ಟನು. ಭಯರಹಿತನಾದ ರಾಮನು ರೆಕ್ಕೆಗಳಿಂದ ಕೂಡಿದ ಬಾಣಗಳಿಂದ ನನ್ನನ್ನು ಪುನಃ ಮುಚ್ಚಿದನು. ಅನಂತರ ನಾನೂ ಯುದ್ಧದಲ್ಲಿ ಎದುರಾಳಿಯಿಂದ ಬರುವ ಬಾಣಗಳನ್ನು ನಿರೋಧಿಸಲು ಸಮರ್ಥವಾದ ಶೀಘ್ರಾಸ್ತ್ರಗಳನ್ನು ಪ್ರಯೋಗಿಸಿದೆನು. ರಾಮನಿಂದಲೂ ಮತ್ತು ನನ್ನಿಂದಲೂ ಬಿಡಲ್ಪಟ್ಟ ಆ ಬಾಣಗಳು ಒಂದು ಮತ್ತೊಂದನ್ನು ಪ್ರತಿರೋಧಿಸುತ್ತಾ ಆಕಾಶವನ್ನೇ ಆವರಿಸಿ ನಿಂತುಬಿಟ್ಟುವು. ನಾವು ಬಿಟ್ಟ ಬಾಣಗಳ ಸಮೂಹದಿಂದ ಆಕಾಶವೇ ಆವೃತವಾಗಿದ್ದುದರಿಂದ ಸೂರ್ಯನು ಬೆಳಗುತ್ತಿರಲಿಲ್ಲ (ಸೂರ್ಯಕಿರಣಗಳೇ ನೆಲದ ಮೇಲೆ ಬೀಳುತ್ತಿರಲಿಲ್ಲ). ಮೇಘಗಳ ಆಚ್ಛಾದನೆಯಿಂದಾಗಿ ಗಾಳಿಯ ಬೀಸುವಿಕೆಗೆ ಪ್ರತಿರೋಧವಾಗುವಂತೆ–ನಾವು ಬಿಟ್ಟ ಶರಜಾಲದಿಂದಾಗಿ ವಾಯುವಿನ ಗತಿಯೂ ನಿರುದ್ಧವಾಯಿತು. ನಾವು ಬಿಟ್ಟ ಬಾಣಗಳ ಮೇಲೆ ಸೂರ್ಯ ಕಿರಣಗಳು ನೇರವಾಗಿ ಬಿದ್ದು, ವಾಯುವಿನ ಪ್ರಕಂಪನದಿಂದಾಗಿ ಬಾಣಗಳ ಪರಸ್ಪರಸಂಘರ್ಷವೂ ಆಗುತ್ತಿದ್ದುದರಿಂದ ಬೆಂಕಿಯು ಹೊತ್ತಿಕೊಂಡಿತು. ಪರಸ್ಪರಸಂಘರ್ಷದಿಂದ ಉತ್ಪನ್ನವಾದ ಬೆಂಕಿಯಿಂದಲೇ ಆ ಬಾಣ ಗಳು ಹೊತ್ತಿಕೊಂಡು ಧಗ-ಧಗನೆ ಉರಿದು ಭಸ್ಮೀಭೂತವಾಗಿ ನೆಲದ ಮೇಲೆ ಬಿದ್ದುವು. ಇದಾದನಂತರ ರಾಮನು–ನೂರು, ಸಾವಿರ, ಹತ್ತು

ಸಾವಿರ, ಲಕ್ಷ, ದಶಲಕ್ಷ, ಕೋಟಿ, ದಶಕೋಟಿ, ಶತಕೋಟಿ, ಅರ್ಬುದ, ಖರ್ವ, ನಿಖರ್ವಸಂಖ್ಯಾಕವಾದ ಬಾಣಗಳನ್ನು ನನ್ನ ಮೇಲೆ ಸತತವಾಗಿ ಪ್ರಯೋಗಿಸಿದನು. ಅಷ್ಟು ಅಪರಿಮಿತಸಂಖ್ಯೆಯ ಬಾಣಗಳನ್ನೂ ನಾನು ವಿಷಸರ್ಪಗಳಿಗೆ ಸಮಾನವಾದ ಬಹುತೀಕ್ಷ್ಣವಾದ ಬಾಣಗಳಿಂದ ಕತ್ತರಿಸಿದೆನು. ನನ್ನಿಂದ ಕತ್ತರಿಸಲ್ಪಟ್ಟ ಆ ಬಾಣಗಳು ಪರ್ವತೋಪಮವಾಗಿ ಭೂಮಿಯ ಮೇಲೆ ಬಿದ್ದುವು. ಭರತಸತ್ತಮನೇ! ಈ ಪರಿಯಾಗಿ ನನಗೂ ಮತ್ತು ರಾಮನಿಗೂ ಭಯಂಕರವಾದ ಯುದ್ಧವು ನಡೆಯಿತು. ಅಂದು ಸಂಧ್ಯಾಕಾಲವು ಕಳೆದುಹೋಗುತ್ತಿರಲಾಗಿ ನನ್ನ ಗುರುವಾದ ಪರಶುರಾಮನೂ ಯುದ್ಧದಿಂದ ವಿರತನಾಗಿ ಹೊರಟುಹೋದನು."

೧೮೦ನೆಯ ಅಧ್ಯಾಯವು ಮುಗಿಯಿತು.

೧೮೧ನೆಯ ಅಧ್ಯಾಯ ಅಮ್ಬೋಪಾಖ್ಯಾನಪರ್ವ (ಮುಂದುವರಿದಿದೆ)

## ಭೀಷ್ಮ-ಪರಶುರಾಮರ ಭಯಂಕರಯುದ್ಧ

ಭೀಷ್ಮನು ದುರ್ಯೋಧನನನ್ನು ಕುರಿತು ಹೇಳುತ್ತಾನೆ :

"ದುರ್ಯೋಧನ! ಬೆಳಗಾಗುತ್ತಲೇ ಪುನಃ ರಣಾಂಗಣಕ್ಕೆ ಆಗಮಿಸಿದ ರಾಮನೊಡನೆ ಅತಿಭಯಂಕರವಾದ ಮತ್ತು ಕ್ಷೋಭೆಯನ್ನುಂಟುಮಾಡುವ ಯುದ್ಧವು ಪ್ರಾರಂಭವಾಯಿತು. ದಿವ್ಯಾಸ್ತ್ರಗಳ ಆದಾನ-ಸಂಧಾನ-ಪ್ರಯೋಗಾದಿಗಳನ್ನು ಸಂಪೂರ್ಣವಾಗಿ ತಿಳಿದಿದ್ದ, ಶೂರನಾದ, ಧರ್ಮಾತ್ಮನಾದ ಪರಶುರಾಮನು ಅನೇಕಬಾರಿ ಅನೇಕವಿಧವಾದ ದಿವ್ಯಾಸ್ತ್ರಗಳನ್ನು ನನ್ನ ಮೇಲೆ ಪ್ರಯೋಗಿಸಿದನು. ಅನುದಿನವೂ ಅವನು ದಿವ್ಯಾಸ್ತ್ರಗಳನ್ನು ಪ್ರಯೋಗಿಸುತ್ತಿದ್ದನು. ನಾನೂ ಸಹ ತ್ಯಜಿಸಲು ದುಃಸಾಧ್ಯವಾದ ಪ್ರಾಣಗಳನ್ನೇ ಒತ್ತೆಯಾಗಿಟ್ಟು, ಪರಶುರಾಮನು ಬಿಡುತ್ತಿದ್ದ ಮಹಾಸ್ತ್ರಗಳಿಗೆ ಆಘಾತವನ್ನುಂಟುಮಾಡತಕ್ಕ ಪ್ರತ್ಯಸ್ತ್ರಗಳನ್ನು ಪ್ರಯೋಗಿಸಿ ಅವುಗಳನ್ನು ಧ್ವಂಸಮಾಡುತ್ತಿದ್ದೆನು. ರಾಮನು ಬಿಟ್ಟ ಅನೇಕಾನೇಕ ಮಹಾಸ್ತ್ರಗಳು ನಾನು ಬಿಟ್ಟ ಪ್ರತ್ಯಸ್ತ್ರಗಳಿಂದ ವಿನಷ್ಟವಾಗಿ ಹೋಗಲಾಗಿ, ಯುದ್ಧದಲ್ಲಿ ತನ್ನ ಪ್ರಾಣ

ಗಳನ್ನೇ ಒತ್ತೆಯಾಗಿಟ್ಟು ಪರಾಕ್ರಮದಿಂದ ನನ್ನೊಡನೆ ಸೆಣೆಸಾಡುತ್ತಿದ್ದ ಮಹಾತೇಜಸ್ವಿಯಾದ ರಾಮನು ಬಹುಕ್ರುದ್ಧನಾದನು. ತನ್ನ ದಿವ್ಯಾಸ್ತ್ರಗಳೆಲ್ಲವೂ ನನ್ನ ಪ್ರತ್ಯಸ್ತ್ರಗಳಿಂದ ನಿರೋಧಿತವಾಗಲಾಗಿ, ಮಹಾತ್ಮನಾದ ಪರಶುರಾಮನು ಘೋರವಾದ ರೂಪವನ್ನು ಧರಿಸಿದ್ದ, ಕಾಲನಿಂದ ಬಿಡಲ್ಪಟ್ಟ ಪ್ರಜ್ವಲಿಸುತ್ತಿರುವ ಉಲ್ಕೆಯಂತೆಯೇ ಕಾಣುತ್ತಿದ್ದ, ಧಗ-ಧಗನೆ ಉರಿಯುತ್ತಿದ್ದ ಅಗ್ರಭಾಗದಿಂದ ಕೂಡಿದ್ದ, ತೇಜಸ್ಸಿನಿಂದ ಸಕಲಲೋಕಗಳನ್ನೂ ಬೆಳಗುತ್ತಿದ್ದ ಶಕ್ತ್ಯಾಯುಧವನ್ನು ನನ್ನ ಮೇಲೆ ರಭಸದಿಂದ ಪ್ರಯೋಗಿಸಿದನು. ಪ್ರಜ್ವಲಿಸುವ ಪ್ರಳಯಕಾಲದ ಸೂರ್ಯನಿಗೆ ಸಮಾನವಾದ ತೇಜಸ್ಸಿನಿಂದ ಪ್ರಜ್ವಲಿಸುತ್ತಿದ್ದ, ದೇದೀಪ್ಯಮಾನವಾದ, ರಾಮನಿಂದ ಪ್ರಯುಕ್ತವಾದ ಆ ಶಕ್ತ್ಯಾಯುಧವು ನನ್ನ ಬಳಿಗೆ ರಭಸದಿಂದ ಬರುತ್ತಿರುವುದನ್ನು ಕಂಡು ನಾನು ಒಡನೆಯೇ ನನ್ನ ಸುತೀಕ್ಷ್ಣವಾದ ಬಾಣಗಳಿಂದ ಆ ಶಕ್ತ್ಯಾಯುಧವನ್ನು ಮೂರು ಭಾಗಗಳನ್ನಾಗಿ ಕತ್ತರಿಸಿ ಭೂಮಿಯಲ್ಲಿ ಬೀಳಿಸಿದೆನು. ಅನಂತರದಲ್ಲಿ ಪುಣ್ಯಗಂಧಯುಕ್ತವಾದ, ತಂಪಾದ ಗಾಳಿಯು ಬೀಸಲಾರಂಭಿಸಿತು.

ದುರ್ಯೋಧನ! ಪರಶುರಾಮನು ಪ್ರಯೋಗಿಸಿದ ಶಕ್ತ್ಯಾಯುಧವನ್ನು ನಾನು ಮೂರು ಭಾಗಗಳಾಗಿ ಕತ್ತರಿಸಿ ಕೆಳಕ್ಕೆ ಬೀಳಿಸಿದೊಡನೆಯೇ ಕೋಪದಿಂದ ಸಂಜ್ವಲಿತನಾದ ರಾಮನು, ಮಹಾಘೋರವಾದ ಇತರ ಹನ್ನೆರಡು ಶಕ್ತ್ಯಾಯುಧಗಳನ್ನು ನನ್ನ ಮೇಲೆ ಪ್ರಯೋಗಿಸಿದನು. ಅವುಗಳು ಬಹು ತೇಜಃಪುಂಜಯುಕ್ತವಾಗಿದ್ದುದರಿಂದಲೂ ಮತ್ತು ಬಹಳ ಬೇಗ ನನ್ನ ಸಮೀಪಕ್ಕೆ ಬಂದಿದ್ದರಿಂದಲೂ–ಅವುಗಳ ಆಕಾರವು ಇಂತಹುದೆಂದು ಹೇಳಲು ಅಥವಾ ತಿಳಿದುಕೊಳ್ಳಲು ನನಗೆ ಸಾಧ್ಯವಾಗಲಿಲ್ಲ. ಪ್ರಳಯಕಾಲದ ಸಮಯದಲ್ಲಿ ಪ್ರಜ್ವಲಿಸುವ ದ್ವಾದಶಾದಿತ್ಯರಂತೆ– ಭಯಂಕರವಾದ ತೇಜಸ್ಸಿನಿಂದ ಪ್ರಜ್ವಲಿಸುತ್ತಿದ್ದ, ನಾನಾರೂಪಗಳನ್ನು ಧರಿಸಿದ್ದ, ಅಗ್ನಿಯ ಮಹಾಜ್ವಾಲೆಗಳಂತೆ ಕಾಣುತ್ತಿದ್ದ, ನಾಲ್ಕು ದಿಕ್ಕುಗಳಿಂದಲೂ ನನ್ನ ಕಡೆಗೇ ರಭಸದಿಂದ ಬರುತ್ತಿದ್ದ ಆ ಹನ್ನೆರಡು ಶಕ್ತ್ಯಾಯುಧಗಳನ್ನು ನೋಡಿ ನಾನು ವ್ಯಾಕುಲಗೊಂಡೆನು. ಶಕ್ತ್ಯಾಯುಧಗಳೊಡನೆಯೇ ಬಾಣಮಯವಾದ ಬಲೆಯೂ ನನ್ನ ಸಮೀಪಕ್ಕೆ ಬರುತ್ತಿದ್ದುದನ್ನು ನೋಡಿ ಭ್ರಾಂತಿಯನ್ನು ತೊರೆದು ನನ್ನಲ್ಲಿದ್ದ

ಬಲೆಯ ರೂಪವಾದ ಬಾಣಗಳ ಸಮೂಹದಿಂದ ಪರಶುರಾಮನು ಪ್ರಯೋಗಿಸಿದ್ದ ಬಾಣಮಯವಾದ ಬಲೆಯನ್ನು ಭೇದಿಸಿ ಮರುಕ್ಷಣದಲ್ಲಿಯೇ ಹನ್ನೆರಡು ಬಾಣಗಳನ್ನು ಅಭಿಮಂತ್ರಿಸಿ ಪರಶುರಾಮನು ಬಿಟ್ಟಿದ್ದ ಹನ್ನೆರಡು ಶಕ್ತ್ಯಾಯುಧಗಳಿಗೆ ಗುರಿಯಿಟ್ಟು ಪ್ರಹರಿಸಿ ಘೋರವಾದ ಆ ಶಕ್ತ್ಯಾಯುಧಗಳನ್ನು ನಿರಸನಗೊಳಿಸಿಬಿಟ್ಟೆನು. ದುರ್ಯೋಧನ! ಅನಂತರದಲ್ಲಿ ಜಮದಗ್ನಿಯ ಮಗನಾದ, ಮಹಾತ್ಮನಾದ ಪರಶುರಾಮನು ಸ್ವರ್ಣಮಯದಂಡಗಳಿಂದ ಕೂಡಿದ್ದ, ಬಹುಘೋರವಾಗಿದ್ದ, ಚಿತ್ರ-ವಿಚಿತ್ರವಾಗಿ ಕಾಣುತ್ತಿದ್ದ, ಸುವರ್ಣದ ತಗಡಿನಿಂದ ಆಚ್ಛಾದಿತವಾಗಿದ್ದ, ಪ್ರಜ್ವಲಿಸುತ್ತಿದ್ದ ಉಲ್ಕೆಗಳೋಪಾದಿಯಲ್ಲಿ ಶಕ್ತ್ಯಾಯುಧಗಳನ್ನು ಪುನಃ ಪ್ರಯೋಗಿಸಿದನು. ಅವನು ಪ್ರಯೋಗಿಸಿದ ಆ ಘೋರವಾದ ಶಕ್ತ್ಯಾಯುಧಗಳನ್ನೂ ನಾನು ಗುರಾಣಿಯಿಂದ ತಡೆದು ಕತ್ತಿಯಿಂದ ಕತ್ತರಿಸಿ ಕೆಳಕ್ಕೆ ಬೀಳುವಂತೆ ಮಾಡಿದೆನು. ಅನಂತರ ನಾನು ಪರಶುರಾಮನ ಕುದುರೆಗಳ ಮೇಲೂ ಸಾರಥಿಯ ಮೇಲೂ ದಿವ್ಯಬಾಣಗಳ ಮಳೆಯನ್ನೇ ಸುರಿಸಿದೆನು. ಪೊರೆಬಿಟ್ಟ ಹಾವುಗಳಿಗೆ ಸಮಾನವಾದ, ಸ್ವರ್ಣಮಯವಾಗಿಯೂ ಚಿತ್ರ-ವಿಚಿತ್ರವಾಗಿಯೂ ಇದ್ದ ಶಕ್ತ್ಯಾಯುಧಗಳು ನನ್ನಿಂದ ಕತ್ತರಿಸಲ್ಪಟ್ಟು ಕೆಳಗೆ ಬಿದ್ದುದನ್ನು ಕಂಡು ಮಹಾತ್ಮನಾದ, ಹೈಹಯರಾಜವಿಧ್ವಂಸಕನಾದ ಪರಶುರಾಮನು ಮತ್ತೂ ಕೋಪಾವಿಷ್ಟನಾಗಿ ತನ್ನಲ್ಲಿದ್ದ ದಿವ್ಯಾಸ್ತ್ರಗಳನ್ನು ಪ್ರಯೋಗಿಸಲು ಉಪಕ್ರಮಿಸಿದನು. ಮಿಡತೇಹುಳುಗಳ ಸಾಲಿನಂತೆಯೇ ಕಾಣುತ್ತಿದ್ದ, ಅತ್ಯುಗ್ರವಾಗಿದ್ದ ಮತ್ತು ಪ್ರದೀಪ್ತವಾಗಿದ್ದ ಬಾಣಗಳ ಸಾಲುಗಳು ನನ್ನ ಮೇಲೆ ರಭಸದಿಂದ ಬಂದುಬಿದ್ದುವು. ನನ್ನ ಶರೀರವನ್ನೂ, ರಥವನ್ನೂ, ಸಾರಥಿಯನ್ನೂ ಮತ್ತು ಕುದುರೆಗಳನ್ನೂ ಆ ಬಾಣಗಳಿಂದ ಪರಶುರಾಮನು ಮುಚ್ಚಿದನು.

ಪರಶುರಾಮನು ಬಿಟ್ಟ ಬಾಣಗಳಿಂದ ನನ್ನ ರಥವು ಸಂಪೂರ್ಣವಾಗಿ ಮುಚ್ಚಿಹೋಯಿತು. ಅದೇ ರೀತಿಯಲ್ಲಿ ರಥಕ್ಕೆ ಕಟ್ಟಿದ್ದ ಕುದುರೆಗಳೂ ಮತ್ತು ಸಾರಥಿಯೂ ಬಾಣಗಳಿಂದ ವ್ಯಾಪ್ತರಾಗಿ ಹೋದರು. ರಥದ ನೊಗವನ್ನೂ (ಯುಗ), ಮೂಕಿಯ ಮರವನ್ನೂ (ಈಷಾದಂಡ) ಪರಶುರಾಮನು ಬಾಣಗಳಿಂದ ಮುಚ್ಚಿದನು. ನನ್ನ ರಥದ ಅಚ್ಚೂ (ಅಕ್ಷ) ಅವನು

ಬಿಟ್ಟ ಬಾಣಗಳಿಂದ ಭಗ್ನವಾಗಿಹೋಯಿತು. ದುರ್ಯೋಧನ! ಪರಶುರಾಮನು ಬಿಟ್ಟ ಬಾಣಗಳ ಮಳೆಯು ಸ್ವಲ್ಪಕಾಲಾನಂತರ ನಿಂತುಹೋಗಲಾಗಿ ನಾನೂ ಬಾಣಗಳ ಸಮೂಹದಿಂದ ಪ್ರತಿಯಾಗಿ ಮಳೆಗರೆದು ನನ್ನ ಗುರುವನ್ನು ಮುಚ್ಚಿಬಿಟ್ಟೆನು. ಬ್ರಹ್ಮರಾಶಿಯಾದ (ಬ್ರಾಹ್ಮಣತೇಜಸ್ಸಿನಿಂದ ವಿರಾಜಿಸುತ್ತಿದ್ದ) ಪರಶುರಾಮನು ನಾನು ಬಿಟ್ಟ ಬಾಣಗಳಿಂದ ಗಾಯಗೊಂಡವನಾಗಿ ತನ್ನ ಶರೀರದಿಂದ ಅತ್ಯಧಿಕವಾದ ರಕ್ತವನ್ನು ಸುರಿಸಿದನು. ಬಾಣವಿದ್ಧವಾದ ಅವನ ಶರೀರದಿಂದ ರಕ್ತವು ಪ್ರವಹಿಸತೊಡಗಿತು. ನಾನೂ ರಾಮನ ಬಾಣಗಳಿಂದ ಬಹುವಾಗಿ ಪೀಡಿತನಾಗಿದ್ದೆನು. ನನ್ನ ಶರೀರಾದ್ಯಂತವಾಗಿ ಗಾಯಗಳಾಗಿದ್ದುವು. ಆ ಸಮಯಕ್ಕೆ ಸರಿಯಾಗಿ ಸಂಧ್ಯಾಕಾಲವಾಯಿತು. ಸೂರ್ಯನು ಅಸ್ತಾಚಲವನ್ನು ಸೇರುತ್ತಿರಲಾಗಿ, ಅಂದಿನ ಯುದ್ಧವು ನಿಂತಿತು."

೧೮೧ನೆಯ ಅಧ್ಯಾಯವು ಮುಗಿಯಿತು.

೧೮೨ನೆಯ ಅಧ್ಯಾಯ ಅಮ್ಬೋಪಾಖ್ಯಾನಪರ್ವ (ಮುಂದುವರಿದಿದೆ)

## ಭೀಷ್ಮ-ಪರಶುರಾಮರ ಯುದ್ಧ

ಭೀಷ್ಮನು ದುರ್ಯೋಧನನನ್ನು ಕುರಿತು ಹೇಳುತ್ತಾನೆ :

"ರಾಜೇಂದ್ರ! ಪ್ರಾತಃಕಾಲದಲ್ಲಿ ಸೂರ್ಯನು ಮೋಡಗಳಿಲ್ಲದೆ ಪ್ರಕಾಶಿಸುತ್ತಿರಲಾಗಿ ನನಗೂ ಮತ್ತು ಪರಶುರಾಮನಿಗೂ ಪುನಃ ಯುದ್ಧವು ಪ್ರಾರಂಭವಾಯಿತು. ಯೋಧಶ್ರೇಷ್ಠನಾದ ಪರಶುರಾಮನು ಸುಸ್ಥಿರವಾದ ರಥದಲ್ಲಿ ಕುಳಿತು–ಮೇಘವು ಪರ್ವತದ ಮೇಲೆ ಮಳೆಗರೆಯುವಂತೆ–ನನ್ನ ಮೇಲೆ ಬಾಣಗಳ ಸಮೂಹವನ್ನೇ ಸುರಿಸತೊಡಗಿದನು. ಪರಶುರಾಮನು ಬಿಟ್ಟ ಬಾಣಗಳ ಸಮೂಹದಿಂದ ಪೀಡಿತನಾದ ನನ್ನ ಸುಹೃದನಾದ ಸೂತನು ನನ್ನ ಮನಸ್ಸಿಗೆ ಅತಿಯಾದ ವಿಷಾದವನ್ನುಂಟುಮಾಡುತ್ತಾ ರಥದ ಸಮೀಪ ದಲ್ಲಿ ಬಿದ್ದುಬಿಟ್ಟನು. ಸಾರಥಿಯು ಬಹುವಾಗಿ ವಿಮೋಹಗೊಂಡನು. ಬಾಣಗಳ ಪ್ರಹಾರದಿಂದ ನೆಲದ ಮೇಲೆ ಬಿದ್ದು ಮೂರ್ಛಿತನಾದನು.

ರಾಮಬಾಣಪೀಡಿತನಾದ ನನ್ನ ಸಾರಥಿಯು ಸ್ವಲ್ಪಹೊತ್ತಿನಲ್ಲಿಯೇ ಸತ್ತೂಹೋದನು. ಆ ಸಮಯದಲ್ಲಿ ನಾನು ಭಯಗೊಂಡೆನು. ಸೂತನು ಸತ್ತು ಹೋದರೂ ಯುದ್ಧವು ನಿಲ್ಲಲಿಲ್ಲ. ನಾನು ಯದ್ಯಪಿ ಭಯಗೊಂಡಿದ್ದರೂ ಅದನ್ನು ತೋರ್ಪಡಿಸದೇ ಪರಶುರಾಮನ ಮೇಲೆ ಬಾಣಗಳನ್ನು ಬಿಡುತ್ತಲೇ ಇದ್ದೆನು. ಆದರೆ ನನ್ನ ಸಾರಥಿಯನ್ನು ಕೊಂದ ರಾಮನು ಪ್ರಮತ್ತನಾಗಿದ್ದ (ಸಾರಥಿಯು ಸತ್ತುಹೋದುದರಿಂದ ಅನ್ಯಮನಸ್ಕನಾಗಿದ್ದ) ನನ್ನ ಮೇಲೆ ಮೃತ್ಯುವಿಗೆ ಸಮಾನವಾಗಿದ್ದ ಭಯಂಕರವಾದ ಬಾಣವನ್ನು ಪ್ರಯೋಗಿಸಿದನು. ಅಷ್ಟರಿಂದಲೇ ಸುಮ್ಮನಾಗಲಿಲ್ಲ. ಧನುಸ್ಸಿಗೆ ಬಾಣವನ್ನು ಯೋಜಿಸಿ ಬಲವನ್ನೆಲ್ಲಾ ಬಿಟ್ಟು ಸುದೀರ್ಘವಾಗಿ ಸೆಳೆದು ಸೂತನ ಮರಣದಿಂದ ವ್ಯಾಕುಲಗೊಂಡಿದ್ದ ನನ್ನನ್ನು ಪುನಃ ರಭಸದಿಂದ ಪ್ರಹರಿಸಿದನು. ಶತ್ರುವಿನ ರಕ್ತವನ್ನು ಹೀರುವ ಪರಶುರಾಮನ ಆ ಬಾಣವು ನನ್ನ ಭುಜಾಂತರದಲ್ಲಿ (ವಕ್ಷಸ್ಥಲದಲ್ಲಿ) ಹೊಕ್ಕು ನನ್ನನ್ನು ಭೂಮಿಯ ಮೇಲೆ ಕೆಡಹಿ ತಾನೂ ಕೆಳಗೆ ಬಿದ್ದಿತು. ನಾನು ಸತ್ತುಹೋದೆನೆಂದೇ ಭಾವಿಸಿದ ಪರಶುರಾಮನು ಮೇಘದಂತೆ ಗಟ್ಟಿಯಾಗಿ ಸಿಂಹಗರ್ಜನೆಯನ್ನು ಮಾಡಿದನು. ಆ ವಿಜಯದಿಂದಾಗಿ ಪರಶುರಾಮನು ಬಹುವಾಗಿ ಸಂತೋಷಪಟ್ಟನು. ತಾನು ಗಳಿಸಿದ ವಿಜಯಕ್ಕಾಗಿ ಅಟ್ಟಹಾಸದಿಂದ ಪುನಃ ಪುನಃ ನಗುತ್ತಿದ್ದನು. ನಾನು ನೆಲದ ಮೇಲೆ ಬೀಳಲಾಗಿ, ಪರಶುರಾಮನು ಸಂತೋಷಭರಿತನಾಗಿ ತನ್ನ ಅನುಯಾಯಿಗಳೊಡನೆ ಕೇಕೆಹಾಕಿಕೊಂಡು ನಗುತ್ತಾ ಕೋಲಾಹಲವನ್ನೆಬ್ಬಿಸಿಬಿಟ್ಟನು. ನನ್ನ ಅಂಗರಕ್ಷಕರಾಗಿದ್ದ ಕುರುವಂಶದ ಕ್ಷತ್ರಿಯರೂ ಮತ್ತು ಯುದ್ಧವನ್ನು ನೋಡುವ ಸಲುವಾಗಿಯೇ ಬಂದಿದ್ದ ನನ್ನ ಪ್ರಜೆಗಳೂ – ನಾನು ಪರಶುರಾಮನ ಬಾಣಪ್ರಹಾರದಿಂದ ಭೂಮಿಯ ಮೇಲೆ ಬಿದ್ದುದನ್ನು ಕಂಡು ಬಹುದುಃಖಿತರಾದರು. ಆ ಸಮಯದಲ್ಲಿ ಒಂದು ವಿಚಿತ್ರವು ನಡೆಯಿತು, ದುರ್ಯೋಧನ! ನಾನು ಭೂಮಿಯ ಮೇಲೆ ಬಿದ್ದಿದ್ದ ಆ ಸಮಯದಲ್ಲಿ ಸೂರ್ಯಾಗ್ನಿಸಮಾನ ವರ್ಚಸ್ಕರಾಗಿದ್ದ ಎಂಟು ಮಂದಿ ಬ್ರಾಹ್ಮಣರನ್ನು ಕಂಡೆನು. ಆ ರಣಾಂಗಣದಲ್ಲಿ ಅವರು ನನ್ನನ್ನು ಸುತ್ತುವರಿದು ತಮ್ಮ ತೋಳುಗಳಿಂದ ನನ್ನನ್ನೆತ್ತಿಕೊಂಡು ನಿಂತರು. ನಾನು ಪುನಃ ಭೂಮಿಯನ್ನು ಮುಟ್ಟಲೇ ಇಲ್ಲ. ಕಷ್ಟ

ಸಮಯದಲ್ಲಿ ನೆರವಾಗುವ ಬಂಧುಗಳಂತಿದ್ದ ಅವರಿಂದ ಸಂರಕ್ಷಿತನಾಗಿ ಅಂತರಿಕ್ಷಕ್ಕೂ ಒಯ್ಯಲ್ಪಟ್ಟೆನು. ಅಂತರಿಕ್ಷದಲ್ಲಿಯೂ ನಾನು ಬಹಳ ಆಯಾಸದಿಂದ ಉಸಿರುಬಿಡುತ್ತಿದ್ದೆನು. ಅನಂತರ ಆ ಬ್ರಾಹ್ಮಣರು ನನ್ನ ಮೇಲೆ ನೀರು ಚುಮುಕಿಸಿದರು. ನನ್ನನ್ನೆತ್ತಿಕೊಂಡೇ ಅವರು ನನ್ನನ್ನು ಕುರಿತು – 'ಮಾ ಭೈಃ' – 'ಹೆದರಬೇಡ' 'ಸ್ವಸ್ತಿ ತೇಽಸ್ತು'-'ನಿನಗೆ ಮಂಗಳವಾಗಲಿ' ಎಂದು ಬಾರಿ-ಬಾರಿಗೂ ಹೇಳುತ್ತಿದ್ದರು. ಅವರ ಮಾತುಗಳಿಂದ ಸಮಾಶ್ವಾಸಿತನಾದ ನಾನು ಒಡನೆಯೇ ಮೇಲೆದ್ದು ನಿಂತೆನು. ಸರಿತ್ತುಗಳಿಗೆ ಶ್ರೇಷ್ಠಳಾದ ಗಂಗಾನದಿಯೇ ದಿವ್ಯರೂಪವನ್ನು ಧರಿಸಿ ನನ್ನ ರಥದಲ್ಲಿ ಸಾರಥಿಯ ಸ್ಥಾನದಲ್ಲಿ ಕುಳಿತಿರುವುದನ್ನು ಕಂಡೆನು. ಕೌರವೇಂದ್ರ! ಪರಶುರಾಮನೊಡನೆ ಯುದ್ಧವು ನಡೆಯುತ್ತಿದ್ದ ಆ ಸಮಯದಲ್ಲಿ ಮಹಾನದಿಯಾದ ಗಂಗಾದೇವಿಯೇ ನನ್ನ ರಥಕ್ಕೆ ಕಟ್ಟಲ್ಪಟ್ಟಿದ್ದ ಕುದುರೆಗಳ ಕಡಿವಾಣಗಳನ್ನು ಹಿಡಿದು ಕುಳಿತಿದ್ದಳು. ನಾನು ತಾಯಿಯ ಕಾಲುಗಳನ್ನು ಮುಟ್ಟಿ ನಮಸ್ಕರಿಸಿದೆನು. ಅಂತೆಯೇ ನನ್ನ ಪಿತೃಗಳಿಗೂ ನಮಸ್ಕರಿಸಿ ರಥವನ್ನು ಹತ್ತಿ ಕುಳಿತೆನು. ಅವಳು ರಥಸಹಿತನಾದ ನನ್ನನ್ನೂ, ಕುದುರೆಗಳನ್ನೂ, ಮತ್ತು ಇತರ ಯುದ್ಧಸಾಮಗ್ರಿಗಳನ್ನೂ ರಕ್ಷಿಸಿದಳು. ನಾನು ಪುನಃ ಅವಳಿಗೆ ಬದ್ಧಾಂಜಲಿಯಾಗಿ ನಮಸ್ಕರಿಸಿ ಅವಳನ್ನು ಸ್ವಸ್ಥಾನಕ್ಕೆ ಕಳುಹಿಸಿಕೊಟ್ಟೆನು. ದಿನವು ಕಳೆಯುವುದರಲ್ಲಿದ್ದಾಗ (ಸಾಯಂಕಾಲ ವಾಗುತ್ತಿದ್ದಾಗ) ವಾಯುವೇಗಗತಿಯುಳ್ಳ ಕುದುರೆಗಳ ಕಡಿವಾಣಗಳನ್ನು ನಾನೇ ಹಿಡಿದು ಅವುಗಳನ್ನು ನಿಯಂತ್ರಿಸುತ್ತಾ ಪರಶುರಾಮನೊಡನೆ ಯುದ್ಧ ಮಾಡಿದೆನು. ಭರತಶ್ರೇಷ್ಠನೇ! ಅನಂತರ ನಾನು ಬಹುವೇಗಗತಿಯುಳ್ಳ, ಬಹುಬಲಿಷ್ಠವಾದ, ಹೃದಯವನ್ನು ಸೀಳುವ ಸಾಮರ್ಥ್ಯವನ್ನು ಹೊಂದಿದ್ದ ಬಾಣವನ್ನು ಬಿಲ್ಲಿನ ಹೆದೆಗೇರಿಸಿ ಶಿಂಜಿನಿಯನ್ನು ಸುದೀರ್ಘವಾಗಿ ಸೆಳೆದು ರಾಮನ ಮೇಲೆ ಪ್ರಯೋಗಿಸಿದೆನು. ನನ್ನ ಆ ಭಯಂಕರವಾದ ಬಾಣಪ್ರಹಾರ ದಿಂದ ಪೀಡಿತನಾದ ರಾಮನು ಬಿಲ್ಲನ್ನು ಬಿಟ್ಟು ಭೂಮಿಯಲ್ಲಿ ಮಂಡಿಯೂರಿ ಕ್ಷಣಕಾಲ ಕುಳಿತು ಅನಂತರ ಮೂರ್ಛಿತನಾಗಿ ಬಿದ್ದುಬಿಟ್ಟನು. ಸಾವಿರಾರು ಬ್ರಾಹ್ಮಣರಿಗೆ ಭೂರಿದಾನಗಳನ್ನು ಕೊಟ್ಟ ಪರಶುರಾಮನು ಭೂಮಿಯ ಮೇಲೆ

ಮೂರ್ಛಿತನಾಗಿ, ಬೀಳಲಾಗಿ, ನೀರಿಗೆ ಬದಲಾಗಿ ರಕ್ತವನ್ನೇ ಧಾರಾಕಾರವಾಗಿ ಸುರಿಸುತ್ತಾ ಮೋಡಗಳು ಸರ್ವತ್ರ ವ್ಯಾಪಿಸಿಬಿಟ್ಟುವು. ಗುಡುಗು-ಸಿಡಿಲುಗಳಿಗೆ ಸಮಾನವಾಗಿ ಶಬ್ದಮಾಡುತ್ತಾ ನೂರಾರು ಉಲ್ಕೆಗಳು ಭೂಮಿಯ ಮೇಲೆ ಬಿದ್ದುವು. ಪ್ರದೀಪ್ತನಾಗಿದ್ದ ಸೂರ್ಯನನ್ನು ರಾಹುವು ಆವರಿಸಿಬಿಟ್ಟನು. ಚಂಡಮಾರುತವು ಬೀಸತೊಡಗಿತು. ಭೂಮಿಯೂ ನಡುಗಿತು. ರಣಹದ್ದುಗಳೂ, ಕಾಗೆಗಳೂ ಮತ್ತು ಕಂಕಪಕ್ಷಿಗಳೂ ಸಂತಸಗೊಂಡು ಅತ್ತಲಿತ್ತ ಹಾರಾಡತೊಡಗಿದುವು. ಗುಳ್ಳೇನರಿಗಳು ಆಗ್ನೇಯದಿಕ್ಕಿನಲ್ಲಿ ಬಾರಿ-ಬಾರಿಗೂ ಭಯಂಕರವಾಗಿ ಕಿರುಚುತ್ತಿದ್ದುವು. ತಾಡನಮಾಡದೆಯೇ ದುಂದುಭಿಗಳು ಬಹಳ ಗಟ್ಟಿಯಾಗಿ ಶಬ್ದಮಾಡಿದುವು. ಮಹಾತ್ಮನಾದ ಪರಶುರಾಮನು ಮೂರ್ಛಿತನಾಗಿ ಭೂಮಿಯ ಮೇಲೆ ಬಿದ್ದಿರಲಾಗಿ ಆ ವಿಧವಾದ ಉತ್ಪಾತಸೂಚಕವಾದ ಭಯಂಕರವಾದ ಅಪಶಕುನಗಳು ಕಂಡುಬಂದುವು. ಆ ಸಮಯದಲ್ಲಿ ಮೂರ್ಛೆತಿಳಿದ ರಾಮನು ಒಡನೆಯೇ ಮೇಲೆದ್ದು ನನ್ನನ್ನೆದುರಿಸಿ ನಿಂತನು. ವ್ಯಾಕುಲಗೊಂಡಿದ್ದ ಮತ್ತು ಕ್ರೋಧಮೂರ್ಛಿತನಾಗಿದ್ದ ರಾಮನು ಪುನಃ ನನ್ನನ್ನು ಯುದ್ಧಕ್ಕೆ ಆಹ್ವಾನಿಸಿದನು. ಮಹಾಬಾಹುವಾದ ಪರಶುರಾಮನು ತಾಳೇಮರಕ್ಕೆ ಸಮಾನವಾಗಿದ್ದ ಸುದೀರ್ಘವಾಗಿದ್ದ ಧನುಸ್ಸನ್ನು ಹಿಡಿದು ಬಾಣವನ್ನು ಯೋಜಿಸಿ ನನ್ನ ಮೇಲೆ ಬಿಡುವುದರಲ್ಲಿದ್ದಾಗ ಕೃಪಾಯುಕ್ತರಾದ ಮಹರ್ಷಿಗಳು – 'ಭೀಷ್ಮನ ಮೇಲೆ ಬಾಣವನ್ನು ಬಿಡಕೂಡದು" – ಎಂದು ನಿರೋಧಿಸಿದರು.

ಅಮೇಯಾತ್ಮನಾದ ಭಾರ್ಗವನು ಯದ್ಯಪಿ ಕೋಪಾವಿಷ್ಟನಾಗಿದ್ದರೂ ಋಷಿಗಳ ಮಾತನ್ನು ಗೌರವಿಸಿ ಕಾಲಾಗ್ನಿಗೆ ಸಮಾನವಾಗಿದ್ದ ಆ ಬಾಣವನ್ನು ನನ್ನ ಮೇಲೆ ಬಿಡದೇ ಉಪಸಂಹರಿಸಿಬಿಟ್ಟನು. ಅನಂತರ ಮಂದಕಿರಣ ಮಂಡಲಯುಕ್ತನಾಗಿದ್ದ ರವಿಯು ಯುದ್ಧಭೂಮಿಯಿಂದ ಹೊರಟ ಧೂಳಿನ ಪುಂಜದಿಂದ ಆಚ್ಛಾದಿತನಾಗಿ ಅಸ್ತಾಚಲವನ್ನು ಸೇರಿದನು. ಸುಖಕರವಾದ ಮತ್ತು ತಂಪಾದ ವಾತಾವರಣದಿಂದ ಕೂಡಿದ ರಾತ್ರಿಯು ಪ್ರಾದುರ್ಭವಿಸಿತು. ಆ ಸಮಯದಲ್ಲಿ ನಾವಿಬ್ಬರೂ ಯುದ್ಧದಿಂದ ವಿರತರಾದೆವು. ದುರ್ಯೋಧನ! ಅದೇ ರೀತಿಯಲ್ಲಿ ಪ್ರತಿದಿನವೂ ಸಂಧ್ಯಾಕಾಲವಾಗುತ್ತಲೇ ಯುದ್ಧವು ನಿಲ್ಲು ತ್ತಿದ್ದಿತು. ಸೂರ್ಯೋದಯವಾಗುತ್ತಲೇ ಸುಘೋರವಾದ ಯುದ್ಧವು ಪುನಃ

ಪ್ರಾರಂಭವಾಗುತ್ತಿದ್ದಿತು. ಹೀಗೆ ನಮ್ಮಿಬ್ಬರ ಯುದ್ಧವು ಇಪ್ಪತ್ತುಮೂರು ದಿವಸಗಳ ಪರ್ಯಂತವಾಗಿ ನಡೆಯಿತು."

೧೮೬ನೆಯ ಅಧ್ಯಾಯವು ಮುಗಿಯಿತು.

೧೮೭ನೆಯ ಅಧ್ಯಾಯ ಅಮ್ಬೋಪಾಖ್ಯಾನಪರ್ವ (ಮುಂದುವರಿದಿದೆ)

## ಅಷ್ಟವಸುಗಳಿಂದ ಭೀಷ್ಮನು ಪ್ರಸ್ವಾಪನಾಸ್ತ್ರವನ್ನು ಪಡೆದುಕೊಂಡುದು

ಭೀಷ್ಮನು ದುರ್ಯೋಧನನನ್ನು ಕುರಿತು ಹೇಳುತ್ತಾನೆ :

"ದುರ್ಯೋಧನ! ಇಪ್ಪತ್ತುಮೂರು ದಿವಸಗಳು ಕಳೆದನಂತರ ಆ ದಿನದ ರಾತ್ರಿಯಲ್ಲಿ ನಾನು ಬ್ರಾಹ್ಮಣರಿಗೂ, ಪಿತೃಗಳಿಗೂ, ದೇವತೆಗಳಿಗೂ, ನಕ್ತಂಚರರಿಗೂ, ಭೂತಗಣಗಳಿಗೂ, ರಾಜರ್ಷಿಗಳಿಗೂ ತಲೆಬಾಗಿ ನಮಸ್ಕರಿಸಿ, ಯಾರೂ ಇಲ್ಲದಿದ್ದ ಆ ಸಮಯದಲ್ಲಿ ನನ್ನೊಳಗೆ ನಾನೇ ಹೀಗೆಂದು ಯೋಚಿಸಿದೆನು – 'ಪರಶುರಾಮನಿಗೂ ಮತ್ತು ನನಗೂ ಯುದ್ಧವು ಪ್ರಾರಂಭವಾಗಿ ಬಹಳ ದಿವಸಗಳೇ ಆದುವು. ಈಗಲೂ ಭಯಂಕರವಾದ ಮತ್ತು ಅನಿಷ್ಟಕರವಾದ ಆ ಮಹಾಯುದ್ಧವು ಮುಂದುವರಿಯುತ್ತಲೇ ಇದೆ. ಮಹಾಬಲಿಷ್ಠನಾದ, ಮಹಾವೀರ್ಯನಾದ, ವಿಪ್ರಶ್ರೇಷ್ಠನಾದ, ಜಮದಗ್ನಿಯ ಮಗನಾದ ಪರಶುರಾಮನನ್ನು ರಣಾಂಗಣದಲ್ಲಿ ಪರಾಜಯಗೊಳಿಸಲು ನಾನು ಸಮರ್ಥನಾಗಲಿಲ್ಲ. ನನ್ನಿಂದ ಅವನನ್ನು ಪರಾಜಯಗೊಳಿಸಲು ಸಾಧ್ಯವಾಗುತ್ತಿಲ್ಲ. ಜಮದಗ್ನಿಯ ಮಗನಾದ ಪರಶುರಾಮನನ್ನು ನಾನು ಜಯಿಸುವ ಸಂಭವವೇನಾದರೂ ಇದ್ದಪಕ್ಷದಲ್ಲಿ ಈ ರಾತ್ರಿಯ ಸ್ವಪ್ನದಲ್ಲಿ ಪ್ರಸನ್ನರಾದ ದೇವತೆಗಳು ನನಗೆ ಕಾಣಿಸಿಕೊಳ್ಳಲಿ ಮತ್ತು ಅವನನ್ನು ಜಯಿಸುವ ಮಾರ್ಗವನ್ನು ತೋರಿಸಿಕೊಡಲಿ.'

ರಾಜೇಂದ್ರ! ಹೀಗೆ ಮನಸ್ಸಿನಲ್ಲಿ ನಿಶ್ಚಯಿಸಿಕೊಂಡು ಅಂದು ನಾನು ಮಲಗಿದೆನು. ಬಾಣಗಳ ಗಾಯದಿಂದ ಬಳಲಿದ್ದ ನನಗೆ ಚೆನ್ನಾಗಿ ನಿದ್ದೆ ಬಂದಿತು. ನಾನು ಬಲಮಗ್ಗುಲಾಗಿ ಮಲಗಿದ್ದೆನು. ಬೆಳಗಾಗುವುದರಲ್ಲಿ

ದ್ದಾಗ ನನಗೊಂದು ಸ್ವಪ್ನವಾಯಿತು. ದುರ್ಯೋಧನ! ನಾನು ಪರಶುರಾಮನ ಬಾಣಪ್ರಹಾರದಿಂದ ಪೀಡಿತನಾಗಿ ರಥದಿಂದ ಕೆಳಕ್ಕೆ ಬಿದ್ದ ಸಮಯದಲ್ಲಿ ಎಂಟು ಮಂದಿ ಬ್ರಾಹ್ಮಣರು ಬಂದು ನನ್ನನ್ನು ಸುತ್ತುವರಿದು ನಿಂತುದು ; ನನ್ನನ್ನು ಎತ್ತಿಕೊಂಡುದು ; 'ಮಾ ಭೈಃ' ಭಯಪಡಬೇಡ ಎಂದು ಹೇಳುತ್ತಾ ನನ್ನನ್ನು ಸಂತೈಸಿದುದು – ಈ ವಿಷಯವನ್ನು ನಿನಗೆ ಮೊದಲೇ ಹೇಳಿದೆನಲ್ಲವೆ? ಅದೇ ಎಂಟು ಮಂದಿ ಬ್ರಾಹ್ಮಣರು ಪುನಃ ಸ್ವಪ್ನದಲ್ಲಿ ಕಾಣಿಸಿಕೊಂಡು ನನ್ನನ್ನು ಸುತ್ತುವರಿದು ನಿಂತು ಹೇಳಿದರು. ಅವರೇನು ಹೇಳಿದರೆಂಬುದನ್ನು ನಿನಗೂ ಹೇಳುವೆನು ಕೇಳು :

**ಉತ್ತಿಷ್ಠ ಮಾ ಭೈರ್ಗಾಙ್ಗೇಯ ನ ಭಯಂ ತೇಽಸ್ತಿ ಕಿಂಚನ ।**
**ರಕ್ಷಾಮಹೇ ತ್ವಾಂ ಕೌರವ್ಯ ಸ್ವಶರೀರಂ ಹಿ ನೋ ಭವಾನ್ ॥೯॥**

"ಗಾಂಗೇಯನೇ! ಭಯಪಡಬೇಡ. ಎದ್ದು ನಿಂತುಕೋ. ನಿನಗೆ ಸ್ವಲ್ಪವಾದರೂ ಭಯವಿರಲು ಕಾರಣವಿಲ್ಲ. ನಾವು ನಿನ್ನನ್ನು ರಕ್ಷಣೆಮಾಡುತ್ತೇವೆ. ಏಕೆಂದರೆ : ನೀನು ನಮ್ಮ ಶರೀರರೂಪನೇ ಆಗಿರುವೆ. ನಮಗೆ ಸೇರಿದವನೇ ಆಗಿರುವೆ. ಜಮದಗ್ನಿಯ ಮಗನಾದ ಪರಶುರಾಮನು ಖಂಡಿತವಾಗಿಯೂ ನಿನ್ನನ್ನು ಯುದ್ಧದಲ್ಲಿ ಜಯಿಸಲಾರನು. ಅದಕ್ಕೆ ಬದಲಾಗಿ ನೀನೇ ರಾಮನನ್ನು ಯುದ್ಧದಲ್ಲಿ ಜಯಿಸುವೆ. ಇದೋ, ಈ ಅಸ್ತ್ರವನ್ನು ಸ್ವೀಕರಿಸು. ಇದು ಪ್ರಸ್ವಾಪನವೆಂಬ ಹೆಸರಿನ ಮಹಾಸ್ತ್ರವು. ಈ ಅಸ್ತ್ರದ ಅಧಿದೇವತೆಯು ಪ್ರಜಾಪತಿಬ್ರಹ್ಮನು. ಈ ಅಸ್ತ್ರವು ವಿಶ್ವಕರ್ಮನಿಂದಲೇ ನಿರ್ಮಿಸಲ್ಪಟ್ಟಿದೆ. ಇದು ನಿನಗೂ ಪರಮಪ್ರಿಯವೇ ಆಗಿದೆ. ಇದನ್ನು ಪಡೆದುಕೊಂಡೊಡನೆಯೇ ಇದರ ಪ್ರಯೋಗವಿಧಿಯು ನಿನ್ನ ಸ್ಮರಣೆಗೆ ಬರುತ್ತದೆ. ಹೇಗೆಂದರೆ : ನಿನ್ನ ಹಿಂದಿನ ಜನ್ಮದಲ್ಲಿ ಇದೇ ಅಸ್ತ್ರವನ್ನು ನೀನು ಹೊಂದಿದ್ದೆ. ಇದರ ಪ್ರಯೋಗೋಪಸಂಹಾರವಿದ್ಯೆಯು ಆಗ ನಿನಗೆ ತಿಳಿದಿದ್ದಿತು. ಪರಶುರಾಮನ ಬಳಿಯಲ್ಲಿ ಇಂತಹ ಮಹಾಸ್ತ್ರವಿರುವುದಿಲ್ಲ.

ಭೂಮಿಯಲ್ಲಿ ಬೇರಾರಲ್ಲಿಯೂ ಇಂತಹ ಅಸ್ತ್ರವಿರುವುದಿಲ್ಲ. ಈ ಪ್ರಸ್ವಾಪನಾಸ್ತ್ರದ ವಿಜ್ಞಾನವನ್ನು ಯಾರೂ ತಿಳಿದುಕೊಂಡಿಲ್ಲ. ಮಹಾ ಬಾಹುವೇ! ಈ ಮಹಾಸ್ತ್ರವನ್ನು ಸ್ಮರಿಸು. ಧನುಸ್ಸಿನಲ್ಲಿ ಸಂಯೋಜಿಸು.

ಒಡನೆಯೇ ಈ ಮಹಾಸ್ತ್ರವು ತಾನಾಗಿಯೇ ನಿನ್ನ ಸಮೀಪಕ್ಕೆ ಬಂದು ನಿಲ್ಲುತ್ತದೆ. ನಿನ್ನ ಅಧೀನವಾಗುತ್ತದೆ. ಈ ಮಹಾಸ್ತ್ರದ ಪ್ರಭಾವದಿಂದ ನೀನು ಎಲ್ಲ ಮಹಾವೀರರನ್ನೂ ಪ್ರಶಾಸನಮಾಡಲು ಸಮರ್ಥನಾಗುವೆ. ಈ ಮಹಾಸ್ತ್ರಪ್ರಯೋಗದಿಂದ ಪರಶುರಾಮನೂ ವಿನಾಶಹೊಂದುವುದಿಲ್ಲ. 'ಈ ಅಸ್ತ್ರಪ್ರಯೋಗದಿಂದ ಪರಶುರಾಮನ ಸಂಹಾರವಾಗಿಬಿಡುತ್ತದೆ. ಗುರುವನ್ನೂ ಬ್ರಾಹ್ಮಣನನ್ನೂ ಕೊಂದ ಪಾಪವು ಸಂಘಟನೆಯಾಗುತ್ತದೆ'– ಎಂದೂ ನೀನು ಭಯಪಡಬೇಕಾಗಿಲ್ಲ. ಈ ಅಸ್ತ್ರಪ್ರಯೋಗದಿಂದ ಪರಶುರಾಮನು ಸಾಯುವುದಿಲ್ಲ. ನಿನಗೆ ಪಾಪಸಂಘಟನೆಯೂ ಆಗುವುದಿಲ್ಲ. ನೀನು ಅಭಿಮಂತ್ರಿಸಿ ಬಿಡುವ ಈ ಬಾಣದ ಬಲದಿಂದ ಪೀಡಿತನಾಗುವ ಪರಶುರಾಮನು ರಣಾಂಗಣದಲ್ಲಿಯೇ ಮಲಗಿಬಿಡುತ್ತಾನೆ. ಈ ರೀತಿಯಾಗಿ ಪರಮಪ್ರಿಯವಾದ ಮಹಾಸ್ತ್ರದ ಮೂಲಕವಾಗಿ ಅವನನ್ನು ಪರಾಜಯಗೊಳಿಸಿದನಂತರ ಪುನಃ ನೀನು ಸಂಬೋಧನಾಸ್ತ್ರವನ್ನು ಪ್ರಯೋಗಿಸಿ ಅವನನ್ನು ಎಚ್ಚರಗೊಳಿಸಬಹುದು. ಬೆಳಗಾಗುತ್ತಲೇ ಪರಶುರಾಮನೊಡನೆ ಯುದ್ಧಮಾಡಲು ಹೋಗುವ ನೀನು ನಾವು ಹೇಳಿದಂತೆಯೇ ಮಾಡು. ನಿನ್ನ ಎದುರಾಳಿಯು ಮಲಗುವುದು ಅಥವಾ ಮರಣಹೊಂದುವುದು ಎರಡು ಸಮಾನರೂಪವೇ ಆಗುವುದೆಂದು ನಾವು ಭಾವಿಸಿದ್ದೇವೆ. ರಾಮನೆಂದಿಗೂ ಮರಣಹೊಂದುವುದಿಲ್ಲ. ಅವನು ಮರಣಹೊಂದಲೂ ಕೂಡದು. ಈ ಕಾರಣದಿಂದಲೇ ನಿನಗಿಂದು ಈ ಪ್ರಸ್ವಾಪನಮಹಾಸ್ತ್ರವು ಲಭಿಸಿದೆ. ಇದನ್ನೇ ನೀನು ಅವನ ಮೇಲೆ ಪ್ರಯೋಗಿಸು."

ದುರ್ಯೋಧನ! ಹೀಗೆ ಹೇಳಿ ಸಮಾನರೂಪರಾಗಿದ್ದ ತೇಜೋಮಯ ಮೂರ್ತಿಗಳಾಗಿದ್ದ ಆ ಎಂಟು ಮಂದಿ ಬ್ರಾಹ್ಮಣೋತ್ತಮರೂ ಅದೃಶ್ಯರಾದರು."

೧೮೩ನೆಯ ಅಧ್ಯಾಯವು ಮುಗಿಯಿತು.

೧೮೪ನೆಯ ಅಧ್ಯಾಯ ಅಮ್ಬೋಪಾಖ್ಯಾನಪರ್ವ (ಮುಂದುವರಿದಿದೆ.)

## ಭೀಷ್ಮ-ಪರಶುರಾಮರ ಘೋರಯುದ್ಧ: ಶಕ್ತಿ-ಬ್ರಹ್ಮಾಸ್ತ್ರಗಳ ಪ್ರಯೋಗ

ಭೀಷ್ಮನು ಹೇಳುತ್ತಾನೆ :

"ದುರ್ಯೋಧನ! ರಾತ್ರಿಯು ಕಳೆಯಿತು. ಬೆಳಗಾಗುತ್ತಲೇ ಎಚ್ಚರಗೊಂಡೆನು. ಬೆಳಗಿನಜಾವದ ಕನಸಿನಲ್ಲಿ ಕಂಡುದನ್ನು ಮತ್ತೆ ಸ್ಮರಿಸಿಕೊಂಡೆನು. ಸ್ವಪ್ನದ ಸ್ಮರಣೆಯಿಂದಾಗಿ ನನಗೆ ಬಹಳವಾದ ಸಂತೋಷವುಂಟಾಯಿತು. ಬೆಳಗಾಗುತ್ತಲೇ ಯಥಾಪೂರ್ವವಾಗಿ ನನಗೂ ಮತ್ತು ಪರಶುರಾಮನಿಗೂ ಯುದ್ಧವು ಪ್ರಾರಂಭವಾಯಿತು. ಆ ಯುದ್ಧವು ನಿಶ್ಚಯವಾಗಿಯೂ ಸರ್ವಪ್ರಾಣಿಗಳಿಗೂ ರೋಮಾಂಚಕಾರಕವೂ–ಅದ್ಭುತವೂ ಆಗಿದ್ದಿತು. ಯುದ್ಧವು ಪ್ರಾರಂಭವಾದಕೂಡಲೇ ಭಾರ್ಗವನು ಬಾಣಮಯವಾದ ಮಳೆಯನ್ನು ನನ್ನ ಮೇಲೆ ಸುರಿಸಿದನು. ಸಾಮೂಹಿಕ ಶಸ್ತ್ರಪ್ರಯೋಗದಿಂದ ಅವನು ಬಿಟ್ಟ ಬಾಣವರ್ಷವನ್ನು ನಾನೂ ನಿರಸನ ಗೊಳಿಸಿದೆನು. ಅದರಿಂದಾಗಿ ಪರಶುರಾಮನು ಪರಮಕ್ರುದ್ಧನಾದನು. ಜೊತೆಗೆ ಹಿಂದಿನ ದಿನ ನಾನು ಅವನನ್ನು ಮೂರ್ಛೆಗೊಳಿಸಿದ ಕೋಪವೂ ಪರಶುರಾಮನಿಗಿದ್ದಿತು. ಪರಮಕ್ರುದ್ಧನಾಗಿದ್ದ, ಮಹಾತಪಸ್ವಿಯಾದ ಪರಶುರಾಮನು ಪುನಃ ನನ್ನ ಮೇಲೆ ಶಕ್ತ್ಯಾಯುಧವನ್ನು ಪ್ರಯೋಗಿಸಿದನು. ಪರಶುರಾಮನು ಬಿಟ್ಟ ಶಕ್ತ್ಯಾಯುಧವು ಇಂದ್ರನ ವಜ್ರಾಯುಧಕ್ಕೆ ಸಮಾನವಾಗಿದ್ದಿತು. ಇಂದ್ರನ ವಜ್ರಾಯುಧವು ಕೇವಲ ಸ್ಪರ್ಶಮಾತ್ರ ದಿಂದಲೇ ಎದುರಾಳಿಯನ್ನು ವಿಧ್ವಂಸನಗೊಳಿಸುವಂತೆ- ಪರಶುರಾಮನು ಬಿಟ್ಟ ಶಕ್ತ್ಯಾಯುಧವು ಸ್ಪರ್ಶಮಾತ್ರದಿಂದಲೇ ಶತ್ರುಗಳನ್ನು ವಿಧ್ವಂಸನ ಗೊಳಿಸುವ ಸಾಮರ್ಥ್ಯವುಳ್ಳದ್ದಾಗಿದ್ದಿತು. ಅದರ ಪ್ರಭೆಯು ಯಮದಂಡದ ಪ್ರಭೆಗೆ ಸಮಾನವಾಗಿದ್ದಿತು.

ಯಜ್ಞೇಶ್ವರನಂತೆ ಆ ಶಕ್ತ್ಯಾಯುಧವು ಜಾಜ್ವಲ್ಯಮಾನವಾಗಿ ಪ್ರಜ್ವಲಿಸುತ್ತಿದ್ದಿತು. ಎದುರಾಗಿ ಸಿಕ್ಕಿದ ಎಲ್ಲವನ್ನೂ ಹೀರಿಬಿಡುತ್ತದೆಯೋ ಎಂಬಂತೆ ಕಾಣುತ್ತಿದ್ದಿತು. ಆಕಾಶದಲ್ಲಿರುವ ಮಹಾನಕ್ಷತ್ರದಂತೆ ಥಳ-

ಘಳನೆ ಹೊಳೆಯುತ್ತಿದ್ದ ಆ ಶಕ್ತ್ಯಾಯುಧವು ಬಹುಶೀಘ್ರವಾಗಿ ನನ್ನ ಬಳಿಗೆ ಬಂದು ನನ್ನ ಜತ್ರುಪ್ರದೇಶವನ್ನು (ಕತ್ತು ಮತ್ತು ಭುಜಗಳು ಸೇರುವ ಜಾಗವನ್ನು) ಪ್ರಹರಿಸಿತು. ಮಹಾಬಾಹುವೇ! ರಾಮನ ಶಕ್ತ್ಯಾಯುಧದ ಪ್ರಹಾರದಿಂದಾಗಿ ನನ್ನ ಕತ್ತಿನ ಪ್ರದೇಶದಲ್ಲಿ ಬಹುಘೋರವಾದ ಗಾಯವಾಗಿ ರಕ್ತವು ಪ್ರವಾಹರೂಪವಾಗಿ ಹರಿಯತೊಡಗಿತು. ಮಳೆಬಂದಾಗ ಪರ್ವತದ ಮೇಲಿನಿಂದ ಗೈರಿಕಾದಿ ಧಾತುಮಿಶ್ರಿತವಾದ ನೀರು ಪ್ರವಹಿಸುವಂತೆ–ನನ್ನ ಶರೀರದಿಂದ ರಕ್ತವು ಪ್ರವಹಿಸುತ್ತಿದ್ದಿತು. ಆ ಆಘಾತದಿಂದ ನಾನೂ ಬಹು ಕುಪಿತನಾಗಿ ಮೃತ್ಯುವಿಗೆ ಸಮಾನವಾಗಿದ್ದ, ಸರ್ಪದ ವಿಷದಷ್ಟು ತೀಕ್ಷ್ಣವಾಗಿದ್ದ ಬಾಣವನ್ನು ರಾಮನ ಮೇಲೆ ಪ್ರಯೋಗಿಸಿದೆನು. ನಾನು ಬಿಟ್ಟ ಬಾಣವು ಪರಶುರಾಮನ ನೆತ್ತಿಯಲ್ಲಿ ನೆಟ್ಟುಕೊಂಡಿತು. ಆ ಸಮಯದಲ್ಲವನು ಶಿಖರ ದಿಂದ ಕೂಡಿದ ಪರ್ವತದಂತೆಯೇ ಪ್ರಕಾಶಿಸಿದನು. ನನ್ನ ಬಾಣಪ್ರಹಾರ ದಿಂದ ಪರಶುರಾಮನೂ ಬಹಳ ಕೋಪಗೊಂಡನು. ಕಾಲಾಂತಕೋಪಮ ವಾದ, ಘೋರವಾದ, ಶತ್ರುನಾಶಕವಾದ ಬಾಣವೊಂದನ್ನು ಬತ್ತಳಿಕೆಯಿಂದ ತೆಗೆದು ಧನುಸ್ಸಿನಲ್ಲಿ ಯೋಜಿಸಿ ಶಿಂಜಿನಿಯನ್ನು ಕರ್ಣಪರ್ಯಂತವಾಗಿ ಬಲಪೂರ್ವಕವಾಗಿ ಸೆಳೆದು ನನ್ನ ಮೇಲೆ ಬಿಟ್ಟನು. ಮಹೋಗ್ರವಾದ ಆ ಬಾಣವು ಫೂತ್ಕರಿಸುವ ಸರ್ಪದಂತೆ ಶಬ್ದಮಾಡುತ್ತಾ ಬಂದು ನನ್ನ ಎದೆಯೊಳಕ್ಕೆ ಹೊಕ್ಕಿತು. ಒಡನೆಯೇ ನಾನು ರಕ್ತದಿಂದ ತೋಯ್ದು ಭೂಮಿಯ ಮೇಲೆ ವಿಸಂಜ್ಞನಾಗಿ ಬಿದ್ದುಬಿಟ್ಟೆನು. ಸ್ವಲ್ಪಹೊತ್ತಿನಲ್ಲಿಯೇ ನನಗೆ ಪುನಶ್ಚೈತನ್ಯವುಂಟಾಯಿತು. ರಥವನ್ನು ಹತ್ತಿಕುಳಿತು ಧೀಮಂತನಾದ ಜಾಮ ದಗ್ನ್ಯನ ಮೇಲೆ ವಜ್ರಾಯುಧದಂತೆ ಪ್ರಜ್ವಲಿಸುತ್ತಿದ್ದ ದೋಷರಹಿತ ವಾದ, ನಿರ್ಮಲವಾದ ಶಕ್ತ್ಯಾಯುಧವನ್ನು ಪ್ರಯೋಗಿಸಿದೆನು. ಆ ಶಕ್ತ್ಯಾಯುಧವು ಪರಶುರಾಮನ ಎರಡು ಭುಜಗಳ ನಡುಭಾಗದಲ್ಲಿ ನಾಟಿಕೊಂಡಿತು. ಅದರ ಪ್ರಹಾರದಿಂದಾಗಿ ಪರಶುರಾಮನು ವಿಹ್ವಲ ನಾದನು. ಅವನ ಶರೀರದಲ್ಲಿ ನಡುಕವು ಹುಟ್ಟಿಕೊಂಡಿತು. ರಾಮನ ಆ ಚಿಂತಾಜನಕವಾದ ಸ್ಥಿತಿಯನ್ನು ಕಂಡು ಅವನ ರಥದ ಸಾರಥ್ಯವನ್ನು ವಹಿಸಿದ್ದ ಮಹಾತಪಸ್ವಿಯಾದ, ಬ್ರಾಹ್ಮಣಶ್ರೇಷ್ಠನಾದ, ರಾಮನ ಪರಮಮಿತ್ರನಾದ ಅಕೃತವ್ರಣನು ರಾಮ ನನ್ನು ಗಾಢವಾಗಿ ಆಲಿಂಗಿಸಿಕೊಂಡು ಶುಭವಾಕ್ಯಗಳಿಂದ–ಸಾಂತ್ವವಚನ

ಗಳಿಂದ ಅನೇಕಪ್ರಕಾರವಾಗಿ ಆಶ್ವಸಿಸಿದನು. ಅಕೃತವ್ರಣನಿಂದ ಸಮಾಶ್ವಾಸಿತನಾದ ರಾಮನು ಧೈರ್ಯವನ್ನು ತಂದುಕೊಂಡು ಪುನಃ ಯುದ್ಧಕ್ಕೆ ಸಜ್ಜಾದನು. ಕ್ರೋಧದಿಂದಲೂ ಅಸಹನೆಯಿಂದಲೂ ಪೂರ್ಣನಾಗಿದ್ದ, ಮಹಾವ್ರತನಾದ ರಾಮನು ಉತ್ತಮೋತ್ತಮವಾದ ಬ್ರಹ್ಮಾಸ್ತ್ರವನ್ನೇ ನನ್ನ ಮೇಲೆ ಪ್ರಯೋಗಿಸಿದನು. ಅವನು ಬಿಟ್ಟ ಬ್ರಹ್ಮಾಸ್ತ್ರವನ್ನು ನಿರಸನಗೊಳಿಸುವ ಸಲುವಾಗಿ ಉತ್ತಮೋತ್ತಮವಾದ ಬ್ರಹ್ಮಾಸ್ತ್ರವನ್ನೇ ನಾನೂ ಪ್ರಯೋಗಿಸಿದೆನು. ನನ್ನಿಂದ ಬಿಡಲ್ಪಟ್ಟ ಬ್ರಹ್ಮಾಸ್ತ್ರವು ಪ್ರಳಯಕಾಲವೇ ಸನ್ನಿಹಿತವಾಗಿರುವುದೋ–ಎಂಬ ಭ್ರಾಂತಿಯನ್ನುಂಟುಮಾಡುತ್ತಾ ದೇದೀಪ್ಯಮಾನವಾಗಿ ಪ್ರಜ್ವಲಿಸಿತು. ನಾನು ಬಿಟ್ಟ ಮತ್ತು ಪರಶುರಾಮನು ಬಿಟ್ಟ ಬ್ರಹ್ಮಾಸ್ತ್ರಗಳೆರಡಕ್ಕೂ ಮಾರ್ಗಮಧ್ಯದಲ್ಲಿ ಸಮಾಗಮವುಂಟಾಯಿತು. ನಾನು ಬಿಟ್ಟ ಬ್ರಹ್ಮಾಸ್ತ್ರವು ರಾಮನ ಬಳಿಗೂ ಹೋಗಲಿಲ್ಲ ; ರಾಮನು ಬಿಟ್ಟ ಬ್ರಹ್ಮಾಸ್ತ್ರವು ನನ್ನ ಬಳಿಗೂ ಬರಲಿಲ್ಲ. ಎರಡು ಬ್ರಹ್ಮಾಸ್ತ್ರಗಳ ಪರಸ್ಪರಘರ್ಷಣೆಯಿಂದಾಗಿ ಆಕಾಶದಲ್ಲಿ ಅತ್ಯುಗ್ರವಾದ ತೇಜಸ್ಸು ಪ್ರಾದುರ್ಭೂತವಾಯಿತು. ಆ ತೇಜಸ್ಸಿನಿಂದ ಪ್ರಾಣಿಗಳೂ, ಋಷಿಗಳೂ, ಗಂಧರ್ವರೂ ಮತ್ತು ದೇವತೆಗಳೂ ಪೀಡಿತರಾದರು. ಪರ್ವತ-ವನ-ವೃಕ್ಷಸಹಿತಳಾದ ಭೂದೇವಿಯು ಕಂಪಿಸಿದಳು. ಪ್ರಪಂಚದ ಪ್ರಾಣಿಗಳೆಲ್ಲವೂ ಬ್ರಹ್ಮಾಸ್ತ್ರದ ತೇಜಸ್ಸಿನಿಂದ ಪರಿತಪಿಸುತ್ತಾ ವಿಷಾದಿಸಿದುವು. ಆಕಾಶವೇ ಧಗ-ಧಗನೆ ಉರಿಯತೊಡಗಿತು. ದಶದಿಕ್ಕುಗಳಲ್ಲಿಯೂ ಹೊಗೆಯು ತುಂಬಿಕೊಂಡಿತು. ಆಕಾಶಚರರಿಗೆ ಅಥವಾ ಆಕಾಶವಾಸಿಗಳಿಗೆ ಆ ಸಮಯದಲ್ಲಿ ಆಕಾಶದಲ್ಲಿರಲು ಸಾಧ್ಯವಾಗಲೇ ಇಲ್ಲ. ದೇವಾಸುರ-ರಾಕ್ಷಸಸಹಿತವಾದ ವಿಶ್ವದಲ್ಲಿ ಹಾಹಾಕಾರವುಂಟಾಯಿತು. ಪ್ರಸ್ವಾಪನಾಸ್ತ್ರವಿಮೋಕ್ಷಣಕ್ಕೆ ಅದೇ ಯುಕ್ತಸಮಯವೆಂದು ನಾನು ಭಾವಿಸಿದೆನು. ಕನಸಿನಲ್ಲಿ ಕಂಡ ಎಂಟು ಮಂದಿ ಬ್ರಹ್ಮವಾದಿಗಳ (ಬ್ರಾಹ್ಮಣರ) ವಚನಾನುಸಾರವಾಗಿ ವಿಚಿತ್ರವಾದ ಆ ಪ್ರಸ್ವಾಪನಾಸ್ತ್ರವು ಒಡನೆಯೇ ನನ್ನ ಮನಸ್ಸಿಗೆ ಗೋಚರವಾಯಿತು.”

೧೮೪ನೆಯ ಅಧ್ಯಾಯವು ಮುಗಿಯಿತು.

## ದೇವತೆಗಳು ಪ್ರಸ್ವಾಪನಾಸ್ತ್ರಪ್ರಯೋಗವನ್ನು ತಡೆದುದು : ದೇವ-ಪಿತೃಗಳ ಮತ್ತು ಗಂಗಾದೇವಿಯ ನಿರ್ದೇಶದಂತೆ ಪರಶುರಾಮ-ಭೀಷ್ಮರ ಯುದ್ಧಪರಿಸಮಾಪ್ತಿ

ಭೀಷ್ಮನು ಮುಂದುವರಿದು ಹೇಳುತ್ತಾನೆ :

"ಕೌರವನಂದನ! ನಾನು ಪರಶುರಾಮನ ಮೇಲೆ ಪ್ರಸ್ವಾಪನಾಸ್ತ್ರವನ್ನು ಬಿಡಬೇಕೆಂದಿದ್ದ ಸಮಯಕ್ಕೆ ಸರಿಯಾಗಿ ಅಂತರಿಕ್ಷದಲ್ಲಿ ಕೋಲಾಹಲ ಶಬ್ದವಾಯಿತು.

**ಪ್ರಸ್ವಾಪಂ ಭೀಷ್ಮ ಮಾ ಪ್ರಾಕ್ಷೀಃ ।**

'ಭೀಷ್ಮ! ಪ್ರಸ್ವಾಪನಾಸ್ತ್ರವನ್ನು ಪರಶುರಾಮನ ಮೇಲೆ ಪ್ರಯೋಗಿಸ ಬೇಡ'—ಎಂಬ ಮಾತು ಆಕಾಶದ ಕಡೆಯಿಂದ ಕೇಳಿಬಂದಿತು. ಆದರೆ ನಾನು ಆ ಮಾತಿನ ಕಡೆಗೆ ಲಕ್ಷ್ಯವನ್ನೇ ಕೊಡದೇ ಪ್ರಸ್ವಾಪನಾಸ್ತ್ರವನ್ನು ಧನುಸ್ಸಿಗೇರಿಸಿ ಪರಶುರಾಮನಿಗೆ ಗುರಿಯಿಟ್ಟೆನು. ಪ್ರಸ್ವಾಪನಾಸ್ತ್ರವನ್ನು ಬಿಡುವುದರಲ್ಲಿದ್ದ ನನ್ನನ್ನು ಕಂಡು ನಾರದಮಹರ್ಷಿಗಳು ಈ ಮಾತನ್ನು ಹೇಳಿದರು :

**ಏತೇ ವಿಯತಿ ಕೌರವ್ಯ ದಿವಿ ದೇವಗಣಾಃ ಸ್ಥಿತಾಃ ।**
**ತೇ ತ್ವಾಂ ನಿವಾರಯನ್ತ್ಯದ್ಯ ಪ್ರಸ್ವಾಪಂ ಮಾ ಪ್ರಯೋಜಯ ॥೩॥**

"ಆಕಾಶದಲ್ಲಿ ಉಪಸ್ಥಿತರಾಗಿರುವ ದೇವಗಣಗಳು ಪ್ರಸ್ವಾಪನಾಸ್ತ್ರವನ್ನು ಬಿಡಬೇಡವೆಂದು ನಿನ್ನನ್ನು ಬಾರಿ-ಬಾರಿಗೂ ತಡೆಯುತ್ತಿದ್ದಾರೆ. ಇದಕ್ಕೆ ಕಾರಣವಿಲ್ಲದಿಲ್ಲ.

**ರಾಮಸ್ತಪಸ್ವೀ ಬ್ರಹ್ಮಣ್ಯೋ ಬ್ರಾಹ್ಮಣಶ್ಚ ಗುರುಶ್ಚ ತೇ ।**
**ತಸ್ಯಾವಮಾನಂ ಕೌರವ್ಯ ಮಾ ಸ್ಮ ಕಾರ್ಷೀಃ ಕಥಂಚನ ॥೪॥**

ರಾಮನು ಮಹಾತಪಸ್ವಿಯು ; ಬ್ರಾಹ್ಮಣಭಕ್ತನು ; ಬ್ರಾಹ್ಮಣ ; ಮೇಲಾಗಿ ನಿನಗೆ ಧನುರ್ವಿದ್ಯೆಯನ್ನು ಹೇಳಿಕೊಟ್ಟ ಗುರುವೂ ಆಗಿದ್ದಾನೆ.

ಅಂತಹವನನ್ನು ನೀನು ಯಾವುದೇ ಕಾರಣದಿಂದಲೂ ಅವಮಾನ ಮಾಡಬೇಡ."

ರಾಜೇಂದ್ರ! ನಾರದರು ಹೀಗೆ ಹೇಳುತ್ತಿರುವಾಗಲೇ–ನಾನು ಹಿಂದಿನ ದಿನ ಬೆಳಗಿನಜಾವದಲ್ಲಿ ಕಂಡ ಎಂಟು ಮಂದಿ ಬ್ರಹ್ಮವಾದಿಗಳೂ ಸಹ ಆಕಾಶದಲ್ಲಿ ನಿಂತಿರುವುದನ್ನು ಕಂಡೆನು.

ಅವರು ಮಂದಹಾಸಯುಕ್ತರಾಗಿ ನನ್ನನ್ನು ಕುರಿತು ಮೆಲ್ಲ-ಮೆಲ್ಲನೆ ಈ ಮಾತುಗಳನ್ನು ಹೇಳಿದರು :

"ಭರತಶ್ರೇಷ್ಠನೇ! ನಾರದರು ನಿರ್ದೇಶಮಾಡಿರುವಂತೆಯೇ ಆಚರಿಸು. ಹಾಗೆ ಮಾಡುವುದರಿಂದ ಸಕಲಲೋಕಗಳಿಗೂ ಹೆಚ್ಚಿನ ಶ್ರೇಯಸ್ಸುಂಟಾಗುತ್ತದೆ."

ನನಗೆ ಪ್ರಸ್ವಾಪನಾಸ್ತ್ರವನ್ನು ಜ್ಞಾಪಿಸಿಕೊಟ್ಟ ಬ್ರಹ್ಮವಾದಿಗಳೂ ಹಾಗೆಯೇ ಹೇಳಿದುದರಿಂದ ನಾನು ಪ್ರಸ್ವಾಪನಮಹಾಸ್ತ್ರವನ್ನು ಉಪಸಂಹರಿಸಿ, ಆಕಾಶ ದಲ್ಲಿ ಪ್ರದೀಪ್ತವಾಗಿದ್ದ ಬ್ರಹ್ಮಾಸ್ತ್ರವನ್ನೂ ಯಥಾವಿಧಿಯಾಗಿ ದೀಪಪ್ರಾಯ ವನ್ನಾಗಿ ಮಾಡಿದೆನು. (ಸಂಕುಚಿಸಿದೆನು ; ಉಪಸಂಹರಿಸಿದೆನು.) ರಾಜಸಿಂಹನೇ! ದುರ್ಯೋಧನ! ಪ್ರಸ್ವಾಪನಮಹಾಸ್ತ್ರವು ಉಪಸಂಹೃತವಾದುದನ್ನು ಕಂಡು ಪರಶುರಾಮನು ಪ್ರಸನ್ನನಾದನು. ಪರಶುರಾಮನ ಮುಖಾರವಿಂದದಿಂದ ಮರುಕ್ಷಣದಲ್ಲಿಯೇ :

**ಜಿತೋಽಸ್ಮಿ ಭೀಷ್ಮೇಣ ಸುಮನ್ದಬುದ್ಧಿಃ ।**

'ಅತ್ಯಂತಮೂರ್ಖನಾದ ನಾನು ಭೀಷ್ಮನಿಂದ ಪರಾಜಿತನಾದೆನು'– ಎಂಬ ಉದ್ಗಾರವು ಹೊರಟಿತು. ಆ ಸಮಯಕ್ಕೆ ಸರಿಯಾಗಿ ಪರಶುರಾಮನು ತನ್ನ ತಂದೆಯಾದ ಜಮದಗ್ನಿಯನ್ನೂ–ಪಿತಾಮಹನಾದ ಮತ್ತು ಮಾನ್ಯನಾದ ಋಚೀಕಮಹರ್ಷಿಯನ್ನೂ ರಣಾಂಗಣದಲ್ಲಿಯೇ ಸಂದರ್ಶಿಸಿದನು. ಇತರ ಪಿತೃದೇವತೆಗಳೂ ಅವರೊಡನಿದ್ದರು. ಪಿತೃದೇವತೆಗಳೊಡನಿದ್ದ, ಋಚೀಕ-ಜಮದಗ್ನಿಗಳು ಪರಶುರಾಮನನ್ನು ಸುತ್ತುವರಿದು ನಿಂತು ಸಾಂತ್ವನಪೂರ್ವಕವಾದ ಈ ಮಾತುಗಳನ್ನು ಹೇಳಿದರು :

"ಮಗು! ಮುಂದೆಂದೂ ಯಾವುದೇ ಕಾರಣದಿಂದಲೂ ಈ ವಿಧವಾದ

ಸಾಹಸಕಾರ್ಯದಲ್ಲಿ ತೊಡಗಬೇಡ. ಭೀಷ್ಮನೊಡನೆ, ವಿಶೇಷವಾಗಿ ಕ್ಷತ್ರಿಯ ಧರ್ಮದಲ್ಲಿ ನಿರತನಾಗಿರುವವನೊಡನೆ ಯುದ್ಧಮಾಡುವುದು ನಿನಗೆ ಖಂಡಿತವಾಗಿಯೂ ಉಚಿತವೆನಿಸುವುದಿಲ್ಲ.

**ಕ್ಷತ್ರಿಯಸ್ಯ ತು ಧರ್ಮೋಽಯಂ ಯದ್ಯುದ್ಧಂ ಭೃಗುನನ್ದನ ।**
**ಸ್ವಾಧ್ಯಾಯೋ ವ್ರತಚರ್ಯಾಥ ಬ್ರಾಹ್ಮಣಾನಾಂ ಪರಂ ಧನಮ್ ॥**

ಯುದ್ಧವೆಂಬುದು ಯಾವುದುಂಟೋ–ಅದು ಕ್ಷತ್ರಿಯರಿಗೆ ಸೇರಿದುದು. ಯುದ್ಧಮಾಡುವುದು ಕ್ಷತ್ರಿಯಧರ್ಮ. ಸ್ವಾಧ್ಯಾಯ, ವೇದಾಧ್ಯಯನ, ವ್ರತಾನುಷ್ಠಾನ–ಇವುಗಳು ಬ್ರಾಹ್ಮಣಧರ್ಮಗಳು. ಇವೇ ಅವನ ಶ್ರೇಷ್ಠವಾದ ಸಂಪತ್ತಾಗಿರುತ್ತದೆ. ಈ ಮಾತನ್ನೇ ನಾವು ಹಿಂದೊಮ್ಮೆ ಮತ್ತೊಂದು ಕಾರಣಕ್ಕಾಗಿ ನಿನ್ನೊಡನೆ ಹೇಳಿದ್ದೆವು. ಶಸ್ತ್ರಧಾರಣವೆಂಬುದೇ ಅತ್ಯುಗ್ರವಾದ ಕರ್ಮ. ಬ್ರಾಹ್ಮಣನಿಗಂತೂ ಇದು ನಿಷಿದ್ಧಕರ್ಮವೇ ಸರಿ. ಬ್ರಾಹ್ಮಣನಿಗೆ ಅಯೋಗ್ಯವೆನಿಸಿದ ಇಂತಹ ಕಾರ್ಯವನ್ನು ನೀನೀಗ ಮಾಡಿರುವೆ.

ಮಹಾಬಾಹುವೇ! ಭೀಷ್ಮನೊಡನೆ ಯುದ್ಧದಲ್ಲಿ ನೀನು ಮಾಡಿದ ವಿಧ್ವಂಸಾತ್ಮಕಕ್ರಿಯೆಯು ಪರ್ಯಾಪ್ತವಾಗಿದೆ. (ಸಾಕಷ್ಟಾಗಿದೆ.). ಈಗಲೇ ನೀನು ಈ ರಣಾಂಗಣದಿಂದ ಹೊರಟುಬಿಡು. ಭೃಗುನಂದನ! ನಿನಗೆ ಮಂಗಳವಾಗಲಿ. ನಿನ್ನ ವರ್ಣಾಶ್ರಮಧರ್ಮಕ್ಕೆ ಯೋಗ್ಯವಲ್ಲದ ಧನು ರ್ಧಾರಣಕ್ರಿಯೆಯನ್ನೂ ಸಾಕುಮಾಡು. ಇದುವರೆಗೂ ನೀನು ಧನುಸ್ಸನ್ನು ಧರಿಸಿದುದೇ ಪರ್ಯಾಪ್ತವಾಗಿದೆ. ದುರ್ಧರ್ಷನೇ! ಧನುಸ್ಸನ್ನು ಈ ಕೂಡಲೇ ವಿಸರ್ಜಿಸು. ತಪಸ್ಸನ್ನು ಮಾಡು. ನಿನ್ನನ್ನು ರಕ್ಷಿಸುವ ಸಲುವಾಗಿ ದೇವತೆಗಳೇ ಬರಬೇಕಾಯಿತು. ದೇವತೆಗಳು ಪ್ರಸ್ವಾಪನಾಸ್ತ್ರವನ್ನು ಹಿಂತೆಗೆದುಕೊಳ್ಳುವಂತೆ ಭೀಷ್ಮನನ್ನು ಪ್ರಸನ್ನಗೊಳಿಸಿದರು. ರಣಾಂಗಣ ದಿಂದ ಹಿಂದಕ್ಕೆ ಹೋಗುವಂತೆಯೂ ಪ್ರಾರ್ಥಿಸಿದರು. ಗುರುವಾದ ರಾಮನೊಡನೆ ಯುದ್ಧಮಾಡಬೇಡವೆಂದು ಭೀಷ್ಮನಿಗೆ ದೇವತೆಗಳು ಪುನಃ ಪುನಃ ಹೇಳಿದರು : 'ಕುರೂದ್ವಹನೇ! ನಿನಗೆ ಆಚಾರ್ಯನಾದ ರಾಮನನ್ನು ಯುದ್ಧದಲ್ಲಿ ಪರಾಜಯಗೊಳಿಸುವುದು ನ್ಯಾಯಸಮ್ಮತವಲ್ಲ. ನಿನಗೆ ಗುರುವಾಗಿರುವ ಪರಶುರಾಮನ ಮಾನವುಳಿಸು. ರಣಾಂಗಣದಲ್ಲಿ ಅವನನ್ನು

ಪರಾಜಯಗೊಳಿಸಿ ಅಪಮಾನಿತನನ್ನಾಗಿ ಮಾಡಬೇಡ' –ಎಂದೂ ದೇವತೆಗಳು ಭೀಷ್ಮನಿಗೆ ಹೇಳಿದರು. ಭಾರ್ಗವ! ನಾವು ನಿನ್ನ ಗುರುಜನರಾಗಿದ್ದೇವೆ. ಆದುದರಿಂದ ಭೀಷ್ಮನೊಡನೆ ಪುನಃ ಯುದ್ಧಕ್ಕೆ ಹೋಗದಂತೆ ನಿನ್ನನ್ನು ತಡೆಯುತ್ತಿದ್ದೇವೆ. ಭೀಷ್ಮನಾರೆಂದು ತಿಳಿದಿರುವೆಯಾ? ಮಗು! ಇವನು ಅಷ್ಟವಸುಗಳಲ್ಲೊಬ್ಬನು. ಇವನಿಂದ ನೀನು ಹತನಾಗಿಬಿಡಬೇಕಾಗಿತ್ತು. ಅದೃಷ್ಟವಶದಿಂದ ಬದುಕಿರುವೆ. ಮಹಾತ್ಮನಾದ ಶಾಂತನುವಿನ ಪುತ್ರನಾದ ಯಶೋವಂತನಾದ ಇವನು ಪರಮಪವಿತ್ರಳಾದ ಗಂಗೆಯ ಗರ್ಭಸಂಭೂತನು ಇಂತಹವನನ್ನು ನೀನು ಹೇಗೆ ತಾನೇ ಜಯಿಸುವೆ? ಭಾರ್ಗವ! ಯುದ್ಧದಿಂದ ಪ್ರತಿನಿವೃತ್ತನಾಗು.

ಭೀಷ್ಮನಿಗೆ ಮರಣವೇ ಇಲ್ಲವೆಂದಲ್ಲ. ಆದರೆ ಕಾಲವಿನ್ನೂ ಸನ್ನಿಹಿತ ವಾಗಿಲ್ಲ. ಪಾಂಡವಶ್ರೇಷ್ಠನಾದ, ಇಂದ್ರನ ಮಗನಾದ, ಮಹಾಬಲಿಷ್ಠನಾದ, ನರನಾಮಕನಾದ, ಪ್ರಜಾಪಾಲಕನಾದ, ವೀರನಾದ, ಸನಾತನನಾದ, ಮೂರು ಲೋಕಗಳಲ್ಲಿಯೂ ಸವ್ಯಸಾಚಿಯೆಂದು ವಿಖ್ಯಾತನಾದ, ಮಹಾ ಪರಾಕ್ರಮಿಯಾದ ಅರ್ಜುನನು ಭೀಷ್ಮನ ಮೃತ್ಯುವೆಂದು (ಸಂಹಾರಕನೆಂದು) ಬ್ರಹ್ಮನು ನಿಯಮನಮಾಡಿದ್ದಾನೆ."

ದುರ್ಯೋಧನ! ಪಿತೃದೇವತೆಗಳ ಮಾತನ್ನು ಕೇಳಿ ರಾಮನು ಅವರನ್ನುದ್ದೇಶಿಸಿ ಹೇಳಿದನು :

**ನಾಹಂ ಯುಧಿ ನಿವರ್ತೇಯಮಿತಿ ಮೇ ವ್ರತಮಾಹಿತಮ್ ॥೨೧॥**

"ಯುದ್ಧದಲ್ಲಿ ಪರಾಙ್ಮುಖನಾಗುವುದಿಲ್ಲವೆಂದು ನಾನು ವ್ರತ ತೊಟ್ಟಿದ್ದೇನೆ. ನಾನು ಈ ಹಿಂದೆಯೂ ಯಾವಾಗಲೂ ಯುದ್ಧದಿಂದ ಪರಾಙ್ಮುಖನಾಗಿಲ್ಲ. ಪಿತಾಮಹರೇ! ನಿಮ್ಮ ಇಚ್ಛಾನುಸಾರವಾಗಿ ಆಪಗೇಯನಾದ ಭೀಷ್ಮನನ್ನೇ ಯುದ್ಧದಿಂದ ಪ್ರತಿನಿವೃತ್ತನಾಗುವಂತೆ ಮಾಡಿರಿ. ಆದರೆ ನಾನು ಮಾತ್ರ ಈ ಯುದ್ಧದಿಂದ ಯಾವುದೇ ಕಾರಣದಿಂದಲೂ ಹಿಂದಿರುಗತಕ್ಕವನಲ್ಲ."

ಪರಶುರಾಮನ ದೃಢನಿರ್ಧಾರವನ್ನು ಕೇಳಿದ ಋಚೀಕಪ್ರಮುಖರಾದ ಪಿತೃದೇವತೆಗಳು ನಾರದರೊಡನೆ ನನ್ನ ಬಳಿಗೆ ಬಂದು :

**ನಿವರ್ತಸ್ವ ರಣಾತ್ತಾತ ಮಾನಯಸ್ವ ದ್ವಿಜೋತ್ತಮಮ್ ॥೨೪॥**

"ಮಗು, ಭೀಷ್ಮ! ಯುದ್ಧದಿಂದ ವಿಮುಖನಾಗು, ನಿನ್ನ ಗುರುವಾದ, ಬ್ರಾಹ್ಮಣೋತ್ತಮನಾದ ಪರಶುರಾಮನನ್ನು ಗೌರವಿಸು"–ಎಂದು ಹೇಳಿದರು.

ಅವರ ಆ ಮಾತನ್ನು ಕೇಳಿ ಕ್ಷತ್ರಧರ್ಮವನ್ನು ಲಕ್ಷ್ಯದಲ್ಲಿಟ್ಟುಕೊಂಡು ನಾನು ಉತ್ತರಿಸಿದೆನು :

"ಮಹರ್ಷಿಗಳೇ! ಯುದ್ಧದಿಂದ ಯಾವುದೇ ಕಾರಣದಿಂದಲೂ ವಿಮುಖನಾಗಕೂಡದೆಂಬುದೇ ನನ್ನ ವ್ರತವೂ ಆಗಿದೆ. ಪೃಷ್ಠಭಾಗದಲ್ಲಿ (ಬೆನ್ನಿನಲ್ಲಿ) ಶಸ್ತ್ರಾಘಾತವನ್ನು ಹೊಂದಿ ನಾನೆಂದಿಗೂ ಪರಾಙ್ಮುಖನಾಗತಕ್ಕವನಲ್ಲ. ಯುದ್ಧದಲ್ಲಿ ಶತ್ರುವಿಗೆ ಬೆನ್ನು ತೋರಿಸಕೂಡದೆಂಬುದು ಕ್ಷತ್ರಿಯ ಧರ್ಮವಾಗಿದೆ. ಲೋಭದಿಂದಾಗಲೀ, ಕಾರ್ಪಣ್ಯದಿಂದಾಗಲೀ, ಭಯದಿಂದಾಗಲೀ, ಯಾವುದೇ ಸ್ವಾರ್ಥದ ಕಾರಣದಿಂದಾಗಲೀ–ಶಾಶ್ವತವಾದ ಸನಾತನವಾದ ಈ ಕ್ಷತ್ರಿಯಧರ್ಮವನ್ನು ನಾನು ಪರಿತ್ಯಜಿಸತಕ್ಕವನಲ್ಲ. ಇದೇ ನನ್ನ ಮನಸ್ಸಿನ ನಿರ್ಧಾರವಾಗಿದೆ."

ಹೀಗೆ ಹೇಳಿ, ಹಿಂದಿನಂತೆಯೇ ಧನುರ್ಬಾಣಗಳನ್ನು ಹಿಡಿದು ಯುದ್ಧದಿಂದ ಹಿಂದಿರುಗುವುದಿಲ್ಲವೆಂಬ ದೃಢನಿಶ್ಚಯದಿಂದ ರಾಮನೊಡನೆ ಯುದ್ಧಸನ್ನದ್ಧನಾಗಿ ರಥದಲ್ಲಿ ಕುಳಿತೆನು. ಅನಂತರ ನಾರದಪ್ರಮುಖರಾದ ಋಷಿಗಳೂ, ಋಚೀಕನೇ ಮೊದಲಾದ ಪಿತೃದೇವತೆಗಳೂ ಮತ್ತು ನನ್ನ ತಾಯಿಯಾದ ಗಂಗಾದೇವಿಯೂ ರಣಾಂಗಣದ ಮಧ್ಯದಲ್ಲಿ ಸ್ವಲ್ಪಹೊತ್ತು ಕಲೆತು ಸಮಾಲೋಚಿಸಿ ಪುನಃ ಎಲ್ಲರೂ ಒಟ್ಟಾಗಿ ರಾಮನ ಸಮೀಪಕ್ಕೆ ಹೋಗಿ ಅವನನ್ನು ಕುರಿತು ಹೇಳಿದರು :

"ಶಾಂತನಾಗು, ಪರಶುರಾಮ! ಬ್ರಾಹ್ಮಣರ ಹೃದಯವು ಬೆಣ್ಣೆಗೆ ಸಮಾನವಾದುದು. ಬಹಳ ಬೇಗ ಕರಗಿಬಿಡುತ್ತದೆ. ಕಠಿನವಾದುದಲ್ಲ. ಆದುದರಿಂದ ಕೋಮಲಹೃದಯನಾದ ನೀನು ಈ ಯುದ್ಧದಿಂದ ನಿವೃತ್ತನಾಗು.

ನೀವಿಬ್ಬರೂ ಪರಸ್ಪರವಾಗಿ ಎಷ್ಟು ದಿನಗಳು ಯುದ್ಧಮಾಡಿದರೂ ಯಾವ ಪ್ರಯೋಜನವೂ ಆಗುವುದಿಲ್ಲ.

**ಅವಧ್ಯೋ ವೈ ತ್ವಯಾ ಭೀಷ್ಮಸ್ತ್ವಂ ಚ ಭೀಷ್ಮಸ್ಯ ಭಾರ್ಗವ ॥೩೦॥**

ನೀನು ಭೀಷ್ಮನನ್ನು ಸಂಹಾರಮಾಡಲಾರೆ ; ಭೀಷ್ಮನೂ ನಿನ್ನನ್ನು ಸಂಹಾರಮಾಡಲಾರನು."

ಹೀಗೆ ಹೇಳಿದ ನಾರದಪ್ರಮುಖರಾದ ಋಷಿಗಳೂ ಮತ್ತು ಪಿತೃದೇವತೆಗಳೂ ರಣಾಂಗಣದ ಮಧ್ಯದಲ್ಲಿ ರಾಮನನ್ನು ಸುತ್ತುವರಿದು ನಿಂತುಬಿಟ್ಟರು. ಅವನು ಬಾಣಪ್ರಯೋಗಮಾಡಲು ಅವಕಾಶವನ್ನೇ ಕೊಡಲಿಲ್ಲ. ಋಚೀಕನೇ ಮೊದಲಾದ ಪಿತೃದೇವತೆಗಳು ಪುನಃ ಪುನಃ ರಾಮನಿಗೆ ಸಮಾಧಾನ ಹೇಳಿ ಅವನ ಶಸ್ತ್ರಾಸ್ತ್ರಗಳನ್ನು ಕೆಳಗಿಡಿಸಿಬಿಟ್ಟರು.

ಅದೇ ಸಮಯಕ್ಕೆ ಸರಿಯಾಗಿ–ಆಕಾಶದಲ್ಲಿ ಉದಯಿಸಿದ ಎಂಟು ಗ್ರಹಗಳಿಗೆ ಸಮಾನರಾಗಿ ಉಜ್ವಲಕಾಂತಿಯಿಂದ ಪ್ರಕಾಶಿಸುತ್ತಿದ್ದ, ಆ ಎಂಟುಮಂದಿ ಬ್ರಹ್ಮವಾದಿಗಳನ್ನು ನಾನು ಪುನಃ ನೋಡಿದೆನು. ಯುದ್ಧಸನ್ನದ್ಧನಾಗಿದ್ದ ನನ್ನನ್ನು ಕುರಿತು ಅವರು ಪ್ರೇಮಪೂರ್ವಕವಾಗಿ ಈ ಮಾತನ್ನು ಹೇಳಿದರು :

**ಪ್ರೈಹಿ ರಾಮಂ ಮಹಾಬಾಹೋ ಗುರುಂ ಲೋಕಹಿತಂ ಕುರು ॥**

"ಮಹಾಬಾಹುವೇ! ನೀನೀಗ ನಿನ್ನ ಗುರುವಾದ ರಾಮನ ಬಳಿಗೆ ಹೋಗು. ಲೋಕಕ್ಕೆ ಹಿತಕರವಾಗುವ ಕಾರ್ಯವನ್ನು ಮಾಡು."

ರಾಮನು ಪಿತೃವಾಕ್ಯಾನುಸಾರವಾಗಿ ಶಸ್ತ್ರನ್ಯಾಸಮಾಡಿ ಯುದ್ಧದಿಂದ ವಿರತನಾದುದನ್ನು ನೋಡಿದ ನಾನು ಸುಹೃದರು ಹೇಳಿದ ಮಾತಿನಂತೆ ಲೋಕಕ್ಕೆ ಹಿತವನ್ನುಂಟುಮಾಡುವ ಅಪೇಕ್ಷೆಯಿಂದ ಆ ಬ್ರಹ್ಮವಾದಿಗಳ ಮಾತನ್ನು ಅಂಗೀಕರಿಸಿದೆನು.

ಅವರು ಹೇಳಿದಂತೆ ನಾನು ಒಡನೆಯೇ ರಾಮನ ಸಮೀಪಕ್ಕೆ ಹೋಗಿ ಅವನ ಪಾದಾರವಿಂದಗಳಿಗೆ ಅಭಿವಾದನಪೂರ್ವಕವಾಗಿ ನಮಸ್ಕರಿಸಿದೆನು. ಆ ಸಮಯದಲ್ಲಿ ನನ್ನ ಶರೀರವೆಲ್ಲವೂ ಶಸ್ತ್ರದ ಗಾಯಗಳಿಂದ ತುಂಬಿಹೋಗಿ

ದ್ದಿತು. ನಾನು ನಮಸ್ಕಾರಮಾಡಿದನಂತರ ಮಹಾತಪಸ್ವಿಯಾದ ರಾಮನೂ ಮಂದಸ್ಮಿತನಾಗಿ ಪ್ರೇಮಪೂರ್ವಕವಾದ ಈ ಮಾತುಗಳನ್ನು ಹೇಳಿದನು :

**ತ್ವತ್ಸಮೋ ನಾಸ್ತಿ ಲೋಕೇಽಸ್ಮಿನ್ ಕ್ಷತ್ರಿಯಃ ಪೃಥಿವೀಚರಃ ।**
**ಗಮ್ಯತಾಂ ಭೀಷ್ಮ ಯುದ್ಧೇಽಸ್ಮಿಂಸ್ತೋಷಿತೋಽಹಂ ಭೃಶಂ ತ್ವಯಾ ॥**

"ಈ ಪೃಥ್ವಿಯಲ್ಲಿ ಸಂಚರಿಸುವ ಯಾವ ಕ್ಷತ್ರಿಯನೂ ನಿನಗೆ ಸಮಾನನಾಗಿರುವುದಿಲ್ಲ. ನೀನಿನ್ನು ಹೋಗಿ ಬಾ, ಭೀಷ್ಮ! ಈ ಯುದ್ಧದಲ್ಲಿ ನೀನು ನನ್ನನ್ನು ಸಂತೋಷಗೊಳಿಸಿರುವೆ."

ಪರಶುರಾಮನು ಹೀಗೆ ಹೇಳಿ ನನ್ನ ಸಮಕ್ಷದಲ್ಲಿಯೇ ಅಂಬೆಯನ್ನೂ ಕರೆಯಿಸಿ ಆ ಮಹಾತ್ಮರ (ನಾರದಾದಿಗಳ) ಮಧ್ಯದಲ್ಲಿಯೇ ದೈನ್ಯದಿಂದ ಕೂಡಿದ ಈ ಮಾತುಗಳನ್ನು ಅವಳೊಡನೆ ಹೇಳಿದನು."

೧೮೫ನೆಯ ಅಧ್ಯಾಯವು ಮುಗಿಯಿತು.

೧೮೬ನೆಯ ಅಧ್ಯಾಯ ಅಮ್ಬೋಪಾಖ್ಯಾನಪರ್ವ (ಮುಂದುವರಿದಿದೆ)

## ಅಂಬೆಯ ಕಠೋರತಪಸ್ಸು

ಪರಶುರಾಮನು ಅಂಬೆಯನ್ನು ಕುರಿತು ಹೇಳುತ್ತಾನೆ :

"ಭಾಮಿನಿ! ನಿನ್ನ ಅಭಿಲಾಷೆಯಂತೆ ನಾನು ಭೀಷ್ಮನೊಡನೆ ಯಥಾಶಕ್ತಿ ಯುದ್ಧಮಾಡಿದೆನು. ನನ್ನ ಪೌರುಷವನ್ನೆಲ್ಲಾ ಸಂಯೋಜಿಸಿ ಯುದ್ಧಮಾಡಿದೆನು. ಈ ವಿಷಯವು ಸರ್ವಲೋಕಗಳ ಸಮಕ್ಷದಲ್ಲಿಯೇ ನಡೆದಿದೆ. ದೇವ-ಮಾನವರಾದಿಯಾಗಿ ಸರ್ವರೂ ಇದನ್ನು ತಿಳಿದಿರುತ್ತಾರೆ. ಆದರೆ ನಾನೆಷ್ಟೇ ಪ್ರಯತ್ನಿಸಿದರೂ–ನನ್ನಲ್ಲಿರುವ ಉತ್ತಮೋತ್ತಮವಾದ ಅಮೋಘಾಸ್ತ್ರಗಳನ್ನೆಲ್ಲಾ ಪ್ರಯೋಗಿಸಿದರೂ ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಭೀಷ್ಮನನ್ನು ಅತಿಶಯಿಸಲು ನನ್ನಿಂದ ಸಾಧ್ಯವಾಗಲಿಲ್ಲ. ಅಂಬೆ! ಈಗ ನೀನು ಪ್ರತ್ಯಕ್ಷವಾಗಿಯೇ ನೋಡಿದೆಯಲ್ಲವೇ? ಇದೇ ನನ್ನ ಅತ್ಯಧಿಕವಾದ ಶಕ್ತಿ ; ಇದೇ ನನ್ನ ಅತ್ಯಧಿಕವಾದ ಬಲ. ಇದಕ್ಕಿಂತಲೂ ಹೆಚ್ಚಿನ ಶಕ್ತಿಯಾಗಲೀ–ಬಲವಾಗಲೀ ನನ್ನಲ್ಲಿರುವುದಿಲ್ಲ. ನಿನ್ನ ಇಚ್ಛೆಯಿದ್ದೆಡೆಗೆ

ನೀನಿನ್ನು ಹೋಗಬಹುದು. ಅಥವಾ ಇನ್ನಾವುದಾದರೂ ಕಾರ್ಯವು ನನ್ನಿಂದ ಆಗಬೇಕಾಗಿದ್ದರೆ ಹೇಳು. ಮಾಡಿಕೊಡಲು ಪ್ರಯತ್ನಿಸುತ್ತೇನೆ. ಆದರೆ ಈಗ ನಿನಗೆ ಉಳಿದಿರುವ ಒಂದೇ ಒಂದು ಮಾರ್ಗವೆಂದರೆ ಭೀಷ್ಮನಿಗೇ ಶರಣಾಗತಳಾಗುವುದು. ಭೀಷ್ಮನನ್ನೇ ಆಶ್ರಯಿಸು. ಈಗ ನಿನಗೆ ಬೇರೆಯ ಮಾರ್ಗವೇ ಇಲ್ಲ. ಅನೇಕಾನೇಕ ಮಹಾಸ್ತ್ರಗಳ ಪ್ರಯೋಗದಲ್ಲಿ ಕುಶಲನಾದ ಭೀಷ್ಮನು ನನ್ನನ್ನು ಜಯಿಸಿಬಿಟ್ಟಿದ್ದಾನೆ."

ಮಹಾತ್ಮನಾದ ಪರಶುರಾಮನು ಹೀಗೆ ಹೇಳಿ ಸುದೀರ್ಘವಾಗಿ ನಿಟ್ಟುಸಿರುಬಿಟ್ಟು ಮೌನತಾಳಿದನು. ಅನಂತರ ಆ ಕನ್ಯೆಯೇ ಭಾರ್ಗವನನ್ನು ಕುರಿತು ಹೇಳಿದಳು :

"ಭಗವನ್! ಇದು ಹೀಗೆಯೇ ಸರಿ. ನೀನು ಹೇಳಿದಂತೆ ಭೀಷ್ಮನು ಯುದ್ಧದಲ್ಲಿ ಅಜೇಯನು. ದೇವತೆಗಳೂ ಉದಾರಬುದ್ಧಿಯಾದ ಇವನನ್ನು ಪರಾಜಯಗೊಳಿಸಲಾರರು. ಶಕ್ತಿಮೀರಿ ಸಂಪೂರ್ಣವಾದ ಉತ್ಸಾಹದಿಂದಲೇ ನೀನು ನಾನಭಿಲಾಷಿಸಿದ ಕಾರ್ಯವನ್ನು ಮಾಡಿದೆ. ಭೀಷ್ಮನ ಹೊರತಾಗಿ ಬೇರೊಬ್ಬರಿಂದ ಅನಿವಾರಣೀಯವಾದ ಪರಾಕ್ರಮವನ್ನೇ ನೀನು ತೋರಿಸಿದೆ. ಅನೇಕವಿಧವಾದ ಅಸ್ತ್ರಗಳನ್ನೂ ಸಹ ನೀನು ಭೀಷ್ಮನ ಮೇಲೆ ಪ್ರಯೋಗಿಸಿದೆ. ಆದರೆ ಕಡೆಯಲ್ಲಿ ಭೀಷ್ಮನನ್ನು ಅತಿಶಯಿಸಿ ನಿಲ್ಲಲು ನಿನ್ನಿಂದ ಸಾಧ್ಯವಾಗಲಿಲ್ಲ. ಆದರೆ ನಾನು ಮಾತ್ರ ಭೀಷ್ಮನ ಬಳಿಗೆ ಪುನಃ ಯಾವುದೇ ಕಾರಣದಿಂದಲೂ ಹೋಗಲಾರೆನು. ತಪೋಧನನೇ! ನಾನು ಯಾವ ಸ್ಥಳಕ್ಕೆ ಹೋಗುವುದರಿಂದ ನಾನೇ ಸ್ವತಃ ಭೀಷ್ಮನನ್ನು ಸಂಹರಿಸುವ ಶಕ್ತಿಯನ್ನು ಪಡೆಯುವೆನೋ–ಆ ಸ್ಥಳಕ್ಕೆ ನಾನೀಗಲೇ ಹೋಗುತ್ತೇನೆ." ಹೀಗೆ ಹೇಳಿ ರೋಷದಿಂದ ಪರ್ಯಾಕುಲಿತವಾದ ಕಣ್ಣುಗಳನ್ನು ಹೊಂದಿದ್ದ ಆ ಕನ್ಯೆಯು ನನ್ನ ವಧೋಪಾಯವನ್ನೇ ಚಿಂತಿಸುತ್ತಾ ಅದಕ್ಕಾಗಿ ತಪಸ್ಸನ್ನೇ ಮಾಡಬೇಕೆಂದು ದೃಢವಾದ ಸಂಕಲ್ಪಮಾಡಿ ಕುರುಕ್ಷೇತ್ರದಿಂದ ಹೊರಟುಹೋದಳು. ಅನಂತರ ಭೃಗುಶ್ರೇಷ್ಠನಾದ ಪರಶುರಾಮನೂ ಹೋಗಿಬರುವುದಾಗಿ ನನ್ನೊಡನೆ ಹೇಳಿ ತನ್ನೊಡನೆ ಬಂದಿದ್ದ ಮುನಿಜನರಿಂದ ಪರಿವೃತನಾಗಿ ಹೇಗೆ ಬಂದಿದ್ದನೋ ಹಾಗೆಯೇ

ಮಹೇಂದ್ರಪರ್ವತಕ್ಕೆ ಹೊರಟುಹೋದನು. ಬಳಿಕ ನಾನೂ ರಥವನ್ನು ಹತ್ತಿ ಬ್ರಾಹ್ಮಣ-ಕ್ಷತ್ರಿಯ-ವೈಶ್ಯರಿಂದ ಸಂಸ್ತೂಯಮಾನನಾಗಿ ನಗರವನ್ನು ಪ್ರವೇಶಿಸಿ, ತಾಯಿಯಾದ ಸತ್ಯವತಿಗೆ ನಡೆದುದೆಲ್ಲವನ್ನೂ ಯಥಾವತ್ತಾಗಿ ವಿವರಿಸಿ ಹೇಳಿದೆನು. ಅವಳೂ ನನ್ನನ್ನು ಶ್ಲಾಘಿಸಿ ಹರಸಿದಳು. ಅನಂತರ ನಾನು–ನನ್ನ ವಧೆಯನ್ನೇ ಮನಸ್ಸಿನಲ್ಲಿ ಚಿಂತಿಸುತ್ತಾ ಹೊರಟುಹೋದ ಕನ್ಯೆಯ ವೃತ್ತಾಂತವನ್ನು ತಿಳಿಯಲು ಪ್ರಾಜ್ಞರಾದ ಪುರುಷರನ್ನು ನಿಯೋಜಿಸಿದೆನು. ನನ್ನಿಂದ ನಿಯಮಿತರಾಗಿದ್ದ ಗುಪ್ತಚಾರರು ನನಗೆ ಪ್ರಿಯವನ್ನುಂಟು ಮಾಡುವುದರಲ್ಲಿಯೂ ಮತ್ತು ನನ್ನ ಹಿತದಲ್ಲಿಯೂ ವಿಶೇಷವಾದ ಆಸಕ್ತಿಯನ್ನು ವಹಿಸಿದ್ದರು. ಆದುದರಿಂದ ಅವರು ಕನ್ಯೆಯು ಎಲ್ಲಿಗೆ ಹೋದಳೆಂಬುದನ್ನೂ, ಯಾರೊಡನೆ ಏನು ಹೇಳಿದಳೆಂಬುದನ್ನೂ, ಎಲ್ಲಿ ಏನು ಮಾಡಿದಳೆಂಬುದನ್ನೂ ಅನುದಿನವೂ ವಿವರಿಸಿ ಹೇಳುತ್ತಿದ್ದರು. ಅದರಿಂದಾಗಿ ನಾನು ಅವಳ ಮುಂದಿನ ಕಾರ್ಯ-ಕಲಾಪಗಳೆಲ್ಲವನ್ನೂ ಯಥಾವತ್ತಾಗಿ ತಿಳಿದುಕೊಂಡೆನು. ಆದರೆ, ದುರ್ಯೋಧನ! ಯಾವಾಗ ಅಂಬೆಯು ನನ್ನ ಸಂಹಾರಕ್ಕಾಗಿ ತಪಸ್ಸನ್ನು ಮಾಡಲು ನಿಶ್ಚಯಿಸಿ ಹೊರಟುಹೋದಳೋ–ಆವಾಗಿನಿಂದ ನಾನು ವ್ಯಥಿತನೂ, ದೀನನೂ, ಬುದ್ಧಿಗೆಟ್ಟವನೂ ಆಗಿದ್ದೇನೆ. ರಾಜೇಂದ್ರ! ತಪಸ್ವಿಯಾದ, ಕಠೋರ ವ್ರತನಿಷ್ಠನಾದ, ಬ್ರಹ್ಮವಿದನಾದ ಪರಶುರಾಮನೊಬ್ಬನನ್ನು ಬಿಟ್ಟು ಭೂಮಿಯಲ್ಲಿರುವ ಯಾವ ಕ್ಷತ್ರಿಯನೂ ನನ್ನನ್ನು ಪರಾಕ್ರಮದಿಂದ ಜಯಿಸಲು ಸಮರ್ಥನಲ್ಲ. ಅಂಬೆಯು ನನ್ನ ಸಂಹಾರಕ್ಕೆಂದೇ ತಪಶ್ಚರಣೆಮಾಡಲು ಉದ್ಯುಕ್ತಳಾಗಿರುವುದನ್ನು ನಾನು ನಾರದರಿಗೂ ಮತ್ತು ವ್ಯಾಸರಿಗೂ ಹೇಳಿದೆನು.

ಅದಕ್ಕೆ ಅವರು :

"ಕಾಶೀಸುತೆಯ ವಿಷಯವಾಗಿ ನೀನು ವಿಷಾದಿಸಬೇಕಾಗಿಲ್ಲ.

**ದೈವಂ ಪುರುಷಕಾರೇಣ ಯೋ ನಿವರ್ತಿತುಮುತ್ಸಹೇತ್ ॥೧೮॥**

ದೈವದ ನಿಯಮವನ್ನು ಪುರುಷಪ್ರಯತ್ನದಿಂದ ವ್ಯತ್ಯಾಸಮಾಡಲು ಯಾವನು ತಾನೇ ಸಮರ್ಥನಾಗುತ್ತಾನೆ? ದೈವೇಚ್ಛೆಯು ಹೇಗಿದೆಯೋ

ಹಾಗೆಯೇ ನಡೆಯುವುದು. ಅದಕ್ಕಾಗಿ ನೀನು ಚಿಂತಿಸಬೇಕಾಗಿಲ್ಲ.” ಎಂದು ಸಮಾಧಾನವನ್ನು ಹೇಳಿದರು.

ಮಹಾರಾಜ! ದುರ್ಯೋಧನ! ಕುರುಕ್ಷೇತ್ರದಿಂದ ಹೊರಟ ಆ ಕನ್ಯೆಯಾದರೋ ಆಶ್ರಮಮಂಡಲವನ್ನು ಪ್ರವೇಶಿಸಿ ಯಮುನಾನದಿಯ ತೀರದಲ್ಲಿ ಆಶ್ರಮವನ್ನು ಮಾಡಿಕೊಂಡು ಮನುಷ್ಯರಾದವರಿಂದ ಮಾಡಲು ಅಸಾಧ್ಯವಾದ ತಪಸ್ಸನ್ನು ಮಾಡಿದಳು.

**ನಿರಾಹಾರಾ ಕೃಶಾ ರುಕ್ಷಾ ಜಟಿಲಾ ಮಲಪಙ್ಕಿನೀ ।**
**ಷಣ್ಮಾಸಾನ್ವಾಯುಭಕ್ಷಾ ಚ ಸ್ಥಾಣುಭೂತಾ ತಪೋಧನಾ ॥೨೦॥**

ಆ ಕನ್ಯೆಯು ನಿರಾಹಾರಳಾಗಿದ್ದಳು. ಆ ಕಾರಣದಿಂದಲೇ ಅವಳು ಬಹುಕೃಶಳಾದಳು. ಮೃದುವಾಗಿಯೂ ಸುಕೋಮಲವಾಗಿಯೂ ಇದ್ದ ಅವಳ ಶರೀರವು ಒರಟಾಯಿತು. ಉದ್ದವಾಗಿಯೂ, ಕಪ್ಪಾಗಿಯೂ, ಸುಕೋಮಲ ವಾಗಿಯೂ ಇದ್ದ ಅವಳ ವೇಣಿಯು ಜಡೆಗಟ್ಟಿತು. ಶರೀರಾದ್ಯಂತವೂ ಧೂಳು ಮತ್ತು ಕೆಸರು ಆವರಿಸಿದ್ದಿತು. ತಪೋಧನಳಾದ ಆ ಕನ್ಯೆಯು ಕಂಬದಂತೆ ನಿಂತಲ್ಲಿಯೇ ನಿಂತಿದ್ದು ವಾಯುವನ್ನೇ ಆಹಾರವನ್ನಾಗಿ ತೆಗೆದುಕೊಳ್ಳುತ್ತಾ ಆರು ತಿಂಗಳು ತಪಸ್ಸುಮಾಡಿದಳು. ಅದಾದನಂತರ ಯಮುನಾನದಿಯ ನೀರಿನಲ್ಲಿಯೇ ಇದ್ದುಕೊಂಡು ಅನ್ನ-ಪಾನಾದಿಗಳನ್ನು ಸಂಪೂರ್ಣವಾಗಿ ವರ್ಜಿಸಿ ಒಂದು ವರ್ಷಪರ್ಯಂತವಾಗಿ ತಪಸ್ಸುಮಾಡಿದಳು. ಅನಂತರ ತೀಕ್ಷ್ಣಕೋಪಳಾದ ಆ ಕನ್ಯೆಯು ಅನುದಿನವೂ ಒಂದೇ ಒಂದು ಒಣಗಿದ ಎಲೆಯನ್ನು ಮಾತ್ರವೇ ತಿನ್ನುತ್ತಾ, ಕಾಲಿನ ಅಂಗುಷ್ಠವೊಂದರಿಂದಲೇ ನಿಂತುಕೊಂಡು ಮತ್ತೊಂದು ವರ್ಷಕಾಲ ಘೋರವಾದ ತಪಸ್ಸುಮಾಡಿದಳು. ಅವಳು ಅದೇ ರೀತಿಯಲ್ಲಿ ಹನ್ನೆರಡು ವರ್ಷಗಳ ಕಾಲ ಘೋರವಾದ ತಪಸ್ಸುಮಾಡುತ್ತಿದ್ದು ತನ್ನ ತಪಃಪ್ರಭಾವದಿಂದ ಪೃಥ್ವೀ ಮತ್ತು ಅಂತರಿಕ್ಷಗಳನ್ನು ಸಂತಾಪಗೊಳಿಸಿದಳು. ಅವಳ ಜ್ಞಾತಿಗಳು ಬಂದು ಕಠೋರತಪಸ್ಸಿನಿಂದ ವಿರತಳಾಗುವಂತೆ ಪುನಃ ಪುನಃ ಹೇಳಿದರೂ ಅವಳು ತಪಸ್ಸಿನಿಂದ ವಿರತಳಾಗಲಿಲ್ಲ. ಅನಂತರದಲ್ಲಿ ಅಂಬೆಯು ಸಿದ್ಧ-ಚಾರಣಸೇವಿತವಾದ,

ಮಹಾತ್ಮರ, ಪುಣ್ಯಶೀಲರ ಆಶ್ರಮಸ್ಥಾನವಾದ ವತ್ಸಭೂಮಿಗೆ ಹೋದಳು. ಹಗಲಿನಲ್ಲಿಯೂ ಮತ್ತು ರಾತ್ರಿಯಲ್ಲಿಯೂ ಆ ಪುಣ್ಯಾಶ್ರಮದಲ್ಲಿದ್ದ ಪುಣ್ಯತೀರ್ಥಗಳಲ್ಲಿ ಸ್ನಾನಮಾಡುತ್ತಾ ತನ್ನ ಇಚ್ಛಾನುಸಾರವಾಗಿ ಸರ್ವತ್ರ ಸಂಚರಿಸುತ್ತಿದ್ದಳು. ದುಷ್ಕರವಾದ ವ್ರತತೊಟ್ಟು ಕಾಶೀಕನ್ಯೆಯು ನಂದಾಶ್ರಮ, ಉಲೂಕಾಶ್ರಮ, ಶುಭಕರವಾದ ಚ್ಯವನಾಶ್ರಮ, ಬ್ರಹ್ಮಸ್ಥಾನ, ದೇವತೆಗಳ ಯಜ್ಞಭೂಮಿಯಾದ ಪ್ರಯಾಗ, ದೇವಾರಣ್ಯ, ಭೋಗವತೀ, ಕೌಶಿಕಾಶ್ರಮ, ಮಾಂಡವ್ಯಾಶ್ರಮ, ದಿಲೀಪಾಶ್ರಮ, ರಾಮಹ್ರದ, ಪೈಲಗರ್ಗಾಶ್ರಮ–ಇವುಗಳಲ್ಲಿದ್ದ ಪುಣ್ಯತೀರ್ಥಗಳಲ್ಲಿ ಅನುಕ್ರಮವಾಗಿ ಸ್ನಾನಮಾಡಿದಳು. ಆ ಸಮಯದಲ್ಲಿ ಜಲಸ್ಥಳಾಗಿದ್ದ ನನ್ನ ತಾಯಿಯಾದ ಗಂಗಾದೇವಿಯು ಅಂಬೆಯನ್ನು ಪ್ರಶ್ನಿಸಿದಳು :

**ಕಿಮರ್ಥಂ ಕ್ಲಿಶ್ಯಸೇ ಭದ್ರೇ ತಥ್ಯಮೇವ ವದಸ್ವ ಮೇ ॥೩೯॥**

"ಮಂಗಳಸ್ವರೂಪಳೇ! ಯಾವ ಕಾರಣಕ್ಕಾಗಿ ಅಥವಾ ಯಾವ ಅರ್ಥಸಿದ್ಧಿಗಾಗಿ ನಿನ್ನ ಶರೀರವನ್ನು ಇಷ್ಟು ಕ್ಲೇಶಕ್ಕೀಡುಮಾಡಿರುವೆ? ನಿಜಸ್ಥಿತಿಯನ್ನು ತಿಳಿಸು."

ಹೀಗೆ ಪ್ರಶ್ನಿಸಿದ ಗಂಗಾದೇವಿಯನ್ನು ಕುರಿತು ಅನಿಂದಿತೆಯಾದ ಆ ಕನ್ಯೆಯು ಬದ್ಧಾಂಜಲಿಯಾಗಿ ಹೇಳಿದಳು :

"ಚಾರುಲೋಚನೆಯೇ! ನನ್ನ ಸಲುವಾಗಿಯೇ ನಡೆದ ಮಹಾಯುದ್ಧದಲ್ಲಿ ಪರಶುರಾಮನು ಭೀಷ್ಮನಿಂದ ನಿರ್ಜಿತನಾದನು. ಮಹಾಪರಾಕ್ರಮಿಯಾದ ರಾಮನೇ ಪರಾಜಿತನಾದನೆಂದಮೇಲೆ ಪೃಥ್ವಿಯಲ್ಲಿರುವ ಯಾವ ರಾಜನು ತಾನೇ ಧನುರ್ಬಾಣಗಳನ್ನು ಧರಿಸಿ ನಿಲ್ಲುವ ಭೀಷ್ಮನೊಡನೆ ಯುದ್ಧಮಾಡಿ ಅವನನ್ನು ಜಯಿಸಲು ಇಚ್ಛಿಸುವನು? ಆದುದರಿಂದ ಪೃಥ್ವಿಯಲ್ಲಿರುವ ಯಾವ ರಾಜನಿಂದಲೂ ಅವನೊಡನೆ ಯುದ್ಧಮಾಡುವ ಮತ್ತು ಅವನನ್ನು ಪರಾಜಯಗೊಳಿಸುವ ಸಾಧ್ಯತೆಯಿಲ್ಲ. ಅವನ ವಿನಾಶವಾಗುವವರೆಗೂ ನನ್ನ ಮನಸ್ಸಿಗೆ ಶಾಂತಿಯು ಸಿಕ್ಕದು. ಈ ಕಾರಣದಿಂದಾಗಿ ನಾನು ಅವನ ವಿನಾಶವನ್ನೇ ಉದ್ದೇಶಿಸಿ ಸುದಾರುಣವಾದ ತಪಸ್ಸನ್ನು ಮಾಡುತ್ತಿದ್ದೇನೆ. ವಿಶ್ವಪರ್ಯಟನವನ್ನು ಮಾಡುತ್ತಿದ್ದೇನೆ. ದೇವಿ! ಕಂಡ-ಕಂಡ ಪುಣ್ಯತೀರ್ಥಗಳಲ್ಲಿ ಸ್ನಾನಮಾಡುತ್ತಿದ್ದೇನೆ. ಈ

ವ್ರತಾನುಷ್ಠಾನದಿಂದಲಾದರೂ ಭೀಷ್ಮನನ್ನು ನಾನು ಸಂಹಾರಮಾಡಬಹುದು– ಎಂದು ಭಾವಿಸಿ ಹೀಗೆ ಮಾಡುತ್ತಿದ್ದೇನೆ. ಈ ಜಗತ್ತಿನಲ್ಲಿ ನಾನು ಮಾಡುತ್ತಿರುವ ವ್ರತಾನುಷ್ಠಾನಕ್ಕೆ ಮತ್ತು ತಪಸ್ಸಿಗೆ ಈ ಶ್ರೇಷ್ಠಫಲವು ಲಭಿಸಬೇಕಾಗಿದೆ."

ಅಂಬೆಯ ಈ ಮಾತನ್ನು ಕೇಳಿದ ಸಾಗರಗಾಮಿನಿಯಾದ ಗಂಗೆಯು ಹೇಳಿದಳು :

"ಭಾಮಿನಿ! ಕುಟಿಲವಾದ ಮತ್ತು ನೀನು ಮಾಡಲು ಅನರ್ಹವಾದ ಕಾರ್ಯವನ್ನು ಮಾಡುತ್ತಿರುವೆ. ಅನವದ್ಯಾಂಗಿ! ಅಬಲೇ! ನೀನೆಷ್ಟೇ ವ್ರತ-ತಪಸ್ಸುಗಳನ್ನು ಮಾಡಿದರೂ ನಿನ್ನ ಮನೋರಥವು ಖಂಡಿತವಾಗಿಯೂ ಪೂರ್ಣವಾಗುವುದಿಲ್ಲ. ನಿನ್ನ ಮನೋರಥವು ಪೂರ್ಣವಾಗದಿರುವುದು ಮಾತ್ರವಲ್ಲದೇ ಇದರಿಂದ ಅನೇಕವಾದ ದುಷ್ಪರಿಣಾಮಗಳೂ ಆಗುತ್ತವೆ. ಭೀಷ್ಮನ ವಿನಾಶಕ್ಕೆಂದೇ ನೀನು ಕಠಿನವಾದ ವ್ರತವನ್ನೂ ಮತ್ತು ತಪಸ್ಸನ್ನೂ ಮಾಡುತ್ತಿರುವೆ. ವ್ರತಸ್ಥಳಾಗಿಯೇ ಇರುವ ಕಾಲದಲ್ಲಿ ನೀನೇನಾದರೂ ಶರೀರತ್ಯಾಗಮಾಡಿದೆಯಾದರೆ ನೀನು ನದಿಯಾಗಿ ಹುಟ್ಟುವೆ. ಮಹಾನದಿಯಾಗಿಯೂ ಹುಟ್ಟುವುದಿಲ್ಲ. ಚಿಕ್ಕದಾದ, ವಕ್ರವಕ್ರವಾಗಿ ಹರಿಯುವ ನದಿಯಾಗಿ ಹುಟ್ಟುವೆ. ಮಳೆಗಾಲದಲ್ಲಿ ಮಾತ್ರವೇ ಜನರು ನಿನ್ನಲ್ಲಿ ನೀರನ್ನು ಕಾಣುವರು. ಬೇರೆಯ ಸಮಯದಲ್ಲಿ ನೀನು ನದಿಯೆಂಬುದಾಗಲೀ–ನಿನ್ನಲ್ಲಿ ನೀರಿರುವುದೆಂಬುದಾಗಲೀ ಜನಗಳಿಗೆ ತಿಳಿಯುವುದೇ ಇಲ್ಲ. ವರ್ಷದಲ್ಲಿ ನಾಲ್ಕು ತಿಂಗಳು ಮಾತ್ರ ನಿನ್ನಲ್ಲಿ ನೀರಿರುತ್ತದೆ. ಉಳಿದ ಎಂಟು ತಿಂಗಳು ನೀರಿರುವುದಿಲ್ಲ. ನೀರಿರುವ ನಾಲ್ಕು ತಿಂಗಳುಗಳಲ್ಲಿಯೂ ಜನರು ಬಂದು ಸ್ನಾನಮಾಡುವುದಿಲ್ಲ. ಏಕೆಂದರೆ : ಆ ಸಮಯದಲ್ಲಿ ನಿನ್ನಲ್ಲಿ ಭಯಂಕರವಾದ ದೊಡ್ಡ ದೊಡ್ಡ ಮೊಸಳೆಗಳು ವಾಸಮಾಡುತ್ತಿರುತ್ತವೆ. ಇದರಿಂದಾಗಿ ನೀನು ಘೋರರೂಪಳಾಗಿ ಸಮಸ್ತಪ್ರಾಣಿಗಳಿಗೂ ಭಯವನ್ನುಂಟುಮಾಡುವವಳಾಗುವೆ."

ಹೀಗೆಂಬುದಾಗಿ ಮಹಾಭಾಗೆಯಾದ, ಭಾಮಿನಿಯಾದ ನನ್ನ ತಾಯಿಯು ನಗು-ನಗುತ್ತಲೇ ಅಂಬೆಗೆ ಹೇಳಿ ಹೊರಟುಹೋದಳು. ಆದರೆ,

ದುರ್ಯೋಧನ! ನಮ್ಮ ತಾಯಿಯು ಇಷ್ಟು ನಿಷ್ಠುರವಾಗಿ ಹೇಳಿದರೂ ಕಾಶೀಕನ್ಯೆಯು ತನ್ನ ತಪಸ್ಸಿನಿಂದ ವಿಮುಖಳಾಗಲಿಲ್ಲ. ಮತ್ತೂ ಕಠೋರವಾದ ತಪಸ್ಸುಮಾಡಲು ಉಪಕ್ರಮಿಸಿದಳು. ಆ ಸಮಯದಲ್ಲಿ ಎಂಟು ತಿಂಗಳಿಗೊಮ್ಮೆಯಾದರೂ ನೀರನ್ನು ಕುಡಿಯುತ್ತಿರಲಿಲ್ಲ. ಮತ್ತೊಮ್ಮೆ ಹತ್ತು ತಿಂಗಳ ಪರ್ಯಂತವಾಗಿ ನೀರನ್ನು ಕುಡಿಯದೇ ಇದ್ದುಬಿಡುತ್ತಿದ್ದಳು.

ಭೀಷ್ಮನನ್ನು (ನನ್ನನ್ನು) ಸಂಹರಿಸುವ ಶಕ್ತಿಯನ್ನು ಪಡೆದುಕೊಳ್ಳಲು ಸರ್ವತೀರ್ಥಗಳಲ್ಲಿಯೂ ಮತ್ತೊಮ್ಮೆ ಅವಗಾಹನಮಾಡಬೇಕೆಂಬ ಲೋಭದಿಂದ ಅಂಬೆಯು ವತ್ಸಭೂಮಿಯಲ್ಲಿ ಸುತ್ತುತ್ತಿರುವಾಗಲೇ ಒಮ್ಮೆ ಬಿದ್ದುಬಿಟ್ಟಳು. ಗಂಗಾದೇವಿಯು ಹೇಳಿದ್ದಂತೆ ವತ್ಸಭೂಮಿಯಲ್ಲಿ ಅವಳು ಬಿದ್ದಜಾಗದಲ್ಲಿಯೇ ಅಂಬಾ ಎಂಬ ಹೆಸರಿನ ನದಿಯೊಂದು ಪ್ರವಹಿಸತೊಡಗಿತು. ಆ ನದಿಯು ಮಳೆಗಾಲದಲ್ಲಿ ಮಾತ್ರವೇ ತುಂಬಿಹರಿಯುತ್ತಿದ್ದಿತು. ನೀರಿರುವಾಗಲೂ ಅನೇಕಮೊಸಳೆಗಳು ಅದರಲ್ಲಿ ವಾಸಮಾಡುತ್ತಿದ್ದುದರಿಂದ ಸ್ನಾನಾದಿಗಳಿಗೆ ಅಯೋಗ್ಯವಾಗಿದ್ದಿತು. ಮೇಲಾಗಿ ಆ ನದಿಯು ವಕ್ರ-ವಕ್ರವಾಗಿಯೂ ಹರಿಯುತ್ತಿದ್ದಿತು. ಅದರಲ್ಲಿ ಮಿಂದವರನ್ನು ಒಳಕ್ಕೆ ಸೆಳೆದುಕೊಳ್ಳುವ ಸುಳಿಗಳೂ ಅನೇಕವಿದ್ದುವು. ಆದರೆ ಅಂಬೆಯ ತಪಃಪ್ರಭಾವವು ಅಧಿಕವಾಗಿದ್ದುದರಿಂದ ಅವಳ ಅರ್ಧಶರೀರವು ಮಾತ್ರವೇ ನದಿಯಾಗಿ ಪರಿವರ್ತಿತವಾಯಿತು. ಉಳಿದ ಅರ್ಧಶರೀರದಿಂದ ಅಂಬೆಯು ವತ್ಸಭೂಮಿಯಲ್ಲಿ ಪುನಃ ಕನ್ಯೆಯಾಗಿಯೇ ಪ್ರಕಟಗೊಂಡಳು.”

೧೮೬ನೆಯ ಅಧ್ಯಾಯವು ಮುಗಿಯಿತು.

೧೮೭ನೆಯಅಧ್ಯಾಯ ಅಮ್ಬೋಪಾಖ್ಯಾನಪರ್ವ (ಮುಂದುವರಿದಿದೆ)

## ಅಂಬೆಯು ತನ್ನ ಎರಡನೆಯ ಜನ್ಮದಲ್ಲಿಯೂ ಭೀಷ್ಮನಾಶಕವಾದ ತಪಸ್ಸನ್ನು ಮುಂದುವರಿಸಿದುದು : ಮಹೇಶ್ವರನಿಂದ ವರಪ್ರದಾನ : ಅಂಬೆಯ ಚಿತಾಗ್ನಿಪ್ರವೇಶ

ಭೀಷ್ಮನು ಅಂಬೋಪಾಖ್ಯಾನವನ್ನು ಮುಂದುವರಿಸುತ್ತಾ ಹೇಳುತ್ತಾನೆ :

“ದುರ್ಯೋಧನ! ವತ್ಸದೇಶದಲ್ಲಿ ಪುನರವತರಿಸಿದ ಅಂಬೆಯು ತಪಸ್ಸಿ

ನಿಂದ ವಿಮುಖಳಾಗಲೇ ಇಲ್ಲ. ತಪಸ್ಸನ್ನು ಮುಂದುವರಿಸುವುದರಲ್ಲಿಯೇ ದೃಢಮನಸ್ಕಳಾಗಿದ್ದ ಅಂಬೆಯನ್ನು ನೋಡಿ ವತ್ಸಭೂಮಿಯಲ್ಲಿದ್ದ ಎಲ್ಲ ತಪಸ್ವಿಗಳೂ ಅವಳನ್ನು ತಪಸ್ಸಿನಿಂದ ವಿಮುಖಳನ್ನಾಗಿ ಮಾಡಲು ಪ್ರಯತ್ನಿಸಿದರು ಮತ್ತು 'ನಿನಗಾಗಿ ಯಾವ ಕಾರ್ಯವನ್ನು ಮಾಡಿಕೊಡಬೇಕಾಗಿದೆ?' ಎಂದೂ ಅವಳನ್ನು ಪ್ರಶ್ನಿಸಿದರು.

ಆ ಪ್ರಶ್ನೆಗೆ ಉತ್ತರವಾಗಿ ಅಂಬೆಯು ತಪೋವನದಲ್ಲಿದ್ದ ತಪೋವೃದ್ಧರಾದ ಋಷಿಗಳನ್ನು ಕುರಿತು ಹೇಳಿದಳು :

ನಿರಾಕೃತಾಸ್ಮಿ ಭೀಷ್ಮೇಣ ಭ್ರಂಶಿತಾ ಪತಿಧರ್ಮತಃ ॥೨॥

"ಮಹಾನುಭಾವರೇ! ನಾನು ಭೀಷ್ಮನಿಂದ ನಿರಾಕೃತಳಾದೆನು. ಅದರ ಪರಿಣಾಮವಾಗಿ ನಾನು ಸ್ತ್ರೀಸಹಜವಾದ ಪತಿವ್ರತಾಧರ್ಮದಿಂದಲೂ ವಂಚಿತಳಾದೆನು.

ಆದುದರಿಂದ ನನಗೆ ಅಪಕರಿಸಿದ ಭೀಷ್ಮನ ವಧಾರ್ಥವಾಗಿಯೇ ನಾನು ಈ ದೀಕ್ಷೆಯನ್ನು ಕೈಗೊಂಡಿದ್ದೇನೆ. ಉತ್ತಮಲೋಕಗಳನ್ನು ಪಡೆದುಕೊಳ್ಳು ವುದು ನನ್ನ ತಪಸ್ಸಿನ ಉದ್ದೇಶವಲ್ಲ. ಭೀಷ್ಮನನ್ನು ಸಂಹರಿಸಿದ ನಂತರವೇ ಮನಶ್ಶಾಂತಿಯನ್ನು ಹೊಂದುವೆನೆಂಬ ನಿಶ್ಚಯವು ನನ್ನದಾಗಿದೆ. ಯಾವನ ದುಷ್ಕಾರ್ಯದ ಪರಿಣಾಮದಿಂದಾಗಿ ನಾನು ದುಃಖಮಯವಾದ ಜೀವನ ವನ್ನು ಶಾಶ್ವತವಾಗಿ ಕಳೆಯಬೇಕಾಗಿದೆಯೋ, ಪತಿಸೇವೆಮಾಡುವುದರಿಂದ ಪ್ರಾಪ್ತವಾಗುವ ಪುಣ್ಯಲೋಕದಿಂದ ವಂಚಿತಳಾದೆನೋ, ಹೆಂಗಸಿನ ಧರ್ಮವನ್ನಾಗಲೀ ಗಂಡಸಿನ ಧರ್ಮವನ್ನಾಗಲೀ ಅನುಸರಿಸಲಾಗದೇ ಈ ಲೋಕದಲ್ಲಿ ಜೀವಿಸುತ್ತಿರುವೆನೋ–ಆ ಗಾಂಗೇಯನನ್ನು ಯುದ್ಧದಲ್ಲಿ ಸಂಹರಿಸದೇ ನಾನು ತಪಸ್ಸಿನಿಂದ ಪ್ರತಿನಿವೃತ್ತಳಾಗತಕ್ಕವಳಲ್ಲ. ಇದು ನನ್ನ ಹೃದಯದ ಸಂಕಲ್ಪವಾಗಿದೆ. ಈ ವಿಷಯವನ್ನು ನಿಮಗೆ ನಾನು ಸ್ಪಷ್ಟವಾಗಿ ತಿಳಿಸಿರುತ್ತೇನೆ.

ತಪೋಧನರೇ! ನನಗೆ ಸ್ತ್ರೀತ್ವವೇ ಇಂದು ಬೇಡವಾಗಿದೆ. ಹೆಂಗಸಿನ ಶರೀರವನ್ನು ಧರಿಸಿರುವ ನಾನು ಬಹಳ ನಿರಾಶೆಗೊಂಡಿದ್ದೇನೆ. ಪುರುಷನಾಗಿ

ಹುಟ್ಟಿ ಭೀಷ್ಮನಿಗೆ ಪ್ರತೀಕಾರಮಾಡುತ್ತೇನೆ. ಆದುದರಿಂದ ನೀವು ನನ್ನನ್ನು ತಪಸ್ಸಿನಿಂದ ವಿಮುಖಳನ್ನಾಗಿ ಮಾಡಲು ಪುನಃ ಪ್ರಯತ್ನಿಸಬೇಡಿರಿ."

ದುರ್ಯೋಧನ! ಆ ಸಮಯದಲ್ಲಿ ಶೂಲಪಾಣಿಯಾದ, ದೇವದೇವನಾದ, ಉಮಾಪತಿಯಾದ ಮಹೇಶ್ವರನು ಆ ಋಷಿಗಳ ಮಧ್ಯದಲ್ಲಿ ತನ್ನ ನಿಜರೂಪದಿಂದಲೇ ತಪಸ್ವಿನಿಯಾದ ಅಂಬೆಗೆ ದರ್ಶನವನ್ನಿತ್ತನು. ಮಹಾದೇವನು ಅವಳ ತಪಸ್ಸಿಗೆ ಪ್ರಸನ್ನನಾಗಿ ಇಷ್ಟವಾದ ವರವನ್ನು ಕೇಳಬಹುದೆಂದು ಹೇಳಲು, ಅವಳು ನನ್ನನ್ನು (ಭೀಷ್ಮನನ್ನು) ಪರಾಜಯಗೊಳಿಸುವ ಸಾಮರ್ಥ್ಯವನ್ನು ದಯಾಪಾಲಿಸಬೇಕೆಂಬ ವರವನ್ನೇ ಪ್ರಾರ್ಥಿಸಿದಳು. ಮಹಾದೇವನು ಅವಳ ಪ್ರಾರ್ಥನೆಯನ್ನು ಪುರಸ್ಕರಿಸಿ ಆ ಮನಸ್ವಿನಿಯನ್ನು ಕುರಿತು-'ಹನಿಷ್ಯಸಿ' 'ನೀನೇ ಭೀಷ್ಮನನ್ನು ಕೊಲ್ಲುವೆ'– ಎಂದು ಹೇಳಿದನು. ರುದ್ರನ ಮಾತನ್ನು ದೃಢಪಡಿಸಿಕೊಳ್ಳುವ ಸಲುವಾಗಿ ಆ ಕನ್ಯೆಯು ಪುನಃ ಪ್ರಶ್ನಿಸಿದಳು.

**ಉಪಪದ್ಯೇತ ಕಥಂ ದೇವ ಸ್ತ್ರಿಯಾ ಯುಧಿ ಜಯೋ ಮಮ ॥೯॥**

"ದೇವ! ಅಬಲೆಯಾದ ನನಗೆ ಮಹಾಪರಾಕ್ರಮಿಯಾದ ಭೀಷ್ಮನೊಡನೆ ಮಾಡುವ ಯುದ್ಧದಲ್ಲಿ ವಿಜಯವು ಹೇಗೆ ತಾನೇ ಸಾಧ್ಯವಾಗುತ್ತದೆ? ಯದ್ಯಪಿ ನಾನು ಭೀಷ್ಮನನ್ನು ಸಂಹರಿಸಬೇಕೆಂಬ ಆಶಯದಿಂದಲೇ ತಪಸ್ಸನ್ನು ಮಾಡುತ್ತಿದ್ದರೂ ನನ್ನಲ್ಲಿ ಆ ಸ್ತ್ರೀಭಾವವಿರುವುದರಿಂದ ನನ್ನ ಮನಸ್ಸು ಪ್ರಶಾಂತವಾಗಿದೆ. ಅವನೊಡನೆ ಈಗಲೇ ಯುದ್ಧಕ್ಕೆ ಹೋಗುವ ಉತ್ಸುಕತೆಯನ್ನು ಹೊಂದಿರುವುದಿಲ್ಲ. ಆದರೆ ಉಮಾಪತಿಯೇ! ಈಗ ನೀನೇ 'ಹನಿಷ್ಯಸಿ' 'ಭೀಷ್ಮನನ್ನು ಕೊಲ್ಲುವೆ ; ಕೊಲ್ಲಲು ಸಮರ್ಥಳಾಗುವೆ' ಎಂಬ ವರವನ್ನೂ ಕೊಟ್ಟಿರುವೆ. ವೃಷಧ್ವಜನೇ! ನಿನ್ನ ಈ ವರವು ಸತ್ಯವಾಗುವಂತೆ ಮಾಡು. ಯಾವ ರೀತಿಯಲ್ಲಿ ನಾನು ಶಾಂತನುವಿನ ಮಗನಾದ ಭೀಷ್ಮನನ್ನು ಯುದ್ಧದಲ್ಲಿ ಎದುರಿಸಿನಿಂತು ಅವನನ್ನು ಸಂಹರಿಸುವೆನೆಂಬುದನ್ನು ಹೇಳು. ಏಕೆಂದರೆ : ಯದ್ಯಪಿ ನೀನು ಭೀಷ್ಮನನ್ನು ಸಂಹರಿಸುವ ಸಾಮರ್ಥ್ಯವನ್ನು ನನಗೆ ವರದ ಮೂಲಕವಾಗಿ ದಯಪಾಲಿಸಿ

ದ್ದರೂ ನನ್ನಲ್ಲಿ ಸ್ತ್ರೀಭಾವವಿರುವುದರಿಂದ ಅವನ ಮೇಲೆ ಯುದ್ಧಕ್ಕೆ ಹೋಗಲು ನನ್ನ ಮನಸ್ಸು ಉತ್ಸುಕವಾಗಿಲ್ಲ.”

ದುರ್ಯೋಧನ! ತನ್ನ ಅಸಾಮರ್ಥ್ಯವನ್ನು ವ್ಯಕ್ತಪಡಿಸಿದ ಅಂಬೆಗೆ ವೃಷಧ್ವಜನಾದ ಮಹಾದೇವನು ಹೇಳಿದನು :

“ಭದ್ರೇ! ನನ್ನ ಮಾತು ಸುಳ್ಳಾಯಿತೆಂದು ಯಾರೂ ಇದುವರೆಗೆ ಹೇಳಿರುವುದಿಲ್ಲ. ಆದುದರಿಂದ ನಾನು ಹೇಳಿರುವ ಮಾತು ಖಂಡಿತ ವಾಗಿಯೂ ಸತ್ಯವಾಗಿಯೇ ಪರಿಣಮಿಸುತ್ತದೆ. ರಣಾಂಗಣದಲ್ಲಿ ನೀನೇ ಭೀಷ್ಮನನ್ನು ಕೊಲ್ಲುವೆ. ಪುಂಸ್ತ್ವವನ್ನೂ ಪಡೆಯುವೆ. ದೇಹಾಂತರವನ್ನು ಪಡೆಯುವ ನೀನು ಈ ವಿಷಯಗಳೆಲ್ಲವನ್ನೂ ಸ್ಮರಿಸಿಕೊಳ್ಳುವೆ. ಮುಂದಿನ ಜನ್ಮದಲ್ಲಿ ದ್ರುಪದನ ವಂಶದಲ್ಲಿ ದ್ರುಪದನ ಮಗಳಾಗಿ ಹುಟ್ಟುವ ನೀನು ಮಹಾರಥನಾಗುವೆ. ಶೀಘ್ರಾಸ್ತ್ರನೂ, ಚಿತ್ರಯೋಧಿಯೂ, ಯೋಧಸಮ್ಮಾನ್ಯನೂ ಆಗುವೆ. ಕಲ್ಯಾಣಿ! ನಾನು ಹೇಳಿರುವಂತೆಯೇ ಎಲ್ಲವೂ ನಡೆಯುತ್ತದೆ. ಮೊದಲು ನೀನು ಹೆಣ್ಣಾಗಿಯೇ ಜನ್ಮತಾಳುವೆ. ಕೆಲಕಾಲ ಕಳೆದನಂತರದಲ್ಲಿ ನೀನು ಪುರುಷನಾಗುವೆ.”

ದುರ್ಯೋಧನ! ಕಪರ್ದಿಯಾದ, ವೃಷಧ್ವಜನಾದ ಮಹಾದೇವನು ಅಂಬೆಗೆ ಭರವಸೆಯನ್ನಿತ್ತು, ಋಷಿಗಳೂ ಮತ್ತು ಬ್ರಾಹ್ಮಣರೂ ನೋಡುತ್ತಿದ್ದಂತೆಯೇ ಅಂತರ್ಹಿತನಾದನು.

ಮಹಾದೇವನ ವರದಂತೆ ಮತ್ತೊಂದು ಜನ್ಮದಲ್ಲಿಯೇ ತನ್ನಿಂದ ಭೀಷ್ಮನ ವಧೆಯಾಗತಕ್ಕದ್ದೆಂಬುದನ್ನು ತಿಳಿದನಂತರ ಆ ಕನ್ಯೆಯು ಅದೇ ಶರೀರದಲ್ಲಿ ಹೆಚ್ಚುಕಾಲ ಜೀವಿಸಿರಲು ಇಚ್ಛಿಸಲಿಲ್ಲ. ವರವರ್ಣಿನಿಯಾದ ಅಂಬೆಯು ಕಾಡಿಗೆ ಹೋಗಿ ಸೌದೆಯನ್ನು ತಂದು ಋಷಿಗಳ ಮತ್ತು ಬ್ರಾಹ್ಮಣರ ಸಮಕ್ಷದಲ್ಲಿಯೇ ಬಹುದೊಡ್ಡದಾದ ಚಿತೆಯೊಂದನ್ನು ಕಲ್ಪಿಸಿ, ಅದಕ್ಕೆ ಬೆಂಕಿಯನ್ನು ಹೊತ್ತಿಸಿದಳು. ಆ ಚಿತೆಯು ಧಗ-ಧಗನೆ ಉರಿಯಲಾರಂಭಿಸಿದನಂತರ ರೋಷದಿಂದ ಉದ್ದೀಪ್ತವಾಗಿದ್ದ ಮನಸ್ಸಿನಿಂದ ಕೂಡಿದವಳಾಗಿ ‘ಮುಂದಿನ ಜನ್ಮದಲ್ಲಿ ಭೀಷ್ಮನನ್ನು ವಧೆಮಾಡುವ ಸಲು ವಾಗಿ ನಾನು ಈ ಚಿತೆಯನ್ನು ಪ್ರವೇಶಿಸುತ್ತಿದ್ದೇನೆ’– ಎಂಬುದಾಗಿ ಹೇಳುತ್ತಾ

ಯಮುನಾನದಿಯ ತೀರದಲ್ಲಿ ತಾನೇ ಸಿದ್ಧಪಡಿಸಿದ್ದ ಚಿತೆಯಲ್ಲಿ ಪ್ರವೇಶಿಸಿ ದಳು."

ಗ೮೭ನೆಯ ಅಧ್ಯಾಯವು ಮುಗಿಯಿತು.

ಗ೮೮ನೆಯ ಅಧ್ಯಾಯ ಅಮ್ಬೋಪಾಖ್ಯಾನಪರ್ವ (ಮುಂದುವರಿದಿದೆ)

## ಅಂಬೆಯು ದ್ರುಪದನ ಮಗಳಾಗಿ ಹುಟ್ಟಿದುದು : ಪುತ್ರಾಪೇಕ್ಷಿಗಳಾಗಿದ್ದ ತಂದೆ-ತಾಯಿಗಳು ಹುಟ್ಟಿದ ಮಗಳನ್ನು ಮಗನೆಂದು ಪ್ರಸಿದ್ಧಪಡಿಸಿ ಶಿಖಂಡೀ ಎಂದು ನಾಮಕರಣಮಾಡಿದುದು

ದುರ್ಯೋಧನನು ಕುತೂಹಲದಿಂದ ಭೀಷ್ಮನನ್ನು ಪ್ರಶ್ನಿಸಿದನು :

"ಗಾಂಗೇಯ! ಯೋಧಶ್ರೇಷ್ಠ! ಪಿತಾಮಹ! ಮೊದಲು ಹೆಣ್ಣಾಗಿ ಹುಟ್ಟಿದ ಶಿಖಂಡಿಯು ಅನಂತರ ಪುರುಷನಾದುದು ಹೇಗೆ? ಈ ವಿಷಯವನ್ನು ನನಗೆ ಹೇಳು."

"ದುರ್ಯೋಧನ! ಮಹೀಪತಿಯಾದ ದ್ರುಪದರಾಜನಿಗೆ ಪ್ರೀತಿಪಾತ್ರ ಳಾಗಿದ್ದ ಪಟ್ಟದ ರಾಣಿಯು ಅಪುತ್ರವತಿಯಾಗಿದ್ದಳು. ಬಹಳ ಕಾಲದವರೆಗೂ ಅವಳಿಗೆ ಮಕ್ಕಳೇ ಆಗಿರಲಿಲ್ಲ. ಶಂಕರನು ಅಂಬೆಗೆ, ಪುನರ್ಜನ್ಮದಲ್ಲಿ ಪುರುಷನಾಗಿ ಭೀಷ್ಮನನ್ನು ಸಂಹರಿಸುವೆಯೆಂಬ ವರವಿತ್ತಕಾಲದಲ್ಲಿಯೇ ದ್ರುಪದನು ಅಪತ್ಯಾರ್ಥವಾಗಿ ತಪಸ್ಸಿನಿಂದ ಶಂಕರನನ್ನು ಪ್ರಸನ್ನಗೊಳಿಸಿದನು. ಆ ಸಮಯದಲ್ಲಿ ದ್ರುಪದನಿಗೆ ಎರಡು ವಿಧವಾದ ಆಶಯವಿದ್ದಿತು. ನಮ್ಮನ್ನು ಸಂಹರಿಸಬೇಕೆಂಬುದೊಂದು : ಪುತ್ರನನ್ನೂ ಪಡೆಯಬೇಕೆಂಬುದು ಮತ್ತೊಂದು. ನಮ್ಮ ವಧಾರ್ಥವಾಗಿ ಪುತ್ರನನ್ನು ಪಡೆಯಬೇಕೆಂದು ಸಂಕಲ್ಪಿಸಿ ದ್ರುಪದನು ಸುಘೋರವಾದ ತಪಸ್ಸಿನಲ್ಲಿ ನಿರತನಾದನು. ಆ ಕಾರಣದಿಂದಲೇ ಅವನು ಬಾರಿ-ಬಾರಿಗೂ ಮಹಾದೇವನನ್ನು ಪ್ರಾರ್ಥಿಸಿದನು.

"ಭಗವನ್! ನನಗೆ ಹೆಣ್ಣುಮಗುವಾಗುವುದು ಬೇಡ. ಪುತ್ರ ನೊಬ್ಬನು ಹುಟ್ಟುವಂತೆ ಅನುಗ್ರಹಿಸು. ಭೀಷ್ಮನಿಗೆ ಪ್ರತೀಕಾರಮಾಡುವ

ಸಲುವಾಗಿ ನಾನು ಸಮರ್ಥನಾದ ಪುತ್ರನೊಬ್ಬನನ್ನು ಅಪೇಕ್ಷಿಸುತ್ತೇನೆ." ಹೀಗೆಂದು ಪ್ರಾರ್ಥಿಸಿದ ದ್ರುಪದನಿಗೆ ಮಹಾದೇವನು ಹೇಳಿದನು :

"ಸ್ತ್ರೀ ಪುಮಾಂಸ್ತೇ ಭವಿಷ್ಯತಿ" 'ಮಹೀಪಾಲ! ನಿನಗೆ ಹೆಣ್ಣು ಹುಟ್ಟಿದರೂ ಕೆಲಕಾಲಾನಂತರದಲ್ಲಿ ಅದು ಗಂಡಾಗುತ್ತದೆ. ನೀನಿನ್ನು ಪಟ್ಟಣಕ್ಕೆ ಹಿಂದಿರುಗು. ನಾನು ಈಗ ಹೇಳಿರುವುದು ಯಾವ ಕಾರಣದಿಂದಲೂ ವ್ಯತ್ಯಾಸವಾಗುವುದಿಲ್ಲ."

ದುರ್ಯೋಧನ! ಮಹಾದೇವನ ಆದೇಶದಂತೆ ದ್ರುಪದನು ನಗರಿಗೆ ಹಿಂದಿರುಗಿ ತನ್ನ ಪ್ರಿಯಭಾರ್ಯೆಯನ್ನು ಕುರಿತು ಹೇಳಿದನು :

"ಪ್ರಿಯೇ! ನಾನು ಪುತ್ರಪ್ರಾಪ್ತಿಗಾಗಿ ಬಹುಪ್ರಯತ್ನಿಸಿದೆನು. ಮಹಾದೇವನನ್ನು ಘೋರವಾದ ತಪಸ್ಸಿನಿಂದ ಆರಾಧಿಸಿ ಸಂತುಷ್ಟಿಗೊಳಿಸಿದೆನು. ಪ್ರಸನ್ನನಾದ ಶಂಕರನು ಹೆಣ್ಣುಮಗುವನ್ನು ಅನುಗ್ರಹಿಸಿದನು. ಆದರೂ ಆ ಹೆಣ್ಣುಮಗುವೇ ಮುಂದೆ ಗಂಡಾಗುವುದೆಂದೂ ಹೇಳಿದ್ದಾನೆ. ಇಷ್ಟರಿಂದಲೇ ತೃಪ್ತನಾಗದ ನಾನು ಪುತ್ರನನ್ನೇ ಅನುಗ್ರಹಿಸಬೇಕೆಂದು ಬಾರಿ-ಬಾರಿಗೂ ಬೇಡಿಕೊಂಡೆನು. ಆದರೂ ಶಿವನು 'ಇದು ದೈವಸಂಕಲ್ಪ ; **ನ ತದನ್ಯಚ್ಚ ಭವಿತಾ ಭವಿತವ್ಯಂ ಹಿ ತತ್ತಥಾ** ಇದನ್ನು ಬದಲಾಯಿಸುವ ಸಾಧ್ಯತೆಯಿಲ್ಲ. ಅದು ಹಾಗೆಯೇ ನಡೆದೇ ತೀರಬೇಕು. ನಿನಗೆ ಮೊದಲು ಸ್ತ್ರೀಶಿಶುವೇ ಹುಟ್ಟಿ ಅನಂತರವೇ ಅದು ಗಂಡಾಗಬೇಕು' ಎಂದು ಹೇಳಿ ಅಂತರ್ಹಿತನಾದನು."

ದುರ್ಯೋಧನ! ದ್ರುಪದನ ಮಾತನ್ನು ಕೇಳಿ ದ್ರುಪದಪತ್ನಿಯು ನಿಯಮಪೂರ್ವಕವಾಗಿದ್ದು ಋತುಕಾಲವು ಪ್ರಾಪ್ತವಾಗುತ್ತಲೇ ದ್ರುಪದನ ಸಮಾಗಮವನ್ನು ಪಡೆದಳು. ಶಾಸ್ತ್ರೀಯವಿಧಿಯಂತೆ ಗರ್ಭಾಧಾನ ಸಂಸ್ಕಾರವಾದನಂತರ ರಾಜೀವಲೋಚನೆಯಾದ ದ್ರುಪದನ ಪತ್ನಿಯು ಮಹಾದೇವನ ಅನುಗ್ರಹದಿಂದಾಗಿ ಗರ್ಭವತಿಯೂ ಆದಳು. ಈ ವಿಷಯಗಳೆಲ್ಲವನ್ನೂ ನನಗೆ ನಾರದರೇ ಹೇಳಿದರು. ದುರ್ಯೋಧನ! ಪಟ್ಟಮಹಿಷಿಯಲ್ಲಿ ತನಗೆ ಪುತ್ರನು ಹುಟ್ಟುತ್ತಾನೆಂಬ ಕಾರಣದಿಂದ ಅವಳನ್ನು ದ್ರುಪದನು

ಇತೋಪ್ಯತಿಶಯವಾಗಿ ಪ್ರೀತಿಸತೊಡಗಿದನು. ಅವಳನ್ನು ಅತ್ಯಂತ ಸುಖದಲ್ಲಿಟ್ಟಿರಬೇಕೆಂದು ಸತತವಾಗಿ ಪ್ರಯತ್ನಿಸುತ್ತಿದ್ದನು. ಆ ಸಮಯ ದಲ್ಲವಳು ತನಗೆ ಬೇಕು-ಬೇಕಾದ ವಸ್ತುಗಳೆಲ್ಲವನ್ನೂ ಪಡೆದು ಸಂತೋಷಚಿತ್ತ ಳಾದಳು. ಅವಳು ಕೇಳಿದ ವಸ್ತುವು ಎಷ್ಟೇ ದುರ್ಲಭವಾಗಿದ್ದರೂ ದ್ರುಪದನದನ್ನು ಸತತಪ್ರಯತ್ನದಿಂದ ತರಿಸಿಕೊಡುತ್ತಿದ್ದನು. ಅಪುತ್ರವಂತ ನಾಗಿದ್ದ, ಸತ್ಪುರುಷನಾಗಿದ್ದ ದ್ರುಪದನ ಪತ್ನಿಯು, ನವಮಾಸಗಳು ತುಂಬುತ್ತಲೇ ಬಹುಸುಂದರವಾಗಿದ್ದ ಹೆಣ್ಣುಮಗುವಿಗೆ ಜನ್ಮವನ್ನಿತ್ತಳು. ಮಕ್ಕಳಿಲ್ಲದ ಕಾರಣದಿಂದಾಗಿ ಬಹುವಾಗಿ ಶೋಕಪಡುತ್ತಿದ್ದ ದ್ರುಪದನಿಗೆ ಮನಸ್ವಿನಿಯಾದ ಅವನ ಭಾರ್ಯೆಯು ತನಗೆ ಹುಟ್ಟಿದ್ದು ಗಂಡುಮಗುವೆಂದೇ ಹೇಳಿಬಿಟ್ಟಳು. ದ್ರುಪದನು ಪತ್ನಿಯ ಇಂಗಿತವನ್ನು ಅರ್ಥಮಾಡಿಕೊಂಡವ ನಾಗಿ ತನಗೆ ಹೆಣ್ಣು ಹುಟ್ಟಿತೆಂಬುದನ್ನು ಹೊರಗೆಡಹದೇ ಪುತ್ರಪ್ರಾಪ್ತಿ ಯಾಯಿತೆಂದೇ ಸರ್ವತ್ರ ಘೋಷಿಸಿ ಪುಂಜನನವಾದನಂತರ ಮಾಡಬೇಕಾದ ಸಂಸ್ಕಾರಗಳನ್ನೇ ಆ ಶಿಶುವಿಗೆ ಮಾಡಿದನು. ದ್ರುಪದನ ಪತ್ನಿಯೂ ಆ ರಹಸ್ಯವನ್ನು ಗುಪ್ತವಾಗಿಡಲು ಸರ್ವಪ್ರಯತ್ನದಿಂದಲೂ ವ್ಯವಸ್ಥೆಮಾಡಿದ್ದಳು. ದ್ರುಪದನೊಬ್ಬನ ಹೊರತಾಗಿ ಆ ಪಟ್ಟಣದಲ್ಲಿ ಯಾರಿಗೂ 'ರಾಣಿಗೆ ಹುಟ್ಟಿದ್ದು ಹೆಣ್ಣು' ಎಂಬ ವಿಷಯವು ತಿಳಿದಿರಲಿಲ್ಲ. ಅಕ್ಷೀಣತೇಜಸ್ಕನಾದ ಮಹಾದೇವನ ಮಾತಿನಲ್ಲಿ ದ್ರುಪದನಿಗೆ ಅಪಾರವಾದ ಶ್ರದ್ಧೆಯಿದ್ದುದರಿಂದ ತನಗೆ ಹುಟ್ಟಿದ್ದು ಹೆಣ್ಣೆಂಬುದನ್ನು ಮರೆಮಾಚಿ ಪುತ್ರಜನನವಾಯಿತೆಂದೇ ಸರ್ವತ್ರ ಶ್ರುತಪಡಿಸಿ ದನು. ಹಿಂದೆಯೇ ಹೇಳಿದಂತೆ ಪುಂಜನನೋಚಿತವಾದ ಜಾತಕರ್ಮಾದಿ ಸಂಸ್ಕಾರಗಳನ್ನೇ ದ್ರುಪದನು ಆ ಶಿಶುವಿಗೆ ಮಾಡಿ 'ಶಿಖಂಡೀ' ಎಂದು ನಾಮಕರಣವನ್ನೂ ಮಾಡಿದನು. ದ್ರುಪದನ ಭಾರ್ಯೆಯಲ್ಲಿ ಪುನರ್ಜನ್ಮ ಪಡೆದ ಅಂಬೆಯು ಶಿಖಂಡೀ ಎಂಬ ಹೆಸರಿನಿಂದ ಪ್ರಸಿದ್ಧಳಾದಳು.

ದುರ್ಯೋಧನ! ಅಂಬೆಯ ಚಲನ-ವಲನಗಳನ್ನೇ ಪ್ರತಿಕ್ಷಣದಲ್ಲಿಯೂ ಚಾರರ ಮುಖೇನ ತಿಳಿದುಕೊಳ್ಳುತ್ತಿದ್ದ ನಾನು ನಾರದರ ಮಾತಿನಿಂದಲೂ, ಪಶುಪತಿಯು ಅಂಬೆಗೂ ಮತ್ತು ದ್ರುಪದನಿಗೂ ಹೇಳಿದ ಅಭಿವಚನ ಗಳಿಂದಲೂ, ಅಂಬೆಯ ತಪಸ್ಸಿನ ಉದ್ದೇಶವನ್ನು ಸಂಪೂರ್ಣವಾಗಿ ತಿಳಿದವ

ನಾಗಿದ್ದುದರಿಂದಲೂ–ದ್ರುಪದನಿಗೆ ಹೆಣ್ಣುಮಗುವೇ ಹುಟ್ಟಿದೆಯೆಂದೂ ಆದರವನು ಅದನ್ನು ಮರೆಮಾಚಿ ಗಂಡುಮಗುವೆಂದೇ ಹೇಳುತ್ತಿದ್ದಾನೆಂದೂ ನಿರ್ಧರಿಸಿದೆನು."

ಌಲಲನೆಯ ಅಧ್ಯಾಯವು ಮುಗಿಯಿತು.

೧೯೮ನೆಯ ಅಧ್ಯಾಯ ಅಮ್ಬೋಪಾಖ್ಯಾನಪರ್ವ (ಮುಂದುವರಿದಿದೆ)

## ಶಿಖಂಡಿಯ ವಿವಾಹ: ಶಿಖಂಡಿಯು ಹೆಣ್ಣೆಂಬ ಸಮಾಚಾರವನ್ನು ತಿಳಿದ ಮಾವನಾದ ದಶಾರ್ಣರಾಜನು ಕೋಪಗೊಂಡುದು

ಭೀಷ್ಮನು ಮುಂದುವರಿದು ಹೇಳುತ್ತಾನೆ :

"ದುರ್ಯೋಧನ! ದ್ರುಪದನು ತನ್ನ ಮಗಳನ್ನು ಎಲ್ಲ ಕಾರ್ಯಗಳಲ್ಲಿಯೂ ಕುಶಲೆಯನ್ನಾಗಿ ಮಾಡಲು ಸರ್ವಪ್ರಯತ್ನವನ್ನೂ ಮಾಡಿದನು. ಅವಳಿಗೆ ಓದು-ಬರಹಗಳ ಶಿಕ್ಷಣವನ್ನೂ ಕೊಡಿಸಿದನು. ಶಿಲ್ಪಕಲೆಯನ್ನೂ ಕಲಿಸಿದನು. ಶಿಖಂಡಿಯು ದ್ರೋಣರ ಶಿಷ್ಯನಾಗಿ ಇಷ್ವಸ್ತ್ರಗಳಲ್ಲಿಯೂ ಪಾರಂಗತನಾದನು. ಶಿಖಂಡಿಗೆ ತಾರುಣ್ಯವು ಪ್ರಾದುರ್ಭಾವವಾಗಲಾಗಿ, ವರವರ್ಣಿನಿಯಾದ ಅವನ ತಾಯಿಯು ಅವನಿಗೊಂದು ಹೆಣ್ಣುತಂದು ಮದುವೆಮಾಡುವಂತೆ ದ್ರುಪದನನ್ನು ಪ್ರಚೋದಿಸಿದಳು. ಶಿಖಂಡಿಯು ಪ್ರಾಪ್ತವಯಸ್ಕನಾಗಿದ್ದಾನೆಂಬುದನ್ನು ದ್ರುಪದನೂ ಗಮನಿಸಿದನು. ಆದರೆ ಶಿಖಂಡಿಯು ನಾಮಮಾತ್ರಕ್ಕೆ ಪುತ್ರನಾಗಿದ್ದನೇ ಹೊರತು ದ್ರುಪದನ ನಿರೀಕ್ಷೆಯಂತೆ ಅವನ ಲಿಂಗಪರಿವರ್ತನೆಯಾಗಿರಲಿಲ್ಲ. ಅವನು ಪ್ರೌಢೆಯಾದ ಸ್ತ್ರೀಯಾಗಿಯೇ ಉಳಿದಿದ್ದನು. ಅದನ್ನು ತಿಳಿದ ದ್ರುಪದನು ಭಾರ್ಯೆಯೊಡನೆ ಚಿಂತಿಸತೊಡಗಿದನು.

"ಪ್ರಿಯೇ! ಈ ನನ್ನ ಮಗಳು ನವಯುವತಿಯಾಗಿದ್ದಾಳೆ. ಇದರಿಂದಾಗಿ ನನ್ನ ಶೋಕವು ದಿನ-ದಿನಕ್ಕೂ ಅಧಿಕಗೊಳ್ಳುತ್ತಿದೆ. ಮುಂದೇನು ಮಾಡಬೇಕೆಂಬುದೇ ತಿಳಿಯದಾಗಿದೆ.

ಶೂಲಪಾಣಿಯ ಮಾತಿನ ಮೇಲೆ ನಂಬಿಕೆಯನ್ನಿಟ್ಟು ಹೆಣ್ಣೇ ಹುಟ್ಟಿ

ದ್ದರೂ ಅದನ್ನು ಬಹಿರಂಗಪಡಿಸದೇ ಹುಟ್ಟಿದ್ದು ಗಂಡೆಂದು ಹೇಳಿದೆವು. ತದನುಸಾರವಾಗಿಯೇ ಇವಳಿಗೆ ಎಲ್ಲ ಸಂಸ್ಕಾರಗಳನ್ನೂ ಮಾಡಿದೆವು. ಆದರೆ ಇದುವರೆಗೂ ಇವಳು ಗಂಡಾಗಲೇ ಇಲ್ಲ. ನವಯುವತಿಯಾಗಿದ್ದಾಳೆ. ಇವಳಿಗೆ ಒಂದು ಹೆಣ್ಣನ್ನು ತಂದು ಮದುವೆಮಾಡಬೇಕೆಂದು ನೀನು ಪ್ರೇರಿಸುತ್ತಿರುವೆ. ಇದು ಹೇಗೆತಾನೇ ಸಾಧ್ಯವಾದೀತು? ಮದುವೆಯಾದ ನಂತರ ಈ ರಹಸ್ಯವು ಬಹಿರಂಗವಾಗದಿರುವುದೇ? ಈ ಸಮಯದಲ್ಲಿ ನಾನಂತೂ ದಿಕ್ಕೇತೋಚದವನಾಗಿದ್ದೇನೆ."

"ಮಹಾರಾಜ! ನೀನೇಕಿಷ್ಟು ಯೋಚಿಸುವೆ? ಈ ನಮ್ಮ ಮಗಳು ಮಗನಾಗಿ ಪರಿವರ್ತಿತನಾಗುವನೆಂಬುದು ಖಂಡಿತವಾಗಿಯೂ ಸುಳ್ಳಾಗುವುದಿಲ್ಲ. ಮೂರು ಲೋಕಗಳ ಸೃಷ್ಟಿಗೆ ಕಾರಣನಾದ ಉಮೇಶನು ಯಾವ ಕಾರಣಕ್ಕಾಗಿ ಸುಳ್ಳುಹೇಳುವನು? ಅವನು ಹುಸಿಯ ಮಾತನ್ನೆಂದಿಗೂ ಆಡನು. ಅವನು ಹೇಳಿರುವಂತೆಯೇ ಖಂಡಿತವಾಗಿಯೂ ನಡೆಯುತ್ತದೆ. ಈ ವಿಷಯದಲ್ಲಿ ನಾವು ಸಂಶಯಪಡುವ ಕಾರಣವಿಲ್ಲ. ನಿನಗೇನಾದರೂ ರುಚಿಸುವುದಾದರೆ ನಾನು ಈ ವಿಷಯದಲ್ಲಿ ಎರಡು ಮಾತುಗಳನ್ನು ಹೇಳಬೇಕೆಂದಿರುತ್ತೇನೆ. ನಾನು ಹೇಳುವ ಮಾತನ್ನು ಗ್ರಹಿಸಿ ಅನಂತರ ನಿನಗೆ ತೋಚಿದಂತೆ ನೀನು ಮಾಡಬಹುದು. ನೀನು ಪ್ರಯತ್ನಪೂರ್ವಕವಾಗಿ ಇವಳಿಗೊಬ್ಬಳು ಹೆಣ್ಣನ್ನು ತಂದು ಮದುವೆಮಾಡಿಬಿಡು. ತಾನು ಕೊಟ್ಟ ವರದ ಪರೀಕ್ಷಾಕಾಲವು ಬಂದಾಗ ಶಿವನು ಸುಮ್ಮನಿರಲಾರನು. ತನ್ನ ಅಭಿವಚನವು ಸತ್ಯವಾಗಿ ಪರಿಣಮಿಸುವಂತೆ ಅನುಗ್ರಹಿಸಿಯೇ ತೀರುತ್ತಾನೆ. ಶಿವನ ಮಾತು ಸತ್ಯವಾಗಿ ಪರಿಣಮಿಸುತ್ತದೆ. ನಮ್ಮ ಅಭಿಲಾಷೆಯೂ ಪೂರ್ಣವಾಗುತ್ತದೆ."

ದ್ರುಪದನಿಗೂ ಭಾರ್ಯೆಯು ಹೇಳಿದುದು ಸಮಂಜಸವಾಗಿ ತೋರಿತು. ಶಿಖಂಡಿಗೆ ಹೆಣ್ಣೊಂದನ್ನು ತಂದು ಮದುವೆಮಾಡಿಬಿಡಬೇಕೆಂದು ಇಬ್ಬರೂ ನಿಶ್ಚಯಿಸಿದರು. ದಶಾರ್ಣರಾಜನ ಪುತ್ರಿಯನ್ನು ತಮ್ಮ ಮಗನಿಗೆ ಪತ್ನಿಯನ್ನಾಗಿ ತಂದುಕೊಳ್ಳಲು ನಿಶ್ಚಯಿಸಿದರು. ದುರ್ಯೋಧನ! ಅನಂತರದಲ್ಲಿ ರಾಜಸಿಂಹನಾದ ದ್ರುಪದನು ಎಲ್ಲ ರಾಜರ ಕುಲ-ಗೌರವಗಳನ್ನೂ ಅಮಾತ್ಯ

ರಿಂದ ಕೇಳಿ ತಿಳಿದುಕೊಂಡವನಾಗಿ ದಶಾರ್ಣರಾಜನ ಮಗಳನ್ನೇ ತನ್ನ 'ಮಗನಾದ' ಶಿಖಂಡಿಗೆ ಪತ್ನಿಯನ್ನಾಗಿ ಆರಿಸಿಕೊಂಡನು.

ಹಿರಣ್ಯವರ್ಮನೆಂಬ ಹೆಸರಿನ ರಾಜನು ದಾಶಾರ್ಣಕನಾಗಿದ್ದನು. (ದಶಾರ್ಣದೇಶದ ಅಧಿಪತಿಯಾಗಿದ್ದನು.) ಹಿರಣ್ಯವರ್ಮನು ತನ್ನ ಮಗಳನ್ನು ಶಿಖಂಡಿಗೆ ಕೊಟ್ಟು ಮದುವೆಮಾಡಿದನು. ಹಿರಣ್ಯವರ್ಮನ ಮಗಳು ನವ ಯುವತಿಯಾಗಿದ್ದಳು. ಶಿಖಂಡಿನಿಯೂ ಪ್ರಾಪ್ತಯೌವನಳಾಗಿದ್ದಳು. ವಿವಾಹ ಸಮಾರಂಭವು ಮುಗಿದನಂತರದಲ್ಲಿ ಶಿಖಂಡಿಯು ಪತ್ನೀಸಮೇತನಾಗಿ ಕಾಂಪಿಲ್ಯ ನಗರಕ್ಕೆ ಹಿಂದಿರುಗಿದನು. ಸ್ವಲ್ಪದಿನಗಳೊಳಗಾಗಿಯೇ ತಾನು ಮದುವೆಯಾಗಿರುವುದು, ಒಬ್ಬ ಸ್ತ್ರೀಯನ್ನೇ–ಎಂಬ ವಿಷಯವನ್ನು ಹಿರಣ್ಯ ವರ್ಮನ ಮಗಳು ಅರಿತುಕೊಂಡಳು. ಅವಳಿಗೆ ಈ ವಿಷಯವನ್ನು ರಹಸ್ಯದಲ್ಲಿ ಡಲು ಸಾಧ್ಯವಾಗಲಿಲ್ಲ. ತಾನು ಮದುವೆಯಾದುದು ಶಿಖಂಡಿಯನ್ನಲ್ಲ.; ಶಿಖಂಡಿನಿಯನ್ನು–ಎಂಬ ವಿಷಯವು ತಿಳಿದೊಡನೆಯೇ ಅವಳು ಬಹುಲಜ್ಜಿತ ಳಾಗಿ, ಪಾಂಚಾಲರಾಜನಿಗೆ ಶಿಖಂಡಿನೀ ಎಂಬ ಪುತ್ರಿಯಿರುವಳೇ ಹೊರತು ಶಿಖಂಡಿಯೆಂಬ ಪುತ್ರನಿಲ್ಲವೆಂಬ ವಿಷಯವನ್ನು ತನ್ನ ದಾದಿಯರಿಗೂ ಸಖಿಯರಿಗೂ ತಿಳಿಸಿದಳು. ದಶಾರ್ಣದೇಶದ ರಾಜಪುತ್ರಿಯ ದಾಸಿಯರು ರಾಜಪುತ್ರಿಯು ಹೇಳಿದ ಮಾತನ್ನು ಕೇಳಿ ಬಹುದುಃಖಿತರಾದರು ಮತ್ತು ಆ ವಿಷಯವನ್ನು ಹಿರಣ್ಯವರ್ಮನಿಗೆ ತಿಳಿಯಪಡಿಸಲು ಕೆಲವು ದಾಸಿಯರನ್ನು ದಶಾರ್ಣದೇಶಕ್ಕೆ ಕಳುಹಿಸಿಯೂ ಬಿಟ್ಟರು. ದಶಾರ್ಣದೇಶದ ಅಧಿಪತಿಯಾದ ಹಿರಣ್ಯವರ್ಮನ ಬಳಿಗೆ ಹೋದ ದಾಸಿಯರು ದ್ರುಪದನು ಮಾಡಿದ ವಂಚನೆಯನ್ನು ಬಗೆ-ಬಗೆಯಾಗಿ ಬಣ್ಣಿಸಿದರು. ಆ ವಿಷಯವನ್ನು ಕೇಳುತ್ತಲೇ ಹಿರಣ್ಯವರ್ಮನು ಬಹುಕುಪಿತನಾದನು. ವಿವಾಹಸಮಯದಲ್ಲಿ ಶಿಖಂಡಿಯು ಪುರುಷನಂತೆಯೇ ವ್ಯವಹರಿಸುತ್ತಿದ್ದು ಆನಂದಭರಿತನಾಗಿದ್ದನು. ತನ್ನಲ್ಲಿ ಸ್ತ್ರೀತ್ವವಿದೆಯೆಂಬ ಭಾವನೆಯೇ ಅವನಿಗಿರಲಿಲ್ಲ. ಈ ಕಾರಣದಿಂದಾಗಿ ಶಿಖಂಡಿಯು ಶಿಖಂಡಿನಿಯಿರಬಹುದೆಂಬ ಸಂಶಯಕ್ಕೂ ಅವಕಾಶವಿರಲಿಲ್ಲ. ಆದರೆ ಕೆಲವು ದಿನಗಳಲ್ಲಿಯೇ ಮಗಳೊಡನೆ ಹೋಗಿದ್ದ ದಾಸಿಯರು ಬಂದು ರಹಸ್ಯವನ್ನು ಸ್ಫೋಟಿಸಿದನಂತರ ಸ್ವಾಭಾವಿಕವಾಗಿಯೇ ಹಿರಣ್ಯವರ್ಮನು ಕ್ರೋಧಮೂರ್ಛಿತನಾದನು. ಬಹುಕ್ರುದ್ಧನಾಗಿದ್ದ ದಶಾರ್ಣನು ದೂತ

ನೊಬ್ಬನನ್ನು ದ್ರುಪದನ ಬಳಿಗೆ ಕಳುಹಿಸಿಕೊಟ್ಟನು. ಹಿರಣ್ಯವರ್ಮನ ದೂತನು ಕಾಂಪಿಲ್ಯನಗರಿಗೆ ಹೋಗಿ ದ್ರುಪದನನ್ನು ಏಕಾಂತದಲ್ಲಿ ಸಂಧಿಸಿ ಅವನೊಡನೆ ಈ ಮಾತುಗಳನ್ನು ಹೇಳಿದನು :

"ನಿಷ್ಕಳಂಕನೇ! ನೀನು ದಶಾರ್ಣರಾಜನನ್ನು ವಂಚಿಸಿರುವೆ. ನಿನ್ನಿಂದ ಅವಮಾನಿತನಾಗಿರುವ ರಾಜನು ಪರಮಕ್ರುದ್ಧನಾಗಿ ನಿನಗೆ ಹೇಳುವಂತೆ ಈ ಮಾತನ್ನು ನನ್ನೊಡನೆ ಹೇಳಿಕಳುಹಿಸಿದ್ದಾನೆ :

**ಅವಮನ್ಯಸೇ ಮಾಂ ನೃಪತೇ ನೂನಂ ದುರ್ಮನ್ತ್ರಿತಂ ತವ ।**
**ಯನ್ಮೇ ಕನ್ಯಾಂ ಸ್ವಕನ್ಯಾರ್ಥೇ ಮೋಹಾದ್ಯಾಚಿತವಾನಸಿ ॥೨೨॥**

**ತಸ್ಯಾದ್ಯ ವಿಪುಲಮ್ಭಸ್ಯ ಫಲಂ ಪ್ರಾಪ್ನುಹಿ ದುರ್ಮತೇ ।**
**ಏಷ ತ್ವಾಂ ಸಜನಾಮಾತ್ಯಮುದ್ಧರಾಮಿ ಸ್ಥಿರೋ ಭವ ॥೨೩॥**

'ನರೇಶ್ವರ! ನೀನು ನನ್ನನ್ನು ಅವಮಾನಿಸಿರುವೆ. ನಿಶ್ಚಯವಾಗಿಯೂ ನೀನು ಮುಂದೇನಾಗುವುದೆಂಬುದನ್ನರಿಯದೆಯೇ ಮಾಡಿರುವ ಈ ಕಾರ್ಯವು ಸುಮಂತ್ರಿತವಾಗಿಲ್ಲ; ದುರ್ಮಂತ್ರಿತವಾಗಿದೆ. ನೀನು ಮೋಹಪರವಶನಾಗಿ ನಿನ್ನ ಮಗಳಿಗೆ ನನ್ನ ಮಗಳನ್ನು ತಂದುಕೊಂಡಿರುವೆ. ಇದರಿಂದ ನೀನು ನನ್ನ ಮಗಳಿಗೆ ಅಪಚಾರವನ್ನೆಸಗಿರುವೆಯಲ್ಲದೇ ನನಗೆ ಅಪಮಾನವನ್ನೂ ಮಾಡಿರುವೆ. ದುರ್ಮತಿಯೇ! ನೀನು ಮಾಡಿರುವ ಈ ವಂಚನೆಗೆ ತಕ್ಕುದಾದ ಫಲವನ್ನು ಈಗಲೇ ಪಡೆದುಕೊಳ್ಳಲಿರುವೆ. ಸ್ವಜನಾಮಾತ್ಯಸಹಿತನಾಗಿ ನಿನ್ನನ್ನು ನಿರ್ಮೂಲಮಾಡಿಬಿಡುತ್ತೇನೆ. ಯುದ್ಧಸನ್ನದ್ಧನಾಗು."

೧೯೦ನೆಯ ಅಧ್ಯಾಯವು ಮುಗಿಯಿತು.

೧೯೦ನೆಯ ಅಧ್ಯಾಯ ಅಮ್ಬೋಪಾಖ್ಯಾನಪರ್ವ (ಮುಂದುವರಿದಿದೆ)

## ಹಿರಣ್ಯವರ್ಮನ ಆಕ್ರಮಣದ ಭಯದಿಂದ ವಿಹ್ವಲನಾದ ದ್ರುಪದನು ಪತ್ನಿಯೊಡನೆ ನಿವಾರಣೋಪಾಯವನ್ನು ಸಮಾಲೋಚಿಸಿದುದು

ಭೀಷ್ಮನು ಹೇಳುತ್ತಾನೆ :

"ದುರ್ಯೋಧನ! ಹಿರಣ್ಯವರ್ಮನ ದೂತನು ಹೀಗೆಂದು ಹೇಳಿದೊಡನೆಯೇ ದ್ರುಪದನ ಸ್ಥಿತಿಯು ಕದ್ದವಸ್ತುವಿನೊಡನೆ ಸಿಕ್ಕಿದ ಕಳ್ಳನಂತಾಗಿಹೋಯಿತು. ಅವನ ಬಾಯಿಂದ ಮಾತೇ ಹೊರಡಲಿಲ್ಲ. ಬಳಿಕ 'ತಾನು ಖಂಡಿತವಾಗಿಯೂ ವಂಚನೆಮಾಡಿರುವುದಿಲ್ಲ' ಎಂಬ ವಿಷಯವನ್ನು ಸಂಬಂಧಿಯಾದ ಹಿರಣ್ಯವರ್ಮನಿಗೆ ಮನದಟ್ಟುಮಾಡಿಕೊಟ್ಟು ಅವನನ್ನು ಸಮಾಧಾನಪಡಿಸಲು ದ್ರುಪದನು ತೀವ್ರಪ್ರಯತ್ನವನ್ನು ಮಾಡಿದನು. ಮಧುರಭಾಷಿಗಳಾದ ದೂತರನ್ನು ಹಿರಣ್ಯವರ್ಮನ ಬಳಿಗೆ ಕಳುಹಿಸಿಕೊಟ್ಟನು. ದ್ರುಪದನ ದೂತರ ಮಾತನ್ನು ಕೇಳಿದನಂತರ ಹಿರಣ್ಯವರ್ಮನು ಪುನಃ ನಿಜಸ್ಥಿತಿಯನ್ನು ಚಾರರ ಮೂಲಕ ಮತ್ತು ದಾದಿಯರ ಮೂಲಕ ತಿಳಿಯಲು ಪ್ರಯತ್ನಿಸಿದನು. ತನ್ನ ಮಗಳು ಶಿಖಂಡಿನಿಯನ್ನಲ್ಲದೇ ಶಿಖಂಡಿಯನ್ನು ಮದುವೆಯಾಗಿಲ್ಲವೆಂಬುದು ಪುನಃ ಸ್ಥಿರಪಟ್ಟಿತು. ಒಡನೆಯೇ ಹಿರಣ್ಯವರ್ಮನು ಬಹುರುಷ್ಟನಾಗಿ ದ್ರುಪದನ ರಾಜ್ಯವನ್ನು ಆಕ್ರಮಿಸುವ ಸಲುವಾಗಿ ತನ್ನ ರಾಜ್ಯದಿಂದ ಹೊರಟೇಬಿಟ್ಟನು (ಹೊರಡಲು ನಿಶ್ಚಯಿಸಿದನು). "ದ್ರುಪದನು ತನ್ನ ಮಗಳನ್ನು ಮಗನೆಂದು ಹೇಳಿಕೊಂಡು ಹಿರಣ್ಯವರ್ಮನ ಮಗಳನ್ನು ವಿವಾಹಾರ್ಥವಾಗಿ ವರಣಮಾಡಿದುದು ; ವಿವಾಹವಾದನಂತರ ಶಿಖಂಡಿಯೊಡನೆ ತನ್ನ ಮಗಳು ದ್ರುಪದನ ಪಟ್ಟಣಕ್ಕೆ ಹೋದುದು; ಸ್ವಲ್ಪಕಾಲದಲ್ಲಿಯೇ 'ತಾನು ಮದುವೆಯಾದುದು ಶಿಖಂಡಿನಿಯನ್ನು; ಶಿಖಂಡಿಯನ್ನಲ್ಲ' ಎಂಬ ಅರಿವಾದುದು.; ಈ ವಿಷಯವನ್ನವಳು ದುಃಖದಿಂದ ದಾದಿಯೊಡನೆ ಹೇಳಿಕೊಂಡುದು.; ರಹಸ್ಯದ ಸ್ಫೋಟವಾದ ನಂತರವೂ ದ್ರುಪದನು 'ತಾನು ವಂಚಿಸಿಲ್ಲ' ಎಂದು ಹೇಳುತ್ತಿರುವುದು"– ಇವಿಷ್ಟು ವಿಷಯಗಳನ್ನೂ ಹಿರಣ್ಯವರ್ಮನು ದೂತರ ಮೂಲಕ

ಅಮಿತೌಜಸ್ಕರಾದ ತನ್ನ ಮಿತ್ರರಿಗೆ ತಿಳಿಯಪಡಿಸಿ ವಂಚಕನಾದ ದ್ರುಪದ ನೊಡನೆ ತಾನು ಮಾಡಲಿರುವ ಯುದ್ಧದಲ್ಲಿ ತನಗೆ ಸಹಾಯಕರಾಗ ಬೇಕೆಂದೂ ಪ್ರಾರ್ಥಿಸಿದನು. ಅನಂತರದಲ್ಲಿ ರಾಜಸತ್ತಮನಾದ ಹಿರಣ್ಯ ವರ್ಮನು ಸೈನ್ಯಸಂಗ್ರಹಮಾಡಿ ದ್ರುಪದನ ಮೇಲೆ ದಾಳಿಮಾಡಲು ನಿಶ್ಚಯಿಸಿದನು. ತಾನು ದ್ರುಪದರಾಜನೊಡನೆ ಯಾವ ರೀತಿಯಲ್ಲಿ ವ್ಯವಹರಿಸಬೇಕೆಂಬ ವಿಷಯವಾಗಿ ಪುನಃ ತನ್ನ ಮಂತ್ರಿಗಳೊಡನೆ ಹಿರಣ್ಯವರ್ಮನು ಸಮಾಲೋಚನೆ ಮಾಡಿದನು. ಆ ವೇಳೆಗೆ ಅವನ ಅನೇಕ ಮಿತ್ರರಾಜರೂ ಆಗಮಿಸಿದ್ದರು. ಮಹಾತ್ಮರಾದ ರಾಜರು ಸೇರಿದ್ದ ಆ ಸಭೆಯಲ್ಲಿ ಈ ನಿರ್ಣಯವು ಅಂಗೀಕರಿಸಲ್ಪಟ್ಟಿತು.

**ತಥ್ಯಂ ಭವತಿ ಚೇದೇತತ್ಕನ್ಯಾ ರಾಜಞ್ಶಿಖಣ್ಡಿನೀ ।**
**ಬದ್ಧ್ವಾಪಞ್ಚಾಲರಾಜಾನಮಾನಯಿಷ್ಯಾಮಹೇ ಗೃಹಮ್ ॥೮॥**

**ಅನ್ಯಂ ರಾಜಾನಮಾಧಾಯ ಪಞ್ಚಾಲೇಷು ನರೇಶ್ವರಮ್ ।**
**ಘಾತಯಿಷ್ಯಾಮ ನೃಪತಿಂ ಪಾಞ್ಚಾಲಂ ಸಶಿಖಣ್ಡಿನಮ್ ॥೯॥**

"ನಾವೆಲ್ಲರೂ ಈಗಲೇ ಕಾಂಪಿಲ್ಯಕ್ಕೆ ಹೋಗೋಣ. ವಿಷಯವನ್ನು ಪ್ರತ್ಯಕ್ಷವಾಗಿಯೇ ಪ್ರಮಾಣಿಸಿ ನೋಡೋಣ. ದಾದಿಯರು ಹೇಳಿರುವುದು ನಿಜವಾಗಿ ಶಿಖಂಡಿಯು ಶಿಖಂಡಿನಿಯೇ ಆಗಿದ್ದ ಪಕ್ಷದಲ್ಲಿ ದ್ರುಪದನನ್ನು ಸೆರೆಹಿಡಿದು ತಂದುಬಿಡೋಣ. ಪಂಚಾಲರಾಜ್ಯಕ್ಕೆ ಬೇರೊಬ್ಬನನ್ನು ರಾಜ ಪದವಿಯಲ್ಲಿರಿಸಿ ವಂಚಕನಾದ ದ್ರುಪದನನ್ನು ಶಿಖಂಡಿಯ ಸಮೇತವಾಗಿಯೇ ಸಂಹರಿಸೋಣ."

ಇದೇ ತನ್ನ ಕಡೆಯ ನಿರ್ಧಾರವೆಂದು ನಿಶ್ಚಯಿಸಿದ ನರಾಧಿಪನಾದ ಹಿರಣ್ಯವರ್ಮನು ದ್ರುಪದನ ಬಳಿಗೆ ದೂತರನ್ನು–'ನಿಹನ್ಮಿ ಸ್ಥಿರೋ ಭವ' 'ನಿನ್ನನ್ನು ನಾನು ಸಂಹರಿಸುತ್ತೇನೆ. ಅಲ್ಲಿಯವರೆಗೂ ಸುಸ್ಥಿರನಾಗಿರು'– ಎಂಬ ಸಂದೇಶದೊಡನೆ ಕಳುಹಿಸಿಕೊಟ್ಟನು.

ದುರ್ಯೋಧನ! ದ್ರುಪದನು ಸ್ವಭಾವತಃ ಭೀರುವೇ ಆಗಿದ್ದನು. ಮೇಲಾಗಿ ತಪ್ಪನ್ನು ಬೇರೆ ಮಾಡಿದ್ದಾನೆ. ಈ ಕಾರಣಗಳಿಂದಾಗಿ ಅವನು ಹಿರಣ್ಯವರ್ಮನ ದೂತನು ಹೇಳಿದುದನ್ನು ಕೇಳಿ ಭಯದಿಂದ ತರ-ತರನೆ

ನಡುಗಿಹೋದನು. ದಶಾರ್ಣರಾಜನ ಸಮೀಪಕ್ಕೆ, ಅವನನ್ನು ಸಮಾಧಾನ ಗೊಳಿಸುವ ಸಲುವಾಗಿ ದೂತರನ್ನು ಕಳುಹಿಸಿದನಲ್ಲದೇ, ಶೋಕಮೂರ್ಛಿತ ನಾಗಿದ್ದ ದ್ರುಪದನು ನಿರ್ಜನವಾದ ಪ್ರದೇಶದಲ್ಲಿ ತನ್ನ ಪತ್ನಿಯೊಡನೆ ಈ ಮಾತನ್ನು ಹೇಳಿದನು.

ದುರ್ಯೋಧನ! ಆ ಸಮಯದಲ್ಲಿ ದ್ರುಪದನು ಬಹುಭೀತನಾಗಿದ್ದನು ; ಶೋಕಪೀಡಿತನಾಗಿದ್ದನು. ಬಾಯಿಂದ ಮಾತುಗಳೇ ಹೊರಡುತ್ತಿರಲಿಲ್ಲ. ತೊದಲುನುಡಿಯಿಂದಲೇ ಶಿಖಂಡಿಯ ತಾಯಿಯಾದ ಪ್ರಿಯಭಾರ್ಯೆ ಯನ್ನು ಕುರಿತು ಹೇಳಿದನು :

"ಪ್ರಿಯೆ! ನಮ್ಮ ಸಂಬಂಧಿಯಾದ (ಬೀಗನಾದ) ಮಹಾಬಲನಾದ ಹಿರಣ್ಯವರ್ಮನು ಕ್ರೋಧಪರವಶನಾಗಿ ದೊಡ್ಡಸೈನ್ಯವನ್ನು ತೆಗೆದುಕೊಂಡು ನಮ್ಮ ರಾಜ್ಯವನ್ನು ಆಕ್ರಮಿಸಲು ಬರುವವನಿದ್ದಾನೆ. ಈಗ ನಾವೇನು ಮಾಡೋಣ? ಈ ಕನ್ಯೆಯ ವಿಷಯವಾಗಿ ನಾನು ಕಿಂಕರ್ತವ್ಯಮೂಢನಾಗಿ ಬಿಟ್ಟಿದ್ದೇನೆ. ನನಗೀಗ ಏನು ಮಾಡಬೇಕೆಂಬುದೇ ತೋಚುತ್ತಿಲ್ಲ. ನಿನ್ನ ಮಗ ಶಿಖಂಡಿಯು, ಶಿಖಂಡಿಯಲ್ಲವೆಂದೂ (ಪುರುಷನಲ್ಲವೆಂದೂ) ಶಿಖಂಡಿನಿಯೇ ಇರಬಹುದೆಂದೂ, ಸ್ತ್ರೀಯಾಗಿರಬಹುದೆಂದೂ ಹಿರಣ್ಯವರ್ಮನ ಮನಸ್ಸಿನಲ್ಲಿ ಸಂಶಯವು ಮೂಡಿಬಿಟ್ಟಿದೆ. ಮಿತ್ರರೊಡನೆಯೂ, ತನ್ನ ಸೇವಕರೊಡನೆಯೂ, ಮಂತ್ರಿ-ಸೇನಾಪತಿಗಳೊಡನೆಯೂ ಈ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿದನಂತರವೇ ಅವನು 'ದ್ರುಪದನಿಂದ ನಾನು ವಂಚಿತನಾದೆನು' ಎಂದು ಭಾವಿಸಿ ವಂಚನೆಗೆ ತಕ್ಕ ಪ್ರತೀಕಾರಮಾಡಲು ನನ್ನನ್ನು ನಿರ್ಮೂಲಮಾಡಲು ನಿಶ್ಚಯಿಸಿಬಿಟ್ಟಿದ್ದಾನೆ.

ಶೋಭನಾಂಗಿಯೇ! ಈಗ ನಿಜ ಯಾವುದು? ಸುಳ್ಳು ಯಾವುದು? ಎಂಬುದನ್ನು ನೀನೇ ಹೇಳು. ನಿನ್ನ ಮುಖಾರವಿಂದದಿಂದ ಆ ಶುಭವಾಕ್ಯವನ್ನು ಕೇಳಿದನಂತರ ಅದಕ್ಕೆ ಅನುಸಾರವಾಗಿಯೇ ನಾನು ನಡೆದುಕೊಳ್ಳುತ್ತೇನೆ. ಮದುವೆಯಾದೊಡನೆಯೇ ಮಹಾದೇವನ ವರದಂತೆ ಶಿಖಂಡಿನಿಯು ಶಿಖಂಡಿಯಾಗಿ ಪರಿವರ್ತಿತಳಾಗುವಳೆಂಬ ಭರವಸೆಯು ನಿನಗಿದ್ದಿತು. ಆ ಸಮಯದಲ್ಲಿ ನಾನೂ ನಿನ್ನ ಮಾತಿಗೆ ಒಪ್ಪಿ ಹಿರಣ್ಯವರ್ಮನ ಮಗಳನ್ನು ತಂದು ಶಿಖಂಡಿಗೆ ಮದುವೆಮಾಡಿದೆನು. ಆದರೆ ಮಹಾದೇವನಿತ್ತ ಅಭಿವಚನ

ದಂತೆ ಅಥವಾ ನೀನು ಭಾವಿಸಿದ್ದಂತೆ ನಮ್ಮ ಮಗಳು ಪುರುಷನಾಗಿ ಪರಿವರ್ತಿತಳಾಗಿಲ್ಲವೆಂಬ ಸಂಶಯವು ನನಗೂ ಈಗ ಉಂಟಾಗಿದೆ. ಇವಳು ವಿವಾಹವಾದ ಮೇಲೂ ಬಾಲೆಯಾಗಿಯೇ ಉಳಿದಿರುವಳೆಂದು ನಾನು ಭಾವಿಸುತ್ತೇನೆ.

ವರವರ್ಣಿನಿಯೇ! ಈಗ ನೀನೂ ಮಹಾಕಷ್ಟಕ್ಕೇ ಗುರಿಯಾಗಿರುವೆ. ಈಗ ನಾವೆಲ್ಲರೂ ಈ ಸಂಕಟದಿಂದ ಪಾರಾಗಬೇಕಾಗಿದೆ. ಆದುದರಿಂದ ಯಥಾರ್ಥವಾದ ವಿಷಯವನ್ನು ಹೇಳಿಬಿಡು. ಒಂದು ವೇಳೆ ನಮ್ಮ ಮಗಳು ಯಥಾಪೂರ್ವಸ್ಥಿತಿಯಲ್ಲಿಯೇ ಈಗಲೂ ಇರುವುದಾದಲ್ಲಿ–ನಾವು ನಮ್ಮ ಉಳಿವಿಗೆ ಬೇರಾವುದಾದರೂ ಉಪಾಯವನ್ನು ಹುಡುಕಿ ಕಾರ್ಯಮಾಡ ಬೇಕಾಗಿದೆ.

ವರಾರೋಹೇ! ಶಿಖಂಡಿಯು ಹೆಣ್ಣಾಗಿಯೇ ಉಳಿದಿರುವುದು ನನಗೆ ಸಹ್ಯವಾಗಿರದಿದ್ದರೂ, ಪುತ್ರಧರ್ಮದಿಂದ ನಾನು ವಂಚಿತನಾಗಿದ್ದರೂ ನೀನು ಆ ಹೆಣ್ಣಿನ ವಿಷಯದಲ್ಲಿ ಭಯಪಡಬೇಕಾಗಿಲ್ಲ. ನಾನು ಕೃಪಾದೃಷ್ಟಿಯಿಂದಲೇ ಸರ್ವರಿಗೂ ಅನುಕೂಲವಾಗುವ ರೀತಿಯಲ್ಲಿ ಕಾರ್ಯವನ್ನು ಮಾಡುತ್ತೇನೆ. ನಿನ್ನ ಮಾತಿನ ಮೇಲೆ ಭರವಸೆಯಿಟ್ಟು ಶಿಖಂಡಿನಿಗೆ ಮದುವೆಮಾಡಿದ ಕಾರಣದಿಂದ ದಶಾರ್ಣರ ರಾಜನಾದ ಹಿರಣ್ಯವರ್ಮನನ್ನೂ ವಂಚಿಸಿ ದಂತಾಯಿತು. ಈಗ ನೀನು ಯಾವ ಕಾರ್ಯಮಾಡುವುದರಿಂದ ನಮ್ಮೆಲ್ಲರಿಗೂ ಹಿತವಾಗುವುದೆಂದು ಭಾವಿಸುವೆಯೋ ಅದನ್ನು ಹೇಳು. ನಾನು ಅದರಂತೆಯೇ ಮಾಡುತ್ತೇನೆ."

ದುರ್ಯೋಧನ! ಈ ರೀತಿಯಲ್ಲಿ ರಹಸ್ಯದಲ್ಲಿ ಪತ್ನಿಯೊಡನೆ ಮಾತನಾಡಿದ ನಂತರ ಲೋಕವ್ಯವಹಾರನಿಪುಣನಾದ ದ್ರುಪದರಾಜನು ಅದುವರೆಗೂ ರಹಸ್ಯವಾಗಿಟ್ಟಿದ್ದ ವಿಷಯವನ್ನು ಸಮಯೋಚಿತವಾಗಿ ಅಮಾತ್ಯ-ಸೇನಾಪತಿಗಳಿಗೂ ತಿಳಿಯಪಡಿಸುವ ಸಲುವಾಗಿ ರಾಜಸಭೆ ಯಲ್ಲಿಯೇ ಆ ವಿಷಯದ ಸ್ಪಷ್ಟೀಕರಣಮಾಡುವಂತೆ ಪಟ್ಟಮಹಿಷಿಯನ್ನು ಪ್ರೇರಿಸಿದನು. ರಾಜನ ಇಂಗಿತವನ್ನು ತಿಳಿದ ರಾಣಿಯು ರಾಜನಿಗೆ ಪ್ರತ್ಯುತ್ತರವನ್ನಿತ್ತಳು."

೧೯೦ನೆಯ ಅಧ್ಯಾಯವು ಮುಗಿಯಿತು.

(ಈ ಸಂದರ್ಭಕ್ಕೆ ಸಮಂಜಸವಾಗುವಂತೆ ಈ ಪ್ರಕರಣವನ್ನು ಅರ್ಥಮಾಡುವುದು ಸ್ವಲ್ಪಕಷ್ಟವೇ ಸರಿ. ಈ ಅಧ್ಯಾಯದಲ್ಲಿನ ಹನ್ನೆರಡನೆಯ ಶ್ಲೋಕವು ಹೀಗಿದೆ.

**ವಿಸೃಜ್ಯ ದೂತಾನ್ದಾಶಾರ್ಣೇ ದ್ರುಪದಃ ಶೋಕಮೂರ್ಛಿತಃ ।**
**ಸಮೇತ್ಯ ಭಾರ್ಯಾಂ ರಹಿತೇ ವಾಕ್ಯಮಾಹ ನರಾಧಿಪಃ ॥೧೨॥**

ರಹಿತೇ ಎಂಬ ಪದಪ್ರಯೋಗದಿಂದ ಏಕಾಂತದಲ್ಲಿ ದ್ರುಪದನು ಹೆಂಡತಿಯೊಡನೆ ಮಾತನಾಡಿದನೆಂಬುದು ಸ್ಪಷ್ಟವಾಗಿದೆ. ಮುಂದೆ ಅವನು ಹೇಳುವ ಮಾತನ್ನು ನೋಡಿದರೂ ಅವೆಲ್ಲವೂ ಏಕಾಂತದಲ್ಲಿ ಹೇಳುವ ಮಾತುಗಳಾಗಿವೆಯೇ ಹೊರತು ಬೇರೊಬ್ಬರ ಎದುರಿನಲ್ಲಿ ರಾಜನಾದವನು ಹೇಳುವ ಮಾತುಗಳಾಗಿಲ್ಲ. ಅಧ್ಯಾಯದ ಕಡೆಯ ಶ್ಲೋಕವಾದ ಮೇಲೆ ಅರ್ಥೈಸಿರುವ ಶ್ಲೋಕವು ಈ ರೀತಿಯಾಗಿದೆ.

**ಜಾನತಾ ಹಿ ನರೇನ್ದ್ರೇಣ ಖ್ಯಾಪನಾರ್ಥಂ ಪರಸ್ಯ ವೈ ।**
**ಪ್ರಕಾಶಂ ಚೋದಿತಾ ದೇವೀ ಪ್ರತ್ಯುವಾಚ ಮಹೀಪತಿಮ್ ॥೨೨॥**

ಕೆಲವು ಪಾಠಗಳಲ್ಲಿ ಈ ಶ್ಲೋಕವೇ ಇಲ್ಲ. ಇಲ್ಲದಿರುವುದೇ ಹೆಚ್ಚು ಸಮಂಜಸವಾಗಿ ಕಾಣುತ್ತದೆ. ಮುಂದಿನ ಅಧ್ಯಾಯದ ಮೊದಲನೆಯ ಶ್ಲೋಕದಲ್ಲಿಯೂ 'ಪ್ರತ್ಯುವಾಚ ಮಹೀಪತಿಮ್' 'ದ್ರುಪದನನ್ನು ಕುರಿತು ರಾಣಿಯು ಹೀಗೆ ಹೇಳಿದಳು' ಎಂಬ ಅರ್ಥಬರುವ ಶ್ಲೋಕವೇ ಇದೆ. ಆದರೆ 'ಜಾನತಾ ಹಿ ನರೇನ್ದ್ರೇಣ' ಎಂಬ ಶ್ಲೋಕಕ್ಕೆ ನೀಲಕಂಠರ ವ್ಯಾಖ್ಯಾನವಿರುವುದರಿಂದ ಇದನ್ನು ಪ್ರಕ್ಷಿಪ್ತವೆಂದು ಹೇಳುವ ಸಾಧ್ಯತೆಯೂ ಇಲ್ಲ. ಹನ್ನೆರಡನೆಯ ಶ್ಲೋಕದಲ್ಲಿ ಬರುವ ರಹಿತೇ ಎಂಬ ಪದವನ್ನು ಗಮನಿಸಿಲ್ಲವೋ ಎಂಬಂತೆ ವ್ಯಾಖ್ಯಾನಕಾರರು ಇಪ್ಪತ್ತನೆಯ ಶ್ಲೋಕಕ್ಕೆ ಹೀಗೆ ಅರ್ಥಮಾಡಿದ್ದಾರೆ.

**ಶಿಖಣ್ಡಿನಿ ಚ ಮಾ ಭೈಸ್ತ್ವಂ ವಿಧಾಸ್ಯೇ ತತ್ರ ತತ್ತ್ವತಃ ।**
**ಕೃಪಯಾಹಂ ವರಾರೋಹೇ ವಞ್ಚಿತಃ ಪುತ್ರಧರ್ಮತಃ ॥೨೩॥**

**ಭಾರ್ಯಾಯಾ ಅದಣ್ಡ್ಯತ್ವಂ ಜಾನನ್ ಸ್ವಸ್ಯ ನಿರ್ದೋಷತಾಂ ಖ್ಯಾಪಯಿತುಂ ಉಭಯಕೃತಮಪ್ಯಪರಾಧಂ ಲೋಕ**

**ಮಧ್ಯೇ ಭಾರ್ಯಾಯಾಮೇವ ಅಸಂಜಯಿತುಂ ತಾಮಾಹ । ಶಿಖಣ್ಡಿನೀತಿ । ಯದ್ಯಪ್ಯಹಂ ಶಿಖಣ್ಡ್ಯರ್ಥೇ ತ್ವಯಾ ಶಿಖಣ್ಡಿನ್ಯಾ ಚ ವಂಚಿತಃ । ತಥಾಪಿ ತ್ವಂ ಮಾ ಭೈಃ । ಶಿಖಣ್ಡಿನೀವಿಷಯೇ ವಿಧಾಸ್ಯೇ। ಯುವಯೋರ್ಧಾರಣಂ ಪೋಷಣಂ ಚ ಕರಿಷ್ಯೇ । ನ ತು ಹಿಂಸಿಷ್ಯೇ ಇತ್ಯರ್ಥಃ । ಯದ್ವಾ ಹೇ ಶಿಖಣ್ಡಿನಿ ತ್ವಂ ಮಾ ಭೈಃ । ಹೇ ವರಾರೋಹೇ ಭಾರ್ಯೇ ತ್ವಂ ಚ ಮಾ ಭೈಃ ಇತಿ ದ್ವಯೋರಪಿ ಅಭಯಂ ದತ್ವಾ ಜನಮಧ್ಯೇ ಪೃಚ್ಛತಿ ।**

ಪತ್ನಿಯು ಶಿಕ್ಷಾರ್ಹಳಲ್ಲವೆಂಬುದನ್ನು ತಿಳಿದವನಾಗಿ, ತಾನು ನಿರ್ದೋಷಿಯೆಂಬುದನ್ನು ಪ್ರಕಾಶಗೊಳಿಸುವ ಸಲುವಾಗಿ, ಯದ್ಯಪಿ ಇಬ್ಬರೂ ಸೇರಿ ಈ ವಂಚನೆಯ ಅಪರಾಧವನ್ನು ಮಾಡಿದ್ದರೂ ಅದನ್ನು ಪ್ರಜೆಗಳ ಮಧ್ಯದಲ್ಲಿ ತನ್ನ ಹೆಂಡತಿಯ ಮೇಲೆ ಹೊರೆಸುವ ಸಲುವಾಗಿ ಅವಳನ್ನು ಕುರಿತು ದ್ರುಪದನು ಹೀಗೆ ಹೇಳಿದನು : "ಯದ್ಯಪಿ ನಾನು ಶಿಖಂಡಿಯ ಸಲುವಾಗಿ ನಿನ್ನಿಂದ ವಂಚಿತನಾಗಿದ್ದರೂ ನೀನು ಭಯಪಡುವ ಕಾರಣವಿಲ್ಲ. ನೀವಿಬ್ಬರೂ ತಪ್ಪುಮಾಡಿದ್ದರೂ ನಿಮ್ಮಿಬ್ಬರ ಧಾರಣ-ಪೋಷಣಗಳನ್ನೂ ನಾನು ನಿರ್ವಹಿಸುತ್ತೇನೆ. ಅಪರಾಧಿಗಳಾದ ನಿಮ್ಮನ್ನು ಹಿಂಸೆಗೆ ಗುರಿಪಡಿಸುವುದಿಲ್ಲ" ಅಥವಾ 'ಶಿಖಂಡಿನಿ! ನೀನೂ ಭಯಪಡಬೇಡ, ಮಹಾರಾಣಿ! ನೀನೂ ಭಯಪಡಬೇಡ'–ಎಂಬ ಆಶ್ವಾಸನೆಯನ್ನಿತ್ತು ರಾಜನು ನಿಜವೇನೆಂಬುದನ್ನು ತಿಳಿಸುವಂತೆ ಜನರ ಮಧ್ಯದಲ್ಲಿ ಪತ್ನಿಯನ್ನು ಕೇಳಿದನು."

ಇದು ನೀಲಕಂಠವ್ಯಾಖ್ಯಾನಕಾರರ ಅರ್ಥವಾಗಿದೆ. ಇವರಿಬ್ಬರೂ ಮಾತನಾಡುವಾಗ ಶಿಖಂಡಿನಿಯಾಗಲೀ ಪ್ರಜೆಗಳಾಗಲೀ ಇದ್ದರೆಂಬುದಕ್ಕೆ ಯಾವ ಆಧಾರವೂ ಇರುವುದಿಲ್ಲ. ರಹಿತೇ = ರಹಸ್ಯದಲ್ಲಿ ; ಏಕಾಂತದಲ್ಲಿ ಎಂದು ಹನ್ನೆರಡನೆಯ ಶ್ಲೋಕದಲ್ಲಿ ಸ್ಪಷ್ಟವಾಗಿ ಹೇಳಿರುವಾಗ ಈ ಮಾತುಗಳೆಲ್ಲವನ್ನೂ ಜನರ ಮಧ್ಯದಲ್ಲಿ ದ್ರುಪದನಾಡಿದನೆಂದು ಹೇಳುವುದು ಸಾಧುವಾಗಿ ಕಾಣುವುದಿಲ್ಲ. ವ್ಯಾಖ್ಯಾನಕಾರರ ಈ ಅರ್ಥದ ಹಿನ್ನೆಲೆಯನ್ನೇ ಇಟ್ಟುಕೊಂಡು ಇಪ್ಪತ್ತೆರಡನೆಯ ಶ್ಲೋಕಕ್ಕೆ ಉಳಿದ ವ್ಯಾಖ್ಯಾನಕಾರರು ಅರ್ಥಮಾಡಿರುತ್ತಾರೆ.

ಯದ್ಯಪಿ ರಾಜಾ ದ್ರುಪದ್ ಸಬ್‌ಕುಛ್ ಜಾನತೇ ಥೇ ತೋ ಭೀ

ದೂಸರೇ ಲೋಗೋ ಮೇ ಅಪನೀ ನಿರ್ದೋಷತಾ ಸಿದ್ಧಕರನೇ ಕೇ ಲಿಯೇ ಮಹಾರಾಣೀ ಸೇ ಸ್ಪಷ್ಟ್ ಶಬ್ದೋಂ ಮೇ ಪೂಛಾ!

(ಗೋರಖಪುರ ಗೀತಾಪ್ರೆಸ್‌ನವರು ಪ್ರಕಟಿಸಿರುವ ಮಹಾಭಾರತದ ಹಿಂದೀವ್ಯಾಖ್ಯಾನ.)

Indeed, although the king knew everything yet he addressed his wife in the presence of others in this way to proclaim his own innocence before others. (ಪ್ರತಾಪಚಂದ್ರ ರಾಯ್‌ರವರು ಪ್ರಕಟಿಸಿರುವ ಮಹಾಭಾರತದ ಆಂಗ್ಲಭಾಷಾಂತರ.)

**ಪರಸ್ಯ** ಎಂಬ ಶಬ್ದಕ್ಕೆ ಈ ಇಬ್ಬರು ಭಾಷಾಂತರಕಾರರೂ 'ಬೇರೆಯವರಿಗೆ' ಎಂದು ಅರ್ಥಮಾಡಿದ್ದರೂ ನೀಲಕಂಠವ್ಯಾಖ್ಯಾನಕಾರರು **ಪರಸ್ಯ** ಎಂಬುದಕ್ಕೆ **ಶತ್ರೋರ್ಲೋಕಸ್ಯ** = ಶತ್ರುಜನರಿಗೆ ತಿಳಿಯಪಡಿಸಲು ಎಂದೇ ಅರ್ಥಮಾಡಿರುತ್ತಾರೆ.

ಮಹಾದೇವನ ವರದ ಭರವಸೆಯಿಂದ ಕಾರ್ಯಮಾಡಿದ ದ್ರುಪದನಾಗಲೀ ಅವನ ಪತ್ನಿಯಾಗಲೀ ಯಾವ ವಿಧದಲ್ಲಿಯೂ ಅಪರಾಧಿಗಳಲ್ಲ. ತನ್ನ ಅಪರಾಧವನ್ನು ಮುಚ್ಚಿಕೊಂಡು ತನ್ನ ಪತ್ನಿಯನ್ನು ಅಪರಾಧಿನಿಯನ್ನಾಗಿ ಮಾಡಲು ಪ್ರಯತ್ನಿಸುವಷ್ಟು ದ್ರುಪದನು ನಿಹೀನಮನುಷ್ಯನೆಂದು ಸಮರ್ಥಿಸುವ ಸಾಧ್ಯತೆಯಿಲ್ಲ. ಸತಿ-ಪತಿಯರಲ್ಲಿ ಈ ಸಂಭಾಷಣೆಯು ರಹಸ್ಯದಲ್ಲಿ ನಡೆಯಿತೆಂಬುದಕ್ಕೆ ಆಧಾರವಿರುವುದೇ ಹೊರತು ಪ್ರಜೆಗಳ ಮಧ್ಯದಲ್ಲಿ ದ್ರುಪದನು ತನ್ನ ಪತ್ನಿಯ ವಿಚಾರಣೆಯನ್ನು ನಡೆಸಿದನೆಂಬುದಕ್ಕೆ ಸ್ವಲ್ಪವಾದರೂ ಆಧಾರವಿಲ್ಲ. ಈ ಕಾರಣದಿಂದಾಗಿ ಈ ಪ್ರಕರಣದಲ್ಲಿ ನಾವು ಹೇಳಿರುವ ಅರ್ಥವೇ ಸಮಂಜಸವಾಗಿದೆಯೆಂದು ಅಭಿಪ್ರಾಯಪಡುತ್ತೇವೆ.]

## ದ್ರುಪದನ ಪ್ರಶ್ನೆಗೆ ದ್ರುಪದಪತ್ನಿಯ ಉತ್ತರ : ದ್ರುಪದನಿಂದ ನಗರದ ರಕ್ಷಣಾವ್ಯವಸ್ಥೆ: ದೇವತಾಪ್ರಾರ್ಥನೆ : ಶಿಖಂಡಿನಿಯು ಅರಣ್ಯಕ್ಕೆ ಹೋಗಿ ಯಕ್ಷನೊಡನೆ ತನ್ನ ದುಃಖವನ್ನು ತೋಡಿಕೊಂಡುದು

ಭೀಷ್ಮನು ಮುಂದುವರಿದು ಹೇಳುತ್ತಾನೆ :

"ದುರ್ಯೋಧನ! ಅನಂತರದಲ್ಲಿ ಶಿಖಂಡಿಯ ತಾಯಿಯು ಪತಿಯನ್ನು ಕುರಿತು ಹೇಳಿದಳು : "ನಾವು ಪುತ್ರನೆಂದು ಭಾವಿಸಿ ಶಿಖಂಡೀ ಎಂದು ಕರೆಯುತ್ತಿರುವ ಇವನು ಪುತ್ರನಲ್ಲ. ಶಿಖಂಡಿನೀ ಎಂಬ ಕನ್ಯೆಯೇ ಆಗಿರುತ್ತಾಳೆ. ನನಗೆ ಗಂಡುಮಕ್ಕಳಿರಲಿಲ್ಲ. ಆ ಸಮಯದಲ್ಲಿ ಈ ಶಿಖಂಡಿನಿಯು ಹುಟ್ಟಿದಳು. ಆದರೆ ನಾನು ನನ್ನ ಸವತಿಯರ ಭಯದಿಂದಾಗಿ ಹುಟ್ಟಿದ್ದು ಗಂಡುಮಗುವೆಂದೇ ಹೇಳಿಬಿಟ್ಟೆನು. ನಿನಗೆ ನನ್ನ ಮೇಲೆ ವಿಶೇಷವಾದ ಪ್ರೀತಿಯಿದ್ದಿತಾದ್ದರಿಂದ ನನ್ನ ಮಾತನ್ನು ನೀನು ಅನುಮೋದಿಸಿದೆ. ಪುತ್ರನಿಗೆ ಮಾಡಬೇಕಾದ ಎಲ್ಲ ಸಂಸ್ಕಾರಗಳನ್ನೂ ಕನ್ಯೆಗೇ ನಾವು ಮಾಡಿದೆವು. ನನ್ನ ಮಾತಿನ ಮೇಲೆ ವಿಶ್ವಾಸವಿಟ್ಟು ದಶಾರ್ಣದೇಶದ ಅಧಿಪತಿಯಾದ ಹಿರಣ್ಯವರ್ಮನ ಮಗಳನ್ನು ತಂದು ನಮ್ಮ 'ಮಗನಿಗೆ' ಮದುವೆಮಾಡಿರುವೆ. ಮಹಾದೇವನ ವರರೂಪವಾದ ಮಾತಿನ ಮೇಲೆ ನನಗೆ ಭರವಸೆಯಿದ್ದ ಕಾರಣದಿಂದ ನಾನು ಶಿಖಂಡಿಯು ಪುತ್ರನೆಂದೇ ಹೇಳಿದೆನು. ನಮಗೆ ಕನ್ಯೆಯೇ ಹುಟ್ಟಿದ್ದರೂ ಮಹಾದೇವನ ವರಪ್ರಸಾದದಂತೆ ಇವಳು ಕಾಲಾನಂತರದಲ್ಲಿ (ಮದುವೆಯಾದ ಮೇಲಾದರೂ) ಗಂಡಾಗಿಯೇ ತೀರುವಳೆಂದು ನಿಶ್ಚಯಿಸಿ ನಾನು ಈ ವಿಷಯದ ಕಡೆಗೆ ಅಷ್ಟಾಗಿ ಲಕ್ಷ್ಯಕೊಡಲಿಲ್ಲ"– ಈ ರೀತಿಯಲ್ಲಿ ದ್ರುಪದಪತ್ನಿಯು ನಡೆದುದನ್ನು ಯಥಾವತ್ತಾಗಿ ಹೇಳಿದಳು.

ದುರ್ಯೋಧನ! ಪತ್ನಿಯ ಮಾತುಗಳನ್ನು ಕೇಳಿದನಂತರ ದ್ರುಪದನು ತನ್ನ ಮಂತ್ರಿಗಳಿಗೂ ಎಲ್ಲ ವಿಷಯವನ್ನೂ ವಿಶದವಾಗಿ ಹೇಳಿದನು. ಒಂದು ವೇಳೆ ಹಿರಣ್ಯವರ್ಮನು ತನ್ನ ರಾಜಧಾನಿಯ ಮೇಲೆ ಆಕ್ರಮಣನಡೆಸಿದ್ದೇ

ಆದರೆ ಯಾವ ರೀತಿಯಲ್ಲಿ ಪ್ರಜೆಗಳ ರಕ್ಷಣೆಯನ್ನು ಮಾಡಬೇಕೆಂಬುದರ ವಿಷಯದಲ್ಲಿ ಮಂತ್ರಿಗಳೊಡನೆ ಸಮಾಲೋಚಿಸಿದನು. ತಾನು ಯದ್ಯಪಿ ಹಿರಣ್ಯವರ್ಮನ ವಿಷಯದಲ್ಲಿ ವಂಚನೆಯ ಕಾರ್ಯವನ್ನು ಮಾಡಿದ್ದರೂ ಸಹ ತಾನು ದಶಾರ್ಣರಾಜನೊಡನೆ ಮಾಡಿಕೊಂಡಿರುವ ಸಂಬಂಧವು ಸಾಧುವಾದುದೆಂದೇ ಸಮರ್ಥಿಸಿಕೊಂಡನು. ತಾನು ಮಾಡಿದುದು ಸರಿ–ಎಂದು ಸಮರ್ಥಿಸಿಕೊಂಡವನಾಗಿ ಮುಂದೇನು ಮಾಡಬೇಕೆಂಬ ವಿಷಯದಲ್ಲಿ ಏಕಾಗ್ರಚಿತ್ತನಾಗಿ ಸ್ವಲ್ಪಕಾಲ ಯೋಚಿಸಿ ಒಂದು ನಿರ್ಧಾರಕ್ಕೆ ಬಂದನು.

ದುರ್ಯೋಧನ! ಕಾಂಪಿಲ್ಯಪಟ್ಟಣವು ಸ್ವಭಾವತಃ (ಪ್ರಾಕೃತಿಕವಾಗಿಯೇ) ಸುರಕ್ಷಿತವಾಗಿದ್ದಿತು. ಆಪತ್ಕಾಲವು ಸನ್ನಿಹಿತವಾಗಿದ್ದಿತಾದುದರಿಂದ ದ್ರುಪದನು ಕೋಟೆ-ಕೊತ್ತಲುಗಳನ್ನು ಆಯುಧವಿಶೇಷಗಳಿಂದಲೂ ಸೈನ್ಯಗಳ ಪ್ರತಿಷ್ಠಾನದಿಂದಲೂ ಸಜ್ಜುಗೊಳಿಸಿ ಪಟ್ಟಣದ ರಕ್ಷಣೆಗೆ ಇನ್ನೂ ಹೆಚ್ಚಿನ ವ್ಯವಸ್ಥೆಗಳನ್ನು ಮಾಡಿದನು. ಹಿರಣ್ಯವರ್ಮನೊಡನೆ ವಿರೋಧಕಟ್ಟಿಕೊಳ್ಳುವ ಪರಿಸ್ಥಿತಿಯುಂಟಾದುದಕ್ಕಾಗಿ ಭಾರ್ಯೆಯೊಡನೆ ದ್ರುಪದನು ಬಹುವಾಗಿ ದುಃಖಪಟ್ಟನು. 'ಸಂಬಂಧಿಯಾದ (ಬೀಗನಾದ) ಹಿರಣ್ಯವರ್ಮನೊಡನೆ ಯುದ್ಧವಾಗದಿರಲು ಏನು ಮಾಡಬೇಕು?' ಎಂದು ಯೋಚಿಸುತ್ತಲೇ ದ್ರುಪದನು ತನ್ನ ಕುಲದೈವವನ್ನು ಭಕ್ತಿಪೂರ್ವಕವಾಗಿ ಅರ್ಚಿಸಿದನು. ಪತಿಯು ದೇವತಾರಾಧನೆಯಲ್ಲಿಯೇ ತತ್ಪರನಾಗಿದ್ದುದನ್ನು ಕಂಡು ಪೂಜೆಯಲ್ಲಿಯೇ ನಿಮಗ್ನನಾಗಿದ್ದ ನರೇಶನನ್ನು ಕುರಿತು ಅವನ ಪತ್ನಿಯು ಹೇಳಿದಳು :

"ಮಹಾರಾಜ! ದೇವತೆಗಳ ಆರಾಧನೆಯು ಸತ್ಪುರುಷರಾದವರಿಗೆ ಸರ್ವಕಾಲದಲ್ಲಿಯೂ ವಿಹಿತವಾಗಿಯೇ ಇದೆ. ಹೀಗಿರುವಾಗ ದುಃಖಸಾಗರದಲ್ಲಿ ಮುಳುಗಿರುವ ಈ ಸಮಯದಲ್ಲಿ ದೇವತಾರ್ಚನೆಯು ಅನಿವಾರ್ಯವೇ ಸರಿ. ಆದರೆ ನನಗೆ ಇಷ್ಟುಮಾತ್ರವೇ ಸಾಕೆನಿಸುವುದಿಲ್ಲ. ಗುರುಜನರನ್ನು ಪೂಜಿಸಬೇಕು. ಬ್ರಾಹ್ಮಣರಿಗೆ ಭೂರಿದಕ್ಷಿಣೆಗಳನ್ನು ಕೊಡಬೇಕು. ಹಿರಣ್ಯವರ್ಮನನ್ನು ಪ್ರತಿಷೇಧಿಸುವ ಸಲುವಾಗಿ ಅಗ್ನಿಗಳಲ್ಲಿ ಹೋಮವನ್ನೂ ಮಾಡಬೇಕು. 'ಯುದ್ಧಮಾಡದೆಯೇ ಹಿರಣ್ಯವರ್ಮನು ಹಿಂದಿರುಗುವಂತಾಗಲಿ'–ಎಂದು ನೀನು ಮನಸ್ಸಿನಲ್ಲಿ ಪ್ರಾರ್ಥಿಸು. ದೇವತೆಗಳ ಪ್ರಸಾದ

ದಿಂದಾಗಿ ನಿನ್ನ ಮನೋಭಿಲಾಷೆಯು ನೆರವೇರುತ್ತದೆ. ವಿಶಾಲನೇತ್ರನೇ! ಈ ನಗರವು ಯಾವ ಕಾರಣದಿಂದಲೂ ವಿನಾಶವಾಗದಂತೆ ಕಾರ್ಯಕ್ರಮಗಳನ್ನು ಕೈಗೊಳ್ಳಲು ನೀನು ಮಂತ್ರಿಗಳೊಡನೆ ಸಮಾಲೋಚನೆಯನ್ನು ಮಾಡಿರುವೆಯಲ್ಲವೇ? ಅವರೊಡನೆ ಸಮಾಲೋಚಿಸಿ ನಿರ್ಧರಿಸಿದ ವಿಷಯವು ಕಾರ್ಯರೂಪಕ್ಕೆ ಬರುವಂತೆ ಮಾಡು.

**ದೈವಂ ಹಿ ಮಾನುಷೋಪೇತಂ ಭೃಶಂ ಸಿದ್ಧ್ಯತಿ ಪಾರ್ಥಿವ ।**
**ಪರಸ್ಪರವಿರೋಧಾದ್ಧಿ ಸಿದ್ಧಿರಸ್ತಿ ನ ಚೈತಯೋಃ ॥೧೫॥**

ಮನುಷ್ಯಪ್ರಯತ್ನವಿದ್ದಲ್ಲಿ ಮಾತ್ರವೇ ದೈವಿಕವಾದ ಫಲವೂ ಪ್ರಾಪ್ತವಾಗಿ ಕಾರ್ಯಸಿದ್ಧಿಯಾಗುತ್ತದೆ. (ಮನುಷ್ಯನು ಪ್ರಯತ್ನಿಸಿ ದೈವವನ್ನೂ ಪ್ರಾರ್ಥಿಸಿದರೆ ಕೈಗೊಂಡ ಕಾರ್ಯದ ಸಿದ್ಧಿಯಾಗುತ್ತದೆ.) ದೈವ ಮತ್ತು ಪುರುಷಪ್ರಯತ್ನಗಳ ಪರಸ್ಪರವಿರೋಧದಿಂದ ಯಾವ ಕಾರ್ಯವೂ ಸಿದ್ಧಿಸುವುದಿಲ್ಲ. (ಕೇವಲ ಪುರುಷಪ್ರಯತ್ನದಿಂದಲೇ ಕಾರ್ಯದ ಸಿದ್ಧಿ ಯಾಗುವುದಿಲ್ಲ. ದೈವವೇ ಎಲ್ಲವನ್ನೂ ಮಾಡುವುದೆಂದು ಕೈಕಟ್ಟಿ ಕುಳಿತರೂ ಕಾರ್ಯದ ಸಿದ್ಧಿಯಾಗುವುದಿಲ್ಲ. ದೈವಸಂಕಲ್ಪ, ಪುರುಷಪ್ರಯತ್ನ– ಈ ಎರಡೂ ಒಂದುಗೂಡಬೇಕು.) ಆದುದರಿಂದ ನೀನು ಮಂತ್ರಿಗಳೊಡನೆ ಸಮಾಲೋಚಿಸಿ ನಗರದ ರಕ್ಷಣೆಗೆ ತಕ್ಕುದಾದ ವ್ಯವಸ್ಥೆಮಾಡಿ ಅನಂತರದಲ್ಲಿ ನಿನ್ನ ಇಚ್ಛಾನುಸಾರವಾಗಿ ದೇವತೆಗಳನ್ನು ಆರಾಧಿಸು."

ದುರ್ಯೋಧನ! ಈ ರೀತಿಯಲ್ಲಿ ಪರಸ್ಪರವಾಗಿ ಮಾತನಾಡಿಕೊಳ್ಳುತ್ತಿದ್ದ, ಶೋಕಸಾಗರದಲ್ಲಿ ಮುಳುಗಿಹೋಗಿದ್ದ ತಂದೆ-ತಾಯಿಗಳನ್ನು ನೋಡಿ ತಪಸ್ವಿನಿಯಾದ, ಕನ್ಯೆಯಾದ ಶಿಖಂಡಿನಿಯು ಬಹಳ ಲಜ್ಜೆಗೊಂಡವಳಾಗಿ ಹೀಗೆ ಚಿಂತಿಸತೊಡಗಿದಳು : "ಅಯ್ಯೋ! ನನ್ನ ಸಲುವಾಗಿ ನನ್ನ ತಂದೆ-ತಾಯಿಗಳು ಬಹುದುಃಖಿತರಾಗಿದ್ದಾರೆ. ಇವರ ದುಃಖವನ್ನು ನಾನು ಪರಿಹರಿಸಲಾರದವಳಾಗಿದ್ದೇನೆ. ನಾನು ಬದುಕಿದ್ದು ತಾನೇ ಪ್ರಯೋಜನ ವೇನಿದೆ? ನಾನು ಬದುಕಿರುವ ಪರ್ಯಂತವಾಗಿ ಇವರಿಗೆ ಕಷ್ಟವೂ ತಪ್ಪಿದ್ದಲ್ಲ.; ದುಃಖವೂ ತಪ್ಪಿದ್ದಲ್ಲ. ಆದುದರಿಂದ ನಾನು ಪ್ರಾಣಕಳೆದುಕೊಂಡರೆ ಆಗಲಾದರೂ ಇವರ ಕಷ್ಟವೂ-ದುಃಖವೂ ಅಂತ್ಯಗೊಳ್ಳಬಹುದು." ಹೀಗೆಂಬು

ದಾಗಿ ಪ್ರಾಣಕಳೆದುಕೊಳ್ಳಲು ನಿಶ್ಚಯಿಸಿದ, ಶೋಕಾಕುಲಳಾಗಿದ್ದ ಶಿಖಂಡಿನಿಯು, ಯಾರಿಗೂ ಹೇಳದೇ ಮನೆಯನ್ನು ಪರಿತ್ಯಜಿಸಿ ಅರಣ್ಯಕ್ಕೆ ಹೊರಟುಹೋದಳು. ಅವಳು ಪ್ರವೇಶಿಸಿದ ಅರಣ್ಯವು ಐಶ್ವರ್ಯಸಂಪನ್ನ ನಾದ ಸ್ಥೂಣಾಕರ್ಣನೆಂಬ ಯಕ್ಷನಿಂದ ಪರಿಪಾಲಿತವಾಗಿದ್ದಿತು. ಆ ಯಕ್ಷನ ಭಯದಿಂದಾಗಿ ಜನರಾರೂ ಆ ಅರಣ್ಯಕ್ಕೆ ಹೋಗುತ್ತಿರಲಿಲ್ಲ. ಆ ಅರಣ್ಯದ ಮಧ್ಯದಲ್ಲಿ ಸ್ಥೂಣಾಕರ್ಣನ ವಿಶಾಲವಾದ ಭವನವಿದ್ದಿತು. ಅದರ ಸುತ್ತಲೂ ಸುಣ್ಣವನ್ನು ಲೇಪಿಸಿದ್ದರು. ಲಾಮಂಚದ ಅಥವಾ ಲಾಜಾಹೋಮ ಮಾಡಿದುದರಿಂದ ಪ್ರಾದುರ್ಭೂತವಾದ ಧೂಮದ ಸುಗಂಧವು ಮನೆಯನ್ನು ಆವರಿಸಿದ್ದಿತು. ಆ ನಿವಾಸದ ಪ್ರಾಕಾರ ಮತ್ತು ಹೆಬ್ಬಾಗಿಲುಗಳು ಎತ್ತರವಾಗಿದ್ದುವು.

ದುರ್ಯೋಧನ! ಜೀವನದಲ್ಲಿಯೇ ಬೇಸರಪಟ್ಟುಕೊಂಡು ಪ್ರಾಣಕಳೆದುಕೊಳ್ಳಲು ಕಾಡಿಗೆ ಬಂದ ದ್ರುಪದನ ಮಗಳಾದ ಶಿಖಂಡಿನಿಯು ಯಕ್ಷನ ಅರಮನೆಯನ್ನು ಪ್ರವೇಶಿಸಿ ಅನೇಕದಿನಗಳವರೆಗೆ ಅನ್ನಾಹಾರಗಳನ್ನೂ ತೆಗೆದುಕೊಳ್ಳದೇ ಶರೀರವನ್ನು ಶೋಷಿಸಿದಳು. ಅವಳು ಅಂತಹ ದಾರುಣಾವಸ್ಥೆಯಲ್ಲಿದ್ದಾಗ ಸ್ಥೂಣಾಕರ್ಣನು ಶಿಖಂಡಿನಿಗೆ ಕಾಣಿಸಿಕೊಂಡನು. ಅವಳ ಸ್ಥಿತಿಯನ್ನು ನೋಡಿ ಅವನ ಹೃದಯದಲ್ಲಿ ಮಾರ್ದವವುಂಟಾಯಿತು. ಅವಳ ಮೇಲೆ ಅನುಕಂಪವುಂಟಾಯಿತು. ಅಂತೆಯೇ ಕನ್ಯೆಯನ್ನು ಪ್ರಶ್ನಿಸಿದನು :

"ಬಾಲೇ! ನೀನು ಈ ಕಠೋರವಾದ ಉಪವಾಸವ್ರತವನ್ನೇಕೆ ಪ್ರಾರಂಭಿಸಿರುವೆ? ನಿನಗೇನು ಬೇಕಾಗಿದೆ? ಒಡನೆಯೇ ಹೇಳು? ಮಾಡಿಕೊಡುತ್ತೇನೆ."

ಶಿಖಂಡಿನಿಯು ಹೇಳಿದಳು :

"ಯಕ್ಷಶ್ರೇಷ್ಠನೇ! ನೀನು ನನ್ನ ವಿಷಯದಲ್ಲಿ ಅನುಕಂಪತೋರಿಸು ತ್ತಿರುವುದಕ್ಕೆ ನಾನು ಕೃತಜ್ಞಳಾಗಿದ್ದೇನೆ. ಆದರೆ ನನಗಾಗಬೇಕಾಗಿರುವ ಕಾರ್ಯವನ್ನು ಮಾಡಿಕೊಡಲು ನಿನ್ನಿಂದ ಸಾಧ್ಯವಾಗುವುದೇ?– ಎಂಬ ವಿಷಯದಲ್ಲಿ ನಾನು ಸಂಶಯಪಡುತ್ತಿದ್ದೇನೆ."

"ನೀನು ಸಂಶಯಪಡುವ ಕಾರಣವಿಲ್ಲ ಭದ್ರೇ! ನನ್ನಿಂದ ಏನಾಗ

ಬೇಕಾಗಿದೆಯೆಂಬುದನ್ನು ಶೀಘ್ರವಾಗಿ ಹೇಳು. ಖಂಡಿತವಾಗಿಯೂ ಮಾಡಿಕೊಡುತ್ತೇನೆ. ನೀನು ನನ್ನನ್ನು ಸಾಮಾನ್ಯನೆಂದು ಭಾವಿಸಬೇಡ.

**ಧನೇಶ್ವರಸ್ಯಾನುಚರಃ ವರದೋಽಸ್ಮಿ ನೃಪಾತ್ಮಜೇ ।**
**ಅದೇಯಮಪಿ ದಾಸ್ಯಾಮಿ ಬ್ರೂಹಿ ಯತ್ತೇ ವಿವಕ್ಷಿತಮ್ ॥೨೫॥**

ರಾಜಕುಮಾರಿ! ನಾನು ಧನೇಶ್ವರನ ಅನುಚರನಾಗಿದ್ದೇನೆ. ವರದನಾಗಿದ್ದೇನೆ. ವರಕೊಡುವ ಸಾಮರ್ಥ್ಯವನ್ನೂ ಪಡೆದಿರುತ್ತೇನೆ. ನಿನಗಾಗಿ ನಾನು ಕೊಡಬಾರದುದನ್ನೂ ಕೊಟ್ಟುಬಿಡುತ್ತೇನೆ. ನಿನಗೇನು ಬೇಕೆಂಬುದನ್ನು ಈಗಲಾದರೂ ಹೇಳು."

ದುರ್ಯೋಧನ! ಸ್ಥೂಣಾಕರ್ಣನು ಇಷ್ಟೊಂದು ಆಶ್ವಾಸನೆಯನ್ನಿತ್ತ ನಂತರ ಶಿಖಂಡಿನಿಯು ಯಕ್ಷರಲ್ಲಿ ಪ್ರಧಾನನಾದ ಸ್ಥೂಣಾಕರ್ಣನಿಗೆ ಎಲ್ಲ ವಿಷಯಗಳನ್ನೂ ವಿಶದವಾಗಿ ಹೇಳಿದಳು.

"ಯಕ್ಷ! ಪುತ್ರಹೀನನಾಗಿರುವ ನನ್ನ ತಂದೆಯು ಶೀಘ್ರಕಾಲದಲ್ಲಿಯೇ ವಿನಾಶಹೊಂದುತ್ತಾನೆ. ಕಾರಣವೇನೆಂದರೆ : ಕ್ರೋಧಪರವಶನಾಗಿರುವ ದಶಾರ್ಣಾಧಿಪತಿಯು ನಮ್ಮ ತಂದೆಯನ್ನು ಸಂಹಾರಮಾಡುವ ಸಲುವಾಗಿಯೇ ಸೈನ್ಯಸಮೇತನಾಗಿ ನಮ್ಮ ಪಟ್ಟಣಕ್ಕೆ ಬರುವವನಿದ್ದಾನೆ. ಸುವರ್ಣಕವಚಯುಕ್ತನಾಗಿ ಬರುವ ಹಿರಣ್ಯವರ್ಮನು ಮಹಾಬಲಿಷ್ಠನೂ ಯುದ್ಧೋತ್ಸಾಹಿಯೂ ಆಗಿದ್ದಾನೆ.

ಮಹಾನುಭಾವನೇ! ಅವನಿಂದ ನನ್ನನ್ನೂ ಮತ್ತು ನನ್ನ ತಂದೆ-ತಾಯಿಗಳನ್ನೂ ಸಂರಕ್ಷಿಸು. ನನ್ನ ದುಃಖವನ್ನು ಉಪಶಮನಗೊಳಿಸುವೆನೆಂದು ಪ್ರತಿಜ್ಞೆಮಾಡಿರುವೆಯಲ್ಲವೇ? ನನ್ನ ದುಃಖವು ನಿವಾರಣೆಯಾಗಬೇಕಾದರೆ ನಾನು ಪುರುಷನಾಗಬೇಕಾಗಿದೆ. ನಾನು ಪುರುಷನಾಗುವುದರಿಂದ ನನ್ನ ತಂದೆ-ತಾಯಿಗಳ ಸಂರಕ್ಷಣೆಯೂ ಆಗುತ್ತದೆ. ಆದುದರಿಂದ ನಿನ್ನ ವರದಾನದ ಫಲವಾಗಿ ನಾನೊಬ್ಬ ಕಳಂಕರಹಿತನಾದ ಪುರುಷಶ್ರೇಷ್ಠನಾಗಬೇಕು. ಹಿರಣ್ಯವರ್ಮನು ನಮ್ಮ ಪಟ್ಟಣವನ್ನು ಆಕ್ರಮಿಸಲು ಬರುವ ಮೊದಲೇ ನೀನು ನನಗೆ ಪುರುಷತ್ವವನ್ನು ಅನುಗ್ರಹಿಸಬೇಕು."

೧೯೧ನೆಯ ಅಧ್ಯಾಯವು ಮುಗಿಯಿತು.

## ಶಿಖಂಡಿನಿಗೆ ಪುರುಷತ್ವಪ್ರಾಪ್ತಿ : ದ್ರುಪದ ಮತ್ತು ಹಿರಣ್ಯವರ್ಮರು ಪ್ರಸನ್ನರಾದುದು : ಸ್ಥೂಣಾಕರ್ಣನಿಗೆ ಕುಬೇರನ ಶಾಪ : ಭೀಷ್ಮನು ಶಿಖಂಡಿಯನ್ನು ಸಂಹರಿಸುವುದಿಲ್ಲವೆಂದು ಪ್ರತಿಜ್ಞೆಮಾಡಿದುದು

ಭೀಷ್ಮನು ಮುಂದುವರಿದು ಹೇಳುತ್ತಾನೆ :

"ದುರ್ಯೋಧನ! ಯಕ್ಷನು ಶಿಖಂಡಿನಿಯು ಹೇಳಿದ ಮಾತನ್ನು ಕೇಳಿ ಕ್ಷಣಕಾಲ ಯೋಚಿಸಿದನು. ದೈವಸಂಕಲ್ಪವೂ ಅದೇ ಆಗಿದ್ದಿತಾದ್ದರಿಂದ ದೈವದಿಂದಲೇ ಪ್ರೇರಿತನಾದ ಯಕ್ಷನು ಶಿಖಂಡಿನಿಯೊಡನೆ ಈ ಮಾತು ಗಳನ್ನು ಹೇಳಿದನು. ನನಗೆ ದುಃಖವನ್ನುಂಟುಮಾಡಲು ಅದು ಹಾಗೆಯೇ ಆಗಬೇಕಾಗಿದ್ದಿತು.

ಯಕ್ಷನು ಹೇಳುತ್ತಾನೆ :

"ಭದ್ರೇ! ನಿನ್ನ ಇಚ್ಛೆಯನ್ನು ಪೂರೈಸಿಕೊಡುತ್ತೇನೆ. ಆದರೆ ಒಂದು ನಿಬಂಧನೆಯೊಡನೆ ನಿನ್ನ ಕಾರ್ಯವನ್ನು ಮಾಡಿಕೊಡುತ್ತೇನೆ. ಸ್ವಲ್ಪಕಾಲದ ವರೆಗೆ ಮಾತ್ರವೇ ನಾನು ನನ್ನ ಪುರುಷತ್ವವನ್ನು ನಿನಗೆ ಕೊಟ್ಟಿರುತ್ತೇನೆ. ಅವಧಿಯು ಮುಗಿಯುವುದರೊಳಗಾಗಿ ನೀನಿಲ್ಲಿಗೆ ಬರಬೇಕು. ಅವಧಿ ಯೊಳಗೆ ಬರುವೆನೆಂಬುದನ್ನು ಸತ್ಯದ ಮೇಲೆ ಆಣೆಯಿಟ್ಟು ಹೇಳಬೇಕು. ನಾನು ಪ್ರಭುವಾಗಿದ್ದೇನೆ. ಸಂಕಲ್ಪಸಿದ್ಧನಾಗಿದ್ದೇನೆ. ನಾನೇನು ಮಾಡಬೇಕೆಂದು ಸಂಕಲ್ಪಿಸಿದರೂ ಅದು ಸಂಕಲ್ಪಮಾತ್ರದಿಂದಲೇ ಸಿದ್ಧವಾಗಿಬಿಡುತ್ತದೆ. ಆದುದರಿಂದ ನನ್ನಲ್ಲಿರುವ ಪುಂಸ್ತ್ವವನ್ನು ನಿನಗೆ ಕೊಟ್ಟು ನಿನ್ನಲ್ಲಿರುವ ಸ್ತ್ರೀತ್ವವನ್ನು ಪಡೆದುಕೊಳ್ಳಲು ಕಷ್ಟವೇನೂ ಆಗುವುದಿಲ್ಲ. ನಾನು ಇಚ್ಛೆಬಂದಲ್ಲಿಗೆ ವಾಯು ವೇಗ-ಮನೋವೇಗಗಳಲ್ಲಿ ಹೋಗುವ ಸಾಮರ್ಥ್ಯವನ್ನೂ ಪಡೆದಿರುತ್ತೇನೆ. ಮೇಲಾಗಿ ನಾನು ಆಕಾಶದಲ್ಲೂ ಸಂಚರಿಸಬಲ್ಲೆನು. ನನ್ನ ಈ ಅನುಗ್ರಹ ದಿಂದ ನೀನು ನಿನ್ನ ಅಭಿಲಾಷೆಯಂತೆ ಪಟ್ಟಣವನ್ನು ತಂದೆ-ತಾಯಿಗಳನ್ನು

ಮಾತ್ರವೇ ಸಂರಕ್ಷಿಸಬೇಕು. ಈ ಪುಂಸ್ತ್ವದಿಂದ ಮತ್ತಾವ ಪ್ರಯೋಜನವನ್ನೂ ಪಡೆದುಕೊಳ್ಳಬಾರದು. ರಾಜಕುಮಾರಿ! ನಿನ್ನಲ್ಲಿರುವ ಸ್ತ್ರೀತ್ವವನ್ನು ನಾನೀಗಲೇ ಪಡೆದುಕೊಳ್ಳುತ್ತೇನೆ. 'ಕಾರ್ಯವು ಮುಗಿದೊಡನೆಯೇ- ನಗರದ ರಕ್ಷಣೆ ಮತ್ತು ನನ್ನ ಬಂಧು-ಬಾಂಧವರ ರಕ್ಷಣೆಯಾದೊಡನೆಯೇ –ನಿನ್ನ ಪುಂಸ್ತ್ವವನ್ನು ನಿನಗೆ ಹಿಂದಿರುಗಿಸುವೆನು'–ಎಂದು ನೀನು ಪ್ರಮಾಣಮಾಡಿ ಹೇಳಬೇಕು. ಹಾಗೆ ಮಾತುಕೊಟ್ಟಲ್ಲಿ ಮಾತ್ರ ನಿನಗೆ ಪ್ರಿಯವಾದ ಕಾರ್ಯವನ್ನು ನಾನೀಗಲೇ ಮಾಡುತ್ತೇನೆ."

"ಭಗವನ್! ಸುವ್ರತನೇ! ನೀನೀಗ ಪ್ರದಾನಮಾಡಲಿರುವ ಪುಂಸ್ತ್ವವನ್ನು ನಾನು ಖಂಡಿತವಾಗಿಯೂ ಹಿಂದಿರುಗಿಸುತ್ತೇನೆ. ನಿಶಾಚರನೇ! ಸ್ವಲ್ಪಕಾಲಮಾತ್ರ ನೀನು ನನ್ನ ಸ್ತ್ರೀತ್ವವನ್ನು ಧಾರಣೆಮಾಡಿಕೊಂಡಿರು. ದಶಾರ್ಣದ ರಾಜನಾದ ಹಿರಣ್ಯವರ್ಮನು ನಮ್ಮ ಪಟ್ಟಣದಿಂದ ಹೊರಟು ಹೋಗುವವರೆಗೂ ನನ್ನಲ್ಲಿ ನಿನ್ನ ಪುಂಸ್ತ್ವವಿರಲಿ. ಅವನು ಹೊರಟು ಹೋದೊಡನೆಯೇ ನಾನಿಲ್ಲಿಗೆ ಬರುತ್ತೇನೆ. ಪುನರ್ವಿನಿಮಯದಿಂದ ನಾನು ಯಥಾಪೂರ್ವವಾಗಿ ಹೆಂಗಸೇ ಆಗುತ್ತೇನೆ. ನೀನು ಪುರುಷನಾಗುವೆ."

ದುರ್ಯೋಧನ! ಈ ರೀತಿಯಲ್ಲಿ ಸ್ಥೂಣಾಕರ್ಣ-ಶಿಖಂಡಿನಿಯರು ಪರಸ್ಪರವಾಗಿ ಮಾತನಾಡಿ, ಪುಂಸ್ತ್ವ-ಸ್ತ್ರೀತ್ವಗಳ ವಿನಿಮಯದ ವಿಷಯವಾಗಿ ಒಂದು ನಿಬಂಧನೆಯನ್ನೂ ಮಾಡಿಕೊಂಡು, ತಮ್ಮ-ತಮ್ಮ ಗುಹ್ಯಾಂಗಗಳನ್ನು ಅನ್ಯೋನ್ಯವಾಗಿ ಪರಿವರ್ತಿಸಿಕೊಂಡರು. ಯಕ್ಷನಾದ ಸ್ಥೂಣಾಕರ್ಣನು ಶಿಖಂಡಿನಿಯಿಂದ ಸ್ತ್ರೀತ್ವವನ್ನು ಪಡೆದುಕೊಂಡನು. ಶಿಖಂಡಿನಿಯು ಸ್ಥೂಣಾಕರ್ಣನಿಂದ ಪುಂಸ್ತ್ವವನ್ನು ಪಡೆದುಕೊಂಡು ಶಿಖಂಡಿಯಾಗಿ ಯಕ್ಷರಾಜನಂತೆಯೇ ಜಾಜ್ವಲ್ಯಮಾನನಾಗಿ ಪ್ರಕಾಶಿಸಿದನು.

ಅನಂತರದಲ್ಲಿ ಪಾಂಚಾಲರಾಜಕುಮಾರನಾದ ಶಿಖಂಡಿಯು ಪುಂಸ್ತ್ವವನ್ನು ಪಡೆದು ಪರಮಹೃಷ್ಟನಾಗಿ ಪಟ್ಟಣವನ್ನು ಪ್ರವೇಶಿಸಿದನು. ಅರಮನೆಗೆ ಹೋಗಿ ತಂದೆಯನ್ನೂ ಸಂದರ್ಶಿಸಿದನು.

ತಂದೆಯಾದ ದ್ರುಪದನಿಗೆ ಶಿಖಂಡಿಯು ಅರಣ್ಯದಲ್ಲಿ ನಡೆದುದೆಲ್ಲವನ್ನೂ ವಿವರಿಸಿ ಹೇಳಿದನು. ಮಗನ ಮಾತನ್ನು ಕೇಳಿ ದ್ರುಪದನು ಅಪಾರವಾದ

ಸಂತೋಷವನ್ನು ಹೊಂದಿದನು. ಆ ಸಮಯದಲ್ಲಿ ಪತ್ನೀಸಹಿತನಾದ ದ್ರುಪದನು ಮಹೇಶ್ವರನಿತ್ತಿದ್ದ ವರವನ್ನು ಸ್ಮರಿಸಿಕೊಂಡನು. ಧೈರ್ಯಗೊಂಡ ದ್ರುಪದನು ತನ್ನ ಪಟ್ಟಣವನ್ನು ಆಕ್ರಮಣಮಾಡಲು ಹಿರಣ್ಯವರ್ಮನು ಬರುವನೆಂಬುದನ್ನು ನಿರೀಕ್ಷಿಸುತ್ತಾ ಕುಳಿತಿರದೇ ತಾನಾಗಿಯೇ ಹಿರಣ್ಯವರ್ಮನಿಗೆ ದೂತರೊಡನೆ ಹೇಳಿಕಳುಹಿಸಿದನು :

**ಪುರುಷೋಽಯಂ ಮಮ ಸುತಃ ಶ್ರದ್ಧತ್ತಾಂ ಮೇ ಭವಾನಿತಿ ।**

"ನನ್ನ ಈ ಪುತ್ರನು ಪುರುಷನೇ ಆಗಿರುತ್ತಾನೆ. ನನ್ನ ಮಾತಿನಲ್ಲಿ ವಿಶ್ವಾಸವನ್ನಿಡು."

ಹಿಂದೆಯೂ ದ್ರುಪದನು ದೂತರೊಡನೆ ಅನೇಕಬಾರಿ ತಾನು ಮೋಸಮಾಡಿಲ್ಲವೆಂದು ಹಿರಣ್ಯವರ್ಮನಿಗೆ ಹೇಳಿಕಳುಹಿಸಿದ್ದನಲ್ಲವೇ? ಈ ಬಾರಿಯೂ ತಾನು ಮಾಡಿದ ತಪ್ಪನ್ನು ಒಪ್ಪಿಕೊಳ್ಳದೇ ದ್ರುಪದನು ಸುಳ್ಳನ್ನೇ ಸಾಧಿಸುತ್ತಿರುವನೆಂಬ ಅಭಿಪ್ರಾಯದಿಂದ ದ್ರುಪದದೂತನ ಆ ಮಾತನ್ನು ಕೇಳುತ್ತಲೇ ದುಃಖ-ಶೋಕಸಮನ್ವಿತನಾಗಿದ್ದ ಹಿರಣ್ಯವರ್ಮನು ದ್ರುಪದನನ್ನು ಆಕ್ರಮಿಸಲೆಂದೇ ಸಸೈನ್ಯನಾಗಿ ಕಾಂಪಿಲ್ಯನಗರದ ಕಡೆಗೆ ಧಾವಿಸಿಬಂದನು. ಹಿರಣ್ಯವರ್ಮನು ನಗರದ ಸಮೀಪಕ್ಕೆ ಬಂದು ಬ್ರಹ್ಮವಿದರಲ್ಲಿ ಶ್ರೇಷ್ಠನಾದವನೊಬ್ಬನನ್ನು ಯಥೋಚಿತವಾಗಿ ಸತ್ಕರಿಸಿ ಅವನನ್ನು ದೌತ್ಯಕ್ಕಾಗಿ ದ್ರುಪದನಲ್ಲಿಗೆ ಕಳುಹಿಸಿದನು. ಬ್ರಾಹ್ಮಣನು ಹೊರಡಲಿದ್ದ ಸಮಯದಲ್ಲಿ ಹಿರಣ್ಯವರ್ಮನು ಅವನೊಡನೆ ಹೀಗೆ ಹೇಳಿದನು :

"ಬ್ರಾಹ್ಮಣೋತ್ತಮ! ನರಾಧಮನಾದ ದ್ರುಪದನನ್ನು ಕಂಡು ನಾನೀಗ ಹೇಳಲಿರುವ ಈ ಮಾತುಗಳನ್ನು ಹೇಳು :

'ಮತಿಗೆಟ್ಟವನೇ! ಮಗಳನ್ನು ಮಗನೆಂದು ಸುಳ್ಳುಹೇಳಿ ನನ್ನ ಕನ್ಯೆಯನ್ನು ನಿನ್ನ ಮಗಳಿಗೆ ವರಣಮಾಡಿ ಮದುವೆಮಾಡಿಬಿಟ್ಟೆಯಲ್ಲವೇ? ಕೇವಲ ಸೊಕ್ಕಿನಿಂದ ಈ ಕಾರ್ಯವನ್ನು ನೀನು ಮಾಡಿರುವೆ. ದರ್ಪದಿಂದ ಮಾಡಿರುವ ಈ ನಿನ್ನ ಕುತ್ಸಿತಕಾರ್ಯಕ್ಕೆ ಫಲವನ್ನು ಇನ್ನು ಸ್ವಲ್ಪಕಾಲದಲ್ಲಿಯೇ ನೀನು ಅನುಭವಿಸುವೆ.'

ದುರ್ಯೋಧನ! ಹಿರಣ್ಯವರ್ಮನು ದ್ರುಪದನಿಗೆ ಈ ಮಾತನ್ನು ಹೇಳ

ಬೇಕೆಂದು ನಿರ್ದೇಶಿಸಿ ಬ್ರಾಹ್ಮಣದೂತನನ್ನು ದ್ರುಪದನ ಬಳಿಗೆ ಕಳುಹಿಸಿದನು. ದಶಾರ್ಣನೃಪಚೋದಿತನಾದ ಬ್ರಾಹ್ಮಣನು ಬಹುಶೀಘ್ರವಾಗಿ ದ್ರುಪದನಗರಿಗೆ ಬಂದನು. ಬ್ರಾಹ್ಮಣನು ದ್ರುಪದನ ಅರಮನೆಯನ್ನು ಪ್ರವೇಶಿಸಿದೊಡನೆಯೇ, ದ್ರುಪದನು ಶಿಖಂಡಿಯೊಡನೆ ಹಿರಣ್ಯವರ್ಮನ ಬ್ರಾಹ್ಮಣದೂತನಿಗೆ ಗೋಮಧುಪರ್ಕವನ್ನಿತ್ತು ಸತ್ಕಾರಮಾಡಿದನು. ಆದರೆ ಆ ಸತ್ಕಾರದಿಂದ ಬ್ರಾಹ್ಮಣನು ಸಂತೋಷಗೊಳ್ಳಲಿಲ್ಲ. ಅವನು ಆ ಸತ್ಕಾರವನ್ನು ಮಾನ್ಯಮಾಡಲಿಲ್ಲ. ಹಿರಣ್ಯವರ್ಮನು ಯಾವ ಮಾತನ್ನು ಹೇಳಿ ಕಳುಹಿಸಿದ್ದನೋ–ಅದೇ ಮಾತನ್ನೇ ಬ್ರಾಹ್ಮಣನು ದ್ರುಪದನ ಮುಂದೆ ಉಚ್ಚರಿಸಿದನು :

**ಯತ್ತೇಽಹಮಧಮಾಚಾರ ದುಹಿತ್ರಾಸ್ಮ್ಯಭಿವಞ್ಚಿತಃ ।**
**ತಸ್ಯ ಪಾಪಸ್ಯ ಕರಣಾತ್ಫಲಂ ಪ್ರಾಪ್ನುಹಿ ದುರ್ಮತೇ ।**
**ದೇಹಿ ಯುದ್ಧಂ ನರಪತೇ ಮಮಾದ್ಯ ರಣಮೂರ್ಧನಿ ॥೨೧॥**

"ಅಧಮಾಚಾರನೇ! ನಾನು ನಿನ್ನ ಮಗಳಿಂದ ವಂಚಿತನಾಗಿರುವೆನು. ನಿನ್ನ ಮಗಳು ಗಂಡುವೇಷಹಾಕಿ ನನಗೆ ಮೋಸಮಾಡಿದ್ದಾಳೆ. ಇದಕ್ಕೆ ನೀನೇ ಕಾರಣನು. ಈ ಪಾಪಕಾರ್ಯಕ್ಕೆ, ವಂಚನೆಯ ಕಾರ್ಯಕ್ಕೆ ತಕ್ಕುದಾದ ಫಲವನ್ನು ನೀನೀಗಲೇ ಪಡೆಯುವೆ. ನಿನ್ನನ್ನು ಸಂಹರಿಸುವ ಸಲುವಾಗಿಯೇ ನಾನಿಲ್ಲಿಗೆ ಬಂದಿದ್ದೇನೆ. ಆದುದರಿಂದ ರಣಾಂಗಣದಲ್ಲಿ ಯುದ್ಧವನ್ನು ದಯಪಾಲಿಸು. ನನ್ನೊಡನೆ ಯುದ್ಧಮಾಡು. ಪುತ್ರ-ಮಿತ್ರಾಮಾತ್ಯ-ಬಾಂಧವಸಹಿತನಾದ ನಿನ್ನನ್ನು ನಿರ್ಮೂಲಮಾಡಿಬಿಡುತ್ತೇನೆ."

ದುರ್ಯೋಧನ! ಹಿರಣ್ಯವರ್ಮನಿಂದ ಹೇಳಿಕಳುಹಿಸಲ್ಪಟ್ಟು–ಪುರೋಹಿತನಿಂದ ಹೇಳಲ್ಪಟ್ಟ ನಿಂದೆಯ ಮಾತುಗಳನ್ನು ಮಂತ್ರಿಗಳ ಮಧ್ಯದಲ್ಲಿ ದ್ರುಪದನು ಕೇಳಿದನು. ಅಂತಹ ಬೈಗುಳದ ಮಾತನ್ನು ಕೇಳಿದರೂ ದ್ರುಪದನು ಸಿಟ್ಟಾಗಲಿಲ್ಲ. ಪ್ರೇಮಭಾವದಿಂದ ಕೂಡಿ ವಿನೀತನಾಗಿಯೇ ಉತ್ತರಿಸಿದನು :

"ಬ್ರಾಹ್ಮಣೋತ್ತಮ! ನನ್ನ ಬೀಗನು ಹೇಳಿಕಳುಹಿಸಿದ ಮಾತನ್ನು ನೀನು ಹೇಳಿರುವೆ. ಆ ಮಾತನ್ನು ನಾನೂ ಗ್ರಹಿಸಿದೆನು. ಅದಕ್ಕೆ ಪ್ರತ್ಯು

ತ್ತರವನ್ನು ನನ್ನ ದೂತನು ಹಿರಣ್ಯವರ್ಮರಾಜನಲ್ಲಿಗೆ ಹೋಗಿ ಹೇಳುತ್ತಾನೆ."

ಹೀಗೆ ಹೇಳಿ ಬ್ರಾಹ್ಮಣನನ್ನು ಸಂತೈಸಿದನಂತರ ದ್ರುಪದನು ಮಹಾತ್ಮನಾದ ಹಿರಣ್ಯವರ್ಮನಲ್ಲಿಗೆ ವೇದಪಾರಂಗತನಾದ ಬ್ರಾಹ್ಮಣನೊಬ್ಬನನ್ನು ದೂತನನ್ನಾಗಿ ಕಳುಹಿಸಿಕೊಟ್ಟನು. ಚತುರನಾದ ಆ ಬ್ರಾಹ್ಮಣನು ದಶಾರ್ಣರ ಅಧಿಪತಿಯ ಸಮೀಪಕ್ಕೆ ಹೋಗಿ ದ್ರುಪದನು ಹೇಳಿಕಳುಹಿಸಿದ ಸಂದೇಶವನ್ನು ಯಥಾವತ್ತಾಗಿ ವಿವರಿಸಿ ಹೇಳಿದನು :

'ತಾವು ದಯಮಾಡಿ ರಾಜಧಾನಿಗೆ ಬನ್ನಿರಿ. ನನ್ನ ಮಗನನ್ನು ಪರೀಕ್ಷಿಸಿರಿ. ನನಗಿರುವವನು ಕುಮಾರನೇ ಹೊರತು ಕುಮಾರಿಯಲ್ಲ. ಯಾವನೋ ಒಬ್ಬನು ತಮಗೆ ಈ ವಿಷಯದಲ್ಲಿ ಸುಳ್ಳನ್ನೇ ವರದಿಮಾಡಿಬಿಟ್ಟಿದ್ದಾನೆ. ಸುಳ್ಳುಸುದ್ದಿಯಲ್ಲಿ ತಾವು ವಿಶ್ವಾಸವನ್ನಿಡುವ ಕಾರಣವಿಲ್ಲ.'

ಹಿರಣ್ಯವರ್ಮನಿಗೆ ಪುನಃ ಆ ವಿಷಯದಲ್ಲಿ ಭ್ರಾಂತಿಯುಂಟಾಯಿತು. ಹಿಂದೆ ಹಲವುಬಾರಿ ಅನೇಕರಿಂದ ಅವನು ಶಿಖಂಡಿನಿಯನ್ನು ಪರೀಕ್ಷಿಸಿ ಅವಳು ಹೆಣ್ಣೆಂಬುದನ್ನು ನಿರ್ಧಾರಮಾಡಿಕೊಂಡಿದ್ದನು. ಮೇಲಾಗಿ ತನ್ನ ಮಗಳೂ ತಾನು ಹೆಣ್ಣೊಬ್ಬಳನ್ನೇ ಮದುವೆಯಾಗಿರುವೆನೆಂದೂ ಸ್ಪಷ್ಟಪಡಿಸಿದ್ದಳು. ಆದರೆ ಈಗ ಪುನಃ ದ್ರುಪದನು ತನ್ನ ಮಗನನ್ನು ಪರೀಕ್ಷಿಸಬಹುದೆಂದೂ ಹೇಳಿಕಳುಹಿಸಿದ್ದಾನೆ.

ದ್ರುಪದನ ಮಾತನ್ನು ಕೇಳಿದನಂತರ ಹಿರಣ್ಯವರ್ಮನು ಕ್ಷಣಕಾಲ ಯೋಚಿಸಿ ಮತ್ತೊಮ್ಮೆ ಪರೀಕ್ಷಿಸಿಯೇ ಬಿಡೋಣವೆಂಬ ನಿರ್ಧಾರಕ್ಕೆ ಬಂದವನಾಗಿ–ಶಿಖಂಡಿಯು ಪುರುಷನೇ ಅಥವಾ ಸ್ತ್ರೀಯೇ-ಎಂಬುದನ್ನು ತಿಳಿದುಬರುವ ಸಲುವಾಗಿ ಚಾರುರೂಪಿಣಿಯಾದ ಶ್ರೇಷ್ಠಯುವತಿಯರನ್ನು ಕಳುಹಿಸಿಕೊಟ್ಟನು.

ಹಿರಣ್ಯವರ್ಮನಿಂದ ಶಿಖಂಡಿಯ ಬಳಿಗೆ ಕಳುಹಿಸಲ್ಪಟ್ಟ ಯುವತಿಯರು ನಿಜಾಂಶವನ್ನು ತಿಳಿದುಕೊಂಡು ಸುಪ್ರೀತಮನಸ್ಕರಾಗಿ ತಮ್ಮ ರಾಜನನ್ನು ಸಂಧಿಸಿ ಎಲ್ಲ ವಿಷಯಗಳನ್ನೂ ಹೇಳಿದರು. ಮಹಾನುಭಾವ

ನಾದ ಶಿಖಂಡಿಯು ಪುರುಷನೆಂಬುದನ್ನು ಹಿರಣ್ಯವರ್ಮನಿಗೆ ಸ್ಪಷ್ಟಪಡಿಸಿದರು.

ಪರೀಕ್ಷೆಯ ಫಲಿತಾಂಶದಿಂದಾಗಿ ಹಿರಣ್ಯವರ್ಮನಿಗೆ ಮಹಾನಂದ ವಾಯಿತು. ತನ್ನ ಸಂಬಂಧಿಯಾದ ದ್ರುಪದನನ್ನು ಸಂಧಿಸಿ ಯಥೋಚಿತವಾದ ಮಾತುಗಳನ್ನಾಡಿ ಕಾಂಪಿಲ್ಯದಲ್ಲಿಯೇ ಸ್ವಲ್ಪಕಾಲ ವಾಸವಾಗಿದ್ದನು. ಶಿಖಂಡಿಯ ವಿಷಯದಲ್ಲಿ ಪ್ರಸನ್ನನಾದ ಹಿರಣ್ಯವರ್ಮನು ತನ್ನ ಅಳಿಯನಿಗೆ ಅಪಾರವಾದ ಐಶ್ವರ್ಯವನ್ನು ಬಳುವಳಿಯಾಗಿ ಕೊಟ್ಟನು. ಆನೆಗಳನ್ನೂ, ಕುದುರೆಗಳನ್ನೂ, ಹಸುಗಳನ್ನೂ, ದಾಸ-ದಾಸಿಯರನ್ನೂ ಹಿರಣ್ಯವರ್ಮನು ಶಿಖಂಡಿಗೆ ಪಾರಿತೋಷಿಕವಾಗಿ ಕೊಟ್ಟನು. ಮಗಳು ತನ್ನ ಅಳಿಯನ ವಿಷಯದಲ್ಲಿ ಸುಳ್ಳುಹೇಳಿದುದುಕ್ಕಾಗಿ ಅವಳನ್ನು ಗದರಿಸಿ ಬುದ್ಧಿಹೇಳಿ, ದ್ರುಪದರಾಜನ ನಯ-ವಿನಯಪೂರ್ವಕವಾದ ಆತಿಥ್ಯವನ್ನು ಸ್ವೀಕರಿಸಿ ತನ್ನ ದೇಶಕ್ಕೆ ಹಿಂದಿರುಗಿದನು. ಸಂಶಯವನ್ನು ನಿವಾರಣೆಮಾಡಿಕೊಂಡು ಪ್ರೀತ ಮನಸ್ಕನಾಗಿ ರಾಜನಾದ ಹಿರಣ್ಯವರ್ಮನು ಸ್ವದೇಶಕ್ಕೆ ಪ್ರಯಾಣಮಾಡಲಾಗಿ ಶಿಖಂಡಿಗೂ ಬಹುಸಂತೋಷವಾಯಿತು.

ಅತ್ತಲಾಗಿ: ಸ್ವಲ್ಪಕಾಲಾನಂತರದಲ್ಲಿ ನರವಾಹನನಾದ ಕುಬೇರನು ಪ್ರಪಂಚಪರ್ಯಟನಮಾಡುತ್ತಾ ಸ್ಥೂಣಾಕರ್ಣನಿದ್ದ ಅರಣ್ಯಕ್ಕೂ ಆಗಮಿಸಿದನು. ಸ್ಥೂಣಾಕರ್ಣನ ಭವನದ ಮೇಲೆ ಆಕಾಶದಲ್ಲಿ ವಿಮಾನಸ್ಥನಾಗಿದ್ದ ಕುಬೇರನು ಯಕ್ಷಮುಖ್ಯನ ನಿವಾಸವನ್ನು ದಿಟ್ಟಿಸಿ ನೋಡಿದನು. ಆ ಭವನವು ಚಿತ್ರ-ವಿಚಿತ್ರವಾದ ಹಾರಗಳಿಂದ ಅಲಂಕೃತವಾಗಿದ್ದಿತು. ಲಾಮಂಚದ ಬೇರುಗಳಿಂದ ಪ್ರಾದುರ್ಭೂತವಾದ ಸುವಾಸನೆಯಿಂದಲೂ, ನಾನಾ ವಿಧವಾದ ಸುಗಂಧದ್ರವ್ಯಗಳಿಂದಲೂ, ಚಪ್ಪರಗಳಿಂದಲೂ ಮತ್ತು ತಳಿರು-ತೋರಣಗಳಿಂದಲೂ ಆ ವಾಸಗೃಹವು ಸುಶೋಭಿತವಾಗಿದ್ದಿತು ಮತ್ತು ಸರ್ವತ್ರ ಧೂಪಗಳಿಂದ ಧೂಪಿತವಾಗಿದ್ದಿತು. ಎಲ್ಲೆಡೆಗಳಲ್ಲಿಯೂ ಅಗ್ನಿಯಲ್ಲಿ ಧೂಪವನ್ನು ಹಾಕಿ ಉರಿಸುತ್ತಿದ್ದರು. ಯಕ್ಷಭವನವು ಧ್ವಜಪತಾಕೆಗಳಿಂದ ಸಮಲಂಕೃತವಾಗಿದ್ದಿತು. ಹಲ್ಲು ಮತ್ತು ನಾಲಿಗೆಗಳ ಸಹಕಾರದಿಂದ ಜಠರಾಗ್ನಿಗೆ ಹೋಮದ್ರವ್ಯವಾಗುವ ಭಕ್ಷ್ಯ (ಲಡ್ಡು ಮೊದಲಾದುವು), ಅನ್ನ, ಪೇಯ (ನಾನಾವಿಧವಾದ ಪಾನೀಯಗಳು), ಆಮಿಷ (ಮಾಂಸ) – ಇವು

ಗಳಿಂದ ಯಕ್ಷನ ಪ್ರಾಸಾದವು ಸಮೃದ್ಧವಾಗಿತ್ತು. ಅಂತಹ ಸುಂದರವಾದ ಭವನವನ್ನು ನೋಡಿದ ಕುಬೇರನು ಅಲ್ಲಿ ಸ್ವಲ್ಪಕಾಲವಾದರೂ ತಂಗಿರಬೇಕೆಂಬ ಆಶಯದಿಂದ ಧರೆಗಿಳಿದು ಅರಮನೆಯನ್ನು ಪ್ರವೇಶಿಸಿದನು. ಮಣಿ-ರತ್ನ-ಸುವರ್ಣಗಳ ಮಾಲೆಗಳಿಂದ ಸರ್ವತ್ರ ಸಮಲಂಕೃತವಾಗಿದ್ದ, ನಾನಾವಿಧವಾದ ಪುಷ್ಪಗಳ ವಾಸನೆಯಿಂದ ವ್ಯಾಪ್ತವಾಗಿದ್ದ, ಶುಚಿಗೊಳಿಸಿ ಸುಗಂಧಯುಕ್ತವಾದ ನೀರನ್ನು ನೆಲದ ಮೇಲೆ ಸಿಂಪಡಿಸಿದ್ದುದರಿಂದ ಬಹು ಆಹ್ಲಾದಕರವಾಗಿದ್ದ ಸ್ಥೂಣಾಕರ್ಣನ ನಿವಾಸಸ್ಥಾನವನ್ನು ನೋಡಿ ಯಕ್ಷಪತಿಯಾದ ಕುಬೇರನು ತನ್ನನ್ನನುಸರಿಸಿ ಬಂದಿದ್ದ ಯಕ್ಷಸೇವಕರೊಡನೆ ಹೇಳಿದನು :

"ಅಮಿತಪರಾಕ್ರಮಿಗಳೇ! ಸ್ಥೂಣಾಕರ್ಣನ ಈ ನಿವಾಸಸ್ಥಾನವು ಸರ್ವಪ್ರಕಾರದಿಂದಲೂ ಸಮಲಂಕೃತವಾಗಿ ಬಹಳ ಶೋಭಾಯಮಾನ ವಾಗಿದೆ. ಈ ಮನೆಯ ಸೌಂದರ್ಯವನ್ನು ನೋಡಿದರೆ ಅವನಿಲ್ಲಿಯೇ ವಾಸಮಾಡುತ್ತಿರುವನೆಂಬುದರಲ್ಲಿ ಸಂಶಯವೇ ಇಲ್ಲ. ಆದರೆ ನಾನೇ ಅವನ ಮನೆಗೆ ಬಂದಿದ್ದರೂ ಮಂದಬುದ್ಧಿಯಾದ ಅವನು ನನ್ನನ್ನು ಕಾಣಲು ಇದುವರೆಗೂ ಬರಲೇ ಇಲ್ಲ. ಇದಕ್ಕೆ ಕಾರಣವೇನಿರಬಹುದು? ನಾನು ಬಂದಿರುವ ವಿಷಯವು ಅವನಿಗೆ ತಿಳಿಯದೇ ಇಲ್ಲ. ನಾನಿಲ್ಲಿಗೆ ಬಂದಿರುವ ವಿಷಯವು ಅವನಿಗೆ ತಿಳಿದಿರಲೇಬೇಕು. ನಾನು ಬಂದಿರುವೆನೆಂಬ ವಿಷಯವು ತಿಳಿದಿದ್ದರೂ ಮಂದಾತ್ಮನಾದ ಅವನು ನನ್ನನ್ನು ಕಾಣಲು ಬಾರದಿರುವುದಕ್ಕೆ ಅವನಿಗೆ ಮಹಾಶಿಕ್ಷೆಯನ್ನೇ ವಿಧಿಸಬೇಕೆಂದು ನಾನು ಆಲೋಚಿಸುತ್ತಿದ್ದೇನೆ."

ರಾಜನೇ ಮನೆಗೆ ಬಂದರೂ ಮಾತನಾಡಿಸುವವನೇ ಇಲ್ಲವೆಂದರೆ ಕೋಪಬರುವುದು ಸ್ವಾಭಾವಿಕವಲ್ಲವೇ?

ಕೋಪಗೊಂಡಿದ್ದ ತಮ್ಮ ರಾಜನನ್ನು ಕುರಿತು ಅನುಯಾಯಿಗಳು ಹೇಳಿದರು :

"ಮಹಾರಾಜ! ದ್ರುಪದರಾಜನಿಗೆ ಶಿಖಂಡಿನೀ ಎಂಬ ಒಬ್ಬ ಮಗಳು ಹುಟ್ಟಿದ್ದಾಳೆ. ಯಕ್ಷನ ಈ ಮನೆಗೆ ಆಕಸ್ಮಿಕವಾಗಿ ಬಂದಿದ್ದ ಆ ಶಿಖಂಡಿನಿಗೆ ಯಾವುದೋ ಕಾರಣಕ್ಕಾಗಿ ಸ್ಥೂಣಾಕರ್ಣನು ತನ್ನ ಪುರುಷತ್ವವನ್ನು ಕೊಟ್ಟಿರುವನು. ಶಿಖಂಡಿನಿಯಲ್ಲಿದ್ದ ಸ್ತ್ರೀತ್ವವನ್ನು ತಾನು ವಿನಿಮಯ

ಮಾಡಿಕೊಂಡಿರುವನು. ಈ ಕಾರಣದಿಂದಾಗಿ ಸ್ಥೂಣಾಕರ್ಣನಿಂದು ಸ್ತ್ರೀಯಾಗಿ ಈ ಮನೆಯಲ್ಲಿದ್ದಾನೆ. ಸ್ತ್ರೀತ್ವವನ್ನು ಹೊಂದಿರುವ ಅವನು ಸ್ವಾಭಾವಿಕವಾದ ನಾಚಿಕೆಯಿಂದಲೇ ಅಂತಃಪುರದಿಂದ ಹೊರಬಂದಿರು ವುದಿಲ್ಲ. ಯದ್ಯಪಿ ಅವನಿಗೆ ನಿನ್ನ ಆಗಮನದ ವಿಷಯವು ತಿಳಿದಿದ್ದರೂ ಇದೇ ಕಾರಣದಿಂದವನು ನಿನ್ನ ಸಮೀಪಕ್ಕೆ ಬಂದಿಲ್ಲ. ಇದ್ದ ವಿಷಯವನ್ನು ಹೇಳಿಬಿಟ್ಟಿದ್ದೇವೆ. ಉಚಿತವೆನಿಸಿದ ರೀತಿಯಲ್ಲಿ ನೀನು ಏನು ಬೇಕಾದರೂ ಮಾಡಬಹುದಾಗಿದೆ. ನಿಮ್ಮ ವಿಮಾನವು ಇಲ್ಲಿಯೇ ಇರಬಹುದಲ್ಲವೇ?"

ಯಕ್ಷಸೇವಕರು ಹೇಳಿದ ಮಾತನ್ನು ಕೇಳಿ ಕುಬೇರನಿಗೆ ಕೋಪವೇ ಬಂದಿತು. 'ಈಗಲೇ ಸ್ಥೂಣಾಕರ್ಣನನ್ನು ಕರೆತನ್ನಿರಿ. ಅವನನ್ನು ಯಥಾಯೋಗ್ಯವಾಗಿ ಶಿಕ್ಷಿಸುತ್ತೇನೆ'–ಎಂದು ಗರ್ಜಿಸಿದನು. ಸೇವಕರು ಹಿಂದುಮುಂದು ನೋಡಿದರು. ಕುಬೇರನು ಪುನಃ ಪುನಃ ಸ್ಥೂಣನನ್ನು ಕರೆತರುವಂತೆ ಆಜ್ಞೆಮಾಡುತ್ತಲೇ ಇದ್ದನು.

ಕುಬೇರನಿಂದ ಆಹೂತನಾದ ಸ್ಥೂಣಾಕರ್ಣನು ಅನ್ಯಥಾ ಮಾರ್ಗವಿಲ್ಲದೇ ನಾಚಿಕೆಯಿಂದ ಕೂಡಿದವನಾಗಿ ಸ್ತ್ರೀರೂಪದಲ್ಲಿಯೇ ಕುಬೇರನ ಸಮೀಪಕ್ಕೆ ಬಂದುನಿಂತನು. ಸ್ಥೂಣಾಕರ್ಣನ ಸ್ತ್ರೀವೇಷವನ್ನು ಕಂಡೊಡನೆಯೇ ಕುಬೇರನ ಕೋಪವು ಉಲ್ಬಣಿಸಿತು. ವಿನಿಮಯದ ಕಾರಣವನ್ನು ಕೇಳುವಷ್ಟೂ ಅವನಿಗೆ ಸಹನೆಯಿರಲಿಲ್ಲ. ಸ್ಥೂಣಾಕರ್ಣನನ್ನು ಶಪಿಸಿಯೇ ಬಿಟ್ಟನು :

"ಗುಹ್ಯಕರೇ! ಈ ಪಾಪಿಷ್ಠನಾದ ಸ್ಥೂಣಾಕರ್ಣನಿಗೆ ಈಗಿರುವ ಸ್ತ್ರೀತ್ವವು ಶಾಶ್ವತವಾಗಿಯೇ ಇದ್ದುಬಿಡಲಿ."

ಕುಬೇರನು ಹೀಗೆ ತನ್ನ ಅನುಚರರಿಗೆ ಹೇಳಿದನಂತರ ಸ್ಥೂಣನನ್ನೇ ನಿರ್ದೇಶಿಸಿ ಹೇಳಿದನು :

"ಪಾಪಬುದ್ಧಿಯವನೇ! ನೀನು ಮಾಡಿದ ಈ ಕಾರ್ಯವು ಯಕ್ಷರೆಲ್ಲ ರನ್ನೂ ಅವಮಾನಿಸಿದಂತಾಗಿದೆ. ಪಾಪಕರ್ಮಿಯೇ! ಶಿಖಂಡಿನಿಗೆ ಪುರುಷತ್ವ ವನ್ನು ಕೊಟ್ಟು ನೀನು ಅವಳಲ್ಲಿದ್ದ ಸ್ತ್ರೀತ್ವವನ್ನು ಪಡೆದುಕೊಂಡೆಯಲ್ಲವೇ? ಈ ಕಾರ್ಯವು ಅವ್ಯವಹಾರ್ಯವಾದುದೆಂಬುದೂ ದುರ್ಬುದ್ಧಿಯವನಾದ

ನಿನಗೆ ತಿಳಿಯದೇ ಹೋಯಿತೇ? ಅವ್ಯವಹಾರ್ಯವಾದ, ಪ್ರಪಂಚದಲ್ಲಿ ಯಾರೂ ಮಾಡದ ಈ ಕಾರ್ಯವನ್ನು ಸ್ವೇಚ್ಛೆಯಿಂದ ಮಾಡಿದೆಯಾದ ಕಾರಣ ಇದು ಮೊದಲಾಗಿ ನೀನು ಸ್ತ್ರೀಯಾಗಿಯೇ ಇದ್ದುಬಿಡು. ಅವಳು ಪುರುಷನಾಗಿಯೇ ಇದ್ದುಬಿಡಲಿ."

ಕುಬೇರನ ಶಾಪವನ್ನು ಕೇಳಿ ಭೀತರಾದ ಯಕ್ಷರು ಸ್ಥೂಣಾಕರ್ಣನ ಸಲುವಾಗಿ ಕುಬೇರನನ್ನು ಅಡಿಗಡಿಗೂ ಪ್ರಾರ್ಥಿಸಿದರು :

"ದೇವದೇವ! ಕೋಪಗೊಳ್ಳಬೇಡ. ಪ್ರಸನ್ನನಾಗು. ಸ್ಥೂಣಾಕರ್ಣನನ್ನು ಈ ಘೋರಶಾಪದಿಂದ ವಿಮುಕ್ತಿಗೊಳಿಸು."

ತನ್ನ ಅನುಯಾಯಿಗಳು ಬಗೆ-ಬಗೆಯಾಗಿ ಪ್ರಾರ್ಥಿಸಿಕೊಂಡನಂತರ ಮಹಾತ್ಮನಾದ ಯಕ್ಷೇಂದ್ರನು ಸ್ಥೂಣಾಕರ್ಣನಿಗೆ ಕೊಟ್ಟ ಶಾಪವನ್ನು ಅಂತ್ಯಗೊಳಿಸುವ ಇಚ್ಛೆಯಿಂದ ಯಕ್ಷರೊಡನೆ ಈ ಮಾತುಗಳನ್ನಾಡಿದನು :

ಶಿಖಣ್ಡಿನೀ ಹತೇ ಯಕ್ಷಾಃ ಸ್ವಂ ರೂಪಂ ಪ್ರತಿಪತ್ಸ್ಯತೇ ।
ಸ್ಥೂಣೋ ಯಕ್ಷೋ ನಿರುದ್ವೇಗೋ ಭವತ್ವಿತಿ ಮಹಾಮನಾಃ ॥೫೦॥

"ಯಕ್ಷರೇ! ಶಿಖಂಡಿಯು ಹತನಾದನಂತರದಲ್ಲಿ ಸ್ಥೂಣಾಕರ್ಣನು ತಾನೀಗ ಶಿಖಂಡಿಗೆ ಕೊಟ್ಟಿರುವ ಪುಂರೂಪವನ್ನು ಪುನಃ ಪಡೆದುಕೊಳ್ಳುತ್ತಾನೆ. ಆದುದರಿಂದ ಇವನು ನಿರುದ್ವಿಗ್ನನಾಗಿರಲಿ. ಚಿಂತಿಸಬೇಕಾದ ಕಾರಣವಿಲ್ಲ."

ಮಹಾತ್ಮನಾದ, ಭಗವಂತನಾದ, ದೇವದೇವನಾದ ಯಕ್ಷರಾಜನು ಹೀಗೆ ಹೇಳಿ ಯಕ್ಷಗಣದಿಂದ ಸಂಪೂಜಿತನಾಗಿ ನಿಮಿಷಮಾತ್ರದಲ್ಲಿ ಅಭೀಷ್ಟ ಸ್ಥಳಕ್ಕೆ ಹೋಗುವ ಸಾಮರ್ಥ್ಯವನ್ನು ಹೊಂದಿದ್ದ ಅನುಚರರೊಡನೆ ಹೊರಟುಹೋದನು.

ಕುಬೇರನಿಂದ ಶಪ್ತನಾದ ಸ್ಥೂಣಾಕರ್ಣನು ತನ್ನ ಭವನದಲ್ಲಿಯೇ ವಾಸಮಾಡಿಕೊಂಡಿದ್ದನು. ಹಿಂದೆ ಸ್ಥೂಣಾಕರ್ಣನಿಗೆ ಕೊಟ್ಟಿದ್ದ ಭಾಷೆಯಂತೆ ಶಿಖಂಡಿಯು ತನ್ನ ಪುಂಸ್ತ್ವವನ್ನು ವಿನಿಮಯಮಾಡಿಕೊಳ್ಳುವ ಸಲುವಾಗಿ ಸ್ಥೂಣನ ಬಳಿಗೆ ಶೀಘ್ರವಾಗಿಯೇ ಆಗಮಿಸಿದನು. ಬಂದವನೇ ಸ್ಥೂಣನನ್ನು ಕುರಿತು ವಿನಮ್ರನಾಗಿ ಹೇಳಿದನು :

"ಭಗವನ್! ನಾನು ಕೊಟ್ಟಿದ್ದ ಭಾಷೆಯಂತೆ ನಾನಿಲ್ಲಿಗೆ ಬಂದಿದ್ದೇನೆ."

ಶಿಖಂಡಿಯ ಮಾತನ್ನು ಕೇಳಿದ ಸ್ಥೂಣನು ವಿನಿಮಯದ ಪ್ರಸ್ತಾಪವನ್ನೇ ಮಾಡದೆ ಅವನೊಡನೆ ಹೇಳಿದನು :

"ರಾಜಕುಮಾರ! ನಿನ್ನ ವಿಷಯದಲ್ಲಿ ನಾನು ಸುಪ್ರೀತನಾಗಿರುತ್ತೇನೆ." ಕೇವಲ ಒಂದು ಬಾರಿಯಲ್ಲ ; ನಾಲ್ಕಾರು ಬಾರಿ ಸ್ಥೂಣನು ಇದೇ ಮಾತನ್ನೇ ಹೇಳಿದನು.

ಶಿಖಂಡಿಯಲ್ಲಿ ಕುಟಿಲತೆಯಿರಲಿಲ್ಲ. ಕೊಟ್ಟ ಮಾತನ್ನುಳಿಸಿಕೊಳ್ಳಲು ಸಹಜವಾಗಿಯೇ ಅವನು ಸ್ಥೂಣನ ಬಳಿಗೆ ಬಂದಿದ್ದನು. ಇಂತಹ ಸರಳ ಸ್ವಭಾವದ ಶಿಖಂಡಿಗೆ ಸ್ಥೂಣನು ಸ್ತ್ರೀ-ಪುಂಸ್ತ್ವದ ವಿನಿಮಯಾನಂತರ ನಡೆದ ವೃತ್ತಾಂತವೆಲ್ಲವನ್ನೂ ವಿವರಿಸಿ ಹೇಳಿದನು :

"ರಾಜಕುಮಾರ! ನಾನು ನಿನಗೆ ನನ್ನ ಪುಂಸ್ತ್ವವನ್ನು ಕೊಟ್ಟುದರ ಪರಿಣಾಮವಾಗಿ ಕುಬೇರನಿಂದ ಶಪ್ತನಾಗಿದ್ದೇನೆ. ಆದುದರಿಂದ ನಿನ್ನಲ್ಲಿ ನಿಕ್ಷಿಪ್ತವಾಗಿರುವ ಪುಂಸ್ತ್ವವನ್ನು ನಾನು ಪುನಃ ಪಡೆದುಕೊಳ್ಳಲು ಸಾಧ್ಯವಿಲ್ಲ. ನೀನಿನ್ನು ಹೋಗಿಬಾ. ನಿನ್ನ ಇಚ್ಛಾನುಸಾರ ಯಥಾಸುಖವಾಗಿ ಲೋಕದಲ್ಲಿ ಸಂಚರಿಸು. ಸುಖವಾಗಿ ಬಾಳು. ಹೀಗೆಯೇ ಆಗಬೇಕೆಂಬುದು ವಿಧಿಯಿಂದ ಹಿಂದೆಯೇ ನಿಶ್ಚಿತವಾಗಿಯೇ ಇರಬಹುದೆಂದು ನಾನು ಭಾವಿಸುತ್ತೇನೆ. ಏಕೆಂದರೆ : ನೀನು ನನ್ನಿಂದ ಪುಂಸ್ತ್ವವನ್ನು ಪಡೆದುಕೊಂಡು ಹೊರಟುಹೋದೊಡನೆಯೇ ಕುಬೇರನ ದರ್ಶನವಾಗಬೇಕೆ? ಇದೇ ಕಾರಣಕ್ಕಾಗಿಯೇ ಅವನು ಕುಪಿತನಾಗಿ ನನಗೆ ಸ್ತ್ರೀತ್ವವೇ ಸ್ಥಿರವಾಗಿ ಉಳಿಯುವಂತೆ ಶಾಪಕೊಡಬೇಕೇ? ರಾಜಕುಮಾರ! ಇವೆಲ್ಲವೂ ವಿಧಿವಿಹಿತವೇ ಸರಿ. ಇದನ್ನು ಮೀರಿ ನಡೆಯಲು ಯಾರಿಂದಲೂ ಸಾಧ್ಯವಾಗುವುದಿಲ್ಲ. ನೀನು ಕೊಟ್ಟ ಭಾಷೆಗೆ ಅನುಸಾರವಾಗಿ ಸ್ತ್ರೀತ್ವವನ್ನು ಪಡೆಯಲು ಬಂದುದಕ್ಕೆ ಪ್ರೀತನಾಗಿದ್ದೇನೆ. ಆದರೆ ನಿನ್ನ ಆಯುಷ್ಯಪೂರ್ತಿಯಾಗಿ ಪುರುಷನಾಗಿಯೇ ಇರುವ ಯೋಗವು ನಿನಗಿದೆ. ಆದುದರಿಂದ ಸಂತೋಷದಿಂದ ಹೋಗಿಬಾ, ಕುಮಾರ!"

ಸ್ಥೂಣಾಕರ್ಣನು ಹೀಗೆಂದು ಹೇಳಿದನಂತರ ಮಹಾನಂದತುಂದಿಲನಾದ ಶಿಖಂಡಿಯು ರಾಜಧಾನಿಗೆ ಹಿಂದಿರುಗಿದನು. ನಡೆದ ವೃತ್ತಾಂತವನ್ನು ಮಗನಿಂದ ಕೇಳಿ ದ್ರುಪದನೂ ಆನಂದಭರಿತನಾದನು. ನಾನಾವಿಧವಾದ ಗಂಧ-ಮಾಲ್ಯಾದಿಗಳಿಂದಲೂ ಹೇರಳವಾದ ಧನದಿಂದಲೂ ದ್ರುಪದನು ಶಿಖಂಡಿಯೊಡನೆ ಬ್ರಾಹ್ಮಣರನ್ನು ಸಂಪೂಜಿಸಿದನು. ದೇವತೆಗಳನ್ನೂ ಅಶ್ವತ್ಥಾದಿವೃಕ್ಷಗಳನ್ನೂ ಪೂಜಿಸಿದನು. ನಾಲ್ಕು ಬೀದಿಗಳು ಸೇರಿರುವ ಸ್ಥಳದಲ್ಲಿದ್ದ ಚತುಷ್ಪಥಾಧಿದೇವತೆಗಳನ್ನೂ ಪೂಜಿಸಿದನು. ತನ್ನ ಮಗಳಿಗೆ ಆಮರಣಾಂತವಾಗಿ ಪುರುಷತ್ವವು ಪ್ರಾಪ್ತವಾದುದಕ್ಕಾಗಿ ಮಿತ್ರ-ಬಾಂಧವ ಸಹಿತನಾದ ದ್ರುಪದನು ಅಮಿತವಾದ ಸಂತೋಷವನ್ನು ಪಡೆದನು. ಹಿಂದೆ ಹೆಣ್ಣುಮಗುವಾಗಿ ಹುಟ್ಟಿ ವಿಧಿನಿಯಮದಂತೆ ಅಥವಾ ಮಹಾದೇವನ ಅನುಗ್ರಹದಂತೆ ಪುರುಷನಾಗಿ ಪರಿವರ್ತಿತನಾದ ತನ್ನ ಮಗನನ್ನು ದ್ರುಪದನು ದ್ರೋಣಾಚಾರ್ಯರ ಬಳಿಗೆ ಶಿಷ್ಯವೃತ್ತಿಗಾಗಿ (ಧನುರ್ವಿದ್ಯೆಯನ್ನು ಕಲಿಯುವ ಸಲುವಾಗಿ) ಕಳುಹಿಸಿಕೊಟ್ಟನು.

ದುರ್ಯೋಧನ! ಶಿಖಂಡಿಯು ನಿಮ್ಮೊಡನೆಯೂ ಮತ್ತು ದ್ರುಪದನ ಮತ್ತೊಬ್ಬ ಮಗನಾದ ಧೃಷ್ಟದ್ಯುಮ್ನನೊಡನೆಯೂ ಕೂಡಿಕೊಂಡು ಗುರುಗಳಾದ ದ್ರೋಣರಿಂದ ಗ್ರಹಣ, ಧಾರಣ, ಪ್ರಯೋಗ ಮತ್ತು ಪ್ರತೀಕಾರಗಳೆಂಬ ನಾಲ್ಕು ಪಾದಗಳಿಂದ ಕೂಡಿದ ಧನುರ್ವೇದವನ್ನು ಪೂರ್ಣವಾಗಿ ಅಧ್ಯಯನಮಾಡಿದನು.

ನಾನು ಅಂಬೆಯ ಪೂರ್ಣವೃತ್ತಾಂತವನ್ನು ತಿಳಿದುಕೊಳ್ಳುವ ಸಲುವಾಗಿ ಹಿಂದೆಯೇ ಹೇಳಿದಂತೆ ಎಲ್ಲ ಕಡೆಗಳಿಗೂ ನಿಪುಣರಾದ ಗೂಢಚಾರರನ್ನು ಕಳುಹಿಸಿಕೊಟ್ಟಿದ್ದೆನು. ಜಡರ, ಸೋಮಾರಿಗಳ ವೇಷಗಳನ್ನೂ ಕುರುಡರ ಮತ್ತು ಕಿವುಡರ ವೇಷಗಳನ್ನೂ ಧರಿಸಿ ದ್ರುಪದನ ರಾಜ್ಯದಲ್ಲಿಯೂ ನನ್ನ ಗೂಢಚಾರರು ಸಂಚರಿಸುತ್ತಿದ್ದರು. ಅವರಿಂದ ನಾನು ಈ ವಿಷಯಗಳನ್ನು ಯಥಾವತ್ತಾಗಿ ಸಂಗ್ರಹಿಸಿದೆನು.

ದುರ್ಯೋಧನ! ಈ ರೀತಿಯಲ್ಲಿ ರಥಿಗಳಲ್ಲಿ ಶ್ರೇಷ್ಠನೆಂದು ಈಗ ಪ್ರಸಿದ್ಧನಾಗಿರುವ ದ್ರುಪದನ ಮಗನಾದ ಶಿಖಂಡಿಯು ಮೊದಲು ಹೆಣ್ಣಾಗಿ

ಹುಟ್ಟಿ ಅನಂತರ ಪುರುಷನಾದನು. ಕಾಶೀಪತಿಯ ಹಿರಿಯಮಗಳಾದ ಅಂಬಾ ಎಂದು ಪ್ರಸಿದ್ಧಳಾಗಿದ್ದ ಕನ್ಯೆಯೇ ಪಾಂಚಾಲರ ಕುಲದಲ್ಲಿ ದ್ರುಪದನಿಗೆ ಮಗಳಾಗಿ ಹುಟ್ಟಿ ಮೊದಲು ಶಿಖಂಡಿನಿಯಾಗಿದ್ದು ಅನಂತರ ಶಿಖಂಡಿಯಾದಳು. ಸ್ತ್ರೀಯೇ ಪುರುಷಾಕಾರವನ್ನು ಹೊಂದಿರುವಳೆಂದು ನನಗೆ ಸಂಪೂರ್ಣವಾಗಿ ತಿಳಿದಿರುವುದರಿಂದ ನಾನು, ಧನುಷ್ಪಾಣಿಯಾಗಿ ಯುದ್ಧಮಾಡಲು ಸಿದ್ಧನಾಗಿ ನಿಲ್ಲುವ ಆ ಶಿಖಂಡಿಯನ್ನು ಮುಹೂರ್ತ ಮಾತ್ರವಾದರೂ ನೋಡುವುದೂ ಇಲ್ಲ; ಅವನ ಮೇಲೆ ಬಾಣವನ್ನು ಪ್ರಯೋಗಿಸುವುದೂ ಇಲ್ಲ. ಇದು ನನ್ನ ವ್ರತವಾಗಿದೆ. ನಾನು ಮಾಡಿರುವ ಈ ಪ್ರತಿಜ್ಞೆಯು ಲೋಕವಿದಿತವೂ ಆಗಿದೆ.

**ಸ್ತ್ರಿಯಾಂ ಸ್ತ್ರೀಪೂರ್ವಕೇ ಚೈವ ಸ್ತ್ರೀನಾಮ್ನಿ ಸ್ತ್ರೀಸ್ವರೂಪಿಣಿ ।**
**ನ ಮುಞ್ಚೇಯಮಹಂ ಬಾಣಮಿತಿ ಕೌರವನನ್ದನ ॥೬೬॥**

ಕುರುನಂದನನೇ! ಹೆಂಗಸಿನ ಮೇಲೆ, ಹಿಂದೆ ಹೆಂಗಸಾಗಿದ್ದವನ ಮೇಲೆ, ಹೆಂಗಸರ ಹೆಸರನ್ನು ಇಟ್ಟುಕೊಂಡಿರುವವನ ಮೇಲೆ, ಹೆಂಗಸಿನ ರೂಪವಿರುವವನ ಮೇಲೆ– ಬಾಣವನ್ನು ಬಿಡಕೂಡದೆಂಬುದು ನನ್ನ ಪ್ರತಿಜ್ಞೆಯಾಗಿದೆ. ಆದುದರಿಂದಲೇ ಶಿಖಂಡಿಯನ್ನು ನಾನು ವಧಿಸುವುದಿಲ್ಲ. ಅವನು ಮೊದಲು ಹೆಣ್ಣಾಗಿದ್ದನೆಂಬ ಜನ್ಮರಹಸ್ಯವು ನನಗೆ ಪೂರ್ಣವಾಗಿ ತಿಳಿದಿದೆ. ಈ ಕಾರಣದಿಂದಲೇ ಯುದ್ಧದಲ್ಲಿ ನನ್ನನ್ನು ಕೊಲ್ಲಲು ಬಂದರೂ ನಾನು ಅವನನ್ನು ಸಂಹರಿಸುವುದಿಲ್ಲ. ಒಂದು ವೇಳೆ ಭೀಷ್ಮನೇನಾದರೂ (ನಾನೇನಾದರೂ) ಸ್ತ್ರೀಪೂರ್ವನಾದ, ಅವನನ್ನು ಕೊಂದದ್ದೇ ಆದರೆ ಸತ್ಪುರುಷರು ಭೀಷ್ಮನನ್ನು (ನನ್ನನ್ನು) ನಿಂದಿಸುತ್ತಾರೆ. ಈ ಕಾರಣದಿಂದ ಅವನು ರಣಾಂಗಣದಲ್ಲಿ ನನ್ನೆದುರಾಗಿಯೇ ಬಂದು ನಿಂತರೂ ನಾನವನನ್ನು ಸಂಹರಿಸುವುದಿಲ್ಲ."

ಜನಮೇಜಯ! ಭೀಷ್ಮನು ಹೇಳಿದ ಅಮ್ಬೋಪಾಖ್ಯಾನವನ್ನು ಕ್ಷಣಕಾಲ ಆಮೂಲಾಗ್ರವಾಗಿ ಸ್ಮರಿಸಿದ ದುರ್ಯೋಧನನು, ಭೀಷ್ಮನು ಶಿಖಂಡಿಯನ್ನು ಸಂಹರಿಸದಿರುವುದೇ ಉಚಿತವೆಂದು ಭಾವಿಸಿದನು.

೧೯೨ನೆಯ ಅಧ್ಯಾಯವು ಮುಗಿಯಿತು.

೧೯೩ನೆಯಅಧ್ಯಾಯ ಅಮ್ಬೋಪಾಖ್ಯಾನಪರ್ವ(ಮುಂದುವರಿದಿದೆ)

## ದುರ್ಯೋಧನನು ಪ್ರಶ್ನಿಸಲಾಗಿ ಭೀಷ್ಮಾದಿಗಳು ತಮ್ಮ-ತಮ್ಮ ಶಕ್ತಿ-ಸಾಮರ್ಥ್ಯಗಳನ್ನು ವರ್ಣಿಸಿದುದು

ಮಹಾರಾಜ! ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಧೃತರಾಷ್ಟ್ರಮಹಾರಾಜ! ರಾತ್ರಿಯು ಕಳೆದು ಬೆಳಗಾಯಿತು. ನಿತ್ಯಕರ್ಮಗಳನ್ನು ಮುಗಿಸಿಕೊಂಡು ಭೀಷ್ಮನ ಬಳಿಗೆ ಬಂದ ದುರ್ಯೋಧನನು ಸೇನೆಯ ಮಧ್ಯದಲ್ಲಿ ಪುನಃ ಪ್ರಶ್ನಿಸತೊಡಗಿದನು :

"ಗಾಂಗೇಯ! ಯುಧಿಷ್ಠಿರನ ಸಲುವಾಗಿ ಯುದ್ಧಮಾಡಲು ಸಿದ್ಧವಾಗಿರುವ ಮಹಾಸೇನೆಯು ಸಮೃದ್ಧವಾದ ನರ-ನಾಗಾಶ್ವಗಳಿಂದ ಕೂಡಿದೆ. ಮಹಾರಥರಿಂದ ಸಮಾಕುಲವಾಗಿದೆ. ಲೋಕಪಾಲಸಮರಾದ, ಮಹಾಬಲರಾದ, ಮಹಾಧನುರ್ಧರರಾದ, ಧೃಷ್ಟದ್ಯುಮ್ನಪುರಸ್ಸರರಾದ, ಭೀಮಾರ್ಜುನಪ್ರಭೃತಿಗಳಾದ ವೀರಯೋಧರಿಂದ ಸಂರಕ್ಷಿತವಾಗಿದೆ. ಉಕ್ಕಿಬರುತ್ತಿರುವ ಸಮುದ್ರದೋಪಾದಿಯಲ್ಲಿ ಆ ಸೇನೆಯು ಅಪ್ರಧೃಷ್ಯವಾಗಿ ಜಯಿಸಲು ಅಸಾಧ್ಯವಾಗಿಯೂ, ನಿರೋಧಿಸಲು ಅಶಕ್ಯವಾಗಿಯೂ ಇದೆ. ಮುಂದೆ ನಡೆಯಲಿರುವ ಮಹಾಯುದ್ಧದಲ್ಲಿ ಆ ಸೇನಾಸಮುದ್ರವು ದೇವತೆಗಳಿಂದಲೂ ಕದಲಿಸಲಶಕ್ಯವಾಗಿದೆ. ಗಾಂಗೇಯ! ಮಹಾದ್ಯುತೇ! ಎಷ್ಟು ದಿವಸಗಳಲ್ಲಿ ನೀನು ಆ ಅಪಾರಸೇನೆಯನ್ನು ಸಂಪೂರ್ಣವಾಗಿ ವಿಧ್ವಂಸನಮಾಡಬಲ್ಲೆ? ಅದೇ ಸೈನ್ಯವನ್ನು ವಿಧ್ವಂಸನಗೊಳಿಸಲು ಆಚಾರ್ಯದ್ರೋಣರಿಗೆ ಎಷ್ಟು ದಿವಸಗಳು ಬೇಕಾಗಬಹುದು? ಮಹಾಬಲರಾದ ಕೃಪರು ಎಷ್ಟು ದಿವಸಗಳಲ್ಲಿ ಆ ಸೇನೆಯನ್ನು ನಿರ್ನಾಮ ಮಾಡುವರು? ಸಮರಶ್ಲಾಘಿಯಾದ ಕರ್ಣನಿಗೆ ಅದನ್ನು ನೆಲಸಮಗೊಳಿಸಲು ಎಷ್ಟು ದಿನ ಹಿಡಿಸೀತು? ಬ್ರಾಹ್ಮಣಶ್ರೇಷ್ಠನಾದ, ದ್ರೋಣಪುತ್ರನಾದ ಅಶ್ವತ್ಥಾಮನು ಆ ಸೇನಾಸಾಗರವನ್ನು ಎಷ್ಟು ದಿವಸಗಳಲ್ಲಿ ಶೋಷಿಸಿಯಾನು? ನನ್ನ ಸೈನ್ಯದಲ್ಲಿರುವ ನೀವೆಲ್ಲರೂ ಮಹಾಸ್ತ್ರಗಳನ್ನು ತಿಳಿದವರಾಗಿರುತ್ತೀರಿ.

ಪಿತಾಮಹ! ಈ ವಿಷಯವನ್ನು ನಾನು ತಿಳಿದುಕೊಳ್ಳುವ ಇಚ್ಛೆಯಿಂದಿರುತ್ತೇನೆ. ಇದನ್ನು ತಿಳಿದುಕೊಳ್ಳಬೇಕೆಂಬ ಕುತೂಹಲವು ಅನೇಕ

ದಿವಸಗಳಿಂದಲೂ ನನ್ನ ಮನಸ್ಸಿನಲ್ಲಿ ನೆಟ್ಟುಬಿಟ್ಟಿದೆ. ಈ ರಹಸ್ಯವಿಷಯವನ್ನು ಹೇಳಲು ನೀನೇ ಸಮರ್ಥನಾಗಿರುವೆ.''

"ಕುರುಶ್ರೇಷ್ಠನೇ! ಶತ್ರುಗಳ ಬಲಾಬಲಗಳನ್ನು ಕೇಳಿ ತಿಳಿದುಕೊಳ್ಳುತ್ತಿರುವ ನೀನು ನಿನ್ನ ಪಕ್ಷದವರ ಬಲಾಬಲಗಳನ್ನು ತಿಳಿದುಕೊಳ್ಳಲು ಯತ್ನಿಸಿರುವುದು ಯೋಗ್ಯವಾಗಿಯೇ ಇದೆ. ದುರ್ಯೋಧನ! ನನ್ನ ಶಕ್ತಿಯ ಆಧಿಕ್ಯವೆಷ್ಟು? ನನಗೆ ಎಷ್ಟು ಹೆಚ್ಚಿನ ಶಕ್ತಿಯಿದೆ? ನನ್ನ ಶಸ್ತ್ರಗಳು ಎಷ್ಟು ವೀರ್ಯವತ್ತಾಗಿವೆ ಮತ್ತು ನನ್ನ ಈ ಎರಡು ಭುಜಗಳಲ್ಲಿರುವ ಶಕ್ತಿಯೆಷ್ಟು?–ಈ ಎಲ್ಲ ವಿಷಯಗಳನ್ನೂ ಹೇಳುವೆನು, ಕೇಳು. ಸಾಧಾರಣ ರಾದ ಯೋಧರೊಡನೆ ಋಜುತ್ವದಿಂದಲೇ ಯುದ್ಧಮಾಡಬೇಕು. ವಂಚನೆಯ ಯುದ್ಧವನ್ನು ಮಾಡಬಾರದು. ಯಾರು ಮಾಯಾವಿಗಳಾಗಿರುವರೋ ಅವರೊಡನೆ ಮಾಯಾಯುದ್ಧವನ್ನೇ ಮಾಡಬೇಕು. ಧರ್ಮಶಾಸ್ತ್ರವು ಇದನ್ನು ಸ್ಪಷ್ಟಪಡಿಸಿದೆ.

ಮಹಾಭಾಗನೇ! ನಾನು ಮೊದಲು ಪ್ರತಿನಿತ್ಯವೂ ಎಷ್ಟೆಷ್ಟು ಸೈನ್ಯವನ್ನು ಎಷ್ಟೆಷ್ಟು ಸಂಖ್ಯೆಯಲ್ಲಿ ಕೊಲ್ಲಬಹುದೆಂಬುದನ್ನು ವಿಭಾಗಮಾಡಿಕೊಂಡು ತದನುಸಾರವಾಗಿ ಪ್ರತಿನಿತ್ಯವೂ ಪಾಂಡವರ ಸೈನ್ಯವನ್ನು ಸಂಹಾರ ಮಾಡುತ್ತೇನೆ. ಒಂದು ದಿವಸಕ್ಕೆ ಹತ್ತುಸಾವಿರ ಯೋಧರು ಮತ್ತು ಒಂದು ಸಾವಿರ ರಥಿಕರು ನನ್ನ ಭಾಗವಾಗಬಹುದೆಂದು ನಾನು ಭಾವಿಸಿದ್ದೇನೆ. ಇಷ್ಟನ್ನು ನಾನು ನಿರ್ಮೂಲಮಾಡಬಲ್ಲೆನು. ಸರ್ವದಾ ಯುದ್ಧಸನ್ನದ್ಧನಾಗಿರುತ್ತಿದ್ದು ಈ ಸಂಖ್ಯಾವಿಧಾನದಿಂದ ಒಂದು ದಿವಸಕ್ಕೆ ಹತ್ತುಸಾವಿರ ಯೋಧರನ್ನೂ ಒಂದು ಸಾವಿರ ರಥಿಕರನ್ನೂ ಸಂಹರಿಸುತ್ತಿದ್ದರೆ–ಆ ಅಪಾರಸೈನ್ಯವನ್ನೂ ಸಂಹಾರ ಮಾಡಲು ಎಷ್ಟು ದಿವಸಗಳು ಬೇಕಾಗುವುವೋ ಅಷ್ಟೇ ದಿವಸಗಳಲ್ಲಿಯೇ ಆ ಮಹಾಸೈನ್ಯವನ್ನು ನಾನು ನಾಶಮಾಡಬಲ್ಲೆನು. ಇದು ಸಾಧಾರಣವಾದ ರೀತಿಯಲ್ಲಿ ಮಾಡುವ ಯುದ್ಧದಲ್ಲಿ ಶತ್ರುಸಂಹಾರಕಾಲವಾಗಿರುತ್ತದೆ.

ಒಂದು ವೇಳೆ ನಾನೇನಾದರೂ, ಲಕ್ಷಸೈನಿಕರನ್ನೂ ಏಕಕಾಲದಲ್ಲಿ ಸಂಹರಿಸುವ ಸಾಮರ್ಥ್ಯವುಳ್ಳ ನನ್ನಲ್ಲಿರುವ ಮಹಾಸ್ತ್ರಗಳನ್ನು ಪ್ರಯೋಗಿ

ಸಿದ್ಧೇ ಆದರೆ–ಪಾಂಡವರ ಆ ಮಹಾಸೇನೆಯನ್ನು ಒಂದು ಮಾಸದ ಅವಧಿಯಲ್ಲಿಯೇ ಸಂಹಾರಮಾಡಬಲ್ಲೆನು."

ಭೀಷ್ಮನು ತನ್ನ ಶಕ್ತಿಯೆಷ್ಟೆಂಬುದನ್ನು ಹೇಳಿಕೊಂಡನೇ ಹೊರತು ದ್ರೋಣರ ವಿಷಯದಲ್ಲಿ ಅವನೇನೂ ಹೇಳಲಿಲ್ಲ.

ಸಂಜಯನು ಧೃತರಾಷ್ಟ್ರನನ್ನು ಕುರಿತು ಹೇಳುತ್ತಾನೆ :

"ಮಹಾರಾಜ! ಭೀಷ್ಮನ ಮಾತನ್ನು ಕೇಳಿ ಭೀಷ್ಮನ ಶಕ್ತಿಯ ಪರಿಮಿತಿಯನ್ನು ತಿಳಿದುಕೊಂಡನಂತರ ದುರ್ಯೋಧನನು ಅಂಗಿರಸರಲ್ಲಿ ಶ್ರೇಷ್ಠರಾದ ದ್ರೋಣರನ್ನೇ ಪ್ರಶ್ನಿಸಿದನು :

"ಆಚಾರ್ಯರೇ! ತಾವೊಬ್ಬರೇ ಯುದ್ಧಮಾಡಿದರೆ ಎಷ್ಟು ದಿವಸಗಳ ಅವಧಿಯಲ್ಲಿ ಪಾಂಡುಪುತ್ರನಾದ ಯುಧಿಷ್ಠಿರನ ಸೈನಿಕರನ್ನು ಸಂಪೂರ್ಣವಾಗಿ ಸಂಹರಿಸಬಲ್ಲಿರಿ?"

ದುರ್ಯೋಧನನ ಪ್ರಶ್ನೆಯನ್ನು ಕೇಳಿ ನಸುನಗುತ್ತಾ ದ್ರೋಣರು ಉತ್ತರಿಸಿದರು :

"ಮಹಾಬಾಹುವೇ! ನಾನೀಗಲೇ ಮುದುಕನಾಗಿಬಿಟ್ಟಿದ್ದೇನೆ. ನನ್ನ ಪ್ರಾಣಶಕ್ತಿಯು ಕುಂದಿದೆ. ಕೈಗಳಲ್ಲಿ ತ್ರಾಣವೇ ಇಲ್ಲ. ನಿಸ್ಸತ್ತ್ವನಾಗಿದ್ದೇನೆ. ಆದರೂ ಶಸ್ತ್ರಾಗ್ನಿಯಿಂದ ಪಾಂಡವರ ಅಪಾರಬಲವನ್ನೂ ನಾನು ದಹಿಸಬಲ್ಲೆನು. ನಾನು ಕೂಡ ಭೀಷ್ಮನಂತೆಯೇ ಒಂದು ಮಾಸದ ಅವಧಿಯಲ್ಲಿ ಪಾಂಡವರ ಸೈನ್ಯವನ್ನು ನಿರ್ಮೂಲಮಾಡಬಲ್ಲೆನೆಂಬುದು ನನ್ನ ಅಭಿಮತವಾಗಿದೆ. ಇದೇ ನನ್ನ ಅತ್ಯಧಿಕವಾದ ಶಕ್ತಿ ; ಇದೇ ನನ್ನ ಅತ್ಯಧಿಕವಾದ ಬಲ. ಇದಕ್ಕಿಂತಲೂ ಹೆಚ್ಚಿನ ಬಲಪ್ರಯೋಗಮಾಡಿ ಇನ್ನೂ ಕಡಿಮೆ ದಿವಸಗಳೊಳಗಾಗಿ ಪಾಂಡವರ ಸೈನ್ಯವನ್ನು ಸಂಹಾರಮಾಡುವ ಶಕ್ತಿಯು ನನಗಿಲ್ಲ."

ದ್ರೋಣರು ಹೀಗೆಂದು ಹೇಳಿದನಂತರ ದುರ್ಯೋಧನನು ಕೃಪರನ್ನೂ ಪ್ರಶ್ನಿಸಿದನು. ಕೃಪರು ಎರಡು ಮಾಸಗಳ ಅವಧಿಯಲ್ಲಿ ಪಾಂಡವರ ಸೈನ್ಯವನ್ನು ಸಂಹರಿಸುವುದಾಗಿ ಹೇಳಿದರು. ಆದರೆ ಅಶ್ವತ್ಥಾಮನು ಮಾತ್ರ ಹತ್ತು ದಿವಸ ಗಳ ಅವಧಿಯಲ್ಲಿಯೇ ಪಾಂಡವಸೈನ್ಯವನ್ನು ನಿರ್ಮೂಲನಮಾಡುವುದಾಗಿ

ಪ್ರತಿಜ್ಞೆಮಾಡಿದನು. ಮಹಾಸ್ತ್ರವಿದನಾದ ಕರ್ಣನು ತನಗೆ ಹತ್ತು ದಿವಸಗಳೂ ಬೇಕಾಗಿಲ್ಲವೆಂದೂ ಕೇವಲ ಐದು ರಾತ್ರಿಗಳ (ದಿವಸಗಳ) ಅವಧಿಯಲ್ಲಿಯೇ ಪಾಂಡವರ ಸೈನ್ಯವನ್ನು ಸಂಹರಿಸುವ ಸಾಮರ್ಥ್ಯವೂ–ಬಾಹುಬಲವೂ ತನಗಿರುವುದೆಂದೂ ಹೇಳಿಕೊಂಡನು. ಸೂತಪುತ್ರನ ಆ ಮಾತನ್ನು ಕೇಳುತ್ತಲೇ ಭೀಷ್ಮನು ಗಟ್ಟಿಯಾಗಿ ಗಹ-ಗಹಿಸಿ ನಗುತ್ತಾ ಹೇಳಿದನು :

**ನ ಹಿ ಯಾವದ್ರಣೇ ಪಾರ್ಥಂ ಬಾಣಶಙ್ಖಧನುರ್ಧರಮ್ ।**
**ವಾಸುದೇವಸಮಾಯುಕ್ತಂ ರಥೇನಾಯಾನ್ತಮಾಹವೇ ॥೨೧॥**
**ಸಮಾಗಚ್ಛಸಿ ರಾಧೇಯ ತೇನೈವಮಭಿಮನ್ಯಸೇ ।**
**ಶಕ್ಯಮೇವಂ ಚ ಭೂಯಶ್ಚ ತ್ವಯಾ ವಕ್ತುಂ ಯಥೇಷ್ಟತಃ ॥೨೨॥**

"ರಾಧೇಯ! ಎಂದಿನವರೆಗೆ ನೀನು ಬಾಣ-ಶಂಖ-ಧನುರ್ಧರನಾದ, ವಾಸುದೇವನೊಡನೆ ರಥದಲ್ಲಿ ಕುಳಿತುಬರುವ ಅರ್ಜುನನನ್ನು ಯುದ್ಧದಲ್ಲಿ ಕಾಣುವುದಿಲ್ಲವೋ ಮತ್ತು ಎಂದಿನವರೆಗೆ ಅವನ ಸಮಾಗಮವಾಗು ವುದಿಲ್ಲವೋ–ಅಂದಿನವರೆಗೂ ನೀನು ಹೀಗೆಯೇ ಭಾವಿಸುವೆ. ಐದು ದಿನಗಳಾದರೂ ಏಕೆ ಬೇಕು? ಕೇವಲ ಎರಡೇ ದಿವಸಗಳಲ್ಲಿಯೇ ಸಂಹರಿಸಿಬಿಡುವೆನೆಂದೂ ನೀನು ಹೇಳಿಕೊಳ್ಳಲಡ್ಡಿಯಿಲ್ಲ. ನಿನಗಿಷ್ಟಬಂದ ರೀತಿಯಲ್ಲಿ ಹರಟಿಕೊಳ್ಳಬಹುದಾಗಿದೆ."

೧೯೩ನೆಯ ಅಧ್ಯಾಯವು ಮುಗಿಯಿತು.

೧೯೪ನೆಯ ಅಧ್ಯಾಯ ಅಮ್ಬೋಪಾಖ್ಯಾನಪರ್ವ (ಮುಂದುವರಿದಿದೆ)

## ಅರ್ಜುನನ ಮೂಲಕವಾಗಿ ತನ್ನ ಕಡೆಯವರ ಶಕ್ತಿಯ ಪರಿಮಿತಿಯೆಷ್ಟೆಂಬುದನ್ನು ಯುಧಿಷ್ಠಿರನು ತಿಳಿದುಕೊಂಡುದು

ವೈಶಂಪಾಯನರು ಹೇಳುತ್ತಾರೆ :

"ಜನಮೇಜಯ! ಕೌರವಪ್ರಮುಖರಲ್ಲಿ ನಡೆದ ಸಂಭಾಷಣೆಯನ್ನು ಗುಪ್ತಚಾರರ ಮುಖದಿಂದ ತಿಳಿದ ಯುಧಿಷ್ಠಿರನು ತನ್ನ ಅನುಜರನ್ನು ಏಕಾಂತಸ್ಥಳಕ್ಕೆ ಕರೆಯಿಸಿಕೊಂಡು ಅವರನ್ನು ಕುರಿತು ಹೇಳಿದನು :

"ಅನುಜರೇ! ದುರ್ಯೋಧನನ ಸೇನೆಯಲ್ಲಿ ಸೇರಿಕೊಂಡಿರುವ ನನ್ನ ಗೂಢಚಾರರು ರಾತ್ರಿಯು ಕಳೆದಮೇಲೆ ಅಲ್ಲಿ ನಡೆದ ಒಂದು ವೃತ್ತಾಂತವನ್ನು ನನಗೆ ಬಂದು ಹೇಳಿದ್ದಾರೆ. ದುರ್ಯೋಧನನು ಮಹಾವ್ರತನಾದ ಭೀಷ್ಮನನ್ನು–'ಎಷ್ಟು ದಿವಸಗಳ ಅವಧಿಯಲ್ಲಿ ನೀನು ಪಾಂಡವರ ಸಮಸ್ತ ಸೈನ್ಯವನ್ನೂ ಸಂಹರಿಸಬಲ್ಲೆ?'–ಎಂದು ಪ್ರಶ್ನಿಸಿದನಂತೆ. ಪಿತಾಮಹನಾದ ಭೀಷ್ಮನು ದುರ್ಮತಿಯಾದ ಧೃತರಾಷ್ಟ್ರಪುತ್ರನಿಗೆ – 'ಒಂದು ಮಾಸದ ಅವಧಿಯಲ್ಲಿ ಸಂಹರಿಸಬಲ್ಲೆನು'–ಎಂದು ಉತ್ತರಿಸಿದನಂತೆ. ಇದೇ ಪ್ರಶ್ನೆಯನ್ನೇ ಆಚಾರ್ಯರಾದ ದ್ರೋಣರಿಗೂ ದುರ್ಯೋಧನನು ಹಾಕಲಾಗಿ, ಅವರೂ ಭೀಷ್ಮನು ಹೇಳಿದಂತೆಯೇ ತಾವೂ ಸಹ ಒಂದು ಮಾಸದ ಅವಧಿಯೊಳಗಾಗಿ ಪಾಂಡವಸೈನ್ಯವನ್ನು ಸಂಹರಿಸಬಲ್ಲೆನೆಂದು ಹೇಳಿದರಂತೆ. ಆದರೆ ಗೌತಮರು ಮಾತ್ರ ಎರಡು ತಿಂಗಳು ಅವಧಿಯನ್ನಪೇಕ್ಷಿಸಿದರೆಂದು ನಮ್ಮ ಚಾರರು ಹೇಳುತ್ತಾರೆ. ದ್ರೋಣಪುತ್ರನಾದ ಮಹಾಸ್ತ್ರವಿದನಾದ ಅಶ್ವತ್ಥಾಮನು ಕೇವಲ ಹತ್ತು ದಿವಸಗಳೊಳಗಾಗಿಯೇ ಪಾಂಡವರ ಸೈನ್ಯವನ್ನು ವಿನಾಶಮಾಡಿಬಿಡುವೆನೆಂದು ಪ್ರತಿಜ್ಞೆ ಮಾಡಿದನಂತೆ. ಇದೇ ರೀತಿಯಲ್ಲಿ ದುರ್ಯೋಧನನು ಕುರುಸಭೆಯಲ್ಲಿ ಕರ್ಣನನ್ನೂ ಪ್ರಶ್ನಿಸಲಾಗಿ, ದಿವ್ಯಾಸ್ತ್ರವಿದನಾದ ಕರ್ಣನು, ಕೇವಲ ಐದೇ ದಿವಸಗಳಲ್ಲಿ ನಮ್ಮ ಅಪಾರವಾದ ಸೇನೆಯನ್ನು ನಿರ್ಮೂಲಮಾಡಿಬಿಡುವುದಾಗಿ ಪ್ರತಿಜ್ಞೆಮಾಡಿದನಂತೆ. ನಮ್ಮ ಚಾರರು ನಮಗೆ ತಿಳಿಸಿರುವ ಈ ಸಮಾಚಾರದಿಂದಾಗಿ ನಾವು ಶತ್ರುಪಕ್ಷದವರ ಬಲವೆಷ್ಟೆಂಬುದನ್ನು ಮನಗಂಡೆವು. ಅರ್ಜುನ! ನಾನೀಗ ನಮ್ಮಲ್ಲಿರುವ ಯೋಧರ ಬಲದ ಪರಿಮಿತಿಯನ್ನು ಅರಿಯುವ ಆಶಯದಿಂದಿರುತ್ತೇನೆ. ನೀನು ಎಷ್ಟು ದಿವಸಗಳ ಅವಧಿಯಲ್ಲಿ ನಮ್ಮ ಶತ್ರುಪಕ್ಷದ ಸೈನ್ಯವನ್ನು ನಿರ್ಮೂಲಮಾಡಬಲ್ಲೆಯೆಂಬುದನ್ನು ಹೇಳು."

ಯುಧಿಷ್ಠಿರನು ಗುಡಾಕೇಶನನ್ನು ಹೀಗೆಂದು ಕೇಳಲಾಗಿ ಧನಂಜಯನು ವಾಸುದೇವನನ್ನೊಮ್ಮೆ ವೀಕ್ಷಿಸಿ ಅಣ್ಣನೊಡನೆ ಹೇಳಿದನು :

"ಮಹಾರಾಜ! ನಮ್ಮ ಪಕ್ಷದಲ್ಲಿರುವ ಈ ಎಲ್ಲರೂ ಅಸ್ತ್ರವಿದ್ಯಾನಿಪುಣರಾಗಿದ್ದಾರೆ. ಚಿತ್ರಯೋಧಿಗಳಾಗಿದ್ದಾರೆ. ನಿಸ್ಸಂಶಯವಾಗಿ ಇವರೆಲ್ಲರೂ

ಶತ್ರುಪಕ್ಷದ ಸೈನಿಕರ ನಿರ್ಮೂಲನವನ್ನು ಮಾಡಿಯೇಮಾಡುತ್ತಾರೆ. ಆದುದರಿಂದ ಶತ್ರುಪಕ್ಷದ ಸಂಹಾರವಾಗುತ್ತದೆಯೋ ಇಲ್ಲವೋ–ಎಂಬ ವಿಷಯದಲ್ಲಿ ನೀನು ಯೋಚಿಸಬೇಕಾಗಿಲ್ಲ. ಗೂಢಚಾರರು ಹೇಳಿದ ಮಾತನ್ನು ಕೇಳಿ ನೀನು ಸ್ವಲ್ಪ ಪರಿತಾಪಗೊಂಡಂತಿದೆ. ನಿನ್ನ ಮನಸ್ಸಿನ ತಾಪವನ್ನು ದೂರಮಾಡು. ನಾನು ಸತ್ಯವನ್ನು ಹೇಳುತ್ತೇನೆ.

**ಹನ್ಯಾಮೇಕರಥೇನೈವ ವಾಸುದೇವಸಹಾಯವಾನ್ ।**
**ಸಾಮರಾನಪಿ ಲೋಕಾಂಸ್ತ್ರೀನ್ಸರ್ವಾನ್ಸ್ಥಾವರಜಙ್ಗಮಾನ್ ।**
**ಭೂತಂ ಭವ್ಯಂ ಭವಿಷ್ಯಂ ಚ ನಿಮೇಷಾದಿತಿ ಮೇ ಮತಿಃ ॥೧೧॥**

ಒಂದೇ ಒಂದು ರಥವನ್ನು ತೆಗೆದುಕೊಂಡು, ವಾಸುದೇವನ ಸಹಾಯವನ್ನು ಹೊಂದಿ ದೇವತೆಗಳಿಂದ ಕೂಡಿರುವ ಮೂರು ಲೋಕಗಳನ್ನೂ, ಸ್ಥಾವರ-ಜಂಗಮಗಳನ್ನೂ, ಹಿಂದಿನ-ವರ್ತಮಾನದಲ್ಲಿರುವ ಮತ್ತು ಮುಂದೆ ಹುಟ್ಟುವ ಪ್ರಾಣಿಗಳನ್ನೂ ರೆಪ್ಪೆಯನ್ನು ಮುಚ್ಚಿ-ತೆಗೆಯುವುದರೊಳಗಾಗಿ ಸಂಹಾರಮಾಡಿಬಿಡಬಲ್ಲೆನೆಂಬ ದೃಢವಿಶ್ವಾಸವು ನನಗಿದೆ. ಶಿವನೊಡನೆ ಮಾಡಿದ ದ್ವಂದ್ವಯುದ್ಧದಿಂದ ಪ್ರಸನ್ನನಾದ ಪಶುಪತಿಯು ದಯಪಾಲಿಸಿರುವ ಸುಘೋರವಾದ ಪಾಶುಪತಾಸ್ತ್ರವು ನನ್ನಲ್ಲಿದೆ. ಪುರುಷವ್ಯಾಘ್ರನೇ! ಪ್ರಳಯಕಾಲದಲ್ಲಿ ಸಕಲಪ್ರಾಣಿಗಳನ್ನೂ ಸಂಹಾರಮಾಡುವ ಸಲುವಾಗಿ ಯಾವ ಮಹಾಸ್ತ್ರವನ್ನು ರುದ್ರನು ಪ್ರಯೋಗಿಸುತ್ತಾನೆಯೋ – ಆ ಮಹಾಸ್ತ್ರವೇ ನನ್ನಲ್ಲಿದೆ. ಈ ಮಹಾಸ್ತ್ರದ ಪ್ರಯೋಗೋಪಸಂಹಾರಗಳು ಗಂಗಾಪುತ್ರನಾದ ಭೀಷ್ಮನಿಗಾಗಲೀ, ಆಚಾರ್ಯದ್ರೋಣರಿಗಾಗಲೀ, ಶಾರದ್ವತರಿಗಾಗಲೀ, ದ್ರೋಣಪುತ್ರನಾದ ಅಶ್ವತ್ಥಾಮನಿಗಾಗಲೀ ತಿಳಿಯದೆಂದಮೇಲೆ–ಸೂತಪುತ್ರ ನಿಗೆ ಈ ಮಹಾಸ್ತ್ರದ ವಿಷಯವು ಹೇಗೆ ತಾನೇ ತಿಳಿದಿದ್ದೀತು? ಆದುದರಿಂದ ಸೂತಪುತ್ರನು ಐದೇ ದಿವಸಗಳಲ್ಲಿ ನಮ್ಮ ಸೇನೆಯನ್ನು ಸಂಹರಿಸುವುದಾಗಿ ಪ್ರತಿಜ್ಞೆಮಾಡಿದನೆಂಬ ವಾರ್ತೆಯನ್ನು ಕೇಳಿ ಖಿನ್ನನಾಗಬೇಡಣ್ಣ. ಆದರೆ ಎಂತಹುದೇ ಮಹಾಸ್ತ್ರವಿದ್ದರೂ ಸಾಮಾನ್ಯಜನರನ್ನು (ಸೈನಿಕರನ್ನು) ಮಹಾಸ್ತ್ರಗಳ ಪ್ರಯೋಗದಿಂದ ಕೊಲ್ಲಬಾರದು. ಋಜುಮಾರ್ಗದಲ್ಲಿಯೇ ಸರ್ವಸಾಧಾರಣವಾದ ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸಿಯೇ ನಾವು ಶತ್ರು

ಗಳನ್ನು ಜಯಿಸೋಣ. ಈ ಪುರುಷವ್ಯಾಘ್ರರೆಲ್ಲರೂ ನಮಗೆ ಸಹಾಯಕರಾಗಿ ಬಂದಿರುತ್ತಾರೆ. ಇವರೇನು ಸಾಮಾನ್ಯರೇ! ಇವರೆಲ್ಲರೂ ದಿವ್ಯಾಸ್ತ್ರಗಳನ್ನು ತಿಳಿದವರಾಗಿದ್ದಾರೆ. ಯುದ್ಧಮಾಡಲು ಹೆಚ್ಚಿನ ಉತ್ಸಾಹವುಳ್ಳವರಾಗಿದ್ದಾರೆ. ಇವರೆಲ್ಲರೂ ವೇದಾಧ್ಯಯನವನ್ನು ಮಾಡಿ, ಗೃಹಸ್ಥರಾಗಿ ಯಜ್ಞಗಳನ್ನು ಮಾಡಿ ಅವಭೃಥಸ್ನಾನವನ್ನೂ ಮಾಡಿದವರಾಗಿದ್ದಾರೆ. ಇವರೆಲ್ಲರೂ ಯುದ್ಧದಲ್ಲಿ ಅಪರಾಜಿತರೇ ಸರಿ. ಯುದ್ಧದಲ್ಲಿವರು ದೇವತೆಗಳ ಸೈನ್ಯವನ್ನಾದರೂ ಸಂಹರಿಸಬಲ್ಲರು.

ಯುಧಿಷ್ಠಿರ! ಹೀಗಿರುವಾಗ ಇವರು ಕೌರವಸೇನೆಯನ್ನು ನಿರ್ಮೂಲ ಮಾಡುವರೆಂಬುದರಲ್ಲಿ ಸ್ವಲ್ಪವಾದರೂ ಸಂಶಯಪಡಬೇಡ. ಶಿಖಂಡೀ, ಸಾತ್ಯಕಿ, ದ್ರುಪದನ ಪುತ್ರ ಧೃಷ್ಟದ್ಯುಮ್ನ, ಭೀಮಸೇನ, ನಕುಲ-ಸಹದೇವರು, ಯುಧಾಮನ್ಯು, ಉತ್ತಮೌಜಸ–ಇವರೆಲ್ಲರೂ ಮಹಾಪರಾಕ್ರಮಿಗಳು. ವಿರಾಟ-ದ್ರುಪದರು ಯುದ್ಧದಲ್ಲಿ ಭೀಷ್ಮ-ದ್ರೋಣರಿಗೆ ಸಮಾನರಾದವ ರೆಂದೇ ಪರಿಗಣಿತರಾಗಿದ್ದಾರೆ. ಮಹಾಬಾಹುವಾದ ಶಂಖ, ಮಹಾಬಲಿಷ್ಠ ನಾದ ಘಟೋತ್ಕಚ, ಮಹಾಬಲಪರಾಕ್ರಮನಾದ ಘಟೋತ್ಕಚನ ಪುತ್ರನಾದ ಅಂಜನಪರ್ವಾಣ, ಮಹಾಬಾಹುವಾದ ರಣಕೋವಿದ ಸಾತ್ಯಕೀ–ಇವ ರೆಲ್ಲರೂ ನಿನ್ನ ಬೆಂಬಲಿಗರಾಗಿದ್ದಾರೆ. ಮಹಾಬಲಿಷ್ಠನಾದ ಅಭಿಮನ್ಯು ವಿದ್ದಾನೆ. ಮಹಾಪರಾಕ್ರಮಿಗಳಾದ ಐವರು ದ್ರೌಪದೇಯರಿದ್ದಾರೆ. ಇವ ರೆಲ್ಲರೂ ಒತ್ತಟ್ಟಿಗಿರಲಿ ; ನೀನೇನು ಸಾಮಾನ್ಯನೇ ಮಹಾರಾಜ! ಮೂರು ಲೋಕಗಳನ್ನೂ ಏಕಕಾಲದಲ್ಲಿ ಉತ್ಪಾಟನಮಾಡುವ ಸಾಮರ್ಥ್ಯವು ನಿನ್ನಲ್ಲಿದೆ. ನೀನು ಯುದ್ಧಮಾಡಬೇಕಾಗಿಯೇ ಇಲ್ಲ. ಧರ್ಮಜ! ಇಂದ್ರನಿಗೆ ಸಮಾನವಾದ ತೇಜಸ್ಸಿನಿಂದ ಬೆಳಗುತ್ತಿರುವವನೇ! ಕುರುನಂದನ! ನೀನು ಕೋಪಗೊಂಡು ಒಬ್ಬ ಪುರುಷನನ್ನು ದಿಟ್ಟಿಸಿ ನೋಡಿದ್ದೇ ಆದರೆ, ಅವನು ಒಡನೆಯೇ ವಿನಾಶಹೊಂದುತ್ತಾನೆ. ಇಂತಹ ಅನಿರ್ವಚನೀಯವಾದ ಸಾಮರ್ಥ್ಯವು ನಿನ್ನಲ್ಲಿದೆ. ಈ ನಿನ್ನ ಪರಾಕ್ರಮವಿಶೇಷವನ್ನು ನಾವು ಚೆನ್ನಾಗಿ ಬಲ್ಲೆವು."

೧೯೪ನೆಯ ಅಧ್ಯಾಯವು ಮುಗಿಯಿತು.

## ಕೌರವಸೇನೆಯ ರಣಪ್ರಸ್ಥಾನ

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಜನಮೇಜಯ! ಅನಂತರ ನಿರ್ಮಲವಾದ ಪ್ರಾತಃಕಾಲದ ಸಮಯದಲ್ಲಿ ಧೃತರಾಷ್ಟ್ರನ ಮಗನಾದ ದುರ್ಯೋಧನನಿಂದ ಚೋದಿತರಾದ ರಾಜರು ಪಾಂಡವರನ್ನೆದುರಿಸಿ ಯುದ್ಧಮಾಡಲು ಹೊರಟರು. ಹೊರಡುವ ಮೊದಲು ಎಲ್ಲರೂ ಸ್ನಾನಮಾಡಿ ಶುಚೀಭೂತರಾಗಿ, ಶುಭ್ರವಾದ ಬಿಳಿಯದಾದ ವಸ್ತ್ರಗಳನ್ನುಟ್ಟು, ಸುಗಂಧಯುಕ್ತವಾದ ಪುಷ್ಪಮಾಲೆಗಳನ್ನು ಧರಿಸಿದವರಾಗಿ, ಬ್ರಾಹ್ಮಣರಿಂದ ಸ್ವಸ್ತಿವಾಚನಗಳನ್ನು ಮಾಡಿಸಿಕೊಂಡು, ಅಗ್ನಿಗಳಲ್ಲಿ ಯಥಾವಿಧಿಯಾಗಿ ಹೋಮಮಾಡಿ, ಅಸ್ತ್ರ-ಶಸ್ತ್ರಗಳನ್ನು ಹಿಡಿದು ತಮ್ಮ-ತಮ್ಮ ಧ್ವಜಗಳೊಡನೆ ರಣಭೂಮಿಯ ಕಡೆಗೆ ಪ್ರಯಾಣಮಾಡಿದರು.

ಆ ರಾಜರೆಲ್ಲರೂ ಬ್ರಹ್ಮವಿದರಾಗಿದ್ದರು. ವೇದ-ವೇದಾಂಗಪಾರಂಗತರಾಗಿದ್ದರು ಮತ್ತು ಎಲ್ಲರೂ ಶೂರರಾಗಿದ್ದರು. ಉತ್ತಮೋತ್ತಮವಾದ ವ್ರತಾಚರಣೆಗಳನ್ನು ಮಾಡಿದವರಾಗಿದ್ದರು. ಎಲ್ಲರೂ ಕವಚಗಳನ್ನು ತೊಟ್ಟುಕೊಂಡಿದ್ದರು. ಎಲ್ಲರ ಮುಖಗಳಲ್ಲಿಯೂ ವೀರಯೋಧರಲ್ಲಿರಬೇಕಾದ ವೀರಲಕ್ಷಣವಿದ್ದಿತು. ಮಹಾಬಲಶಾಲಿಗಳಾದ ಆ ವೀರರೆಲ್ಲರೂ ತಮ್ಮ-ತಮ್ಮ ಪರಾಕ್ರಮವನ್ನು ಉತ್ತಮರೀತಿಯಲ್ಲಿ ಪ್ರದರ್ಶಿಸಿ ಪರಲೋಕವನ್ನು ಜಯಿಸಬೇಕೆನ್ನುವ ಆಸಕ್ತಿಯುಳ್ಳವರಾಗಿದ್ದರು. ಎಲ್ಲರಲ್ಲಿಯೂ ಏಕಾಗ್ರತೆಯಿದ್ದಿತು. ಯುದ್ಧಮಾಡಬೇಕೋ ಬೇಡವೋ ಎಂಬ ಡೋಲಾಯಮಾನವಾದ ಮನಸ್ಸಿರಲಿಲ್ಲ. ಒಬ್ಬರು ಮತ್ತೊಬ್ಬರ ವಿಷಯದಲ್ಲಿ ವಿಶ್ವಾಸವನ್ನಿಟ್ಟಿದ್ದರು. ಎಲ್ಲರೂ ಏಕಮುಖರಾಗಿ ಯುದ್ಧದಲ್ಲಿಯೇ ನೆಟ್ಟಮನಸ್ಸುಳ್ಳವರಾಗಿದ್ದರು. ಅವಂತೀದೇಶದ ರಾಜಕುಮಾರರಾದ ವಿಂದಾನುವಿಂದರೂ, ಬಾಹ್ಲಿಕದೇಶದ ಸೈನಿಕರಿಂದೊಡಗೂಡಿದ ಕೇಕಯರಾಜಕುಮಾರರೂ ದ್ರೋಣಾಚಾರ್ಯರನ್ನು ಅನುಸರಿಸಿ ಹೊರಟರು. ಅಶ್ವತ್ಥಾಮಾ, ಸಿಂಧುರಾಜನಾದ ಜಯದ್ರಥ, ದಕ್ಷಿಣದೇಶೀಯ ರಾಜರು, ಪಾಶ್ಚಾತ್ಯರಾಜರು, ಪರ್ವತಪ್ರದೇಶದ ರಾಜರು,

ಗಾಂಧಾರರಾಜನಾದ ಶಕುನಿ, ಪೂರ್ವ ಮತ್ತು ಉತ್ತರದಿಕ್ಕುಗಳ ರಾಜರು, ಶಕರು, ಕಿರಾತರು, ಯವನರು, ಶಿಬಿಗಳು, ವಸಾತಿಭೂಪಾಲರು–ಇವರೆಲ್ಲರೂ ತಮ್ಮ-ತಮ್ಮ ಸೈನ್ಯಗಳಿಂದ ಕೂಡಿದವರಾಗಿ ಮಹಾರಥನಾದ ಭೀಷ್ಮನನ್ನು ಸುತ್ತುವರಿದಿದ್ದರು. ಮಹಾರಥರಾದ ಅವರೆಲ್ಲರೂ ದುರ್ಯೋಧನನ ಸೈನ್ಯದ ಎರಡನೆಯ ತಂಡ ವಾಗಿ ಯುದ್ಧಭೂಮಿಗೆ ಪ್ರಯಾಣಮಾಡಿದರು. ಸೇನಾಸಹಿತನಾದ ಕೃತವರ್ಮಾ, ಮಹಾರಥನಾದ ತ್ರಿಗರ್ತರಾಜ, ತಮ್ಮಂದಿರಿಂದ ಪರಿವೃತನಾದ ದುರ್ಯೋಧನ, ಶಲ, ಭೂರಿಶ್ರವ, ಶಲ್ಯ, ಕೋಸಲರಾಜನಾದ ಬೃಹದ್ರಥ–ಇವರೆಲ್ಲರೂ ದುರ್ಯೋಧನನನ್ನು ಮುಂದೆಮಾಡಿಕೊಂಡು ಮಹಾಸೈನ್ಯದ ಮೂರನೆಯ ತಂಡವಾಗಿ ಅಥವಾ ಕಡೆಯ ತಂಡವಾಗಿ ಯುದ್ಧಭೂಮಿಗೆ ಪ್ರಯಾಣ ಮಾಡಿದರು. ರಣರಂಗವನ್ನು ತಲುಪಿದನಂತರ ಮಹಾಬಲರಾದ ಧೃತರಾಷ್ಟ್ರನ ಮಕ್ಕಳು ಯಥಾಯೋಗ್ಯವಾಗಿ ಕವಚವನ್ನು ಧರಿಸಿ ಕುರುಕ್ಷೇತ್ರದ ಪಶ್ಚಿಮಭಾಗದಲ್ಲಿ ಸುಸಜ್ಜಿತರಾಗಿ ನಿಂತರು.

ದುರ್ಯೋಧನನು ಆ ರಣಾಂಗಣದಲ್ಲಿ ಎರಡನೆಯ ಹಸ್ತಿನಾಪುರದೋ ಪಾದಿಯಲ್ಲಿ ಶಿಬಿರವನ್ನು ಕಟ್ಟಿಸಿದ್ದನು. ಕುಶಲಮತಿಗಳಾದ ನಗರವಾಸಿಗಳೂ, ಹಸ್ತಿನಾಪಟ್ಟಣಕ್ಕೂ–ಯುದ್ಧಶಿಬಿರಕ್ಕೂ ಯಾವ ವಿಧವಾದ ವ್ಯತ್ಯಾಸವನ್ನೂ ಕಾಣುತ್ತಿರಲಿಲ್ಲ. ಅದೇ ರೀತಿಯಲ್ಲಿ ರಾಜರ ನಿವಾಸಕ್ಕೂ ಮಹೀಪತಿಯಾದ ದುರ್ಯೋಧನನು ದುರ್ಗಮವಾದ ನೂರಾರು ಶಿಬಿರಗಳನ್ನು ಕಟ್ಟಿಸಿದ್ದನು. ರಣಾಂಗಣದಿಂದ ಐದು ಯೋಜನದೂರದಲ್ಲಿ ಸೈನಿಕರು ತಂಗಲು ನೂರು-ನೂರು ಸಂಖ್ಯೆಗೆ ಒಂದೊಂದು ಗುಂಪಾಗಿ ಅನೇಕ ಶಿಬಿರಗಳನ್ನು ಮಂಡಲಾಕಾರ ವಾಗಿ ದುರ್ಯೋಧನನು ಕಟ್ಟಿಸಿದ್ದನು. ಬಹುಮೂಲ್ಯ ಸಾಮಗ್ರಿಗಳಿಂದ ಸುಸಂಪನ್ನವಾಗಿದ್ದ ಸಾವಿರಾರು ಶಿಬಿರಗಳನ್ನು ಯಥಾಯೋಗ್ಯವಾದ ಉತ್ಸಾಹದಿಂದಲೂ, ಯಥಾಯೋಗ್ಯವಾದ ಬಲದಿಂದಲೂ ಕೂಡಿದ್ದ ರಾಜರು ಪ್ರವೇಶಿಸಿದರು. ದುರ್ಯೋಧನನು ಸೈನ್ಯಸಮೇತರಾದ ಮತ್ತು ವಾಹನಸಮೇತರಾದ ಮಹಾತ್ಮರಾದ ರಾಜರಿಗೆ ಉತ್ತಮೋತ್ತಮವಾದ ಭಕ್ಷ್ಯ-ಭೋಜ್ಯಾದಿಗಳನ್ನು ಕಾಲ-ಕಾಲಕ್ಕೆ ಕಳುಹಿಸುತ್ತಿದ್ದನು. ಆನೆಗಳಿಗೂ ಮತ್ತು ಕುದುರೆಗಳಿಗೂ ಆಯಾಸಮಯಗಳಲ್ಲಿ ಮೇವುಹಾಕುವ

ವ್ಯವಸ್ಥೆಯಿದ್ದಿತು. ಕಾಲಾಳುಗಳಿಗೂ, ಕಾರ್ಮಿಕರಿಗೂ, ರಾಜರನ್ನನುಸರಿಸಿ ಬಂದಿದ್ದ ಸೂತ-ವಂದಿ-ಮಾಗಧರಿಗೂ ಕುರುರಾಜನು ಭೋಜನದ ವ್ಯವಸ್ಥೆಯನ್ನು ಮಾಡಿದ್ದನು. ವ್ಯಾಪಾರಿಗಳು, ವೇಶ್ಯೆಯರು, ಗುಪ್ತಚಾರರು ಮತ್ತು ಯುದ್ಧಪ್ರೇಕ್ಷಕರು–ಇವರೆಲ್ಲರ ಯೋಗ-ಕ್ಷೇಮಗಳನ್ನೂ ಕೌರವನು ಯಥಾವಿಧಿಯಾಗಿ ನೋಡಿಕೊಳ್ಳುತ್ತಿದ್ದನು."

೧೯೫ನೆಯ ಅಧ್ಯಾಯವು ಮುಗಿಯಿತು.

೧೯೬ನೆಯಅಧ್ಯಾಯ ಅಮ್ಬೋಪಾಖ್ಯಾನಪರ್ವ(ಮುಂದುವರಿದಿದೆ)

## ಪಾಂಡವಸೇನೆಯ ಯುದ್ಧಪ್ರಸ್ಥಾನ

ವೈಶಂಪಾಯನರು ಹೇಳುತ್ತಾರೆ :

"ಜನಮೇಜಯ! ಪ್ರಾತಃಕಾಲವಾಗುತ್ತಲೇ ದುರ್ಯೋಧನನು ತನ್ನ ಸೈನ್ಯವನ್ನು ರಣಾಂಗಣಕ್ಕೆ ಹೋಗಲು ಪ್ರಚೋದಿಸಿದಂತೆಯೇ – ಇತ್ತಲಾಗಿ ಕುಂತಿಯ ಮಗನಾದ, ಧರ್ಮಪುತ್ರನಾದ ಯುಧಿಷ್ಠಿರನೂ ಸಹ ಧೃಷ್ಟದ್ಯುಮ್ನನೇ ಮೊದಲಾದ ವೀರರನ್ನು ರಣಭೂಮಿಗೆ ಪ್ರಯಾಣಮಾಡಲು ಪ್ರಚೋದಿಸಿದನು. ಚೇದಿ-ಕಾಶಿ-ಕರೂಷದೇಶಗಳ ಸೈನಿಕರ ನಾಯಕನಾದ, ದೃಢವಿಕ್ರಮನಾದ, ಶತ್ರುವಿನಾಶಕನಾದ, ಸೇನಾಪತಿಯಾದ ಧೃಷ್ಟಕೇತುವಿಗೆ ರಣಾಂಗಣಕ್ಕೆ ಹೋಗಲು ಯುಧಿಷ್ಠಿರನು ಆಜ್ಞೆಯನ್ನಿತ್ತನು. ವಿರಾಟ, ದ್ರುಪದ, ಯುಯುಧಾನ, ಶಿಖಂಡೀ, ಪಾಂಚಾಲವೀರರಾದ ಮಹಾಧನುಷ್ಮಂತರಾದ ಯುಧಾಮನ್ಯು ಮತ್ತು ಉತ್ತಮೌಜಸ–ಇವರನ್ನೂ ಧರ್ಮರಾಜನು ಯುದ್ಧಭೂಮಿಗೆ ಹೋಗಲು ಪ್ರಚೋದಿಸಿದನು. ಆ ಯೋಧರೆಲ್ಲರೂ ಶೂರರಾಗಿದ್ದರು. ಚಿತ್ರ-ವಿಚಿತ್ರವಾದ ಕವಚಗಳನ್ನು ಧರಿಸಿದ್ದರು. ತಪ್ತವಾದ ಸುವರ್ಣದಿಂದ ಮಾಡಿದ್ದ ಕುಂಡಲಗಳನ್ನು ಧರಿಸಿದ್ದರು. ಮನೆಗಳಲ್ಲಿ (ಅಗ್ನಿಗೃಹಗಳಲ್ಲಿ) ಘೃತಧಾರೆಯಿಂದ ಪ್ರಜ್ವಲಿಸುತ್ತಿರುವ ಯಜ್ಞೇಶ್ವರರಂತೆ ಮಹಾತೇಜಸ್ಸಿನಿಂದ ಪ್ರಕಾಶಿಸುತ್ತಿದ್ದರು. ಮಹಾಧನುಸ್ಸುಗಳನ್ನು ಧರಿಸಿದ್ದ ಆ ಯೋಧರು ಆಕಾಶದಲ್ಲಿ ಕಾಣುವ ಗ್ರಹಗಳಂತೆಯೇ ಜಾಜ್ವಲ್ಯಮಾನರಾಗಿ ಪ್ರಕಾಶಿಸುತ್ತಿದ್ದರು.

ಅನಂತರ ಯುಧಿಷ್ಠಿರನು ಸೈನಿಕರನ್ನು ಯಥಾಯೋಗ್ಯವಾಗಿ ಪುರ

ಸ್ಕರಿಸಿ ರಣಾಂಗಣಕ್ಕೆ ಪ್ರಯಾಣಮಾಡುವಂತೆ ಆಜ್ಞೆಮಾಡಿದನು. ಯುಧಿಷ್ಠಿರನೂ ಮಹಾತ್ಮರಾದ ರಾಜರಿಗೂ ಅವರ ಸೈನಿಕರಿಗೂ ಉತ್ತಮೋತ್ತಮವಾದ ಭಕ್ಷ್ಯ-ಭೋಜ್ಯಗಳನ್ನು ಕಾಲ-ಕಾಲಕ್ಕೆ ಸಿದ್ಧಮಾಡುವಂತೆ ಆಜ್ಞೆ ಮಾಡಿದನು.

ಕುದುರೆಗಳಿಗೂ ಆನೆಗಳಿಗೂ ನಿರ್ದಿಷ್ಟಸಮಯಗಳಲ್ಲಿ ಮೇವು ಹಾಕುವ ವ್ಯವಸ್ಥೆಯನ್ನು ಮಾಡಿದ್ದನು. ಕಾಲಾಳುಗಳಿಗೂ ಕಾರ್ಮಿಕರಿಗೂ ಭೋಜನದ ವ್ಯವಸ್ಥೆಮಾಡಿದ್ದನು.

ಪಾಂಡುನಂದನನಾದ ಯುಧಿಷ್ಠಿರನು ಧೃಷ್ಟದ್ಯುಮ್ನನ ನಾಯಕತ್ವದಲ್ಲಿ ಅಭಿಮನ್ಯುವನ್ನೂ, ಬೃಹಂತನನ್ನೂ, ಐವರು ದ್ರೌಪದೇಯರನ್ನೂ ಮೊದಲನೆಯ ತಂಡದ ಸೇನೆಯ ಜೊತೆಯಲ್ಲಿ ರಣರಂಗಕ್ಕೆ ಕಳುಹಿಸಿಕೊಟ್ಟನು. ಭೀಮಸೇನ, ಸಾತ್ಯಕಿ ಮತ್ತು ಧನಂಜಯರನ್ನು ಎರಡನೆಯ ತಂಡದ ನಾಯಕರನ್ನಾಗಿ ಮಾಡಿ ರಣಾಂಗಣಕ್ಕೆ ಯುಧಿಷ್ಠಿರನು ಕಳುಹಿಸಿಕೊಟ್ಟನು. ಯುದ್ಧೋಪಕರಣಗಳನ್ನು ಹೊತ್ತು ಸಂಪ್ರಹೃಷ್ಟರಾಗಿ ರಣಾಂಗಣಕ್ಕೆ ಧಾವಿಸುತ್ತಿದ್ದ ಯೋಧರ ಕೋಲಾಹಲಶಬ್ದವು ಆಕಾಶವನ್ನೂ ವ್ಯಾಪಿಸಿದ್ದಿತು.

ವಿರಾಟ-ದ್ರುಪದರಿಂದ ಅನುಸೃತನಾದ ಯುಧಿಷ್ಠಿರನು ತಾನೇ ಮೂರನೆಯ ತಂಡದ ನಾಯಕನಾಗಿ ಇತರ ರಾಜರಿಂದೊಡಗೂಡಿ ರಣಾಂಗಣಕ್ಕೆ ಪ್ರಯಾಣಮಾಡಿದನು. ಭಯಂಕರರಾದ ಧನುರ್ಧಾರಿಗಳಿಂದ ಸಮಾವೃತವಾಗಿದ್ದ, ಧೃಷ್ಟದ್ಯುಮ್ನನಿಂದ ಪರಿಪಾಲಿತವಾಗಿದ್ದ ಪಾಂಡವಸೇನಾ ಪ್ರವಾಹವು–ಸ್ತಿಮಿತವಾಗಿ ಹರಿಯುವ ಗಂಗೆಯ ಪೂರ್ಣಪ್ರವಾಹದಂತೆಯೇ ಕಾಣುತ್ತಿದ್ದಿತು. ಅನಂತರದಲ್ಲಿ ಬುದ್ಧಿವಂತನಾದ ಯುಧಿಷ್ಠಿರನು ಧೃತರಾಷ್ಟ್ರನ ಮಕ್ಕಳ ಯೋಜನೆಯನ್ನು ಪಲ್ಲಟಗೊಳಿಸುವ ಉದ್ದೇಶದಿಂದ ಮತ್ತು ದುರ್ಯೋಧನಾದಿಗಳ ಮನಸ್ಸಿನಲ್ಲಿ ಭ್ರಾಂತಿಯನ್ನುಂಟುಮಾಡುವ ಸಲುವಾಗಿ ತನ್ನ ಸೇನೆಯನ್ನು ಮತ್ತೊಂದು ವಿಧಾನದಲ್ಲಿ ಸಂಯೋಜಿಸಿದನು.

ಮಹಾಧನುಷ್ಮಂತರಾದ ಐವರು ದ್ರೌಪದಿಯ ಮಕ್ಕಳನ್ನೂ, ಅಭಿಮನ್ಯುವನ್ನೂ, ನಕುಲ-ಸಹದೇವರನ್ನೂ, ಎಲ್ಲ ಪ್ರಭದ್ರಕವೀರರನ್ನೂ,

ಹತ್ತುಸಾವಿರ ಅಶ್ವಸೈನಿಕರನ್ನೂ, ಎರಡುಸಾವಿರ ಗಜಸೈನಿಕರನ್ನೂ, ಹತ್ತು ಸಾವಿರ ಪದಾತಿಸೈನಿಕರನ್ನೂ, ಐದುನೂರು ರಥಸೈನಿಕರನ್ನೂ ಪ್ರತ್ಯೇಕವಾಗಿ ವಿಂಗಡಿಸಿ ಅದನ್ನೇ ಮೊದಲನೆಯ ದಳವನ್ನಾಗಿ ಪರಿವರ್ತಿಸಿ ಎದುರಿಸಲು ಅಸಾಧ್ಯವಾದ ಆ ದಳಕ್ಕೆ ಭೀಮಸೇನನನ್ನೇ ನಾಯಕನನ್ನಾಗಿ ಮಾಡಿ ರಣರಂಗಕ್ಕೆ ಕಳುಹಿಸಿಕೊಟ್ಟನು. ಎರಡನೆಯ ದಳಕ್ಕೆ ವಾಸುದೇವ-ಧನಂಜಯರನ್ನು ನಾಯಕರನ್ನಾಗಿ ಮಾಡಿ ಅವರ ಹಿಂದೆ ವಿರಾಟ, ಜಯತ್ಸೇನ, ಮಹಾರಥರಾದ ಪಾಂಚಾಲದೇಶೀಯರಾದ, ವೀರ್ಯವಂತರಾದ, ಮಹಾತ್ಮರಾದ, ಗದೆ ಮತ್ತು ಧನುಸ್ಸುಗಳನ್ನು ಧರಿಸಿದ್ದ ಯುಧಾಮನ್ಯು ಮತ್ತು ಉತ್ತಮೌಜಸರನ್ನು ಯುಧಿಷ್ಠಿರನು ರಣಾಂಗಣಕ್ಕೆ ಕಳುಹಿಸಿಕೊಟ್ಟನು. ಆ ಯೋಧರೆಲ್ಲರೂ ಆವೇಶಪೂರ್ಣರಾಗಿದ್ದರು. ಹಿಂದೆ ಯುದ್ಧಮಾಡಿ ಅನುಭವವನ್ನು ಪಡೆದಿದ್ದರು. ಶೂರರಿಂದ ಅಧಿಷ್ಠಿತವಾಗಿದ್ದ ಇಪ್ಪತ್ತುಸಾವಿರ ಕುದುರೆಗಳು ಎರಡನೆಯ ದಳದಲ್ಲಿದ್ದುವು. ಐದುಸಾವಿರ ಆನೆಗಳ ಸೈನ್ಯವು ಎರಡನೆಯ ದಳವನ್ನು ಹಿಂಬಾಲಿಸಿದ್ದಿತು. ಅದಕ್ಕೆ ಅನುಗುಣವಾದ ಸಂಖ್ಯೆಯಲ್ಲಿ ರಥಸೈನ್ಯವೂ ಎರಡನೆಯ ದಳವನ್ನು ಹಿಂಬಾಲಿಸಿತು. ಕತ್ತಿಗಳನ್ನೂ, ಧನುಸ್ಸುಗಳನ್ನೂ ಧರಿಸಿದ್ದ ಶೂರರಾದ ಸಾವಿರಾರು ಪದಾತಿಸೈನ್ಯಗಳು ಎರಡನೆಯ ದಳದ ಮುಂಭಾಗದಲ್ಲಿಯೂ ಹಿಂಭಾಗದಲ್ಲಿಯೂ ಹೋಗುತ್ತಿದ್ದುವು. ಸೈನ್ಯಸಮುದ್ರದಲ್ಲಿ ಯುಧಿಷ್ಠಿರನೆಲ್ಲಿರುತ್ತಿದ್ದನೋ ಆ ಸ್ಥಳದಲ್ಲಿಯೇ ಬಹುಸಂಖ್ಯಾತರಾದ ಮಹೀಪಾಲರು ಅವನನ್ನಾವರಿಸಿ ಮತ್ತು ಅನುಸರಿಸಿ ನಡೆಯುತ್ತಿದ್ದರು. ಯುಧಿಷ್ಠಿರನಿದ್ದೆಡೆಯಲ್ಲಿ ಒಂದು ಸಾವಿರ ಗಜಸೈನಿಕರೂ, ಹತ್ತು ಸಾವಿರ ಅಶ್ವಸೈನಿಕರೂ, ಒಂದು ಸಾವಿರ ರಥಸೈನಿಕರೂ, ಅನೇಕಸಾವಿರ ಕಾಲಾಳುಗಳೂ ಇದ್ದರು.

ಜನಮೇಜಯ! ಚೇಕಿತಾನನು ತನ್ನ ಅಪಾರಸೇನೆಯೊಡನೆ ಯುಧಿಷ್ಠಿರನನ್ನು ಅನುಸರಿಸಿದನು. ಅಂತೆಯೇ ಚೇದಿಗಳ ನೇತಾರನಾದ ಧೃಷ್ಟಕೇತುವೂ ಯುಧಿಷ್ಠಿರನ ಹಿಂದೆ ಹೋದನು. ವೃಷ್ಣಿವಂಶಪ್ರಮುಖನಾದ ಸಾತ್ಯಕಿಯು ತನ್ನ ಒಂದು ಲಕ್ಷ ರಥಸೈನ್ಯದೊಡನೆ ಗರ್ಜನೆಮಾಡುತ್ತಾ ಮುಂದೆಹೋಗುತ್ತಿದ್ದನು. ಪುರುಷರ್ಷಭರಾದ ರಥಸ್ಥರಾಗಿದ್ದ ಕ್ಷತ್ರದೇವ-ಬ್ರಹ್ಮದೇವರು ಸೇನೆಯ ಹಿಂಭಾಗದ ರಕ್ಷಣೆಯನ್ನು ಮಾಡುತ್ತಾ ಮಹಾ

ಸೇನೆಯ ಹಿಂಭಾಗದಲ್ಲಿ ಹೋಗುತ್ತಿದ್ದರು. ಸೈನ್ಯದ ಹಿಂಭಾಗದಲ್ಲಿ ಅಂಗಡಿಯ ಸಾಮಾನುಗಳು, ವೇಷ-ಭೂಷಣಗಳು, ಯಾನಗಳು ಮುಂತಾದುವುಗಳನ್ನು ಹೊತ್ತ ಗಾಡಿಗಳು ಹೋಗುತ್ತಿದ್ದುವು. ಅಲ್ಲಿ ಒಂದು ಸಾವಿರ ಆನೆಗಳಿದ್ದುವು. ಹತ್ತುಸಾವಿರ ಕುದುರೆಗಳಿದ್ದುವು. ಸತ್ತ್ವವಿಲ್ಲದವರನ್ನೂ, ಹೆಂಗಸರನ್ನೂ, ಕೃಶರಾದವರನ್ನೂ, ದುರ್ಬಲರಾದವರನ್ನೂ ಆ ವಾಹನಗಳಲ್ಲಿ ಯುಧಿಷ್ಠಿರನು ಕಳುಹಿಸುತ್ತಿದ್ದನು. ಧನದ ಪೆಟ್ಟಿಗೆಗಳನ್ನೂ ಧಾನ್ಯದ ಕಣಜಗಳನ್ನೂ ಆನೆಗಳ ಮೇಲೆ ಹೇರಿಕೊಂಡು ಯುಧಿಷ್ಠಿರನು ಮೆಲ್ಲ-ಮೆಲ್ಲನೆ ರಣಾಂಗಣಕ್ಕೆ ಹೋದನು.

ಸುಚಿತ್ತನ ಮಗನಾದ, ಯುದ್ಧದುರ್ಮದನಾದ ಸತ್ಯಧೃತಿಯೂ, ಶ್ರೇಣಿಮಂತನೂ, ವಸುದಾನನೂ, ಕಾಶೀರಾಜನೂ, ಅವನ ಪುತ್ರನಾದ ವಿಭುವೂ ಯುಧಿಷ್ಠಿರನನ್ನು ಹಿಂಬಾಲಿಸಿ ಹೋಗುತ್ತಿದ್ದರು. ಅವರನ್ನನುಸರಿಸಿ ಇಪ್ಪತ್ತುಸಾವಿರ ರಥಸೈನಿಕರೂ, ಸಣ್ಣ-ಸಣ್ಣ ಗಂಟೆಗಳಿಂದ ಅಲಂಕೃತವಾಗಿ ಕಿಂಕಿಣಿ ಶಬ್ದಮಾಡುತ್ತಿದ್ದ ಹತ್ತುಕೋಟಿ ಅಶ್ವಸೈನ್ಯಗಳೂ–ನೇಗಿಲಿನ ದಂಡದಂತೆ ಉದ್ದವಾದ ದಂತಗಳಿಂದ ಕೂಡಿದ್ದ, ಶತ್ರುಗಳನ್ನು ಪ್ರಹರಿಸುವುದ ರಲ್ಲಿ ಅತ್ಯಂತ ಸಮರ್ಥವಾಗಿದ್ದ, ಒಳ್ಳೆಯ ಜಾತಿಯಲ್ಲಿ ಹುಟ್ಟಿದ್ದ, ಮದೋದಕ ವನ್ನು ಸುರಿಸುತ್ತಿದ್ದ, ಮೇಘಗಳೋಪಾದಿಯಲ್ಲಿ ಚಲಿಸುತ್ತಿದ್ದ ಇಪ್ಪತ್ತುಸಾವಿರ ಆನೆಗಳೂ ಹೋಗುತ್ತಿದ್ದುವು. ಅವುಗಳೇ ಅಲ್ಲದೇ ಮಹಾತ್ಮ ನಾದ ಯುಧಿಷ್ಠಿರನ ಸೈನ್ಯದಲ್ಲಿ ಯುದ್ಧಕ್ಕೆ ಸಜ್ಜಾಗಿದ್ದ ಎಪ್ಪತ್ತುಸಾವಿರ ಆನೆಗಳಿದ್ದುವು. ಮೇಘಗಳು ನೀರು ಸುರಿಸುವಂತೆಯೇ ಆ ಆನೆಗಳು ತಮ್ಮ ಕಪೋಲಗಳಿಂದ ಮದೋದಕವನ್ನು ಸುರಿಸುತ್ತಿದ್ದುವು. ಅವುಗಳು ಚಲಿಸುತ್ತಿರುವ ಪರ್ವತಗಳೋಪಾದಿಯಲ್ಲಿ ಯುಧಿಷ್ಠಿರರಾಜನನ್ನು ಅನುಸರಿಸಿ ಹೋಗುತ್ತಿದ್ದುವು. ಜನಮೇಜಯ! ಈ ರೀತಿಯಾಗಿ ಕುಂತೀಪುತ್ರನಾದ ಯುಧಿಷ್ಠಿರನ ಸೇನೆಯು ಬಹುಭಯಂಕರವಾಗಿದ್ದಿತು. ವಿಶಾಲವಾದ ಮತ್ತು ಭಯಂಕರವಾದ ಆ ಸೇನೆಯನ್ನು ಅವಲಂಬಿಸಿ ಯುಧಿಷ್ಠಿರನು ಧೃತರಾಷ್ಟ್ರನ ಮಗನಾದ ದುರ್ಯೋಧನನೊಡನೆ ಯುದ್ಧಮಾಡಿದನು (ಮಾಡಲು ಹೊರಟನು). ಅವರೆಲ್ಲರ ಹಿಂಬದಿಯಲ್ಲಿ ಲಕ್ಷೋಪಲಕ್ಷ ಕಾಲಾಳುಗಳು ಜಯ ಘೋಷಣೆಗಳನ್ನು ಮಾಡುತ್ತಾ ಯುಧಿಷ್ಠಿರನ ಸೈನ್ಯವನ್ನನುಸರಿಸಿ ಹೋದರು.

ಆ ಸಮಯದಲ್ಲಿ ಲಕ್ಷೋಪಲಕ್ಷ ಜನರು ಉತ್ಸಾಹಪೂರಿತರಾಗಿ ಸಾವಿರಾರು ಭೇರಿಗಳನ್ನು ತಾಡನಮಾಡಿದರು. ಸಾವಿರಾರು ಶಂಖಗಳನ್ನು ಏಕಕಾಲದಲ್ಲಿ ಊದಿದರು."

೧೯೬ನೆಯ ಅಧ್ಯಾಯವು ಮುಗಿಯಿತು.

ಇಲ್ಲಿಗೆ ಉದ್ಯೋಗಪರ್ವವು ಮುಗಿಯಿತು.

ಸ್ವಸ್ತಿ ಪ್ರಜಾಭ್ಯಃ ಪರಿಪಾಲಯನ್ತಾಂ
ನ್ಯಾಯ್ಯೇನ ಮಾರ್ಗೇಣ ಮಹೀಂ ಮಹೀಶಾಃ ।
ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ
ಲೋಕಾಃ ಸಮಸ್ತಾಃ ಸುಖಿನೋ ಭವನ್ತು ॥

ಕಾಲೇ ವರ್ಷತು ಪರ್ಜನ್ಯಃ ಪೃಥಿವೀ ಸಸ್ಯಶಾಲಿನೀ ।
ದೇಶೋಽಯಂ ಕ್ಷೋಭರಹಿತೋ ಬ್ರಾಹ್ಮಣಾಃ ಸನ್ತು ನಿರ್ಭಯಾಃ

ಅಪುತ್ರಾಃ ಪುತ್ರಿಣಃ ಸನ್ತು ಪುತ್ರಿಣಃ ಸನ್ತು ಪೌತ್ರಿಣಃ ।
ಅಧನಾಃ ಸಧನಾಃ ಸನ್ತು ಜೀವನ್ತು ಶರದಾಂ ಶತಮ್ ॥

ಕಾಯೇನ ವಾಚಾ ಮನಸೇನ್ದ್ರಿಯೈರ್ವಾ
ಬುದ್ಧ್ಯಾತ್ಮನಾ ವಾ ಪ್ರಕೃತೇಃ ಸ್ವಭಾವಾತ್ ।
ಕರೋಮಿ ಯದ್ಯತ್ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ ॥
ಹರಿಃ ಓಂ ಶ್ರೀಕೃಷ್ಣಾರ್ಪಣಮಸ್ತು ।
ಶ್ರೀ ಸದ್ಗುರುಚರಣಾರವಿನ್ದಾರ್ಪಣಮಸ್ತು ಓಂ ತತ್ಸತ್

ಹನ್ನೊಂದನೆಯ ಸಂಪುಟವು ಮುಗಿಯಿತು.
ಭೀಷ್ಮಪರ್ವ

ಜನಮೇಜಯ ಉವಾಚ :

ಕಥಂ ಯುಯುಧಿರೇ ವೀರಾಃ ಕುರುಪಾಣ್ಡವಸೋಮಕಾಃ ।
ಪಾರ್ಥಿವಾಃ ಸುಮಹಾತ್ಮಾನೋ ನಾನಾದೇಶಸಮಾಗತಾಃ ॥೧॥

## ಉದ್ಯೋಗಪರ್ವಪಠನಫಲಶ್ರುತಿಃ

ಷಟ್‌ಶ್ಲೋಕಾಸ್ತು ಸಹಸ್ರಾಣಿ ಅಷ್ಟಶ್ಲೋಕಶತಾನಿ ಚ ।
ಅಷ್ಟಾಶೀತಿಶ್ಚ ವೈ ಶ್ಲೋಕಾ ಉದ್ಯೋಗಂ ಪರ್ವ ಚೋತ್ತಮಮ್ ॥

೬,೮೮೮ ಶ್ಲೋಕಗಳಿಂದ ಕೂಡಿರುವ ಈ ಉದ್ಯೋಗಪರ್ವವು ಉತ್ತಮೋತ್ತಮವಾಗಿದೆ.

ಏತತ್ಸುಮಹದಾಖ್ಯಾನಂ ಶ್ರುತ್ವಾ ಪಾಪೈಃ ಪ್ರಮುಚ್ಯತೇ ।
ಸರ್ವತೀರ್ಥಾಭಿಷೇಕಂ ಚ ಸರ್ವದಾನಫಲಂ ಲಭೇತ್ ॥೨॥

ಇದು ಅತ್ಯುತ್ಕೃಷ್ಟವಾದ ಆಖ್ಯಾನವಾಗಿದೆ. ಇದನ್ನು ಕೇಳುವುದರಿಂದ ಮಾನವನು ಸರ್ವಪಾಪಗಳಿಂದಲೂ ವಿಮುಕ್ತನಾಗುತ್ತಾನೆ. ಸರ್ವಪುಣ್ಯ ತೀರ್ಥಗಳಲ್ಲಿಯೂ ಅವಗಾಹನಮಾಡಿದ ಪುಣ್ಯವು ಲಭಿಸುತ್ತದೆ. ಷೋಡಶಮಹಾದಾನಗಳ ಮತ್ತು ಎಲ್ಲ ದಾನಗಳ ಮಹಾಫಲವೂ ಉದ್ಯೋಗಪರ್ವ ಶ್ರವಣದಿಂದ ಲಭ್ಯವಾಗುತ್ತದೆ.

ವಿಪ್ರೇಭ್ಯೋ ಭೋಜನಂ ದೇಯಂ ವ್ಯಾಸಾಯಾಭರಣಾನಿ ಚ ।
ಗಾಶ್ಚ ಚನ್ದನವಾಸಾಂಸಿ ದದ್ಯಾದುದ್ಯೋಗಪರ್ವಣಿ ॥೩॥

ಈ ಪರ್ವದ ಶ್ರವಣಾನಂತರದಲ್ಲಿ ಬ್ರಾಹ್ಮಣಭೋಜನವಾಗಬೇಕು. ವ್ಯಾಸರಿಗೆ (ಪ್ರವಚನಮಾಡುವವರಿಗೆ) ಗೋವುಗಳನ್ನೂ, ಚಂದನವನ್ನೂ, ವಸ್ತ್ರಗಳನ್ನೂ, ಆಭರಣಗಳನ್ನೂ ಕೊಡಬೇಕು.

ಭಾರತಸ್ಯ ಪದೈಕೇನ ಗಙ್ಗಾಯಾ ದರ್ಶನೇನ ಚ ।
ವಿಷ್ಣೋಃ ಸ್ಮರಣಮಾತ್ರೇಣ ಸರ್ವಪಾಪೈಃ ಪ್ರಮುಚ್ಯತೇ ॥೪॥

ಭಾರತದಲ್ಲಿನ ಒಂದು ಪದದ ಉಚ್ಚಾರಣೆ ಮತ್ತು ಮನನದಿಂದಲೂ, ಗಂಗೆಯ ದರ್ಶನದಿಂದಲೂ, ವಿಷ್ಣುವಿನ ಸ್ಮರಣೆಯಿಂದಲೂ – ಮಾನವನು ಸರ್ವಪಾಪಗಳಿಂದಲೂ ವಿಮುಕ್ತನಾಗುತ್ತಾನೆ.

ಯಃ ಸರ್ವಂ ಶೃಣುತೇ ರಾಜನ್ನಿದಂ ಶ್ರೀಪರಿವರ್ಧನಮ್ ।
ಸರ್ವಪಾಪವಿನಿರ್ಮುಕ್ತೋ ಲಭತೇ ವಾಞ್ಛಿತಂ ಫಲಮ್ ॥೫॥

ಜನಮೇಜಯ! ಸಂಪತ್ತನ್ನು ಅಧಿಕಗೊಳಿಸುವ ಈ ಉದ್ಯೋಗಪರ್ವ

ವನ್ನು ಕೇಳುವ ಮನುಜನು ಸರ್ವಪಾಪಗಳಿಂದಲೂ ವಿಮುಕ್ತನಾಗಿ ತಾನಿಚ್ಛಿಸಿದ ಫಲವನ್ನು ಪಡೆದುಕೊಳ್ಳುತ್ತಾನೆ.

**ಯೋ ಭೂತ್ವಾ ಸಾವಧಾನೋ ವೈ ಶೃಣೋತಿ ಶ್ರಾವಯತ್ಯಪಿ ।**
**ಸ ವಾಞ್ಛಿತಾರ್ಥಂ ಲಭತೇ ಪುತ್ರಪೌತ್ರಸಮನ್ವಿತಃ ॥೬॥**

ಯಾವನು ಸಾವಧಾನಚಿತ್ತನಾಗಿದ್ದುಕೊಂಡು ಈ ಉದ್ಯೋಗಪರ್ವವನ್ನು ಕೇಳುತ್ತಾನೆಯೋ ಅಥವಾ ಹೇಳುತ್ತಾನೆಯೋ–ಅವನು ಪುತ್ರ-ಪೌತ್ರರೊಡನೆ ಕೂಡಿಕೊಂಡು ಅಪೇಕ್ಷಿಸಿದ ಫಲವನ್ನು ಹೊಂದುತ್ತಾನೆ.

**ಉದ್ಯೋಗಂ ಲಭತೇಽಯಂ ತು ಪಾಣ್ಡವೋದ್ಯೋಗಸಂಶ್ರಯಾತ್ ।**
**ಶ್ರುತೇಽಸ್ಮಿನ್ನೃಪತೇ ದದ್ಯಾದ್ಬ್ರಾಹ್ಮಣೇಭ್ಯಶ್ಚ ದಕ್ಷಿಣಾಮ್ ॥೭॥**

ಪಾಣ್ಡವೋದ್ಯೋಗದ ಆಶ್ರಯದಿಂದಾಗಿ (ಉದ್ಯೋಗಪರ್ವವನ್ನು ಕೇಳುವುದರಿಂದ) ನಿರುದ್ಯೋಗಿಯಾದ ಮಾನವನು ಉದ್ಯೋಗವನ್ನು ಪಡೆಯುತ್ತಾನೆ. ಈ ಪರ್ವದ ಶ್ರವಣಾನಂತರದಲ್ಲಿ ಬ್ರಾಹ್ಮಣರಿಗೆ ಭೂರಿದಕ್ಷಿಣೆಯನ್ನು ಕೊಡಬೇಕು.

**ಭೋಜಯೇದ್ವಿವಿಧಾಹಾರೈರ್ಭಕ್ಷ್ಯಭೋಜ್ಯಸಮನ್ವಿತೈಃ ।**
**ಪಾಠಕಂ ಚ ವಿಶೇಷೇಣ ಸ್ವರ್ಣಗೋದಾನಪೂರ್ವಕಮ್ ॥೮॥**

ಅನೇಕವಿಧವಾದ ಭಕ್ಷ್ಯ-ಭೋಜ್ಯಾದಿಗಳಿಂದ ಕೂಡಿದ ಮೃಷ್ಟಾನ್ನದಿಂದ ಬ್ರಾಹ್ಮಣರನ್ನು ಭೋಜನಮಾಡಿಸಬೇಕು. ಪಾಠಕನನ್ನೂ ಸ್ವರ್ಣ-ಗೋದಾನಪೂರ್ವಕವಾಗಿ ವಿಶೇಷವಾಗಿ ಸಂಪೂಜಿಸಬೇಕು.

**ರಾಜನ್ಜನಮೇಜಯ ತ್ವದ್ಯ ತ್ವಮಪ್ಯೇವಂ ಸಮಾಚರ ।**
**ಅತಃ ಪರಂ ಭೀಷ್ಮಪರ್ವ ಶೃಣು ರಾಜನ್ಸಮಾಹಿತಃ ॥೯॥**

ಜನಮೇಜಯರಾಜನೇ! ನೀನೂ ಹಾಗೆಯೇ ಮಾಡು. ಅನಂತರದಲ್ಲಿ ಏಕಾಗ್ರಚಿತ್ತನಾಗಿ ಮುಂದಿನ ಭೀಷ್ಮಪರ್ವವನ್ನು ಕೇಳು.

**ಶುಭಮಸ್ತು ಸರ್ವಜಗತಾಂ ಪರಹಿತ-**
**ನಿರತಾ ಭವನ್ತು ಭೂತಗಣಾಃ ।**
**ದೋಷಾಃ ಪ್ರಯಾನ್ತು ಶಾನ್ತಿಂ**
**ಸರ್ವತ್ರ ಸುಖೀಭವನ್ತು ಲೋಕಾಃ ॥೧೦॥**

ಸಮಸ್ತಜಗತ್ತುಗಳಿಗೂ ಶುಭವುಂಟಾಗಲಿ. ಭೂತಗಣಗಳು (ಸಕಲಪ್ರಾಣಿಗಳು) ಇತರರಿಗೆ ಹಿತವನ್ನುಂಟುಮಾಡುವುದರಲ್ಲಿಯೇ ನಿರತವಾಗಿರಲಿ. ಮಾನವರ ಎಲ್ಲ ದೋಷಗಳೂ ಶಾಂತವಾಗಲಿ (ಲುಪ್ತವಾಗಲಿ.) ಎಲ್ಲ ಲೋಕಗಳೂ ಸುಖವಾಗಿ ಬಾಳಲಿ.

---

## ಫಲಶ್ರುತಿಯ ಪಾಠಾಂತರಗಳು

ಉದ್ಯೋಗಪರ್ವ ಯಃ ಶ್ರುತ್ವಾ ಚಾತುರ್ಮಾಸ್ಯೇ ವಿಶೇಷತಃ ।
ಸರ್ವಾನ್ಕಾಮಾನವಾಪ್ನೋತಿ ದೀರ್ಘಮಾಯುಶ್ಚ ವಿನ್ದತಿ ॥೧॥

ಶ್ರುತೇ ಪರ್ವಣಿ ಯೋ ಭಕ್ತ್ಯಾ ಸಂಪೂಜ್ಯ ಪುರುಷೋತ್ತಮಮ್ ।
ವ್ಯಾಸಾಯ ದದತೇ ದಾನಂ ಆನನ್ತ್ಯಾಯೋಪತಿಷ್ಠತಿ ॥೨॥

ತೇನ ದಾನೇನ ಸುಪ್ರೀತೋ ಜಾಯತೇ ಮಧುಸೂದನಃ ।
ವ್ಯಾಸರೂಪೀ ಚ ಭಗವಾನ್ಸೂರ್ಯೋ ನಾರಾಯಣಃ ಪ್ರಭುಃ ॥

ಉದ್ಯೋಗಪರ್ವ ಶ್ರುತ್ವಾ ತು ಬ್ರಾಹ್ಮಣಾನ್ಭೋಜಯೇತ್ಪುನಃ ।
ಪ್ರದೇಯಂ ಕಾಞ್ಚನಂ ಚಾಪಿ ಸರ್ವಪಾಪವಿಶುದ್ಧಯೇ ॥೪॥

ಪುಸ್ತಕಸ್ಯಾಪಿ ಕರ್ತವ್ಯಾ ಪೂಜಾ ಪರಮಶೋಭನಾ ।
ವಸ್ತ್ರಪುಷ್ಪಫಲೈಶ್ಚೈವ ಶಾರದಾ ಪ್ರೀಯತಾಮಿತಿ ॥೫॥

ಮಹಾಭಾರತಪರ್ವೈಕಂ ಯೋ ದದಾತಿ ದ್ವಿಜಾತಯೇ ।
ಶ್ಲೋಕಾನಾಂ ಸಂಖ್ಯಯಾ ರಾಜನ್ಯಾವಚ್ಚ ಯುಗಸಂಖ್ಯಯಾ ॥೬॥

ಸ್ವರ್ಗಲೋಕಮನುಪ್ರಾಪ್ಯ ಪಿತೃಭಿಃ ಸಹ ಮೋದತೇ ।
ಭಾರತಂ ಪಞ್ಚಮೋ ವೇದೋ ಯೋ ಜ್ಞೇಯಸ್ತತ್ತ್ವವೇದಿಭಿಃ ॥೭॥

ಶ್ರೋತವ್ಯೋ ವಾ ಮಹಾರಾಜ ಸರ್ವಪಾಪಪ್ರಶಾನ್ತಯೇ ।
ಉದ್ಯೋಗಪರ್ವ ಯಃ ಶ್ರುತ್ವಾ ಶ್ರದ್ಧಾವಾನ್ಸತತೋತ್ಥಿತಃ ॥೮॥

ಆಜನ್ಮಸಂಚಿತಾತ್ಪಾಪಾನ್ಮುಚ್ಯತೇ ನಾತ್ರ ಸಂಶಯಃ ।
ಉದ್ಯೋಗಪರ್ವ ಶ್ರುತ್ವಾ ಯಃ ಶತಭೋಜ್ಯಂ ಚ ದಾಪಯೇತ್ ॥೯॥

ಸರ್ವತೀರ್ಥಫಲಂ ಚೈವ ಸರ್ವಯಜ್ಞಫಲಂ ಲಭೇತ್ ।
ಅಶ್ವಮೇಧಸಹಸ್ರಸ್ಯ ರಾಜಸೂಯಶತಸ್ಯ ಚ ॥೧೦॥

ಗವಾಂ ಕೋಟಿಸಹಸ್ರಸ್ಯ ಫಲಂ ಪ್ರಾಪ್ನೋತಿ ಮಾನವಃ ।
ತೇನ ಬ್ರಹ್ಮಾ ಚ ರುದ್ರಶ್ಚ ವಿಷ್ಣುಶ್ಚ ವಸವಸ್ತಥಾ ॥೧೧॥

ಪ್ರಸನ್ನೇ ವಾಚಕೇ ವಿಪ್ರೇ ಪ್ರಸನ್ನಾಃ ಸರ್ವದೇವತಾಃ ।
ಧರ್ಮಾರ್ಥಕಾಮಮೋಕ್ಷಾಣಾಂ ಫಲಂ ಸಂಪ್ರಾಪ್ನುಯಾನ್ನರಃ ॥೧೨॥

ವಿಧಿವದ್ಭೋಜಯೇದ್ರಾಜನ್ಮಧುಪಾಯಸಮುತ್ತಮಮ್ ।
ಉದ್ಯೋಗೇ ಭರತಶ್ರೇಷ್ಠ ಸರ್ವಕಾಮಸಮನ್ವಿತಃ ॥೧೩॥

ಭೋಜನೈರ್ಭೋಜಯೇದ್ವಿಪ್ರಾನ್ಗನ್ಧಮಾಲ್ಯೈರಲಙ್ಕೃತಾನ್ ।
ಶುಕ್ಲಾಮ್ಬರಧರಸ್ತತ್ರ ಶುಚಿರ್ಭೂತ್ವಾ ಸ್ವಲಂಕೃತಃ ॥೧೪॥

ಯಶ್ಚಾನೇನ ಪ್ರಕಾರೇಣ ಭಾರತಂ ಶ್ರಾವಯೇನ್ನರಃ ।
ತಥಾ ದಾನಸ್ಯ ಮಾಹಾತ್ಮ್ಯಂ ಲೋಕಾನುದ್ಧರತಿ ಪ್ರಭೋ ॥೧೫॥

ಉದ್ಯೋಗಪರ್ವವನ್ನು ಕೇಳುವವನು ಅದರಲ್ಲಿಯೂ ಚಾತುರ್ಮಾಸ್ಯದಲ್ಲಿ ನಿಯಮಾನುಷ್ಠಾನದಿಂದಿರುತ್ತಾ ಶ್ರವಣಮಾಡುವವನು ಸಕಲಕಾಮನೆಗಳನ್ನೂ ಪಡೆದುಕೊಳ್ಳುತ್ತಾನೆ ಮತ್ತು ದೀರ್ಘಾಯುಷ್ಮಂತನಾಗುತ್ತಾನೆ. ಈ ಪರ್ವವನ್ನು ಭಕ್ತಿಯಿಂದ ಕೇಳಿದ ಬಳಿಕ, ಪುರುಷೋತ್ತಮನನ್ನು ಸಂಪೂಜಿಸಿ, ವ್ಯಾಸರೂಪಿಯಾದ ಪಾಠಕನಿಗೆ ಯಾವನು ದಾನಕೊಡುತ್ತಾನೆಯೋ ಅಂತಹವನಿಗೆ ಅಂತ್ಯವೇ ಇಲ್ಲದಷ್ಟು ಫಲಗಳು ಲಭಿಸುತ್ತವೆ. ಆ ದಾನದಿಂದ ವ್ಯಾಸರೂಪಿಯಾದ, ಭಗವಂತನಾದ, ಸೂರ್ಯಸಮಾನತೇಜಸ್ವಿಯಾದ, ಪ್ರಭುವಾದ, ಮಧುಸೂದನನಾದ ನಾರಾಯಣನು ಸುಪ್ರೀತನಾಗುತ್ತಾನೆ. ಉದ್ಯೋಗಪರ್ವವನ್ನು ಕೇಳಿದನಂತರ ಸರ್ವಪಾಪಗಳ ನಿರ್ಮೂಲನಕ್ಕಾಗಿ ಬ್ರಾಹ್ಮಣರಿಗೆ ಭೋಜನಮಾಡಿಸಬೇಕು. ಅವರಿಗೆ ಸುವರ್ಣವನ್ನೂ ದಾನವಾಗಿ ಕೊಡಬೇಕು. ಮಹಾಭಾರತಗ್ರಂಥವೂ ವಸ್ತ್ರ-ಪುಷ್ಪ-ಫಲಾದಿಗಳಿಂದ-ಶಾರದಾಂಬೆಯು ಸುಪ್ರೀತಳಾಗಲೆಂದು—ಪೂಜಿಸಲ್ಪಡಬೇಕು. ಮಹಾಭಾರತದ ಪರ್ವವಿರುವ ಪುಸ್ತಕವೊಂದನ್ನು ಬ್ರಾಹ್ಮಣನಿಗೆ ದಾನ

ಮಾಡಿದ್ದೇ ಆದರೆ ಆ ಪರ್ವದಲ್ಲಿ ಶ್ಲೋಕಗಳೆಷ್ಟಿವೆಯೋ ಅಷ್ಟು ಯುಗಗಳ ಕಾಲ ಆ ದಾನಿಯು ಸ್ವರ್ಗದಲ್ಲಿ ತನ್ನ ಪಿತೃಗಳೊಡನೆ ಆನಂದದಿಂದಿರುತ್ತಾನೆ. ತತ್ತ್ವದರ್ಶಿಗಳಾದವರು– ಐದನೆಯ ವೇದವೆಂದು ಪ್ರಸಿದ್ಧವಾದ ಮಹಾಭಾರತವನ್ನು ಸರ್ವಪಾಪಗಳ ಪರಿಹಾರಕ್ಕಾಗಿ ಕೇಳಲೇಬೇಕು – ಎನ್ನುತ್ತಾರೆ. ಅನುದಿನವೂ ಪ್ರಾತಃಕಾಲದಲ್ಲೆದ್ದು ಸ್ನಾನ-ಸಂಧ್ಯಾವಂದನಾದಿಗಳನ್ನು ಮುಗಿಸಿಕೊಂಡು ಉದ್ಯೋಗಪರ್ವದ ಕಥೆಯನ್ನು ಯಾವನು ಕೇಳುತ್ತಾನೆಯೋ– ಅಂತಹವನು ಅನೇಕಾನೇಕಜನ್ಮಗಳಿಂದ ಸಂಚಿತವಾದ ಪಾಪಗಳಿಂದಲೂ ವಿಮುಕ್ತನಾಗುತ್ತಾನೆ. ಇದರಲ್ಲಾವ ಸಂಶಯವೂ ಇಲ್ಲ. ಉದ್ಯೋಗಪರ್ವವನ್ನು ಪೂರ್ಣವಾಗಿ ಕೇಳಿದನಂತರದಲ್ಲಿ ಯಾವನು ನೂರು ಮಂದಿಗೆ ಸವಿಯೂಟವನ್ನು ಉಣಿಸುತ್ತಾನೆಯೋ– ಅವನಿಗೆ ಸರ್ವತೀರ್ಥಗಳಲ್ಲಿ ಅವಗಾಹನಮಾಡಿದ ಫಲವೂ ಮತ್ತು ಸರ್ವಯಜ್ಞಗಳನ್ನು ಮಾಡಿದ ಫಲವೂ ಲಭಿಸುತ್ತದೆ. ಸಾವಿರ ಅಶ್ವಮೇಧಯಾಗಗಳನ್ನು ಮಾಡಿದ ಫಲವನ್ನೂ, ನೂರು ರಾಜಸೂಯಯಾಗಗಳನ್ನು ಮಾಡಿದ ಫಲವನ್ನೂ ಮತ್ತು ಸಾವಿರ ಕೋಟಿ ಹಸುಗಳನ್ನು ದಾನಮಾಡಿದ ಫಲವನ್ನೂ ಉದ್ಯೋಗಪರ್ವ ಶ್ರವಣಮಾಡಿದವನು ಪಡೆದುಕೊಳ್ಳುತ್ತಾನೆ. ಉದ್ಯೋಗಪರ್ವ ಕಥಾಶ್ರವಣ ದಿಂದ ಬ್ರಹ್ಮ, ರುದ್ರ, ವಿಷ್ಣು ಮತ್ತು ಅಷ್ಟವಸುಗಳೂ ಸುಪ್ರೀತ ರಾಗುತ್ತಾರೆ. ಉದ್ಯೋಗಪರ್ವವನ್ನು ಪ್ರವಚನಮಾಡುವ ವಿಪ್ರನು ಸುಪ್ರೀತನಾದರೆ–ಸಕಲದೇವತೆಗಳೂ ಸುಪ್ರೀತರಾಗುತ್ತಾರೆ. ಕಥೆಯನ್ನು ಕೇಳಿದವನು ಧರ್ಮಾರ್ಥ-ಕಾಮ-ಮೋಕ್ಷಗಳ ಫಲವನ್ನು ಪಡೆಯುತ್ತಾನೆ. ಪಾಠಕನನ್ನು ಉತ್ತಮೋತ್ತಮವಾದ ಮಧುರವಾದ ಮಧುಸಹಿತವಾದ ಪಾಯಸದಿಂದ ವಿಧಿವತ್ತಾಗಿ ಭೋಜನಮಾಡಿಸಬೇಕು. ಭರತಶ್ರೇಷ್ಠನೇ! ಉದ್ಯೋಗಪರ್ವವು ಪರಿಸಮಾಪ್ತಿಹೊಂದಿದ ಬಳಿಕ ಶ್ರೋತೃವು ವಿಪ್ರರನ್ನು ಗಂಧ-ಮಾಲ್ಯಾದಿಗಳಿಂದ ಸಮಲಂಕರಿಸಿ ಭೋಜನಮಾಡಿಸಬೇಕು. ತಾನೂ ಸಕಲಕಾಮನಾವಸ್ತುಗಳಿಂದಲೂ ಸಮನ್ವಿತನಾಗಿ ಶುಕ್ಲಾಂಬರಧರನಾಗಿ ಶುಚೀ ಭೂತನಾಗಿ ಅಲಂಕೃತನಾಗಬೇಕು. ಯಾವನು ಈ ರೀತಿಯಲ್ಲಿ ಮಹಾ ಭಾರತವನ್ನು ಪ್ರವಚನಮಾಡುತ್ತಾನೆಯೋ ದಾನದ ಮಹಿಮೆಯನ್ನೂ

ಹಾಗೆಯೇ ವಿವರಿಸುತ್ತಾನೆಯೋ– ಅವನು ಲೋಕಗಳನ್ನೇ ಉದ್ಧರಿಸಲು ಸಮರ್ಥನಾಗುತ್ತಾನೆ.

## ಫಲಶ್ರುತಿ (3)

ಶೃಣು ರಾಜನ್ನಿಧಿಮಿಮಂ ಫಲಂ ಯಚ್ಚಾಪಿ ಭಾರತೇ ।
ಶ್ರುತಾದ್ಭವತಿ ರಾಜೇನ್ದ್ರ ಯತ್ತ್ವಂ ಮಾಮನುಪೃಚ್ಛಸಿ ॥೧॥
ದಿವಿ ದೇವಾ ಮಹೀಪಾಲಾಃ ಕ್ರೀಡಾರ್ಥಮವನೀಂ ಗತಾಃ ।
ಋಷೀಣಾಂ ದೇವತಾನಾಂ ಚ ಸಂಭವೋ ವಸುಧಾತಲೇ ॥೨॥

ಅತ್ರ ರುದ್ರಾಸ್ತಥಾ ಸಾಧ್ಯಾ ವಿಶ್ವೇದೇವಾಶ್ಚ ಶಾಶ್ವತಾಃ ।
ಆದಿತ್ಯಾಶ್ಚಾಶ್ವಿನೌ ದೇವೌ ಲೋಕಪಾಲಾ ಮಹರ್ಷಯಃ ॥೩॥

ಗುಹ್ಯಕಾಶ್ಚ ಸಗನ್ಧರ್ವಾ ನಾಗಾ ವಿದ್ಯಾಧರಾಸ್ತಥಾ ।
ಸಿದ್ಧಾ ಧರ್ಮಃ ಸ್ವಯಂಭೂಶ್ಚ ಮುನಿಃ ಕಾತ್ಯಾಯನೋ ವರಃ ॥೪॥

ಗಿರಯಃ ಸಾಗರಾ ನದ್ಯಸ್ತಥೈವಾಪ್ಸರಸಾಂ ಗಣಾಃ ।
ಗ್ರಹಾಃ ಸಂವತ್ಸರಾಶ್ಚೈವ ಅಯನಾನ್ಯೃತವಸ್ತಥಾ ॥೫॥

ಸ್ಥಾವರಂ ಜಂಗಮಂ ಚೈವ ಜಗತ್ಸರ್ವಂ ಸುರಾಸುರಮ್ ।
ಭಾರತಾದ್ಭರತಶ್ರೇಷ್ಠ ಏಕಸ್ಥಮಿಹ ದೃಶ್ಯತೇ ॥೬॥

ತೇಷಾಂ ಶ್ರುತ್ವಾ ಪ್ರತಿಷ್ಠಾಂ ಚ ನಾಮಕರ್ಮಾನುಕೀರ್ತನಾತ್ ।
ಕೃತ್ವಾಪಿ ಪಾತಕಂ ಘೋರಂ ಸದ್ಯೋ ಮುಚ್ಯೇತ ಮಾನವಃ ॥೭॥

ಇತಿಹಾಸಮಿಮಂ ಶ್ರುತ್ವಾ ಯಥಾವದನುಪೂರ್ವಶಃ ।
ಸಂಯಮ್ಯಾನ್ತಃಶುಚಿರ್ಭೂತ್ವಾ ಪಾರಂ ಗತ್ವಾ ತು ಭಾರತೇ ॥೮॥
ತೇಷಾಂ ಶ್ರಾದ್ಧಾನಿ ದೇಯಾನಿ ರತ್ನಾನಿ ವಿವಿಧಾನಿ ಚ ।
ಗಾವಃ ಕಾಂಸ್ಯೋಪದೋಹಾಶ್ಚ ಕನ್ಯಾಶ್ಚೈವ ಸ್ವಲಂಕೃತಾಃ ॥೯॥
ಸರ್ವಕಾಮಗುಣೋಪೇತಾ ಧನಾನಿ ವಿವಿಧಾನಿ ಚ ।
ಭವನಾನಿ ವಿಚಿತ್ರಾಣಿ ಭೂಮಿರ್ವಾಸಾಂಸಿ ಕಾಞ್ಚನಮ್ ॥೧೦॥
ವಾಹನಾನಿ ಚ ದೇಯಾನಿ ಹಯಾ ಮತ್ತಾಶ್ಚ ವಾರಣಾಃ ।
ಶಯನಂ ಶಿಬಿಕಾಶ್ಚೈವ ಸ್ಯನ್ದನಾಶ್ಚ ಸ್ವಲಂಕೃತಾಃ ॥೧೧॥

ಯದ್ಯದ್ಗೃಹೇ ವರಂ ಕಿಂಚಿದ್ಯದ್ಯದಸ್ತಿ ಮಹದ್ವಸು ।
ತತ್ತದ್ದೇಯಂ ದ್ವಿಜಾತಿಭ್ಯ ಆತ್ಮಾ ದಾಸ್ಯಶ್ಚ ಸೂನವಃ ॥೧೨॥
ಶ್ರದ್ಧಯಾ ಪರಯಾ ದತ್ತಂ ಕ್ರಮಶಸ್ತಸ್ಯ ಪಾರಗಃ ।
ಸತ್ಯಾರ್ಜವಯುತೋ ದಾನ್ತಃ ಶುಚಿಃ ಶೌಚಸಮನ್ವಿತಃ ॥೧೩॥
ಶ್ರದ್ಧಾನೋ ಜಿತಕ್ರೋಧೋ ಯಥಾ ಸಿದ್ಧ್ಯತಿ ತಚ್ಛೃಣು ।
ಪರ್ವ ಉದ್ಯೋಗಮಾಸಾದ್ಯ ಕಾಞ್ಚನಂ ಸಂಪ್ರದಾಪಯೇತ್ ॥೧೪॥
ತತಃ ಸರ್ವಗುಣೋಪೇತಮನ್ನಂ ದದ್ಯಾತ್ಸುಸಂಸ್ಕೃತಮ್ ।
ಉದಿತಾದಿತ್ಯಸಂಕಾಶಂ ಜ್ವಲನ್ತಮನಲೋಪಮಮ್ ॥೧೫॥
ವಿಮಾನಂ ವಿಬುಧೈಸ್ಸಾರ್ಧಮಾರುಹ್ಯ ದಿವಿ ಗಚ್ಛತಿ ।
ವರ್ಷಾಯುತಾನಿ ಭವನೇ ಸಂಕ್ರಮ್ಯ ತ್ರಿಗುಣಂ ಫಲಮ್ ॥೧೬॥
ಷಷ್ಠೇ ದ್ವಿಗುಣಮಸ್ತೀತಿ ಸಪ್ತಮೇ ತ್ರಿಗುಣಂ ಫಲಮ್ ।
ಶುಚಿಃ ಶೀಲಾನ್ವಿತಾಚಾರಃ ಶುಕ್ಲವಾಸಾ ಜಿತೇನ್ದ್ರಿಯಃ ॥೧೭॥
ಸಂಸ್ಕೃತಃ ಸರ್ವಶಾಸ್ತ್ರಜ್ಞಃ ಶ್ರದ್ಧಾನೋಽನಸೂಯಕಃ ।
ಈದೃಶಾದ್ವಾಚಕಾದ್ರಾಜಞ್ಛ್ರುತ್ವಾ ಭಾರತ ಭಾರತಮ್ ॥೧೮॥
ನಿಯಮಸ್ಥಃ ಶುಚಿಃ ಶ್ರೋತಾ ಶೃಣ್ವಂಸ್ತತ್ಫಲಮಶ್ನುತೇ ।
ಜಾಮ್ಬೂನದಮಯೈರ್ದಿವ್ಯೈರ್ಗವಾಕ್ಷೈಃ ಸರ್ವತೋ ವೃತಮ್ ॥೧೯॥
ಸೇವಿತಂ ಚಾಪ್ಸರಃಸಙ್ಘೈರ್ದೇವೈರಾಕಾಶಚಾರಿಭಿಃ ।
ವಿಮಾನಂ ಸಮಧಿಷ್ಠಾಯ ಶ್ರಿಯಾ ಪರಮಯಾ ಜ್ವಲನ್ ॥೨೦॥
ದಿವ್ಯಮಾಲ್ಯಾಮ್ಬರಧರೋ ದಿವ್ಯಾಭರಣಭೂಷಿತಃ ।
ಮೋದತೇ ದೈವತೈಃ ಸಾರ್ಧಂ ದಿವಿ ದೇವೋ ಯಥಾಮರಃ ॥೨೧॥
ಉದ್ಯೋಗೇ ಭಾರತಶ್ರೇಷ್ಠೇ ಹವಿಷ್ಯೈಸ್ತರ್ಪಯೇದ್ದ್ವಿಜಾನ್ ।
ಪೂಪಕೈಶ್ಚ ವಿಶೇಷೇಣ ಸರ್ವಮನ್ನಂ ಪ್ರದಾಪಯೇತ್ ॥೨೨॥
ಯಥಾನ್ಯಾಯ್ಯಂ ಗನ್ಧಮಾಲ್ಯೈಃ ಪೂಜಯೇಚ್ಚ ಪೃಥಕ್ಪೃಥಕ್ ।
ಶ್ರುತೇಽಸ್ಮಿನ್ನೃಪತೇ ದದ್ಯಾದ್ಬ್ರಾಹ್ಮಣೇಭ್ಯಶ್ಚ ದಕ್ಷಿಣಾಮ್ ॥೨೩॥
ಭೋಜಯೇದ್ವಿವಿಧಾಹಾರೈರ್ಭಕ್ಷ್ಯಭೋಜ್ಯಸಮನ್ವಿತೈಃ ।
ಪಾಠಕಸ್ಯ ವಿಶೇಷಣ ಸ್ವರ್ಣಗೋದಾನಪೂರ್ವಕಮ್ ॥೨೪॥

ಸಂಹಿತಾಪುಸ್ತಕಾನ್ರಾಜನ್ಪ್ರಯತಃ ಶಿಷ್ಯಸಂಮಿತಾಮ್ ।
ಹಿರಣ್ಯಂ ಚ ಸುವರ್ಣಂ ಚ ದಕ್ಷಿಣಾಮಥ ದಾಪಯೇತ್ ॥೨೫॥
ದೇವತಾಃ ಕೀರ್ತಯೇತ್ಸರ್ವಾ ನರನಾರಾಯಣಾದಿಕಾ ।
ತತೋ ಗನ್ಧೈಶ್ಚ ಮಾಲ್ಯೈಶ್ಚ ಸ್ವಲಂಕೃತ್ಯ ದ್ವಿಜೋತ್ತಮಾನ್ ॥೨೬॥
ತರ್ಪಯೇದ್ವಿವಿಧೈಃ ಕಾಮೈರ್ದಾನೈರುಚ್ಚಾವಚೈಸ್ತಥಾ ।
ಅತಿರಾತ್ರಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಮಾನವಃ ॥೨೭॥
ಪ್ರಾಪ್ನುಯಾಚ್ಚ ಕ್ರತುಫಲಂ ಶ್ರುತ್ವಾ ಪರ್ವಣಿ ಪರ್ವಣಿ ।
ವಾಚಕೋ ಭರತಶ್ರೇಷ್ಠ ವ್ಯಕ್ತಾಕ್ಷರಪದಸ್ವರಃ ॥೨೮॥
ಭವಿಷ್ಯಂ ಶ್ರಾವಯೇದ್ವಿದ್ವಾನ್ಭಾರತಂ ಭರತರ್ಷಭ ।
ವಾಚಕಂ ಭರತಶ್ರೇಷ್ಠ ಭೋಜಯಿತ್ವಾ ಸ್ವಲಂಕೃತಮ್ ॥೨೯॥
ವಾಚಕೇ ತು ಪರೇ ತುಷ್ಟೇ ಸುಭಗಾ ಪ್ರೀತಿರುತ್ತಮಾ ।
ಬ್ರಾಹ್ಮಣೇಷು ಚ ತುಷ್ಟೇಷು ಪ್ರಸನ್ನಾಃ ಸರ್ವದೇವತಾಃ ॥೩೦॥
ಇತ್ಯೇಷ ವಿಧಿರುದ್ದಿಷ್ಟೋ ಮಯಾ ತೇ ದ್ವಿಪದಾಂ ವರ ।
ಶ್ರದ್ಧಧಾನೇನೈವ ಭಾವ್ಯಂ ಯನ್ಮಾಂ ತ್ವಂ ಪರಿಪೃಚ್ಛಸಿ ॥೩೧॥
ಭಾರತಶ್ರವಣಾದ್ರಾಜನ್ಸ್ಮರಣಾಚ್ಚ ದ್ವಿಜೋತ್ತಮ ।
ಸದಾ ಯದ್ಭವತಾ ಭಾವ್ಯಂ ಶ್ರೇಯಸ್ತು ಪರಮಿಚ್ಛತಾ ॥೩೨॥
ಭಾರತಂ ಶೃಣುಯಾನ್ನಿತ್ಯಂ ಭಾರತಂ ಪರಿಕೀರ್ತಯೇತ್ ।
ಭಾರತಂ ಭವನೇ ಯಸ್ಯ ತಸ್ಯ ದೇವಾಃ ಸ್ಥಿತಾಸ್ತ್ರಯಃ ॥೩೩॥
ಭಾರತಂ ಪರಮಂ ಪುಣ್ಯಂ ಭಾರತೇ ವಿವಿಧಾಃ ಕಥಾಃ ।
ಭಾರತಂ ಸೇವ್ಯತೇ ದಿವ್ಯೈರ್ಭಾರತಂ ಪರಮಂ ಪದಮ್ ॥೩೪॥
ಭಾರತಂ ಸರ್ವಶಾಸ್ತ್ರಾಣಾಂ ಸುಗಮಂ ಭರತರ್ಷಭ ।
ಭಾರತಾತ್ಪ್ರಾಪ್ಯತೇ ಶ್ರೇಯೋ ಮೋಕ್ಷಸ್ತ್ವೇತದ್ಬ್ರವೀಮಿ ತೇ ॥೩೫॥
ಮಹಾಭಾರತಮಾಖ್ಯಾನಂ ಕ್ಷಿತಿಂ ಗಾಂ ಚ ಸರಸ್ವತೀಮ್ ।
ಬ್ರಾಹ್ಮಣಂ ಕೇಶವಂ ಚೈವ ಕೀರ್ತಯನ್ನಾವಸೀದತಿ ॥೩೬॥
ಆದೌ ಚಾನ್ತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ ।
ಯತ್ರ ವಿಷ್ಣುಕಥಾ ದಿವ್ಯಾಃ ಶ್ರುತಯಶ್ಚ ಸನಾತನಾಃ ॥೩೭॥

ತಚ್ಛ್ರೋತವ್ಯಂ ಮಾನುಷೇಣ ಪರಮಂ ಪದಮಿಚ್ಛತಾ ।
ಏತತ್ಪವಿತ್ರಂ ಪರಮಮೇತದ್ಧರ್ಮನಿದರ್ಶನಮ್ ॥೩೮॥
ಏತತ್ಸರ್ವಗುಣೋಪೇತಂ ಶ್ರೋತವ್ಯಂ ಭೂತಿಮಿಚ್ಛತಾ ॥೩೯॥

ವೈಶಂಪಾಯನರು ಹೇಳುತ್ತಾರೆ :

"ಜನಮೇಜಯ! ಮಹಾಭಾರತವನ್ನು ಯಾವ ರೀತಿಯಲ್ಲಿ ಕೇಳಬೇಕೆಂಬ ನಿಯಮ ಮತ್ತು ಆ ನಿಯಮದಿಂದ ಕೇಳಿದರೆ ಲಭಿಸುವ ಫಲ–ಈ ವಿಷಯಗಳನ್ನು ಹೇಳಬೇಕೆಂದು ನೀನು ಕೇಳಿದೆಯಲ್ಲವೇ? ಅದನ್ನೇ ವಿವರಿಸಿ ಹೇಳುತ್ತೇನೆ. ಸಾವಧಾನಚಿತ್ತನಾಗಿ ಕೇಳು. ಸ್ವರ್ಗದಲ್ಲಿದ್ದ ದೇವತೆಗಳೂ ಮತ್ತು ಸ್ವರ್ಗಸುಖವನ್ನನುಭವಿಸುತ್ತಿದ್ದ ಮಹೀಪಾಲರೂ ಕ್ರೀಡಾರ್ಥವಾಗಿ ಭೂಮಿಯಲ್ಲವತರಿಸಿದರು. ಭೂಮಿಯಲ್ಲಿ ಋಷಿಗಳ ಮತ್ತು ದೇವತೆಗಳ ಪ್ರಾದುರ್ಭಾವವಾಯಿತು. ರುದ್ರರು, ಸಾಧ್ಯರು, ಶಾಶ್ವತರಾದ ವಿಶ್ವೇದೇವತೆಗಳು, ಆದಿತ್ಯರು, ಅಶ್ವಿನೀದೇವತೆಗಳು, ಲೋಕಪಾಲರು, ಮಹರ್ಷಿಗಳು, ಗುಹ್ಯಕರು, ಗಂಧರ್ವರು, ನಾಗರು, ವಿದ್ಯಾಧರರು, ಸಿದ್ಧರು, ಯಮಧರ್ಮ, ಬ್ರಹ್ಮ, ಶ್ರೇಷ್ಠಮುನಿಯಾದ ಕಾತ್ಯಾಯನ – ಇವರೆಲ್ಲರೂ ಮಹಾಭಾರತದಲ್ಲಿ ಪ್ರತಿಪಾದಿತರಾಗಿದ್ದಾರೆ. ಪರ್ವತಗಳು, ಸಮುದ್ರಗಳು, ನದಿಗಳು, ಅಪ್ಸರೆಯರ ಸಮೂಹಗಳು, ಗ್ರಹಗಳು, ಸಂವತ್ಸರಗಳು, ಅಯನಗಳು, ಋತುಗಳು, ಸ್ಥಾವರಗಳು, ಜಂಗಮಗಳು–ಇವುಗಳನ್ನೊಳಗೊಂಡ ಸಕಲಜಗತ್ತಿನ ವಿಷಯಗಳನ್ನೂ ಮಹಾಭಾರತದಲ್ಲಿ ಹೇಳಿದ್ದಾರೆ.

ಮಹಾಭಾರತದಿಂದಾಗಿ ಅಖಂಡಬ್ರಹ್ಮಾಂಡವೂ ಒಂದೆಡೆಯಲ್ಲಿಯೇ ಸೇರಿಬಿಟ್ಟಿರುವಂತೆ ಕಾಣುತ್ತದೆ. ಈ ಎಲ್ಲ ವಸ್ತುಗಳ, ಎಲ್ಲ ದೇವತೆಗಳ, ಎಲ್ಲ ಮಹರ್ಷಿಗಳ ಹೆಸರುಗಳು, ಅವರುಗಳು ಮಾಡಿರುವ ಕೆಲಸಗಳು–ಇವು ಗಳನ್ನು ಮಹಾಭಾರತದ ಮೂಲಕವಾಗಿ ಕೀರ್ತನೆಮಾಡಿದರೂ ಅಥವಾ ಕೇಳಿದರೂ ಘೋರವಾದ ಪಾತಕವೂ ಒಡನೆಯೇ ದೂರವಾಗುತ್ತದೆ. ಭಾರತವನ್ನು ಕೇಳಿದ ಮಾನವನು ಘೋರಪಾಪದಿಂದ ವಿಮುಕ್ತನಾಗುತ್ತಾನೆ.

ಆದಿಪರ್ವದ ಆನುಪೂರ್ವಿಯಿಂದ ಈ ಮಹಾಭಾರತವನ್ನು ಶುಚೀಭೂತ ನಾಗಿ ಕಡೆಯವರೆಗೂ ಕೇಳಿದನಂತರ ಅವರೆಲ್ಲರಿಗೂ ಪ್ರೀತಿಯಾಗುವಂತೆ ಪಿತೃಸಂಬಂಧವಾದ ಕರ್ಮಮಾಡಬೇಕು. (ಶ್ರದ್ಧೆಯಿಂದ ದಾನಮಾಡಬೇಕು.)

ತತ್ಸಂಬಂಧವಾಗಿ ವಿಧ-ವಿಧವಾದ ರತ್ನಗಳು, ಹಸುಗಳು, ಹಾಲುಕರೆಯುವ ಕಂಚಿನ ಪಾತ್ರೆಗಳು, ಸಾಲಂಕೃತಕನ್ಯೆಯರು, ಧನ, ಗೃಹಗಳು, ಭೂಮಿ, ವಸ್ತ್ರಗಳು, ಸುವರ್ಣ, ವಾಹನಗಳು, ಮನೆಯಲ್ಲಿರುವ ಯಾವುದೇ ಶ್ರೇಷ್ಠ ವಸ್ತುಗಳು– ಇವುಗಳೆಲ್ಲವನ್ನೂ ದಾನಮಾಡಬೇಕು. ಸತ್ಯನಿಷ್ಠನಾಗಿ, ಜಿತೇಂದ್ರಿಯನಾಗಿ, ಶುಚಿಯಾಗಿ, ಜಿತಕ್ರೋಧನಾಗಿ ಶ್ರದ್ಧೆಯಿಂದ ದಾನಮಾಡಿದ್ದೇ ಆದರೆ ಅವನಿಗೆ ಲಭ್ಯವಾಗುವ ಫಲವನ್ನು ಹೇಳುವೆನು ; ಕೇಳು : ಉದ್ಯೋಗಪರ್ವವನ್ನು ಕೇಳಿದನಂತರ ಸುವರ್ಣದಾನಮಾಡಿ ಸುಸಂಸ್ಕೃತವಾದ ಅನ್ನದಾನಮಾಡಬೇಕು. ಇದರಿಂದಾಗಿ ಬಾಲಸೂರ್ಯನಂತೆ ಬೆಳಗುವ, ಯಜ್ಞೇಶ್ವರನಂತೆ ಪ್ರಜ್ವಲಿಸುವ ವಿಮಾನದಲ್ಲಿ ಕುಳಿತು ದೇವತೆಗಳೊಡನೆ ಸ್ವರ್ಗಕ್ಕೆ ಹೋಗುತ್ತಾನೆ. ಅನೇಕ ವರ್ಷಗಳವರೆಗೆ ಸ್ವರ್ಗದಲ್ಲಿಯೇ ಆನಂದದಿಂದಿರುತ್ತಾನೆ. ಮಹಾಭಾರತವನ್ನು ಪ್ರವಚನಮಾಡುವವನು ಪರಿಶುದ್ಧನಾಗಿರಬೇಕು. ಸುಶೀಲನಾಗಿರಬೇಕು. ಸದಾಚಾರಸಂಪನ್ನನಾಗಿರಬೇಕು. ಶುಭ್ರವಾದ ವಸ್ತ್ರಗಳನ್ನು ಧರಿಸಿರಬೇಕು. ಜಿತೇಂದ್ರಿಯನಾಗಿರಬೇಕು. ಸುಸಂಸ್ಕೃತನಾಗಿಯೂ, ಸರ್ವಶಾಸ್ತ್ರವಿಶಾರದ ನಾಗಿಯೂ ಇರಬೇಕು. ಪ್ರವಚನವನ್ನು ಹೇಳುವುದರಲ್ಲಿ ಶ್ರದ್ಧಾವಂತನಾಗಿರ ಬೇಕು. ಅಸೂಯಾರಹಿತನಾಗಿರಬೇಕು. ಇಂತಹ ವಾಚಕನಿಂದ ನಿಯಮಸ್ಥನಾಗಿ ಪರಿಶುದ್ಧನಾಗಿ ಮಹಾಭಾರತವನ್ನು ಕೇಳಿದ್ದೇ ಆದರೆ ಅಂತಹವನು ಮಹಾಫಲವನ್ನು ಪಡೆಯುತ್ತಾನೆ.

ಸ್ವರ್ಣಮಯವಾದ ಗವಾಕ್ಷಗಳಿಂದ ಪರಿವೃತವಾಗಿರುವ, ಆಕಾಶದಲ್ಲಿ ಸಂಚರಿಸುವ, ದೇವತೆಗಳಿಂದಲೂ ಅಪ್ಸರೆಯರಿಂದಲೂ ಸಂಸೇವ್ಯಮಾನ ವಾದ ವಿಮಾನದಲ್ಲಿ ಕುಳಿತು ಪರಮೋಜ್ವಲವಾದ ಕಾಂತಿಯಿಂದ ಪ್ರಕಾ ಶಿಸುತ್ತಾ ದಿವ್ಯಾಂಬರಧರನಾಗಿ ದಿವ್ಯಾಭರಣಭೂಷಿತನಾಗಿ–ದೇವೇಂದ್ರನು ದೇವತೆಗಳೊಡನೆ ಕೂಡಿ ಆನಂದಿಸುವಂತೆ– ಮಹಾಭಾರತಕಥೆಯನ್ನು ಶ್ರದ್ಧೆ ಯಿಂದ ಕೇಳಿದವನು ಆನಂದಪಡುತ್ತಾನೆ. ಉದ್ಯೋಗಪರ್ವದ ಕಥಾಶ್ರವಣ ವಾದನಂತರ ದ್ವಿಜರಿಗೆ ಭೋಜನಮಾಡಿಸಿ ಯಥಾಶಕ್ತಿ ದಕ್ಷಿಣೆಯನ್ನು ಕೊಡಬೇಕು. ಪಾಠಕನಿಗೂ ಸ್ವರ್ಣ-ಗೋದಾನಾದಿಗಳನ್ನು ಕೊಡಬೇಕು. ಆ ಸಮಯದಲ್ಲಿ ದೇವತಾಕೀರ್ತನಗಳನ್ನು ಮಾಡಬೇಕು. ಸಮಾರಂಭದ

ಉತ್ಸವಕ್ಕೆ ಬಂದಿರುವ ಬ್ರಾಹ್ಮಣಶ್ರೇಷ್ಠರಿಗೆ ಗಂಧ-ಪುಷ್ಪಾದಿಗಳನ್ನಿತ್ತು ಅವರನ್ನು ಸಂಪೂಜಿಸಬೇಕು. ಹೀಗೆ ಮಾಡುವುದರಿಂದ ಅತಿರಾತ್ರಯಾಗದ ಫಲವು ಪ್ರಾಪ್ತವಾಗುತ್ತದೆ. ಪ್ರತಿಯೊಂದು ಪರ್ವಕಾಲದಲ್ಲಿಯೂ ಮಹಾ ಭಾರತವನ್ನು ಶ್ರವಣಮಾಡುತ್ತಿದ್ದರೆ ಮಹಾಕ್ರತುವನ್ನು ಮಾಡಿದ ಫಲವು ಲಭಿಸುತ್ತದೆ. (ಪ್ರತಿಯೊಂದು ಪರ್ವವನ್ನು ಕೇಳುವುದರಿಂದಲೂ ಕ್ರತುಫಲ ವನ್ನು ಪಡೆಯುತ್ತಾನೆ.) ವಾಚಕನು ಪ್ರವಚನಮಾಡುವಾಗ ಅಕ್ಷರಲೋಪ ವಿಲ್ಲದೇ ಸುಸ್ಪಷ್ಟವಾಗಿ ಹೇಳಬೇಕು. ಭಾರತಕಥಾಶ್ರವಣಕ್ಕೆ ಈ ವಿಧಿಯು ಹೇಳಲ್ಪಟ್ಟಿದೆ. ಭಾರತದ ಶ್ರವಣದಿಂದಲೂ ಮತ್ತು ಸ್ಮರಣೆಯಿಂದಲೂ ಸಂಕಲ್ಪಿಸಿದ ಕಾರ್ಯಗಳು ಸಿದ್ಧಿಸುತ್ತವೆ. ವಿಶೇಷವಾದ ಶ್ರೇಯಸ್ಸುಂಟಾಗು ತ್ತದೆ. ಭಾರತವನ್ನು ನಿತ್ಯವೂ ಕೇಳಬೇಕು ಮತ್ತು ನಿತ್ಯವೂ ಓದುತ್ತಲೂ ಇರಬೇಕು. ಮಹಾಭಾರತಗ್ರಂಥವು ಯಾವನ ಮನೆಯಲ್ಲಿರುತ್ತದೆಯೋ ಅವನ ಮನೆಯಲ್ಲಿ ತ್ರಿಮೂರ್ತಿಗಳ (ಬ್ರಹ್ಮ-ವಿಷ್ಣು-ಮಹೇಶ್ವರರ) ಸಾನ್ನಿಧ್ಯ ವಿರುತ್ತದೆ. ಭಾರತವು ಮಹಾಪುಣ್ಯಪ್ರಾಪಕವಾದುದು. ಇದರಲ್ಲಿ ಅನೇಕಾ ನೇಕ ಉಪಾಖ್ಯಾನಗಳಿವೆ. ದೇವತೆಗಳೂ ಭಾರತವನ್ನು ಗೌರವಿಸುತ್ತಾರೆ. ಭಾರತವು ಸರ್ವಶಾಸ್ತ್ರಗಳಲ್ಲಿಯೂ ಸುಗಮವಾಗಿರುತ್ತದೆ. ಮಹಾಭಾರತ ಪಠನದಿಂದ ಇಹದಲ್ಲಿ ಶ್ರೇಯಸ್ಸು ಪ್ರಾಪ್ತವಾಗುವುದಲ್ಲದೇ ಮೋಕ್ಷವೂ ಲಭಿಸುತ್ತದೆ. ಮಹಾಭಾರತ, ಭೂಮಿ, ಧೇನು, ಸರಸ್ವತೀ, ಬ್ರಾಹ್ಮಣ, ಕೇಶವ–ಇವರನ್ನು ಕೀರ್ತನಮಾಡುವವನು ಎಂದಿಗೂ ವಿನಾಶಹೊಂದು ವುದಿಲ್ಲ. ಮಹಾಭಾರತದ ಆದಿಯಲ್ಲಿಯೂ ಮಧ್ಯದಲ್ಲಿಯೂ ಮತ್ತು ಅಂತ್ಯದಲ್ಲಿಯೂ ಅರ್ಥಾತ್ ಸರ್ವತ್ರ ವಿಷ್ಣುವೇ ಗೇಯನಾಗಿದ್ದಾನೆ. ವಿಷ್ಣುವನ್ನೇ ಸರ್ವತ್ರ ಹೊಗಳಿದ್ದಾರೆ. ಯಾವ ಮಹಾಗ್ರಂಥದಲ್ಲಿ ವಿಷ್ಣುವಿನ ದಿವ್ಯವಾದ ಕಥೆಗಳಿವೆಯೋ–ಸನಾತನವಾದ ವೇದಾಖ್ಯಾನಗಳಿವೆಯೋ– ಅಂತಹ ಗ್ರಂಥವನ್ನು ಶ್ರೇಯಸ್ಸನ್ನು ಇಚ್ಛಿಸತಕ್ಕವನು ಅತ್ಯವಶ್ಯವಾಗಿ ಪಠನಮಾಡಬೇಕು.

ಮಹಾಭಾರತವು ಪರಮಪವಿತ್ರವಾದುದು. ಧರ್ಮದ ನಿದರ್ಶನ ಗಳನ್ನು ಹೊಂದಿರತಕ್ಕುದು. ಸರ್ವಗುಣೋಪೇತವಾದುದು. ಶ್ರೇಯಃ ಕಾಮನು ಇದನ್ನು ಅತ್ಯವಶ್ಯವಾಗಿ ಪಠನಮಾಡಬೇಕು.

**ಫಲಶ್ರುತಿ (4)**

ಯಃ ಸರ್ವಂ ಶೃಣುತೇ ರಾಜನ್ನಿದಂ ಶ್ರೀಪರಿವರ್ಧನಮ್ ।
ಏತತ್ಸರ್ವಗುಣೋಪೇತಂ ಶ್ರೋತವ್ಯಂ ಭೂತಿಮಿಚ್ಛತಾ ॥೧॥
ಸರ್ವಪಾಪವಿನಿರ್ಮುಕ್ತೋ ಲಭತೇ ವಾಞ್ಛಿತಂ ಫಲಮ್ ।
ಯೋ ಭೂತ್ವಾ ಸಾವಧಾನೋ ವೈ ಶೃಣೋತಿ ಶ್ರಾವಯತ್ಯಪಿ ॥೨॥
ಸ ವಾಞ್ಛಿತಾರ್ಥಂ ಲಭತೇ ಪುತ್ರಪೌತ್ರಸಮನ್ವಿತಃ ।
ಉದ್ಯೋಗಂ ಲಭತೇ ಜನ್ತುಃ ಪಾಣ್ಡವೋದ್ಯೋಗಸಂಶ್ರಯಾತ್ ॥೩॥
ಜನಮೇಜಯ ಹೇ ರಾಜನ್ತ್ವಮಪ್ಯೇವಂ ಸಮಾಚರ।
ಅತಃ ಪರಂ ಭೀಷ್ಮಪರ್ವ ಶೃಣು ರಾಜನ್ಸಮಾಹಿತಃ ॥೪॥
ಭಾರತಂ ಭಾನುಮಾನಿನ್ದುರ್ಯದಿ ನ ಸ್ಯುರಮೀ ತ್ರಯಃ ।
ಅಜ್ಞಾನತಿಮಿರಾನ್ಧಸ್ಯ ಕಾವಸ್ಥಾ ಜಗತೋ ಭವೇತ್ ॥೫॥
ಯ ಇದಂ ಕೀರ್ತಯೇದ್ವಿದ್ವಾನ್ಸಶ್ಯೇತ ಶೃಣುಯಾನ್ನರಃ ।
ಸ ಬ್ರಹ್ಮಣಃ ಸ್ಥಾನಮೇತ್ಯ ಪ್ರಾಪ್ನುಯಾದ್ದೇವತುಲ್ಯತಾಮ್ ॥೬॥
ಇದಂ ಹಿ ವೇದೈಃ ಸಮ್ಮಿತಂ ಪವಿತ್ರಮಿದಮುತ್ತಮಮ್ ।
ಸ್ತವ್ಯಾನಾಮುತ್ತಮಂ ಚೇದಂ ಪುರಾಣಮೃಷಿಸಂಯುತಮ್ ॥೭॥
ಅಸ್ಮಿನ್ನರ್ಥಶ್ಚ ಧರ್ಮಶ್ಚ ನಿಖಿಲೇನೋಪದೇಕ್ಷ್ಯತೇ ।
ಇತಿಹಾಸೇ ಮಹಾಪುಣ್ಯೇ ಬುದ್ಧಿಶ್ಚ ಪರಿನೈಷ್ಠಿಕೀ ॥೮॥
ಅಕ್ಷುದ್ರಾನ್ದಾನಶೀಲಾಂಶ್ಚ ಸತ್ಯಶೀಲಾನನಾಸ್ತಿಕಾನ್ ।
ಕಾರ್ಷ್ಣವೇದಮಿಮಂ ಶ್ರುತ್ವಾ ಶ್ರಾವಯಿತ್ವಾರ್ಥಮಶ್ನುತೇ ॥೯॥
ಭ್ರೂಣಹತ್ಯಾಕೃತಂ ಚಾಪಿ ಪಾಪಂ ಜಹ್ಯಾನ್ನ ಸಂಶಯಃ ।
ಇತಿಹಾಸಮಿಮಂ ಶ್ರುತ್ವಾ ಪುರುಷೋಽಪಿ ಸುದಾರುಣಃ ॥೧೦॥
ಜಯೋ ನಾಮೇತಿಹಾಸೋಽಯಂ ಶ್ರೋತವ್ಯೋ ವಿಜಿಗೀಷುಣಾ ।
ಮಹೀಂ ಚಾಪಿ ಜಯೇತ್ಕೃತ್ಸ್ನಾಂ ಶತ್ರೂಂಶ್ಚಾಪಿ ಪರಾಜಯೇತ್ ॥೧೧॥
ಇದಂ ಪುಂಸವನಂ ಶ್ರೇಷ್ಠಮಿದಂ ಸ್ವಸ್ತ್ಯಯನಂ ಮಹತ್ ।
ಮಹಿಷೀಯುವರಾಜಾಭ್ಯಾಂ ಶ್ರೋತವ್ಯಂ ಬಹುಶಸ್ತಥಾ ॥೧೨॥
ಅರ್ಥಶಾಸ್ತ್ರಮಿದಂ ಮುಖ್ಯಂ ಧರ್ಮಶಾಸ್ತ್ರಮಿದಂ ಪರಮ್ ।
ಮೋಕ್ಷಶಾಸ್ತ್ರಮಿದಂ ಪ್ರೋಕ್ತಂ ವ್ಯಾಸೇನಾಮಿತಬುದ್ಧಿನಾ ॥೧೩॥

ಸಂಪ್ರತ್ಯಾಚಕ್ಷತೇ ಚೇದಂ ತಥಾಖ್ಯಾಸ್ಯನ್ತಿ ಚಾಪರೇ ।
ಪುತ್ರಾಃ ಶುಶ್ರೂಷವಃ ಸನ್ತಿ ಪ್ರೇಷ್ಯಾಶ್ಚ ಪ್ರಿಯಕಾರಿಣಃ ॥೧೪॥

ಶರೀರೇಣ ಕೃತಂ ಪಾಪಂ ವಚಸಾ ಮನಸೈವ ಚ ।
ಸರ್ವಂ ತತ್ತ್ಯಜತೇ ಕ್ಷಿಪ್ರಮಿದಂ ಶೃಣ್ವನ್ನರಃ ಸದಾ ॥೧೫॥

ಧರ್ಮ್ಯಂ ಯಶಸ್ಯಮಾಯುಷ್ಯಂ ಸ್ವರ್ಗ್ಯಂ ಪುಣ್ಯಂ ತಥೈವ ಚ ।
ಯ ಇದಂ ಮಾನವೋ ಭಕ್ತ್ಯಾ ಪುಣ್ಯಾನ್ವಿಪ್ರಾನ್ ಬ್ರಾಹ್ಮಣಾನ್ ಶುಚೀನ್ ॥
ಶ್ರಾವಯೇತ ಮಹಾಪುಣ್ಯಂ ತಸ್ಯ ಧರ್ಮಃ ಸನಾತನಃ ।
ಯೋಽಧೀತೇ ಪ್ರಥಮಂ ನಿತ್ಯಂ ಬ್ರಾಹ್ಮಣೋ ನಿಯತವ್ರತಃ ॥೧೭॥

ಚತುರೋ ವಾರ್ಷಿಕಾನ್ಮಾಸಾನ್ಸರ್ವಪಾಪೈಃ ಪ್ರಮುಚ್ಯತೇ ।
ಆಸ್ತಿಕಃ ಸತತಂ ಶೃಣ್ವನ್ನ ಕೃಚ್ಛ್ರೇಷ್ವವಸೀದತಿ ॥೧೮॥

ಉಭೇ ಸನ್ಧ್ಯೇ ಜಪನ್ಕಿಂಚಿತ್ಸರ್ವಪಾಪೈಃ ಪ್ರಮುಚ್ಯತೇ ।
ಯಶ್ಚೈನಂ ಶೃಣುಯಾನ್ನಿತ್ಯಮಾರ್ಷಂ ಶ್ರದ್ಧಾಸಮನ್ವಿತಃ ॥೧೯॥

ಸ ದೀರ್ಘಮಾಯುಃ ಕೀರ್ತಿಂ ಚ ಸ್ವರ್ಗತಿಂ ಪ್ರಾಪ್ನುಯಾನ್ನರಃ ।
ಚತ್ವಾರ ಏಕತೋ ವೇದಾ ಮಹಾಭಾರತಮೇಕತಃ ॥೨೦॥

ಸುರರ್ಷಿಭಿಃ ಸಮಾಗಮ್ಯ ತುಲಾಮಾರೋಪಿತಂ ಪುರಾ ।
ಮಹತ್ತ್ವಾಚ್ಚ ಗುರುತ್ವಾಚ್ಚ ಮಹಾಭಾರತಮುಚ್ಯತೇ ॥೨೧॥

ಗುರುವಿಪ್ರಾನ್ನಮಸ್ಕೃತ್ಯ ಮನೋಬುದ್ಧಿಸಮಾಧಿಭಿಃ ।
ಸಂಪೂಜ್ಯ ಚ ದ್ವಿಜಾನ್ಸರ್ವಾನ್ ತಥಾನ್ಯಾನ್ವಿದುಷೋ ಜನಾನ್ ॥
ಯೋ ಭಾರತಂ ಪೂಜಯತಿ ವಸ್ತ್ರದಾನೈ-
ರ್ಧೂಪೈಃ ಫಲೈಶ್ಚನ್ದನಪುಷ್ಪಪತ್ರೈಃ ।
ಸುವರ್ಣದಾನೇನ ಯಥಾ ಚ ಶಕ್ತ್ಯಾ
ಲೋಕಂ ಸ ಗಚ್ಛೇತ್ಫಲಮಸ್ಯ ಯೋನೇಃ ॥೨೩॥
ಯ ಇಮಾಂ ಕುರುತೇ ಪೂಜಾಂ ಸಮಾಪ್ತೌ ಪುಸ್ತಕಸ್ಯ ಚ।
ಸರ್ವಾನ್ಕಾಮಾನವಾಪ್ನೋತಿ ಪುತ್ರಪೌತ್ರಸಮನ್ವಿತಃ ॥೨೪॥

ಭಾರತಂ ನಿನ್ದಯೇದ್ಯಶ್ಚ ಪುಮಾನಧಮ ಏವ ಸಃ ।
ಬ್ರಹ್ಮಹತ್ಯಾಸಮಂ ಪಾಪಂ ಭವೇತ್ತಸ್ಯ ನ ಸಂಶಯಃ ॥೨೫॥

ಅಸ್ಯೈವ ಧರ್ಮಶಾಸ್ತ್ರಸ್ಯ ನಿನ್ದನೇ ಕ್ಷೀಯತೇ ಕುಲಮ್ ।
ಅಶ್ರದ್ಧೇಯೋ ನ ಪೂಜಾರ್ಹೋ ವಕ್ತವ್ಯಂ ತೇನ ಯುಜ್ಯತೇ ॥೨೬॥

ಸಂನಿಧಾನೇ ನ ಗನ್ತವ್ಯಂ ತಸ್ಯ ಯೋ ನಿನ್ದಯೇದಿದಮ್ ।
ಶ್ರುತಂ ಸ್ಮೃತಂ ಮತಂ ಯೇನ ಮಹಾಪಾತಕನಾಶನಮ್ ॥೨೭॥

"ಜನಮೇಜಯಮಹಾರಾಜ! ಯಾವನು ಸಂಪದ್ವರ್ಧಕವಾದ, ಸರ್ವಗುಣೋಪೇತವಾದ ಈ ಮಹಾಭಾರತವನ್ನು ಆಮೂಲಾಗ್ರವಾಗಿ ಕೇಳುತ್ತಾನೆಯೋ–ಅವನು ಅಭಿಲಾಷಿಸಿದ ಫಲವನ್ನು ಪಡೆದುಕೊಳ್ಳುತ್ತಾನೆ. ಶ್ರೇಯೋಭಿಲಾಷಿಯು ಈ ಮಹಾಭಾರತವನ್ನು ಖಂಡಿತವಾಗಿಯೂ ಪಠನ ಮಾಡಬೇಕು. ಯಾವನು ಸಾವಧಾನದಿಂದ ಈ ಉದ್ಯೋಗಪರ್ವವನ್ನು ಕೇಳುತ್ತಾನೆಯೋ ಮತ್ತು ಹೇಳುತ್ತಾನೆಯೋ–ಅಂತಹವನು ಪುತ್ರ-ಪೌತ್ರರನ್ನು ಪಡೆದುಕೊಳ್ಳುತ್ತಾನೆ. ಪಾಂಡವೋದ್ಯೋಗದ ಆಶ್ರಯದಿಂದಾಗಿ ಮನುಷ್ಯನು ಉದ್ಯೋಗವನ್ನೂ ಪಡೆದುಕೊಳ್ಳುತ್ತಾನೆ.

ಜನಮೇಜಯ! ನೀನೂ ಹೀಗೆಯೇ ಮಾಡು. ನಾನು ಹೇಳುವ ಮಹಾಭಾರತಕಥೆಯನ್ನು ಶ್ರದ್ಧೆಯಿಂದ ಕೇಳು. ಮುಂದೆ ಹೇಳುವ ಭೀಷ್ಮಪರ್ವವನ್ನು ಏಕಾಗ್ರಚಿತ್ತನಾಗಿ ಕೇಳು. ಭಾರತ, ಸೂರ್ಯ ಮತ್ತು ಚಂದ್ರ– ಈ ಮೂವರಿಲ್ಲದಿದ್ದರೆ ಅಜ್ಞಾನ ಮತ್ತು ಕತ್ತಲಿನಿಂದ ಆವೃತವಾದ ಈ ಜಗತ್ತಿನ ಅವಸ್ಥೆಯು ಏನಾಗುತ್ತಿತ್ತೆಂಬುದನ್ನು ಹೇಳಲು ಶಕ್ಯವಿಲ್ಲ. ಯಾವನು ಮಹಾಭಾರತವನ್ನು ಕೀರ್ತನಮಾಡುತ್ತಾನೆಯೋ, ಇದರಲ್ಲಿರುವ ತತ್ತ್ವಾರ್ಥಗಳನ್ನು ಕಂಡುಕೊಳ್ಳುತ್ತಾನೆಯೋ ಮತ್ತು ಯಾವನು ಹೇಳು ತ್ತಾನೆಯೋ–ಅವನು ಅವಸಾನಾನಂತರದಲ್ಲಿ ಬ್ರಹ್ಮಲೋಕಕ್ಕೆ ಹೋಗಿ ಅಲ್ಲಿ ದೇವತೆಗಳ ಪದವಿಗೆ ಸಮಾನವಾದ ಪದವಿಯನ್ನು ಪಡೆದುಕೊಳ್ಳುತ್ತಾನೆ. ಮಹಾಭಾರತವು ವೇದಗಳಿಗೆ ಸಮನಾದುದು, ಸ್ತೋತ್ರಾರ್ಹವಾದುದು. ಋಷಿಪ್ರೋಕ್ತವಾದ ಪುರಾಣವಿದು. ಇದರಲ್ಲಿ ಧರ್ಮಾರ್ಥಗಳು ಆಮೂಲಾಗ್ರವಾಗಿ ಪ್ರತಿಪಾದಿತವಾಗಿವೆ. ಮಹಾಪುಣ್ಯಪ್ರದವಾದ ಈ ಇತಿಹಾಸಪಠನದಿಂದ ಬುದ್ಧಿಯೂ ಸ್ಥಿರವಾಗುತ್ತದೆ. ಕ್ಷುದ್ರರಲ್ಲದವರಿಗೆ, ದಾನಶೀಲರಿಗೆ, ಸತ್ಯನಿಷ್ಠರಿಗೆ ಮತ್ತು ಆಸ್ತಿಕರಿಗೆ ಕಾರ್ಷ್ಣ ವೇದವೆಂದು ವಿಖ್ಯಾತವಾಗಿರುವ ಮಹಾಭಾರತಕಥಾಶ್ರವಣಮಾಡಿಸು

ವುದರಿಂದ ಮಹಾಫಲವು ಲಭಿಸುತ್ತದೆ. ಭ್ರೂಣಹತ್ಯೆಯಿಂದ ಪ್ರಾಪ್ತವಾಗುವ ಮಹಾಪಾಪವೂ ಮಹಾಭಾರತಶ್ರವಣದಿಂದ ಕಳೆದುಹೋಗುವುದರಲ್ಲಿ ಸಂಶಯವೇ ಇಲ್ಲ. ಈ ಮಹಾಭಾರತವನ್ನು ಕೇಳಿದ ಸುದಾರುಣ ಸುದುಷ್ಟನಾದ ಮನುಷ್ಯನೂ ಸತ್ಪುರುಷನಾಗುತ್ತಾನೆ. ಈ ಇತಿಹಾಸಕ್ಕೆ ಜಯವೆಂದೇ ಹೆಸರು. ವಿಜಯೇಚ್ಛುಗಳು ಇದನ್ನು ಅತ್ಯಗತ್ಯವಾಗಿ ಪಠನಮಾಡಬೇಕು.

ಮಹಾಭಾರತವನ್ನು ಪಠಿಸಿ ಇದರಲ್ಲಿರುವ ತತ್ತ್ವಗಳನ್ನು ಅನುಷ್ಠಾನದಲ್ಲಿಟ್ಟುಕೊಳ್ಳುವವನು ಪ್ರಪಂಚವನ್ನೇ ಜಯಿಸಬಲ್ಲನು. ಇದನ್ನು ಗರ್ಭಿಣೀಸ್ತ್ರೀಯರು ಕೇಳಿದರೆ ಗಂಡುಮಗುವನ್ನು ಪ್ರಸವಿಸುತ್ತಾರೆ. ಇದು ಬಹುಮಂಗಳಕರವಾದುದು. ಮಹಾರಾಣಿ-ಯುವರಾಜರು ಮಹಾಭಾರತ ಕಥೆಯನ್ನು ಪದೇ-ಪದೇ ಕೇಳುತ್ತಲೇ ಇರಬೇಕು. ವಿವಾಹವಾಗುವ ವಧೂ -ವರರೂ ಮಹಾಭಾರತಕಥೆಯನ್ನು ಪದೇ-ಪದೇ ಕೇಳಬೇಕು ಅಥವಾ ಓದಬೇಕು. ಇದಕ್ಕೆ ಕಾರಣವೇನೆಂದರೆ : ಜೀವನ ನಡೆಸುವವರಿಗೆ ಇದೊಂದು ಅರ್ಥಶಾಸ್ತ್ರಸ್ವರೂಪವಾಗಿದೆ ಮತ್ತು ಶ್ರೇಷ್ಠವಾದ ಧರ್ಮಶಾಸ್ತ್ರವೂ ಆಗಿದೆ. ಮಹಾಬುದ್ಧಿಶಾಲಿಗಳಾದ ವ್ಯಾಸರಿದನ್ನು ಮೋಕ್ಷಶಾಸ್ತ್ರವೆಂದೂ ಕರೆದಿದ್ದಾರೆ. ಭಾರತಾಧ್ಯಯನಮಾಡಿದರೆ ಪುತ್ರರು ಮಾತಾ-ಪಿತೃಗಳ ಶುಶ್ರೂಷೆಯಲ್ಲಿ ನಿರತರಾಗುತ್ತಾರೆ. ಭೃತ್ಯರು ವಿಧೇಯರಾಗುತ್ತಾರೆ ; ಸ್ವಾಮಿಗೆ ಪ್ರಿಯವಾದುದನ್ನು ಮಾಡುತ್ತಾರೆ. ಮನಸ್ಸಿನಿಂದ, ಮಾತಿನಿಂದ, ಶರೀರದಿಂದ ಮಾಡಿದ ಪಾಪವು ಮಹಾಭಾರತಶ್ರವಣದಿಂದ ಬಹಳ ಬೇಗ ನಿರಸನವಾಗುತ್ತದೆ. ಇದು ಧರ್ಮಪ್ರಾಪಕವಾದುದು ; ಸ್ವರ್ಗಪ್ರಾಪಕವಾದುದು ; ಮಹಾಪುಣ್ಯಪ್ರದವಾದುದು. ಯಾವ ಪಾಠಕನು ಈ ಮಹಾಭಾರತವನ್ನು ಪುಣ್ಯವಂತರಾದ ಪರಿಶುದ್ಧರಾದ ಬ್ರಾಹ್ಮಣರ ಮುಂದೆ ಹೇಳುತ್ತಾನೆಯೋ– ಅವನಿಗೆ ಅಕ್ಷೀಣವಾದ ಮಹಾಪುಣ್ಯವು ಲಭಿಸುತ್ತದೆ. ಯಾವ ಬ್ರಾಹ್ಮಣನು ನಿಯಮವ್ರತನಿಷ್ಠನಾಗಿದ್ದುಕೊಂಡು ಮಳೆಗಾಲದ ಚಾತುರ್ಮಾಸಗಳಲ್ಲಿ ವಿಚ್ಛಿತ್ತಿಯಿಲ್ಲದೇ ಮಹಾಭಾರತವನ್ನು ಪ್ರವಚನಮಾಡುವನೋ–ಅವನು ಸರ್ವಪಾಪಗಳಿಂದಲೂ ವಿಮುಕ್ತನಾಗುತ್ತಾನೆ. ಆಸ್ತಿಕನಾದವನು ಸತತವಾಗಿ ಇದನ್ನು ಕೇಳುತ್ತಿದ್ದರೆ ಅವನು ಯಾವ ಕಷ್ಟಕ್ಕೂ ಸಿಕ್ಕಿಕೊಳ್ಳುವುದಿಲ್ಲ. ಎರಡು

ಸಂಧ್ಯಾಕಾಲಗಳಲ್ಲಿಯೂ ಮಹಾಭಾರತವನ್ನು ಸ್ವಲ್ಪ-ಸ್ವಲ್ಪ ಪಠನಮಾಡು ತ್ತಿದ್ದರೂ ಸರ್ವಪಾಪಗಳಿಂದಲೂ ವಿಮುಕ್ತನಾಗುತ್ತಾನೆ. ಶ್ರದ್ಧಾನ್ವಿತವಾಗಿ ಯಾವನು ಋಷಿಪ್ರಣೀತವಾದ ಮಹಾಭಾರತವನ್ನು ಅನುದಿನವೂ ಕೇಳು ತ್ತಿರುತ್ತಾನೆಯೋ ಅವನಿಗೆ ದೀರ್ಘಾಯುಷ್ಯವುಂಟಾಗುತ್ತದೆ. ಕೀರ್ತಿಯನ್ನು ಪಡೆಯುತ್ತಾನೆ. ಅವಸಾನಾನಂತರದಲ್ಲಿ ಸ್ವರ್ಗವು ಲಭಿಸುತ್ತದೆ. ಹಿಂದೆ ಋಷಿಗಳು ತಕ್ಕಡಿಯ ಒಂದು ತಟ್ಟೆಯಲ್ಲಿ ಮಹಾಭಾರತವನ್ನೂ ಮತ್ತೊಂದು ತಟ್ಟೆಯಲ್ಲಿ ನಾಲ್ಕು ವೇದಗಳನ್ನೂ ಇಟ್ಟು ತೂಕಮಾಡಿದರು. ಮಹಾಭಾರತವೇ ಹೆಚ್ಚು ಭಾರವಾಗಿದ್ದಂತೆ ಕಂಡಿತು. ಮಹಾಭಾರತವು ಮಹತ್ತ್ವದಿಂದ ಕೂಡಿದ್ದೂ–ಗುರುತ್ವದಿಂದ (ಭಾರದಿಂದ) ಕೂಡಿದ್ದೂ ಆಗಿರು ವುದರಿಂದ ಇದಕ್ಕೆ ಮಹಾಭಾರತವೆಂದೇ ಹೆಸರಾಯಿತು. ಗುರು-ವಿಪ್ರರನ್ನೂ, ದ್ವಿಜರನ್ನೂ, ಇತರ ವಿದ್ವಾಂಸರನ್ನೂ ಯಥಾಯೋಗ್ಯವಾಗಿ ಸಂಪೂಜಿಸಿ, ನಮಸ್ಕರಿಸಿ, ಏಕಾಗ್ರಚಿತ್ತನಾಗಿ ಯಾವನು ಮಹಾಭಾರತಪುಸ್ತಕವನ್ನು ವಸ್ತ್ರ-ಧೂಪ-ಫಲ-ಚಂದನ-ಪುಷ್ಪಗಳಿಂದ ಪೂಜಿಸುತ್ತಾನೆಯೋ, ಯಥಾ ಶಕ್ತಿ ಸುವರ್ಣದಾನಮಾಡುತ್ತಾನೆಯೋ–ಅವನು ಉತ್ತಮಲೋಕಗಳನ್ನು ಹೊಂದುತ್ತಾನೆ. ಮಹಾಭಾರತಪ್ರವಚನಾನಂತರ ಯಾವನು ಮಹಾಭಾರತ ಪುಸ್ತಕಕ್ಕೆ ಈ ರೀತಿಯಲ್ಲಿ ಪೂಜೆಮಾಡುತ್ತಾನೆಯೋ ಅವನು ಪುತ್ರ-ಪೌತ್ರರನ್ನೂ ಪಡೆದುಕೊಂಡು ಸಕಲಕಾಮನೆಗಳನ್ನು ಪಡೆದುಕೊಳ್ಳುತ್ತಾನೆ.

ಮಹಾಭಾರತವನ್ನು ನಿಂದಿಸುವವನು ಅಧಮಾಧಮನೇ ಸರಿ. ಮಹಾಭಾರತವನ್ನು ನಿಂದಿಸುವವನಿಗೆ ಬ್ರಹ್ಮಹತ್ಯಾಪಾಪಕ್ಕೆ ಸಮಾನವಾದ ಪಾಪವೇ ಉಂಟಾಗುತ್ತದೆ. ಧರ್ಮಶಾಸ್ತ್ರರೂಪವಾದ ಈ ಮಹಾಭಾರತದ ನಿಂದನೆಯಿಂದ ಕುಲವು ಕ್ಷಯಿಸಿಹೋಗುತ್ತದೆ. ಶ್ರದ್ಧೆಯಿಲ್ಲದವನಿಗೆ ಇದನ್ನು ಹೇಳಲೇಬಾರದು. ಮಹಾಭಾರತವನ್ನು ನಿಂದಿಸುವವನ ಸಮೀಪಕ್ಕೂ ಹೋಗಬಾರದು. ಯಾವನಿಂದ ಇದು ಕೇಳಲ್ಪಡುತ್ತದೆಯೋ ಯಾವನಿಂದ ಇದು ಸ್ಮರಿಸಲ್ಪಡುತ್ತದೆಯೋ–ಅಂತಹವನ ಮಹಾಪಾತಕಗಳೆಲ್ಲವೂ ನಿರಸನಗೊಳ್ಳುತ್ತವೆ.

## ಪರಿಶಿಷ್ಟ

## ಶ್ರೀಮನ್ಮಹಾಭಾರತದ ಏಕಕರ್ತೃತ್ವನಿರ್ಣಯ

ನಮೋಽಸ್ತು ತೇ ವ್ಯಾಸ ವಿಶಾಲಬುದ್ಧೇ!
ಫುಲ್ಲಾರವಿನ್ದಾಯತಪತ್ರನೇತ್ರ ।
ಯೇನ ತ್ವಯಾ ಭಾರತತೈಲಪೂರ್ಣಃ ।
ಪ್ರಜ್ವಾಲಿತೋ ಜ್ಞಾನಮಯಃ ಪ್ರದೀಪಃ ॥

ಮಹಾಭಾರತಾಧ್ಯಯನದಿಂದ ಭಾರತತೈಲಪೂರ್ಣವಾದ ಜ್ಞಾನ ಜ್ಯೋತಿಯನ್ನು ಅರಿತುಕೊಳ್ಳುವುದಕ್ಕೆ ಬದಲಾಗಿ ಆಧುನಿಕವಿದ್ವಾಂಸರು ಮಹಾಭಾರತವು ಹುಟ್ಟಿದ್ದು ಯಾವಾಗ? ಅದರ ಕರ್ತೃಗಳು ಎಷ್ಟು ಮಂದಿ? ಮಹಾಭಾರತದ ಯುದ್ಧವು ನಡೆಯಿತೇ? ವ್ಯಾಸರೆಂಬುವರು ಒಬ್ಬರೇ-ಇಬ್ಬರೇ? ವೈಶಂಪಾಯನರೆಷ್ಟು ಮಂದಿ? ಸೂತನೇ–ಸೌತಿಯೇ?– ಇತ್ಯಾದಿ ವಿಷಯಗಳಲ್ಲಿ ತಲೆಯೋಡಿಸಿ ತಮಗೆ ತೋರಿದ್ದನ್ನೇ ಸಿದ್ಧಾಂತವೆಂದು ಪ್ರತಿಪಾದಿಸುತ್ತಾರೆ. ಇದರಿಂದ ಮಹಾಭಾರತಕ್ಕೆ ಯಾವ ಹಾನಿಯಾಗದಿದ್ದರೂ ಸಾವಿರಾರು ವರ್ಷಗಳಿಂದಲೂ ಮೂಡಿಬಂದಿರುವ ಪವಿತ್ರಭಾವನೆಗೆ ಸ್ವಲ್ಪ ಸಂಶಯಮೂಡುವುದು ಸಹಜವಾಗಿಯೇ ಇದೆ. ಪಾಶ್ಚಾತ್ಯರು ನಮ್ಮನ್ನಾಳುತ್ತಿದ್ದ ಕಾಲದಿಂದಲೂ ಅನೇಕ ಆಂಗ್ಲವಿದ್ವಾಂಸರೂ ಮತ್ತು ಅವರ ಪಂಥವನ್ನೇ ಹಿಡಿದ ಅನೇಕ ಭಾರತೀಯ ವಿದ್ವಾಂಸರೂ ಈ ವಿಷಯದಲ್ಲಿ ನೂರಾರು ಪುಸ್ತಕಗಳನ್ನು ಬರೆದು– 'ಮಹಾಭಾರತವು ಆಮೂಲಾಗ್ರವಾಗಿ ವ್ಯಾಸಕೃತವಲ್ಲ ; ವೈಶಂಪಾಯನರು ಸ್ವಲ್ಪ ಸೇರಿಸಿದರು. ಅವರಿಂದ ಮುಂದೆ ಸೌತಿಯೇ ಇಂದು ಲಭ್ಯವಾಗಿರುವ ಮಹಾಭಾರತದ ಕರ್ತೃ'– ಇವೇ ಮುಂತಾಗಿ ಹೇಳಿದ್ದರೂ ನಮ್ಮ ದೇಶದ 99 ಭಾಗ ಜನರ ಮನಸ್ಸಿನಲ್ಲಿ ಮಹಾಭಾರತವು ವ್ಯಾಸಕೃತವೆಂದೇ ಅಚ್ಚಳಿಯದೇ ನಿಂತಿದೆ. 'ಈ ವಿಷಯವು ಶತಾಂಶ ಸತ್ಯವಾದುದು. ಆಧುನಿಕ ವಿದ್ವಾಂಸರ ವಾಕ್ಚಾತುರ್ಯಗಳಿಗೆ ನಾವು ಮೋಸಹೋಗಬಾರದು'– ಎಂಬುದನ್ನು ಮನವರಿಕೆ ಮಾಡಿಕೊಡುವುದೇ ಈ ಲೇಖನದ ಉದ್ದೇಶವಾಗಿದೆ. ಆದರೆ ಈ ಲೇಖನವು ಒಂದೇ ಸಂಪುಟದಲ್ಲಿ ಮುಗಿಯಲಾರದು. ಈ ಲೇಖನವನ್ನು ಹಂತ-ಹಂತವಾಗಿ ಪರಿಶಿಷ್ಟದಲ್ಲಿ ಪ್ರಕಟಿಸುತ್ತಾ ಹೋಗುತ್ತೇವೆ. ಮಹಾಭಾರತವನ್ನು ಆಮೂಲಾಗ್ರವಾಗಿ

ಓದುತ್ತಿರುವ ನಮ್ಮ ಪ್ರಿಯವಾಚಕರಿಗೆ ಈ ವಿಧವಾದ ಸಂದೇಹಗಳು ಬರಬಾರದೆಂದು ನಾವು ಈ ಲೇಖನವನ್ನು ಪ್ರಕಟಿಸುವುದರ ಉದ್ದೇಶವಾಗಿದೆ.

ಆಧುನಿಕವಿಮರ್ಶಕರೊಬ್ಬರು ಮಹಾಭಾರತದ ಕರ್ತೃತ್ವವನ್ನು ತಮ್ಮದೇ ಆದ ರೀತಿಯಲ್ಲಿ ಸಿದ್ಧಾಂತಮಾಡಿ ಹೀಗೆ ಹೇಳಿದ್ದಾರೆ :

'The present Mahabharatha is as it were a redaction of Vyasa's historical poem called Triumph edited by Vaisampayana as Bharatha and re-printed or re-issued by Sauti with notes and additions and with an introduction and a table of contents prefixed to it' - ಎಂದರೆ :

'ವ್ಯಾಸರು ಮೊದಲು ಬರೆದಿದ್ದು ಜಯ ಎಂಬ ಗ್ರಂಥ. **'ತತೋ ಜಯಮುದೀರಯೇತ್'** ಎಂಬ ಪ್ರಾರ್ಥನಾಶ್ಲೋಕದಲ್ಲಿಯೇ ಇದು ಅಭಿವ್ಯಕ್ತವಾಗಿದೆ. ಅನಂತರ ವೈಶಂಪಾಯನರು ಈ ಜಯಗ್ರಂಥವನ್ನು ಸಂಪಾದಿಸಿ ಭಾರತವನ್ನಾಗಿ ಮಾಡಿದರು. ಅನಂತರ ಸೌತಿಗಳು ಭಾರತಕ್ಕೆ ಟಿಪ್ಪಣಿ, ಮುನ್ನುಡಿ, ವಿಷಯಾನುಕ್ರಮಣಿಕೆ–ಇತ್ಯಾದಿಗಳನ್ನು ಸೇರಿಸಿದರು. ಅರ್ಥಾತ್ ಮಹಾಭಾರತವನ್ನಾಗಿ ಪರಿವರ್ತಿಸಿದರು.'

ವ್ಯಾಸರಿಗೆ ಲಕ್ಷಶ್ಲೋಕಾತ್ಮಕವಾದ ಗ್ರಂಥವನ್ನು ಬರೆಯಲು ಸಾಧ್ಯವಾಗ ಲಿಲ್ಲವೇ? ವ್ಯಾಸರ ಪ್ರೌಢಿಮೆಯು ಎಷ್ಟೆಂಬುದನ್ನು ಮೊದಲು ವಿವೇಚಿಸೋಣ.

**ತ್ರಿಭಿರ್ವರ್ಷೈಃ ಸದೋತ್ಥಾಯ ಕೃಷ್ಣದ್ವೈಪಾಯನೋ ಮುನಿಃ ।**
**ಮಹಾಭಾರತಮಾಖ್ಯಾನಂ ಕೃತವಾನಿದಮದ್ಭುತಮ್ ॥೫೨॥**

ಆದಿ-ಅಧ್ಯಾಯ ೬೨

ಪ್ರತಿನಿತ್ಯವೂ ಪ್ರಾತಃಕಾಲದಲ್ಲೆದ್ದು ಸ್ನಾನ-ಸಂಧ್ಯಾದ್ಯನುಷ್ಠಾನಗಳನ್ನು ಮುಗಿಸಿಕೊಂಡು ಕೃಷ್ಣದ್ವೈಪಾಯನಮುನಿಗಳು ಮೂರು ವರ್ಷಗಳಲ್ಲಿ ಈ ಮಹಾಭಾರತಾಖ್ಯಾನವನ್ನು ಮುಗಿಸಿದರು,

ಈಗಿನ ಸಂಸ್ಕೃತ ವಿದ್ವಾಂಸರೇ ಒಂದು ದಿವಸಕ್ಕೆ ನೂರು ಶ್ಲೋಕ ಗಳನ್ನು–ಪ್ರಯತ್ನಿಸಿದರೆ ಇನ್ನೂ ಹೆಚ್ಚು ಶ್ಲೋಕಗಳನ್ನು ರಚಿಸಬಲ್ಲರು. ಇದರಂತೆ ವರ್ಷಕ್ಕೆ 36,500 ಶ್ಲೋಕಗಳಾಗುತ್ತವೆ. ಮೂರು ವರ್ಷಕ್ಕೆ

1,09,500 ಆಗುತ್ತವೆ. ಈಗಿನ ವಿದ್ವಾಂಸರೇ ಲಕ್ಷಶ್ಲೋಕಗಳನ್ನು ರಚಿಸಬಲ್ಲರೆಂದಮೇಲೆ ವ್ಯಾಸರು ಲಕ್ಷಶ್ಲೋಕಾತ್ಮಕವಾದ ಮಹಾಗ್ರಂಥವನ್ನು ರಚಿಸಿದುದರಲ್ಲಿ ಸಂಶಯಿಸಬೇಕಾಗಿಲ್ಲ. ಇದೊಂದು ಸಾಧಾರಣನಿದರ್ಶನ. ವ್ಯಾಸರ ವ್ಯಕ್ತಿತ್ವವನ್ನು ನಾವು ಅವಲೋಕಿಸಹೋದರೆ ಅವರು ಅಷ್ಟಾದಶ ಪುರಾಣಗಳನ್ನು ರಚಿಸಿದ್ದರೆಂಬುದಕ್ಕೆ ಸಾಕ್ಷ್ಯವು ಸಿಕ್ಕುತ್ತದೆ. ವ್ಯಾಸರು ವಿಷ್ಣುಸ್ವರೂಪರು.

ಆಧುನಿಕರ ಒಂದು ವಿವಾದವು ಈ ರೀತಿಯಾಗಿದೆ– 'ವೈಶಂಪಾಯನ ಉವಾಚ : ವೈಶಂಪಾಯನರು ಹೇಳಿದರು' 'ಜನಮೇಜಯ ಉವಾಚ : ಜನಮೇಜಯನು ಹೇಳಿದನು' – ಎಂದು ಮೂಲಗ್ರಂಥದಲ್ಲಿ ಬರಲು ಹೇಗೆ ಸಾಧ್ಯ? ಎಂಬ ಪ್ರಶ್ನೆ. ಜನಮೇಜಯನು ಪ್ರಶ್ನಿಸಿದನಂತರ ವೈಶಂಪಾಯನರು ಉತ್ತರಹೇಳುತ್ತಿದ್ದುದರಿಂದ ಇದು ಮೂಲಗ್ರಂಥವಾಗಿರಲಾರದು. ವೈಶಂಪಾಯನರೇ ಸ್ವತಃ ತಾವು ಅರಿತುಕೊಂಡಿದ್ದ ಮಹಾಭಾರತವನ್ನು ಜನಮೇಜಯನ ಪ್ರಶ್ನೆಗೆ ತಕ್ಕಂತೆ ಹೊಸ ಸಂವಿಧಾನದಲ್ಲಿ ಹೇಳಿದ್ದಾರೆ. ಆದುದರಿಂದ ಈ ಭಾಗಗಳೆಲ್ಲವೂ ವೈಶಂಪಾಯನಕೃತವೇ ಹೊರತು ವ್ಯಾಸಕೃತವಾಗಲಾರವು. ಒಂದು ವೇಳೆ ವ್ಯಾಸಕೃತವೇ ಆಗಿದ್ದಿದ್ದರೆ ಜನಮೇಜಯನು ಕೇಳಬೇಕಾದ ಪ್ರಮೇಯವೇ ಇರಲಿಲ್ಲ.'

ಇದಕ್ಕೆ ಸಮಾಧಾನವನ್ನು ಈ ರೀತಿ ಹೇಳಬಹುದಾಗಿದೆ :

ಮೊದಲನೆಯ ಅಧ್ಯಾಯದಲ್ಲಿ **ಸೌತಿರುವಾಚ**: ಸೌತಿಯು ಹೇಳಿದನು. **ಋಷಯಃ ಊಚುಃ** ಋಷಿಗಳು ಹೇಳಿದರು–ಎಂದು ಬರುತ್ತದೆ. **'ಸೌತಿರುವಾಚ'** ಎಂದು ಬರೆದವರು ಯಾರು? ವೈಶಂಪಾಯನರ ನಂತರ ಸೌತಿಗಳು ಮಹಾಭಾರತಕಥೆಯನ್ನು ಪರಿಷ್ಕರಿಸಿದ್ದ ಪಕ್ಷದಲ್ಲಿ ಸೌತಿಗಳೇ **'ಸೌತಿರುವಾಚ'** ಎಂದು ಹೇಳುತ್ತಿರಲಿಲ್ಲ. ಇಲ್ಲಿಯೂ ಹೇಳುವವರು ಮತ್ತು ಕೇಳುವವರ ಆವಶ್ಯಕತೆ ಇರಲಿಲ್ಲ. ಉದ್ದಕ್ಕೂ ತಾನೇ ಹೇಳಿಕೊಂಡು ಹೋಗಬಹುದಾಗಿತ್ತು. ಹಾಗಿಲ್ಲದೇ ಇರುವುದರಿಂದ–ಸೌತಿರುವಾಚ–ಎಂಬುದನ್ನು ಬೇರೊಬ್ಬರು ಹೇಳಿರಬೇಕು. ಅವರೇ ವ್ಯಾಸರು. ವ್ಯಾಸರು ಸೌತಿ-ಶೌನಕರ ಸಂಭಾಷಣೆಯ ಮೂಲಕವಾಗಿಯೂ, ಜನಮೇಜಯ-ವೈಶಂಪಾಯನರ ಸಂಭಾಷಣೆಯ ಮೂಲಕವಾಗಿಯೂ ಭಾರತವನ್ನು ರಚಿಸಿದರು.

ಮಹಾಭಾರತಕಥೆಯಲ್ಲಿ ಇವರೆಲ್ಲರದೂ ಒಂದು ಪಾತ್ರವೇ ಹೊರತು ಕರ್ತೃತ್ವವಿಲ್ಲ. ಹಾಗೆ ಕರ್ತೃತ್ವವಿರುವುದಾಗಿದ್ದರೆ ಭಗವದ್ಗೀತೆಯು ಸೌತಿಗೀತೆ ಯಾಗಬೇಕಾಗಿದ್ದಿತು. ಸಂಜಯಗೀತೆಯಾದರೂ ಆಗಬೇಕಾಗಿದ್ದಿತು. ಆದುದರಿಂದ ಆಧುನಿಕವಿದ್ವಾಂಸರು ಈ ಮೋಹವನ್ನು ಮೊದಲು ತ್ಯಜಿಸಬೇಕು. ಜಯವೆಂದು ಕರೆದವರೂ ವ್ಯಾಸರೇ. ಮಹಾಭಾರತವೆಂದು ಕರೆದಿರುವವರೂ ವ್ಯಾಸರೇ ಆಗಿದ್ದಾರೆ. ಮಹಾಭಾರತದ ಕಥೆಯನ್ನು ಎಲ್ಲಿ ಹೇಗೆ ಹೇಳಿಸಬೇಕೋ ಹಾಗೆ ಆಯಾ ಪಾತ್ರಗಳ ಮೂಲಕ ಹೇಳಿಸಿದ್ದಾರೆ. ಶೌನಕರೂ ಹನ್ನೆರಡು ವರ್ಷಗಳ ಸತ್ರಮಾಡುತ್ತಿದ್ದರು. ಆ ಸಮಯದಲ್ಲಿ ಸೌತಿಗಳ ಮೂಲಕ ಮಹಾಭಾರತಕಥೆಯನ್ನು ಹೇಳಿಸಿದರು. ಮುಂದಿನ ಕಥಾಭಾಗವು ಬಂದಾಗ ಜನಮೇಜಯನ ಸರ್ಪಯಾಗದ ಸಮಯದಲ್ಲಿ ವೈಶಂಪಾಯನರ ಮೂಲಕವಾಗಿ ಮಹಾಭಾರತಕಥೆಯನ್ನು ಹೇಳಿಸಿದರು. ಅರ್ಥಾತ್ ಸತ್ರಗಳ ಸಮಯದಲ್ಲಿ ಈ ಆಖ್ಯಾನವನ್ನು ಹೇಳಬೇಕೆಂಬ ತಾತ್ಪರ್ಯ. ಸೌತಿಯು ಹೇಳಿದ್ದರಿಂದ ಸೌತಿಯೇ ಕೆಲವು ಭಾಗವನ್ನು ಬರೆದನೆಂದಾಗಲೀ–ವೈಶಂಪಾಯನರು ಹೇಳಿದ್ದರಿಂದ ವೈಶಂಪಾಯನರು ಬರೆದಿದ್ದೆಂದಾಗಲೀ ಅರ್ಥವಲ್ಲ. ಭೀಷ್ಮಸ್ತವರಾಜ ಎಂಬ ಸ್ತೋತ್ರವೊಂದು ಪ್ರಸಿದ್ಧವಾಗಿದೆ. ಭೀಷ್ಮನು ಈ ಸ್ತೋತ್ರಮಾಡಿದ್ದರಿಂದ ಸ್ತೋತ್ರಕ್ಕೆ ಈ ಹೆಸರು ಬಂದಿದೆ. ಕಥಾಭಾಗವನ್ನು ವೀಕ್ಷಿಸಿದರೆ ಭೀಷ್ಮನೇ ಈ ಸ್ತೋತ್ರ ಮಾಡಿದನೆಂದು ನಮಗೆ ಮನವರಿಕೆಯಾಗುತ್ತದೆ. ಆದರೆ ವಸ್ತುತಃ ಈ ಸ್ತೋತ್ರದ ಕರ್ತೃಗಳು ವ್ಯಾಸರು. ಮೊದಲನೆಯ ಅಧ್ಯಾಯವೇ ವ್ಯಾಸಕರ್ತೃಕ ವಲ್ಲವೆಂದು ಆಧುನಿಕರ ವಾದ. ಇದು ಸೌತಿಯು ಸೇರಿಸಿದ್ದೆನ್ನುತ್ತಾರೆ. ಸೌತಿಯೇ ಸೇರಿಸಿದ್ದ ಪಕ್ಷದಲ್ಲಿ ಈ ಅಧ್ಯಾಯದಲ್ಲಿ ವ್ಯಾಸರು ಬ್ರಹ್ಮನನ್ನು ಪ್ರತ್ಯಕ್ಷಮಾಡಿಕೊಂಡಿದ್ದು–ಬ್ರಹ್ಮನ ಆದೇಶದಂತೆ ಗಣಪತಿಯು ಲೇಖಕನಾಗಿ ಬಂದಿದ್ದು–ಈ ಪ್ರಕರಣಗಳು ಬರಲು ಅವಕಾಶವಿರಲಿಲ್ಲ. (ಶ್ಲೋಕ ೫೫ರಿಂದ ೮೩, ಆದಿಪರ್ವ ಅಧ್ಯಾಯ ೧) ಇಂತಹ ಕೆಲವು ಪ್ರಕರಣಗಳ ಉದಾಹರಣೆಯಿಂದಲೇ ನಾವು ಲಕ್ಷಶ್ಲೋಕಾತ್ಮಕವಾದ ಮಹಾಭಾರತವನ್ನು ವ್ಯಾಸರೊಬ್ಬರೇ ರಚಿಸಿದರೆಂದು ಪ್ರತಿಪಾದಿಸಬಹುದಾಗಿದೆ.

ಆಧುನಿಕವಿದ್ವಾಂಸರೂ ಮೂರು ವರ್ಷಗಳಲ್ಲಿ ಲಕ್ಷಶ್ಲೋಕಗಳನ್ನು ರಚಿಸಿಯಾರು. ಆದರೆ ಮಹಾಭಾರತದಂತಹ ಇತಿಹಾಸವನ್ನು ಸೃಷ್ಟಿಮಾಡು ವರೇ? ಮಾಡಲು ಸಾಧ್ಯವೇ?–ಎಂಬುದೊಂದು ಪ್ರಶ್ನೆ. ಇದಕ್ಕೆ ಸಾಧ್ಯವಾಗಲಾರದೆಂಬ ಒಂದೇ ಉತ್ತರ. ವ್ಯಾಸರು ಸಾಕ್ಷಾದ್ವಿಷ್ಣುಸ್ವರೂಪರು. ಅಪ್ರತಿಮಪ್ರತಿಭಾಶಾಲಿಗಳು. ಅವರ ನಿಜಸ್ವರೂಪವನ್ನು ನಮ್ಮಿಂದ ವರ್ಣಿ ಸಲು ಸಾಧ್ಯವಾಗುವುದಿಲ್ಲ. ಗ್ರಂಥದಲ್ಲಿರುವುದನ್ನು ಉದಾಹರಿಸಬಹು ದಾಗಿದೆ.

**ಭೂತಸ್ಥಾನಾನಿ ಸರ್ವಾಣಿ ರಹಸ್ಯಂ ತ್ರಿವಿಧಂ ಚ ಯತ್ ।**
**ವೇದಾ ಯೋಗಃ ಸವಿಜ್ಞಾನೋ ಧರ್ಮಾರ್ಥಃ ಕಾಮ ಏವ ಚ ॥**

**ಧರ್ಮಕಾಮಾರ್ಥಯುಕ್ತಾನಿ ಶಾಸ್ತ್ರಾಣಿ ವಿವಿಧಾನಿ ಚ ।**
**ಲೋಕಯಾತ್ರಾವಿಧಾನಂ ಚ ಸರ್ವಂ ತದ್ದೃಷ್ಟವಾನೃಷಿಃ ॥೪೯॥**

ಆದಿಪರ್ವ-ಅಧ್ಯಾಯ ೧

'ಭಗವಾನ್ ವ್ಯಾಸಮಹರ್ಷಿಗಳು ತಮ್ಮ ದಿವ್ಯದೃಷ್ಟಿಯಿಂದ ಪ್ರಾಣಿಗಳ ನಿವಾಸಸ್ಥಾನವಾದ ದುರ್ಗ-ನಗರಾದಿಗಳನ್ನೂ, ತೀರ್ಥಕ್ಷೇತ್ರಾದಿಗಳನ್ನೂ, ಧರ್ಮಾರ್ಥ-ಕಾಮಗಳ ರಹಸ್ಯಗಳನ್ನೂ, ಕರ್ಮಕಾಂಡ–ಉಪಾಸನಾಕಾಂಡ– ಜ್ಞಾನಕಾಂಡಗಳನ್ನೂ, ಸ್ಮೃತಿಧರ್ಮಗಳನ್ನೂ, ವೇದಗಳನ್ನೂ, ವಿಜ್ಞಾನಸಹಿತ ವಾದ ಯೋಗವನ್ನೂ, ಧರ್ಮಾರ್ಥ-ಕಾಮಗಳನ್ನೂ, ಧರ್ಮಾರ್ಥ- ಕಾಮಪ್ರತಿಪಾದಕಶಾಸ್ತ್ರಗಳನ್ನೂ, ಲೋಕವ್ಯವಹಾರಕ್ಕೆ ಬೇಕಾದ ಆಯುರ್ವೇದ-ಧನುರ್ವೇದ-ಗಂಧರ್ವವೇದಗಳನ್ನೂ ತಿಳಿದುಕೊಂಡರು.'

ಆಧುನಿಕವಿಮರ್ಶಕರಿಂದ ಮಹಾಭಾರತದ ಮೂರನೆಯ ಸಂಪಾದಕರೆನಿಸಿ ಕೊಂಡ ಸೌತಿಗಳೇ ಶೌನಕರೊಡನೆ ಈ ಮಾತನ್ನು ಹೇಳುತ್ತಾರೆ-

**ಏತತ್ತೇ ಸರ್ವಮಾಖ್ಯಾತಂ ವೈಶಂಪಾಯನಕೀರ್ತಿತಮ್ ।**
**ವ್ಯಾಸಾಜ್ಞಯಾ ಸಮಾಜ್ಞಾತಂ ಸರ್ಪಸತ್ರೇ ನೃಪಸ್ಯ ಹಿ ॥೩೪॥**

**ಪುಣ್ಯೋಽಯಮಿತಿಹಾಸಾಖ್ಯಃ ಪವಿತ್ರಂ ವೇದಮುತ್ತಮಮ್ ।**
**ಕೃಷ್ಣೇನ ಮುನಿನಾ ವಿಪ್ರ ನಿರ್ಮಿತಂ ಸತ್ಯವಾದಿನಾ ॥೩೫॥**

ಸರ್ವಜ್ಞೇನ ವಿಧಿಜ್ಞೇನ ಧರ್ಮಜ್ಞಾನವತಾ ಸತಾ ।
ಅತೀನ್ದ್ರಿಯೇಣ ಶುಚಿನಾ ತಪಸಾ ಭಾವಿತಾತ್ಮನಾ ॥೩೬॥

ಐಶ್ವರ್ಯೇ ವರ್ತತಾ ಚೈವ ಸಾಂಖ್ಯಯೋಗವತಾ ತಥಾ ।
ನೈಕತಂತ್ರವಿಬುದ್ಧೇನ ದೃಷ್ಟ್ವಾ ದಿವ್ಯೇನ ಚಕ್ಷುಷಾ ॥೩೭॥

ಕೀರ್ತಿಂ ಪ್ರಥಯತಾ ಲೋಕೇ ಪಾಣ್ಡವಾನಾಂ ಮಹಾತ್ಮನಾಮ್ ।
ಅನ್ಯೇಷಾಂ ಕ್ಷತ್ರಿಯಾಣಾಂ ಚ ಭೂರಿದ್ರವಿಣತೇಜಸಾಮ್ ॥೩೮॥

ಕ್ರೀಡಾಂ ಚ ವಾಸುದೇವಸ್ಯ ದೇವದೇವಸ್ಯ ಶಾರ್ಙ್ಗಿಣಃ ।
ವಿಶ್ವೇಶಾಂ ದೇವಭಾಗಾನಾಂ ಜನ್ಮಸಾಯುಜ್ಯಮೇವ ಚ ॥೩೯॥

ಸ್ವರ್ಗಾರೋಹಣಪರ್ವ

'ಜನಮೇಜಯನ ಸರ್ಪಯಾಗದಲ್ಲಿ ವ್ಯಾಸಾಜ್ಞೆಯಿಂದ ವೈಶಂಪಾಯನರು ಹೇಳಿದ ನಿಖಿಲವಾದ ಮಹಾಭಾರತಕಥೆಯನ್ನೇ ನಾನು ನಿನಗೆ ಹೇಳಿದ್ದೇನೆ. ಇತಿಹಾಸವೆಂದು ಖ್ಯಾತವಾಗಿರುವ ಈ ಮಹಾಭಾರತವು ಮಹಾಪುಣ್ಯಪ್ರದವಾದುದು; ಪವಿತ್ರವಾದುದು. ಸತ್ಯವಾದಿಯಾದ, ಸರ್ವಜ್ಞನಾದ, ವಿಧಿಜ್ಞನಾದ, ಧರ್ಮಜ್ಞನಾದ, ಅತೀಂದ್ರಿಯವಿಷಯಜ್ಞನಾದ, ಶುಚಿಯಾದ, ತಪಸ್ಸಿನಿಂದ ಶುದ್ಧಿಹೊಂದಿದ ಆತ್ಮವುಳ್ಳ, ಐಶ್ವರ್ಯೋಪೇತನಾದ, ಸಾಂಖ್ಯ ಯೋಗಾಚಾರ್ಯನಾದ, ನಾನಾತಂತ್ರನಿಷ್ಣಾತನಾದ ಕೃಷ್ಣದ್ವೈಪಾಯನಮಹರ್ಷಿಯು ತನ್ನ ಜ್ಞಾನದೃಷ್ಟಿಯಿಂದ ಎಲ್ಲ ವಿಷಯಗಳನ್ನೂ ಕಂಡು ಮಹಾಭಾರತದ ಈ ಇತಿಹಾಸವನ್ನು ನಿರ್ಮಿಸಿದನು. ಮಹಾತ್ಮರಾದ ಪಾಂಡವರ ಕೀರ್ತಿಯನ್ನು ಲೋಕದಲ್ಲಿ ಪ್ರಸಿದ್ಧಗೊಳಿಸುತ್ತಾ, ಧನದಿಂದಲೂ ತೇಜಸ್ಸಿನಿಂದಲೂ ಸಮೃದ್ಧರಾದ ಇತರ ರಾಜರುಗಳ ಕೀರ್ತಿಯನ್ನೂ, ಶಾರ್ಙ್ಗಧರನಾದ, ದೇವದೇವನಾದ ವಾಸುದೇವನ ಕೀರ್ತಿಯನ್ನೂ, ದೇವಾಂಶಸಂಭೂತರಾದ ಸಕಲಮಾನವರ ಜನ್ಮ ಮತ್ತು ಮರಣರಹಸ್ಯಗಳನ್ನೂ–ಜ್ಞಾನದೃಷ್ಟಿಯಿಂದ ತಿಳಿದುಕೊಂಡು ವ್ಯಾಸರು ಮಹಾಭಾರತವನ್ನು ರಚಿಸಿದರು.'

ಮಹಾಭಾರತದಲ್ಲಿರುವ ಮತ್ತೊಂದು ವಿಷಯವನ್ನೂ ನಾವು ಮುಖ್ಯವಾಗಿ ಗಮನಿಸಬೇಕಾಗಿದೆ. ವೈಶಂಪಾಯನರೇ ಆಗಲೀ-ಸೌತಿಗಳೇ ಆಗಲೀ

ವ್ಯಾಸನಿರ್ಮಿತಭಾರತವನ್ನು – 'ನಾನು ಹೇಳುತ್ತೇನೆ'- ಎಂದು ಹೇಳಿರುವರೇ ಹೊರತು 'ನಾನು ರಚಿಸಿದೆ' – ಎಂದು ಒಮ್ಮೆಯಾದರೂ ಅಪ್ಪಿ-ತಪ್ಪಿಯೂ ಹೇಳಿರುವುದಿಲ್ಲ.

**ಏಕಂ ಶತಸಹಸ್ರಂ ತು ಮನುಷ್ಯೇಷು ಪ್ರತಿಷ್ಠಿತಮ್ ।**
**ಅಸ್ಮಿಂಸ್ತು ಮಾನುಷೇ ಲೋಕೇ ವೈಶಮ್ಪಾಯನ ಉಕ್ತವಾನ್ ॥**

**ಶಿಷ್ಯೋ ವ್ಯಾಸಸ್ಯ ಧರ್ಮಾತ್ಮಾ ಸರ್ವವೇದವಿದಾಂ ವರಃ ।**
**ಏಕಂ ಶತಸಹಸ್ರಂ ತು ಮಯೋಕ್ತಂ ವೈ ನಿಬೋಧತ ॥೧೦೯॥**

"ಒಂದುಲಕ್ಷ ಶ್ಲೋಕವು ಮನುಷ್ಯಲೋಕದಲ್ಲಿ ಪ್ರತಿಷ್ಠಿತವಾಯಿತು. ಧರ್ಮಾತ್ಮರಾದ ಸರ್ವವೇದವಿದರಾದ ವ್ಯಾಸಶಿಷ್ಯರಾದ ವೈಶಂಪಾಯನರು ಈ ಲೋಕದಲ್ಲಿ ಲಕ್ಷ ಶ್ಲೋಕಾತ್ಮಕವಾದ ಈ ಭಾರತವನ್ನು ಹೇಳಿದರು. ಅದೇ ಒಂದು ಶತಸಹಸ್ರಶ್ಲೋಕಾತ್ಮಕವಾದ ಭಾರತವನ್ನು ನಾನು ಹೇಳುತ್ತೇನೆ. ನೀವು ಕೇಳಿರಿ." ಬಹುಸ್ಪಷ್ಟವಾಗಿರುವ ಈ ಶ್ಲೋಕದ ಕಡೆಯ ಅರ್ಧಕ್ಕೆ ಆಧುನಿಕವಿಮರ್ಶಕರೊಬ್ಬರು ಈ ವಿಧವಾಗಿ ಅರ್ಥಮಾಡಿ ಸೌತಿಯ ಮಹಾಭಾರತಕರ್ತೃತ್ವವನ್ನು ದೃಢಪಡಿಸಿದ್ದಾರೆ.

"We lastly come to the third edition of Souti. That Souti did recast or elaborate the work of Vaisampayana can be proved from his own lips 'Know Rishis' says he 'I have recited the Bharatha in one hundred thousand Slokas, Vaisampayana being the first reciter in the human world.' This is a clear admission by Souti of having recited the work of Vaisampayana in one lac of Slokas.

ವೈಶಂಪಾಯನರು ಹೇಳಿದ್ದೂ ಒಂದುಲಕ್ಷ ಶ್ಲೋಕವೇ. **ಏಕಂ ಶತಸಹಸ್ರಂ ತು ಮನುಷ್ಯೇಷು ಪ್ರತಿಷ್ಠಿತಮ್.** ಅದನ್ನೇ ವೈಶಂಪಾಯ

ನರೂ ಭೂಲೋಕದಲ್ಲಿ ಹೇಳಿದರು. ಪುನಃ ಅದನ್ನೇ ನಾನೂ ಹೇಳುತ್ತೇನೆ –ಎಂಬ ಸ್ಪಷ್ಟಾರ್ಥವನ್ನು ಈ ವಿಮರ್ಶಕರು ವಿಕೃತಗೊಳಿಸಿ ಹೇಳಿದ್ದಾರೆಂಬು ದನ್ನು ಇಲ್ಲಿ ಬಹುಸ್ಪಷ್ಟವಾಗಿ ಕಾಣಬಹುದಾಗಿದೆ. ವಿಷ್ಣುವಿನ ಅಂಶ ಸಂಭೂತರಾದ ವ್ಯಾಸರು ಅಘಟಿತಘಟನಾಸಾಮರ್ಥ್ಯವುಳ್ಳವರೆಂಬುದಕ್ಕೆ ಮಹಾಭಾರತದಲ್ಲಿಯೇ ಬರುವ ಇನ್ನೂ ಅನೇಕನಿದರ್ಶನಗಳನ್ನೂ ಕೊಡ ಬಹುದಾಗಿದೆ.

ಆಶ್ರಮವಾಸಿಕಪರ್ವದಲ್ಲಿ ಒಂದೆಡೆ ವ್ಯಾಸರು ಧೃತರಾಷ್ಟ್ರನನ್ನು ಕುರಿತು ಹೀಗೆ ಹೇಳುತ್ತಾರೆ :

**ಸಂಶಯಚ್ಛೇದನಾರ್ಥಾಯ ಪ್ರಾಪ್ತಂ ಮಾಂ ವಿದ್ಧಿ ಪುತ್ರಕ।**
**ನ ಕೃತಂ ಯೈಃ ಪುರಾ ಕೈಶ್ಚಿತ್ಕರ್ಮ ಲೋಕೇ ಮಹರ್ಷಿಭಿಃ ॥**

**ಆಶ್ಚರ್ಯಭೂತಂ ತಪಸಃ ಫಲಂ ತದ್ದರ್ಶಯಾಮಿ ವಃ ।**
**ಕಿಮಿಚ್ಛಸಿ ಮಹೀಪಾಲ ಮತ್ತಃ ಪ್ರಾಪ್ತುಮಭೀಪ್ಸಿತಮ್ ।**
**ದ್ರಷ್ಟುಂ ಸ್ಪ್ರಷ್ಟುಮಥ ಶ್ರೋತುಂ ತತ್ಕರ್ತಾಸ್ಮಿ ತವಾನಘ।**

"ನಿನ್ನ ಮನಸ್ಸಿನಲ್ಲಿರುವ ಸಂಶಯದ ನಿವಾರಣಾರ್ಥವಾಗಿ ನಾನಿಲ್ಲಿಗೆ ಬಂದಿದ್ದೇನೆ. ಧೃತರಾಷ್ಟ್ರ! ಹಿಂದೆ ಯಾವ ಮಹರ್ಷಿಗಳೂ ಮಾಡದಿರುವ ಕಾರ್ಯವನ್ನು ಮಾಡಿತೋರಿಸಲು ನಾನಿಲ್ಲಿಗೆ ಬಂದಿದ್ದೇನೆ. ತಪಸ್ಸಿನ ಅತ್ಯಾಶ್ಚರ್ಯಕರವಾದ ಫಲವನ್ನು ನಿನಗೆ ತೋರಿಸುತ್ತೇನೆ. ನನ್ನಿಂದ ಯಾವುದನ್ನು ಪಡೆದುಕೊಳ್ಳಲು ನೀನು ಇಚ್ಛಿಸಿರುವೆ? ನಿನ್ನ ಸತ್ತುಹೋದ ಮಕ್ಕಳನ್ನು ನೋಡಲು ಇಚ್ಛಿಸಿರುವೆಯಾ? ಅವರನ್ನು ಬಾಚಿತಬ್ಬಿಕೊಳ್ಳಲು ಇಚ್ಛಿಸಿರುವೆಯಾ? ಅವರು ಈ ಸಮಯದಲ್ಲಿ ಏನು ಹೇಳುವರೆಂಬುದನ್ನು ಕೇಳಲು ಇಚ್ಛಿಸಿರುವೆಯಾ? ನೀನು ಇಚ್ಛಿಸಿರುವುದನ್ನು ನಾನು ಮಾಡಿಕೊಡುತ್ತೇನೆ." ವ್ಯಾಸರು ಧೃತರಾಷ್ಟ್ರನಿಗೆ ಹೀಗೆ ಹೇಳಿದರೆಂಬುದನ್ನು ವೈಶಂಪಾಯನರಿಂದ ಕೇಳಿದೊಡನೆಯೇ ಜನಮೇಜಯನು :

**ಮಮಾಪಿ ವರದೋ ವ್ಯಾಸೋ ದರ್ಶಯೇತ್ಪಿತರಂ ಯದಿ ।**
**ತದ್ರೂಪವೇಷವಯಸಂ ಶ್ರದ್ದಧ್ಯಾಂ ಸರ್ವಮೇವ ತತ್ ॥**

**ಪ್ರಸಾದಾದೃಷಿಮುಖ್ಯಸ್ಯ ಮಮ ಕಾಮಃ ಸಮೃಧ್ಯತಾಮ್ ।**

"ವರದರಾದ ವ್ಯಾಸಮಹರ್ಷಿಗಳು ನನಗೂ ಅಂದಿನ ರೂಪ-ವೇಷ-ವಯಸ್ಸುಗಳೊಡನೆ ನನ್ನ ತಂದೆಯನ್ನು ತೋರಿಸಿದ್ದೇ ಆದರೆ–ನೀವು ಹೇಳಿದುದೆಲ್ಲವನ್ನೂ ನಾನು ನಂಬುತ್ತೇನೆ. ಋಷಿಮುಖ್ಯರಾದ ವ್ಯಾಸರ ಪ್ರಸಾದದಿಂದ ನನ್ನ ಇಚ್ಛೆಯೂ ಈಡೇರಲಿ."

ಜನಮೇಜಯನು ಹೀಗೆ ಹೇಳಿದೊಡನೆಯೇ ವ್ಯಾಸರು ಪ್ರತ್ಯಕ್ಷರಾಗಿ ಬಂದು ಅನುಗ್ರಹಿಸಿದನಂತರ

**ತತಸ್ತದ್ರೂಪವಯಸಮಾಗತಂ ನೃಪತಿಂ ದಿವಃ ।**
**ಶ್ರೀಮನ್ತಂ ಪಿತರಂ ರಾಜಾ ದದರ್ಶ ಸ ಪರೀಕ್ಷಿತಮ್ ॥**

'ಸ್ವರ್ಗದಿಂದ ಬಂದ, ಅಂದಿನ ರೂಪ-ವೇಷ-ವಯಸ್ಸುಗಳಿಂದಲೇ ಕೂಡಿದ್ದ ಶ್ರೀಮಂತನಾದ ಪರೀಕ್ಷಿತನನ್ನು ಜನಮೇಜಯನು ನೋಡಿದನು.'

ಇಂತಹ ಮಹಾನುಭಾವರಾದ ವ್ಯಾಸರು ಮೂರು ವರ್ಷಗಳಲ್ಲಿ ಲಕ್ಷ ಶ್ಲೋಕಯುಕ್ತವಾದ ಮಹಾಭಾರತವನ್ನು ರಚಿಸಲಿಲ್ಲ–ಎಂಬುದು ನಿಶ್ಚಯವಾಗಿಯೂ ಅಜ್ಞರಾಡುವ ಮಾತೇ ಅಲ್ಲವೇ?

——o——

## ಪುರಾಣಾಂತರಗಳಲ್ಲಿ ವ್ಯಾಸಕರ್ತೃತ್ವದ ಸಮರ್ಥನೆ

ಅನೇಕಪುರಾಣಗಳಲ್ಲಿ ಮಹಾಭಾರತವನ್ನು ರಚಿಸಿದವರು ವೇದವ್ಯಾಸರೆಂದೇ ಬಹುಸ್ಪಷ್ಟವಾಗಿ ಹೇಳಿದ್ದಾರೆ. ಮಾರ್ಕಂಡೇಯಪುರಾಣದ ಮೊದಲನೆಯ ಅಧ್ಯಾಯದಲ್ಲಿ ಪ್ರಕರಣವು ಹೀಗೆ ಬರುತ್ತದೆ :

ತಪಃಸ್ವಾಧ್ಯಾಯನಿರತಂ ಮಾರ್ಕಣ್ಡೇಯಂ ಮಹಾಮುನಿಮ್ ।
ವ್ಯಾಸಶಿಷ್ಯೋ ಮಹಾತೇಜಾ ಜೈಮಿನಿಃ ಪರ್ಯಪೃಚ್ಛತ ॥

ಭಗವನ್ಭಾರತಾಖ್ಯಾನಂ ವ್ಯಾಸೇನೋಕ್ತಂ ಮಹಾತ್ಮನಾ ।
ಪೂರ್ಣಮಸ್ತಮಲೈಃ ಶುಭ್ರೈರ್ನಾನಾಶಾಸ್ತ್ರಸಮುಚ್ಚಯೈಃ ॥

ಜಾತಿಶುದ್ಧಸಮಾಯುಕ್ತಂ ಸಾಧುಶಬ್ದೋಪಶೋಭಿತಮ್ ।
ಪೂರ್ವಪಕ್ಷೋಕ್ತಿಸಿದ್ಧಾನ್ತಪರಿನಿಷ್ಠಾಸಮನ್ವಿತಮ್ ॥

ತ್ರಿದಶಾನಾಂ ಯಥಾವಿಷ್ಣುರ್ದ್ವಿಪದಾಂ ಬ್ರಾಹ್ಮಣೋ ಯಥಾ ।
ಭೂಷಣಾನಾಂ ಚ ಸರ್ವೇಷಾಂ ಯಥಾ ಚೂಡಾಮಣಿರ್ವರಃ ॥

ಯಥಾಯುಧಾನಾಂ ಕುಲಿಶಮಿನ್ದ್ರಿಯಾಣಾಂ ಯಥಾ ಮನಃ ।
ತಥೇಹ ಸರ್ವಶಾಸ್ತ್ರಾಣಾಂ ಮಹಾಭಾರತಮುತ್ತಮಮ್ ॥

ಅತ್ರಾರ್ಥಶ್ಚೈವ ಧರ್ಮಶ್ಚ ಕಾಮೋ ಮೋಕ್ಷಶ್ಚ ವರ್ಣ್ಯತೇ ।
ಪರಸ್ಪರಾನುಬನ್ಧಾಶ್ಚ ಸಾನುಬನ್ಧಾಶ್ಚ ತೇ ಪೃಥಕ್ ॥

ಧರ್ಮಶಾಸ್ತ್ರಮಿದಂ ಶ್ರೇಷ್ಠಮರ್ಥಶಾಸ್ತ್ರಮಿದಂ ಪರಮ್ ।
ಕಾಮಶಾಸ್ತ್ರಮಿದಂ ಚಾಗ್ರ್ಯಂ ಮೋಕ್ಷಶಾಸ್ತ್ರಂ ತಥೋತ್ತಮಮ್ ॥

ಚತುರಾಶ್ರಮಧರ್ಮಾಣಾಮಾಚಾರಸ್ಥಿತಿಸಾಧನಮ್ ।
ಪ್ರೋಕ್ತಮೇತನ್ಮಹಾಭಾಗ ವೇದವ್ಯಾಸೇನ ಧೀಮತಾ ॥

ತಥಾ ತಾತ ಕೃತಂ ಹ್ಯೇತದ್ವ್ಯಾಸೇನೋದಾರಕರ್ಮಣಾ ।
ಯಥಾ ವ್ಯಾಪ್ತಂ ಮಹಾಶಾಸ್ತ್ರಂ ವಿರೋಧೈರ್ನಾಭಿಭೂಯತೇ ॥

**ವ್ಯಾಸವಾಕ್ಯಜಲೌಘೇನ ಕುತರ್ಕತರುಹಾರಿಣಾ ।**
**ವೇದಶೈಲಾವತೀರ್ಣೇನ ನೀರಜಸ್ಕಾ ಮಹೀ ಕೃತಾ ॥**

**ಕಲಶಬ್ದಮಹಾಹಂಸಂ ಮಹಾಖ್ಯಾನಪದಾಮ್ಬುಜಮ್ ।**
**ಕಥಾವಿಸ್ತೀರ್ಣಸಲಿಲಂ ಕಾರ್ಷ್ಣಂ ವೇದಂ ಮಹಾಹ್ರದಮ್ ॥**

**ತದಿದಂ ಭಾರತಾಖ್ಯಾನಂ ಬಹ್ವರ್ಥಶ್ರುತಿವಿಸ್ತರಮ್ ।**
**ತತ್ತ್ವತೋ ಜ್ಞಾತುಕಾಮೋಽಹಂ ಭಗವಂಸ್ತ್ವಾಮುಪಸ್ಥಿತಃ ॥**

ತಪಃಸ್ವಾಧ್ಯಾಯನಿರತನಾದ ಮಾರ್ಕಂಡೇಯಮಹಾಮುನಿಯನ್ನು ಕುರಿತು ಮಹಾತೇಜಸ್ವಿಯಾದ ವ್ಯಾಸಶಿಷ್ಯನಾದ ಜೈಮಿನಿಯು ಹೀಗೆ ಹೇಳಿದನು: "ಭಗವನ್! ಮಹಾತ್ಮರಾದ ವ್ಯಾಸರಿಂದ ಹೇಳಲ್ಪಟ್ಟಿರುವ ಭಾರತದ ಆಖ್ಯಾನವು ಪರಿಶುದ್ಧವಾಗಿದ್ದು ಶಾಸ್ತ್ರಸಮುಚ್ಚಯಗಳಿಂದ ಪರಿಪೂರ್ಣ ವಾಗಿದೆ. ಪೂರ್ವಪಕ್ಷ ಮತ್ತು ಸಿದ್ಧಾಂತಗಳಿಂದ ಸುಶೋಭಿತವಾಗಿದೆ. ಸಾಧುಶಬ್ದಗಳಿಂದ ಸಮಲಂಕೃತವಾಗಿದೆ. ದೇವತೆಗಳಿಗೆಲ್ಲಾ ವಿಷ್ಣುವು ಶ್ರೇಷ್ಠನೆನಿಸಿರುವಂತೆ–ಮನುಷ್ಯರಲ್ಲಿ ಬ್ರಾಹ್ಮಣನು ಶ್ರೇಷ್ಠನೆನಿಸಿರುವಂತೆ– ಆಭರಣಗಳಲ್ಲಿ ಚೂಡಾಮಣಿಯು ಶ್ರೇಷ್ಠವೆನಿಸಿರುವಂತೆ–ಆಯುಧಗಳಲ್ಲಿ ವಜ್ರಾಯುಧವು ಶ್ರೇಷ್ಠವೆನಿಸಿರುವಂತೆ–ಇಂದ್ರಿಯಗಳಲ್ಲಿ ಮನಸ್ಸು ಶ್ರೇಷ್ಠವೆನಿಸಿರುವಂತೆ–ಸರ್ವಶಾಸ್ತ್ರಗಳಲ್ಲಿಯೂ ಮಹಾಭಾರತವು ಸರ್ವಶ್ರೇಷ್ಠ ವೆನಿಸಿದೆ. ಈ ಮಹಾಭಾರತದಲ್ಲಿ ಧರ್ಮ-ಕಾಮಾರ್ಥ-ಮೋಕ್ಷಧರ್ಮಗಳು ವರ್ಣಿಸಲ್ಪಟ್ಟಿವೆ. ಇದು ಶ್ರೇಷ್ಠವಾದ ಧರ್ಮಶಾಸ್ತ್ರವೂ ಆಗಿದೆ. ಅರ್ಥಶಾಸ್ತ್ರವೂ ಆಗಿದೆ. ಕಾಮಶಾಸ್ತ್ರವೂ ಆಗಿದೆ. ಮೋಕ್ಷಶಾಸ್ತ್ರವೂ ಆಗಿದೆ. ನಾಲ್ಕು ಆಶ್ರಮಧರ್ಮಗಳ ಆಚಾರಸ್ಥಿತಿಗಳಿಗೆ ಸಾಧನವಾಗಿದೆ. ಧೀಮಂತರಾದ, ಉದಾರಿಗಳಾದ ವೇದವ್ಯಾಸರಿಂದ ಇದು ಪ್ರಣೀತವಾಗಿದೆ. ವಿರೋಧಾಭಾಸ ಗಳಿಂದ ರಹಿತವಾಗಿದೆ. ವೇದವೆಂಬ ಪರ್ವತದಿಂದ ಹುಟ್ಟಿಹರಿಯುವ, ಕುತರ್ಕತರುವಿನ ಮೂಲೋತ್ಪಾಟನೆಮಾಡಲು ಸಮರ್ಥವಾದ ವ್ಯಾಸವಾಕ್ಯ ಜಲಸಮೂಹದಿಂದ (ಪ್ರವಾಹದಿಂದ) ಈ ಭೂಮಿಯು ರಜೋ ರಹಿತವಾಗಿದೆ. (ಅಜ್ಞಾನದಿಂದ ರಹಿತವಾಗಿದೆ.) ಕೃಷ್ಣದ್ವೈಪಾಯನರಿಂದ

ಪ್ರಣೀತವಾದ ಈ ಕಾರ್ಷ್ಣವೇದವು ಒಂದು ದೊಡ್ಡ ಸರೋವರದಂತಿದೆ. ಇದರಲ್ಲಿರುವ ಸಾಧುಶಬ್ದಗಳು ಕಲ-ಕಲನಿನಾದಮಾಡುವ ಹಂಸಪ್ರಾಯ ವಾಗಿವೆ. ಮಹಾಖ್ಯಾನಗಳೇ ಭಾರತಸರೋವರದ ಜಲಪ್ರಾಯವಾಗಿದೆ. ಇಂತಹ ಮಹಾಭಾರತಾಖ್ಯಾನವನ್ನು ನಾನು ಯಥಾವತ್ತಾಗಿ ತಮ್ಮಿಂದ ತಿಳಿಯಲಿಚ್ಛಿಸಿದ್ದೇನೆ. ದಯಮಾಡಿ ಹೇಳಿರಿ.'

**ವ್ಯಸ್ತವೇದತಯಾ ವ್ಯಾಸ ಇತಿ ಲೋಕೇ ಶ್ರುತೋ ಮುನಿಃ ।**
**ಅಯಂ ಸಾಕ್ಷಾನ್ಮಹಾಯೋಗೀ ವ್ಯಾಸಃ ಸರ್ವಜ್ಞ ಈಶ್ವರಃ ॥**
**ಮಹಾಭಾರತಮಾಶ್ಚರ್ಯಂ ನಿರ್ಮಮೇ ಭಗವಾನ್ಗುರುಃ ।**

–ಸೂತಸಂಹಿತೆ–ಅಧ್ಯಾಯ–೭

'ವೇದಗಳನ್ನು ವಿಭಾಗಮಾಡಿದುದರಿಂದ ವ್ಯಾಸರೆಂದು ಲೋಕದಲ್ಲಿ ವಿಖ್ಯಾತರಾದರು. ವ್ಯಾಸರು ಸರ್ವಜ್ಞರೂ, ಈಶ್ವರಸ್ವರೂಪರೂ, ಮಹಾಯೋಗಿಗಳೂ ಆಗಿರುತ್ತಾರೆ. ಭಗವಂತರಾದ ಪರಮಗುರುಗಳಾದ ಇವರು ಆಶ್ಚರ್ಯಕರವಾದ ಮಹಾಭಾರತವನ್ನು ರಚಿಸಿದರು.'

**ಕೃಷ್ಣದ್ವೈಪಾಯನಂ ವ್ಯಾಸಂ ವಿದ್ಧಿ ನಾರಾಯಣಂ ಪ್ರಭುಮ್ ।**
**ಕೋ ಹ್ಯನ್ಯಃ ಪುಣ್ಡರೀಕಾಕ್ಷಾನ್ಮಹಾಭಾರತಕೃದ್ಭವೇತ್ ॥**

– ವಿಷ್ಣುಪುರಾಣ–ಅಧ್ಯಾಯ ೩

ಕೃಷ್ಣದ್ವೈಪಾಯನವ್ಯಾಸರನ್ನು ಸಾಕ್ಷಾತ್ಪ್ರಭುವಾದ ನಾರಾಯಣನೆಂದೇ ತಿಳಿದುಕೊ. ಪುಂಡರೀಕಾಕ್ಷನಾದ ನಾರಾಯಣನಲ್ಲದೇ ಬೇರೆ ಯಾರು ತಾನೇ ಮಹಾಭಾರತವನ್ನು ರಚಿಸಿಯಾರು?

**ಅಷ್ಟಾದಶ ಪುರಾಣಾನಿ ಕೃತ್ವಾ ಸತ್ಯವತೀಸುತಃ ।**
**ಭಾರತಾಖ್ಯಾನಮತುಲಂ ಚಕ್ರೇ ತದುಪಬೃಂಹಿತಮ್ ॥**

– ದೇವೀಭಾಗವತ–ಅಧ್ಯಾಯ ೩

'ಸತ್ಯವತಿಯ ಮಕ್ಕಳಾದ ವ್ಯಾಸರು ಹದಿನೆಂಟು ಪುರಾಣಗಳನ್ನೂ ರಚಿಸಿ, ದೊಡ್ಡದಾದ ಭಾರತಾಖ್ಯಾನವನ್ನೂ ರಚಿಸಿದರು.'

**ಮತಿಮನ್ಥಾನಮಾವಿಧ್ಯ ಯೇನಾಸ್ಮಾಚ್ಛ್ರುತಿಸಾಗರಾತ್ ।**
**ಪ್ರಕಾಶೋ ಜನಿತೋ ಲೋಕೇ ಮಹಾಭಾರತಚನ್ದ್ರಮಾಃ ॥**
**ಭಾರತಂ ಭಾನುಮಾನಿನ್ದುರ್ಯದಿ ನಸ್ಯುರಮೀ ತ್ರಯಃ ।**
**ತತೋಽಜ್ಞಾನತಮೋನ್ಧಸ್ಯ ಕಾಽವಸ್ಥಾ ಜಗತೋ ಭವೇತ್ ॥**
**ಕೃಷ್ಣದ್ವೈಪಾಯನಂ ವ್ಯಾಸಂ ವಿದ್ಧಿ ನಾರಾಯಣಂ ಪ್ರಭುಮ್ ।**
**ಕೋ ಹ್ಯನ್ಯಃ ಪುಣ್ಡರೀಕಾಕ್ಷಾನ್ಮಹಾಭಾರತಕೃದ್ಭವೇತ್ ॥**

– ಪದ್ಮಪುರಾಣ-ಸೃಷ್ಟಿಖಂಡ-ಅಧ್ಯಾಯ ೧

'ವೇದರೂಪವಾದ ಸಾಗರಗಳನ್ನು ಮತಿರೂಪವಾದ ಕಡೆಗೋಲಿನಿಂದ ಕಡೆಯಲಾಗಿ, ಆ ವೇದಸಾಗರದಿಂದ ಪ್ರಕಾಶಮಾನನಾದ ಮಹಾಭಾರತ ಚಂದ್ರನು ಉದಯಿಸಿದನು. ಭಾರತ, ಚಂದ್ರ ಮತ್ತು ಸೂರ್ಯ-ಈ ಮೂರೂ ಇಲ್ಲದಿದ್ದರೆ ಅಜ್ಞಾನಾಂಧಕಾರಗಳಿಂದ ಆವೃತವಾದ ಈ ಜಗತ್ತಿನ ಸ್ಥಿತಿಯು ಏನಾಗುತ್ತಿತ್ತೋ ತಿಳಿಯದು. ಕೃಷ್ಣದ್ವೈಪಾಯನವ್ಯಾಸರೇ ಮಹಾವಿಷ್ಣುವು. ಪುಂಡರೀಕಾಕ್ಷನಲ್ಲದೇ ಮತ್ತಾರಿಂದಲೂ ಮಹಾಭಾರತವನ್ನು ರಚಿಸಲಾಗುತ್ತಿರಲಿಲ್ಲ.'

**ಸ್ತ್ರೀಶೂದ್ರದ್ವಿಜಬನ್ಧೂನಾಂ ತ್ರಯೀ ನ ಶ್ರುತಿಗೋಚರಾ ।**
**ಕರ್ಮಶ್ರೇಯಸಿ ಮೂಢಾನಾಂ ಶ್ರೇಯ ಏವಂ ಭವೇದಿಹ ।**
**ಇತಿ ಭಾರತಮಾಖ್ಯಾನಂ ಕೃಪಯಾ ಮುನಿನಾ ಕೃತಮ್ ॥**

– ಶ್ರೀಮದ್ಭಾಗವತ-ಸ್ಕಂಧ ೧-ಅಧ್ಯಾಯ ೪

'ಸ್ತ್ರೀ, ಶೂದ್ರ, ದ್ವಿಜಬಂಧು– ಈ ಮೂವರೂ ವೇದವನ್ನು ಕಂಡವರಲ್ಲ. ಆದುದರಿಂದ ಇವರಿಗೆ ಶ್ರೇಯಸ್ಸಿನ ಹಾದಿಯೇ ತಿಳಿಯದಾಗಿದ್ದಿತು. ಇವರಿಗೂ ಶ್ರೇಯಸ್ಸುಂಟಾಗಬೇಕೆಂಬ ಇಚ್ಛೆಯಿಂದ ಕೃಪಾವಿಷ್ಟರಾದ ವ್ಯಾಸರು ಮಹಾಭಾರತವನ್ನು ರಚಿಸಿದರು.'

**ಅಷ್ಟಾದಶ ಪುರಾಣಾನಿ ಚಕ್ರೇ ತದುಪಬೃಂಹಿತಮ್ ।**
**ಲಕ್ಷೇಣೈಕೇನ ಯತ್ಪ್ರೋಕ್ತಂ ವೇದಾರ್ಥಪರಿಬೃಂಹಿತಮ್ ॥**

– ಮತ್ಸ್ಯಪುರಾಣ-ಅಧ್ಯಾಯ ೫೩

'ಸತ್ಯವತಿಯ ಮಕ್ಕಳಾದ ವ್ಯಾಸರು ಹದಿನೆಂಟು ಪುರಾಣಗಳನ್ನು ರಚಿಸಿ ಅನಂತರ ಬಹಳ ದೊಡ್ಡದಾದ ವೇದಾರ್ಥಗಳಿಂದ ಯುಕ್ತವಾದ ಮಹಾಭಾರತವನ್ನು ರಚಿಸಿದರು.'

**ನಿಸ್ತಾರಾಯ ತು ಲೋಕಾನಾಂ ಸ್ವಯಂ ನಾರಾಯಣಃ ಪ್ರಭುಃ ।**
**ವ್ಯಾಸರೂಪೇಣ ಕೃತವಾನ್ಪುರಾಣಾನಿ ಮಹೀತಲೇ ॥**

**ಪಠನಾಚ್ಛ್ರವಣಾದ್ಯೇಷಾಂ ನೃಣಾಂ ಪಾಪಕ್ಷಯೋ ಭವೇತ್ ।**
**ಧರ್ಮಾಧರ್ಮಪರಿಜ್ಞಾನಂ ಸದಾಚಾರಪ್ರವರ್ತನಮ್ ॥**

**ಗತಿಶ್ಚ ಪರಮಾ ತದ್ವದ್ಭಕ್ತಿರ್ಭಗವತಿ ಪ್ರಭೌ ।**
**ತಾನಿ ತೇ ಕಥಯಿಷ್ಯಾಮಿ ಸಪ್ರಮಾಣಾನಿ ಭೂತಲೇ ॥**

**ಪುರಾಣಾನಿ ಚತುರ್ಲಕ್ಷಾಣ್ಯೇತಾನಿ ಧರಣೀತಲೇ ।**
**ತಥಾ ಮಹಾಭಾರತಂ ಚ ಲಕ್ಷಸಂಖ್ಯಂ ಪ್ರಕೀರ್ತಿತಮ್ ॥**

(ಪದ್ಮಪುರಾಣ)

'ಲೋಕೋದ್ಧಾರಕ್ಕಾಗಿ ಪ್ರಭುವಾದ ನಾರಾಯಣನೇ ಭೂಲೋಕದಲ್ಲಿ ವ್ಯಾಸರಾಗಿ ಅವತರಿಸಿ ಅಷ್ಟಾದಶಪುರಾಣಗಳನ್ನೂ ರಚಿಸಿದನು. ಇವುಗಳ ಪಠನದಿಂದಲೂ ಶ್ರವಣದಿಂದಲೂ ಪಾಪಕ್ಷಯವಾಗುತ್ತದೆ. ಧರ್ಮಾಧರ್ಮಗಳ ಪರಿಜ್ಞಾನವುಂಟಾಗುತ್ತದೆ. ಸದಾಚಾರದಲ್ಲಿ ಆಸಕ್ತಿಯು ಹುಟ್ಟುತ್ತದೆ. ಉತ್ತಮಗತಿಯು ಲಭಿಸುತ್ತದೆ. ಪರಮಾತ್ಮನಲ್ಲಿ ವಿಶೇಷವಾದ ಭಕ್ತಿಯುಂಟಾಗುತ್ತದೆ. ವ್ಯಾಸರು ನಾಲ್ಕುಲಕ್ಷ ಶ್ಲೋಕಗಳಿಂದ ಪುರಾಣಗಳನ್ನೂ– ಒಂದು ಲಕ್ಷ ಶ್ಲೋಕಗಳಿಂದ ಮಹಾಭಾರತವನ್ನೂ ರಚಿಸಿದರು.

**ಅಷ್ಟಾದಶ ಪುರಾಣಾನಿ ಕೃತ್ವಾ ಸತ್ಯವತೀಸುತಃ ।**
**ಭಾರತಾಖ್ಯಾನಮಕರೋದ್ವೇದಾರ್ಥೈರುಪಬೃಂಹಿತಮ್ ।**
**ಲಕ್ಷೇಣೈಕೇನ ತತ್ಪ್ರೋಕ್ತಂ ದ್ವಾಪರಾನ್ತೇ ಮಹಾತ್ಮನಾ ।**

–ಶೌನಕೋಕ್ತ ಚರಣವ್ಯೂಹ–ಪರಿಶಿಷ್ಟ ಖಂಡ ೫

'ಸತ್ಯವತಿಯ ಮಕ್ಕಳಾದ ವ್ಯಾಸರು ಹದಿನೆಂಟುಪುರಾಣಗಳನ್ನು

ರಚಿಸಿ, ವೇದಾರ್ಥಗಳಿಂದ ಕೂಡಿದ ಭಾರತಾಖ್ಯಾನವನ್ನು ಒಂದು ಲಕ್ಷ ಶ್ಲೋಕಗಳಲ್ಲಿ ದ್ವಾಪರಯುಗದ ಅಂತ್ಯದಲ್ಲಿ ರಚಿಸಿದರು.'

ಮೇಲ್ಕಾಣಿಸಿರುವ ಯಾವ ಕಡೆಗಳಲ್ಲಿಯೂ ಸೌತಿಯ ಅಥವಾ ವೈಶಂಪಾಯನರ ಹೆಸರೇ ಇರುವುದಿಲ್ಲ. ಎಲ್ಲ ಪುರಾಣಗಳೂ ಮಹಾಭಾರತವು ವ್ಯಾಸಕೃತವೆಂದೇ ಉದ್ಘೋಷಿಸಿವೆ.

(ಮುಂದುವರಿಯುವುದು)

ಶ್ರಿಯೈನಮಃ ಶ್ರೀಗುರುಭ್ಯೋ ನಮಃ

## ಸೂತಪೌರಾಣಿಕರು ಯಾರು?

ಶ್ರೀವೇದವ್ಯಾಸರ ಶಿಷ್ಯರಾದ, ಪುರಾಣಗಳ ವಕ್ತಾರರೂ-ಪ್ರಚಾರಕರೂ ಆದ ಶ್ರೀ ಸೂತಪೌರಾಣಿಕರ ಬಗೆಗೆ ಜನಸಾಮಾನ್ಯರಲ್ಲಿ ತಪ್ಪು ತಿಳುವಳಿಕೆಯಿದೆ. ಭಾರತೀಯಸಂಸ್ಕೃತಿಯನ್ನು ವಿದೇಶೀಯ ಪ್ರಭಾವದಿಂದ ಉಳಿಸಲು ನೆರವಾದ ಪುರಾಣಗಳ ಉಪಕಾರ ಹೇಳಲಾಗದಷ್ಟು– ಎಂಬುದನ್ನು ಎಲ್ಲರೂ ಒಪ್ಪುತ್ತಾರೆ. ಈ ಪುರಾಣಸಾಹಿತ್ಯದ ಪ್ರಚಾರಕರ ಬಗೆಗೆ ಹೆಚ್ಚು ತಿಳಿಯಲು ಸಜ್ಜನರು ಕುತೂಹಲಿಗಳಾಗಿರುವುದು ಸಮಂಜಸವೇ ಆಗಿದೆ.

ಸಾಧಾರಣವಾಗಿ ಸೂತಪೌರಾಣಿಕರು ಸೂತಜಾತಿಯವರೆಂಬುದು ಜನಸಾಮಾನ್ಯರ ತಿಳುವಳಿಕೆಯಾಗಿದೆ. ಎಂದರೆ ಅವರ ಅಭಿಪ್ರಾಯದಲ್ಲಿ **'ಕ್ಷತ್ರಿಯಾತ್ಸೂತ ಏವ ತು'** (ಮನುಸ್ಮೃತಿ 10/17) ಎಂಬ ಪ್ರಮಾಣದ ಪ್ರಕಾರ ಕ್ಷತ್ರಿಯನಿಂದ ಬ್ರಾಹ್ಮಣಸ್ತ್ರೀಯಲ್ಲಿ ಪ್ರತಿಲೋಮಸಂಕರನಾಗಿ ಹುಟ್ಟಿದವನು ಸೂತ. ಇವರನ್ನು 'ಅಪಸದಃ' ಎಂದರೆ ನಿಕೃಷ್ಟರು ಎಂದು ಹೇಳಲಾಗಿದೆ. ಶ್ರೀಮದ್ಭಾಗವತದಲ್ಲಿ (೧೦/೭೮/೨೪) ಸೂತರನ್ನು ಪ್ರತಿಲೋಮಜರೆಂದೇ ಹೇಳಲಾಗಿದೆ. ಇದರಂತೆಯೇ ಬೃಹನ್ನಾರದೀಯ ಪುರಾಣಾಂತರ್ಗತವಾದ ಪುರುಷೋತ್ತಮಮಾಸಮಾಹಾತ್ಮ್ಯದಲ್ಲಿಯೂ ಸೂತರು ತಮ್ಮನ್ನು–**'ವಿಲೋಮಜೋಽಪಿ ಧನ್ಯೋಽಸ್ಮಿ ಯನ್ಮಾಂ ಪೃಚ್ಛಥ ಸತ್ತಮಾಃ'** (೨/೫)–ಎಂಬ ಈ ಶ್ಲೋಕದಲ್ಲಿ ವಿಲೋಮಜರೆಂದೇ

ಹೇಳಿಕೊಂಡಿದ್ದಾರೆ. ಅವರ ಹೆಸರು ಶ್ರೀ ರೋಮಹರ್ಷಣರೆಂದು. ಅವರು ಸಂಕರವರ್ಣದ ಸೂತಜಾತಿಯವರೆಂದು ಇದರಿಂದ ಸಿದ್ಧವಾಯಿತು.

ಆದರೆ ಶಾಸ್ತ್ರದ ಅವಗಾಹನೆಯಿಂದ ಮೇಲೆ ಹೇಳಿದ ಅಭಿಪ್ರಾಯವು ಭ್ರಮಪೂರ್ಣವಾದುದೆಂದು ತಿಳಿಯುತ್ತದೆ. ಶ್ರೀರೋಮಹರ್ಷಣರು ಜನ್ಮತಃ ಸೂತರಲ್ಲ ; ಉಚ್ಚಬ್ರಾಹ್ಮಣರು. 'ಸೂತ' ಎಂಬುದು ಅವರ ಯೌಗಿಕವಾದ ಉಪನಾಮ, ಜಾತಿವಾಚಕವಲ್ಲ. ಈ ವಿಷಯದ ಬಗೆಗೆ ಶಾಸ್ತ್ರೀಯಮತವನ್ನೂ ಪ್ರಮಾಣಗಳೊಂದಿಗೆ ಈ ಮುಂದೆ ಮಂಡಿಸಲಾಗುತ್ತದೆ. ಯಾವ ಪುರಾಣಗಳಿಂದ ಅವರು ಸಂಕರಜಾತಿಯವರೆಂದು ಸಿದ್ಧಪಡಿಸಲಾಗುತ್ತದೋ (ಈ ವಿಷಯದಲ್ಲಿ) – ಆ ಪುರಾಣಗಳ ಮತವೇನು ಎಂಬುದನ್ನು ಮೊದಲು ತಿಳಿದುಕೊಂಡ ನಂತರ ನಿರ್ಣಯಮಾಡಲು ನಮಗೆ ಅಧಿಕಾರ ಬರುತ್ತದೆ.

ಹರಿವಂಶಪುರಾಣದ (೧೪) ಶ್ಲೋಕದಲ್ಲಿ 'ಸೌತಿಃ' ಎಂಬ ಪದ ಬರುತ್ತದೆ. ಇದರ ವಿವರಣಪ್ರಸಂಗದಲ್ಲಿ ಒಬ್ಬ ಪ್ರಾಚೀನಟೀಕಾಕಾರರು ಹೀಗೆ ಬರೆದಿದ್ದಾರೆ : 'ಸೂತಃ= ಅಗ್ನಿಕುಂಡಸಮುದ್ಭೂತಃ, ಸೂತಃ ನಿರ್ಮಲಮಾನಸಃ' ಇತಿ ಪೌರಾಣಿಕಪ್ರಸಿದ್ಧೇರಗ್ನಿಜೋ ಲೋಮಹರ್ಷಣಃ, ತಸ್ಯ ಪುತ್ರಃ ಸೌತಿಃ ಉಗ್ರಶ್ರವಾಃ: ನ ತು 'ಬ್ರಾಹ್ಮಣ್ಯಾಂ ಕ್ಷತ್ರಿಯಾತ್ ಸೂತಃ' ಇತಿ ಸ್ಮೃತ್ಯುಕ್ತಃ, ತದ್ಧಿತಾನರ್ಥಕ್ಯಾಪತ್ತೇಃ'

ಮೇಲಿನ ಹೇಳಿಕೆಯು ನಿಜವಾಗಿಯೂ ಮಹತ್ವಪೂರ್ಣವೂ ಅಖಂಡನೀಯವೂ ಆಗಿದೆಯೆನ್ನಬಹುದು. ಈ ಟೀಕಾಕಾರರು ಯಾರಾದರೂ ಆಗಿರಲಿ– (ಪುಸ್ತಕವು ಬಹಳ ಪ್ರಾಚೀನವಾಗಿದ್ದುದರಿಂದಲೂ ಪತ್ರಗಳೆಲ್ಲವೂ ಜೀರ್ಣವಾಗಿ ಹೋಗಿದ್ದರಿಂದಲೂ ಟೀಕಾಕಾರರು ಯಾರೆಂಬುದು ತಿಳಿಯಲಿಲ್ಲ)–ಅವರು ರಹಸ್ಯಪೂರ್ಣ ಮತ್ತು ನೂರಕ್ಕೆ ನೂರರಷ್ಟು ಸತ್ಯವನ್ನೇ ಆಡಿದ್ದಾರೆ. ಇದರ ಆಶಯವೇನೆಂದರೆ : ಮಹಾಭಾರತದ ಪರಿಶಿಷ್ಟವಾಗಿರುವ ಹರಿವಂಶಪುರಾಣವನ್ನು ಸೌತಿಗಳು ಜನಮೇಜಯನಿಗೆ ಹೇಳಿದರು. ಇಲ್ಲಿ 'ಸೌತಿಃ' ಎಂದರೆ ಸೂತರ ಪುತ್ರನೆಂದು ಅರ್ಥ. ಸೂತರೆಂದರೆ 'ಅಗ್ನಿ

**ಕುಂಡಸಮುದ್ಭೂತ–ಸೂತ**'–ಈ ಪುರಾಣವಾಕ್ಯದ ಪ್ರಕಾರ ಅಗ್ನಿಕುಂಡದಲ್ಲಿ ಪ್ರಸೂತರಾದವರು ರೋಮಹರ್ಷಣರು. ಈ ಪ್ರಕರಣವನ್ನು ಉದ್ಧರಿಸಿ ಟೀಕಾಕಾರರು ಹೇಳುತ್ತಾರೆ : ಅಗ್ನಿಕುಂಡಪ್ರಸೂತರಾದುದರಿಂದ ರೋಮ ಹರ್ಷಣರು ಸೂತರೆಂದು ಕರೆಯಲ್ಪಡುತ್ತಾರೆ ; ಇಲ್ಲಿ 'ಸೂತ' ಎಂದರೆ '**ಬ್ರಾಹ್ಮಣ್ಯಾಂ ಕ್ಷತ್ರಿಯಾತ್ ಸೂತಃ**' ಎಂಬ ಸ್ಮೃತ್ಯುಕ್ತವಾದ ಸೂತಜಾತಿಯ ಬಗ್ಗೆ ಹೇಳಿಲ್ಲ. ಇದರ ಬಗ್ಗೆ ಟೀಕಾಕಾರರು ಒಂದು ಪ್ರಬಲವಾದ ಉಪಪತ್ತಿಯನ್ನು ಕೊಟ್ಟು ಹೇಳುತ್ತಾರೆ. '**ತದ್ಧಿತಾನರ್ಥಕ್ಯಾಪತ್ತೇಃ**' ಇದೇ ಮೇಲೆ ಹೇಳಿದ ಟೀಕಾಕಾರರ ವಾಕ್ಯದಲ್ಲಿ ಸಾರವತ್ತಾದ ಭಾಗವಾಗಿದೆ.

ಇದರ ಸಾರಾಂಶ : ರೋಮಹರ್ಷಣಸೂತರು ಸ್ಮೃತ್ಯುಕ್ತವಾದ ಸೂತಜಾತಿಯವರೇ ಆಗಿದ್ದರೆ 'ಸೂತ' ಎನ್ನುವುದು ಅವರು ಅಗ್ನಿಕುಂಡ ಪ್ರಸೂತರಾದುದರಿಂದ ಉಂಟಾದ ನಾಮವಿಶೇಷವಾಗುತ್ತಿರಲಿಲ್ಲ. ಇದೇ ಅಲ್ಲದೇ ಅವರ ಪುತ್ರನನ್ನು 'ಸೌತಿ' ಎಂದು ಕರೆಯುವ ಅವಶ್ಯಕತೆಯೂ ಇರಲಿಲ್ಲ. ಏಕೆಂದರೆ ಸೂತಜಾತಿಯಲ್ಲಿ ಹುಟ್ಟಿದುದರಿಂದ ರೋಮಹರ್ಷಣ ಸೂತರ ಪುತ್ರರೂ ಸೂತರೆಂದೇ ಕರೆಯಲ್ಪಡುತ್ತಿದ್ದರು ; 'ಸೌತಿ' ಎಂದಲ್ಲ. ಜಾತಿಗೆ ಪುತ್ರರಿರುವುದಿಲ್ಲ ; ವ್ಯಕ್ತಿಗೆ ಪುತ್ರರಿರುತ್ತಾರೆ. ಬ್ರಾಹ್ಮಣಜಾತೀಯನ ಪುತ್ರನು 'ಬ್ರಾಹ್ಮಣಿ'ಯಾಗುವುದಿಲ್ಲ. 'ಬ್ರಾಹ್ಮಣನೇ' ಆಗುತ್ತಾನೆ. ಸೂತ ಜಾತಿಯ ಪುರುಷನ ಮಗನೆಂದು ಪ್ರಸಿದ್ಧನಾಗಿದ್ದರೂ ಕರ್ಣನನ್ನು 'ಸೌತಿ' ಯೆಂದು ಎಲ್ಲಿಯೂ ಕರೆದಿರುವುದಿಲ್ಲ ; 'ಸೂತ'ನೆಂದೇ ಕರೆಯಲ್ಪಟ್ಟಿದ್ದಾನೆ. ದ್ರೌಪದೀಸ್ವಯಂವರಪ್ರಕರಣದಲ್ಲಿ ದ್ರೌಪದಿಯು ಲಕ್ಷ್ಯವೇಧನಮಾಡಲು ಸಿದ್ಧನಾದ ಕರ್ಣನನ್ನು ನೋಡಿ ಹೇಳುತ್ತಾಳೆ–'**ನಾಹಂ ವರಯಾಮಿ ಸೂತಮ್**' (೧/೧೮೯/೨೩).

ಮಹಾಭಾರತದಲ್ಲಿ ಮತ್ತು ಹರಿವಂಶಪುರಾಣದಲ್ಲಿ ರೋಮಹರ್ಷಣ ಸೂತರ ಪುತ್ರನನ್ನೂ 'ಸೌತಿ' ಎಂದು ತದ್ಧಿತಪ್ರತ್ಯಯದಿಂದಲೇ ಕರೆಯ ಲಾಗಿದೆ. ಇದರಿಂದ ರೋಮಹರ್ಷಣಸೂತರು ಅಗ್ನಿಕುಂಡಸಮುದ್ಭೂತ ರಾದುದರಿಂದ ಸೂತರೆಂದು ಕರೆಯಲ್ಪಡುವರೇ ಹೊರತು ಸೂತಜಾತಿಯವ

ರಾದುದರಿಂದಲ್ಲವೆಂಬುದು ಸ್ಪಷ್ಟ. ಸೂತಜಾತಿಯವನ ಪುತ್ರನನ್ನು ಸೂತನೆಂದೇ ಕರೆಯಬೇಕೇ ಹೊರತು ತದ್ಧಿತೀಯ 'ಇಞ್' ಪ್ರತ್ಯಯಾಂತವಾದ 'ಸೌತಿ' ಎಂದಲ್ಲ. ಪುರಾಣದಲ್ಲಿ ರೋಮಹರ್ಷಣರು ಅಗ್ನಿಕುಂಡದಿಂದ ಹುಟ್ಟಿದರೆಂಬುದು ಸಿದ್ಧವಾಗಿರುವುದರಿಂದ, ಉತ್ಪತ್ತಿ ಮೂಲಕನಾಮದಿಂದ ಸೂತರೆಂದೇ ಕರೆಯಲ್ಪಡುತ್ತಾರೆ.

ರೋಮಹರ್ಷಣರು ಸೂತಜಾತಿಯವರಾಗಿದ್ದರೆ ಅವರನ್ನು ಕೊಂದ ಬಲರಾಮನಿಗೆ ಬ್ರಹ್ಮಹತ್ಯಾದೋಷವು ಪ್ರಾಪ್ತವಾಗುತ್ತಿರಲಿಲ್ಲ. ಸಂಕರ ವರ್ಣದವನು ಬ್ರಾಹ್ಮಣನೆಂದು ಎಂದೂ ಕರೆಯಲ್ಪಡುವುದಿಲ್ಲ. ಬ್ರಾಹ್ಮಣಿ ಯಲ್ಲಿ ನಾಪಿತನಿಂದ ಹುಟ್ಟಿದ ಮಾತಂಗನು ಮಹಾಭಾರತದಲ್ಲಿ ಚಾಂಡಾಲ ನೆಂದೇ ಕರೆಯಲ್ಪಟ್ಟಿದ್ದಾನೆ. ಹಲವುಬಾರಿಯ ತಪಶ್ಚರ್ಯೆಯಿಂದಲೂ ಇಂದ್ರನು ಅವನಿಗೆ ಬ್ರಾಹ್ಮಣತ್ವವನ್ನು ಕೊಡಲಿಲ್ಲ. ಮಹಾಭಾರತ ಅನುಶಾಸನಪರ್ವದ 28ನೆಯ ಅಧ್ಯಾಯದಲ್ಲಿ ಈ ವಿಷಯವು ಬರುತ್ತದೆ.

ಪುರಾಣದ ಬಗ್ಗೆಯೇ ಪ್ರಶ್ನೆಯನ್ನೆತ್ತಿದರೆ–ಪುರಾಣದ ವ್ಯವಸ್ಥೆ ಮತ್ತು ಪುರಾಣೋಕ್ತವಾದ ಅವರ (ಸೂತರ) ಉತ್ಪತ್ತಿಯನ್ನೇ ನಾವು ಮಾನ್ಯಮಾಡಬೇಕಾಗುತ್ತದೆ ; ಇಲ್ಲದಿದ್ದರೆ 'ಅರ್ಧಜರತೀಯ' ನ್ಯಾಯವು ಉಪಸ್ಥಿತವಾಗುತ್ತದೆ. ಶ್ರೀಮದ್ಭಾಗವತದ ದಶಮಸ್ಕಂಧದ 78ನೆಯ ಅಧ್ಯಾಯದಲ್ಲಿ ಬಲರಾಮನು ಸೂತರನ್ನು 'ಪ್ರತಿಲೋಮಜ' ನೆಂದು ಸಂಬೋಧಿಸುತ್ತಾನಲ್ಲ ಎಂದರೆ–ಇದನ್ನು ತಿರಸ್ಕಾರಪೂರ್ವಕವಾದ ಸಂಬೋಧನೆಯೆಂದೇ ತಿಳಿಯಬೇಕು. ಭಗವದಂಶಸಂಭೂತನಾದ ಬಲ ರಾಮನು ಆಗಮಿಸಿದುದನ್ನು ಕಂಡು–

**ತಮಾಗತಮಭಿಪ್ರೇಕ್ಷ್ಯ ಮುನಯೋ ದೀರ್ಘಸತ್ರಿಣಃ ।**
**ಅಭಿನನ್ದ್ಯ ಯಥಾನ್ಯಾಯಂ ಪ್ರಣಮ್ಯೋತ್ಥಾಯ ಚಾರ್ಚಯನ್ ॥**

(ಶ್ರೀಮದ್ಭಾಗವತ ೧೦/೭೮/೨೧)

ಈ ಪ್ರಕಾರ ಮುನಿಗಳೆಲ್ಲರೂ ಎದ್ದುನಿಂತು ನಮಸ್ಕರಿಸಿ ಬಲರಾಮನನ್ನು ಸ್ವಾಗತಿಸಿದರು. ಆದರೆ ರೋಮಹರ್ಷಣರು ಮಾತ್ರ ಆ ರೀತಿ ಮಾಡಲಿಲ್ಲ. ಆದುದರಿಂದ ತಿರಸ್ಕಾರಯೋಗ್ಯರಾದರು. ಬಲರಾಮನು-

**ಏತದರ್ಥೋ ಹಿ ಲೋಕೇಽಸ್ಮಿನ್ನವತಾರೋ ಮಯಾ ಕೃತಃ ।**
**ವಧ್ಯಾ ಮೇ ಧರ್ಮಧ್ವಜಿನಸ್ತೇ ಹಿ ಪಾತಕಿನೋಽಧಿಕಾಃ ॥**

– ಶ್ರೀಮದ್ಭಾಗವತ ೧೦/೭೮/೨೭

ಧರ್ಮದ್ರೋಹಮಾಡುವ ಪಾಪಿಗಳನ್ನು ವಧಿಸಲೆಂದೇ ತಾನು ಅವತರಿಸಿದುದೆಂದು ಸ್ಪಷ್ಟಪಡಿಸುತ್ತಾನೆ.

ಭಾಗವತದಲ್ಲಿ ಬಲರಾಮನಿಂದ ಉಪಯೋಗಿಸಲ್ಪಟ್ಟಿರುವ 'ಪ್ರತಿಲೋಮಜ' ಪದವು 'ಸೂತ' ಪದದ ಸೂತಜಾತಿವಾಚಕ ಹೆಸರಿನ ಸಾದೃಶ್ಯಮಾತ್ರದಿಂದ ಲಾಕ್ಷಣಿಕವಾಗಿದೆ ; ಸೂತಜಾತಿವಾಚಕವಲ್ಲ.

'ಅವತಾರ, ಸುಪಾತ್ರ, ಗುರು, ಪಂಡಿತ, ಸಂತ, ಮಹಂತ'–ಇವೇ ಮೊದಲಾದ ಪದಗಳು ವಿಪರೀತಲಕ್ಷಣವುಳ್ಳವರ ವಿಷಯದಲ್ಲಿ ವ್ಯಂಗ್ಯವಾಗಿ ಉಪಯೋಗಿಸಲ್ಪಡುವುದು ಲೋಕರೂಢಿ ; 'ಪುಣ್ಯಜನ' ಎಂದರೆ 'ರಾಕ್ಷಸ' ಎಂಬಂತೆ. ಪ್ರತಿಲೋಮಜಸಂಕರಜಾತಿಸೂಚಕವಾದ 'ಸೂತ' ಎಂಬ ಜಾತಿವಾಚಕವು ಶಬ್ದಸಾದೃಶ್ಯದಿಂದ ರೋಮಹರ್ಷಣಸೂತರ ವಿಷಯದಲ್ಲಿ 'ಪ್ರತಿಲೋಮಜ' ಎಂದು ವರ್ಣಿತವಾಗಿದೆ. ಆದರೆ ವಾಸ್ತವವಾಗಿ ಇವರನ್ನು ಪ್ರತಿಲೋಮಜ ಎಂದು ಕರೆದಿರುವ ರಹಸ್ಯವು ಮುಂದೆ ಹೇಳಲ್ಪಡುತ್ತದೆ.

ಶ್ರೀಸೂತರು–'ಬ್ರಾಹ್ಮಣ್ಯಾಂ ಕ್ಷತ್ರಿಯಾತ್ ಸೂತಃ'–ಎಂಬಂತೆ ಜಾತಿಸೂತರೇ ಆಗಿದ್ದರೆ, 'ಸೂತರು ಅಗ್ನಿಯಿಂದ ಜನ್ಮತಳೆದ ಅಯೋನಿಜರು' ಎಂಬ ಅನ್ಯಪುರಾಣೋಕ್ತವಚನಗಳಿಗೆ ವಿರೋಧವು ಬರುತ್ತದೆ. ಆದರೆ **'ಸಂಭವತಿ ಸಾಮಾನಾಧಿಕರಣ್ಯೇ ವೈಯಧಿಕರಣಸ್ಯ ಅನ್ಯಾಯ್ಯತ್ವಮ್'** ಎಂಬ ಈ ನ್ಯಾಯದ ಪ್ರಕಾರ ನಡೆದುಕೊಳ್ಳುವುದೇ ಸಾಧು. ಉಗ್ರಶ್ರವಸೌತಿಗಳು ರೋಮಹರ್ಷಣಸೂತರ ಪುತ್ರರೆಂದು ಹೇಳಿದಂತೆ, ರೋಮಹರ್ಷಣರ ತಂದೆಯವರು ಸೂತಜಾತಿಯವರೆಂದು ಎಲ್ಲಿಯೂ ಹೇಳಿಲ್ಲ. ಅವರು ವ್ಯಾಸಶಿಷ್ಯರಾಗಿ, ವ್ಯಾಸಾಸನಕ್ಕೆ ಯೋಗ್ಯರಾಗಿ, ಬ್ರಾಹ್ಮಣ-ಋಷಿ-ಮುನಿಗಳಿಗೂ ಪ್ರವಚನಕಾರ (ವಕ್ತಾರ)ರಾಗಿದ್ದುದೇ ಅವರು ಸಂಕರವರ್ಣದವರಲ್ಲವೆನ್ನುವುದಕ್ಕೆ ಸಾಕ್ಷಿ.

ಆದರೆ ಕೆಲವೆಡೆಗಳಲ್ಲಿ ಪ್ರತಿಲೋಮಜರೆಂದು ಅವರೇಕೆ ಕರೆಯಲ್ಪಡುತ್ತಾರೆ—ಎನ್ನುವುದರ ರಹಸ್ಯ ಹೀಗಿದೆ : ರೋಮಹರ್ಷಣ ಸೂತರು ಅಗ್ನಿಕುಂಡಪ್ರಸೂತರು ಎಂದು ಹಿಂದೆಯೇ ಹೇಳಿದೆ. ಆ ಅಗ್ನಿಕುಂಡದಲ್ಲಿ ಇಂದ್ರ ಮತ್ತು ಬೃಹಸ್ಪತಿಗಳನ್ನು ಉದ್ದೇಶಿಸಿ ಕೊಟ್ಟ ಚರುಗಳ ಸಂಕರದಿಂದ, ಶಿಷ್ಯನಾದ ಇಂದ್ರನ ಹವಿರ್ಭಾಗದೊಡನೆ ಗುರುವಾದ ಬೃಹಸ್ಪತಿಯ ಹವಿರ್ಭಾಗವು ಸೇರಿಹೋದುದರಿಂದ (ಆ ಸಮಯದಲ್ಲಿ) ಶ್ರೀಸೂತರ ಉತ್ಪತ್ತಿಯಾಯಿತು. ಆದುದರಿಂದಲೇ ಕೆಲವೆಡೆಗಳಲ್ಲಿ ಔಪಚಾರಿಕವಾಗಿ ಅವರನ್ನು ಸಂಕರ ಅಥವಾ ಪ್ರತಿಲೋಮಜರೆಂದು ಕರೆದಿದೆ ಅಷ್ಟೆ. ಅವರು ಜನ್ಮತಃ ಸೂತರಾಗಿರಲಿಲ್ಲವೆಂಬುದು ಇದರಿಂದಲೂ ಸ್ಪಷ್ಟವಾಯಿತು.

ಈ ವಿಷಯವಾಗಿ ಶ್ರೀಮದ್ಭಾಗವತ (೧೦/೭೮/೨೪)ದಲ್ಲಿ ಬಲರಾಮನು ಸೂತರನ್ನೂ 'ಪ್ರತಿಲೋಮಜ' ಎಂದು ಕರೆದಿರುವ ಬಗ್ಗೆ ಶ್ರೀಮದ್ಭಾಗವತದ ಭಾವಪ್ರದೀಪಿಕಾಟೀಕೆಯಲ್ಲಿ ಬೆಳಕು ಚೆಲ್ಲಲ್ಪಟ್ಟಿದೆ. ಅಲ್ಲಿ ಹೀಗೆ ಹೇಳಿದೆ – 'ತಸ್ಯ (ಸೂತಸ್ಯ) ಅಗ್ನಿಕುಂಡೋದ್ಭೂತತ್ವೇನ ಜಾತಿ ಸೂತತ್ವಾಭಾವೇಪಿ ಚರುನಿಕ್ಷೇಪವೈಪರೀತ್ಯಾತ್ ಪ್ರತಿಲೋಮಜ ಇತ್ಯುಕ್ತಃ' (ಭಾಗ-೧೦/೭೮/೨೪) ಎಂದರೆ ರೋಮಹರ್ಷಣರು ಅಗ್ನಿಕುಂಡಪ್ರಸೂತರಾಗಿದ್ದುದರಿಂದ ಜಾತಿಸೂತರಾಗಿರಲಿಲ್ಲ ; ಆದರೂ ಅಗ್ನಿಕುಂಡದಲ್ಲಿ ಎರಡು ಚರುಗಳ ನಿಕ್ಷೇಪವು ವಿಪರೀತವಾಗಿ (ಎಂದರೆ ಹಿಂದು-ಮುಂದಾಗಿ) ಆದ ಸಮಯದಲ್ಲಿ ಅವರ ಜನನವಾದುದರಿಂದ ಅವರನ್ನು ಪ್ರತಿಲೋಮಜ ಎಂದು ಕೆಲವೆಡೆಗಳಲ್ಲಿ ಕರೆದಿದೆ.

'ಸತ್ಕೃತಂ ಸೂತಮಾಸೀನಂ ಪಪ್ರಚ್ಛುರಿದಮಾದರಾತ್' (ಶ್ರೀಮದ್ಭಾಗವತ ೧/೧೫)—ಈ ಶ್ಲೋಕಕ್ಕೆ ಶ್ರೀಧರಪ್ರಣೀತ ಭಾವ ಪ್ರದೀಪಿಕಾಟೀಕೆಯಲ್ಲಿ—"ನನು 'ಬ್ರಾಹ್ಮಣ್ಯಾಂ ಕ್ಷತ್ರಿಯಾಜ್ಜಾತಃ ಸೂತಃ' ಇತಿ ಸ್ಮೃತೇಸ್ತಸ್ಯ ವಿಲೋಮಜಾತೀಯತ್ವೇನ ಶೂದ್ರತ್ವಾತ್.

ಶ್ವಚರ್ಮಣಿ ಯಥಾಕ್ಷೀರಮಪೇಯಂ ಸ್ಯಾದ್ದ್ವಿಜಾತಿಭಿಃ ।
ತಥಾ ಶೂದ್ರಮುಖಾಚ್ಛಾಸ್ತ್ರಂ ನ ಶ್ರೋತವ್ಯಂ ಕದಾಚನ ॥

ವಿಪ್ರೋ ವಕ್ತಾ ಸುಧೀಃ ಕಾರ್ಯೋ ವಿಶುದ್ಧೋಭಯವಂಶಜಃ ।
ಇತಿಹಾಸಪುರಾಣಾನಾಂ ವಿಪ್ರಾನ್ಯೋ ಧರ್ಮಹಾನಿಕೃತ್ ॥

–ಭಾ. ದೀ. ೧೦/೭೨/೨

'ಇತಿ ಮಹಾಭಾರತಾದಿಸ್ಮೃತೇಶ್ಚ ಕಥಮತೀವ ವಿಜ್ಞಾಃ ಶೌನಕಾದಯಃ ಸಾಕ್ಷಾದ್ವೇದರೂಪಂ ಶ್ರೀಮದ್ಭಾಗವತಂ ಶುಶ್ರುವುಃ?'– ಶೌನಕಾದಿ ಋಷಿ-ಮುನಿಗಳು ವಿಲೋಮಜನಾದ ಸೂತನಿಂದ ವೇದರೂಪವಾದ ಶ್ರೀಮದ್ಭಾಗವತವನ್ನು ಶ್ರವಣಮಾಡಿ ಶಾಸ್ತ್ರವಿರುದ್ಧವಾದ ಕಾರ್ಯವನ್ನು ಮಾಡಿದಂತಾಗಲಿಲ್ಲವೇ? ಎಂದರೆ ಅದು ಹಾಗಲ್ಲ; ಏಕೆಂದರೆ "ಇತಿ ಚೇತ್, ಅತ್ರ ಇದಮವಧೇಯಂ, ನ ಹ್ಯಯಂ ಜಾತಿಸೂತಃ । ಅಸ್ಯ ಉತ್ಪತ್ತಿಸ್ತು ವಾಯುಪುರಾಣೇ–

ವೈನ್ಯಸ್ಯ ತು ಪೃಥೋರ್ಯಜ್ಞೇ ವರ್ತಮಾನೇ ಮಹಾತ್ಮನಃ ।
ಸುತ್ಯಾಯಾಮಭವತ್ಸೂತಃ ಪ್ರಥಮಂ ವರ್ಣವೈಕೃತಮ್ ॥

ಐಂದ್ರೇಣ ಹವಿಷಾ ತತ್ರ ಹವಿಃ ಪೃಕ್ತಂ ಬೃಹಸ್ಪತೇಃ ।
ಜುಹಾವೇಂದ್ರಾಯ ದೈವೇನ ತತಃ ಸೂತೋ ವ್ಯಜಾಯತ ॥

ಶಿಷ್ಯಹವ್ಯೇನ ಸಂಪೃಕ್ತಮಭಿಭೂತಂ ಗುರೋರ್ಹವಿಃ ।
ಅಧರೋತ್ತರಚಾರೇಣ ಜಜ್ಞೇ ತದ್ವರ್ಣವೈಕೃತಮ್ ॥ (೧/೩೩೩೬)

ರೋಮಹರ್ಷಣರು ಜಾತಿಸೂತರಲ್ಲ. ವಾಯುಪುರಾಣದಲ್ಲಿ ಹೀಗೆ ಹೇಳಿದೆ : ಪೃಥುಚಕ್ರವರ್ತಿಯು ಯಜ್ಞಮಾಡುತ್ತಿದ್ದಾಗ 'ಸುತ್ಯಾ-ಅಭಿಷವ ಭೂಮಿಃ'–ಅರ್ಥಾತ್ ಆ ಯಜ್ಞಕುಂಡದಿಂದ ಹುಟ್ಟಿದರು. ಯಜ್ಞ ಮಾಡುತ್ತಿದ್ದಾಗ ಇಂದ್ರದೇವತೋದ್ದಿಷ್ಟವಾದ ಹವಿಸ್ಸು ಯಜ್ಞಕುಂಡದಲ್ಲಿ ಹೋಮಮಾಡಲ್ಪಟ್ಟಿತು ; ಅದೇ ಸಮಯದಲ್ಲಿ ಬೃಹಸ್ಪತಿಯನ್ನು ಉದ್ದೇಶಿಸಿಯೂ ಹವಿಸ್ಸು ನಿಕ್ಷೇಪಿಸಲ್ಪಟ್ಟಿತು. ಶಿಷ್ಯನಾದ ಇಂದ್ರನ ಹವಿಸ್ಸಿನಿಂದ ಗುರುವಾದ ಬೃಹಸ್ಪತಿಯ ಹವಿಸ್ಸು ಅಭಿಭೂತವಾಯಿತು ; ಆಗಲೇ ಆ ಕುಂಡದಿಂದ ಸೂತರ ಉತ್ಪತ್ತಿಯಾಯಿತು. ರೋಮಹರ್ಷಣಸೂತರು ಸಂಕರವರ್ಣದವರೆಂದು ಹೇಳಲ್ಪಡಲು ಕಾರಣ :-ದೇವತೆಗಳಲ್ಲಿ ಇಂದ್ರನು ಕ್ಷತ್ರಿಯವರ್ಣ

ದವನೆಂದೂ–ಬೃಹಸ್ಪತಿಯು ಬ್ರಾಹ್ಮಣವರ್ಣದವನೆಂದೂ ಪರಿಗಣಿಸಲ್ಪಡುತ್ತಾರೆ. ಯಜುರ್ವೇದೀಯಶತಪಥಬ್ರಾಹ್ಮಣದಲ್ಲಿ ದೇವತೆಗಳ ವರ್ಣದ ಬಗ್ಗೆ ಹೀಗೆ ಹೇಳಿದೆ – **"ಸ ವಾ ಏಷ ಬ್ರಾಹ್ಮಣಸ್ಯೈವ ಯಜ್ಞಃ; ಯದ್ ಏನೇನ ಬೃಹಸ್ಪತಿರಯಜತ । ಬ್ರಹ್ಮ ಹಿ ಬೃಹಸ್ಪತಿಃ ; ಬ್ರಹ್ಮ ಹಿ ಬ್ರಾಹ್ಮಣಃ । ಅಥೋ ರಾಜನ್ಯಸ್ಯ [ಯಜ್ಞಃ] ; ಯದ್ ಏನೇನ ಇಂದ್ರೋಽಯಜತ ; ಕ್ಷತ್ರಗ್ಂ ಹಿ ಇಂದ್ರಃ; ಕ್ಷತ್ರಗ್ಂ ರಾಜನ್ಯಃ।"**

ಇದರಿಂದ ಕ್ಷತ್ರಿಯನಾದ ಇಂದ್ರದೇವತೆಯ ಚರುವಿನಿಂದ ಬ್ರಾಹ್ಮಣನಾದ ಬೃಹಸ್ಪತಿಯ ಚರುವು ಅಭಿಭೂತವಾದುದರಿಂದ ಹುಟ್ಟಿದ ಈ ಸೂತರು, ಬ್ರಾಹ್ಮಣಿಯಲ್ಲಿ ಕ್ಷತ್ರಿಯನಿಗೆ ಹುಟ್ಟಿದ ಸೂತಸದೃಶರಾದರು. ಏಕೆಂದರೆ: ಜಾತಿಸೂತನಲ್ಲಿಯೂ ಕ್ಷತ್ರಿಯನು ನಿಮ್ನವರ್ಣದವನಾದುದರಿಂದ, ತನಗಿಂತಲೂ ಉತ್ಕೃಷ್ಟಳಾದ ಬ್ರಾಹ್ಮಣಿಯಲ್ಲಿ ಆಧಾನಮಾಡಿ, ಪ್ರತಿಲೋಮದ ಕಾರಣದಿಂದ ಬ್ರಾಹ್ಮಣತ್ವವನ್ನು ಅಭಿಭೂತಮಾಡುತ್ತಾನೆ. ಆದರೆ ಇಲ್ಲಿ ಸಾಕ್ಷಾತ್ತಾಗಿ ಹಾಗಾಗಿಲ್ಲ ; ಏಕೆಂದರೆ ಅಗ್ನಿಕುಂಡದಲ್ಲಿ ಸಾಕ್ಷಾತ್ತಾಗಿ ಯಾವ ಕ್ಷತ್ರಿಯಮನುಷ್ಯನೂ ಇರಲಿಲ್ಲ. ಬ್ರಾಹ್ಮಣಸ್ತ್ರೀಯೂ ಇರಲಿಲ್ಲ. ಆದುದರಿಂದ ರೋಮಹರ್ಷಣರು ಜಾತಿಸೂತರಲ್ಲ. ಆದರೆ ತತ್ಸಾದೃಶ್ಯದಿಂದ (ಕ್ಷತ್ರಿಯ-ಬ್ರಾಹ್ಮಣಸಂಕರದಿಂದ, ಕ್ಷತ್ರಿಯತ್ವದ ಪ್ರಾಧಾನ್ಯವೂ ಬ್ರಾಹ್ಮಣಾಂಶದ ಅಪಭ್ರಂಶವೂ ಆದುದರಿಂದ **'ಕ್ಷತ್ರಿಯಾದ್ ಬ್ರಾಹ್ಮಣ್ಯಾಂ ಸೂತಃ'** ಎಂಬ ಯಾವ ಸಾದೃಶ್ಯವಿದೆಯೋ ಅದು ವಸ್ತುಸ್ಥಿತಿಯಲ್ಲಿಲ್ಲ.) ಮತ್ತು ಅಗ್ನಿಕುಂಡಪ್ರಸೂತರಾದುದರಿಂದ 'ಸೂತ'ನೆಂಬ ಉಪನಾಮವನ್ನು ಹೊಂದಿದರು. ಶ್ರೀಸೂತರು ಅಯೋನಿಜರು. ನಾಮಸಾದೃಶ್ಯದಿಂದ ಬಲರಾಮನು ಇವರನ್ನು 'ಪ್ರತಿಲೋಮಜ' ಎಂದು ಕರೆದಿದ್ದಾನೆ ಎಂಬುದು ಸ್ಪಷ್ಟ. ಆದುದರಿಂದಲೇ ಶ್ರೀಸೂತರನ್ನು ವಧೆಮಾಡಿದ ಬಲರಾಮನಿಗೆ ಬ್ರಹ್ಮಹತ್ಯಾದೋಷವುಂಟಾಗಿ, ಅದರ ನಿವಾರಣಾರ್ಥವಾಗಿ ಪ್ರಾಯಶ್ಚಿತ್ತವನ್ನು ಅವನು ಮಾಡಿಕೊಳ್ಳಬೇಕಾಯಿತು. ಭಾಗವತದಲ್ಲಿ ಹೀಗೆ ಹೇಳಿದೆ–

ಊಚುಃ ಸಂಕರ್ಷಣಂ ದೇವಮಧರ್ಮಸ್ತೇ ಕೃತಃ ಪ್ರಭೋ ।
ಅಸ್ಯ ಬ್ರಹ್ಮಾಸನಂ ದತ್ತಮಸ್ಮಾಭಿರ್ಯದುನಂದನ ॥

ಅಜಾನತೈವಾಚರಿತಸ್ತ್ವಯಾ ಬ್ರಹ್ಮವಧೋ ಯಥಾ ।
ಯೋಗೇಶ್ವರಸ್ಯ ಭವತೋ ನಾಮ್ನಾಯೋಽಪಿ ನಿಯಾಮಕಃ ॥

ಯದ್ಯೇತದ್ಬ್ರಹ್ಮಹತ್ಯಾಯಾಃ ಪಾವನಂ ಲೋಕಪಾವನ ।
ಚರಿಷ್ಯತಿ ಭವಾನ್ಲೋಕಸಂಗ್ರಹೋಽನನ್ಯಚೋದಿತಃ ॥

– ಶ್ರೀಮದ್ಭಾಗವತ ೧೦/೭೮/೩೧೩೨

ಇದರ ಕ್ರಮಾಗತ ಭಾವಪ್ರದೀಪಿಕಾ-ಟೀಕೆ ಇಂತಿದೆ :- “ಕಿಂಚ-‘ಅಗ್ನಿಕುಂಡಸಮುದ್ಭೂತ! ಸೂತ! ನಿರ್ಮಲಮಾನಸ!- ಇತಿ ಪುರಾಣಾನ್ತರಾಚ್ಚ ರೋಮಹರ್ಷಣಃ ‘ಬ್ರಾಹ್ಮಣ್ಯಾಂ ಕ್ಷತ್ರಿಯಾಜ್ಜಾತಃ ಸೂತಃ’ ಇತ್ಯುಕ್ತಲಕ್ಷಣೋ ನ ಜಾತಿಸೂತಃ ಕಿನ್ತು ಅಗ್ನಿಜಃ । ‘ಅಸ್ಯ ಬ್ರಹ್ಮಾಸನಂ ದತ್ತಂ’ (ಶ್ರೀಮದ್ಭಾ. ೧೦/೭೮/೩೦) ಇತಿ । ಬ್ರಹ್ಮಾಸನಾರ್ಹತಾ ತು ಅಸ್ಯ ಬ್ರಾಹ್ಮಣಸಂಕಲ್ಪಾದೇವ, ಧೃಷ್ಟದ್ಯುಮ್ನಸ್ಯ (ಅಗ್ನ್ಯುತ್ಪನ್ನಸ್ಯ) ಕ್ಷತ್ರಿಯತ್ವವತ್ । ಯದ್ವಾ ‘ಅಗ್ನಿರ್ವೈ ಬ್ರಾಹ್ಮಣಃ’ ಇತಿ ಶ್ರುತೇರಗ್ನಿ ಜತ್ವೇನ ಬ್ರಾಹ್ಮಣತ್ವಾದೇವ ಬ್ರಹ್ಮಾಸನಂ ಮುನಿಭಿರ್ದತ್ತಮ। ಅನ್ಯಥಾ

‘ವ್ಯಾಸಾಸನೋಪವೇಶಾಚ್ಚ ಶೂದ್ರಶ್ಚಾಂಡಾಲತಾಂ ವ್ರಜೇತ್ ।
ವಿಪ್ರಸ್ಯೈವಾಧಿಕಾರೋಽಸ್ತಿ ವ್ಯಾಸಾಸನಸಮಾಕ್ರಮೇ ।
ಧರ್ಮಾಣಾಂ ಶ್ರುತಿಗೀತಾನಾಮುಪದೇಶೇ ತಥಾ ದ್ವಿಜ ।’
ಇತಿ ಸಂಹಿತೋಕ್ತಿರ್ವ್ಯಾಕುಪ್ಯೇತ ।

ಅರ್ಥಾತ್, ಅಗ್ನಿಕುಂಡಪ್ರಸೂತರಾದುದರಿಂದ ಶ್ರೀಸೂತರು ಜಾತಿ ಸೂತರಲ್ಲ ; ಅಗ್ನಿಜರಾದುದರಿಂದ ಬ್ರಾಹ್ಮಣರು. ಏಕೆಂದರೆ ಅಗ್ನಿಯು ಬ್ರಾಹ್ಮಣನೆಂದು ಶ್ರುತಿಯಲ್ಲಿ ಹೇಳಲ್ಪಟ್ಟಿದೆ. ರೋಮಹರ್ಷಣರ ಉತ್ಪತ್ತಿಯು ಬ್ರಾಹ್ಮಣತ್ವಸಂಕಲ್ಪದಿಂದ (ಎಂದರೆ ಬ್ರಾಹ್ಮಣವರ್ಣದ ವ್ಯಕ್ತಿಯು ಉದ್ಭವನಾಗಲಿ ಎಂದು ಸಂಕಲ್ಪಿಸಿ ಹೋಮಮಾಡಿದುದರಿಂದ) ಉಂಟಾ

ಯಿತು. ಕ್ಷತ್ರಿಯತ್ವಸಂಕಲ್ಪದಿಂದ ಅಗ್ನಿಯಲ್ಲಿ ಧೃಷ್ಟದ್ಯುಮ್ನನ ಜನನವಾಯಿತು.; ಆದುದರಿಂದಲೇ ಅವನು ಕ್ಷತ್ರಿಯನೆಂದು ಪರಿಗಣಿಸಲ್ಪಡುತ್ತಾನೆ. ಶ್ರೀಸೂತರು ಬ್ರಾಹ್ಮಣವರ್ಣದವರಾದುದರಿಂದಲೇ ಬ್ರಾಹ್ಮಣಯೋಗ್ಯವಾದ ಬ್ರಹ್ಮಾಸನವು ಅವರಿಗೆ ಕೊಡಲ್ಪಟ್ಟಿತು. ಅನ್ಯರಿಗೆ ವ್ಯಾಸಾಸನದಲ್ಲಿ ಕುಳಿತುಕೊಳ್ಳಲು ಅಧಿಕಾರವಿಲ್ಲವೆಂದು ಪುರಾಣವಚನಗಳೇ (ವ್ಯಾಸಾಸನೋಪವೇಶಾಚ್ಚ–ಇತ್ಯಾದಿ) ಇರುವುದರಿಂದ ಇವರು ಜಾತಿಸೂತರಾಗಲು ಸಾಧ್ಯವಿಲ್ಲ. ಮುಂದುವರಿದು ಶ್ರೀಧರೀಟೀಕೆಯಲ್ಲಿ ಹೀಗೆ ಹೇಳಿದೆ– "ಕಿಂಚ ಬ್ರಹ್ಮಾಸನಂ ವೈಶಂಪಾಯನ-ಹಾರೀತ-ಶಾನ್ತವ್ರತ-ಮಾರ್ಕಂಡೇಯಾದಿ **ಸಮಾನಸತ್ತ್ವಜಾತೀಯ ಏವಾರ್ಹತಿ, ನ ಹೀನಃ । ನ ಮಹಾನ್ತಃ ಶೌನಕಾದಯೋ ಹೀನಾತ್ ಪರಂ ರಹಸ್ಯಂ ಜಗೃಹುರಿತಿ ವಕ್ತುಂ ಶಕ್ಯಮ್ ; 'ನ ಹೀನತಃ ಪರಮಭ್ಯಾದಧೀತ' ಇತಿ ಶ್ರುತೇಃ । 'ನೀಚಾದಪ್ಯುತ್ತಮಾ ವಿದ್ಯಾ ಗ್ರಾಹ್ಯಾ' ಇತಿ ತು ಆಪತ್ಪರಂ ವೃತ್ತ್ಯುಪಯೋಗಿ ವಿದ್ಯಾಪರಂ ವಾ । ಅತ ಏವ ತದ್ವಧಾತ್ ಬಲರಾಮೇಣ 'ಅಜಾನತೈವಾಚರಿತಸ್ತ್ವಯಾ ಬ್ರಹ್ಮವಧೋ ಯಥಾ' (ಶ್ರೀಮದ್ಭಾ. ೧೦/೭೮/೩೧) ಇತಿ ಬ್ರಹ್ಮಹತ್ಯಾವ್ರತಂ ಚೀರ್ಣಮಿತಿ ಸ್ಮರ್ಯತೇ ।'ಯದ್ಯೇತದ್ ಬ್ರಹ್ಮಹತ್ಯಾಯಾಃ ಪಾವನಂ ಲೋಕಪಾವನ। ಚರಿಷ್ಯತಿ' (ಶ್ರೀಮದ್ಭಾ. ೧೦/೭೮/೩೨) ಇತಿ ದಶಮೇ ಬಲದೇವಂ ಪ್ರತಿ ಶೌನಕೋಽಪಿ ವಕ್ಷ್ಯತಿ ।........**

ಶೌನಕಾದಿ ಮುನಿಗಳಿಗೆ ಪುರಾಣಾದಿಗಳನ್ನು ಶ್ರವಣಮಾಡಿಸುವ ಸಲುವಾಗಿ ಬ್ರಹ್ಮಾಸನವನ್ನು ಅಥವಾ ವ್ಯಾಸಾಸನವನ್ನು ಅಲಂಕರಿಸುವ ಅಧಿಕಾರವು ವೈಶಂಪಾಯನಾದಿ ಮಹರ್ಷಿಗಳ ಸಮಾನರಾದ ಮತ್ತು ತತ್ಸಜಾತೀಯ ರಾದವರಿಗೇ ಉಂಟೇ ಹೊರತು ಬೇರೆಯವರಿಗಿಲ್ಲ–ಎಂದ ಮೇಲೆ ಸಂಕರವರ್ಣದವರು ಅಧಿಕಾರಿಗಳಲ್ಲವೆಂದು ಹೇಳಬೇಕಾಗಿಯೇ ಇಲ್ಲ. **'ನ ಹೀನತಃ ಪರಮಭ್ಯಾದಧೀತ'** ಎಂಬ ಶ್ರುತಿವಚನವಿರುವಾಗ ಶೌನಕಾದಿ ಮುನಿಗಳು ಶ್ರುತಿನಿಷಿದ್ಧವಾದ ಸಂಕರವರ್ಣದವನಿಂದ ಪುರಾಣಶ್ರವಣವನ್ನು ಮಾಡಿದರೆಂಬುದು ಸರಿಯಲ್ಲ. 'ನೀಚಾದಪ್ಯುತ್ತಮಾ ವಿದ್ಯಾಗ್ರಾಹ್ಯಾ' ಎಂಬ ಸ್ಮೃತಿವಚನವಿದ್ದರೂ ಅದು ಸರ್ವಸಾಧಾರಣ, ಅರ್ಥಾತ್

ಸಾಮಾನ್ಯಶಾಸ್ತ್ರವಚನವಲ್ಲವಾದುದರಿಂದ ಅಪವಾದವಾದುದರಿಂದ ಆಪತ್ಕಾಲಿಕವಾಗಿದೆ ; ಏಕೆಂದರೆ ಅಪವಾದವು ಯಾವಾಗಲಾದರೂ, ಎಲ್ಲಾದರೂ ಆಗುತ್ತದೆಯೇ ಹೊರತು ಸಾರ್ವತ್ರಿಕವೂ ಸಾರ್ವಕಾಲಿಕವೂ ಆಗುವುದಿಲ್ಲ. ಅಪವಾದದಿಂದ ವ್ಯವಸ್ಥಿತನಿರ್ಣಯಕ್ಕೆ ಬರಲು ಸಾಧ್ಯವಿಲ್ಲ. ಈ ಸ್ಮಾರ್ತವಚನವನ್ನು ಗಾರುಡಾದಿ ವಿದ್ಯೆಗಳಿಗೋ ಅಥವಾ ವೃತ್ತ್ಯುಪಯೋಗಿಗಳಾದ ವಿದ್ಯೆಗಳಿಗೋ ಅನ್ವಯಿಸಬಹುದೇ ಹೊರತು ವೇದ-ಪುರಾಣಾದಿ ಶಾಸ್ತ್ರಗಳಿಗಲ್ಲ. ಪದ್ಮಪುರಾಣದಲ್ಲಿ ಹೀಗೆ ಹೇಳಿದೆ–

**ಬ್ರಾಹ್ಮಣಂ ಚ ಪುರಸ್ಕೃತ್ಯ ಬ್ರಾಹ್ಮಣೇನ ಚ ಕೀರ್ತಿತಮ್ ।**
**ಪುರಾಣಂ ಶೃಣುಯಾನ್ನಿತ್ಯಂ ಮಹಾಪಾಪದವಾನಲಮ್ ॥**

(ಪದ್ಮ-ಸರ್ಗ-೬೨/೫೮)

ಈ ವಚನದಿಂದ ವ್ಯಾಸಾಸನದಲ್ಲಿ ಅಥವಾ ಬ್ರಹ್ಮಾಸನದಲ್ಲಿ ಕುಳಿತುಕೊಳ್ಳುವ ಅಧಿಕಾರವು ಬ್ರಾಹ್ಮಣನಿಗೆ ಮಾತ್ರ. ಆದುದರಿಂದಲೇ ಬಲರಾಮನು ರೋಮಹರ್ಷಣಸೂತರನ್ನು ಕೊಂದನಂತರ ಬ್ರಹ್ಮಹತ್ಯಾಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕಾಗಿ ಬಂದಿತು.

ಕಡೆಯಲ್ಲಿ ಭಾವಪ್ರದೀಪಿಕಾಟೀಕಾಕಾರರು ಹೀಗೆ ಹೇಳುತ್ತಾರೆ..:- **"ಯದ್ಯಪಿ 'ಮನ್ಯೇ ತ್ವಾಂ ವಿಷಯೇ ವಾಚಾಂ ಸ್ನಾತಮನ್ಯತ್ರ ಛಾಂದಸಾತ್' ಇತ್ಯುಕ್ತಿಸ್ತು ಜಾತಿಸೂತವಿಷಯ್ಯೈವ, ತಥಾಪಿ ತ್ವಯಿ ಸೂತಶಬ್ದಪ್ರಯೋಗಾತ್ ತ್ವಯಿ ಉಪಚರ್ಯತೇ.; ಅನ್ಯಥಾ 'ಪುರಾಣಂ ಬ್ರಹ್ಮಸಮ್ಮಿತಮ್' ಇತ್ಯುಕ್ತೇಃ 'ಶ್ರೀಮದ್ಭಾಗವತವಕ್ತೃತ್ವಮಪಿ ನ ಸಂಭವತೀತಿ ರಹಸ್ಯಮ್'** (ಶ್ರೀಮದ್ಭಾ. ೧/೧/೫) ; **'ಅನಘೇತಿ, ತ್ವಯಿ ಸೂತಪ್ರಯೋಗೋ ಹಿ ಹವಿಷೋ ವೈಪರೀತ್ಯೇನೈವ, ನ ತು ಜಾತ್ಯಭಿಪ್ರಾಯೇಣ, ಅತೋಽಹಂ ವಿಲೋಮಜೋ ಬ್ರಾಹ್ಮಣೇಭ್ಯಃ ಕಥಮುಪದಿಶಾಮಿ –ಇತಿ ಶಂಕಾಂ ಮಾ ಕಾರ್ಷೀರ್ಯತಸ್ತ್ವಮನಘೋಽಸಿ'–ಇತಿ** (ಶ್ರೀಮದ್ಭಾ. ೧/೧/೫) ; **ಅಸ್ಯ ಬ್ರಹ್ಮಾಸನಂ ದತ್ತಂ'** (ಶ್ರೀಮದ್ಭಾ. ೧೦/೭೮/೩೦) ; **ಅಜಾನತೈವಾಚರಿತ ಸ್ತ್ವಯಾ ಬ್ರಹ್ಮವಧೋ ಯಥಾ'** (ಶ್ರೀಮದ್ಭಾ. ೧೦/೭೮/೩೧)–**ಅತ್ರ**

ಭಾವ ಪ್ರದೀಪಿಕಾ – **'ಅಗ್ನಿರ್ವೈ ಬ್ರಾಹ್ಮಣ ಇತಿ ಶ್ರುತೇಃ' ತದುದ್ಭೂತತ್ವಾತ್ ಅಯಂ ಬ್ರಾಹ್ಮಣ ಏವ । ಅತ ಏವ ಬ್ರಹ್ಮಾಸನಂ ವೇದೇತಿಹಾಸ-ಪುರಾಣವಕ್ತ್ರೃ ಬ್ರಾಹ್ಮಣಯೋಗ್ಯಾಸನಂ ದತ್ತಮ್' ಇತಿ।''**

ಶ್ರೀಮದ್ಭಾಗವತದಲ್ಲಿ **'ಅನ್ಯತ್ರ ಛಾಂದಸಾತ್'** ಎಂಬ ವಚನವೂ ಶ್ರೀಸೂತರ ವಿಷಯದಲ್ಲಿ ಔಪಚಾರಿಕವಾಗಿಯೇ ಉಪಯೋಗಿಸಲ್ಪಟ್ಟಿದೆ. 'ವೇದವನ್ನು ಬಿಟ್ಟು ಮಿಕ್ಕೆಲ್ಲವನ್ನೂ ನೀನು ತಿಳಿದಿರುವೆ' ಎಂಬ ವಾಕ್ಯವು, ವೇದಾಧ್ಯಯನಕ್ಕೆ ಅನಧಿಕಾರೀ ಎಂಬ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿಲ್ಲ; ಇಲ್ಲದಿದ್ದರೆ **'ಬ್ರಹ್ಮಸಮ್ಮಿತಮ್'** ಎಂದರೆ ಬ್ರಹ್ಮ (ವೇದ) ತುಲ್ಯವಾದ ಶ್ರೀಮದ್ಭಾಗವತಾದಿಗಳನ್ನು ಹೇಳುವ ಅಧಿಕಾರವೂ ಅವರಿಗಿಲ್ಲವಾಗುತ್ತಿತ್ತು. ಪುರಾಣಾದಿಗಳನ್ನೇ ಮುಖ್ಯವಾಗಿ ಅಧ್ಯಯನಮಾಡಿದುದರಿಂದಲೂ, ವೇದಗಳ ಕಾರ್ಯಗಳು ಪೈಲ-ಜೈಮಿನಿಗಳೇ ಮುಂತಾದ ಇತರ ಶಿಷ್ಯರಿಗೆ ವಹಿಸಿಕೊಡಲ್ಪಟ್ಟುದರಿಂದಲೂ ಶ್ರೀಸೂತರಿಗೆ ಮುಖ್ಯವಾಗಿ ವೇದಗಳು ಪ್ರಾಪ್ತವಾಗಲಿಲ್ಲ. ಇದೂ ಅಲ್ಲದೇ ಪುರಾಣಗಳ ಗ್ರಂಥಬಾಹುಳ್ಯದಿಂದ ಅವುಗಳ ಅಧ್ಯಯನಕ್ಕೆ ಹೆಚ್ಚುಕಾಲ ಹಿಡಿದು ಸಮಯಾಭಾವದಿಂದ ವೇದಾಧ್ಯಯನಕ್ಕೆ ಸಮಯವು ಸಿಗದಿದ್ದುದರಿಂದಲೇ ಹೊರತು ಅನಧಿಕಾರಿಗಳೆಂಬ ಅರ್ಥದಲ್ಲಿ ಮೇಲಿನ ವಾಕ್ಯವು ಹೇಳಲ್ಪಟ್ಟಿಲ್ಲ.

**'ವಿಲೋಮಜೋಽಪಿ ಧನ್ಯೋಽಸ್ಮಿ ಯನ್ಮಾಂ ಪೃಚ್ಛಥ ಸತ್ತಮಾಃ'** – ಎಂಬ ಬೃಹನ್ನಾರದೀಯಪುರಾಣದ ಪುರುಷೋತ್ತಮಮಾಸ ಮಾಹಾತ್ಮ್ಯದಲ್ಲಿ ಬರುವ ಶ್ರೀಸೂತರ ವಾಕ್ಯಕ್ಕೆ ಸರಿಯಾದ ತಾತ್ಪರ್ಯವು ಸ್ಪಷ್ಟವಾದಂತಾಯಿತು.

ಕೆಲವರು ಶ್ರೀಸೂತರನ್ನು ಅಸ್ಪೃಶ್ಯರೆಂದೂ ತಿಳಿಯುತ್ತಾರೆ! ಇದಕ್ಕೆ ಯಾವ ಆಧಾರವೂ ಇಲ್ಲ. **'ಸೂತಾನಾಮಶ್ವಸಾರಥ್ಯಮ್'** (ಮನು 10/47) ಎಂಬ ವಾಕ್ಯದಂತೆ ಸೂತರ ಕರ್ಮ ಸಾರಥ್ಯ. ಸಂಜಯನು ಧೃತರಾಷ್ಟ್ರನ ಸಾರಥಿಯಾಗಿದ್ದನು. ಸಂಜಯಸೂತನು ಅಸ್ಪೃಶ್ಯನೆಂದು ಎಲ್ಲೂ ಹೇಳಿಲ್ಲ. ರೋಮಹರ್ಷಣರು ಜಾತಿಸೂತರಲ್ಲ – ಎಂಬುದನ್ನೂ ಆಗಲೇ ಸ್ಪಷ್ಟಪಡಿಸಲಾಗಿದೆ.

ವಾಯುಪುರಾಣದ ಪ್ರಥಮಾಧ್ಯಾಯದಲ್ಲಿ (೧/೩೩.೩೬) ಶ್ರೀಸೂತರು ಅಗ್ನಿಯಿಂದ ಉತ್ಪನ್ನರಾದವರೆಂದು ಸ್ಪಷ್ಟವಾಗಿ ಹೇಳಿದೆ. ಅಲ್ಲಿ 'ಸುತ್ಯಾಯಾಮಭವತ್ ಸೂತಃ' – ಈ ಶ್ಲೋಕದ 'ಸುತ್ಯಾಯಾಂ' ಎಂಬ ಪದವು ಕೆಲವರಲ್ಲಿ ಭ್ರಮೆಯನ್ನು ಹುಟ್ಟಿಸಬಹುದು. ಅವರು 'ಸುತ್ಯಾಯಾಂ' ಎಂಬುದು 'ಸೂತ್ಯಾಯಾಂ' ಎಂದಿರಬಹುದೆಂದು ತಪ್ಪುತಿಳಿದುಕೊಂಡು, ಅದರರ್ಥ, 'ಸೂತಜಾತಿಸ್ತ್ರೀಯರಲ್ಲಿ ಹುಟ್ಟಿದರು' ಎಂದು ಅರ್ಥಮಾಡುವ ಸಂಭವವಿದೆ. ಇದು ಸರಿಯಲ್ಲ. ಮೇಲಿನ ಶ್ಲೋಕದಲ್ಲಿ ಸೂತಜಾತಿಯ ಸ್ತ್ರೀ ಎಂದು ಹೇಳುವ ಅಭಿಪ್ರಾಯವಿದ್ದಿದ್ದರೆ 'ಸೂತ್ಯಾಂ' ಎಂಬ ಪಾಠವಿರಬೇಕಾಗುತ್ತಿತ್ತು; 'ಸೂತ್ಯಾಯಾಂ' ಎಂದಲ್ಲ. ಏಕೆಂದರೆ 'ಜಾತೇರಸ್ತ್ರೀವಿಷಯಾತ್' – (೪/೧/೬೩)-ಈ ಪಾಣಿನಿಯ ಸೂತ್ರದ ಪ್ರಕಾರ, 'ಸೂತಜಾತಿಯ ಸ್ತ್ರೀ' ಪದವು 'ಜೀಷ್' ಅಲ್ಲ. ಆದರೆ ಮೇಲೆ ಹೇಳಿದ ಪುರಾಣವಚನದಲ್ಲಿ 'ಸುತ್ಯಾಯಾಂ' ಎಂಬ ಪಾಠವೇ ಇದೆ. 'ಸುತ್ಯಾ' ಶಬ್ದದ ಸಿದ್ಧಿಯು 'ಸಮಜನಿಷದನಿಪತನಮನವಿದಷುಞ್' (೩/೩/೯೯) ಈ ಪಾಣಿನೀಸೂತ್ರದಂತೆ 'ಷುಞ್' ಧಾತುವಿಗೆ ಸಂಜ್ಞೆಯಲ್ಲಿ 'ಕ್ಯಪ್' ಪ್ರತ್ಯಯ ಮತ್ತು 'ತುಕ್' ಆಗಮವಾದಾಗ ಆಗುತ್ತದೆ. ಸಿದ್ಧಾಂತಕೌಮುದಿಯಲ್ಲಿ 'ಸುತ್ಯಾ' ಪದದ ಅರ್ಥ 'ಅಭಿಷವಃ' ಎಂದಿದೆ. ಇದರ ಅರ್ಥ 'ಸೋಮಯಜ್ಞ' ಎಂದು. ಅಮರಕೋಶದಲ್ಲಿಯೂ 'ಸುತ್ಯಾಭಿಷವಃ ಸವನಂ ಚ ಸಾ' (೨/೮/೪೭) ಸೋಮಾಭಿಷವವೆಂದೇ ಅರ್ಥೈಸಲಾಗಿದೆ.

ಕೂರ್ಮಪುರಾಣದ ಪ್ರಥಮಾಧ್ಯಾಯದಲ್ಲಿಯೂ ಹೀಗೆಯೇ ಹೇಳಿದೆ :

ತ್ವಯಾ ಸೂತ ಮಹಾಬುದ್ಧೇ ಭಗವಾನ್ ಬ್ರಹ್ಮವಿತ್ತಮಃ ।
ಇತಿಹಾಸಪುರಾಣಾರ್ಥಂ ವ್ಯಾಸಃ ಸಮ್ಯಗುಪಾಸಿತಃ ॥

ತ್ವಂ ಹಿ ಸ್ವಾಯಂಭುವೇ ಯಜ್ಞೇ ಸುತ್ಯಾಹೇ ವಿತತೇ ಸತಿ ।
ಸಂಭೂತಃ ಸಂಹಿತಾಂ ವಕ್ತುಂ ಸ್ವಾಂಶೇನ ಪುರುಷೋತ್ತಮ ॥

ಅಗ್ನಿಪುರಾಣವಚನ :
ಬ್ರಹ್ಮಣಃ ಪೌಷ್ಕರೇ ಯಜ್ಞೇ ಸುತ್ಯಾಹೇ ವಿತತೇ ಸತಿ ।

**ಪೃಷದಾಜ್ಯಾತ್ಸಮುತ್ಪನ್ನಃ ಸೂತಃ ಪೌರಾಣಿಕೋ ದ್ವಿಜಃ ॥**
**ವಕ್ತಾ ವೇದಾದಿಶಾಸ್ತ್ರಾಣಾಂ ತ್ರಿಕಾಲಾಮಲಧರ್ಮವಿತ್ ।**

ಇಲ್ಲಿ ಸ್ಪಷ್ಟವಾಗಿ ಶ್ರೀಸೂತರ ಅಗ್ನಿಸಂಭವತ್ವವನ್ನೂ, ದ್ವಿಜತ್ವವನ್ನೂ, ವೇದಾದಿಶಾಸ್ತ್ರಗಳ ಪ್ರವಚನಾಧಿಕಾರವನ್ನೂ ಹೇಳಿದೆ.

ಕಡೆಯಲ್ಲಿ ಮತ್ತೊಂದು ಪ್ರಬಲಪ್ರಮಾಣವನ್ನೂ ಕೊಟ್ಟು ಈ ಪ್ರಬಂಧವನ್ನು ಪರಿಸಮಾಪ್ತಿಗೊಳಿಸಲಾಗುತ್ತದೆ. ಕೌಟಿಲ್ಯನ ಅರ್ಥಶಾಸ್ತ್ರವು (ಕೌಟಲೀಯ ಅರ್ಥಶಾಸ್ತ್ರವೆಂದೂ ಇದನ್ನು ಕರೆಯುತ್ತಾರೆ.) ಒಂದು ಪ್ರಾಮಾಣಿಕಗ್ರಂಥವೆಂದು ಪರಿಗಣಿಸಲ್ಪಡುತ್ತದೆ. ಅದರಲ್ಲಿ ಹೀಗೆ ಹೇಳಿದೆ.:- **'ವೈಶ್ಯಾನ್ಮಾಗಧವೈದೇಹಕೌ (ಕ್ಷತ್ರಿಯಾ-ಬ್ರಾಹ್ಮಣ್ಯೋಃ)** (೩/೭/೨೯) ಅರ್ಥಾತ್ ವೈಶ್ಯಪುರುಷನಿಂದ ಕ್ಷತ್ರಿಯಸ್ತ್ರೀಯಲ್ಲಿ ಹುಟ್ಟಿದ ಪ್ರತಿಲೋಮ ಸಂಕರವರ್ಣದವರು 'ಮಾಗಧ' ರೆಂದೂ, ವೈಶ್ಯನಿಗೆ ಬ್ರಾಹ್ಮಣಿಯಲ್ಲಿ ಹುಟ್ಟಿದ ಪ್ರತಿಲೋಮಜರು 'ವೈದೇಹಕ' ರೆಂದೂ ಕರೆಯಲ್ಪಡುತ್ತಾರೆ. ಮುಂದೆ– **'ಕ್ಷತ್ರಿಯಾತ್ (ಬ್ರಾಹ್ಮಣ್ಯಾಂ) ಸೂತಃ'**– ಕ್ಷತ್ರಿಯನಿಗೆ ಬ್ರಾಹ್ಮಣಿಯಲ್ಲಿ ಹುಟ್ಟಿದವರು ಸೂತರು–ಎಂದಿದೆ. ಅರ್ಥಶಾಸ್ತ್ರಕಾರರು ಪೌರಾಣಿಕಸೂತ ರಲ್ಲಿಯೂ ಸೂತಜಾತೀಯತೆಯ ಪ್ರಸಕ್ತಿ ಬರಲು ಸ್ಪಷ್ಟಶಬ್ದಗಳಲ್ಲಿ ಹೀಗೆ ಹೇಳುತ್ತಾರೆ–**'ಪೌರಾಣಿಕಸ್ತು ಅನ್ಯಃ ಸೂತೋ ಮಾಗಧಶ್ಚ, ಕ್ಷತ್ರಾದ್** ವಿಶೇಷಃ (೩/೭/೩೧) ಎಂದರೆ ಪುರಾಣಗಳಲ್ಲಿ ಬರುವ ಸೂತ ಮತ್ತು ಮಾಗಧರು ಪ್ರತಿಲೋಮಸಂಕರ ಸೂತ-ಮಾಗಧರಿಗಿಂತಲೂ ಬೇರೆ ಯವರು. ಅವರಲ್ಲಿ ಸೂತರು ಬ್ರಾಹ್ಮಣಶ್ರೇಷ್ಠರು; ಮಾಗಧರು ಕ್ಷತ್ರಿಯರಿ ಗಿಂತಲೂ ಶ್ರೇಷ್ಠರು. ಇದರ ಬಗ್ಗೆ ಬರೆಯುತ್ತಾ ಮಹಾಮಹೋಪಾಧ್ಯಾಯ ಪಂಡಿತ ಗಣಪತಿಶಾಸ್ತ್ರಿಗಳು ತಮ್ಮ ಟೀಕೆಯಲ್ಲಿ ಹೀಗೆ ಹೇಳುತ್ತಾರೆ– **'ಕ್ಷತ್ರಿಯಾತ್ ಸೂತ ಇತಿ-ಕ್ಷತ್ರಿಯಾತ್ ಬ್ರಾಹ್ಮಣ್ಯಾಂ ಜಾತಃ ಸೂತ ಇತಿ।'-'ಪೃಥುಚಕ್ರವರ್ತಿಯಜ್ಞಭೂಮ್ಯುತ್ಪನ್ನಸ್ಯ ಪೌರಾಣಿಕಸ್ಯ ಮಾಗಧಾಖ್ಯಸ್ಯ ಚ ಪೃಥುಸ್ತೋತ್ರವಿಧಾಯಿನಃ ಪ್ರತಿಲೋಮಜತ್ವ-ಶಂಕಾಪ್ರಾಪ್ತಿಂ ಮನಸಿ ಕುರ್ವನ್ ತಾಂ ಪರಿಹರತಿ– 'ಪೌರಾಣಿಕಸ್ತ್ವನ್ಯಃ ಸೂತೋ ಮಾಗಧಶ್ಚ ಬ್ರಹ್ಮಕ್ಷತ್ರಾದ್ ವಿಶೇಷತಃ ।' ಅಸ್ಯಾರ್ಥಃ–**

'ಪುರಾಣಪ್ರವಕ್ತಾ ರೋಮಹರ್ಷಣಾಪರನಾಮಾ ಯಃ ಸೂತಃ, ಸಃ, ಅನ್ಯಃ ಉಕ್ತಾತ್ ಪ್ರತಿಲೋಮಜಸೂತಾದ್ ಭಿನ್ನಃ । ಯಸ್ತತ್ಸಹಪಠಿತಃ ಪುರಾಣೇಷು ಮಾಗಧೋ ನಾಮ, ಸ ಚ ಪ್ರತಿಲೋಮಮಾಗಧಾದ್ ಭಿನ್ನಃ । ಬ್ರಹ್ಮಕ್ಷತ್ರಾದ್ ವಿಶೇಷತಃ-ವಿಶೇಷೇಣ ಯುಕ್ತಃ । ಸೂತೋ ಬ್ರಾಹ್ಮಣಾದ್ ವಿಶಿಷ್ಟಃ - ಉತ್ಕೃಷ್ಟಃ । ಮಾಗಧಃ ಕ್ಷತ್ರಿಯಾತ್ ವಿಶಿಷ್ಟ ಇತಿ । ಏತಚ್ಚ ತಥ್ಯಂ, ಯತಃ-

ಹಸ್ತೇ ತು ದಕ್ಷಿಣೇ ತಸ್ಯ ದೃಷ್ಟ್ವಾ ಚಕ್ರಂ ಪಿತಾಮಹಃ ।
ವಿಷ್ಣೋರಂಶಂ ಪೃಥುಂ ಮತ್ವಾ ಪರಿತೋಷಂ ಪರಂ ಯಯೌ ॥

ತಸ್ಯೈವ ಜಾತಮಾತ್ರಸ್ಯ ಯಜ್ಞೇ ಪೈತಾಮಹೇ ಶುಭೇ ।
ಸೂತಃ ಸುತ್ಯಾಂ (ಯಜ್ಞಾಭಿಷವಭೂಮೌ) ಸಮುತ್ಪನ್ನಃ ಸೌತ್ಯೇಽಹನಿ ಮಹಾಮತಿಃ ।
ತಸ್ಮಿನ್ನೇವ ಮಹಾಯಜ್ಞೇ ಜಜ್ಞೇ ಪ್ರಾಜ್ಞೋಽಥ ಮಾಗಧಃ ।
(ಇತಿ ವಿಷ್ಣುಪುರಾಣ ಪ್ರಥಮಾಂಶ ತೃತೀಯಾಧ್ಯಾಯೇ)

ಅರ್ಥವು ಸುಸ್ಪಷ್ಟವಾಗಿಯೇ ಇದೆ. ಭಗವಂತನಾದ ಮಹಾವಿಷ್ಣುವಿನ ಅಂಶಸಂಭೂತನಾದ ಪೃಥುಚಕ್ರವರ್ತಿಯೊಂದಿಗೆ ಯಜ್ಞಕುಂಡದಿಂದ ಉದ್ಭೂತರಾದುದರಿಂದ ಶ್ರೀಸೂತರು ಬ್ರಾಹ್ಮಣಶ್ರೇಷ್ಠರೆಂಬುದರಲ್ಲಿ ಸಂದೇಹವೇ ಇಲ್ಲ.

ಇದನ್ನೇ ಮುಂದೆ ಗಣಪತಿಮುನಿಗಳು ಪೂರ್ವೋದ್ಧೃತವಾದ ಅಗ್ನಿ ಮತ್ತು ಕೂರ್ಮಪುರಾಣಗಳ ಪ್ರಥಮಾಧ್ಯಾಯವಚನಗಳನ್ನು ಉದ್ಧರಿಸಿ ಹೀಗೆ ಉಪಸಂಹಾರಮಾಡುತ್ತಾರೆ :

'ಇತಿ ವ್ಯಾಸಶಿಷ್ಯಪೌರಾಣಿಕಸೂತಸ್ಯ ಅಯೋನಿಜ ಏವ ಉತ್ಪತ್ತಿಃ ಪ್ರತಿಲೋಮಸೂತವಿಲಕ್ಷಣಾ ಕಥ್ಯತೇ ತಥಾ ದ್ವಿಜತ್ವಂ, ವಿಷ್ಣ್ವಂಶ ಸಂಭೂತತ್ವಂ ಚ । ತಥೈವ ಮಾಗಧಸ್ಯಾಪಿ ತತ್ಸಹ ಪಠಿತಸ್ಯ ಅಯೋನಿಜತ್ವಂ' ಇತಿ ।

ಇದರಿಂದ ಶ್ರೀರೋಮಹರ್ಷಣಸೂತರು ಅಗ್ನಿಕುಂಡಸಮುದ್ಭೂತರೂ, ಅಯೋನಿಜರೂ ಮತ್ತು ಬ್ರಾಹ್ಮಣಶ್ರೇಷ್ಠರೂ—ಎಂಬುದು ಸಿದ್ಧವಾಯಿತು.

ಅಗ್ನಿಸಂಭವತ್ವದ ಬಗ್ಗೆ ಸಂಶಯಿಸಬೇಕಾಗಿಲ್ಲ. ಏಕೆಂದರೆ ದ್ರೌಪದೀ ಮತ್ತು ಧೃಷ್ಟದ್ಯುಮ್ನರು ಯಜ್ಞಕುಂಡದಿಂದ ಹುಟ್ಟಿದರೆಂಬುದು ಪ್ರಸಿದ್ಧವಾಗಿಯೇ ಇದೆ. ಅಂತೆಯೇ ನಿರುಕ್ತದಲ್ಲಿಯೂ ಅಂಗಿರಸರೇ ಮುಂತಾದವರು ಅಗ್ನಿಯಿಂದ ಉದ್ಭವಿಸುವುದರ ಬಗ್ಗೆ ಹೇಳಿದೆ–**'ಅಂಗಾರೇಷು ಅಂಗಿರಾಃ'** (೩/೧೭/೧) **'ಅಂಗಿರಸಃ ಪುತ್ರಾಸ್ತೇ ಅಗ್ನೇಃ ಅಧಿಜಜ್ಞಿರೇ ಇತಿ ಅಗ್ನಿಜನ್ಮಾ'** (ನಿರುಕ್ತ ೧೧/೧೭/೧)

**'ಬ್ರಾಹ್ಮಣೋऽಸ್ಯ ಮುಖಮಾಸೀತ್'** (ಯಜು. ೩೧/೧೧) **'ಮುಖಾದಗ್ನಿರಜಾಯತ'** (ಯಜು. ವಾಜಸನೇಯಿ ಸಂ. ೩೧/೧೨) ಇವೇ ಮುಂತಾದ ವೇದಪ್ರಮಾಣಗಳಿಂದ, ಬ್ರಾಹ್ಮಣ ಮತ್ತು ಅಗ್ನಿ ಈ ಇಬ್ಬರೂ ಪರಮಾತ್ಮನ ಮುಖದಿಂದ ಹುಟ್ಟಿದುದರಿಂದ ಬಂದ ಸಹೋದರತ್ವದಿಂದ, ಅಗ್ನಿಯನ್ನು ಬ್ರಾಹ್ಮಣನೆಂದೂ–ಬ್ರಾಹ್ಮಣನನ್ನು ಅಗ್ನಿಯೆಂದೂ ವ್ಯವಹರಿಸುತ್ತಾರೆ.

**'ವೈಶ್ವಾನರಃ (ಅಗ್ನಿಃ) ಪ್ರವಿಶತಿ ಅತಿಥಿರ್ಬ್ರಾಹ್ಮಣೋ ಗೃಹಾನ್'** (ಕಠೋಪನಿಷತ್ತು ೧/೧/೭)–'ಅತಿಥಿಯಾದ ಬ್ರಾಹ್ಮಣನು ಅಗ್ನಿಯಂತೆ ಮನೆಗೆ ಬರುತ್ತಾನೆ' ಎಂಬಂತೆ.

ಇಲ್ಲಿಗೆ ರೋಮಹರ್ಷಣಸೂತರು ಅಗ್ನಿಪ್ರಸೂತರಾದುದರಿಂದ ದಿವ್ಯಾಯೋನಿಜಬ್ರಾಹ್ಮಣಶ್ರೇಷ್ಠರೆಂಬುದು ಸಿದ್ಧವಾದಂತಾಯಿತು.

ಅಗ್ನಿಯಲ್ಲಿ ಹುಟ್ಟಿದ ಧೃಷ್ಟದ್ಯುಮ್ನಾದಿಗಳು ಕ್ಷತ್ರಿಯರಾದುದು ಹೇಗೆಂಬುದನ್ನು ಹಿಂದೆಯೇ ಹೇಳಿದೆ. **-ಸಾಧಾರ.**

ಇತಿ ಶಮ್ (ಶ್ರೀ ಹರಿ)

